# ಚಿತ್ರದುರ್ಗ ನಾಯಕರ ಆಳ್ವಿಕೆಯಲ್ಲಿ ಕೃಷಿ ಹಾಗೂ ವ್ಯಾಪಾರ ಸಂಬಂಧಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

ಶಿವರಾಜ ಜಿ.ಓ

ಮಾರ್ಗದರ್ಶಕರು

ಡಾ. ಕೆ.ಮೋಹನ್‌ಕೃಷ್ಣ ರೈ

ಪ್ರಾಧ್ಯಾಪಕರು




ಚರಿತ್ರೆ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬

೨೦೨೦

# ಚಿತ್ರದುರ್ಗ ನಾಯಕರ ಆಳ್ವಿಕೆಯಲ್ಲಿ ಕೃಷಿ ಹಾಗೂ ವ್ಯಾಪಾರ ಸಂಬಂಧಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


**ಸಂಶೋಧಕರು**

**ಶಿವರಾಜ ಜಿ.ಓ**

**ಮಾರ್ಗದರ್ಶಕರು**

**ಡಾ. ಕೆ.ಮೋಹನ್‌ಕೃಷ್ಣ ರೈ**

ಪ್ರಾಧ್ಯಾಪಕರು





**ಚರಿತ್ರೆ ವಿಭಾಗ**

**ಸಮಾಜವಿಜ್ಞಾನಗಳ ನಿಕಾಯ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

೨೦೨೦

# ಮಾರ್ಗದರ್ಶಕರ ದೃಢೀಕರಣ ಪತ್ರ

**ಶಿವರಾಜ ಜಿ.ಓ.,** ಇವರು ಪಿಎಚ್.ಡಿ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಚಿತ್ರದುರ್ಗ ನಾಯಕರ ಆಳ್ವಿಕೆಯಲ್ಲಿ ಕೃಷಿ ಹಾಗೂ ವ್ಯಾಪಾರ ಸಂಬಂಧಗಳು** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಚರಿತ್ರೆ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ಕೆ.ಮೋಹನ್‌ಕೃಷ್ಣ ರೈ**
ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ದಿನಾಂಕ: 12/03/2020
ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಘೋಷಣಾ ಪತ್ರ

**ಚಿತ್ರದುರ್ಗ ನಾಯಕರ ಆಳ್ವಿಕೆಯಲ್ಲಿ ಕೃಷಿ ಹಾಗೂ ವ್ಯಾಪಾರ ಸಂಬಂಧಗಳು** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, **ಚರಿತ್ರೆ ವಿಭಾಗದ,** ಪ್ರಾಧ್ಯಾಪಕರಾದ **ಡಾ.ಕೆ.ಮೋಹನ್‌ಕೃಷ್ಣ ರೈ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿಯ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

Shivaraja. G. O

**ಶಿವರಾಜ ಜಿ.ಓ.,**

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

ದಿನಾಂಕ: 12/03/2020

ಸ್ಥಳ : ವಿದ್ಯಾರಣ್ಯ

# ಚಿತ್ರದುರ್ಗ ನಾಯಕರ ಆಳ್ವಿಕೆಯಲ್ಲಿ ಕೃಷಿ ಹಾಗೂ ವ್ಯಾಪಾರ ಸಂಬಂಧಗಳು

## ಪರಿವಿಡಿ

## ಅಧ್ಯಾಯ – ಒಂದು

# ಪ್ರಸ್ತಾವನೆ

## ಅಧ್ಯಾಯ – ಒಂದು

# ಪ್ರಸ್ತಾವನೆ

ಚರಿತ್ರೆ ಎನ್ನುವುದು ಸಾಮಾನ್ಯವಾಗಿ ಅರಸು ಮನೆತನಗಳಿಗಷ್ಟೇ ಸೀಮಿತಗೊಳಿಸಿ ಅದೊಂದು ನಡೆದು ಹೋದ ಘಟನೆ ಎನ್ನುವ ತೀರ್ಮಾನವನ್ನು ಕೊಡುವ ಅಧ್ಯಯನಗಳ ಸಂಖ್ಯೆಯೇ ಹೆಚ್ಚಿನದು. ರಾಜ್ಯವನ್ನು ರಾಜಮನೆತನದ ಖಾಸಗಿ ಚಟುವಟಿಕೆ ಎಂಬರ್ಥದಲ್ಲಿ ನೋಡಲಾಯಿತೇ ಹೊರತು, ಸಾಮಾಜಿಕ ಪ್ರಕ್ರಿಯೆಯ ಸಾವಯವ ಅಂಗವನ್ನಾಗಿ ನೋಡಲಿಲ್ಲ. ರಾಜಕೀಯ ಎಂಬುದನ್ನು ಸಾಮಾಜಿಕ ಅಧಿಕಾರ ಹಂಚಿಕೆಯಾಗಿ ಹಾಗೂ ಗಳಿಕೆಯ ವ್ಯವಸ್ಥೆ ಎಂಬುದಾಗಿ ತಿಳಿಯದೆ ಕೇವಲ ಸೈನ್ಯ, ಯುದ್ಧ, ರಾಜವಂಶಗಳ ಸಂಬಂಧ ಎಂಬರ್ಥದಲ್ಲಿ ಭಾವಿಸಲಾಯಿತು. ಹೀಗಾಗಿ ಚರಿತ್ರೆಯೆಂಬುದು ರಾಜರ ಚರಿತ್ರೆ ಅಥವಾ ರಾಜಕೀಯ ಚರಿತ್ರೆ ಎನ್ನುವ ಸೀಮಿತ ಅರ್ಥವನ್ನು ಪಡೆದುಕೊಂಡಿತು. ರಾಜ್ಯ ಮತ್ತು ರಾಜ ಇವೆರಡನ್ನೂ ಒಂದೇ ಎನ್ನುವ ಅರ್ಥದಲ್ಲಿ ವ್ಯಾಖ್ಯಾನಿಸಿರುವುದು ಈ ತತ್ವಗಳಿಗೆ ಮೂಲ ಕಾರಣ. ರಾಜ್ಯ ಎನ್ನುವುದು ಒಂದು ನಿರ್ದಿಷ್ಟ ಭೌಗೋಳಿಕ ಸೀಮೆಗೆ ಸಂಬಂಧಿಸಿದ್ದಾಗಿದೆ. ಅದೊಂದು ಆಳ್ವಿಕೆಯ ವ್ಯವಸ್ಥೆಯೂ ಹೌದು. ಅದರಲ್ಲಿ ಅರಸ, ಮಂತ್ರಿ, ಅಧಿಕಾರಿಗಳು ಹಾಗೂ ಪ್ರಜೆಗಳು ಇದ್ದು, ಇವರೆಲ್ಲರ ಒಳಗೊಳ್ಳುವಿಕೆಯ ಮೂಲಕವೇ ರಾಜ್ಯ ಅಸ್ತಿತ್ವವನ್ನು ಪಡೆದುಕೊಳ್ಳುತ್ತದೆ. ಅರಸ ಅಥವಾ ಅರಸು ಮನೆತನಗಳ ಚರಿತ್ರೆಯ ಒಂದು ಭಾಗ ಮಾತ್ರ, ಅದೇ ಚರಿತ್ರೆಯಾಗಲು ಸಾಧ್ಯವಿಲ್ಲ. ಆದರೆ ಸಾಮಾನ್ಯವಾಗಿ ಚರಿತ್ರೆ ಎಂದಾಗ ರಾಜನೆಂಬ ವ್ಯಕ್ತಿಕೇಂದ್ರಿತ ಹಾಗೂ ಅವನ ಯುದ್ಧ, ದಿಗ್ವಿಜಯ, ವಂಶಾವಳಿ ಮುಂತಾದ ಬರವಣಿಗೆಗಳು ಪ್ರಧಾನವಾಗಿರುವ ಚಿತ್ರಣವೇ ಕಂಡುಬರುತ್ತದೆ.

ಮಾನವನು ಆರಂಭ ಕಾಲದಿಂದಲೂ ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಬೆಳವಣಿಗೆ ಹೊಂದುತ್ತಾ ಬಂದಿರುವುದು ಚರಿತ್ರೆ ಪುಟಗಳನ್ನು ತೆರೆದು ನೋಡಿದಾಗ ತಿಳಿದುಬರುತ್ತದೆ. ಅಂದಿನಿಂದ ಇಂದಿನವರೆಗೂ ಮಾನವ ಸಾಗಿಬಂದ ದಾರಿಯಲ್ಲಿ ತೊಡಗಿಸಿಕೊಂಡ ಆರ್ಥಿಕ ಚಟುವಟಿಕೆ ಹಾಗೂ ಆ ಪ್ರಕ್ರಿಯೆಯಲ್ಲಿ ಸಹಭಾಗಿತ್ವವನ್ನು ಅನುಸರಿಸಿದ ಸಮುದಾಯಗಳ ಗುರುತಿಸಿಕೊಳ್ಳುವ ಪ್ರಕ್ರಿಯೆಯು ನಿರಂತರವಾಗಿ ಸಾಗಿಬಂದಿದೆ. ಈ ಗುರುತಿಸಿಕೊಳ್ಳುವ ಪ್ರಕ್ರಿಯೆಯನ್ನು ನಾವು ವ್ಯಾಪಾರ ಮತ್ತು ವಾಣಿಜ್ಯ ವ್ಯವಸ್ಥೆಯೆಂದು ಪರಿಗಣಿಸಿ ಅಧ್ಯಯನ ಮಾಡುವುದು ಸೂಕ್ತವೆನಿಸುತ್ತದೆ.

ಮಾನವನ ಜಿಜ್ಞಾಸೆಯ ಪ್ರವೃತ್ತಿಯೇ ಆತನ ಸಾಧನೆಗೆ ಮೂಲಾಧಾರವಾಗಿದೆ. ಒಂದು ಕಡೆ ಬದುಕು ಕಂಡುಕೊಂಡರೆ. ಮತ್ತೊಂದೆಡೆ ಸಮಾಜದ ಸ್ಥಾನಮಾನಗಳ ಮೂಲಕ ಗುರುತಿಸಿಕೊಳ್ಳುವ ಪ್ರಕ್ರಿಯೆ ಕಂಡುಬರುತ್ತದೆ. ಹಳೆಯ ಅನುಭವದೊಡನೆ ಮುಂದಿನ ಭವಿಷ್ಯವನ್ನು ರೂಪಿಸಿಕೊಳ್ಳುವ ಶಕ್ತಿಯನ್ನು ಮಾನವನು ಪಡೆದಿದ್ದಾನೆ. ತನ್ನ ಗತಕಾಲದ ಬಗ್ಗೆ ವಿಚಾರ ಮಾಡಿ ಉಲ್ಲೇಖಿಸುವ ಅವಶ್ಯಕತೆ ಸಾರ್ವತ್ರಿಕವಾಗಿದೆ. ಭೂತಕಾಲದ ಪ್ರತಿಯೊಂದು ಪ್ರಯೋಗವೂ ಕಾಲಗರ್ಭದಲ್ಲಿ ಅಡಗಿಹೋದ ವಿಷಯಗಳ ಬಗ್ಗೆ ಕುತೂಹಲವನ್ನು ಕೆರಳಿಸುತ್ತವೆ. ಸೈದ್ಧಾಂತಿಕವಾಗಿ ಹೇಳುವುದಾದರೆ, ನಾವು ಆಲೋಚಿಸುವ ಪ್ರತಿಯೊಂದು ವಿಷಯಕ್ಕೂ ಒಂದು ಚರಿತ್ರೆ ಇರುತ್ತದೆ. ಅನಾದಿ ಕಾಲದಿಂದಲೂ ಮಾನವನ ನೆಲೆಯಾಗಿ ಗುರುತಿಸಿಕೊಂಡಿರುವ ಚಿತ್ರದುರ್ಗ ಪ್ರದೇಶವು ಅಂತಹ ಚಾರಿತ್ರಿಕ ಅಂಶಗಳನ್ನು ಒಳಗೊಂಡಿದೆ.

ದಕ್ಷಿಣ ಭಾರತವು ಪ್ರಾಚೀನ ಕಾಲದಿಂದಲೂ ಬೃಹತ್ ರಾಜಮನೆತನಗಳ ಆಳ್ವಿಕೆಯನ್ನು ಕಂಡಿದೆ. ಅವುಗಳಲ್ಲಿ ವಿಜಯನಗರವು ಪ್ರಮುಖವಾಗಿದ್ದು, ಮಧ್ಯಕಾಲೀನ ಅರಸು ಮನೆತನಗಳಲ್ಲಿ ಅತ್ಯಂತ ಬಲಿಷ್ಠ ಮತ್ತು ಆರ್ಥಿಕವಾಗಿ ಶ್ರೀಮಂತ ರಾಜಮನೆತನವಾಗಿತ್ತೆಂಬುದು ಆಧಾರಗಳಿಂದ ದೃಢಪಟ್ಟಿದೆ. ತಾಳಿಕೋಟೆ ಕದನದ ನಂತರ ಅನೇಕ ಪಾಳೆಯಗಾರರು ಸ್ವತಂತ್ರವಾಗಿ ಆಳ್ವಿಕೆ ನಡೆಸಲಾರಂಭಿಸಿದರು. ಅವರಲ್ಲಿ ಚಿತ್ರದುರ್ಗದ ನಾಯಕರೂ ಒಬ್ಬರಾಗಿದ್ದು, ತಮ್ಮದೇ ಆದ ರಾಜಕೀಯ ಹಾಗೂ ಆರ್ಥಿಕ ನೀತಿಯನ್ನು ನಿರೂಪಿಸಲು ಪ್ರಯತ್ನಿಸಿದರು.

ಪ್ರಸ್ತುತ ಮಹಾ ಪ್ರಬಂಧದಲ್ಲಿ ಕೃಷಿ ಮತ್ತು ವ್ಯಾಪಾರ ಸಂಬಂಧಗಳನ್ನು ಸಾಮಾಜಿಕ ಹಾಗೂ ಆರ್ಥಿಕ ಹಿನ್ನೆಲೆಯಿಂದ ಅಧ್ಯಯನ ಮಾಡಲಾಗಿದೆ. ಸಮಾಜದಲ್ಲಿ ವ್ಯಕ್ತಿ, ಸಮುದಾಯಗಳ ಬದುಕು, ಬದುಕಿಗೆ ಅನಿವಾರ್ಯವಾದ ವಿಷಯಗಳೊಂದಿಗಿನ ಕೃಷಿ ಉತ್ಪಾದನೆ, ನೀರಾವರಿ, ತೆರಿಗೆ, ಭೂ ಆಧಾರಿತ ಸಂಬಂಧಗಳು, ವ್ಯಾಪಾರ ವಹಿವಾಟು ಮುಂತಾದವು ಚರ್ಚೆಗೊಳಗಾದ ಮುಖ್ಯ ಅಂಶಗಳಾಗಿವೆ.

ಚರಿತ್ರೆಯ ಬೆಳವಣಿಗೆ ನಿಶ್ಚಿತ ರೂಪ ಆರಂಭಗೊಂಡಿರುವುದೇ ಮಾನವನು ಉತ್ಪಾದನೆಯಲ್ಲಿ ಪಾಲ್ಗೊಂಡಾಗ ಅಥವಾ ಉತ್ಪಾದನೆಯನ್ನು ಆರಂಭಿಸಿದಾಗ. ಬುಡಕಟ್ಟು ಸಂಸ್ಕೃತಿಗಳು ಹೆಚ್ಚಾಗಿ ನೆಲೆಗೊಂಡಿರುವ ಪ್ರದೇಶದಲ್ಲಿ ಕೃಷಿ ಪೂರ್ವ ವ್ಯವಸ್ಥೆಯು ಕೃಷಿ ವ್ಯವಸ್ಥೆಯಾಗಿ ಪರಿವರ್ತನೆಗೊಂಡಿರುವುದು ಚರಿತ್ರೆಯ ಬೆಳವಣಿಗೆಯ ಮೊದಲನೆಯ ಘಟ್ಟ. ಈ ಪರಿವರ್ತನೆ ಅನೇಕ ಬದಲಾವಣೆಗಳಿಗೆ ದಾರಿ ಮಾಡಿಕೊಟ್ಟಿತು. ವಸ್ತುಗಳನ್ನು ಸಂಗ್ರಹಿಸುತ್ತಾ ಅಲೆಮಾರಿ ಜೀವನ ನಡೆಸುತ್ತಿದ್ದ ಮಾನವನು ಒಂದೇ ಕಡೆ ನೆಲೆ ನಿಂತು ತನಗೆ ಬೇಕಾದ ವಸ್ತುಗಳನ್ನು ತಾನೇ ಉತ್ಪಾದನೆ ಮಾಡಿಕೊಳ್ಳಲು ಆರಂಭಿಸಿರುವುದು ಆತನ ಭೌತಿಕ ಅವಶ್ಯಕತೆಗಳ ಈಡೇರಿಕೆಯು ಅನಿವಾರ್ಯವಾಗಿತ್ತು. ಉತ್ಪಾದನೆಯಲ್ಲಿನ ಹೆಚ್ಚಿನ ಉತ್ಪಾದನೆಯು ವಿನಿಮಯ ಮಾಡಿಕೊಳ್ಳಲು ಮಾರುಕಟ್ಟೆಗಳು ರಚನೆಯಾಗಿ ನಂತರ ಅವುಗಳು ವಿಸ್ತರಣೆಗೊಂಡವು. ಮಾನವನ ಸಂಘಟಿತ ಬದುಕಿಗಾಗಿ ಸಂಘ ಸಂಸ್ಥೆಗಳನ್ನು ಕಟ್ಟಿಕೊಳ್ಳುವುದು ಅನಿವಾರ್ಯವಾಗಿತ್ತು. ಅನ್ನ, ಬಟ್ಟೆ, ವಸತಿ, ಮುಂತಾದವುಗಳನ್ನು ತಾನೇ ನಿರ್ವಹಿಸಿಕೊಂಡು ಅದೇ ಚರಿತ್ರೆಗೆ ತಳಹದಿಯಾಗುವಂತೆ ಮಾಡಿದನು. ವಸ್ತುಗಳ ಉತ್ಪಾದನೆಯು ಮಾನವನ ಬದುಕಿಗೆ ತಳಹದಿ ಮಾತ್ರವಲ್ಲದೆ ಆತನ ಸಂಬಂಧಗಳನ್ನು ನಿರ್ಣಯಿಸುವ ಅಂಶವೂ ಆಗಿದೆ. ಕೃಷಿ ವ್ಯವಸ್ಥೆ ರೂಪುಗೊಂಡು

ಮಾನವನ ಬದುಕು ವ್ಯವಸ್ಥಿತವಾಗಿ ಬೆಳೆದುದ್ದನ್ನು ಅರ್ಥೈಸಿಕೊಳ್ಳಬೇಕಾದರೆ ಆರ್ಥಿಕ ಚರಿತ್ರೆಯ ಅಧ್ಯಯನ ಅನಿವಾರ್ಯವಾಗುತ್ತದೆ. ಆದರೆ ಅರಸ ಕೇಂದ್ರಿತ ಚರಿತ್ರೆಯಲ್ಲಿ ಕೃಷಿ, ವ್ಯಾಪಾರ, ಜನಜೀವನ ಸಮುದಾಯಗಳು, ಸಾರಿಗೆ ಸಂಪರ್ಕ ವ್ಯವಸ್ಥೆಯಲ್ಲಿ ಆದ ಪರಿವರ್ತನೆಯಾಗಲಿ, ದುಡಿಯುವ ವರ್ಗವಾಗಲಿ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುವುದೇ ಇಲ್ಲ. ರಾಜ್ಯದ ಒಟ್ಟು ಆರ್ಥಿಕತೆಯು ಕೃಷಿ ಮತ್ತು ಅದರ ಉತ್ಪಾದನೆಯನ್ನು ಅವಲಂಬಿಸಿರುತ್ತಿತ್ತು. ಆದರೆ ಕೃಷಿ ಕಾರ್ಮಿಕರು ಸಮಾಜದ ಅತ್ಯಂತ ಕೆಳಸ್ತರದ ಅಥವಾ ಅಲಕ್ಷಿತ ವರ್ಗಕ್ಕೆ ಸೇರಿದ್ದರು. ರಾಜ್ಯದ ಅರ್ಥವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದ ಕೃಷಿಕರನ್ನು ಉದ್ದೇಶಪೂರ್ವಕವಾಗಿ ಅರಸಕೇಂದ್ರಿತ ಚರಿತ್ರೆಯು ದೂರವಿಟ್ಟಿತು. ಇದು ವರ್ಣ/ಜಾತಿ ಆಧಾರಿತ ಸಮಾಜದ ತೀರ್ಮಾನವೂ ಆಗಿತ್ತು. ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೇ ಕೃಷಿ ವ್ಯವಸ್ಥೆ ಅಸ್ತಿತ್ವದಲ್ಲಿತ್ತು. ಆದರೆ ವಿಜಯನಗರೋತ್ತರ ಕಾಲದಲ್ಲಿ ಭಾರತಕ್ಕೆ ಬಂದ ಯುರೋಪಿಯನ್ನರಿಂದಾಗಿ ಕೃಷಿಯ ವಾಣಿಜ್ಯೀಕರಣ ಹಾಗೂ ಕೈಗಾರಿಕೀಕರಣಕ್ಕೆ ಪೂರಕವಾದ ವಾತವರಣವು ನಾಯಕರ ಕಾಲದಲ್ಲಿ ನಿರ್ಮಾಣವಾದದ್ದನ್ನು ಗುರುತಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದಲ್ಲಿ ನಾಯಕರ ಕೃಷಿ ವಿಸ್ತರಣೆ, ಉಳುಮೆ ವಿಧಾನ, ಮಣ್ಣಿನ ಲಕ್ಷಣಗಳು, ಬೆಳೆಗಳು, ನೀರಾವರಿ, ತೆರಿಗೆ, ಭೂಮಾಲೀಕರು, ಮಧ್ಯವರ್ತಿಗಳು, ದಾನಗಳು, ಕೃಷಿ ಕಾರ್ಮಿಕರು, ಬಿಟ್ಟಿ ಸೇವೆ, ವ್ಯಾಪಾರ, ಸಂತೆ, ಪಟ್ಟಣ, ಸಾರಿಗೆ ಮೊದಲಾದ ಒಂದಕ್ಕೊಂದು ಪೂರಕ ಸಂಬಂಧ ಹೊಂದಿರುವ ಅಂಶಗಳಿಗೆ ಸಂಬಂಧಿಸಿದಂತೆ ಚರ್ಚಿಸಲಾಗಿದೆ.

ಕೃಷಿ ವ್ಯವಸ್ಥೆ, ವ್ಯಾಪಾರ ಮತ್ತು ನಗರ ವ್ಯವಸ್ಥೆ ರೂಪುಗೊಂಡ ಬಳಿಕ ಸಮಾಜದ ರಚನೆಯಲ್ಲಿ ಸ್ವಲ್ಪಮಟ್ಟಿನ ಬದಲಾವಣೆಗಳು ಕಾಣಿಸಿಕೊಳ್ಳಲಾರಂಭಿಸಿದವು. ಕೃಷಿ ವಿಸ್ತರಣೆ ಮತ್ತು ಉಳುಮೆಯ ವಿಧಾನದಲ್ಲಾದ ಬದಲಾವಣೆಗಳು ಹೆಚ್ಚುವರಿ ಉತ್ಪಾದನೆಗೆ ಅವಕಾಶ ಮಾಡಿಕೊಟ್ಟು ಪೇಟೆ-ಪಟ್ಟಣಗಳು ಅಸ್ತಿತ್ವಕ್ಕೆ ಬರುವಂತೆ ಮಾಡಿದವು. ಕೃಷಿ ವ್ಯವಸ್ಥೆಯು ರಾಜ್ಯದ ಆರ್ಥಿಕತೆಯ ಸುಧಾರಣೆಗೆ ಕಾರಣವಾದರೂ, ಕೃಷಿ ಕಾರ್ಮಿಕರು ಸಮಾಜದಲ್ಲಿ ನಿರ್ಲಕ್ಷ್ಯಕ್ಕೆ ಒಳಪಟ್ಟೇ ಜೀವಿಸಬೇಕಾಯಿತು. ಭೂ ಮಾಲೀಕರ ಗುಲಾಮರಾಗಿ, ಜೀತದಾಳುಗಳಾಗಿ ಒತ್ತಾಯವಾಗಿ ದುಡಿಯುವುದಕ್ಕೆ ಕೃಷಿ ಕಾರ್ಮಿಕರು ಒಳಗಾಗಿದ್ದರು. ಅತಿಯಾದ ತೆರಿಗೆಯನ್ನು ಹೇರುವುದರ ಮೂಲಕ ಗ್ರಾಮೀಣ ಗಣ್ಯರು ಅಥವಾ ಆಡಳಿತ ವರ್ಗದ ನಿಯಂತ್ರಣದಲ್ಲಿ ಇರಿಸಿಕೊಳ್ಳುತ್ತಿದ್ದರು. ಪೇಟೆ-ಪಟ್ಟಣಗಳಲ್ಲಿ ವ್ಯಾಪಾರ ಮತ್ತು ವಾಣಿಜ್ಯ ನಡೆಸುವ ವರ್ತಕರು ಕೂಡ ಈ ರೀತಿಯ ಶೋಷಣೆಗಳಿಗೆ ಒಳಗಾಗುತ್ತಿದ್ದರು. ಈ ಕಾರಣಗಳಿಂದಾಗಿ ವರ್ತಕರು ಹಾಗೂ ಉತ್ಪಾದನೆ ವ್ಯಾಪಾರವನ್ನು ನಡೆಸುವ ಕುಶಲಕರ್ಮಿಗಳು ಸಂಘಗಳನ್ನು ರಚಿಸಿಕೊಂಡರು. ಆದರೆ ವರ್ತಕ ಸಂಘಗಳು ಕ್ರಮೇಣ ಜಾತಿಯ ಪರ್ಯಾಯ ಪದಗಳಂತೆ ಬಳಕೆಯಾಗತೊಡಗಿದವು. ಜಾತಿ ವ್ಯವಸ್ಥೆಯು ಪ್ರಧಾನವಾಗಿದ್ದ ಅಂದಿನ ಸಮಾಜದಲ್ಲಿ ವರ್ತಕ ಸಂಘಗಳು ಜಾತಿಗಳ ಮರ್ಜಿಗೆ ಒಳಗಾಗಿರುವುದರಲ್ಲಿ ಅಚ್ಚರಿಯಿಲ್ಲ. ಆದರೂ ವರ್ತಕ ಸಂಘಗಳು ಹೆಚ್ಚು ಪ್ರಭಾವಶಾಲಿಯಾಗಿ ಮತ್ತು ವಿಸ್ತಾರವಾಗಿ ಬೆಳೆದು ವ್ಯಾಪಾರ ಮತ್ತು ವಾಣಿಜ್ಯ ಚುರುಕುಗೊಳ್ಳುವಂತೆ ಮಾಡಿದವು. ಅದೇ ರೀತಿ ಗ್ರಾಮೀಣ ಮತ್ತು ನಗರ ಪ್ರದೇಶಗಳನ್ನು ಹಲವಾರು ವಿಚಾರಗಳಲ್ಲಿ ಪರಸ್ಪರ ಒಂದುಗೂಡಿಸುವ ಕೆಲಸವನ್ನು ಮಾಡಿದವು.

## ೧.೧. ಅಧ್ಯಯನದ ಉದ್ದೇಶಗಳು

ಆರ್ಥಿಕ ಚರಿತ್ರೆದಲ್ಲಿ ಉತ್ಪಾದನಾ ಕ್ಷೇತ್ರದ ಪ್ರಮುಖ ಅಂಗಗಳಾದ ಕೃಷಿ, ವ್ಯಾಪಾರ ಮತ್ತು ಗುಡಿ ಕೈಗಾರಿಕೆಗಳು ಪ್ರಮುಖವಾದವು, ಉತ್ಪಾದನಾ ವರ್ಗಗಳಿಗೆ ಸ್ಫೂರ್ತಿದಾಯಕವಾದ ಆರ್ಥಿಕ ವ್ಯವಸ್ಥೆಯನ್ನು ಮುಂದುವರೆಸಿಕೊಂಡು ಬರುವಲ್ಲಿ ವ್ಯಾಪಾರ ವಹಿವಾಟುಗಳ ಪಾತ್ರ ಹಿರಿದಾದ್ದು. ದೇಶದ ಆರ್ಥಿಕ ವ್ಯವಸ್ಥೆಯನ್ನು ಉನ್ನತ ಹಂತಕ್ಕೆ ತರುವಲ್ಲಿ ಒಂದು ಕಡೆ ಪ್ರಭುತ್ವ ಸಾಕ್ಷಿಯಾದರೆ ಮತ್ತೊಂದೆಡೆ ಕೃಷಿ, ಕೈಗಾರಿಕೆ ಮತ್ತು ಅವುಗಳಿಗೆ ಪೂರಕ ವ್ಯಾಪಾರ ವಾಣಿಜ್ಯಗಳು ಪ್ರಮುಖ ಪಾತ್ರವಹಿಸುತ್ತವೆ. ವಾಣಿಜ್ಯೋದ್ಯಮವು ದೇಶದ ಆರ್ಥಿಕ ಪ್ರಗತಿಗೆ ಪ್ರಮುಖವಾದ ಒತ್ತಾಸರೆಯನ್ನು ಒದಗಿಸುತ್ತದೆ.

* ಚಿತ್ರದುರ್ಗ ಪ್ರದೇಶವು ಅನಾದಿಕಾಲದಿಂದಲೂ ಮಾನವನ ನೆಲೆ ಹಾಗೂ ಚಟುವಟಿಕೆಗಳ ಕೇಂದ್ರಸ್ಥಾನವಾಗಿದೆ. ಈ ಭೌಗೋಳಿಕ ಪರಿಸರವೇ ಈ ಚಟುವಟಿಕೆಗಳಿಗೆ ಕಾರಣ ಇದ್ದಿರಬಹುದು. ಈ ಪ್ರದೇಶವು ಕರ್ನಾಟಕದ ಮಧ್ಯಭಾಗದಲ್ಲಿದೆ. ಪ್ರಸ್ತುತ ಅಧ್ಯಯನದ ಭೌಗೋಳಿಕ ಪರಿಸರ ಬೆಟ್ಟಗುಡ್ಡಗಳಿಂದ, ನೈಸರ್ಗಿಕವಾದ ನದಿ–ತೊರೆಗಳಿಂದ, ಹಳ್ಳ–ಕೊಳ್ಳಗಳಿಂದ ಕೂಡಿದೆ. ಪ್ರಾಗೈತಿಹಾಸಿಕ ಕಾಲದಿಂದ ಹಿಡಿದು ಚರಿತ್ರೆ ಕಾಲದ ವಿಜಯನಗರ, ವಿಜಯನಗರೋತ್ತರ ಪಾಳೆಯಗಾರರ ಕಾಲದವರೆಗೂ ಕಾಲಾನುಕ್ರಮವಾಗಿ ಚರ್ಚಿಸುವ ಉದ್ದೇಶವನ್ನು ಹೊಂದಿದೆ.

* ಪ್ರಸ್ತುತ ಕಾಲಘಟ್ಟದಲ್ಲಿ ಚರಿತ್ರೆಯ ಗ್ರಹಿಕೆಗಳು ಬದಲಾಗುತ್ತಿವೆ. ನವೀನ ರೀತಿಯ ಸಂಗತಿಗಳು ನಡೆಯುತ್ತಿರುತ್ತವೆ. ಹೊಸ ವಿಚಾರಗಳು ಹರಿದು ಬರುತ್ತಿರುತ್ತವೆ. ಸ್ಥಳೀಯ ಪ್ರದೇಶಗಳ ಚರಿತ್ರೆಯನ್ನು ಗುರುತಿಸುವ ಕಾರ್ಯವೂ ಸಹ ನಡೆಯುತ್ತಿದೆ. ಇದು ಸ್ಥಳೀಯ ಚರಿತ್ರೆಯ ಅಧ್ಯಯನ ಎಂದು ಜನಪ್ರಿಯವಾಗಿದೆ. ಅಂದರೆ ಪ್ರತಿಯೊಂದು ಪ್ರದೇಶಕ್ಕೂ, ವಿಷಯಕ್ಕೂ ತನ್ನದೇ ಆದ ಚರಿತ್ರೆ ಇದ್ದೇ ಇರುತ್ತದೆ. ಸ್ಥಳೀಯ ಪ್ರದೇಶಗಳ ಚರಿತ್ರೆಯನ್ನು ಸೂಕ್ಷ್ಮವಾಗಿ ಪರಿಶೀಲಿಸುವಾಗ ಉತ್ತಮ ಫಲಿತಾಂಶ ಕಂಡುಬರುವುದಲ್ಲದೆ ಅವುಗಳ ಸಾಮಾಜಿಕ, ಆರ್ಥಿಕ ಮತ್ತು ಆಡಳಿತಾತ್ಮಕ ಸಂಘಟನಾ ಅಂಶಗಳು ಸಹ ಕಂಡುಬರುತ್ತವೆ. ಸ್ಥಳೀಯ ಚರಿತ್ರೆ ಅಧ್ಯಯನ ಕೈಗೊಳ್ಳುವಾಗ ಚಾರಿತ್ರಿಕ ದೃಷ್ಟಿಯಿಂದ ಪರೀಕ್ಷಿಸುವುದು ಅತ್ಯಂತ ಉಪಯುಕ್ತವಾದುದು. ಈ ಹಿನ್ನೆಲೆಯಲ್ಲಿ ಚಿತ್ರದುರ್ಗದ ಸ್ಥಳೀಯ ಚರಿತ್ರೆವನ್ನು ತಿಳಿಯುವ ಪ್ರಮುಖ ಉದ್ದೇಶವನ್ನು ಹೊಂದಲಾಗಿದೆ.

* ಕೃಷಿ ಹಾಗೂ ವ್ಯಾಪಾರದ ಸಂಘಟಿತ ಕಾರ್ಯಗಳು ಚಿತ್ರದುರ್ಗ ನಾಯಕರ ಕಾಲದಲ್ಲಿಯೇ ಆರಂಭಗೊಂಡಿದ್ದಲ್ಲ. ಆದಿ ಮೌರ್ಯರಿಂದ ಪ್ರಸ್ತುತದ ಕಾಲದವರೆಗೂ ಈ ಪ್ರಕ್ರಿಯೇ ಮುಂದುವರೆದುಕೊಂಡು ಬಂದಿದೆ. ಆದರೆ ನಾಯಕರ ಪೂರ್ವಕಾಲದಲ್ಲಿ ವ್ಯಾಪಾರ–ವಾಣಿಜ್ಯ ಉದ್ದಿಮೆಗಳು ಇದ್ದು ಅವುಗಳ ಬೆಳವಣಿಗೆಗೆ ಪೂರಕವಾದ ಸಾಮಾಜಿಕ ವ್ಯವಸ್ಥೆಯನ್ನು ನಾಯಕರು ರೂಪಿಸಿದ ಬಗೆಯನ್ನು ಕುರಿತು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

ವಿಜಯನಗರೋತ್ತರ ಕಾಲದಲ್ಲಾದ ಆಡಳಿತ ಬದಲಾವಣೆಯಿಂದಾಗಿ ಸ್ಥಾಪನೆಯಾದ ಅರಸೊತ್ತಿಗೆ, ನಾಯಕರ ಕಾಲದ ಬದಲಾದ ಕೃಷಿ ಹಾಗೂ ವ್ಯಾಪಾರ ನೀತಿಯನ್ನು ಕುರಿತು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

* ಮುಖ್ಯವಾಗಿ ಭೂ ಹಿಡುವಳಿ ವ್ಯವಸ್ಥೆ, ಕೃಷಿ ಕಾರ್ಮಿಕರು, ಹಾಗೂ ಉತ್ಪಾದನ ವಿನಿಮಯ ವರ್ತಕರನ್ನು ಕುರಿತು ಅಧ್ಯಯನ ಮಾಡುವುದರ ಜೊತೆಗೆ ಅಂದಿನ ಕಾಲದಲ್ಲಿ ನಗರೀಕರಣ ಪ್ರಕ್ರಿಯೆಗೆ ಒಳಗಾದ ಪೇಟೆ ಪಟ್ಟಣಗಳು, ಸಾರಿಗೆ ಸಂಪರ್ಕಗಳನ್ನು ಕುರಿತು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

* ಚಿತ್ರದುರ್ಗ ಪ್ರದೇಶವು ವಸಾಹತು ಆಡಳಿತ ಪ್ರದೇಶಕ್ಕೆ ಒಳಗಾಗಿದ್ದು, ವಸಾಹತು ಕಂಪನಿ ವ್ಯಾಪಾರ ನೀತಿಗಳಿಂದಾಗಿ ಕೃಷಿಯ ವಾಣಿಜ್ಯೀಕರಣಕ್ಕೆ ಪೂರಕವಾದ ಸಂದರ್ಭ ಹಾಗೂ ಅಂದಿನ ಕಾಲದಲ್ಲಿ ಮಾರುಕಟ್ಟೆ ರಚನೆಗೆ ಪೂರಕವಾದ ಬೇರೆ ರಾಜ್ಯಗಳಿಂದ ಬಂದು ನೆಲೆಯೂರಿದ ವರ್ತಕ ಸಮುದಾಯಗಳನ್ನು ಕುರಿತು ಅಧ್ಯಯನ ಮಾಡುವ ಉದ್ದೇಶ ಹೊದಲಾಗಿದೆ. ಹಾಗೆಯೇ ಇದರೊಂದಿಗೆ ಚಿತ್ರದುರ್ಗ ಪ್ರದೇಶದ ಪ್ರಸ್ತುತ ಸಂದರ್ಭದ ಬದಲಾದ ಅರ್ಥವ್ಯವಸ್ಥೆ ಹಾಗೂ ನಾಯಕೋತ್ತರ ಚಿಂತನೆಗಳನ್ನು ಪ್ರಸ್ತುತ ಪಡಿಸುವ ಉದ್ದೇಶವನ್ನು ಹೊಂದಿದೆ.

* ಒಟ್ಟಾರೆಯಾಗಿ ನಾಯಕರ ಕುರಿತು ಈವರೆಗಿನ ಬಹುತೇಕ ಅಧ್ಯಯನಗಳು ರಾಜಕೀಯ ಅಂಶಗಳನ್ನು ಕುರಿತು ಅಧ್ಯಯನ ನಡೆಸಿದ್ದು, ಪ್ರಸ್ತುತ ಅಧ್ಯಯನವು ಸಾಮಾಜಿಕ ಹಾಗೂ ಆರ್ಥಿಕ ನೆಲೆಯಲ್ಲಿ ನಾಯಕರ ಕಾಲಘಟ್ಟವನ್ನು ಕುರಿತು ಅಧ್ಯಯನ ಮಾಡುವ ಬಹುಮುಖ್ಯವಾದ ಉದ್ದೇಶವನ್ನು ಹೊಂದಿದೆ.

**೧.೨. ಅಧ್ಯಯನದ ಮಹತ್ವ**

ಪ್ರಸ್ತುತ ಕಾಲಾವಧಿಯ ಚರಿತ್ರೆ ಲೇಖನವನ್ನು ಕುರಿತು ವಿಸ್ತಾರವಾದ ಚರ್ಚೆಯನ್ನಾಗಲಿ, ಮೌಲ್ಯಮಾಪನವನ್ನಾಗಲಿ ಈ ಅಧ್ಯಯನದಲ್ಲಿ ಮಾಡಿಲ್ಲ. ಈ ಅವಧಿಯ ಚರಿತ್ರೆ ಲೇಖನದ ಪ್ರಮಾಣ ಅಧಿಕವಾಗಿದ್ದು, ವ್ಯಾಖ್ಯಾನದಲ್ಲಿ ವೈವಿಧ್ಯಮಯವಾದ ಚಿತ್ರಣವನ್ನು ಒದಗಿಸುತ್ತವೆ. ರಾಜರ, ರಾಜ ಸಂತತಿಗಳ, ವಂಶಾವಳಿಗಳ, ಯುದ್ಧದ ತಾರೀಖುಗಳ ಪಟ್ಟಿಯನ್ನಷ್ಟೇ ನೀಡುವ ಗ್ರಂಥಗಳನ್ನು ಪರಿಗಣಿಸಲಾಗಿಲ್ಲ. ಬದಲಾಗಿ ಸಮುದಾಯ, ಭೌಗೋಳಿಕತೆ, ಕೃಷಿ ವಿಸ್ತರಣೆ ಹಾಗೂ ಇದರ ಮೂಲಕ ರಚನೆಯಾದ ಆರ್ಥಿಕತೆ, ವ್ಯಾಪಾರ, ವಾಣಿಜ್ಯಗಳನ್ನು ಕುರಿತು ಅಭ್ಯಾಸಿಸಲಾಗಿದೆ. ಅನೇಕ ಕೃತಿಗಳಲ್ಲಿ, ರಾಜಪ್ರಭುತ್ವ ಮತ್ತು ಧಾರ್ಮಿಕ ಪ್ರಭುತ್ವಗಳನ್ನು ವೈಭವೀಕರಿಸುವ ಶಾಸನಗಳು, ಸಾಹಿತ್ಯ ಕೃತಿಗಳು, ಸ್ಮಾರಕ ಶಿಲ್ಪಗಳು ಮುಂತಾದವುಗಳ ಕುರಿತಾದ ವಿವರಣೆ ವಿಫುಲವಾಗಿ ಸಿಗುತ್ತದೆಯೇ ಹೊರತು ಪ್ರಜೆಗಳ ಕುರಿತಾದ, ಅದರಲ್ಲೂ ಸಮಾಜದ ಕೆಳಸ್ತರದ ದುಡಿಯುವ ಜನರ ಬದುಕನ್ನು ಕುರಿತಾದ ಯಾವ ಮಾಹಿತಿಯೂ ಸಿಗುವುದಿಲ್ಲ. ಚರಿತ್ರೆ ಅಧ್ಯಯನವು ಎಂದೂ ಪರಿಪೂರ್ಣವಲ್ಲ. ಅದೊಂದು ನಿರಂತರ ಪ್ರಕ್ರಿಯೆ. ದಾಖಲೆಗಳು ಕಾಲದಿಂದ ಕಾಲಕ್ಕೆ ಸಿಗುತ್ತಾ ಹೋದಂತೆಲ್ಲ ಅಧ್ಯಯನ ಸ್ವರೂಪ ಹಾಗೂ ಕಾಲದ ನಿರೂಪಣೆಯೂ ಬದಲಾಗುತ್ತಾ ಇರುತ್ತದೆ. ಇದು ಪ್ರಸ್ತುತ ಪ್ರಬಂಧಕ್ಕೂ ಅನ್ವಯಿಸುವ ಮಾತು. ಚರಿತ್ರೆ ವಿಶ್ಲೇಷಣೆಗೆ ಸಂಬಂಧಿಸಿದಂತೆ ಪರಿಕಲ್ಪನೆಗಳು ಹಾಗೂ ಸಿದ್ಧಾಂತಗಳು ಹುಟ್ಟುಕೊಳ್ಳುತ್ತಲೇ ಇರುತ್ತವೆ. ಜನರ ಚರಿತ್ರೆಯ ನಿರ್ಮಾಣವು ಚರಿತ್ರೆಕಾರರಿಗೆ ಸವಾಲಿನ ಕೆಲಸವೇ ಆಗಿದೆ. ಚರಿತ್ರೆಯನ್ನು ಜನರ ಚರಿತ್ರೆ ಅಥವಾ ಸಂಸ್ಕೃತಿ ಚರಿತ್ರೆಯನ್ನಾಗಿ ಅರ್ಥೈಸಿಕೊಂಡಾಗ ಮಾತ್ರ ತಪ್ಪಾಗಿ ವ್ಯಾಖ್ಯಾನಗೊಂಡ ಚರಿತ್ರೆ ಪರಿಕಲ್ಪನೆ ಪುನರ್‌ವಿಮರ್ಶೆಗೊಳ್ಳಲು ಸಾಧ್ಯ. ಈ ನಿಟ್ಟಿನಲ್ಲಿ

ನಾಯಕರ ಕಾಲದ ಜನರ ಬದುಕು ಹಾಗೂ ವ್ಯಾಪಾರಕ್ಕೆ ಅರಸರು, ಸಾಮಾನ್ಯ ಜನರು ನೀಡಿದ ಮಹತ್ತರವಾದ ಕೊಡುಗೆಗಳನ್ನು ತಿಳಿಯುವ ಪ್ರಯತ್ನವನ್ನು ಮಾಡಲಾಗಿದೆ.

ಯಾವುದೇ ದೇಶದ ಚರಿತ್ರೆಯ ಅಧ್ಯಯನದಲ್ಲಿ ಎರಡು ಮುಖ್ಯವಾದ ಸ್ತರಗಳನ್ನು ಗುರುತಿಸಬಹುದು. ೧. ಅಖಂಡ ಚರಿತ್ರೆ, ೨. ಸ್ಥಳೀಯ ಚರಿತ್ರೆ ಅಖಂಡ ಚರಿತ್ರೆಯೆಂದರೆ, ದೊಡ್ಡ ದೊಡ್ಡ ಸಾಮ್ರಾಜ್ಯಗಳ ಹಾಗೂ ವಿಸ್ತಾರ ಪ್ರದೇಶಗಳ ಪಕ್ಷಿ ನೋಟವನ್ನು ವಿವರಿಸುವ ಸಂಶೋಧನ ಗ್ರಂಥಗಳು. ಇಂತಹ ಸಂಶೋಧನ ಗ್ರಂಥಗಳು ಆಯಾ ಕಾಲದ ಮತ್ತು ಸ್ಥಳದ ಚರಿತ್ರೆಯಲ್ಲಿನ ಏರು-ಪೇರುಗಳನ್ನು ಸ್ಪಷ್ಟವಾಗಿ ಗುರುತಿಸಲು ವಿಫಲವಾಗಿವೆ. ಇಂತಹ ಅಧ್ಯಯನದಲ್ಲಿ ನಿಜವಾದ ಚಿತ್ರಣ ದೊರಕಬೇಕಾದರೆ, ದೊಡ್ಡ ಸಾಮ್ರಾಜ್ಯಗಳ ಆಧಾರ ಸ್ತಂಭಗಳಂತಿದ್ದ ಚಿಕ್ಕ ಚಿಕ್ಕ ರಾಜಕೀಯ ಘಟಕಗಳ ವಿವರವಾದ ಮತ್ತು ಆಳವಾದ ಚರಿತ್ರೆ ಸಂಶೋಧನೆಗಳ ಅವಶ್ಯಕತೆ ಇದೆ. ಈ ನಿಟ್ಟಿನಲ್ಲಿ ಕರ್ನಾಟಕ ಚರಿತ್ರೆ ಸಂಶೋಧನ ವಲಯದಲ್ಲಿ ಆಗಿರುವ ಕೆಲಸ ಅತೀ ಕಡಿಮೆ. ಆದುದರಿಂದ ಬೃಹತ್ ಸಾಮ್ರಾಜ್ಯವಾಗಿ ಗುರುತಿಸಿಕೊಂಡಿರುವ ವಿಜಯನಗರದ ಚಿಕ್ಕ ಘಟಕವಾಗಿ ರೂಪುಗೊಂಡ ಚಿತ್ರದುರ್ಗ ನಾಯಕರ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯನ್ನು ಸೂಕ್ಷ್ಮ ಸ್ತರದ ಸಂಶೋಧನೆಯ ಕಡೆಗೆ ಕೊಂಡೊಯ್ಯುವ ಕೆಲಸವನ್ನು ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ.

**೧.೩. ಅಧ್ಯಯನದ ವ್ಯಾಪ್ತಿ**

ಅಧ್ಯಯನದ ವ್ಯಾಪ್ತಿಯನ್ನು ಚಿತ್ರದುರ್ಗದ ನಾಯಕರು ವಿಜಯನಗರ ಅರಸರಿಂದ ಅಮರ ಮಾಗಣಿದಾರರಾದ ಕಾಲದಿಂದ ಹೈದರ್ ಆಲಿಯ ಆಕ್ರಮಣದವರೆಗೆ ಅಂದರೆ ೧೬ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಸೀಮಿತಗೊಳಿಸಿಕೊಂಡಿದೆ. ಆದರೆ ವಿಜಯನಗರೋತ್ತರ ಕಾಲ ಎಂದರೆ ಯುರೋಪಿನ ಕಂಪನಿಯ ಸಂಬಂಧಗಳನ್ನು ತಿಳಿಸುವ ನಿಟ್ಟಿನಲ್ಲಿ ೧೯ನೇ ಶತಮಾನದ ಕೆಲವು ಅಂಶಗಳನ್ನು ಚರ್ಚೆಗೆ ತೆಗೆದುಕೊಳ್ಳಲಾಗಿದೆ. ಚಿತ್ರದುರ್ಗ ನಾಯಕರ ಕಾಲದ ಕೃಷಿಯ ಅಭಿವೃದ್ಧಿ ಹಾಗೂ ಮಾರುಕಟ್ಟೆ ವ್ಯವಸ್ಥೆ, ವ್ಯಾಪಾರ-ವಾಣಿಜ್ಯ, ಪೇಟೆ-ಪಟ್ಟಣಗಳ ಕುರಿತಾದ ಬದಲಾದ ಚರಿತ್ರೆಯ ಅಧ್ಯಯನ ಕ್ರಮ ಹಾಗೂ ದೃಷ್ಟಿಕೋನದೊಂದಿಗೆ ಚರ್ಚಿಸಲಾಗಿದೆ.

**೧.೪. ಅಧ್ಯಯನದ ವಿಧಾನ**

ಪ್ರಸ್ತುತ ಸಂಶೋಧನೆಯಲ್ಲಿ ಎರಡು ಬಗೆಯ ಸಂಶೋಧನಾ ವಿಧಾನವನ್ನು ಅನುಸರಿಸಲಾಗಿದೆ. ಒಂದು ಕಾಲದ ಪರಿಧಿಯ ವಿನ್ಯಾಸ ಮತ್ತು ವಿಧಾನ. ಇದರಲ್ಲಿ ಇಡೀ ಸಮಸ್ಯೆಯನ್ನು ಅದರ ಎಲ್ಲ ಅಂಗಗಳೊಂದಿಗೆ ಅರ್ಥಪೂರ್ಣ ಕಾಲಾವಧಿಯಂತೆ ಜಾಗರೂಕತೆಯಿಂದ ಚರ್ಚಿಸಲಾಗಿದೆ. ಏಕೆಂದರೆ ಪ್ರಸ್ತುತ ಪರಿಶೀಲನೆಯಲ್ಲಿರುವ ಕಾಲಾವಧಿಯು ನಿರ್ದಿಷ್ಟ ಬೆಳವಣಿಗೆಯನ್ನು ಕಂಡಿದೆ. ಅದಕ್ಕೆ ಆಳುವ ವರ್ಗವು ಅನುಸರಿಸಿದ ನಿರ್ದಿಷ್ಟ ನೀತಿಯು ಕಾರಣವಾಗಿದೆ. ಆದ್ದರಿಂದ ಕಾಲ ಕಾಲಕ್ಕಾದ ಅಂತಹ ಬದಲಾವಣೆಗಳನ್ನು ನಿರ್ದಿಷ್ಟವಾಗಿ ಗುರುತಿಸುವುದು ಅಗತ್ಯವಾಗಿರುತ್ತದೆ. ಎರಡನೆಯ ಅಂಶವು ವಿಷಯಾನುಸಾರದ ವಿಧಾನವಾಗಿದೆ. ಸಂಶೋಧಿಸಬೇಕಾಗಿರುವ ಮುಖ್ಯ ವಿಷಯವನ್ನು ಹಲವು ಶೀರ್ಷಿಕೆಗಳಾಗಿ, ಉಪಶೀರ್ಷಿಕೆಗಳಾಗಿ ಭಾಗ ಮಾಡಿ ತರ್ಕಬದ್ಧವಾಗಿ ಅವನ್ನು ಒಂದಕ್ಕೊಂದು ಜೋಡಿಸಲಾಗಿದೆ. ಅಧ್ಯಯನದ ವ್ಯಾಪ್ತಿಗೆ ಒಳಪಟ್ಟ ಶಾಸನಗಳು, ಸಾಹಿತ್ಯಿಕ ಆಕರಗಳು, ಜನಪದ

ಸಾಹಿತ್ಯ ಕೃತಿಗಳ ಗ್ರಂಥಸೂಚಿ ತಯಾರಿಸಿ ಅವುಗಳ ಸಮೀಕ್ಷೆ ನಡೆಸಲಾಗಿದೆ. ಐತಿಹಾಸಿಕ, ಸರ್ವೇಕ್ಷಣಾ (ಸಮೀಕ್ಷೆ), ಕ್ಷೇತ್ರ ಅಧ್ಯಯನ ಹಾಗೂ ಪತ್ರಾಗಾರ ಇಲಾಖೆಗಳ ಮಾಹಿತಿ ಸಂಗ್ರಹಣೆ, ಜೊತೆಗೆ ಸಂದರ್ಶನ ವಿಧಾನಗಳನ್ನು ಅನುಸರಿಸಲಾಗಿದೆ.

ಚಿತ್ರದುರ್ಗ ನಾಯಕರ ಕಾಲಕ್ಕೆ ಬದಲಾದ ಬರಹ ಮಾಧ್ಯಮಗಳು ಇದ್ದು, ಆಕರಗಳ ಕೊರತೆ ಒಂದೆಡೆಯಾದರೆ, ರೂಪಿತ ಚರಿತ್ರೆ ಕ್ರಮವಾಗಿ ನಿರೂಪಿತವಾಗದಿರುವುದು ಮತ್ತು ಮನೆತನಗಳ ವಂಶಜರು ಕ್ರಮಬದ್ಧ ಮಾಹಿತಿ ಹೊಂದಿಲ್ಲದಿರುವುದು ಮತ್ತೊಂದು ಸಮಸ್ಯೆಯಾಗಿದೆ. ಲಭ್ಯ ದಾಖಲೆಗಳು, ಕಾಗದ ಪತ್ರಗಳು ಸಾಕಷ್ಟು ನಿರ್ಲಕ್ಷ್ಯಕ್ಕೊಳಗಾಗಿ ನಾಶವಾಗಿವೆ ಅಥವಾ ನಾಶವಾಗುವ ಸ್ಥಿತಿಯಲ್ಲಿವೆ. ಹೀಗಾಗಿ ಪ್ರಕಟಿತ ಕೃತಿಗಳು, ಸಂಶೋಧನಾ ಪ್ರಬಂಧಗಳು, ಅರಸರ ವಂಶಾವಳಿಗಳು, ಶಾಸನಗಳು, ಕೈಫಿಯತ್ತುಗಳಲ್ಲಿ ಲಭ್ಯ ಸಾಂಸ್ಕೃತಿಕ ಆಚರಣೆಯ ಸಂದರ್ಭದ ಆರ್ಥಿಕ ಅಂಶಗಳ ಅರೆಬರೆ ಮಾಹಿತಿಯನ್ನು ಸಂಗ್ರಹಿಸಿಕೊಳ್ಳಲಾಗಿದೆ. ವಿವಿಧ ಪ್ರದೇಶಗಳ ವೈವಿಧ್ಯಮಯ ಆಧಾರಗಳ ಸಂಗ್ರಹಣೆ, ಶೋಧನೆ ಮತ್ತು ಸಂಶ್ಲೇಷಣೆ ಮೂಲಕ ಕೃಷಿ ಮತ್ತು ವ್ಯಾಪಾರದ ಸ್ಪಷ್ಟ ಚಿತ್ರ ಪಡೆಯಲು ಪ್ರಯತ್ನ ಮಾಡಲಾಗಿದೆ.

ಕ್ಷೇತ್ರಕಾರ್ಯ ವಿಧಾನದಲ್ಲಿ "ಹೊಸ ಶೋಧನೆಗಳಿಂದ ಈವರೆಗೆ ಬೆಸೆಯಲಾಗದ ಬೇರೆ ಬೇರೆ ಯುಗದ ಚರಿತ್ರೆಯ ಕೊಂಡಿಗಳನ್ನು ಜೋಡಿಸಲಾಗಿದೆ. ಇದು ನಿಜಕ್ಕೂ ಜಟಿಲವಾದ ಕಾರ್ಯ. ಈ ಬಗೆಯ ಪ್ರಯತ್ನಗಳಿದ್ದರೂ, ಪ್ರತಿಯೊಂದು ರಾಜಮನೆತನವನ್ನು ಕುರಿತು ಸಾಕಷ್ಟು ಅಧ್ಯಯನಗಳು ನಡೆದಿದ್ದರೂ ಅವುಗಳಲ್ಲಿ ಕೃಷಿಕ ಹಾಗೂ ಇತರೆ ಸಮುದಾಯಗಳ ಬಗ್ಗೆ ಮಾಹಿತಿ ಸಂಗ್ರಹಿಸಬೇಕಾದ ಹಾಗೂ ಬರೆಯಬೇಕಾದ ಕೆಲಸವಿನ್ನೂ ಅಗಾಧವಾಗಿದೆ. ಆಯಾ ಅರಸ ಅಥವಾ ಮನೆತನಗಳ ಆಳ್ವಿಕೆ ನಡೆಸಿದ ಅವಧಿಯಲ್ಲಿನ ಎಲ್ಲಾ ಬಗೆಯ ಸ್ಥಿತಿಗತಿಗಳ ಬಗೆಗೆ ಚಟುವಟಿಕೆಗಳ ಬಗೆಗೆ ಪೂರ್ಣವಾಗಿ ದಾಖಲಿಸುವುದು ಮುಗಿಯದ ಕಾರ್ಯವೆನಿಸಿದೆ. ದಾಖಲೆಗಳು ನಮಗೆ ಅಗತ್ಯವಿರುವ ಎಲ್ಲಾ ವಿವರಗಳನ್ನೂ ನೀಡಲಾರವು. ಹೊಸ ಆಧಾರಗಳನ್ನು ಹುಡುಕುವ ಗೋಜಿಗೆ ಹೋಗದ ಹೊರತು ನಮ್ಮ ಉದ್ದೇಶ ಈಡೇರದು. ಆದ್ದರಿಂದ ಕ್ಷೇತ್ರಕಾರ್ಯವನ್ನು ಮೊದಲಿಗಿಂತ ಇಂದು ಹೆಚ್ಚಾಗಿ ವ್ಯಾಪಕವಾಗಿ ನಡೆಸಬೇಕಾಗಿದೆ". ಲಕ್ಷ್ಮಣ್ ತೆಲಗಾವಿ ಅವರು ತಮ್ಮ 'ಪ್ರಾದೇಶಿಕ ಚರಿತ್ರೆ ಅಧ್ಯಯನದ ಅವಶ್ಯಕತೆ' ಲೇಖನದಲ್ಲಿ ವಿವರಿಸಿರುವ ಕ್ಷೇತ್ರಕಾರ್ಯ ಕುರಿತ ಮಾತುಗಳು ಸ್ಥಾನಿಕ ಚರಿತ್ರೆ ರಚನೆಯಲ್ಲಿ ಅನುಸರಿಸಿರುವ ಮಾರ್ಗಸೂಚಕ ತತ್ವವಾಗಿದೆ.

ಒಟ್ಟಾರೆಯಾಗಿ ನಾಯಕ ಹಾಗೂ ನಾಯಕರ ಪೂರ್ವ ಕಾಲದ ಶಾಸನ ಸಂಪುಟಗಳನ್ನು ಸಂಗ್ರಹಿಸಿ ಅವುಗಳಿಂದ ಅಧ್ಯಯನ ವಿಷಯಕ್ಕೆ ಸಂಬಂಧಿಸಿದ ಅಂಶಗಳನ್ನು ಟಿಪ್ಪಣಿ ಮಾಡಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನವು ಚಿತ್ರದುರ್ಗ ನಾಯಕ ಕಾಲದ ರಾಜ್ಯದ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತ್ಯಂತರಗಳ ಅಧ್ಯಯನವಾಗಿದೆ. ಈ ಅಧ್ಯಯನವು ಚರಿತ್ರೆ ಸಂಶೋಧನೆಯ ವಿಧಿವಿಧಾನಗಳನ್ನು ಒಳಗೊಂಡಿದೆ. ಇಲ್ಲಿ ಪ್ರಾಥಮಿಕ ಹಾಗೂ ಇತರೆ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಕರ್ನಾಟಕದಲ್ಲಿ ಪಾಳೆಯಗಾರ ಹಾಗೂ ಸಮಕಾಲೀನ ಆರ್ಥಿಕ ಸ್ಥಿತ್ಯಂತರಗಳ ಅಧ್ಯಯನದ ಬಗ್ಗೆ ವಿವರಗಳಿರುವ ಚಾರಿತ್ರಿಕ ದಾಖಲೆ ಮತ್ತು ವರದಿಗಳಿಂದಲೂ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಸರಕಾರದ ಗೆಜೆಟಿಯರುಗಳು, ಸಂಶೋಧನಾ ಪ್ರಬಂಧಗಳು, ಕರ್ನಾಟಕ ಚರಿತ್ರೆ ಸಂಪುಟಗಳು, ಕನ್ನಡ

ವಿಶ್ವವಿದ್ಯಾಲಯದ ಶಾಸನ ಸಂಪುಟಗಳು, ಎನ್‌ಸೈಕ್ಲೋಪೀಡಿಯಗಳು, ನಿಯತಕಾಲಿಕೆಗಳು, ಪತ್ರಿಕೆಗಳು ಮತ್ತು ಲೇಖನಗಳು, ಚರಿತ್ರೆಕಾರರ ಗ್ರಂಥಗಳು, ಅಂತರ್ಜಾಲದ ಸಹಾಯ ಮುಂತಾದವುಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ. ಮುಖ್ಯವಾಗಿ ಪತ್ರಾಗಾರ ಇಲಾಖೆಯ ಪ್ರಾಥಮಿಕ ಆಕರಗಳನ್ನು ಸಂಗ್ರಹಿಸಲಾಗಿದೆ. ಈ ಎಲ್ಲ ರೀತಿಯ ಆಕರಗಳ ಸಂಗ್ರಹಣೆ ಹಾಗೂ ನಿರೂಪಣೆಯ ಕಾರ್ಯ ನಡೆದಿದೆ.

**೧.೫. ಈವರೆಗಿನ ಅಧ್ಯಯನಗಳ ಸಮೀಕ್ಷೆ**

ಚಿತ್ರದುರ್ಗ ಚರಿತ್ರೆಯನ್ನು ಕುರಿತಾಗಿ ಅನೇಕ ಚಿಂತಕರು, ವಿದ್ವಾಂಸರು, ಸಾಹಿತಿಗಳು ಈ ನಾಡಿನ ವಿವಿಧ ಆಯಾಮಗಳನ್ನು ಕುರಿತು ಚರ್ಚಿಸಿ ತಮ್ಮ ಅಧ್ಯಯನದ ಫಲಿತಗಳನ್ನು ಅನೇಕ ಕೃತಿ, ಕಾದಂಬರಿ, ಲೇಖನ, ಕವನ ಸಂಕಲನಗಳ ಮೂಲಕ ನೀಡಿದ್ದಾರೆ. ಬಹು ಮುಖ್ಯವಾಗಿ ಸಾಮಾನ್ಯ ಜನರ ಬದುಕಿನ ಕಷ್ಟಕಾರ್ಪಣ್ಯಗಳನ್ನು ಜಟಿಲವಾಗಿ ಚರ್ಚಿಸಿ ಹೊರತರುವಂತಹ ಕೆಲಸವನ್ನು ಹೆಚ್ಚಾಗಿ ಯಾರು ಅಷ್ಟಾಗಿ ಮಾಡಿಲ್ಲ. ಪ್ರಾಚೀನ ಪುರಾತತ್ವ ನೆಲೆಗಳ ಕುರಿತಾಗಿ ಅ.ಸುಂದರರವರು "ಚಿತ್ರದುರ್ಗ ಪರಿಸರ" ಎಂಬ ಕೃತಿಯನ್ನು ಹೊರತಂದಿದ್ದು ನಂತರ "ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ" ಎಂಬ ಭೂ ಉತ್ಖನನಕ್ಕೆ ಸಂಬಂಧಿಸಿದಂತೆ ಹಲವು ಕೃತಿಗಳನ್ನು ಇವರು ಪ್ರಕಟಿಸಿದ್ದಾರೆ. ಚಿತ್ರದುರ್ಗ ನಾಯಕರ ಕಾಲಕ್ಕೆ ಸಂಬಂಧಿಸಿದಂತೆ ೧೯೭೮ರಲ್ಲಿ ಎಚ್.ಟಿ.ದೇಶಪಾಂಡೆಯವರು "ದಿ ಚಿತ್ರದುರ್ಗ ಸ್ಟೇಟ್" ಎಂಬ ಮಹಾಪ್ರಬಂಧವನ್ನು ರಚಿಸಿದ್ದಾರೆ. ಇದರಲ್ಲಿ ಚಿತ್ರದುರ್ಗ ಪಾಳೆಯಗಾರರಿಗೆ ಸಂಬಂಧಿಸಿದಂತೆ ಸಾಕಷ್ಟು ಮಾಹಿತಿಗಳಿವೆ. ವಿಶೇಷವಾಗಿ ಆಯಗಾರರ ಬಗ್ಗೆ ವಿಶ್ಲೇಷಿಸಿ ಅನುಬಂಧದಲ್ಲಿ ಮಾಹಿತಿಯನ್ನು ನೀಡಲಾಗಿರುವ ಪ್ರಮುಖ ಪ್ರಬಂಧವಾಗಿದ್ದು, ನಾಯಕ ಹಾಗೂ ಇತರರೊಂದಿಗೆ ಇದ್ದ ಸಂಬಂಧಗಳನ್ನು ವಿಶ್ಲೇಷಿಸುವ ಕಾರ್ಯ ಮಾಡಿದೆ.

ಲಕ್ಷ್ಮಣ್ ತೆಲಗಾವಿಯವರು ಚಿತ್ರದುರ್ಗಕ್ಕೆ ಸಂಬಂಧಿಸಿದಂತೆ ಅನೇಕ ಕೃತಿ, ಲೇಖನಗಳನ್ನು ಪ್ರಕಟಿಸಿದ್ದಾರೆ. ಹಾಗೂ ಅನೇಕ ಕೃತಿಗಳನ್ನು ಸಂಪಾದಿಸಿದ್ದಾರೆ. ಮುಖ್ಯವಾಗಿ 'ಚಂದ್ರವಳ್ಳಿ', 'ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು', 'ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು', 'ಚಿತ್ರದುರ್ಗ ನಾಯಕ ಅರಸರು–ರಾಜಕೀಯ ಚಿತ್ರ', 'ಎಪ್ಪತ್ತೇಳು ಪಾಳೆಯಗಾರರು' ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಎಂ.ವಿ.ಶ್ರೀನಿವಾಸ ಜೊತೆಗೂಡಿ ಹಲವು ಕೃತಿಗಳನ್ನು ಸಂಪಾದಿಸಿದ್ದಾರೆ. ಬಿ.ರಾಜಶೇಖರಪ್ಪ ಇವರು 'ನಿರಂತರ,' 'ಚರಿತ್ರೆಕಥನ', 'ದುರ್ಗಶೋಧನ' ಇನ್ನಿತರೆ ಶಾಸನಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಟಿ.ಎನ್.ಗಂಡುಗಲಿಯವರು 'ನೋಡಬನ್ನಿ ಚಿತ್ರದುರ್ಗ', ಪಾಳೆಯಗಾರರ ಮಾಹಿತಿಗಳನ್ನು ನೀಡಿದ್ದಾರೆ. ಈ ಕೃತಿಗಳಲ್ಲಿ ಚಿತ್ರದುರ್ಗ ಪಾಳೆಯಗಾರರ ರಾಜಕೀಯ ಚಿತ್ರಣ ಹಾಗೂ ಸೈನ್ಯ ವ್ಯವಸ್ಥೆಯ ಬಗ್ಗೆ 'ಚಿತ್ರದುರ್ಗ ಬಖೈರು', 'ಚಿತ್ರದುರ್ಗ ಪಾಳೆಯಗಾರ' ಕೃತಿಗಳು ಎಂ.ಎಸ್.ಪುಟ್ಟಣ್ಣ ನವರ ಕೃತಿಗಳಾಗಿವೆ. ಎಸ್.ತಿಪ್ಪೇಸ್ವಾಮಿಯವರ 'ರಕ್ಷಣಾ ವಾಸ್ತು ಶಿಲ್ಪ ಚಿತ್ರದುರ್ಗ ಜಿಲ್ಲೆ' ಎಂಬ ಅಪ್ರಕಟಿತಾ ಮಹಾಪ್ರಬಂಧವು ಕೋಟೆ ರಚನೆ ರಕ್ಷಣಾ ವ್ಯವಸ್ಥೆ ಕುರಿತಾದ ಪ್ರಬಂಧವಾಗಿದೆ. 'ಪ್ರಾಚೀನ ಚಿತ್ರದುರ್ಗ' ಇದು ಚಿತ್ರದುರ್ಗದ ಸ್ಥಳನಾಮ ಹಾಗೂ ರಾಜಕೀಯ, ಸಾಮಾಜಿಕ ಬದುಕಿಗೆ ಹಿಡಿದ ಕೈಗಳನ್ನಡಿಯವಂತಿದ್ದು ಈ ವಿಷಯ ಕುರಿತು ಬಿ.ರಾಜಶೇಖರಪ್ಪನವರು ಮಹಾಪ್ರಬಂಧವನ್ನು

ಪ್ರಕಟಿಸಿದ್ದಾರೆ. ಬುಡಕಟ್ಟು ಸಂಸ್ಕೃತಿ–ಆಚಾರ ವಿಚಾರ, ಬುಡಕಟ್ಟು ವೀರರನ್ನು ಕುರಿತಂತೆ ವಿರೂಪಾಕ್ಷಿ ಪೂಜಾರಹಳ್ಳಿ ಅವರು ಅನೇಕ ಕೃತಿಗಳನ್ನು ರಚಿಸಿದ್ದಾರೆ. ಅಮರೇಶ ಯತಗಲ್ ಅವರ 'ಕರ್ನಾಟಕದ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು' ಎಂಬ ಕೃತಿಯನ್ನು ಬರೆದಿದ್ದಾರೆ. ಜೊತೆಗೆ ಸಿ.ಆರ್.ಶ್ಯಾಮಲ ಅವರು 'ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ' ಎಂಬ ಕೃತಿಯನ್ನು ರಚಿಸಿದ್ದಾರೆ. ಆರ್.ಶಿವಪ್ಪ ಇವರು 'ಚಿತ್ರದುರ್ಗ ಪಾಳೆಯಗಾರರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧ ನೀತಿ : ಒಂದು ಅಧ್ಯಯನ' ಎಂಬ ಮಹಾಪ್ರಬಂಧವನ್ನು ಕುವೆಂಪು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ.

'ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ನಾಯಕರ ಕಾಲದ ಕೃಷಿ ವ್ಯವಸ್ಥೆ (ಕ್ರಿ.ಶ.೧೩೩೬–೧೮೦೦)' ಎಂಬ ಮಹಾಪ್ರಬಂಧವನ್ನು ಸಂತೋಷ್ ಎನ್.ಜಿ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಸಂಶೋಧನೆಯನ್ನು ಕೈಗೊಂಡಿದ್ದು, ಇವರ ಪ್ರಬಂಧದಲ್ಲಿ ಒಟ್ಟು ಎಂಟು ಅಧ್ಯಾಯಗಳನ್ನಾಗಿ ಮಾಡಿಕೊಂಡಿದ್ದಾರೆ. ಕೃಷಿ ಉತ್ಪಾದನೆ, ನೀರಾವರಿ ವ್ಯವಸ್ಥೆ, ತೆರಿಗೆ ಪದ್ಧತಿ, ಭೂ ಹಿಡುವಳಿ ಆಧರಿತ ಸಂಬಂಧಗಳು ಹಾಗೂ ವ್ಯಾಪಾರ ವಹಿವಾಟು ಎಂಬ ಪ್ರಮುಖ ಅಧ್ಯಾಯಗಳನ್ನು ಮಾಡಿಕೊಂಡಿದ್ದು ವಿಜಯನಗರ ಮತ್ತು ಚಿತ್ರದುರ್ಗದ ನಾಯಕರು, ಹರಪನಹಳ್ಳಿ, ಸಂತೆಬೆನ್ನೂರು ಪಾಳೆಯಗಾರರನ್ನು ಕೇಂದ್ರೀಕರಿಸಿ ದಾವಣಗೆರೆ ಜಿಲ್ಲಾ ವ್ಯಾಪ್ತಿಗೆ ಅಧ್ಯಯನವನ್ನು ಸೀಮಿತ ಮಾಡಿಕೊಂಡಿದ್ದಾರೆ.

೧೯೯೮ರಲ್ಲಿ ಸಾಕಿಯವರು ಬರೆದ 'ಮೇಕಿಂಗ್ ಹಿಸ್ಟರಿ–ಕರ್ನಾಟಕಾಸ್ ಪೀಪಲ್ ಆ್ಯಂಡ್ ದೇರ್ ಪಾಸ್ಟ್' ಶೀರ್ಷಿಕೆಯ ಎರಡು ಸಂಪುಟಗಳನ್ನು ಒಳಗೊಂಡಿದ್ದು, ಇದು ಮಾನವನು ವಾಸಮಾಡಲು ಪ್ರಾರಂಭಿಸಿದ ಕಾಲದಿಂದ ಸುಮಾರು ೪೦ ಸಾವಿರ ವರ್ಷಗಳ ಅನಾದಿ ಕಾಲದ ಕರ್ನಾಟಕ ಚರಿತ್ರೆಯಿಂದ ಹಿಡಿದು ಬ್ರಿಟಿಶ್‌ರಿಂದ ವಸಾಹತೀಕರಣಕ್ಕೊಳಪಟ್ಟ ಕಾಲದವರೆಗೆ ಕರ್ನಾಟಕದ ಚರಿತ್ರೆಯ ಕುರುಹುಗಳನ್ನು ಇದರಲ್ಲಿ ಕಾಣಬಹುದು. ಈ ಸಂಪುಟಗಳು ಅಪಾರವಾದ ಪ್ರಾಥಮಿಕ ಮತ್ತು ಆನುಷಂಗಿಕ ಮೂಲಾಧಾರಗಳ ನೆಲೆಗಟ್ಟಿನ ಮೇಲೆ ನಿಂತಿದ್ದು, ಕರ್ನಾಟಕದ ಮೇಲೆ ಬ್ರಿಟಿಶ್‌ರ ವಸಾಹತು ನೀತಿಯ ಪರಿಣಾಮದ ಕಡೆ ಹೆಚ್ಚು ಒತ್ತು ನೀಡಿದೆ. ಈ ಸಂಪುಟಗಳಲ್ಲಿ ಪಾಳೆಯಗಾರರ ಚರಿತ್ರೆಯನ್ನು ಹೊಸ ಶೈಲಿಯಲ್ಲಿ ನಿರೂಪಿಸುವ ಪ್ರಯತ್ನವನ್ನು ಕಾಣಬಹುದು.

ಪ್ರಾನ್ಸಿಸ್ ಬುಕಾನನ್ ಒಬ್ಬ ಬ್ರಿಟಿಶ್ ಅಧಿಕಾರಿಯಾಗಿದ್ದು ೧೮೦೦ರಲ್ಲಿ ಕಂಪನಿಗೆ ಸಲ್ಲಿಸಿದ ತನ್ನ ವರದಿಯ ಜೊತೆಗೆ 'ಎ ಜರ್ನಿ ಫ್ರಮ್ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ, ಆ್ಯಂಡ್ ಮಲಬಾರ್' ಎಂಬ ಕೃತಿಯ ೩ ಸಂಪುಟಗಳಲ್ಲಿ ಹೊರ ತಂದಿದ್ದಾರೆ. ಇದು ಮಧ್ಯಕಾಲೀನ ಸಾಂಸ್ಕೃತಿಕ ಮತ್ತು ಆರ್ಥಿಕ ಚರಿತ್ರೆಗೆ ಸಾಕ್ಷಿಯಾಗಿದೆ. ಬುಕಾನನ್ ದಿನಾಂಕ: ೧೪.೦೪.೧೮೦೧ರಿಂದ ೮.೫.೧೮೦೧ರಲ್ಲಿ ಪ್ರವಾಸ ಮಾಡಿದ್ದು, ತನಗೆ ಪರಿಚಯವಾದ ಸಮುದಾಯಗಳು, ಕೃಷಿ, ಕೈಗಾರಿಕೆ, ಉದ್ದಿಮೆಗಳ ಬಗ್ಗೆ ಅಪಾರ ಮಾಹಿತಿಯನ್ನು ನೀಡಿದ್ದಾನೆ.

ಕುಪ್ಪಸ್ವಾಮಿ ಜಿ.ಆರ್., ಅವರ 'ಎಕನಾಮಿಕ್ ಹಿಸ್ಟರಿ ಇನ್ ಕರ್ನಾಟಕ ಕ್ರಿ.ಶ.೧೦೦೦ರಿಂದ ೧೪೦೦ರ ವರೆ'ಗಿನ ಕರ್ನಾಟಕ ಆರ್ಥಿಕ ವ್ಯವಸ್ಥೆಯನ್ನು ಕುರಿತು ಸಮಗ್ರವಾಗಿ ಚರ್ಚಿಸಿದ್ದಾರೆ. ಈ ಕೃತಿಯಲ್ಲಿ ಒಟ್ಟು ಆರು ಅಧ್ಯಾಯಗಳು ಇವೆ. ಎರಡು ಹಾಗೂ ಮೂರನೆಯ ಅಧ್ಯಾಯಗಳಲ್ಲಿ ಗ್ರಾಮೀಣ ಪ್ರದೇಶದ

ಆರ್ಥಿಕ ವ್ಯವಸ್ಥೆಯನ್ನು ವಿವರಿಸುತ್ತಾ ಗ್ರಾಮಗಳ ಕೃಷಿ ವಿಧಾನಗಳು, ಭೂ ಹಿಡುವಳಿ ವ್ಯವಸ್ಥೆ, ಬೆಳೆಗಳು, ನೀರಾವರಿ, ಪಶುಸಂಗೋಪನೆ ಮತ್ತು ಮೀನು ಸಾಕಾಣಿಕೆಯ ಬಗೆಗೆ, ನಾಲ್ಕನೆಯ ಅಧ್ಯಾಯದಲ್ಲಿ ನಗರ ರಚನೆ, ಕೈಗಾರಿಕೆಗಳು, ವ್ಯಾಪಾರ ಮತ್ತು ವಾಣಿಜ್ಯ, ಹಣಕಾಸು, ಐದನೆಯ ಅಧ್ಯಾಯದಲ್ಲಿ ನಾಣ್ಯ ಚಲಾವಣೆ, ತೂಕ ಮತ್ತು ಅಳತೆ ಮತ್ತು ತೆರಿಗೆ ವ್ಯವಸ್ಥೆ ಬಗೆಗೆ ತಿಳಿಸಿದ್ದಾರೆ. ಈ ಅಧ್ಯಾಯಗಳಲ್ಲಿ ಅಂದು ಅಸ್ಥಿತ್ವದಲ್ಲಿದ್ದ ಕೃಷಿ ಪದ್ಧತಿ, ನೀರಾವರಿ, ಬೆಳೆಗಳು ಮತ್ತು ಪಶುಪಾಲನೆ ಇಂದಿಗೂ ಅನುಸರಣೀಯವಾಗಿವೆ ಎಂದು ಹೇಳಿದ್ದಾರೆ. ಪ್ರಮುಖ ಕೈಗಾರಿಕೆಗಳಾದ ಬಳೆ, ಬಟ್ಟೆ, ಲೋಹ, ತೈಲೋದ್ಯಮ, ಸುಗಂಧ ದ್ರವ್ಯ, ಆಭರಣ ತಯಾರಿಕೆ ಮತ್ತು ಚಮ್ಮಾರಿಕೆ ಮೊದಲಾದವುಗಳನ್ನು ಗುರುತಿಸಿದ್ದಾರೆ. ಪ್ರಾಚೀನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ವ್ಯಾಪಾರ ವಹಿವಾಟು, ವಿವಿಧ ಬಗೆಯ ತೆರಿಗೆಗಳು, ವೈವಿಧ್ಯಮಯವಾದ ತೂಕ ಮತ್ತು ಅಳತೆಮಾನಗಳ ಉಲ್ಲೇಖಗಳು ಇವೆ.

ಗುರುರಾಜಾಚಾರ್ಯ ಎಸ್., ಅವರ 'ಸಮ್ ಆಸ್ಪೇಕ್ಟ್ಸ್ ಆಫ್ ಎಕಾನಾಮಿಕ್ ಆ್ಯಂಡ್ ಸೋಶಿಯಲ್ ಲೈಫ್ ಇನ್ ಕರ್ನಾಟಕ (ಕ್ರಿ.ಶ.೧೦೦೦ ರಿಂದ ೧೩೦೦)' ಎಂಬ ಮಹಾ ಪ್ರಬಂಧದಲ್ಲಿ ಸಮಕಾಲೀನ ಆರ್ಥಿಕ ವ್ಯವಸ್ಥೆಯನ್ನು ಕುರಿತು ಆರು ಅಧ್ಯಾಯಗಳಲ್ಲಿ ಸುಮಾರು ೧೮೦ ಪುಟಗಳಲ್ಲಿ ಸುದೀರ್ಘವಾಗಿ ಚರ್ಚಿಸಿದ್ದಾರೆ. ಇವರು ಮೊದಲ ಅಧ್ಯಾಯದಲ್ಲಿ ಮೂಲಾಧಾರಗಳನ್ನು, ಎರಡನೆಯ ಅಧ್ಯಾಯದಲ್ಲಿ ಭೂ ವಿಧಾನಗಳನ್ನು, ಮೂರನೆಯ ಅಧ್ಯಾಯದಲ್ಲಿ ಕೃಷಿ ವ್ಯವಸ್ಥೆ, ನಾಲ್ಕನೆಯ ಅಧ್ಯಾಯದಲ್ಲಿ ಕೈಗಾರಿಕೆಗಳ ಬಗ್ಗೆ, ಐದನೆಯ ಅಧ್ಯಾಯದಲ್ಲಿ ವ್ಯಾಪಾರ ಮತ್ತು ವಾಣಿಜ್ಯ ವ್ಯವಸ್ಥೆಯನ್ನು ಕುರಿತು ಚರ್ಚಿಸಿದ್ದಾರೆ. ಸುಮಾರು ೩೭ ಪುಟಗಳಲ್ಲಿ ಕರ್ನಾಟಕದ ಆಂತರಿಕ ಮತ್ತು ಬಾಹ್ಯ ವ್ಯಾಪಾರಕ್ಕೆ ಸಂಬಂಧಿಸಿದಂತೆ ಆಮದು, ರಫ್ತು, ಶ್ರೇಣಿಗಳು, ವ್ಯಾಪಾರಿ ಮಾರ್ಗಗಳು, ವ್ಯಾಪಾರಿ ವಸ್ತುಗಳು, ವ್ಯಾಪಾರಿ ಕೇಂದ್ರಗಳು, ಪ್ರಮುಖ ರೇವುಪಟ್ಟಣಗಳು ಮುಂತಾದ ಅಂಶಗಳ ಬಗೆಯ ವಿವರಿಸಿದ್ದಾರೆ. ಆರ್ಥಿಕ ವ್ಯವಸ್ಥೆಯ ಕೊನೆಯ ಅಧ್ಯಾಯದಲ್ಲಿ ಹಣಕಾಸಿನ ಮೂಲಗಳಾದ ವಿವಿಧ ಬಗೆಯ ತೆರಿಗೆಗಳು, ತೆರಿಗೆ ನಿಯಮಗಳು, ತೆರಿಗೆ ವಂಚಕರಿಗೆ ಶಿಕ್ಷೆ ಮುಂತಾದ ವಿಷಯ ಕುರಿತು ವಿವರಿಸಿದ್ದಾರೆ. ಅವರೇ ತಮ್ಮ ಪ್ರಬಂಧದಲ್ಲಿ ತೆರಿಗೆಗಳ ಬಗ್ಗೆ ಶಾಸನಗಳಲ್ಲಿ ಸಾಕಷ್ಟು ಮಾಹಿತಿ ಲಭ್ಯವಾಗಿದ್ದರೂ ಅವುಗಳಲ್ಲಿ ಬಳಸಲಾಗಿರುವ ಪದಗಳನ್ನು ಗ್ರಹಿಸಿಕೊಳ್ಳುವುದು ಕಷ್ಟಕರವಾದುದು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ಪ್ರಬಂಧವು ಪ್ರಸ್ತುತ ಸಂಶೋಧನಾ ವಿಷಯಕ್ಕೆ ಪೂರಕ ಮಾಹಿತಿಯನ್ನು ನೀಡುವ ಮಹಾಪ್ರಬಂಧವಾಗಿದೆ.

ಹಿರೇಮಠ ಬಿ.ಆರ್., ಅವರ 'ಶಾಸನಗಳಲ್ಲಿ ಕರ್ನಾಟಕದ ವರ್ತಕರು' ಇದು ಆರ್ಥಿಕ, ವ್ಯಾಪಾರ ವಾಣಿಜ್ಯಗಳಿಗೆ ಸಂಬಂಧಿಸಿದಂತೆ ಅಧ್ಯಯನ ಮಾಡುವವರಿಗೆ ಶಾಸನೋಕ್ತ ಮಾಹಿತಿಯನ್ನು ನೀಡಬಹುದಾದ ಕೃತಿಯಾಗಿದೆ. ಈ ಕೃತಿಯು ಪ್ರಾಚೀನ ಕರ್ನಾಟಕದ ವರ್ತಕ ಸಮುದಾಯಗಳ ಹೆಸರು, ಪ್ರಕಾರಗಳು, ವರ್ತಕರ ಅಧಿಕಾರದ ಸ್ವರೂಪ, ವೃತ್ತಿ ಸಂಘಗಳು ಹಾಗೂ ಅವುಗಳ ಕಾರ್ಯಗಳು ಮೊದಲಾದ ವಿಚಾರಗಳನ್ನು ವಿವರಿಸಿದ್ದನ್ನು ಕಾಣುತ್ತೇವೆ. ಈ ಅಂಶಗಳನ್ನು ಸಮಕಾಲೀನ ಸಾಹಿತ್ಯ ಕೃತಿಗಳೊಂದಿಗೆ ಹೋಲಿಕೆ ಮಾಡಿ ವಿವರಿಸಿದ್ದಾರೆ.

ಚರಿತ್ರೆ ಬರವಣಿಗೆ ಕ್ರಮದಲ್ಲಿ ಹೊಸ ಶೈಲಿಯ ಬರವಣಿಗೆಯನ್ನು ರೂಪಿಸಿದಂತಹ ಸಂಜಯ್ ಸುಬ್ರಮಣ್ಯಂ, ಇರ್ಫಾನ್ ಹಬೀಬ್, ಧರ್ಮ ಕುಮಾರ್, ಸಬ್ಯಸಾಚಿ ಭಟ್ಟಾಚಾರ್ಯ, ಸತೀಶ್ ಚಂದ್ರ ಮುಂತಾದ ಚರಿತ್ರೆಕಾರರು ಸಾಮಾಜಿಕ ಹಾಗೂ ಆರ್ಥಿಕ ಅಂಶಗಳಿಗೆ ಒತ್ತುಕೊಟ್ಟು ಚರಿತ್ರೆ ರಚಿಸಿದರು. ಇನ್ನೂ ಉಳಿದಂತೆ ಅನೇಕ ಲೇಖನಗಳು, ಕಾದಂಬರಿಗಳು ಚಿತ್ರದುರ್ಗ ಪ್ರದೇಶವನ್ನು ಕೇಂದ್ರವಾಗಿ ಇಟ್ಟುಕೊಂಡು ಬಂದಿರುವುದನ್ನು ಗಮನಿಸಬಹುದು.

### ೧.೬. ಅಧ್ಯಯನದ ಸ್ವರೂಪ

ಈ ಅಧ್ಯಯನವು ಪ್ರಮುಖವಾಗಿ ಎಂಟು ಅಧ್ಯಾಯಗಳನ್ನು ಒಳಗೊಂಡಿದೆ.

ಮೊದಲನೆಯ ಅಧ್ಯಾಯವು ಪ್ರಸ್ತಾವನೆ, ಅಧ್ಯಯನದ ಉದ್ದೇಶ, ಮಹತ್ವ, ಸ್ವರೂಪ, ವ್ಯಾಪ್ತಿ, ವಿಧಾನ ಹಾಗೂ ಈವರೆಗಿನ ಅಧ್ಯಯನಗಳ ಸಮೀಕ್ಷೆ ಕುರಿತಾಗಿದೆ.

ಮೊದಲಿಗೆ ಪ್ರಸ್ತಾವನೆಯಲ್ಲಿ ಚರಿತ್ರೆ ಎಂಬುವುದು ಯಾವ ನೆಲೆಗಟ್ಟಿನಲ್ಲಿ ರಚಿತವಾಗಬೇಕಾಗಿದೆ, ಈವರೆಗೆ ಚರಿತ್ರೆಯ ಸೈದ್ಧಾಂತಿಕತೆ ಯಾವ ಹಿನ್ನೆಲೆಯನ್ನು ಹೊಂದಿದೆ ಹಾಗೂ ಅದು ಪ್ರಸ್ತುತ ಅಧ್ಯಯನಕ್ಕೆ ಯಾವ ಕ್ಷೇತ್ರವನ್ನು ಕುರಿತು ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟಿದೆ ಎಂಬ ವಿಷಯ ಕುರಿತು ಚರ್ಚಿಸಲಾಗಿದೆ. ಒಂದು ವಿಷಯದ ಮೇಲೆ ಸಂಶೋಧನೆಯನ್ನು ಕೈಗೊಂಡರೆ ಕೆಲವು ಉದ್ದೇಶಗಳನ್ನು ಈಡೇರಿಸಿಕೊಳ್ಳುವ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರಬಂಧದ ಸಿದ್ಧತೆಗೆ ಪೂರಕವಾದ ಉದ್ದೇಶಗಳನ್ನು ಸೂಚಿಸುವ ಹಾಗೂ ಅವುಗಳನ್ನು ಗಟ್ಟಿಗೊಳಿಸುವ ಕಾರ್ಯ ನಡೆದಿದೆ. ಅಧ್ಯಯನ ಉದ್ದೇಶಗಳು ಈಡೇರಿದಾಗ ಅದರಿಂದ ಚರಿತ್ರೆ ಹಾಗೂ ಪ್ರಬಂಧದ ಮಹತ್ವವು ಹೆಚ್ಚಾಗುತ್ತದೆ. ಅಂತಹ ಅಧ್ಯಯನದ ಮಹತ್ವಕ್ಕೆ ಪೂರಕವಾದ ಅಂಶಗಳನ್ನು ನೀಡಲಾಗಿದೆ. ಅಧ್ಯಾಯಗಳ ನಿರೂಪಣೆಯಲ್ಲಿ ಪ್ರತಿಯೊಂದು ಅಧ್ಯಾಯವು ತನ್ನದೇ ಆದ ಮೌಲ್ಯಗಳನ್ನು ಹೊಂದಿದ್ದು, ಅವುಗಳನ್ನು ಸಂಕ್ಷಿಪ್ತ ರೂಪದಲ್ಲಿ ತಿಳಿಸುವ ಪ್ರಯತ್ನವು ಅಧ್ಯಯನದ ಸ್ವರೂಪದಲ್ಲಿ ನಡೆದಿದೆ. ಪ್ರತಿಯೊಂದು ಸಂಶೋಧನೆಗೆ ಒಂದು ಕಾಲಮಿತಿಯೊಳಗೆ ಪ್ರದೇಶಗಳನ್ನು ಗಡಿಯೊಳಗೆ ವ್ಯಾಪ್ತಿಯನ್ನು ತಿಳಿಸುವುದರ ಮೂಲಕ ಸಂಶೋಧನಾ ಮಿತಿಗಳನ್ನು ತಿಳಿಸುವ ಕೆಲಸ ನಡೆಯುತ್ತದೆ. ಅದೇ ರೀತಿಯಾಗಿ ಅಧ್ಯಯನದ ವ್ಯಾಪ್ತಿಯನ್ನು ಕೇಂದ್ರಿಕರಿಸುವ ಅಂಶಗಳನ್ನು ನೀಡಲಾಗಿದೆ. ಸಂಶೋಧನೆಗೆ ಅನೇಕ ಸೈದ್ಧಾಂತಿಕ ಚೌಕಟ್ಟುಗಳು ಇದ್ದು ಅವುಗಳನ್ನು ಬರವಣಿಗೆ ಕ್ರಮಕ್ಕೆ ತರುವಲ್ಲಿ ವಿಧಿ–ವಿಧಾನಗಳು ಅತೀ ಮುಖ್ಯ. ಅಂತಹ ವಿಧಿ–ವಿಧಾನಗಳ ಮೂಲಕ ಪ್ರಬಂಧ ಸಿದ್ಧಗೊಳ್ಳುವಲ್ಲಿ ಬಳಸಿದ ಕಾರ್ಯ ತಂತ್ರಗಳನ್ನು ವಿವರಿಸಲಾಗಿದೆ. ಉಳಿದಂತೆ ಕೊನೆಯದಾಗಿ ಈವರೆಗೂ ಪ್ರಸ್ತುತ ಅಧ್ಯಯನ ವಿಷಯ ಅಥವಾ ಕ್ಷೇತ್ರದಲ್ಲಿ ಮಾಡಿದ ಕೃಷಿ ಹಾಗೂ ಅದರ ಮಿತಿಗಳನ್ನು ಸಂಕ್ಷಿಪ್ತವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಚಿತ್ರದುರ್ಗ ಪ್ರದೇಶದ ಭೌಗೋಳಿಕತೆಯ ಮುಖ್ಯ ಲಕ್ಷಣಗಳಾದ ಭೂಮಿ, ನದಿ, ನೈಸರ್ಗಿಕ ಸಂಪನ್ಮೂಲಗಳು ಹಾಗೂ ಅಲ್ಲಿ ಹರಿಯುವಂತಹ ಪ್ರಾಚೀನ ಹಳ್ಳ–ಕೊಳ್ಳಗಳಲ್ಲದೆ, ಅದು ಭೂಗೋಳದಲ್ಲಿ ಗುರುತಿಸಿಕೊಂಡಿರುವ ರೇಖಾಂಶಗಳನ್ನು ಹಾಗೂ ಈ ಭೌಗೋಳಿಕ ಲಕ್ಷಣಗಳು ಅಭಿವೃದ್ಧಿಗೆ ಹೇಗೆ ಹಿನ್ನೆಡೆಯನ್ನು ಉಂಟುಮಾಡಿವೆ ಎಂಬ ಅಂಶವನ್ನು,

ಇಲ್ಲಿ ಸಿಗುವ ಖನಿಜ ಸಂಪನ್ಮೂಲಗಳಿಂದ ಉದ್ದಿಮೆಗಳ ಹಾಗೂ ಅಭಿವೃದ್ಧಿಗೆ ಪೂರಕವಾದ ಅಂಶಗಳನ್ನು ಚರ್ಚಿಸಲಾಗಿದೆ. ಬಯಲು ಸೀಮೆ ಹಾಗೂ ಅರೆ ಮಲೆನಾಡು ಇಲ್ಲಿಯ ಮಾನವ ಬದುಕಿನ ಸಂಬಂಧಗಳನ್ನು ಸಹ ವಿಶ್ಲೇಷಣೆಗೊಳಪಡಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಚಿತ್ರದುರ್ಗ ಪ್ರದೇಶ ಭೌಗೋಳಿಕತೆಯಲ್ಲಿ ಪ್ರಾಗೈತಿಹಾಸಿಕ ಹಾಗೂ ಚರಿತ್ರೆ ಕಾಲಕ್ಕೆ ಸಂಬಂಧಿಸಿದ ಜನರ ಬದುಕನ್ನು ವಿಶ್ಲೇಷಿಸಲಾಗಿದೆ. ಅನಾದಿ ಕಾಲದಿಂದಲೂ ಮಾನವನ ನೆಲೆಯಾಗಿ ಕಂಡುಕೊಂಡ ಚಿತ್ರದುರ್ಗ ಪ್ರದೇಶವು ಆದಿ ಶಿಲಾಯುಗ, ಮಧ್ಯಶಿಲಾಯುಗ, ಬೃಹತ್ ಶಿಲಾಯುಗ ನಂತರದ ಕಬ್ಬಿಣದ ಯುಗಕ್ಕೆ ಪೂರಕವಾದ ಅನೇಕ ಶಿಲಾಯುಗದ ನೆಲೆಗಳನ್ನು ಹೊಂದಿದ್ದು ಅವುಗಳನ್ನು ಗುರುತಿಸಲಾಗಿದೆ. ನಂತರದ ಚರಿತ್ರೆ ಕಾಲದ ಮೌರ್ಯ, ಶಾತವಾಹನ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಹಾಗೂ ಪಾಳೆಯಗಾರರ ಕಾಲದವರೆಗೆ ಚಿತ್ರದುರ್ಗ ಪ್ರದೇಶ ಗುರುತಿಸಿಕೊಂಡಿರುವ ಬಗೆ, ಆಡಳಿತ ಘಟಕ ಅಥವಾ ಉಪಘಟಕವಾಗಿ ರಚನೆಯಾಗಿ ಆರಂಭದಿಂದ ಇಂದಿನವರೆಗೂ ನಡೆದು ಬಂದ ರಾಜಕೀಯ ಹಾಗೂ ಸಾಂಸ್ಕೃತಿಕ ವಿದ್ಯಮಾನಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ನಾಯಕರ ಆಡಳಿತ ಪೂರ್ವದ ಕೃಷಿ ಹಾಗೂ ವ್ಯಾಪಾರ ಸಂಬಂಧಗಳನ್ನು ಕುರಿತ ಹಿನ್ನೆಲೆಯನ್ನು ವಿವರಿಸಲಾಗಿದೆ. ಚಿತ್ರದುರ್ಗವು ಸುಮಾರು ೨೦೦೦ ವರ್ಷಗಳಷ್ಟು ಪ್ರಾಚೀನತೆಯನ್ನು ಹೊಂದಿದ್ದು, ಈ ಪ್ರದೇಶದ ಚರಿತ್ರೆ ಪೂರ್ವ ಸಂಸ್ಕೃತಿಯನ್ನು ಲಭ್ಯವಿರುವ ಆಕರಗಳ ಮೂಲಕ ವಿವರಿಸಲಾಗಿದೆ. ಎರಡನೆಯ ಶತಮಾನದಿಂದ ಚಿತ್ರದುರ್ಗ ಪ್ರದೇಶವನ್ನು ಆಳಿದ ಮೌರ್ಯರು, ಶಾತವಾಹನರು, ಗಂಗರು, ಬಾದಾಮಿ ಚಾಲುಕ್ಯರು, ಕಲ್ಯಾಣದ ಚಾಲುಕ್ಯರು, ಹೊಯ್ಸಳ, ವಿಜಯನಗರ ಅರಸರ ಕಾಲದವರೆಗಿನ ಸಾಮಾಜಿಕ ವರ್ಗಗಳಿಂದ ರೂಪಗೊಂಡ ಭೂ ಹಿಡುವಳಿ, ದಾನ-ದತ್ತಿ, ವ್ಯಾಪಾರದ ಮಾರ್ಗಗಳು, ಇನ್ನಿತರೆ ಅಂಶಗಳನ್ನು ಒಳಗೊಂಡ ವಿಚಾರಗಳಾದ ಕೃಷಿ ವಿಸ್ತರಣೆ ಹಾಗೂ ಪ್ರಾಚೀನ ಮೌರ್ಯ ಹಾಗೂ ನಂತರದ ಪ್ರಭುತ್ವಗಳ ಕಾಲದಲ್ಲಿ ಚಿತ್ರದುರ್ಗದ ವ್ಯಾಪಾರ ವಾಣಿಜ್ಯವನ್ನು ವಿಶ್ಲೇಷಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ನಾಯಕರ ಕಾಲದ ಕೃಷಿ ಸಂಬಂಧಗಳ ಕುರಿತಾಗಿ ಚರ್ಚಿಸಲಾಗಿದೆ. ಇಲ್ಲಿ ಮುಖ್ಯವಾಗಿ ನಾಯಕರ ಕೃಷಿ ನೀತಿ, ಭೂ ಹಿಡುವಳಿ ವ್ಯವಸ್ಥೆ, ಭೂ ಮಾಲೀಕರು ಮತ್ತು ಅಧಿಕಾರ ರಚನೆ, ಕೃಷಿ ಭೂಮಿಯ ವರ್ಗೀಕರಣ, ನೀರಾವರಿ ವ್ಯವಸ್ಥೆ, ಭೂ ಕಂದಾಯ ವ್ಯವಸ್ಥೆ, ಬಿಟ್ಟಿ ಸೇವೆ ಮುಂತಾದ ವಿಷಯಗಳನ್ನು ಚರ್ಚಿಸುವುದರೊಂದಿಗೆ ನಾಯಕರು ಒಂದು ಕಾಲಕ್ಕೆ ಭೂ ಹಿಡುವಳಿದಾರರು ಆಗಿದ್ದರು ಎನ್ನುವ ಅಂಶವನ್ನು ವಿವರಿಸಲಾಗಿದೆ. ನಂತರ ಅದರ ಮೂಲಕ ರಚನೆಯಾದ ವರ್ಗ ವ್ಯವಸ್ಥೆ, ಜನರ ಜೀವನದ ಆರ್ಥಿಕ ಪ್ರಗತಿಗೆ ಅವರ ಬೆಳೆಗಳು ಹಾಗೂ ಮಾರುಕಟ್ಟೆಯ ರಚನೆಗೆ ಪೂರಕವಾದ ವಾತಾವರಣವನ್ನು ವಿಸ್ತಾರವಾಗಿ ಚರ್ಚಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ನಾಯಕರ ಕಾಲದ ವ್ಯಾಪಾರ ಸಂಬಂಧವನ್ನು ಕುರಿತು ವಿಶ್ಲೇಷಿಸಲಾಗಿದೆ. ವಿಜಯನಗರೋತ್ತರ ಕಾಲದಲ್ಲಿ ಒಂದು ಕಡೆ ಧರ್ಮ, ಸಂಸ್ಕೃತಿ, ಭಾಷೆ, ಇನ್ನಿತರ ಕ್ಷೇತ್ರಗಳಲ್ಲಿ ಬದಲಾವಣೆಯನ್ನು ಕಂಡುಕೊಂಡ ಕಾಲ ನಾಯಕರ ಅವಧಿಯಾಗಿದ್ದು, ಸ್ಥಳೀಯವಾಗಿ ಸಂಪ್ರದಾಯಕತೆ ಎನ್ನುವಂತೆ ಜಾತಿ ಮತ್ತು ವೃತ್ತಿ ಆಧಾರಿತ ಸಂಘ ಅಥವಾ ಶ್ರೇಣಿಗಳನ್ನು ಸಂಘಟಿಸಿಕೊಂಡು ಜೀವನ

ನಡೆಸುತ್ತಿದ್ದ ಸಮುದಾಯಗಳು ಇದ್ದವು. ಇದಕ್ಕೆ ಮುಖಾಮುಖಿ ಎಂಬಂತೆ ಯುರೋಪಿನ ಕಂಪನಿ ವರ್ತಕರು ದುರ್ಗ ಪ್ರದೇಶ ಹಾಗೂ ಇತರ ನೆರೆಯ ಪ್ರದೇಶಗಳೊಂದಿಗೆ ಮಾಡಿಕೊಂಡ ಒಪ್ಪಂದಗಳಿಂದಾಗಿ ಸ್ಥಳೀಯ ವ್ಯಾಪಾರಿ ಸಮುದಾಯಗಳು ಭಿನ್ನವಾಗಿ ಗುರುತಿಸಿಕೊಂಡಿರುವ ಬಗೆಯನ್ನು ಅಧ್ಯಯನ ನಡೆಸಲಾಗಿದೆ. ಮುಖ್ಯವಾಗಿ ನಾಯಕರ ವ್ಯಾಪಾರ ನೀತಿ, ವರ್ತಕ ಸಮುದಾಯಗಳು, ವ್ಯಾಪಾರ ವಾಣಿಜ್ಯ, ಉದ್ದಿಮೆಗಳು ಮತ್ತು ಉದ್ದಿಮೆದಾರರು, ಸಾರಿಗೆ ಸಂಪರ್ಕ, ಕಂಪನಿಯೊಂದಿಗೆ ಸಂಬಂಧಗಳು, ಹಾಗೂ ಚಿತ್ರದುರ್ಗದ ನಗರೀಕರಣ ಪ್ರಕ್ರಿಯೆ ಮತ್ತು ಇತರೆ ಪೇಟೆ-ಪಟ್ಟಣಗಳ ಬೆಳವಣಿಗೆಯನ್ನು ವಿಸ್ತಾರವಾಗಿ ವಿಶ್ಲೇಷಿಸಲಾಗಿದೆ.

ಏಳನೆಯ ಅಧ್ಯಾಯವು ನಾಯಕರ ಕಾಲದ ಹೊಸ ಒಲವುಗಳನ್ನು ಗುರುತಿಸುವುದಾಗಿದೆ. ಅಂದರೆ ರೈತರು ಉತ್ಪಾದನೆಯ ವ್ಯವಸ್ಥೆಯನ್ನು ಕಂಡುಕೊಂಡದ್ದು ಭೂಮಿಯನ್ನು ಸ್ವಂತದಾಗಿಸಿಕೊಂಡಾಗ. ಜನಸಂಖ್ಯೆಯ ಹೆಚ್ಚಳ ಇನ್ನಿತರೆ ಕಾರಣಗಳಿಂದಾಗಿ ಚಿಕ್ಕ ಚಿಕ್ಕ ಭೂ ಹಿಡುವಳಿಗಳು ಛಿದ್ರಗೊಂಡಾಗ ಉತ್ಪಾದನೆ ಕಡಿಮೆಯಾಗುತ್ತದೆ. ನಾಯಕರ ಹಾಗೂ ನಾಯಕರ ನಂತರ ವಲಸೆ ಬಂದು ನೆಲೆನಿಂತ ವಲಸಿಗ ವರ್ತಕರಾದ ಗುಜರಾತಿ, ರಾಜಸ್ಥಾನಿ, ಮುಸ್ಲಿಂ, ಕ್ರೈಸ್ತ ಇನ್ನಿತರೆ ಸಮುದಾಯಗಳನ್ನು ಇಂದಿಗೂ ಈ ಪ್ರದೇಶದಲ್ಲಿ ಗುರುತಿಸಬಹುದಾಗಿದೆ. ಚಿತ್ರದುರ್ಗದ ಮಾರುಕಟ್ಟೆ ಹಾಗೂ ವ್ಯಾಪಾರಕ್ಕೆ ಪೂರಕವಾದ ಚರ್ಚೆಯನ್ನು ಸಹ ಮಾಡಲಾಗಿದೆ. ನಾಯಕರ ಕಾಲದಲ್ಲಿ ರಚನೆಯಾದ ಕೋಟೆ, ಇನ್ನಿತರೇ ಸ್ಮಾರಕಗಳಿಂದ ನಾಯಕರನ್ನು ನೆನಪಿಸಿಕೊಳ್ಳುವ ಹಂತ ಒಂದಾದರೆ, ಪ್ರಸ್ತುತ ಮಠ, ಸಂಸ್ಥೆ, ಮಾರುಕಟ್ಟೆ, ಆಚರಣೆ, ಸಂಪ್ರದಾಯಗಳೊಂದಿಗೆ ಇಂದಿಗೂ ತನ್ನದೇ ಆದ ಸ್ಥಳೀಯತೆಯನ್ನು ಗುರುತಿಸಿಕೊಂಡಿರುವ ಅಂಶಗಳನ್ನು ಪ್ರಸ್ತುತಪಡಿಸಲಾಗಿದೆ.

ಎಂಟನೆಯ ಅಧ್ಯಾಯವು ಸಮಾರೋಪವಾಗಿದ್ದು, ಒಟ್ಟಾರೆ ಪ್ರಬಂಧ ರಚನೆ ಹಾಗೂ ಸಂಶೋಧನೆಯಿಂದಾಗಿ ಕಂಡುಕೊಂಡ ಫಲಿತಗಳನ್ನು ನೀಡಲಾಗಿದೆ. ಸಾಂಸ್ಕೃತಿಕ ಹಾಗೂ ಆರ್ಥಿಕ ಚರಿತ್ರೆಯ ನೆಲೆಗಟ್ಟಿನಲ್ಲಿ ನಾಯಕರ ಬಗ್ಗೆ ನಡೆಯಬೇಕಾದ ಅಧ್ಯಯನಗಳ ಬಗ್ಗೆ ತಿಳಿಸಲಾಗಿದೆ. ಅಧ್ಯಯನಕ್ಕೆ ಅಗತ್ಯವಿರುವ ಗ್ರಂಥಋಣ, ನಕಾಶೆಗಳು, ಛಾಯಾ ಚಿತ್ರಗಳು ಹಾಗೂ ಇನ್ನಿತರ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ.

ಅಧ್ಯಾಯ - ಎರಡು

# ಚಿತ್ರದುರ್ಗ ಪರಿಸರದ ಭೌಗೋಳಿಕತೆ

೨.೧. ಚಿತ್ರದುರ್ಗದ ಭೂ ಇತಿಹಾಸ
೨.೨. ಪ್ರಾಕೃತಿಕ ಲಕ್ಷಣಗಳು
೨.೩. ಮಾನವ ಮತ್ತು ಪ್ರಕೃತಿ

## ಅಧ್ಯಾಯ – ಎರಡು

# ಚಿತ್ರದುರ್ಗ ಪರಿಸರದ ಭೌಗೋಳಿಕತೆ

ಚಿತ್ರದುರ್ಗ ಪರಿಸರದ ಭೌಗೋಳಿಕ ಸನ್ನಿವೇಶಗಳು, ಅಲ್ಲಿನ ಕೃಷಿ ಹಾಗೂ ವ್ಯಾಪಾರ ವ್ಯವಸ್ಥೆಗಳು ಬದಲಾಗುತ್ತಿದ್ದಂತೆ ಅದು ತನ್ನ ಸ್ವರೂಪದಲ್ಲೂ ಬದಲಾವಣೆಯನ್ನು ಕಾಣಬೇಕಾಯಿತು. ಚಿತ್ರದುರ್ಗ ಪ್ರದೇಶದಲ್ಲಿ ಪ್ರಕೃತಿ ಮಾನವರ ವಿರುದ್ಧ ನಿಂತ ಉಲ್ಲೇಖಗಳು ಚರಿತ್ರೆಯಲ್ಲಿ ಸಿಗುವುದಿಲ್ಲ. ಆದರೆ ಗಣಿಗಾರಿಕೆ, ಬೃಹತ್ ಉದ್ದಿಮೆಗಳ ಸ್ಥಾಪನೆ ಮುಂತಾದ ಅಭಿವೃದ್ಧಿಯ ಹೆಸರಿನಲ್ಲಿ ಆರಂಭಗೊಂಡ ಯೋಜನೆಗಳು ಪ್ರಕೃತಿಯ ಮೇಲೆ ಕೆಟ್ಟ ಪರಿಣಾಮಗಳನ್ನು ಬೀರಿದವು. ಪ್ರಕೃತಿ ಕಲುಷಿತಗೊಂಡಾಗ ಅದರ ಪರಿಣಾಮಗಳನ್ನು ಅನುಭವಿಸಬೇಕಾದವರು ಮಾನವರೇ ಆಗಿರುತ್ತಾರೆ. ಉತ್ತಮ ಭೌಗೋಳಿಕ ಲಕ್ಷಣಗಳು ಇದ್ದಾಗ ಮಾನವನ ವಿಕಾಸದ ಹಾದಿ ಇನ್ನಷ್ಟು ಸುಗಮವಾಗುತ್ತದೆ. ಮಾನವನನ್ನು ಪ್ರಕೃತಿಯಿಂದ ಬೇರ್ಪಡಿಸಿ ನೋಡಲು ಸಾಧ್ಯವಾಗುವುದಿಲ್ಲ.[೧] ಹಾಗಾಗಿ ಮಾನವನು ಬದುಕುವುದಕ್ಕಾಗಿ ಉತ್ತಮ ಭೌಗೋಳಿಕ ಪರಿಸರವನ್ನು ಶೋಧಿಸಿ ಅಲ್ಲಿ ವಾಸಮಾಡುತ್ತಾರೆ. ಒಂದು ದೇಶದ ಸರ್ವತೋಮುಖ ಬೆಳವಣಿಗೆಯು ಅಲ್ಲಿನ ಭೌಗೋಳಿಕ ಅಂಶಗಳನ್ನು ಅವಲಂಬಿಸಿರುತ್ತದೆ. ಯಾವ ರಾಜ್ಯ ಅಥವಾ ದೇಶಕ್ಕೆ ಹೆಚ್ಚು ಪ್ರಕೃತಿಯ ಸಹಾಯವಿರುತ್ತದೆಯೋ ಆ ರಾಷ್ಟ್ರ ಬಹುಬೇಗ ಅಭಿವೃದ್ಧಿಯನ್ನು ಸಾಧಿಸುತ್ತದೆ. ಭೌಗೋಳಿಕ ಪರಿಸರವು ಚರಿತ್ರೆ ಹಾಗೂ ಸಂಸ್ಕೃತಿಯ ಬೆಳವಣಿಗೆಗೆ ಪೂರಕವಾಗುತ್ತದೆ. ಒಂದು ರಾಷ್ಟ್ರದ ಅಸ್ತಿತ್ವಕ್ಕೆ ಭೌಗೋಳಿಕ ಪರಿಸರ, ಸರಕಾರ, ಸಂವಿಧಾನ ಹಾಗೂ ಪರಮಾಧಿಕಾರಗಳು ಅವಶ್ಯಕವೆಂದು ರಾಜ್ಯಶಾಸ್ತ್ರ ಗ್ರಂಥಗಳು ಹೇಳಿವೆ.[೨] ಒಂದು ಪ್ರದೇಶದ ಪರ್ವತಶ್ರೇಣಿ, ಬೆಟ್ಟ-ಗುಡ್ಡ, ನದಿ ಬಯಲು, ಹಳ್ಳ, ಸರೋವರ, ಬಂದರುಗಳು, ಮಣ್ಣಿನ ರಚನೆ, ಹವಾಮಾನ, ಉಷ್ಣಾಂಶ, ರೇಖಾಂಶ ಮುಂತಾದ ಭೌಗೋಳಿಕ ಅಂಶಗಳು ಮಾನವನನ್ನು ಆ ಪ್ರದೇಶದಲ್ಲಿ ವಾಸಿಸುವಂತೆ ಅವಕಾಶ ಮಾಡಿಕೊಡುತ್ತವೆ. ಉತ್ತಮ ಭೌಗೋಳಿಕ ಪರಿಸರವು ಆ ಪ್ರದೇಶದ ನೈಸರ್ಗಿಕ ಸಂಪತ್ತನ್ನು ಹೆಚ್ಚಾಗಿಸಿ ಜನಜೀವನ, ನಾಗರೀಕತೆ, ಕಲೆ, ಸಂಸ್ಕೃತಿ, ಕೃಷಿ, ವ್ಯಾಪಾರ, ವಾಣಿಜ್ಯಗಳು ಅಭಿವೃದ್ಧಿಗೆ ಸಹಕಾರಿಯಾಗುತ್ತದೆ.[೩]

### ೨.೧. ಚಿತ್ರದುರ್ಗದ ಭೂ ಇತಿಹಾಸ

ಚಿತ್ರದುರ್ಗ ಜಿಲ್ಲೆಯ ಭೂ ಇತಿಹಾಸವನ್ನು ಅನೇಕ ಭೂ ವಿಜ್ಞಾನಿಗಳು ಸಂಶೋಧನೆ ನಡೆಸಿ ಅನೇಕ ಅಚ್ಚರಿ ಸಂಗತಿಗಳನ್ನು ಮುಂದಿಟ್ಟಿದ್ದಾರೆ. ಕರ್ನಾಟಕವು ಅತಿ ಪುರಾತನ ಪ್ರಸ್ಥಭೂಮಿಯಾಗಿದೆ. ಕರ್ನಾಟಕದ ಭೌಗೋಳಿಕತೆಯು ಸುಮಾರು ೪೦ ಕೋಟಿವರ್ಷಗಳಷ್ಟು ಹಿಂದೆ ದಕ್ಷಿಣ ಆಫ್ರಿಕಾ ಖಂಡಕ್ಕೆ ಅಂಟಿಕೊಂಡಿತ್ತು. ನಂತರ ಅಖಂಡ ಭೂ ಭಾಗದಿಂದ ಬೇರ್ಪಟ್ಟು ಸೀಳಿಕೆಗಳಾಗಿ ಮೂಡಿದೆ. ಕ್ರಮೇಣ ತುಂಡುಗಳಾದವು. ತ್ರಿಕೋನಾಕೃತಿಯ ತುಣುಕು (ಇಂದಿನ ದಕ್ಷಿಣ ಭಾರತ) ನಿಧಾನವಾಗಿ ತೆಪ್ಪದಂತೆ ತೇಲಿ (ವರ್ಷಕ್ಕೆ ೩-೪ ಸೆಂಟಿಮೀಟರ್) ಟಿಬೆಟ್ ಪ್ರಸ್ಥಭೂಮಿಗೆ ಡಿಕ್ಕಿ ಹೊಡೆದಾಗ ಈ ಭೂ ಭಾಗದ ಮಧ್ಯೆ ಇದ್ದ ಶಿಲಾಸ್ತರಗಳು ಸುಕ್ಕುಗಟ್ಟಿ, ಮಡಿಸಿ ಹಿಮಾಲಯ ಪರ್ವತಗಳಾಗಿ ಮೇಲೆದ್ದವಂತೆ ಮುಂಚೆ ಅಲೆಮಾರಿಯಾಗಿದ್ದ ಭರತ ಖಂಡದ ಭೂ ಭಾಗ ಇಂದಿನ ಸ್ಥಳದಲ್ಲಿ ನೆಲೆಯಾಗಿ ನಿಂತಿತ್ತು. ಇಂತಹ ಕರ್ನಾಟಕ ಪೀಠ ಭೂಮಿಯ ಕೇಂದ್ರ ಸ್ಥಳದ ಚಿತ್ರದುರ್ಗವು 'ದಿಂಬು ಶಿಲಾ ವಲಯವೆಂದು' ಗುರುತಿಸಿದೆ.

ಮೊದಲು ಈ ಚಿತ್ರದುರ್ಗ ಶಿಲಾವಲಯವು ಅಗ್ನಿ ಪರ್ವತಗಳಿಂದ ಹೊರಬರುವ ಬೂದಿ ಶಿಲಾಪಾಕಗಳು ತಣ್ಣಗಾದ ನಂತರ ಶಿಲೆಗಳಾಗಿ ಮಾರ್ಪಟ್ಟಿದೆ. ಇಂಗಳದಾಳು ಮತ್ತು ಘಟ್ಟಿ ಹೊಸಹಳ್ಳಿ ಇನ್ನು ಮುಂತಾದ ಕಡೆಗಳಲ್ಲಿ ಈ ಶಿಲಾಪಾಕ ಸಮುದ್ರದಲ್ಲಿ ಹರಡಿಕೊಂಡಿದ್ದರಿಂದ ಮರಡಿಹಳ್ಳಿ ಬಳಿ ದಿಂಬು ಶಿಲೆಗಳಾದವು. ಹಿಂದೆ ಚಿತ್ರದುರ್ಗ ಪ್ರದೇಶವು ಸಮುದ್ರವಾಗಿತ್ತು. ಈ ದಿಂಬು ಶಿಲೆಗಳು ೨೭೦ ಕೋಟಿ ವರ್ಷಗಳ ಹಿಂದೆ ಆಗಿವೆ ಎಂದು ಭೂ ವಿಜ್ಞಾನಿಗಳು ಅಭಿಪ್ರಾಯ ಪಟ್ಟಿದ್ದಾರೆ.[೪] ಮರಡಿ ಹಳ್ಳಿಯಲ್ಲಿರುವ ಇಂತಹ ದಿಂಬು ಶಿಲಾ ರಚನೆಯನ್ನು ಮೊಟ್ಟ ಮೊದಲಿಗೆ ಗುರುತಿಸಿ ಅದರ ಉದ್ಭವದ ಬಗೆಗೆ ಬರೆದವರು ಪಿಚಮುತ್ತು (೧೯೩೮) ಅವರು. ನಂತರ ಈ ಜಿಲ್ಲೆಯ ಭೂ ಇತಿಹಾಸವನ್ನು ವೆದೆರಾಲ್ (೧೯೦೧), ಸ್ಮಿತ್ (೧೯೦೦) ಇವರು ಈ ಜಿಲ್ಲೆಯ ಶಿಲೆಗಳು ಮತ್ತು ಖನಿಜಗಳ ಅನ್ವೇಷಣೆ ಕೈಗೊಂಡವರಲ್ಲಿ ಮೊದಲಿಗರು. ಆದರೆ ಈ ಶಿಲೆಗಳೆಲ್ಲವೂ ಆಗ್ನಿಪರ್ವತಗಳಿಂದಾದುವು ಎಂಬ ತತ್ವವನ್ನು ಮಂಡಿಸಿದರು. ಅನಂತರ ಸಂಪತ್ತೈಯ್ಯಂಗಾರ್ ಅವರು (೧೯೦೫) ಈ ಜಿಲ್ಲೆಯ ಶಿಲೆಗಳ ಉಗಮವನ್ನು ಕುರಿತು ಬಹುಮುಖ್ಯ ಸಂಶೋಧನೆಯನ್ನು ಪ್ರಕಟಿಸಿದರು. ಇವರ ಅಧ್ಯಯನದ ಫಲವಾಗಿ ಹೊರಹೊಮ್ಮಿದ ಫಲಿತಾಂಶವು 'ಅಗ್ನಿಜ ಉದ್ಭವ' ಸಿದ್ಧಾಂತಕ್ಕೆ ಕಂಠಪ್ರಾಯವಾಯಿತು. ಇದು ಹೊಸ ದೃಷ್ಟಿಕೋನ ಬೆಳೆದು ಚಿತ್ರದುರ್ಗ ಶಿಲಾಪೇರೀಕ ಎಂಬ ನಿರ್ವಿತವಾಗಿ ಬೆಳೆಯಿತು.

ಚಿತ್ರದುರ್ಗ ಪ್ರದೇಶದ ಭೂ ವಿಜ್ಞಾನಿಗಳ ಸಂಶೋಧನೆಯ ಫಲವಾಗಿ ಈಗ ಈ ಜಿಲ್ಲೆಯ ಶಿಲೆಗಳಾದ ಕ್ವಾರ್ಟ್ಸೈಟ್, ಪೆಂಡಿಶಿಲೆ, ಸುಣ್ಣಶಿಲೆ, ಮತ್ತು ಜೇಡುಶಿಲೆಗಳು ಸಾಗರ ತಳದ ಮಹಾ ಕಂದರಗಳಲ್ಲಿ ಸಂಚಯನಗೊಂಡಿವೆಯೆಂದರೆ ಇದು ಆಶ್ಚರ್ಯಕರ ಸತ್ಯ ಸಂಗತಿ.

ಈ ವಾದವನ್ನು ಸಂಪತ್ ಅಯ್ಯಂಗಾರರು ಮಂಡಿಸಿದ್ದು ಈ ಸಂಶೋಧನೆಯನ್ನು ಬೆನ್ನು ಹತ್ತಿ ಸಂಶೋಧನೆಯನ್ನು ಮಾಡಿದವರಲ್ಲಿ ಭೂ ವಿಜ್ಞಾನಿಯಾದ ಬ್ರೂಸ್‌ಪುಟ್ (೧೮೭೬), ಬಿ.ರಾಮರಾವ್ (೧೯೩೮), ಪಿಚಮುತ್ತು (೧೯೩೮), ಹೋಮ್ಸ್ (೧೯೫೫), ಪಿ.ಬಿ.ರಾಧಾಕೃಷ್ಣ (೧೯೭೧, ೧೯೭೪, ೧೯೭೮, ೧೯೮೩), ಶ್ರೀನಿವಾಸನ್ ಮತ್ತು ಶ್ರೀನಿವಾಸ್ (೧೯೬೮), ಸ್ವಾಮಿನಾಥ್ (೧೯೭೪), ರಾಮಕೃಷ್ಣ ಮತ್ತು ವಿಶ್ವನಾಥ್ (೧೯೭೩), ನರ್ವೆ (೧೯೭೨), ರಸೆಲ್ (೧೯೫೪), ವಿನಗ್ರಡೋವ್

(೧೯೬೪), ಕ್ರಾಫರ್ಡ್ (೧೯೬೯), ಸುಬ್ರಮಣಿಯಂ (೧೯೭೮), ಪಿಚಮುತ್ತು ಮತ್ತು ಶ್ರೀನಿವಾಸ್ (೧೯೮೩) ಮುಂತಾದವರು ಹಲವು ಸಾಕ್ಷಿಗಳನ್ನು ಒದಗಿಸಿದ್ದಾರೆ.[೫]

ಚಿತ್ರದುರ್ಗ ಪರಿಸರವು ಬಿಳಿ ಮತ್ತು ಕೆಂಪು ಮಣ್ಣಿನ ಹಾಗೂ ಹೆಚ್ಚು ಕಲ್ಲು ಪ್ರದೇಶಗಳನ್ನು ಒಳಗೊಂಡಿರುವ ಪ್ರದೇಶವಾಗಿದೆ. ಅಲ್ಲದೆ ಇದನ್ನು ಕರ್ನಾಟಕ ರಾಜ್ಯದ ಮಧ್ಯಪ್ರದೇಶಕ್ಕೆ ಹೋಲಿಸಿ ನೋಡಿದಾಗ ಉತ್ತರ ಮತ್ತು ದಕ್ಷಿಣ ಕರ್ನಾಟಕ ಭಾಗಗಳಲ್ಲಿ ಕಪ್ಪು ಮತ್ತು ಉತ್ತಮ ಫಲವತ್ತತೆಯನ್ನು ಹೊಂದಿದ ಭೂ ಪ್ರದೇಶವನ್ನು ಹೊಂದಿದೆ. ಕಡಿಮೆ ಪ್ರಮಾಣದ ಕಲ್ಲು ಬೆಟ್ಟಗಳನ್ನು ಹೊಂದಿರುವುದು ಗುರುತಿಸಬಹುದಾಗಿದೆ. ಹಾಗೆಯೆ ಬಳ್ಳಾರಿ ಹಾಗೂ ಆಂಧ್ರಪ್ರದೇಶದ ಕೆಲವು ಭಾಗಗಳು ಇದೇ ಮಾದರಿಯನ್ನು ಹೋಲುತ್ತವೆ.[೬]

**ಭೌಗೋಳಿಕತೆಯ ಐಕ್ಯತೆ**

ಚಿತ್ರದುರ್ಗ ಪ್ರದೇಶದಲ್ಲಿ ಆದಿ ಮಾನವನು ನೆಲೆ ನಿಲ್ಲಲು ಭೌಗೋಳಿಕ ಐಕ್ಯತೆಯ ಪಾತ್ರ ಅತೀ ಮುಖ್ಯವಾದದಾಗಿದೆ. ಈ ಪ್ರದೇಶದಲ್ಲಿ ಕಂಡುಬರುವ ಬೆಟ್ಟ ಶ್ರೇಣಿಗಳು ಸಮುದ್ರ ಮಟ್ಟದಿಂದ ಸುಮಾರು ೩೦೦೦ ಅಡಿಗಳಷ್ಟು ಎತ್ತರವಾದ ಸಮತಟ್ಟಾದ ಬೆಟ್ಟ ಪ್ರದೇಶಗಳನ್ನು ಹೊಂದಿದೆ. ಈ ಬೆಟ್ಟದ ಶ್ರೇಣಿಗಳು ಕಣಿವೆಯ ಮಾರ್ಗಗಳನ್ನು ಯೋಜಿಸಿವೆ. ಸಮತಟ್ಟಾದ ಗುಡ್ಡ ಪ್ರದೇಶಗಳ ತಪ್ಪಲಿನಲ್ಲಿ ನಿರಂತರವಾಗಿ ಸಾಲುಗಟ್ಟಿ ವಸತಿ ನೆಲೆಗಳನ್ನು ನಿರ್ಮಿಸಿ ಈ ಮೂಲಕ ಜನವಸತಿಗಳು, ಗ್ರಾಮಗಳು ರಚನೆಯಾಗಿವೆ. ಅಲ್ಲದೆ ಪ್ರಸ್ತುತ ನಿರ್ಮಾಣವಾಗಿರುವ ರಾಜ್ಯ ಮತ್ತು ರಾಷ್ಟ್ರೀಯ ಹೆದ್ದಾರಿಗಳ ನಿರ್ಮಾಣವು ಪ್ರಾಚೀನ ನೆಲೆಗಳನ್ನು ಸ್ಪರ್ಶಿಸುವ ಹಾಗೂ ಭೌಗೋಳಿಕವಾಗಿ ಕಣಿವೆ ಮಾರ್ಗಗಳಲ್ಲಿಯೇ ಎಂಬುವುದು ಮರೆಯುವಂತಿಲ್ಲ. ಹಿರಿಯೂರು ಮತ್ತು ಪಾವಗಡ ಬೆಟ್ಟ ಶ್ರೇಣಿಗಳಿಂದ ಕೂಡಿದ ಪ್ರದೇಶಗಳ ಮಧ್ಯೆ ರಾಷ್ಟ್ರೀಯ ಹೆದ್ದಾರಿ-೪ ರಚನೆಯಾಗಿದೆ. ಮೊಳಕಾಲ್ಮೂರು ಹಾಗೂ ಚಳ್ಳಕೆರೆ ತಾಲೂಕು ಬೆಟ್ಟಗಳ ತಪ್ಪಲಿನಲ್ಲಿ ಬಳ್ಳಾರಿ ರಾಜ್ಯ ಹೆದ್ದಾರಿ ರಚನೆಯಾಗಿದೆ. ಜಗಳೂರು, ಚಿತ್ರದುರ್ಗದ ಬೆಟ್ಟ ಶ್ರೇಣಿಗಳು ಸೇರುವ ಸ್ಥಳಗಳಲ್ಲಿ ರಾಷ್ಟ್ರೀಯ ಹೆದ್ದಾರಿ-೧೩ ರಚನೆಯಾಗಿದೆ. ದಾವಣಗೆರೆ ಮಾರ್ಗವನ್ನು ನೋಡಿದಾಗ ಚಿತ್ರದುರ್ಗ, ಹೊಳಲ್ಕೆರೆ ಬೆಟ್ಟ ಶ್ರೇಣಿಗಳ ತಪ್ಪಲಿನಲ್ಲಿಯೇ ದಾವಣಗೆರೆ ಮಾರ್ಗ ರಚನೆಯಾಗಿದ್ದು, ಇದು ಪ್ರಾಚೀನ ಕಾಲದಿಂದಲೂ ಭೌಗೋಳಿಕವಾಗಿ ಐಕ್ಯವಾಗಿರುವ ಸ್ಥಳವಾಗಿರುವುದರಿಂದ ಈ ಸ್ಥಳದಲ್ಲಿ ಆದಿ ಮಾನವ ಹಾಗೂ ಪ್ರಭುತ್ವಗಳು ರಚನೆಯಾಗಿವೆ. ಇದಕ್ಕೆ ಉದಾಹರಣೆ ಎಂಬಂತೆ ಚಂದ್ರವಳ್ಳಿಯು ಕ್ರಿ.ಪೂ.೩ನೇ ಶತಮಾನದಲ್ಲಿಯೇ ಅದೊಂದು ವ್ಯಾಪಾರಿ ಕೇಂದ್ರವಾಗಿದ್ದು ಇದೇ ಹಿನ್ನೆಲೆಯೇ. ಬೆಟ್ಟದ ಅಂಚಿನ ಪ್ರದೇಶದಲ್ಲಿ ವಸತಿ ನೆಲೆಗಳು ರಚನೆಯಾಗಿದ್ದು, ಅದು ಕಣಿವೆಯ ಮಾರ್ಗಗಳಲ್ಲಿ ರಸ್ತೆ ಸಂಚಾರಗಳು ನಡೆಯುತ್ತಿದ್ದ ಭೌಗೋಳಿಕ ಅಂಶಗಳು ಗೋಚರಿಸುತ್ತವೆ.[೭]

**ಚಿತ್ರದುರ್ಗ ಪ್ರದೇಶದ ಖನಿಜೋದ್ಯಮ**

ಭೂಮಿಯ ಮೇಲೆ ಮಾನವನ ಉದಯವಾದಾಗಿನಿಂದ ಇಂದಿನವರೆಗೆ ಅವನ ನಾಗರಿಕತೆಯ ಬೆಳವಣಿಗೆಗೆ ನೈಸರ್ಗಿಕ ಸಂಪತ್ತುಗಳಾದ ಮಣ್ಣು, ಜಲ ಮತ್ತು ಖನಿಜಗಳು ಮೂಲಾಧಾರಗಳು. ಈ ಮಾತು ಭೂಮಿಯ ಮೇಲಿನ ಯಾವುದೇ ಭಾಗದ ಜನರಿಗೂ ಅನ್ವಯವಾಗುತ್ತದೆ. ಹಾಗೆಯೇ ಚಿತ್ರದುರ್ಗ ಪರಿಸರಕ್ಕೂ ಅನ್ವಯಿಸುತ್ತದೆ.[೮]

ಕರ್ನಾಟಕ ರಾಜ್ಯದಲ್ಲಿಯೇ ಅತ್ಯಂತ ಕಡಿಮೆ ಮಳೆ ಬೀಳುವ ಪ್ರದೇಶ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ನಾಯಕನಹಟ್ಟಿ ಎಂದು ಗುರುತಿಸಲಾಗಿದೆ. ಈ ಜಿಲ್ಲೆಯಲ್ಲಿ ದಾವಣಗೆರೆ, ಹೊಳಲ್ಕೆರೆ, ಹೊಸದುರ್ಗ ತಾಲೂಕುಗಳು ಅರೆ ಮಲೆನಾಡಿನ ವಾತಾವರಣವನ್ನು ಪಡೆದಿವೆ. ಅರೆ ಮಲೆನಾಡು ಪ್ರದೇಶವು ಮಲೆನಾಡು ಪ್ರದೇಶಗಳಾದ ಶಿವಮೊಗ್ಗ, ಚಿಕ್ಕಮಗಳೂರು, ಹಾಸನ ಜಿಲ್ಲಾ ಪ್ರದೇಶಗಳು ಮಲೆನಾಡು ಪ್ರದೇಶಗಳಾಗಿದ್ದು, ಈ ಜಿಲ್ಲೆಗಳ ಅಂಚಿಗೆ ಅರೆ ಮಲೆನಾಡು ಎಂದೇ ಕರೆಯಲಾಗುವ ಹೊಳಲ್ಕೆರೆ ತಾಲ್ಲೂಕು ಮಲೆನಾಡಿನ ಅಂಚಿಗೆ ತಾಗಿರುವುದರಿಂದ ಇಡೀ ತಾಲ್ಲೂಕಿನ ಹವಾಗುಣ ಮಲೆನಾಡನ್ನು ನೆನಪಿಸುತ್ತದೆ. ಮೈದಾನ ಪ್ರದೇಶವೂ ಆಗಿರುವುದರಿಂದ ಸಮಶೀತೋಷ್ಣ ಹವಾಮಾನವಿದ್ದು ಅತೀ ಚಳಿ, ಅತೀ ಬಿಸಿಲು ಕಂಡುಬರದೆ ಹಿತಕರವಾಗಿದ ಹವಾಮಾನ ಹೊಂದಿದೆ. ಹಾಗೆಯೇ ಅರೆ ಬೆಂಗಾಡಿನ ವಾತವರಣವು ಈ ಜಿಲ್ಲೆಯಲ್ಲಿ ಕಂಡು ಬಂದಿದ್ದು, ಈ ಪ್ರದೇಶಗಳು ಹೆಚ್ಚಾಗಿ ಕುರುಚಲು ಸಸ್ಯ ಮರ ಸಂಪತ್ತು ಹೊಂದಿದ್ದು, ಕಡಿಮೆ ಪ್ರಮಾಣದ ಫಲವತ್ತಾದ ಭೂಪ್ರದೇಶವನ್ನು ಹೊಂದಿರುವುದರಿಂದ ಹಾಗೂ ಹೆಚ್ಚು ಬಿಸಿಲು, ಕಡಿಮೆ ಮಳೆಬೀಳುವ ಪ್ರದೇಶಗಳನ್ನು ಹೊಂದಿದೆ. ಚಳ್ಳಕೆರೆ, ಮೊಳಕಾಲ್ಮೂರು, ಚಿತ್ರದುರ್ಗ ಅರೆ ಬೆಂಗಾಡಿನ ವಾತಾವರಣವನ್ನು ಹೊಂದಿವೆ. ಚಿತ್ರದುರ್ಗ ಜಿಲ್ಲೆಯ ಶಿಲಾ ಸಮುದಾಯವನ್ನು ಸ್ಥೂಲವಾಗಿ ಎರಡು ಗುಂಪುಗಳನ್ನಾಗಿ ವರ್ಗೀಕರಿಸಬಹುದು. ಒಂದು ಕಣಶಿಲಾ ಸಮುದಾಯ ಇನ್ನೊಂದು ಪದದ ಶಿಲೆ ಅಥವಾ ಹಸಿರು ಶಿಲಾ ಸಮುದಾಯ, ಕಣಶಿಲೆಯ ಬೆಟ್ಟಗಳು ಎತ್ತರವಾಗಿದ್ದು ವರುಟು ಬಂಡೆಗಳಿಂದಾಗಿರುವ ಭೂ. ಆಕೃತಿಯನ್ನು ಹೊಂದಿವೆ. ಪದರಶಿಲಾ ಬೆಟ್ಟಗಳು ತುಲನಾತ್ಮಕವಾಗಿ ಎತ್ತರವಾಗಿಲ್ಲ ಮತ್ತು ನುಣುಪು ಭೂ ಆಕೃತಿಯನ್ನು ಹೊಂದಿವೆ. ಈ ಶಿಲಾ ಸಮುದಾಯಗಳ ಜನನ, ಚಲನೆ ಇತ್ಯಾದಿ ಭೂ ವೈಜ್ಞಾನಿಕ ಕ್ರಿಯೆಗಳು ಈ ಜಿಲ್ಲೆಯಲ್ಲಿ ಸಿಗುವ ಹಲವಾರು ಖನಿಜಗಳಿಗೆ ಕಾರಣ. ಆದ್ದರಿಂದ ಈ ಜಿಲ್ಲೆಯಲ್ಲಿ ಪುರಾತನ ಕಾಲದಿಂದಲೂ ಖನಿಜಗಳನ್ನು ಮನವನು ಬಳಸುತ್ತಾ ಬಂದಿದ್ದಾನೆ. ಗಣಿಗಾರಿಕೆ ಮತ್ತು ಖನಿಜೋದ್ಯಮದ ಪ್ರಾಚೀನತೆಯ ಅರಿವಾಗಬೇಕಾದರೆ ಇಲ್ಲಿನ ಖನಿಜ ಸಂಪತ್ತಿನ ಸ್ಥೂಲ ಪರಿಚಯ ಅವಶ್ಯಕ.

**ಖನಿಜ ಸಂಪತ್ತು**

ಕರ್ನಾಟಕದ ಭೂ ಭಾಗವು ಮುಖ್ಯವಾಗಿ ಅರ್ಷೇಯ ಯುಗಕ್ಕೆ ಸೇರಿದ್ದು ನೈಸ್ ಮತ್ತು ಶಿಸ್ಟ್ ಎಂಬ ಶಿಲೆಗಳಿಂದ ಕೂಡಿದೆ. ಶಿಸ್ಟೆಂಬ ಪದರಗಳಿಂದ ಕೂಡಿದ ಶಿಲೆಗಳು ೯,೦೦೦ ಚದರ ಮೈಲಿಗಳನ್ನು ಮತ್ತು ಗ್ರಾನೈಟ್‌ನಿಂದ ಒಡಗೂಡಿದ ನೈಸ್‌ಗಳು ೫೦,೦೦೦ ಚ.ಮೈ.ಗಳನ್ನು ಆವರಿಸಿವೆ.[೯] ಸಾಮಾನ್ಯವಾಗಿ ಚಿತ್ರದುರ್ಗ ಪ್ರದೇಶದಲ್ಲಿ ಕಾಣಬರುವ ಬೆಟ್ಟಪಂಕ್ತಿಗಳಲ್ಲಿ ಗ್ರಾನೈಟ್ ಕಣಶಿಲೆ ಕಾಣಬಹುದು ಕೆಲವೇಳೆ ಕ್ವಾರ್ಟ್ಸೈಟ್‌ಗಳು, ಶಿಷ್ಟ್‌ಗಳು, ಗ್ರವ್ಯಾಕಿ ಶಿಲೆಗಳು, ಫಿಲ್ಲೈಟ್‌ಗಳು ಹಾಗೂ ಜೇಡುಶಿಲೆಗಳು ಕಂಡುಬರುತ್ತವೆ. ಒಟ್ಟಿನಲ್ಲಿ ಪ್ರಪಂಚದ ಕೇವಲ ಒಂಬತ್ತು ಭೂ ವಲಯಗಳಿಗೆ ಸಿಮಿತವಾದ ಅತ್ಯಂತ ಹಳೆಯ ಶಿಲೆಯೂ ಈ ಜಿಲ್ಲೆಯಲ್ಲಿ ದೊರೆಯುತ್ತದೆ.[೧೦]

**ಚಿನ್ನ**

ಚಿನ್ನ ಮಾನವನಿಗೆ ಬಹು ಪುರಾತನ ಕಾಲದಲ್ಲೇ ಪರಿಚಯವಾದ ಲೋಹಗಳಲ್ಲಿ ಒಂದು. ಚಿನ್ನ ದಾವಣಗೆರೆ ತಾಲೂಕಿನ ಹಳೆಕಲ್ಲು, ಜಗಳೂರ ತಾಲೂಕಿನ ಹೊನ್ನಮರಡಿ, ಚಿತ್ರದುರ್ಗ ತಾಲೂಕಿನ

ಗೋಣೂರು ಮತ್ತು ಗುಡ್ಡದ ರಂಗವ್ವನಹಳ್ಳಿ, ಹಿರಿಯೂರು ತಾಲೂಕಿನ ಆನೆಸಿದ್ರಿ, ದಿಂಡಾವರ ಹಾಗೂ ವಾಣಿವಿಲಾಸ ಸಾಗರದ ಹತ್ತಿರ ಇರುವ ಬೋದಿಮರಡಿ,[೧೧] ಜಾವನಹಳ್ಳಿ[೧೨] ಎಂಬ ಹಳ್ಳಿಗಳ ಬಳಿ ಪುರಾತನ ಕಾಲದ ಕುಣಿಗಳಿಂದ ಇವು ಚಿನ್ನದ ಗಣಿಗಾರಿಕೆಯ ಕುರುಹುಗಳನ್ನು ಪತ್ತೆಹಚ್ಚಲಾಗಿದೆ. ಹಿಂದೆ ಈ ಪ್ರದೇಶಗಳಲ್ಲಿ ಹರಿಯುವ ಹಳ್ಳಗಳ ಮರಳಿನಲ್ಲಿ ಜಾಲಗಾರರು ಬಂಗಾರವನ್ನು ಜಾಲಿಸಿ ಪಡೆಯುವ ಸಂಪ್ರದಾಯ ಬಹು ಹಿಂದಿನಿಂದಲೂ ನಡೆದು ಬಂದಿದೆ. ಆದರೆ ಇತ್ತೀಚೆಗೆ ಈ ಜಾಲಿಸುವ ಕೆಲಸ ನಿಂತುಹೋಗಿದೆ.[೧೩]

ಇತ್ತೀಚೆಗೆ ಕೇಂದ್ರ ಸರ್ಕಾರ ಭಾರತೀಯ ಭೂ ಸರ್ವೇಕ್ಷಣಾ ಇಲಾಖೆಯಿಂದ ಗುಡ್ಡದ ರಂಗವ್ವಹಳ್ಳಿಯಲ್ಲಿ ಸರ್ವೇಕ್ಷಣೆ ನಡೆಸಿ ಚಿನ್ನದ ಸ್ಥರಗಳನ್ನು ಪತ್ತೆ ಹಚ್ಚಿದ್ದಾರೆ.[೧೪] ಈ ಪ್ರದೇಶಗಳಲ್ಲಿ ಗಣಿಗಾರಿಕೆಯನ್ನು ಯಾವ ಕಾಲದಲ್ಲಿ ಯಾರು ಮಾಡಿದರು ಎಂಬ ಬಗ್ಗೆ ನಿಖರವಾದ ಅಧ್ಯಯನ ಮಾಡಿಲ್ಲವಾದ್ದರಿಂದ ಇದರ ಪ್ರಾಚೀನ ಇತಿಹಾಸ ಸರಿಯಾಗಿ ತಿಳಿದುಬಂದಿಲ್ಲ. ನಮ್ಮ ರಾಜ್ಯದ ಇತರೆಡೆಗಳಲ್ಲಿ ನಡೆಸಿದ ಅಧ್ಯಯನದ ಆಧಾರದ ಮೇಲೆ ಈ ಜಿಲ್ಲೆಯಲ್ಲಿಯೂ ಕ್ರಿಸ್ತಪೂರ್ವ ಕಾಲದಲ್ಲೇ ಚಿನ್ನಕ್ಕಾಗಿ ಗಣಿಗಾರಿಕೆ ನಡೆದಿತ್ತು ಎಂದು ಊಹಿಸಬಹುದಾಗಿದೆ.

ಚಿನ್ನದ ಗಣಿಗಾರಿಕೆಗೆ ಸಂಬಂಧಿಸಿದಂತೆ ಒಂದು ಶಾಸನವು ಪ್ರಮುಖ ಉಲ್ಲೇಖವನ್ನು ನೀಡುತ್ತದೆ. ಕ್ರಿ.ಶ.೧೩೩೮ರ ಶಾಸನದಲ್ಲಿ ಚಿಮ್ಮತ್ತನಕಲ್ಲ ಪಟ್ಟಣಸ್ವಾಮಿ ಸೋಮಸೆಟ್ಟಿಯ ಉಲ್ಲೇಖವಿದೆ. ಚಿನ್ನದ ಗಣಿ ಈ ಪ್ರಾಂತ್ಯದಲ್ಲಿದ್ದುದರಿಂದ ಹಾಗೂ ಅದರ ಉಸ್ತುವಾರಿಯನ್ನು ಚವುಡಸೆಟ್ಟಿ ನೋಡಿಕೊಳ್ಳುತ್ತಿದ್ದಿರಬಹುದು. ಯಾವ ಪ್ರಮಾಣದಲ್ಲಿ ಚಿನ್ನ ದೊರೆಯುತ್ತಿತ್ತೆಂಬ ಬಗ್ಗೆ ನಮಗೆ ದಾಖಲೆ ದೊರೆಯುವುದಿಲ್ಲ. ಕೇವಲ ಹೆಸರಿನ ಸಾಮ್ಯದಿಂದ ಚಿನ್ನದ ಗಣಿ ಈ ಜಿಲ್ಲೆಯಲ್ಲಿತ್ತೆಂದು ತೀರ್ಮಾನಕ್ಕೆ ಬರಲಾಗಿದೆ.[೧೫]

**ಕಬ್ಬಿಣದ ಅದಿರು**

ಚಿತ್ರದುರ್ಗ ಪ್ರದೇಶದಲ್ಲಿ ಹೆಮಟೈಟಿನ ಬೆಣಚುಕಲ್ಲಿನ ಕಬ್ಬಿಣದ ಅದಿರು ಸಿಗುತ್ತದೆ. ಕಬ್ಬಿಣಾಂಶವು ಈ ಶಿಲಾಸ್ತರದಲ್ಲಿ ಸಂಚಯನಗೊಂಡಾಗ ಹೆಮಟೈಟಿನ ಅದಿರು ಸಿಗುತ್ತದೆ. ಹೊಸದುರ್ಗ, ಚಿತ್ರದುರ್ಗ, ದಾವಣಗೆರೆ ಮತ್ತು ಚಳ್ಳಕೆರೆ ತಾಲೂಕಿನ ಕೆಲವು ಗ್ರಾಮಗಳಲ್ಲಿ ಕಬ್ಬಿಣದ ಅದಿರು ಸಿಗುತ್ತದೆ. ಕುದುರೆ ಕಣಿವೆ ಕಾವಲ್, ಭೀಮಸಮುದ್ರ, ಮೆದೆಕೆರಿಪುರ, ವಜ್ರ, ಲಕ್ಕಿಹಳ್ಳಿ, ಮರೇನಹಳ್ಳಿ, ಕೆಂಕೆರೆ[೧೬] ಹನುಮನಕಟ್ಟೆ, ಕರೇಕಲ್ಲುಗುಡ್ಡ, ಬೋಡಿಮರಡಿ.[೧೭]

ಈ ಪ್ರದೇಶಗಳಲ್ಲಿ ಉತ್ತಮ ಗುಣಮಟ್ಟದ ಕಬ್ಬಿಣದ ಅದಿರು ಸಿಗುತ್ತದೆ. ಈ ಅದಿರಿನಲ್ಲಿ ಸರಾಸರಿ ಶೇಕಡಾ ೬೫ರಷ್ಟು ಕಬ್ಬಿಣಾಂಶ ಇದೆ. ಬಹು ಹಿಂದಿನ ಕಾಲದಿಂದಲೂ ಕಬ್ಬಿಣವನ್ನು ಉತ್ಪಾದಿಸಲು ಈ ಅದಿರನ್ನು ಉಪಯೋಗಿಸುತ್ತ ಬರಲಾಗಿದೆ.[೧೮]

**ಮ್ಯಾಂಗನೀಸ್ ಅದಿರು**

ಸಾಮಾನ್ಯವಾಗಿ ಮ್ಯಾಂಗನೀಸ್ ಅದಿರುಗಳು ಕಬ್ಬಿಣದ ಅದಿರುಗಳೊಂದಿಗೆ ದೊರೆಯುತ್ತವೆ.[೧೯] ಮ್ಯಾಂಗನೀಸ್ ಅದಿರು ಈ ಜಿಲ್ಲೆಯ ಚಿತ್ರದುರ್ಗ, ಹಿರಿಯೂರು, ಹೊಸದುರ್ಗ, ಜಗಳೂರು, ಹೊಳಲ್ಕೆರೆ ಮತ್ತು ದಾವಣಗೆರೆಯ ಪ್ರದೇಶಗಳಲ್ಲಿ ಸಿಗುತ್ತದೆ. ಈ ಅದಿರಿನಲ್ಲಿ ಮ್ಯಾಂಗನೀಸ್ ಅಂಶವು ಶೇಕಡಾ ೨೦ ರಿಂದ ೩೬ರವರೆಗೆ ಇದೆ. ಮ್ಯಾಂಗನೀಸ್‌ನ ಪ್ರಮುಖ ನಿಕ್ಷೇಪಗಳು ದಾವಣಗೆರೆ

ತಾಲೂಕಿನ ಹುಲಿಕಟ್ಟೆ, ಹೊಳಲ್ಕೆರೆ ತಾಲೂಕಿನ ಕೇಶಾಪುರ, ಹನುಮನಕಟ್ಟೆ, ಮಹಾದೇವಪುರ, ಶಿವಗಂಗಾ, ಹೊಸದುರ್ಗ ತಾಲೂಕಿನ ಕರೆಕಲ್ಲುಗುಡ್ಡ, ಕೆಂಕೆರೆ, ಮಾಡದಕೆರೆ, ಮಲ್ಲಾಪುರ, ಲಕ್ಕಿಹಳ್ಳಿ ಕುದುರೆ ಕಣಿವೆಯ ಅರಣ್ಯ ಪ್ರದೇಶಗಳಲ್ಲಿ ದೊರೆಯುತ್ತದೆ.[೨೦]

**ಸುಣ್ಣದಕಲ್ಲು ಮತ್ತು ಡಾಲೋಮೈಟ್**

ಹೆಚ್ಚಿನ ಕ್ಯಾಲ್ಸಿಯಂ ಇರುವ ಸುಣ್ಣದ ಕಲ್ಲು, ಸಿಲಿಕಾ ಇರುವ ಸುಣ್ಣದ ಕಲ್ಲು ಮತ್ತು ಡಾಲೋಮೈಟ್ ಖನಿಜ ಈ ಜಿಲ್ಲೆಯಲ್ಲಿ ಹಲವಾರು ಸ್ಥಳಗಳಲ್ಲಿ ಲಭ್ಯವಿದೆ.[೨೧] ಸುಣ್ಣ ಶಿಲೆಯ ಸ್ತರಗಳು ಚಿಕ್ಕಬ್ಯಾಲಕೆರೆ, ಜೋಡಿಮರಡಿ, ಹೊರಕೆರೆದೇವರಪುರ, ಓಬ್ಳಾಲಿ ಹಾಗೂ ಜವಗೊಂಡನಹಳ್ಳಿಗಳಲ್ಲಿ ಹೆಚ್ಚು ಕ್ಯಾಲ್ಸಿಯಂಯುಕ್ತ ಸುಣ್ಣಶಿಲೆ ಕಂಡುಬರುತ್ತದೆ.[೨೨]

**ತಾಮ್ರದ ಅದಿರು**

ಹೈರೈಟಸ್ ಮತ್ತು ಚಾಲ್ಕೋ ಪೈರೇಟ್ ಖನಿಜಗಳು ಇಂಗಳದಾಳಿನ ಬೆಳ್ಳಿಗುಡ್ಡದಲ್ಲಿ ಸಿಗುತ್ತವೆ. ಕ್ರಿ.ಶ.೧೮೮೬ರಲ್ಲಿ ಬ್ರೂಸ್‌ಪುಟ್ ಅವರು ಇವುಗಳನ್ನು ಪತ್ತೆ ಹಚ್ಚಿದ್ದರು. ಇಲ್ಲಿರುವ ಹಲವಾರು ಕುಣಿಗಳು ಮತ್ತು ಕಿಟ್ಟಗಳ ಗುಡ್ಡೆಗಳನ್ನು ನೋಡಿದರೆ ಈ ಪ್ರದೇಶದಲ್ಲಿ ಪುರಾತನ ಕಾಲದಲ್ಲಿ ತಾಮ್ರದ ಗಣಿಗಾರಿಕೆ ನಡೆದಿತ್ತು ಎಂಬುದಕ್ಕೆ ಸಂಶಯವಿಲ್ಲ. ಬ್ರೂಸ್‌ಪುಟ್ ಅವರು ಇಲ್ಲಿ ಟಿಪ್ಪು ಸುಲ್ತಾನನ ಕಾಲದಲ್ಲಿ ಬಂಗಾರಕ್ಕಾಗಿ ಗಣಿಗಾರಿಕೆಯನ್ನು ನಡೆಸಲಾಗಿತ್ತು ಎಂದು ಹೇಳಿದ್ದಾರೆ. ಆದರೆ ಇದು ಸತ್ಯಕ್ಕೆ ದೂರವಾದ ಸಂಗತಿಯಾಗಿದೆ.[೨೩]

ಮೇಲ್ಕಾಣಿಸಿದ ಪ್ರಮುಖ ಖನಿಜಗಳಲ್ಲದೆ ಚಿತ್ರದುರ್ಗ ಪ್ರದೇಶದಲ್ಲಿ ಎರಕದ ಮರಳು, ಬೆಣಚು, ಬಳಪದ ಕಲ್ಲು, ಹಸಿರು ಕಲ್ಲು, ಕಯಾನೈಟ್ ಮತ್ತು ಸುಣ್ಣ ಉಂಡೆಗಳು ಅಲ್ಲಲ್ಲಿ ಗಣನೀಯ ಪ್ರಮಾಣದಲ್ಲಿ ಕಂಡುಬರುತ್ತವೆ.

**ಕೃಷಿ ಭೂಮಿ, ನೀರಾವರಿ, ಅರಣ್ಯ-ಪ್ರಾಣಿ ಸಂಪತ್ತು**

ವ್ಯವಸಾಯವು ಸಾಮಾಜಿಕ ಜೀವನದಲ್ಲಿ ಮತ್ತೊಂದು ಹೊಸ ಪರಿಕಲ್ಪನೆಯನ್ನು ಪರಿಚಯಿಸಿತ್ತು. ಕೆಲಸದ ಪರಿಕಲ್ಪನೆ, ಬೇಟೆ ಸಂಸ್ಕೃತಿಯ ದಿನಗಳಲ್ಲಿ ಕೆಲಸವನ್ನು ಜೀವನದ ಇತರ ಸಂಗತಿಗಳಿಗಿಂತ ವಿಭಿನ್ನ ಎಂದು ಪರಿಗಣಿಸಿರಲಿಲ್ಲ. ಕೆಲಸಗಳು ಅವುಗಳ ಫಲಿತಾಂಶಗಳೊಂದಿಗೆ ನಿಕಟ ಸಂಬಂಧ ಹೊಂದಿದ್ದವು.[೨೪] ತಾನು ಆಹಾರಕ್ಕಾಗಿ ಬೇಟೆಯಾಡುವ ಮತ್ತು ತಾನು ತನ್ನವರು ಅದನ್ನು ಸಾಧ್ಯವಾದಷ್ಟೂ ಬೇಗ ತಿನ್ನುವೆವು ಎಂಬ ಮನೋಭಾವ. ಆದರೆ ವ್ಯವಸಾಯದಲ್ಲಿ ಮಾಡುವ ಕೆಲಸಕ್ಕೂ, ಅದು ನೀಡುವ ಫಲಕ್ಕೂ ಸಾಕಷ್ಟು ಸಮಯಾವಕಾಶ ಇರುತ್ತದೆ. ಅದರ ಜೊತೆಗೆ ಅನೇಕ ಕ್ರಿಯೆಗಳು ಬೇಸರ ತರಿಸುವಂಥವು ಹಾಗೂ ದಣಿವುಕಾರಕ. ಅಲ್ಲದೆ ಬೇಟೆಯಲ್ಲಿ ಸಿಗುವ ಭಾವೋದ್ರೇಕವೂ ಇಲ್ಲ. ಆಹಾರ ಪೂರೈಕೆ ಖಚಿತವಾದದ್ದು ನಿಜ. ಆದರೆ ಅದ್ಭುತವಾದ ಬೇಟೆಯ ಸಾಧ್ಯತೆ ಮತ್ತು ದೊಡ್ಡ ಔತಣಕೂಟಗಳು ಇಲ್ಲವಾದವು. ಹಾಗೆ ನೋಡಿದರೆ ಬೇಟೆಗಾರಿಕೆಯಿಂದ ವ್ಯವಸಾಯಕ್ಕೆ ನಡೆದ ಸ್ಥಿತ್ಯಂತರವು ನಾವೀಗ ವಾಸ್ತವವಾಗಿ ತಿಳಿದುಕೊಂಡಂತೆ ಅಂದರೆ ಸರಳವಾದ ಅಥವಾ ಸಂತಸದಾಯಕವಾದ ಬೇಟೆಗಾರಿಕೆಯನ್ನು ತ್ಯಜಿಸಿ, ಆಹಾರ ಸಂಪಾದನೆಗೆ ಬೆವರು ಸುರಿಸುವಂತಹ ಕಾರ್ಯವನ್ನು ಕೈಗೊಳ್ಳಲಾಯಿತು.[೨೫]

ಕೃಷಿಯೋಗ್ಯವಾದ ಫಲವತ್ತಾದ ಭೂಮಿ ಚಿತ್ರದುರ್ಗ ಪರಿಸರದ ಕೆಲವು ಭಾಗಗಳಲ್ಲಿ ಇದೆ. ಇಲ್ಲಿ ಎರೆ, ಕೆಂಗಲು ಮತ್ತು ಕಲ್ ಮರಡಿಯೆಂಬ ಮೂರು ರೀತಿಯ ನೆಲವಿದೆ. ಇದರಲ್ಲಿ ಎರೆ ನೆಲವಂತೂ ಅತ್ಯುತ್ತಮವಾಗಿದೆ. ಚಿತ್ರದುರ್ಗ ಸಮೀಪದ ಗಾರೆಹಟ್ಟಿಯಲ್ಲಿನ ಚೋಳೇಶ್ವರ ದೇವಸ್ಥಾನದ ಶಾಸನ ಮತ್ತು ವಿಜಯನಗರ ಕಾಲದ ಹಿರೇಗುಂಟನೂರು ಶಾಸನಗಳಲ್ಲಿ ಜಮೀನುಗಳನ್ನು ವರ್ಗೀಕರಿಸಿದ್ದಾರೆ. ಅವುಗಳೆಂದರೆ ಎರೆ, ಗದ್ದೆ, ಕನ್ನೆಲ ಮತ್ತು ತೋಟ ಇತ್ಯಾದಿಯಾಗಿ ದಾಖಲಿಸಲ್ಪಟ್ಟಿವೆ. ಚಿತ್ರದುರ್ಗ ಜಿಲ್ಲೆಯಲ್ಲಿ ನೀರಾವರಿ ಹೆಚ್ಚು ಇಲ್ಲದ ಕಾರಣ ಖುಷ್ಕಿ ಬೆಳೆಗಳನ್ನು ಹೆಚ್ಚಾಗಿ ಬೆಳೆಯಲಾಗುತ್ತದೆ. ಜೋಳ ಮತ್ತು ರಾಗಿ ಜಿಲ್ಲೆಯ ಮುಖ್ಯ ಬೆಳೆಗಳು.[೨೬] ಪ್ರಾಚೀನ ಕಾಲದಲ್ಲಿ ರಾಗಿ, ಜೋಳ, ನವಣೆ, ಹತ್ತಿ, ಎಣ್ಣೆ ಕಾಳು, ಹುರುಳಿ, ಹರಿಕ ಮುಂತಾದವನ್ನು ಕಾಡಾರಂಭದಲ್ಲೂ, ನೆಲ್ಲು (ಭತ್ತ), ವೀಳೈದೆಲೆ, ಅಡಿಕೆ, ಬಾಳೆ, ಆಲೇಕಬ್ಬು, ಮೆಣಸು, ಶುಂಠಿ ಮತ್ತು ಅರಿಸಿಣ ಮುಂತಾದವನ್ನು ನೀರಾರಂಭದಲ್ಲೂ ಬೆಳೆಯುತ್ತಿದ್ದರು.[೨೭] ಪ್ರಾಚೀನ ಕಾಲದಲ್ಲಿ ಈ ಪ್ರದೇಶದಲ್ಲಿ ಕೃಷಿ ಅಭಿವೃದ್ಧಿಗೆ ಕೆರೆ ನೀರಾವರಿ ಜೊತೆಗೆ ಕಪ್ಪಿಲೆ ಬಾವಿ ನೀರಾವರಿಗೂ ಗಮನಕೊಟ್ಟಿದ್ದರು. ಕಪ್ಪಿಲೆ ನೀರಾವರಿಯಲ್ಲಿ ರಾಗಿ, ಹತ್ತಿ, ತರಕಾರಿ ಮುಂತಾದ ತರಿಫಸಲು ಬೆಳೆಯುತ್ತಿದ್ದರು. ಹೊಸದುರ್ಗ ತಾಲೂಕಿನ ಬಾಗೂರು ತನ್ನ ವಿಶಿಷ್ಟ ಭತ್ತದ ಬೆಳೆಯಿಂದಾಗಿ 'ಸಣ್ಣಕ್ಕಿ ಬಾಗೂರು' ಎಂಬ ಹೆಸರನ್ನು ಅನ್ವರ್ಥವಾಗಿಸಿಕೊಂಡಿದ್ದಿತು. ಐಮಂಗಲದ ಕೆರೆಯ ಮಾಗಣಿಯಲ್ಲಿ ಬೆಳೆಯುತ್ತಿದ್ದ ವೀಳೆಯದೆಲೆ ತುಂಬಾ ಹೆಸರುವಾಸಿಯಾಗಿತ್ತು. ಪ್ರಸ್ತುತ ಭೀಮಸಮುದ್ರ ಅಡಿಕೆ ಬೆಳೆಗಳಿಂದ ಪ್ರಸಿದ್ದಿಯಾಗಿದೆ. ಆಗಿನ ಕಾಲದ ಬೆಳೆಗಳು ಮಳೆಯಾಧಾರಿತ ಕೃಷಿಯಿಂದಾಗಿ ಈಗಲೂ ಉಳಿದುಬಂದಿವೆ.[೨೮]

ಚಿತ್ರದುರ್ಗ ಪ್ರದೇಶದಲ್ಲಿ ಹೆಚ್ಚು ನೀರಾವರಿ ಪ್ರದೇಶ ಇಲ್ಲ. ಜಿಲ್ಲೆಯ ಪ್ರಮುಖ ನದಿ ವೇದಾವತಿಯಾಗಿದೆ. ವೇದ ಮತ್ತು ಆವತಿ ಎಂಬ ಎರಡು ಹೊಳೆಗಳು ಸೇರಿ ವೇದಾವತಿಯಾಗಿದೆ. ಈ ಜಿಲ್ಲೆಯಲ್ಲಿ ೬೦ರಿಂದ ೭೦ ಕಿ.ಮೀ. ಹರಿಯುವ ಈ ನದಿಯು ಹಿರಿಯೂರು ಮತ್ತು ಚಳ್ಳಕೆರೆ ಭಾಗದಲ್ಲಿ ಜನರಿಗೆ ಆಶಾಕಿರಣವಾಗಿದೆ. ಹಿರಿಯೂರು ತಾಲೂಕಿನ ಮಾರಿಕಣಿವೆಯಲ್ಲಿ ೧೯೦೭ರಲ್ಲಿ ಅಣೆಕಟ್ಟು ನಿರ್ಮಿಸಲಾಗಿದ್ದು ಇಂದು ಮಾರಿಕಣಿವೆ ಜಲಾಶಯವಾಗಿದೆ.[೨೯] ಚಿನ್ನಹಗರಿ (ಜನಗಿಹಳ್ಳ), ಸುವರ್ಣ ಮುಖಿ ನದಿಗಳು ಈ ಜಿಲ್ಲೆಯ ಇತರ ನದಿಗಳಾಗಿದ್ದು ಅಲ್ಪ-ಸ್ವಲ್ಪ ನೀರಾವರಿ ಸೌಲಭ್ಯವನ್ನು ಕಲ್ಪಿಸಿವೆ.[೩೦] ಈ ಜಿಲ್ಲೆಯಲ್ಲಿ ಸುಮಾರು ೨೮೨ ಕೆರೆಗಳಿವೆ. ಅವುಗಳಲ್ಲಿ ನಾಯಕರ ಕಾಲದಲ್ಲಿ ಹೆಚ್ಚು ಕೆರೆಗಳು ನಿರ್ಮಾಣವಾಗಿದ್ದು, ಬಿಚ್ಚುಗತ್ತಿ ಭರಮಣ್ಣ ನಾಯಕನು ಸುಮಾರು ೨೦ಕ್ಕೂ ಹೆಚ್ಚು ಕೆರೆಗಳನ್ನು ಕಟ್ಟಿಸಿ ರಾಜ್ಯವನ್ನು ಅಭಿವೃದ್ಧಿ ಪಡಿಸಿದನು.[೩೧] ಜಿನಗಿ ಹಳ್ಳಕ್ಕೆ ಅಡ್ಡಲಾಗಿ ಭಟ್ಟರಹಳ್ಳಿ, ಮಲ್ಲಳ್ಳಿ ಮತ್ತು ದೇವಸಮುದ್ರ ಕೆರೆಗಳನ್ನು ಕಟ್ಟಲಾಗಿದೆ. ಚಿತ್ರದುರ್ಗ ತಾಲೂಕಿನ ಭೀಮಸಮುದ್ರ, ಚಳ್ಳಕೆರೆ ತಾಲೂಕಿನ ರಾಣಿಕೆರೆ, ಹಿರೇಕೆರೆ, ಹಿರಿಯೂರು ತಾಲೂಕಿನ ಧರ್ಮಪುರ ಕೆರೆ, ಉಡುವಳ್ಳಿ ಕೆರೆ, ಭರಮಗಿರಿ ಕೆರೆ, ಹೊಳಲ್ಕೆರೆ ತಾಲೂಕಿನ ಮುತ್ತುಕದೂರ ಕೆರೆ, ಮೊಳಕಾಲ್ಮೂರು ತಾಲೂಕಿನ ರಂಗಯ್ಯನ ಜಲಾಶಯಗಳು ಈ ಜಿಲ್ಲೆಯ ದೊಡ್ಡ ಕೆರೆಗಳಾಗಿವೆ. ಈ ಕೆರೆಗಳು ಈ ಪ್ರದೇಶದಲ್ಲಿ ನೀರಾವರಿ ಸೌಲಭ್ಯಗಳನ್ನು ಒದಗಿಸಿವೆ.

ಅರಣ್ಯ ಸಂಪತ್ತಿನಲ್ಲಿ ಚಿತ್ರದುರ್ಗ ಜಿಲ್ಲೆಯು ಬೇರೆ ಜಿಲ್ಲೆಗಳಿಗಿಂತ ಹಿಂದುಳಿದಿದೆ. ಕಾರಣ ಈ ಜಿಲ್ಲೆಯಲ್ಲಿ ಮಳೆಯ ಪ್ರಮಾಣ ತುಂಬಾ ಕಡಿಮೆ ಇದೆ. ಹಾಗಾಗಿ ಜಿಲ್ಲೆಯಲ್ಲಿ ಒಟ್ಟು ೭೩೭೧೯ ಹೆಕ್ಟೇರ್ ಅರಣ್ಯ ಪ್ರದೇಶವಿದೆ. ಜಿಲ್ಲೆಯಲ್ಲಿ ಹುಣಸೆ, ಮಾವು, ಹಿಪ್ಪೆ, ಜಾಲಿ, ಸೀತಾಫಲ, ಕುರುಚಲು, ನೀಲಗಿರಿ, ಜಾಲಗಿರಿ, ಶ್ರೀಗಂಧ, ಮುತ್ತಂಗ, ಕಗ್ಗಲಿ, ತಂಗಟೆ, ಕಕ್ಕೆ ಹಲವು ಜಾತಿಯ ಮರಗಳಿವೆ. ಅರಣ್ಯ ಪ್ರದೇಶಗಳಲ್ಲಿ ವನ್ಯಮೃಗ ಪಕ್ಷಿಗಳನ್ನು ಕಾಣಬಹುದು. ಸಾಮಾನ್ಯವಾಗಿ ನರಿ, ತೋಳ, ಕಾಡುಹಂದಿ, ಕರಡಿ, ಕಾಡುಕೋಳಿ, ನವಿಲು, ಉಡ, ಮುಂಗುಸಿ, ಹಾವು, ಚೇಳು ಹಲವು ಜಾತಿಯ ಹುಳು ಸರೀಸೃಪಗಳು ಕಂಡುಬರುತ್ತದೆ. ಹಾಗಾಗ ಜಿಂಕೆ, ಚಿರತೆ, ಹೆಬ್ಬಾವು ಕಾಣುತ್ತವೆ. ಇದರ ಜೊತೆಗೆ ಗಿಳಿ, ಹದ್ದು, ಗಿಡುಗ, ಗೂಬೆ, ಕೋಗಿಲೆ, ಗೀಜಗ, ಕೊಕ್ಕರೆ, ಪೆಲಿಕಾರ್ನ್, ಗೊರವಂಕ, ಕಾಗೆ, ಮರಕುಟಿಗ ಮುಂತಾದ ಹತ್ತಾರು ವಿಧದ ಪಕ್ಷಿ–ಪ್ರಾಣಿಗಳು ಕಾಣಬಹುದು.[೩೨]

**೨.೨. ಪ್ರಾಕೃತಿಕ ಲಕ್ಷಣಗಳು**

ಇಂದಿನ ಚಿತ್ರದುರ್ಗ ಜಿಲ್ಲೆಯು ಭಾರತದಲ್ಲಿಯೇ ವಿಶಿಷ್ಟವಾದ ಪ್ರಾಕೃತಿಕ ಲಕ್ಷಣಗಳನ್ನು ಹೊಂದಿದೆ. ಚಿತ್ರದುರ್ಗ ಜಿಲ್ಲೆಯು ಕರ್ನಾಟಕದ ಮಧ್ಯರಂಗವನ್ನು ಹೊಂದಿರುವ ಕೇಂದ್ರವೆನಿಸಿದೆ. ೧೯೯೭ರಲ್ಲಿ ಜಿಲ್ಲಾ ಪುನರ್ ವಿಂಗಡಣೆಯಾದಾಗ ಈ ಜಿಲ್ಲೆಯ ದಾವಣಗೆರೆ, ಹರಿಹರ, ಜಗಳೂರು ತಾಲೂಕುಗಳು ದಾವಣಗೆರೆ ಜಿಲ್ಲೆಗೆ ಸೇರಿದವು. ಈ ಜಿಲ್ಲೆಯ ಮೇರೆಗಳೆಂದರೆ ಉತ್ತರಕ್ಕೆ ಗದಗ, ಬಳ್ಳಾರಿ, ಪೂರ್ವಕ್ಕೆ ಆಂಧ್ರಪ್ರದೇಶ, ಆಗ್ನೇಯ ದಿಕ್ಕಿಗೆ ತುಮಕೂರು, ಪಶ್ಚಿಮಕ್ಕೆ ಶಿವಮೊಗ್ಗ ಮತ್ತು ಹಾವೇರಿ ಜಿಲ್ಲೆಗಳು, ದಕ್ಷಿಣಕ್ಕೆ ಚಿಕ್ಕಮಗಳೂರು ಮತ್ತು ತುಮಕೂರು ಜಿಲ್ಲೆಗಳಿವೆ. ಜಿಲ್ಲೆಯ ಒಟ್ಟು ಭೂ ಪ್ರದೇಶ ೧೪.೩೪೩,೫೪ ಚ.ಕಿ.ಮೀ ವಿಸ್ತೀರ್ಣವಿದೆ. ಭೌಗೋಳಿಕವಾಗಿ ಈ ಜಿಲ್ಲೆಯ ಭೂ ಭಾಗ ಉತ್ತರ ಅಕ್ಷಾಂಶ ೧೩°೧೫' ರಿಂದ ೧೫°೨೦' ಅಕ್ಷಾಂಶದವರೆಗೂ, ಪೂರ್ವ ರೇಖಾಂಶ ೭೫°೩೧' ದಿಂದ ೭೭°೨೦'ರವರೆಗೂ ವ್ಯಾಪಿಸಿದೆ.[೩೩]

ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಪ್ರಾಚೀನ ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸುವುದರಿಂದ ಒಟ್ಟು ಒಂಬತ್ತು ತಾಲ್ಲೂಕುಗಳನ್ನು ಕಾಣಬಹುದು. ಅವುಗಳೆಂದರೆ ಚಿತ್ರದುರ್ಗ, ಹೊಳಲ್ಕೆರೆ, ಹಿರಿಯೂರು, ಮೊಳಕಾಲ್ಮೂರು, ಹೊಸದುರ್ಗ, ಚಳ್ಳಕೆರೆ, ದಾವಣಗೆರೆ, ಜಗಳೂರು, ಹರಿಹರ ತಾಲೂಕುಗಳು ೧೯೯೭ರ ಪೂರ್ವದಲ್ಲಿ ಇದ್ದವು. ಪ್ರಸ್ತುತ ಆರು ತಾಲೂಕುಗಳನ್ನು ಒಳಗೊಂಡಿದೆ.

ದಖ್ಖನ್ ಪ್ರಸ್ತಭೂಮಿಯಲ್ಲಿರುವ ಈ ಭೂ ಪ್ರದೇಶವು ಕೃಷ್ಣ ನದಿಯ ದಕ್ಷಿಣಕ್ಕಿದೆ. ಇಲ್ಲಿ ಹರಿಯುವ ತುಂಗಭದ್ರಾ ಮತ್ತು ಅದರ ಉಪನದಿಯಾದ ವೇದಾವತಿ ನದಿಗಳು ಅಂತಿಮವಾಗಿ ಕೃಷ್ಣ ನದಿಯನ್ನು ಸೇರುತ್ತವೆ. ದಾವಣಗೆರೆ ಜಿಲ್ಲೆಯ ಹೊನ್ನಾಳಿ, ಚನ್ನಗಿರಿ, ಹರಿಹರ ಮತ್ತು ಹರಪನಹಳ್ಳಿ ತಾಲೂಕುಗಳಲ್ಲಿ ಹರಿಯುವ ತುಂಗಭದ್ರಾನದಿಯು ಸುಮಾರು ಐವತ್ತು ಸಾವಿರ ಹೆಕ್ಟೇರ್ ಭೂ ಪ್ರದೇಶಕ್ಕೆ ನೀರನ್ನು ಒದಗಿಸುತ್ತದೆ. ಅದೇ ರೀತಿಯಾಗಿ ವೇದಾವತಿ ಮತ್ತು ಚಿನ್ನ ಹಗರಿ ನದಿ ಹರಿಯುತ್ತವೆ.[೩೪]

ಇಲ್ಲಿನ ಭೌಗೋಳಿಕ ಪ್ರದೇಶ ಬಯಲು ಹಾಗೂ ಸಮತಲದಲ್ಲಿರುವುದರಿಂದ ವರ್ಷದ ಬಹುಕಾಲ ಒಣಹವೆಯಿಂದ ಕೂಡಿರುತ್ತದೆ. ಜನವರಿ ಕೊನೆಯಿಂದ ಪ್ರಾರಂಭವಾಗುವ ಬೇಸಿಗೆಯ ತಾಪಮಾನ

ಮಾರ್ಚ್, ಏಪ್ರಿಲ್, ಮೇ ತಿಂಗಳಲ್ಲಿ ಹೆಚ್ಚಿರುತ್ತದೆ. ೭೭.೨° ಫ್ಯಾರಾನೇಟ್ ನಷ್ಟು ವರ್ಷದ ಸರಾಸರಿ ಉಷ್ಣಾಂಶವಿರುತ್ತದೆ. ಶೇಕಡಾ ೫೦ರಷ್ಟು ಸಾಪೇಕ್ಷ ಆರ್ದ್ರತೆಯು ಮಾರ್ಚ್ ತಿಂಗಳಲ್ಲಿರುತ್ತದೆ. ಆದರೆ ಜುಲೈ-ಆಗಸ್ಟ್, ಸೆಪ್ಟೆಂಬರ್‌ನಲ್ಲಿ ಹೆಚ್ಚು ಮಳೆಯಾಗಿ ಅಕ್ಟೋಬರ್‌ವರೆಗೂ ಮಳೆಬರುತ್ತದೆ. ಜಿಲ್ಲೆಯಲ್ಲಿ ಬೀಳುವ ಮಳೆಯ ಪ್ರಮಾಣ ವಾರ್ಷಿಕ ಸರಾಸರಿ ಪ್ರಮಾಣ ೪೮೬.೭ (೨೦೦೧)[೩೫] ಇದ್ದು, ಇಲ್ಲಿನ ಅರಣ್ಯವು ಕುರುಚಲು ಗಿಡಗಳಿಂದ ಹೆಚ್ಚು ಪ್ರದೇಶ ಆವರಿಸಿದೆ. ಜಿಲ್ಲೆಯ ಸಾಕ್ಷರತೆ ಪ್ರಮಾಣ ಒಟ್ಟು ೬೪.೫೦ನಷ್ಟಿದ್ದು ಮಹಿಳೆಯರು ೫೩.೮೦ನಷ್ಟು, ಪುರುಷರು ೭೪.೭೦ರಷ್ಟಿದೆ.[೩೬] ಜಿಲ್ಲೆಯಲ್ಲಿ ತೆಲುಗು, ಕನ್ನಡ, ಹಿಂದಿ, ಉರ್ದು, ಇಂಗ್ಲೀಷ್, ಮರಾಠಿ, ತಮಿಳು ಇನ್ನಿತರೆ ಭಾಷೆ ಮಾತನಾಡುವ ಜನರಿದ್ದು, ಹೆಚ್ಚು ಕನ್ನಡ ಮತ್ತು ತೆಲುಗು ಈ ಜಿಲ್ಲೆಯ ಪ್ರಮುಖ ಭಾಷೆಗಳಾಗಿ ಗುರುತಿಸಿಕೊಂಡಿವೆ.

ಒಟ್ಟಾರೆಯಾಗಿ ಹೇಳುವುದಾದರೆ ಚಿತ್ರದುರ್ಗ ಪ್ರದೇಶದ ಭೌಗೋಳಿಕತೆಯು ನೈಸರ್ಗಿಕವಾಗಿ ಅದೊಂದು ಬಯಲು ಪ್ರದೇಶವಾಗಿದ್ದರೂ, ಅಲ್ಲಿ ಪ್ರಾಚೀನ ಕಾಲದಿಂದಲೂ ಮಾನವನು ನೆಲೆನಿಂತಿರುವುದು ಕಂಡುಬರುತ್ತದೆ. ಪಾರಂಪರಿಕವಾಗಿ ಈ ಪ್ರದೇಶದಲ್ಲಿ ಪ್ರಭುತ್ವಗಳು ಆಳ್ವಿಕೆ ನಡೆಸಿವೆ. ಇಲ್ಲಿನ ಜನತೆ ಪ್ರಕೃತಿಗನುಗುಣವಾಗಿ ಬದುಕನ್ನು ಕಟ್ಟಿಕೊಂಡಿವೆ. ಇವೆಲ್ಲ ಸುಗಮವಾಗಲು ಕೃಷಿ, ವ್ಯಾಪಾರ, ಸಾರಿಗೆ ಸಂಪರ್ಕಗಳು ಉತ್ತಮ ಸ್ಥಿತಿಯಲ್ಲಿರುವುದೇ ಕಾರಣವಾಗಿದೆ. ಇದು ಪ್ರಸ್ತುತ ಕರ್ನಾಟಕ ರಾಜ್ಯದಲ್ಲಿ ಜಿಲ್ಲಾ ಕೇಂದ್ರ ಹಾಗೂ ಐತಿಹಾಸಿಕ ಪ್ರವಾಸಿ ತಾಣವಾಗಿ ಗುರುತಿಸಿಕೊಂಡು ತನ್ನ ಮಹತ್ವವನ್ನು ಇನ್ನಷ್ಟು ಹೆಚ್ಚಿಸಿಕೊಂಡಿದೆ.

**೨.೩. ಮಾನವ ಮತ್ತು ಪ್ರಕೃತಿ**

ಭೌಗೋಳಿಕ ಪರಿಸರ ರಚನೆಯಾದ ನಂತರ ಅಲ್ಲಿ ಮಾನವನು ತನ್ನ ನೆಲೆಗಳನ್ನು ಹುಡುಕುತ್ತಾ ತನ್ನ ಅನುಕೂಲಕ್ಕೆ ತಕ್ಕ ಭೌಗೋಳಿಕ ಪರಿಸರದಲ್ಲಿ ನೆಲೆನಿಂತಿರುವ ಕುರುಹುಗಳು ಅಪಾರವಾಗಿ ಕಂಡು ಬಂದಿವೆ. ಆದರೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಹೇಳುವಾಗ ಚಿತ್ರದುರ್ಗ ಪ್ರದೇಶವು ಗುಡ್ಡಗಾಡು ಪ್ರದೇಶವಾಗಿರುವ ಹಿನ್ನೆಲೆಯಲ್ಲಿ ಪ್ರಾಗೈತಿಹಾಸಿಕ ಕಾಲದಿಂದಲೂ ಮಾನವನು ಈ ಪ್ರದೇಶದಲ್ಲಿ ನೆಲೆಸಿರುವುದಕ್ಕೆ ಅನೇಕ ಪುರಾತತ್ವ ಸಂಶೋಧನೆ ಹಾಗೂ ಉತ್ಖನನದ ವರದಿಗಳು ಸಾಕ್ಷಿಕರಿಸಿವೆ. ಅಷ್ಟೆ ಅಲ್ಲದೆ ಈ ಪ್ರದೇಶವು ಪೌರಾಣಿಕ ಹಿನ್ನೆಲೆಯಲ್ಲಿ ಹಿಡಿಂಬ ಪಟ್ಟಣ ಎಂಬುದಾಗಿ ಐತಿಹ್ಯಗಳಿಂದಲೂ ಗುರುತಿಸಿಕೊಂಡಿದೆ. ಮಾನವನು ಒಂದು ಪ್ರದೇಶದಲ್ಲಿ ನೆಲೆ ನಿಲ್ಲಲು ಮೊದಲಿಗೆ ಆಹಾರ ನಂತರ ವಸತಿಗಳು ಅತೀ ಮುಖ್ಯವಾದವುಗಳು. ನಂತರ ಅವನು ಸಂಘ ಜೀವಿಯಾಗಿ ರಚನೆಯಾದ ಕಾಲಕ್ಕೆ ಕೃಷಿಯನ್ನು ಆರಂಭಿಸಿದ ಹಿನ್ನೆಲೆಯಲ್ಲಿ ಚಿತ್ರದುರ್ಗದ ಅನೇಕ ನೆಲೆಗಳಲ್ಲಿ ಆದಿ ಮಾನವನು ನೆಲೆನಿಂತಿದ್ದಾನೆ. ಅದೇ ರೀತಿಯಾಗಿ ಬೆಳವಣಿಗೆಯ ಹಂತಗಳನ್ನು ಗುರುತಿಸಲಾಗಿದೆ. ಚಿತ್ರದುರ್ಗ ಪ್ರದೇಶ ಪ್ರಸ್ತುತ ದಿನಗಳಲ್ಲಿ ಅದೊಂದು ರಾಜಕೀಯ ಹಾಗೂ ಆರ್ಥಿಕ ಚಟುವಟಿಕೆಗಳ ತಾಣವಾಗಿರುವಂತೆ ಪ್ರೇರೇಪಿಸಿರುವುದು ಅಲ್ಲಿನ ಭೌಗೋಳಿಕತೆ ಎಂಬುದನ್ನು ಮರೆಯುವಂತಿಲ್ಲ. ಅಲ್ಲದೆ ಮೌರ್ಯ ಶಾತವಾಹನರ ಕಾಲದಿಂದ ಇಂದಿನ ಜಿಲ್ಲಾ ಕೇಂದ್ರದ ಜೊತೆಗೆ ವ್ಯಾಪಾರ ಮಾರುಕಟ್ಟೆಯ ನೆಲೆಯಾಗಿ ರೂಪಗೊಳ್ಳುವಲ್ಲಿ ಭೌಗೋಳಿಕತೆಯ ಪಾತ್ರ ಗಮನೀಯವಾದದು. ನಾವು ಕೇವಲ ರಾಜಪ್ರಭುತ್ವದ ನೆಲೆಯಲ್ಲಿಯೇ ಹಲವು ಪ್ರದೇಶಗಳನ್ನು ಗುರುತಿಸಿಕೊಂಡು ಜನವಸತಿಗೆ

ಯೋಗ್ಯ ನೆಲೆ, ಕೃಷಿ, ವ್ಯಾಪಾರ, ಭೌಗೋಳಿಕತೆ ಫಲವತ್ತತೆ ಹಾಗೂ ಉತ್ತಮ ಹವಾಮಾನ ಮಾನವನಿಗೆ ಪೂರಕವಾದ ಪರಿಕರಗಳು ಇರುವ ಪ್ರದೇಶಗಳಲ್ಲಿ ಮಾನವನು ವಾಸವಾಗಿರುತ್ತಾನೆ. ಅದೇ ರೀತಿಯಾಗಿ ಚಿತ್ರದುರ್ಗ ಪರಿಸರದಲ್ಲಿ ಇಂತಹ ನೆಲೆಗಳು ಹೇರಳವಾಗಿ ದೊರಕಿವೆ.

ಚರಿತ್ರೆಯ ಉದ್ದಕ್ಕೂ ಕಾಣಸಿಗುವುದು ಪರಸ್ಪರ ಯುದ್ಧಗಳು. ಈ ಯುದ್ಧಗಳು ನಡೆಯುವುದು ಕೇವಲ ತಮ್ಮ ಪ್ರತಿಷ್ಠೆ, ಸೇಡು ಭಾವನೆಗಳಿಗೆ ನಡೆದಿರುವ ಯುದ್ಧಗಳ ಸಂಖ್ಯೆ ಅತೀ ಕಡಿಮೆ. ಬಹುಮುಖ್ಯವಾಗಿ ಭೌಗೋಳಿಕ ಸಂಪತ್ತು, ಫಲವತ್ತಾದ ಭೂಮಿ ಇರುವ ಪ್ರದೇಶಗಳಲ್ಲಿ ಹೆಚ್ಚು ಯುದ್ಧಗಳು ನಡೆದಿರುವುದು ನಾವು ಚರಿತ್ರೆಯ ಪುಟಗಳಲ್ಲಿ ಕಾಣಬಹುದಾಗಿದೆ.

ಮೌರ್ಯ ಸಾಮ್ರಾಜ್ಯವು ಕರ್ನಾಟಕದ ಹಲವು ಭಾಗಗಳನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಂಡು ಆಳ್ವಿಕೆ ಮಾಡಿರುವುದು ಶಾಸನ, ಪುರಾತತ್ವ ದಾಖಲೆಗಳಿಂದ ನಮಗೆ ತಿಳಿದು ಬರುತ್ತದೆ. ಅಶೋಕನು 'ಬ್ರಹ್ಮಗಿರಿ'ಯನ್ನು ಅಥವಾ 'ಇಸಿಲ' ಪಟ್ಟಣವನ್ನು ತನ್ನ ಭೌಗೋಳಿಕ ವ್ಯಾಪ್ತಿಯೊಳಗೆ ಸೇರಿಸಿಕೊಂಡಿದ್ದು ಅದೊಂದು ಬೌದ್ಧ ಕೇಂದ್ರ ಹಾಗೂ ವ್ಯಾಪಾರ ಕೇಂದ್ರವನ್ನಾಗಿ ಮಾಡಿಕೊಂಡಿರುವ ಮಾಹಿತಿಯು ಅಲ್ಲಿನ ಬ್ರಹ್ಮಗಿರಿಯ ಉತ್ಖನನ ಹಾಗೂ ಶಾಸನಗಳಿಂದ ತಿಳಿದುಬರುತ್ತದೆ. ನಂತರ ಚಂದ್ರವಳ್ಳಿಯು ದಕ್ಷಿಣ ಭಾರತದಲ್ಲಿಯೇ ಪ್ರಾಚೀನ ಕಾಲದ ಪ್ರಮುಖ ವ್ಯಾಪಾರ ಕೇಂದ್ರವಾಗಿದ್ದು, ಈ ಪ್ರದೇಶವು ಮೌರ್ಯರ ಆಡಳಿತಕ್ಕೆ ಒಳಪಟ್ಟ ಪ್ರದೇಶವಾಗಿತ್ತು. ನಂತರ ಶಾತವಾಹನರ ಕಾಲದಲ್ಲಿ ರೋಮ್, ಗ್ರೀಕ್, ಚೀನಿ ದೇಶಗಳೊಂದಿಗೆ ವ್ಯಾಪಾರ ಮಾಡುತ್ತಿರುವ ಅಂಶಗಳು ಅಲ್ಲಿ ದೊರೆತ ನಾಣ್ಯ, ಮಡಿಕೆ, ಕುಡಿಕೆ, ಮುತ್ತು, ಆಭರಣಗಳು ಹಾಗೂ ಇತರೆ ಪಳೆಯುಳಿಕೆಗಳಿಂದ ತಿಳಿದುಬರುತ್ತದೆ. ನಂತರದ ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ನೊಳಂಬರು, ಸೇವುಣರು, ಹೊಯ್ಸಳರು, ವಿಜಯನಗರ, ಚಿತ್ರದುರ್ಗ ನಾಯಕರ ಆಡಳಿತದ ನಂತರ ಮೈಸೂರು ಸಂಸ್ಥಾನದ ಅಧೀನಕ್ಕೆ ಒಳಪಡಬೇಕಾದರೆ ಅಲ್ಲಿನ ಭೌಗೋಳಿಕತೆಯ ಪಾತ್ರ ಅತೀ ಮುಖ್ಯವಾದುದು.

*** ಕಾಡು ಅಥವಾ ಬೆಟ್ಟ ಜೀವನ ಸಂಸ್ಕೃತಿ**

ಮಾನವನ ಆದಿ ಜೀವನೋಪಾಯದ ಹಂತದಲ್ಲಿ ಕಾಡು ಜೀವನ ಸಂಸ್ಕೃತಿಯನ್ನು ಗುರುತಿಸಬಹುದಾಗಿದೆ. ಆರಂಭಿಕ ಕಾಲದಲ್ಲಿ ಅಲೆಮಾರಿಯಾಗಿ ಸದಾ ಬೇಟೆ ಪ್ರವೃತಿಯನ್ನು ಹೊಂದಿದ್ದ ಮಾನವನು ಕಾಡನ್ನು ಅವಲಂಬಿಸಿ ಜೀವನ ನಡೆಸುತ್ತಿದ್ದನು. ಇಂತಹ ನೆಲೆಗಳನ್ನು ಆದಿ ಮಾನವನ ನೆಲೆಗಳಾಗಿ ಜಗಳೂರು, ಮೊಳಕಾಲ್ಮೂರು, ಹೊಸದುರ್ಗ, ಚಿತ್ರದುರ್ಗ, ಹೊಳಲ್ಕೆರೆ ಪರಿಸರದಲ್ಲಿ ಬೆಟ್ಟಸಾಲುಗಳನ್ನು ಹೊಂದಿದ್ದು, ಅವುಗಳ ತಪ್ಪಲಿನಲ್ಲಿ ಅಥವಾ ಬೆಟ್ಟದ ಇಳಿ ಅಂಚಿನಲ್ಲಿ ಆದಿ ಮಾನವನು ನೆಲೆ ನಿಂತಿರುವ ಅನೇಕ ಪುರಾತತ್ವ ನೆಲೆಗಳನ್ನು ಗುರುತಿಸಲಾಗಿದೆ. ಈ ರೀತಿಯಾಗಿ ಗುರುತಿಸಲ್ಪಟ್ಟ ನೆಲೆಗಳಲ್ಲಿ ಹಿರಿಯೂರು ತಾಲ್ಲೂಕಿನ ವೇದಾವತಿ ನದಿ ತೀರದ ಅನೇಕ ನೆಲೆಗಳು ಕಂಡುಬಂದಿದ್ದು, ಹೊಳಲ್ಕೆರೆ ತಾಲೂಕಿನ ಹಿರೇಕಂದವಾಡಿ, ಅರಸನಘಟ್ಟ ಬೆಟ್ಟಸಾಲು.[೩೭] ಜಗಳೂರು ತಾಲೂಕಿನ ಬೆಟ್ಟ ಶ್ರೇಣಿಗಳಾದ ಗುಹೇಶ್ವರ ಬೆಟ್ಟ, ರಂಗಯ್ಯನ ಗುಡ್ಡಸಾಲು, ಕಣಕುಪ್ಪೆ, ಕೆಳಗೋಡೆ, ಹಾಲೇಕಲ್ ಬೆಟ್ಟದಸಾಲು, ಕೊಡದಗುಡ್ಡ, ಕೊಣಚಕಲ್ ಬೆಟ್ಟಸಾಲುಗಳಿವೆ. ಈ ಭಾಗದ ಶಿಲಾವಲಯವನ್ನು ಧಾರವಾಡ ಶಿಲಾವಲಯವೆಂದು ಗುರುತಿಸಲಾಗಿದೆ.[೩೮] ಚಿ.ಗೊ.ರಮೇಶ್ ಅವರು ಚಿತ್ರದುರ್ಗದ ಮುಖ್ಯ

ಬೆಟ್ಟದ ಸಾಲುಗಳು ದಕ್ಷಿಣ ಆಗ್ನೇಯದಿಂದ ಉತ್ತರದ ವಾಯುವ್ಯದ ಕಡೆಗೆ ಒಂದೇ ಅಂತರದಲ್ಲಿ ಸಾಗುತ್ತವೆ ಎಂದು ಹೇಳುತ್ತಾರೆ.[೫೯] ಜಿಲ್ಲೆಯ ಹೆಚ್ಚು ಭಾಗ ತಗ್ಗಾದ ಕಣಶಿಲೆಯ ಬೋಳುಬೆಟ್ಟಗಳಿಂದಲೂ ಮಧ್ಯ ಮಧ್ಯ ಇರುವ ಸ್ವಲ್ಪ ಮಟ್ಟವಾದ ಕಣಿವೆಗಳಿಂದಲೂ ಕೂಡಿದೆ. ಈ ಪ್ರದೇಶಗಳಲ್ಲಿ ಆದಿ ಮಾನವನ ನೆಲೆಗಳು ಹೆಚ್ಚು ಕಂಡುಬಂದಿವೆ. ಅಲ್ಲದೆ ಬೆಟ್ಟದಸಾಲುಗಳು ದಕ್ಷಿಣ ಆಗ್ನೇಯದಿಂದ ಉತ್ತರ ವಾಯುವ್ಯದ ಕಡೆಗೆ ಸಮಾಂತರದಲ್ಲಿ ಸಾಗುತ್ತವೆ. ಪೂರ್ವ ಸಾಲು ಹಿರಿಯೂರಿನ ಪಶ್ಚಿಮದಿಂದ ಚಿತ್ರದುರ್ಗದ ಬೆಟ್ಟ ಸಾಲಿನಲ್ಲಿ ಹಬ್ಬಿ ಮುಂದೆ ಸ್ವಲ್ಪ ದೂರ ಬಿಟ್ಟು ವಾಯುವ್ಯದಲ್ಲಿ ಕಣಕುಪ್ಪೆ ಬೆಟ್ಟದಲ್ಲಿ ಮುಂದುವರೆಯುತ್ತದೆ.[೬೦] ಈ ಪರಿಸರದಲ್ಲಿ ದವಳಪ್ಪನಗುಡ್ಡ, ಭೀಮನಕಲ್ಲು ದುರ್ಗ, ಈಚಲಗುಡ್ಡ, ಓಬಳದೇವರ ಗುಡ್ಡ, ಮತ್ತು ಜೋಗಿ ಮರಡಿ ಮುಂತಾದ ಬೆಟ್ಟ ಶ್ರೇಣಿಗಳು ಕಂಡುಬರುತ್ತವೆ. ಮೊಳಕಾಲ್ಮೂರು ತಾಲೂಕಿನಲ್ಲಿ ಜಟಿಂಗರಾಮೇಶ್ವರ, ಬ್ರಹ್ಮಗಿರಿ, ನುಂಕಪ್ಪನಗುಡ್ಡ, ಜೋಗಪ್ಪನಗುಡ್ಡ, ವಡೆರಗುಡ್ಡ, ಹೊಸದುರ್ಗ ತಾಲೂಕಿನ ನಿರಗುಂದ, ಹಾಲುರಾಮೇಶ್ವರ, ಹಿರಿಯೂರು ತಾಲೂಕಿನ ಮಾರಿಕಣಿವೆ, ಹಿಂಡಸ ಕಟ್ಟೆ, ವೇಣುಕಲ್ಲು ಗುಡ್ಡ[೬೧] ಈ ಬೆಟ್ಟಸಾಲುಗಳು ಚಿತ್ರದುರ್ಗ ಪರಿಸರದಲ್ಲಿ ಇದ್ದು ಅಲ್ಲಿ ಆದಿ ಮಾನವನು ಕಾಡು ಜೀವನವನ್ನು ಮೊದಲಿಗೆ ಬೆಟ್ಟದ ಪ್ರದೇಶದಲ್ಲಿ ಜೀವನ ಆರಂಭಿಸಿದ ಕುರುಹುಗಳಾಗಿ ಜಾನಕಲ್ಲು (ಹೊಸದುರ್ಗ), ತಾಳ್ಯ(ಹೊಳಲ್ಕೆರೆ), ನುಂಕೆಮಲೆ, ಪೂಜಾರಹಟ್ಟಿ, ಬ್ರಹ್ಮಗಿರಿ, ಹರಳಯ್ಯನ ಗುಡ್ಡ, ಹಳೇಕೆರೆ, ಹಾನಗಲ್ಲು, (ಮೊಳಕಾಲ್ಮೂರು)[೬೨] ನೆಲೆಗಳನ್ನು ಕಾಡು ಸಂಸ್ಕೃತಿಯ ಮಾನವನ ನೆಲೆನಿಂತಿರುವ ಕುರುಹುಗಳಾಗಿ ಗುರುತಿಸಬಹುದಾಗಿದೆ.

**ನಾಡು ಜೀವನ ಸಂಸ್ಕೃತಿ**

ನಾಡು ಜೀವನ ಸಂಸ್ಕೃತಿಯಲ್ಲಿ ಮಾನವನು ಕೃಷಿ ಪ್ರವೃತ್ತಿಯನ್ನು ಆರಂಭಿಸಿದ ಹಂತ ಎಂದು ಗುರುತಿಸಬಹುದು. ಈ ಸಂಸ್ಕೃತಿಯ ಕಾಲದ ಮಾನವನು ನವ ಶಿಲಾಯುಗದ ಆರಂಭದಿಂದ ಬೃಹತ್ ಶಿಲಾಯುಗದವರೆಗೆ ಸಾಮಾನ್ಯವಾಗಿ ಗುರುತಿಸಲಾಗಿದೆ. ನೆಡುಗಲ್ಲುಗಳನ್ನು ನೆಟ್ಟು ತಮ್ಮ ಕೃಷಿಯ ಮೇರೆಗಳನ್ನು ಗುರುತಿಸಿಕೊಂಡಿರುವ ಹಂತ ಎಂದು ಕರೆಯಬಹುದಾಗಿದೆ. ನಾಗರೀಕ ಪ್ರಜ್ಞೆಯು ಮಾನವನಲ್ಲಿ ಬೆಳೆದು ಪರಸ್ಪರ ವಿನಿಮಯ ವ್ಯವಸ್ಥೆಯನ್ನು ಅರಿತಂತಹ ನೆಲೆಗಳಾಗಿವೆ. ಈ ಕಾಲದ ಆರಂಭವನ್ನು ಸೂಚಿಸುವ ಬೂದಿದಿಬ್ಬಗಳು ಪಶುಪಾಲನೆಯ ಸಂಕೇತಗಳಾದರೆ, ಕಲ್ಲಿನಿಂದ ಮಾಡಿ ನಯಗೊಳಿಸಿದ ಕೊಡಲಿಯು ಕಾಡನ್ನು ಕಡಿದು ಕೃಷಿ ಆರಂಭಿಸಿರುವುದನ್ನು ಸಾರುತ್ತದೆ. ಅಲ್ಲದೆ ಮಣ್ಣಿನಿಂದ ಮಾಡಿದ ಮಡಿಕೆ-ಕುಡಿಕೆಗಳು ಸಂಗ್ರಹಣಾ ಪರಿಕರಗಳಾದರೆ, ಕೃಷಿಯ ಆರಂಭಿಕ ಹಂತವು ಮಾನವನನ್ನು ಒಂದೆಡೆ ನೆಲೆನಿಂತು ಗ್ರಾಮ ಸಂಸ್ಕೃತಿಯ ನಿರ್ಮಾಣಕ್ಕೆ ನಾಂದಿಯಾಯಿತು.[೬೩]

ನಾಡು ಸಂಸ್ಕೃತಿಯ ಜನರು ವೃತ್ತಾಕಾರದ ಮನೆಗಳನ್ನು ಮರಗಿಡ-ಬಳ್ಳಿಗಳನ್ನು ಬಳಸಿ ನಿರ್ಮಾಣ ಮಾಡಿಕೊಳ್ಳುತ್ತಿದ್ದರು. ಕೃಷಿಯನ್ನು ಆರಂಭಿಸಿದ ಇವರು ಸಾಮಾನ್ಯವಾಗಿ ರಾಗಿ, ಭತ್ತ, ಗೋಧಿ, ಹುರುಳಿ, ನವಣೆ, ಮೊದಲಾದ ಬೆಳೆಗಳನ್ನು ಬೆಳೆಯುತ್ತಿದ್ದರು. ಹಾಗೆಯೇ ಪ್ರಾಣಿಗಳನ್ನು ಬೇಟೆಯಾಡಿ ಆಹಾರವನ್ನು ಸಂಗ್ರಹಿಸುವ ಕಲೆಯ ಜೊತೆ ಜೊತೆಯಲ್ಲಿಯೇ ನಡೆಯುತ್ತಿತ್ತು. ಪಶುಪಾಲನೆಯು ಪ್ರಾಚೀನ ಕಾಲದಲ್ಲಿ ಪ್ರಮುಖ ಆರ್ಥಿಕ ಸಂಪತ್ತು ಆಗಿದ್ದು, ಪ್ರಾಚೀನ ಕಾಲದ ಮಾನವನು ಹೆಚ್ಚು ಪಶುಪಾಲನೆಯನ್ನು ಮಾಡುತ್ತಿದ್ದನು. ಈ ಮೂಲಕ ದನ, ಕುರಿ, ಮೇಕೆಗಳನ್ನು ಸಾಕುವುದು ರೂಢಿಯಾಗಿತ್ತು.

ಇದರಿಂದ ಬಂದ ಹೈನನ್ನು ಆಹಾರವಾಗಿ ಬಳಸಿಕೊಳ್ಳುತ್ತಿದ್ದರು. ಇದಕ್ಕೆ ಸಂಬಂಧಿಸಿದ ನೆಲೆಗಳಾದ ಚಂದ್ರವಳ್ಳಿ, ಚಿತ್ರದುರ್ಗ, ಜಟಂಗರಾಮೇಶ್ವರ, ನುಂಕೆಮಲೆ, ಪರಶುರಾಂಪುರ, ಪೋಜರಹಟ್ಟಿ, ಬಾರ್ಲಗೊಂದಿ (ಚಂದ್ರವಳ್ಳಿ), ಬ್ರಹ್ಮಗಿರಿ, ಹಳೇಕೆರೆ, ಹಾನಗಲ್ಲು, ಸಂಗೇನಹಳ್ಳಿ, ಇನ್ನೂ ಅನೇಕ ನೆಲೆಗಳನ್ನು ಗುರುತಿಸಲಾಗಿದೆ. ಈ ನೆಲೆಗಳಲ್ಲಿ ರೇಖಾಚಿತ್ರ, ವರ್ಣಚಿತ್ರ, ನಿಲಿಸುಗಲ್ಲು ಸಮಾಧಿಗಳನ್ನು ಕಾಣಬಹುದಾಗಿದೆ.

## ಕೊನೆಟಿಪ್ಪಣಿಗಳು

೧. ಮೋಹನ್‌ಕೃಷ್ಣ ರೈ ಕೆ., ತುಳುನಾಡು ಕನ್ನಡ ನುಡಿ, ತುಳು ಕರ್ನಾಟಕ ನಾಡು-ನುಡಿ ಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೨, ಪು.ಸ.೨
೨. ಮಹಂತೇಶ ಎನ್.ಎಸ್, ಚಿತ್ರದುರ್ಗ ಕೋಟೆ ಪರಿಸರದ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ, ರೇಣುಕಾ ಪ್ರಕಾಶನ, ಚಿತ್ರದುರ್ಗ, ೨೦೧೫, ಪು.ಸ.೬
೩. ಶಿವಪ್ಪ ಆರ್., ಚಿತ್ರದುರ್ಗ ಪಾಳೆಯಗಾರರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧ ನೀತಿ: ಒಂದು ಅಧ್ಯಯನ (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ), ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೨೦೦೬, ಪು.ಸ.೪೩
೪. ಮಂಜುನಾಥ್ ನಾಯಕ್, ಚಿತ್ರದುರ್ಗ ಜಿಲ್ಲಾ ದರ್ಶನ, ಪಾರ್ವತಿ ಪ್ರಕಾಶನ, ಪಂಡರಹಳ್ಳಿ, ೨೦೧೫, ಪು.ಸ.೩೩.೩೪
೫. ಲಕ್ಷ್ಮಣ್ ತೆಲಗಾವಿ (ಸಂ)., ಹರತಿ ಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭, ಪು.ಸ.೫೭೪.೫೭೫
೬. ಕರ್ನಾಟಕದ ಪರಂಪರೆ, ಸಂಪುಟ.೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು(ನಾಲ್ಕನೆ ಮುದ್ರಣ) ೨೦೧೪, ಪು.ಸ.೨೨
೭. ಲಕ್ಷ್ಮಣ್ ತೆಲಗಾವಿ (ಸಂ)., ಪೂರ್ವೋಕ್ತ, ಪು.ಸ.೫೬೮
೮. ಚಂದ್ರಶೇಖರ್ ಹೆಚ್., ಭೂ ವಿಜ್ಞಾನಿಯ ಕಣ್ಣಲ್ಲಿ ಇತಿಹಾಸ, ಸಿ.ವಿ.ಜಿ ಇಂಡಿಯಾ, ಬೆಂಗಳೂರು, ೨೦೧೫, ಪು.ಸಂ.೭೮
೯. ಲಕ್ಷ್ಮಣ್ ತೆಲಗಾವಿ (ಸಂ)., ಪೂರ್ವೋಕ್ತ, ಪು.ಸ.೫೬೮
೧೦. ಚಂದ್ರಶೇಖರ್ ಹೆಚ್., ಪೂರ್ವೋಕ್ತ, ಪು.ಸ.೭೮
೧೧. ಲಕ್ಷ್ಮಣ್ ತೆಲಗಾವಿ (ಸಂ)., ಪೂರ್ವೋಕ್ತ, ಪು.ಸ.೬೮.೬೯
೧೨. ಗೋಪಾಲ್ ಆರ್. (ಸಂ)., ಪೂರ್ವೋಕ್ತ, ಪು.ಸ.೨೫೯
೧೩. ಚಂದ್ರಶೇಖರ ಹೆಚ್., ಪೂರ್ವೋಕ್ತ, ಪು.ಸ.೭೯
೧೪. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.ಸ.೫೭೯
೧೫. ಗೋಪಾಲ್ ಆರ್.(ಸಂ)., ಪೂರ್ವೋಕ್ತ, ಪು.ಸ.೨೫೯
೧೬. ಚಂದ್ರಶೇಖರ ಹೆಚ್., ಪೂರ್ವೋಕ್ತ, ಪು.ಸ.೬೯
೧೭. ಲಕ್ಷ್ಮಣ್ ತೆಲಗಾವಿ (ಸಂ)., ಪೂರ್ವೋಕ್ತ, ಪು.ಸ.೫೭೯
೧೮. ಚಂದ್ರಶೇಖರ ಹೆಚ್., ಪೂರ್ವೋಕ್ತ, ಪು.ಸ.೭೯
೧೯. ಕರ್ನಾಟಕ ಪರಂಪರೆ, ಭಾಗ-೧, ಪೂರ್ವೋಕ್ತ, ಪು.ಸ.೨೫

೨೦. ಚಂದ್ರಶೇಖರ ಹೆಚ್., ಪೂರ್ವೋಕ್ತ, ಪು.ಸ.೭೯

೨೧. ಅದೇ, ಪು.ಸ.೮೦

೨೨. ಮಹಂತೇಶ ಎನ್.ಎಸ್., ಪೂರ್ವೋಕ್ತ, ಪು.ಸ.೧೪

೨೩. ಚಂದ್ರಶೇಖರ ಹೆಚ್., ಪು.ಸ.೮೦

೨೪. ಬರ್ನಾಲ್ ಜೆ.ಡಿ., ಇತಿಹಾಸದಲ್ಲಿ ವಿಜ್ಞಾನ (೨ನೇ ಸಂಪುಟ), ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೨, ಪು.ಸ.೬೧

೨೫. ಅದೇ, ಪು.ಸ.೬೫.೬೬

೨೬. ಮಹಂತೇಶ ಎನ್.ಎಸ್., ಪೂರ್ವೋಕ್ತ, ಪು.ಸ.೧೨.೧೩

೨೭. ಗೋಪಾಲ್ ಆರ್.(ಸಂ)., ಪೂರ್ವೋಕ್ತ, ಪು.ಸ.೨೫೫

೨೮. ಅದೇ, ಪು.ಸ.೨೫೬

೨೯. ಮಹಂತೇಶ ಎನ್.ಎಸ್., ಪೂರ್ವೋಕ್ತ, ಪು.ಸ.೧೩

೩೦. ವಿರೂಪಾಕ್ಷಿ ಪೂಜಾರಹಳ್ಳಿ, ಚಿನ್ನಹಗರಿ ಸಿರಿ, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ, ೨೦೦೬, ಪು.ಸ.೩

೩೧. ಶ್ರೀನಿವಾಸ್ ಎಂ.ವಿ., ಲಕ್ಷ್ಮಣ್ ತೆಲಗಾವಿ (ಸಂ)., ಚಂದ್ರವಳ್ಳಿ ಜಿಲ್ಲಾ ಇತಿಹಾಸ ಸಂಶೋಧನಾ ಮಂಡಲಿ, ಚಿತ್ರದುರ್ಗ, ೧೯೭೬, ಪು.ಸ.೮೧

೩೨. ಸಂತೋಷ್ ಕೆ.ವಿ., ಪೂರ್ವೋಕ್ತ, ಪು.ಸ.೫

೩೩. ಸುರೇಶ ಬಿ., ಚಿತ್ರದುರ್ಗ–ದಾವಣಗೆರೆ ಜಿಲ್ಲೆಗಳ ದೇವಾಲಯಗಳು, ಸಂಶೋಧನ ಪ್ರಕಾಶನ, ಬಾಲೇಹಳ್ಳಿ, ೨೦೦೯, ಪು.ಸ.೫

೩೪. ಅದೇ, ಪು.ಸ.೭

೩೫. ಮಂಜುನಾಥ್ ನಾಯಕ್ ಕೆ., ಪೂರ್ವೋಕ್ತ, ಪು.ಸ.೬

೩೬. ಅದೇ, ಪು.ಸ.೫

೩೭. ಸಂತೋಷ್ ಕೆ.ವಿ., ಹೊಳಲ್ಕೆರೆ ತಾಲ್ಲೂಕ ದರ್ಶನ, ಸಂತೋಷ್ ಪ್ರಕಾಶನ, ಹೊಳಲ್ಕೆರೆ, ೨೦೧೬, ಪು.ಸ.೪

೩೮. ಸೋಮಶೇಖರ್ ಎಸ್.ವೈ.(ಸಂ)., ಜಗಲೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೨, ಪು.ಸ.೧

೩೯. ಶಿವಪ್ಪ ಆರ್., ಪೂರ್ವೋಕ್ತ, ಪು.ಸ.೪೬

೪೦. ಕನ್ನಡ ವಿಷಯ ವಿಶ್ವಕೋಶ, ಸಂ.೧, (ಪರಿಷ್ಕೃತ), ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೦೫, ಪು.ಸ.೯೬೭

೪೧. ಮಹಂತೇಶ ಎನ್.ಎಸ್., ಪೂರ್ವೋಕ್ತ, ಪು.ಸ.೯

೪೨. ಗೋಪಾಲ್ ಆರ್.(ಸಂ)., ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೧೫, ಪು.ಸ.೨೩.೨೪

೪೩. ಸೋಮಶೇಖರ್ ಎಸ್.ವೈ.(ಸಂ)., ಬ್ರಹ್ಮಗಿರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೦, ಪು.ಸ.೪

## ಅಧ್ಯಾಯ – ಮೂರು

# ಚಿತ್ರದುರ್ಗ ಪ್ರದೇಶದ ಚಾರಿತ್ರಿಕ ಹಿನ್ನೆಲೆ

ಯಾವುದೇ ಒಂದು ಸ್ಥಳ ಮಾನವನ ವಾಸದ ನೆಲೆಯಾದ ಮೇಲೆ, ವಿವಿಧ ಕಾಲಘಟ್ಟಗಳಲ್ಲಿ ಹೇಗೆ ಸಾಗಿಬಂದಿತೆಂಬುದನ್ನು ನೋಡುವುದು ಒಂದು ಕುತೂಹಲಕಾರಿಯಾದ ಸಂಗತಿ. ಪುರಾತನ ಕಾಲದಿಂದ ಮಾನವನ ವಾಸದ ನೆಲೆಯಾಗಿರುವ ಚಿತ್ರದುರ್ಗಕ್ಕಂತೂ ಈ ಮಾತು ಚನ್ನಾಗಿ ಒಪ್ಪುತ್ತದೆ. ಚರಿತ್ರೆ ಪೂರ್ವ ಮತ್ತು ಚಾರಿತ್ರಿಕ ಕಾಲದಲ್ಲಿ ಚಿತ್ರದುರ್ಗ ಸಾಗಿಬಂದದ್ದರ ಬಗ್ಗೆ ಇಲ್ಲಿ ನಡೆದ ಉತ್ಖನನಗಳು, ಇಲ್ಲಿ ದೊರೆತ ಪ್ರಾಕ್ಚಾರಿತ್ರಿಕ ಮತ್ತು ಚಾರಿತ್ರಿಕ ಕಾಲದ ವಿವಿಧ ವಸ್ತುಗಳು, ಶಾಸನಗಳು, ಶಿಲ್ಪಗಳು ಇತರ ಪ್ರಾಚ್ಯಾವಶೇಷಗಳು, ಇನ್ನಿತರ ದಾಖಲೆಗಳು, ಶಿಷ್ಟ ಸಾಹಿತ್ಯ, ಜನಪದ ಸಾಹಿತ್ಯ ಹೀಗೆ ಈ ಎಲ್ಲದರ ಮೂಲಕ ಗುರುತಿಸುವ ಪ್ರಯತ್ನ ನಡೆದಿದೆ. ಈ ತನಕ ರೂಪುಗೊಂಡ ಚರಿತ್ರೆಯ ಪುಟಗಳನ್ನೊಮ್ಮೆ ಅವಲೋಕಿಸಿದರೆ ಕಂಡುಬರುವುದು ಕ್ರಿಸ್ತಶಕ ಒಂದರಿಂದ ಹತ್ತೊಂಬತ್ತನೇ ಶತಮಾನದವರೆಗೆ ಸಾಲು ಸಾಲಾಗಿ ಆಳ್ವಿಕೆ ನಡೆಸಿದ ಹತ್ತು–ಹನ್ನೊಂದು ರಾಜ ಪ್ರಭುತ್ವಗಳ ರಾಜಕೀಯ ಚರಿತ್ರೆ ಮಾತ್ರ. ಜೊತೆಗೆ ಪ್ರಾಕ್ಚಾರಿತ್ರಯುಗದ ಮಾನವ ಬದುಕಿನ ದಾಖಲೆಗಳಾಗಿ ಕೆಲವು ಅವಶೇಷಗಳು, ವಸ್ತುಗಳನ್ನು ಕುರಿತ ನಿರೂಪಣೆ ಈ ಎಲ್ಲ ಕಾಲಘಟ್ಟಗಳ ಮನೆತನಗಳ ಸಮಗ್ರ ಚರಿತ್ರೆಯನ್ನು ಪೂರ್ಣಗೊಳಿಸಲು ಇವುಗಳಿಂದ ದೊರೆಯುವ ಮಾಹಿತಿ ತೀರಾ ಅಲ್ಪ. ಈಗಲೂ ನಮ್ಮ ಕಣ್ಣ ಮುಂದಿರುವುದು ಈ ಭಾಗದ ಭಾಗಶಃ ಚರಿತ್ರೆಯ ಸ್ವರೂಪವಷ್ಟೇ. ಅಂದರೆ ಈ ದೆಸೆಯಲ್ಲಿ ಆಗಿರುವ ಕೆಲಸ ಅಲ್ಪ, ಆಗಬೇಕಾದುದು ಅಗಾಧ.[೧]

### ೩.೧. ಪ್ರಾಗೈತಿಹಾಸಿಕ ಕಾಲ

ಚಿತ್ರದುರ್ಗ ಪ್ರದೇಶದ ಚಾರಿತ್ರಿಕ ಹಿನ್ನೆಲೆಯನ್ನು ಪ್ರಾಗೈತಿಹಾಸಿಕ ಕಾಲದ ಮಾಹಿತಿ ಸಂಗ್ರಹಣೆಯಲ್ಲಿ ಅತ್ಯಂತ ಪೂರ್ವ ದಾಖಲೆಗಳಾಗಿ ಸಿಗುವುದು ರೇಖಾ (ಗೀರು) ಚಿತ್ರಗಳು. ಶಿಲಾಯುಗದ ಮಾನವನ ಬದುಕನ್ನು ನಿರೂಪಿಸುವ, ವ್ಯಾಖ್ಯಾನಿಸುವ ಸಂದರ್ಭದಲ್ಲಿ ಅನಿವಾರ್ಯವಾಗಿ ಬಳಕೆಯಾಗುವ ಸಾಕ್ಷ್ಯಾಧಾರಗಳಲ್ಲಿ ಆ ಕಾಲದ ಗುಹಾ ಚಿತ್ರಗಳು ಮಹತ್ವ ಪೂರ್ಣವಾದುವು.

ಶಿಲಾಯುಗದ ನಿವೇಶನಗಳನ್ನು ಗುರುತಿಸಿ, ತಲಸ್ಪರ್ಶಿಯಾಗಿ ಪರಿಶೀಲಿಸಿದಂತೆ ಪ್ರಾಚೀನ ಚಿತ್ರಗಳನ್ನು ಹುಡುಕುವ ಕೆಲಸ ತಮ್ಮಲ್ಲಿ ಸಕ್ರಿಯವಾಗಿ ನಡೆದಿಲ್ಲವಾದರೂ ಅಂತಹ ಚಿತ್ರಗಳು ಆಕಸ್ಮಿಕವಾಗಿ ಸಿಕ್ಕಿದ ಬಗೆಗೆ ಸುದ್ದಿಗಳನ್ನು, ಲೇಖನಗಳನ್ನು ನೋಡುತ್ತಲೆ ಇದ್ದೇವೆ. ಕರ್ನಾಟಕದಲ್ಲಿ ಪೀಕ್ಲಿಹಾಳು, ಹಿರೇಬೆನಕಲ್ಲು, ಹಂಪೆಗಳಲ್ಲಿ ಕೊರೆದ, ಬರೆದ ಚಿತ್ರಗಳು ಉಪಲಬ್ದವಾಗಿದ್ದು, ಅವುಗಳ ವಿವೇಚನೆಯೂ ನಡೆದಿದೆ. ಇದೀಗ ಆ ನಿವೇಶನಗಳ ಸಾಲಿಗೆ ಚಿತ್ರದುರ್ಗ ಜಿಲ್ಲೆಯನ್ನು ಸೇರಿಸಬಹುದಾಗಿದೆ.[೨]

ಕರ್ನಾಟಕದ ಹೆಚ್ಚು ಪ್ರಾಕ್ಚಾರಿತ್ರಿಕ ಸಂಸ್ಕೃತಿಯ ಹಿನ್ನೆಲೆಯಿರುವ ಜಿಲ್ಲೆಗಳಲ್ಲಿ ಚಿತ್ರದುರ್ಗವೂ ಒಂದು. ಒಂಬತ್ತು ತಾಲೂಕುಗಳಿದ್ದ ಹಳೆಯ ಜಿಲ್ಲೆ ವಿಭಜನೆಗೊಂಡ ನಂತರ ದಾವಣಗೆರೆ, ಹರಿಹರ ಮತ್ತು ಜಗಳೂರುಗಳನ್ನು ಹೊರತುಪಡಿಸಿ ಚಿತ್ರದುರ್ಗ, ಚಳ್ಳಕೆರೆ, ಮೊಳಕಾಲ್ಮೂರು, ಹಿರಿಯೂರು, ಹೊಸದುರ್ಗ, ಹೊಳಲ್ಕೆರೆ ಈ ಆರು ತಾಲೂಕುಗಳನ್ನು ಮಾತ್ರ ಉಳಿಸಿಕೊಂಡಿತು. ಪ್ರಾಕ್ಚಾರಿತ್ರಿಕ ಸಂಶೋಧನೆಯ ದೃಷ್ಟಿಯಿಂದ ಈ ಆರು ತಾಲೂಕುಗಳೂ ಗಮನಾರ್ಹವಾದವು. ಇವುಗಳಲ್ಲಿ ಚಿತ್ರದುರ್ಗ ತಾಲೂಕನ್ನು ಪ್ರತ್ಯೇಕವಾಗಿಯೇ ಗಮನಿಸಬೇಕಾಗುತ್ತದೆ.[೩]

ಭಾರತೀಯ ಗುಹಾಚಿತ್ರಗಳ ಪ್ರಸ್ತಾಪ ಬಂದ ಕೂಡಲೆ ನಮ್ಮ ನೆನಪಿಗೆ ಬರುವುದು ಬಿಂಬೆಟ್ಕಾದ ಗುಹೆಗಳು. ನೂರಾರು ಸಂಖ್ಯೆಯ ಅಲ್ಲಿಯ ಪ್ರಾಚೀನ ಚಿತ್ರಗಳು ಸಂಶೋಧಕರ ಅಧ್ಯಯನಕ್ಕೆ ವಸ್ತುವಾಗಿದೆ. ಚಿತ್ರದುರ್ಗ ಜಿಲ್ಲೆಯ ಅನೇಕ ನಿವೇಶನಗಳಲ್ಲಿ ಪುರಾತನ ಮತ್ತು ನೂತನ ಶಿಲಾಯುಗಗಳು ಆಗಿ ಹೋಗಿರುವುದನ್ನು ಖ್ಯಾತ ಹೆಸರಾದ ಮಾರ್ಟಿಮರ್ ವ್ಹೀಲರ್, ಶೇಷಾದ್ರಿ, ಎಂ.ಎಚ್.ಕೃಷ್ಣ ಅವರುಗಳು ಈಗಾಗಲೇ ಪ್ರತಿಪಾದಿಸಿದ್ದಾರೆ.[೪]

ಇತ್ತೀಚಿನ ವರ್ಷಗಳಲ್ಲಿ ಸಾಕಷ್ಟು ಚುರುಕುಗೊಂಡಿರುವ ಸ್ಥಳೀಯ ಚರಿತ್ರೆ ಹಾಗೂ ಗ್ರಾಮವಾರು ಅಧ್ಯಯನಗಳ ನೆಲೆಯಲ್ಲಿ ಕರ್ನಾಟಕದಲ್ಲಿ ಈವರೆಗೆ ನಿಗೂಢವಾಗುಳಿದಿದ್ದ ಬಯಲು ಬಂಡೆ ರೇಖಾಕೃತಿಗಳ ನಿವೇಶನಗಳು ಒಂದೊಂದಾಗಿ ಬೆಳಕಿಗೆ ತರುವಂತಹ ಕೆಲಸ ಆರಂಭವಾಗಿದೆ. ಸ್ಥಳೀಯವಾಗಿ ರೇಖಾ ಚಿತ್ರಗಳನ್ನು ಹುಡುಕುವಲ್ಲಿ ಮುಂದಾದವರೆಂದರೆ ಎಚ್.ಶ್ರೀಶೈಲ ಆರಾಧ್ಯರು. ಈ ಜಿಲ್ಲೆಯ ಹಲವು ವರ್ಣ ರೇಖಾಚಿತ್ರಗಳೊಡನೆ ಒಂದಷ್ಟು ಬಯಲು ಬಂಡೆ ರೇಖಾಕೃತಿಗಳನ್ನೂ ಪತ್ತೆ ಹಚ್ಚಿ ಅವುಗಳ ಸಂಗ್ರಹಣೆಯ ಮೂಲವಾಗಿ 'ಸಂಶೋಧನೆಯ ಹಾದಿಯಲ್ಲಿ'[೫] ಎಂಬ ಕೃತಿಯನ್ನು ಹೊರತಂದರು. ಹಾಗೆಯೇ ಲಕ್ಷ್ಮಣ ತೆಲಗಾವಿ ಅವರು ಚಿತ್ರದುರ್ಗ ಪ್ರದೇಶ, ಮೊಳಕಾಲ್ಮೂರು, ಬ್ರಹ್ಮಗಿರಿ ಪ್ರದೇಶ, ಚಳ್ಳಕೆರೆ-ನನ್ನಿವಾಳ, ನೇರಲಗುಂಟೆ, ಸಿದ್ದೇಶ್ವರನಗುಡ್ಡ ಪ್ರದೇಶ, ಹೊಸದುರ್ಗ-ತಣಿಗೆಕಲ್ಲು-ಜಾನಕಲ್ಲು ಪ್ರದೇಶ, ಹಿರಿಯೂರು-ಸೊಂಡೆಕೇರೆ, ಮುಳ್ಳಪ್ಪನಗುಡ್ಡ ಎಡವಳ್ಳಿ ಪ್ರದೇಶ, ಹೊಳಲ್ಕೆರೆ ಪ್ರದೇಶ[೬] ಗಳಲ್ಲಿ ಬಯಲು ಬಂಡೆ ರೇಖಾಕೃತಿಗಳನ್ನು ಗುರುತಿಸಿ ಕೃತಿಯನ್ನಾಗಿ ರಚಿಸಿದ್ದಾರೆ. ಹಾಗೆಯೇ ಎಸ್.ವೈ.ಸೋಮಶೇಖರ್, ಎಸ್.ತಿಪ್ಪೇಸ್ವಾಮಿ ಮೊದಲಾದ ಸಂಶೋಧಕರು ರೇಖಾಕೃತಿಗಳನ್ನು ಸ್ಥಳೀಯವಾಗಿ ಗುರುತಿಸುವ ಪ್ರಯತ್ನ ಮಾಡಿ ತಮ್ಮ ಕೃತಿಗಳಲ್ಲಿ ಕಿರು ಲೇಖನಗಳ ಮೂಲಕ ಪ್ರಕಟಿಸಿದ್ದಾರೆ. ಸಮಗ್ರವಾಗಿ ಕರ್ನಾಟಕದ ಸಂಕ್ಷಿಪ್ತ ರೇಖಾ ಚಿತ್ರಗಳನ್ನು ಗುರುತಿಸುವ ಕೆಲಸವನ್ನು ಅ.ಸುಂದರ ಅವರು 'ಕರ್ನಾಟಕದ ಪ್ರಾಗಿತಿಹಾಸಕಾಲದ ಕಲೆ'[೭] ಎಂಬ ಕೃತಿಯ ಮೂಲಕ ನೆಲೆಗಳನ್ನು ಪರಿಚಯಿಸಿದ್ದಾರೆ.

ಪ್ರಸ್ತುತ ರೇಖಾ ಚಿತ್ರಗಳ ಕುರಿತು ಅಧ್ಯಯನಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ವಸತಿ ನೆಲೆಯಾಗಿ ರೂಪಗೊಂಡ ಚಿತ್ರದುರ್ಗ ಪರಿಸರದ ಮಾನವನು ರಚಿಸಿದ ರೇಖಾಕೃತಿಗಳಲ್ಲಿ ಮಾನವಾಕೃತಿಗಳು, ಪ್ರಾಣಿಗಳು, ಪಾದಗಳ ಕುರುಹುಗಳು ಹಾಗೂ ಜ್ಯಾಮಿಲೆಯಾಕೃತಿಗಳು ಮುಖ್ಯವಾದವು. ಕುಳಿಗಳು, ಕುಳಿಕೃತಿಗಳು ಮತ್ತು ಬಟ್ಟಲಾಕಾರದ ಕುಳಿಗಳು ಸಹ ಕಂಡುಬರುತ್ತವೆ.[೮] ಅಲ್ಲದೆ ಎತ್ತಿನ ಬಂಡಿ, ಬಿಲ್ಲು, ಬಾಣ, ಕತ್ತಿ, ಭರ್ಜಿ ಮುಂತಾದ ಆಯುಧಗಳನ್ನು ರೇಖಾಕೃತಿಯಲ್ಲಿ ಗುಹೆಗಳಲ್ಲಿ ಬಯಲು ಬಂಡೆಗಳ ಮೇಲೆ ಕೆತ್ತನೆ ಮಾಡಿದ್ದು, ಈ ವಸ್ತುಗಳು ಅಲೆಮಾರಿ ಮಾನವನ ಬಳಕೆಗೆ ಬಳಸಿದ ವಸ್ತುಗಳೆಂದು ತಿಳಿಯಬಹುದು. ನಂತರ ಶಿಲಾ ಆಯುಧಗಳನ್ನು ಬಳಸಿ ಬೇಟೆ ಪ್ರವೃತ್ತಿಯನ್ನು ತನ್ನ ಜೀವನೋಪಾಯಕ್ಕಾಗಿ ಮುಂದುವರೆಸಿದನೆಂದು ಕಂಡುಬರುತ್ತದೆ. ಅಲೆಮಾರಿಯಾಗಿ ಸುತ್ತುವ ಆದಿ ಮಾನವನಿಗೆ ದಕ್ಷಿಣ ಭಾರತದ ಒಂದು ಆಯಕಟ್ಟಿನ ಸ್ಥಳದಲ್ಲಿರುವ ಸಂಪದ್ಭರಿತವಾದ ಚಿತ್ರದುರ್ಗ ಪರಿಸರವನ್ನ ಭೌಗೋಳಿಕ ನೆಲೆಯನ್ನಾಗಿ ರೂಪಿಸಿಕೊಂಡು ಆದಿ ಹಳೆ ಶಿಲಾಯುಗದಿಂದ ಬೃಹತ್ ಶಿಲಾಯುಗದ ನೆಲೆಗಳಾಗಿ ರೂಪಗೊಳ್ಳುವಂತೆ ಅನೇಕ ನೆಲೆಗಳನ್ನು ರೂಪಿಸಿದ್ದಾನೆ.

ಕರ್ನಾಟಕ ಸಂಸ್ಕೃತಿ ಅಥವಾ ಯಾವುದೇ ಸಂಸ್ಕೃತಿಯ ಆರಂಭಿಕ ಹಂತದ ವಿವರಗಳನ್ನು ಒಟ್ಟಿಗೆ ಇಟ್ಟು ನೋಡುವುದಾದರೆ, ಎರಡು ಮುಖ್ಯ ಮಜಲುಗಳು ಮೇಲ್ನೋಟಕ್ಕೆ ಕಾಣಿಸುತ್ತವೆ. ಅವೆಂದರೆ ಚರಿತ್ರೆ ಪೂರ್ವ ಕಾಲದ ಅನಾಗರಿಕ ಸಮಾಜ ಮತ್ತು ಚರಿತ್ರೆ ಕಾಲದ ನಾಗರಿಕ ಸಮಾಜ. ಆದರೆ ತಾತ್ವಿಕವಾಗಿ ಇವು ಸ್ಥೂಲ ವಿಭಾಗಗಳು ಮಾತ್ರವಲ್ಲ ವೈಜ್ಞಾನಿಕ ಸ್ವರೂಪವಾದವುಗಳು. ಈ ಸಂದರ್ಭದಲ್ಲಿ ಭಗವತ್ ಶರಣ ಉಪಾಧ್ಯಾಯರ ಒಂದು ಅಭಿಪ್ರಾಯವನ್ನು ಇಲ್ಲಿ ನೋಡಬಹುದು. ಅವರ ಪ್ರಕಾರ ಗತಕಾಲವೆಂಬುದು ಅನಾದಿಯಾದುದು. ಬಹುತೇಕವಾಗಿ ಅದರ ಬಹುಭಾಗ ಅಜ್ಞಾತವಾಗಿರುತ್ತದೆ. ಬಹಳ ಹಿಂದಿನ ಕಾಲವನ್ನು ಎರಡು ದೊಡ್ಡ ಭಾಗಗಳಲ್ಲಿ ಹಂಚಿಬಿಡಬಹುದು. ೧. ನಾಗರಿಕ ಯುಗ ಮತ್ತು ೨. ಅನಾಗರಿಕ ಯುಗ. ಈ ಎರಡು ವಿಶಿಷ್ಟ ಯುಗಗಳನ್ನು ಉಲ್ಲೇಖಿಸುತ್ತಾರೆ. ಮಾನವ ಹಿಂಸಾಚಾರಿಯೂ ಅನಾಗರೀಕನೂ ಆಗಿದ್ದು ಪ್ರಕೃತಿಯೊಡನೆ ಹೋರಾಡುವುದರಲ್ಲಿ ನಿರತನಾಗಿದ್ದ ಬೇರೆ ಬೇರೆ ಪ್ರದೇಶಗಳಲ್ಲಿ ತನಗೆ ಅವಶ್ಯಕವಾಗಿ ಬೇಕಿದ್ದ ಆಯುಧಗಳನ್ನು ಬಳಸಿ ಬೇಟೆ ಮತ್ತು ಪಶುಸಂಗೋಪನೆಯನ್ನು ಮಾಡುತ್ತಿದ್ದನು.[೯]

ಹಳೇ ಶಿಲಾಯುಗ ಒಳಗೊಳ್ಳುವ ಆದಿ ಹಳೇಶಿಲಾಯುಗ ಸಂಸ್ಕೃತಿಯ ಕಾಲಾವಧಿ ಇಂದಿಗೆ ೭ ಲಕ್ಷದಿಂದ ೧.೨೫ ಲಕ್ಷ ವರ್ಷಗಳಷ್ಟು ಪೂರ್ವದ್ದು, ಬಹುಶಃ ಮಧ್ಯ ಪ್ಲೀಸ್ಟೋಸಿನ್ ಕಾಲದ್ದು. "ಆದಿ-ಅಂತಿಮ ನಡುವಿನ ಕಾಲದ್ದು ಈ ಮಧ್ಯಹಳೇ ಶಿಲಾಯುಗ ಸಂಸ್ಕೃತಿ. ಇಂದಿಗೆ ೧೦,೦೦೦ ವರ್ಷಗಳಿಂದ ೪೦,೦೦೦ ವರ್ಷಗಳಷ್ಟು ಪೂರ್ವದಲ್ಲಿ ಇದ್ದಿರಬೇಕೆಂದು ತರ್ಕಿಸಲಾಗುತ್ತದೆ. ಹಾಗೆಯೇ ಮಧ್ಯ ಹಳೇ ಶಿಲಾಯುಗದ ಸ್ಥಿತ್ಯಂತರ ಸೂಕ್ಷ್ಮ ಶಿಲಾಯುಗದ ನಡುವಿನ ಹಂತವೇ ಅಂತಿಮ ಹಳೇ ಶಿಲಾಯುಗ ಇಂದಿಗೆ ೧೦,೦೦೦ ವರ್ಷಗಳಷ್ಟು ಹಿಂದೆ ೨೫,೦೦೦ ವರ್ಷಗಳಷ್ಟು ಪೂರ್ವದಲ್ಲಿ ಇದ್ದ ಸಂಸ್ಕೃತಿ ಇದು. ಸ್ಥಿತ್ಯಂತರ ಸೂಕ್ಷ್ಮ ಶಿಲಾ ಸಂಸ್ಕೃತಿಯ ಯುಗ ಅಂತಿಮ ಹಳೇ ಶಿಲಾಯುಗ ಮತ್ತು ನವಶಿಲಾಯುಗಗಳ ನಡುವಿನ ಯುಗವೆಂದು ಗುರುತಿಸಲ್ಪಡುತ್ತದೆ. ಇದು ಇದ್ದದ್ದು ಇಂದಿಗೆ ೨,೫೦೦ ವರ್ಷಗಳಿಂದ ೧೦,೦೦೦ ವರ್ಷಗಳಷ್ಟು ಪೂರ್ವದಲ್ಲಿ.

ನೂತನ ಶಿಲಾಯುಗ ಅಥವಾ ತಾಮ್ರ ಶಿಲಾಯುಗ ಸಂಸ್ಕೃತಿಯ ಕಾಲಾವಧಿ ಕರ್ನಾಟಕದ ಮಟ್ಟಿಗೆ ಪ್ರಾದೇಶಿಕವಾಗಿ ಬೇರೆ ಬೇರೆ ತೆರನಾಗಿರುವುದು ಕಂಡುಬರುತ್ತದೆ. ಚರಿತ್ರೆ ಪೂರ್ವಕಾಲೀನ ಸಮಾಜದತ್ತ ದೃಷ್ಟಿ ಹಾಯಿಸಿದರೆ ಕಾಣುವ ಮಾನವ ಬದುಕಿನ ಸ್ಥಿತ್ಯಂತರಗಳು ಕುತೂಹಲ ಹುಟ್ಟಿಸುವಂಥವು. ಆಹಾರ ಸಂಗ್ರಹಣೀಯ ಅಲೆಮಾರಿ ಸ್ಥಿತಿಯಿಂದ ಆಹಾರೋತ್ಪಾದನೆಯ ಹಂತಕ್ಕೆ ಬೆಳೆದ ಸಮುದಾಯಗಳು ತಮ್ಮ ಬೆಳವಣಿಗೆಯ ಹಾಗೂ ಪರಿವರ್ತನೆಯ ಸ್ವರೂಪವನ್ನು ಬೇರೆ ಬೇರೆ ವಿಧದಲ್ಲಿ ಮನಗಾಣಿಸಿಕೊಟ್ಟಿವೆ. ಕೃಷಿಯ ಆರಂಭ, ಪಶುಪಾಲನೆ, ಮಡಿಕೆ-ಕುಡಿಕೆಗಳ ತಯಾರಿಕೆ, ಪರಸ್ಪರ ವಿನಿಮಯ ಹಾಗೂ ಇವೆಲ್ಲಕ್ಕೂ ಮಿಗಿಲಾಗಿ ಲಿಪಿಯ ಬಳಕೆ ಇವು ಮುಖ್ಯ ಬೆಳವಣಿಗೆಗಳು.[೧೦] ಇವುಗಳ ಎಲ್ಲಾ ಹಂತಗಳನ್ನು ಕ್ರಮ ಬದ್ಧವಾಗಿ ಅಧ್ಯಯನ ಮಾಡಿದಾಗ ಮಾನವನ ಚಾರಿತ್ರಿಕ ಕಾಲಘಟ್ಟಗಳನ್ನು ತಿಳಿಯಲು ಸಹಾಯವಾಗುತ್ತದೆ.

**ಆದಿ ಹಳೇ ಶಿಲಾಯುಗದ ಸಂಸ್ಕೃತಿ**

ಮಾನವ ಸಂಸ್ಕೃತಿಯಲ್ಲಿ ಬೇರೆ ಬೇರೆ ಆದ ಕಾಲಕ್ಕಿಂತ ಹಿಂದಿನ ಕಾಲಕ್ಕೆ ಹೋಗಬೇಕು ಎಂದರೆ ಮಾನವ ಕುಲದ ಆರಂಭಕ್ಕೆ ಮಾನವನಿಗೂ ಪ್ರಾಣಿಗಳಿಗೂ ಇರುವ ಮುಖ್ಯ ವ್ಯತ್ಯಾಸವೆಂದರೆ. ಮಾನವನು ದೈಹಿಕ ಶಕ್ತಿಗೆ ಪೂರಕವಾದ ಸಾಮರ್ಥ್ಯವನ್ನು ಕೊಡುವ ವಿಧಾನಗಳನ್ನು ಆವಿಷ್ಕರಿಸುವ ಐಹಿಕ ಸಂಸ್ಕೃತಿ.[೧೧]

ಚಿತ್ರದುರ್ಗ ಪ್ರದೇಶದಲ್ಲಿ ಮಾನವನ ವಸತಿ ಇತ್ತೆಂಬುದಕ್ಕೆ ಹಲವು ಪುರಾತತ್ವ ಕುರುಹುಗಳನ್ನು ಗುರುತಿಸಲಾಗಿದೆ. ಅದರಂತೆ ಹೊಸದುರ್ಗ ತಾಲೂಕಿನ ಜಾನಕಲ್ಲು ಗ್ರಾಮ ಹಾಗೂ ಹೊಳಲ್ಕೆರೆ ತಾಲೂಕಿನ ತಾಳ್ಯದಲ್ಲಿ ಆದಿ ಹಳೇ ಶಿಲಾಯುಗ ಸಂಸ್ಕೃತಿಯ ಶಿಲೋಪಕರಣಗಳು ಕಂಡು ಬಂದಿವೆ. ಈ ಎರಡು ನೆಲೆಗಳನ್ನು ಬಿಟ್ಟು ಬೇರೆ ನೆಲೆಗಳಲ್ಲಿ ಆದಿ ಹಳೇ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ನೆಲೆಗಳು ಶೋಧವಾಗಿಲ್ಲ.

ಆದಿ ಹಳೇ ಶಿಲಾಯುಗಕ್ಕೆ ಸಂಬಂಧಿಸಿದಂತೆ ಮೂರು ಉಪಕರಣಗಳು ದೊರೆತಿದ್ದು, ಎರಡು ಉಪಕರಣಗಳು ಜಾನಕಲ್ಲಿನಲ್ಲಿ ದೊರೆತಿವೆ. ಇವುಗಳನ್ನು ಕ್ವಾರ್ಟ್ಸೈಟ್ ಶಿಲೆಯಲ್ಲಿ ರೂಪಿಸಲಾಗಿದೆ. ಇವುಗಳಲ್ಲಿ ಎರಡು ಕೈಕೊಡಲಿಗಳು ಹಾಗೂ ಮತ್ತೊಂದು ಮಚ್ಚುಗತ್ತಿ, ಒಂದು ಅಂಡಾಕಾರದ ಉಪಕರಣ ಹಾಗೂ ಇತರೆ ಉಪಕರಣಗಳಾಗಿವೆ.[೧೨]

ಒಟ್ಟಾರೆಯಾಗಿ ಆದಿ ಶಿಲಾಯುಗದ ಮಾನವನು ಜಾನಕಲ್ಲು ಹಾಗೂ ತಾಳ್ಯ ನೆಲೆಗಳಲ್ಲಿ ನೆಲೆಸಿದ್ದು ಅದೇ ನೆಲೆಗಳ ಮಾದರಿಯ ನೆಲೆಗಳು ಹೆಚ್ಚಾಗಿ ಕಂಡುಬಂದರು ಹುಡುವ ಕೆಲಸ ಇನ್ನೂ ಸಾಗುತ್ತಿದೆ. ಆದ್ದರಿಂದ ಪ್ರಮುಖವಾಗಿ ಆದಿ ಹಳೇ ಶಿಲಾಯುಗದ ಮಾನವನ ವಾಸದ ಪ್ರದೇಶವಾಗಿ ಚಿತ್ರದುರ್ಗ ಪ್ರದೇಶ ಗುರುತಿಸಿಕೊಂಡಿದೆ.

**ಸೂಕ್ಷ್ಮ ಶಿಲಾಯುಗ ಸಂಸ್ಕೃತಿ**

ಕರ್ನಾಟಕದ ಬಹು ಭಾಗಗಳಲ್ಲಿಯೇ ಸೂಕ್ಷ್ಮ ಶಿಲಾಯುಗದ ಸಂಸ್ಕೃತಿಯ ಅವಶೇಷಗಳನ್ನು ಸಂಗ್ರಹಿಸಲಾಗಿದ್ದು ನೆರೆಯ ತುಮಕೂರು ಜಿಲ್ಲೆಯಲ್ಲಿ ಅತೀ ಹೆಚ್ಚಿನ ನೆಲೆಗಳು ಶೋಧವಾಗಿವೆ. ಚಿತ್ರದುರ್ಗ ಪ್ರದೇಶದಲ್ಲಿಯೂ ಆರು ಸೂಕ್ಷ್ಮ ಶಿಲಾಯುಗದ ನೆಲೆಗಳು ಬೆಳಕು ಕಂಡಿವೆ. ಅವುಗಳಲ್ಲಿ ಬ್ರಹ್ಮಗಿರಿ ಹಾಗೂ ಚಂದ್ರವಳ್ಳಿ ನೆಲೆಗಳ ಉತ್ಖನನವೂ ನಡೆದಿವೆ.

ಮೊಳಕಾಲ್ಮೂರು ತಾಲೂಕಿನಲ್ಲಿ ಸೂಕ್ಷ್ಮ ಶಿಲಾಯುಗಕ್ಕೆ ಸಂಬಂಧಿಸಿದ ಕುರುಹುಗಳು ಕಂಡುಬಂದದ್ದು ಬ್ರಹ್ಮಗಿರಿಯ ಉತ್ಖನನದಲ್ಲಿ ೧೯೨೮-೨೯ರಲ್ಲಿ ಉತ್ಖನನ ಮಾಡಿದ ಎಂ.ಎಚ್.ಕೃಷ್ಣ ಅವರು ಮೊದಲಿಗೆ ಈ ಬಗೆಯ ಸೂಕ್ಷ್ಮ ಶಿಲಾಯುಧಗಳನ್ನು ಪತ್ತೆ ಹಚ್ಚಿ ಬೆಳಕಿಗೆ ತಂದರು. ಈ ಶಿಲಾಯುಧಗಳ ಸ್ವರೂಪ ಹಿನ್ನೆಲೆ ಹಾಗೂ ಪರಿಸರವನ್ನು ಆಧರಿಸಿ ಅವರು ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯೆಂದು ಹೆಸರಿಸಿದರು. ಈ ಬಗೆಯ ಆಯುಧಗಳು ಕೃಷ್ಣ ಅವರಲ್ಲದೆ ೧೯೪೭-೪೮ರಲ್ಲಿ ವೈಜ್ಞಾನಿಕ ಉತ್ಖನನ ಕೈಗೊಂಡ ಸರ್ ಮಾರ್ಟಿಮರ್ ವೀಲ್ಹರ್ ಅವರ ಶೋಧನೆಯಿಂದಲೂ ಪರಿಚಿತವಾದುವು.[೧೩] ಅದೇ ರೀತಿಯಾಗಿ ಚಿತ್ರದುರ್ಗದ ಭೌಗೋಳಿಕ ಪರಿಸರದ ಚಂದ್ರವಳ್ಳಿ, ನುಂಕಿಮಲೆ, ಪೋಜರ ಹಟ್ಟಿ, ಹಳೇಕೆರೆ, ಹರಳಯ್ಯಗುಡಿ ಮತ್ತು ಹಾನಗಲ್ಲು ನೆಲೆಗಳಲ್ಲಿನ ಉಪಕರಣಗಳಲ್ಲಿಯೂ ಇದೇ ಸಾಮ್ಯತೆ ಇರುವುದು ಕಂಡುಬರುತ್ತವೆ.[೧೪]

**ನೂತನ ಶಿಲಾಯುಗ ಸಂಸ್ಕೃತಿ**

ಚಿತ್ರದುರ್ಗ ಪರಿಸರದಲ್ಲಿ ಈವರೆಗೆ ಒಟ್ಟು ಹನ್ನೊಂದು ನೆಲೆಗಳು ಗುರುತಿಸಲಾಗಿದ್ದು ಹೆಚ್ಚಿನ ಎಲ್ಲ ನೆಲೆಗಳಲ್ಲೂ ವೈವಿಧ್ಯಮಯವಾದ ನೂತನ ಉಪಕರಣಗಳು ಕಂಡುಬಂದಿವೆ. ಅತೀ ಹೆಚ್ಚು ನೆಲೆಗಳು ಮೊಳಕಾಲ್ಮೂರು ತಾಲೂಕಿನಲ್ಲಿದ್ದರೆ. ಚಿತ್ರದುರ್ಗ ತಾಲೂಕಿನಲ್ಲಿ ನಾಲ್ಕು ನೆಲೆಗಳನ್ನು ಗುರುತಿಸಲಾಗಿದೆ. ಚಳ್ಳಕೆರೆ ತಾಲೂಕಿನಲ್ಲಿ ಏಕೈಕ ನೆಲೆ ಕಂಡು ಬಂದಿದೆ. ಅದರಲ್ಲಿಯೇ ಪ್ರಮುಖವಾಗಿ ಉತ್ಖನನಗಳು ನಡೆದಿರುವುದು ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಗಳಲ್ಲಿ. ಸ್ತರಗಳ ಸರ್ವೇಕ್ಷಣೀಯ ಸಮಯದಲ್ಲಿ ಸಾಕಷ್ಟು ಉಪಕರಣಗಳನ್ನು ಗುರುತಿಸಲಾಗಿದೆ. ಹಾಗೂ ವಿವಿಧ ಮಾದರಿಯ ಮಡಿಕೆಗಳು ಕೂಡ ದೊರೆತಿವೆ. ಪ್ರಮುಖ ನೆಲೆಗಳಾದ ಬ್ರಹ್ಮಗಿರಿ, ಚಂದ್ರವಳ್ಳಿ, ಜಟಿಂಗರಾಮೇಶ್ವರ, ಸಂತೆಗುಡ್ಡ, ನುಂಕಿಮಲೆ[೧೫] ಅರಶಿನಗುಂಡಿ, ಚಿಕ್ಕಮಲ್ಲನ ಹೊಳೆ, ಸಂಗೇನಹಳ್ಳಿಗಳ ಜಿನಗಿಹಳ್ಳದ ದಂಡೆಯ ಮೇಲೆ ಬೂದಿ ದಿಬ್ಬಗಳನ್ನು ಗುರುತಿಸಲಾಗಿದೆ.[೧೬] ನಂದಿಹಳ್ಳಿ, ಅರಸೂರು, ಹಳುವುದರ, ಎಮ್ಮನಗಟ್ಟಿ, ದೇವಿಕೆರೆಗಳಲ್ಲಿ[೧೭] ಗುರುತಿಸಲಾಗಿದೆ. ಈ ನೆಲೆಗಳಲ್ಲಿ ದೊರೆತಿರುವ ವಿವಿಧ ಮಾದರಿಯ ವಸ್ತು ಅವಶೇಷಗಳ ಅಧ್ಯಯನದಿಂದ ನೂತನ ಶಿಲಾಯುಗದ ಸಂಸ್ಕೃತಿಯ ಜೀವನ ಕ್ರಮದ ವಿವಿಧ ವಿಷಯಗಳನ್ನು ತಿಳಿಯಬಹುದಾಗಿದೆ.[೧೮]

ಒಟ್ಟಾರೆಯಾಗಿ ನೂತನ ಶಿಲಾಯುಗದ ಹಲವು ನೆಲೆಗಳನ್ನು ಚಿತ್ರದುರ್ಗ ಪರಿಸರದಲ್ಲಿ ಗುರುತಿಸಿದ್ದು, ಇವು ಮಾನವನ ಲೋಹ ಬಳಕೆಯ ಸ್ಥಿತ್ಯಂತರ ಯುಗದ ನೆಲೆಗಳು ಕಂಡುಬಂದಿದ್ದು, ಕೃಷಿಯನ್ನು ಆರಂಭಿಸಿದ ಪ್ರಾಥಮಿಕ ಹಂತ ಎಂದು ಗುರುತಿಸಲಾಗಿದೆ.

**ಶಿಲಾ ತಾಮ್ರಯುಗ ಸಂಸ್ಕೃತಿ**

ನೂತನ ಶಿಲಾಯುಗ ಸಂಸ್ಕೃತಿಯ ಹಂತದಿಂದ ಲೋಹದ ಅದಿರನ್ನು ಸಂಗ್ರಹಿಸುವುದು, ಲೋಹವನ್ನು ಪರಿವರ್ತಿಸುವುದು, ಲೋಹದ ವಿವಿಧ ವಸ್ತುಗಳನ್ನು ಸಿದ್ದಪಡಿಸುವುದು ಮಾನವನ ಜೀವನದ ಒಂದು ಪ್ರಮುಖ ಘಟ್ಟವಾಗಿದೆ. ಅದರಂತೆಯೇ ಶಿಲಾ ಉಪಕರಣಗಳ ಬಳಕೆ ಕಡಿಮೆಯಾಗಿ ತಾಮ್ರ ಅಥವಾ ಕಂಚಿನ ವಸ್ತುಗಳು, ಸೂಕ್ಷ್ಮ ಶಿಲೋಪಕರಣಗಳಾದ ಇಬ್ಬದಿ ಹಲಗಿನ ಉಪಕರಣಗಳ ಬಳಕೆ ಹಾಗೂ ಸುಟ್ಟ ಮಣ್ಣಿನ ಪಾತ್ರೆಗಳ ಉಪಯೋಗ, ಬಿಸಿಲಿನಲ್ಲಿ ಒಣಗಿಸಿದ ಸುಟ್ಟ ಮಣ್ಣಿನ ಪಾತ್ರೆಗಳ ಉಪಯೋಗ, ಬಿಸಿಲಿನಲ್ಲಿ ಒಣಗಿಸಿದ ಸುಟ್ಟ ಇಟ್ಟಿಗೆಯ ಉಪಯೋಗ ಮೊದಲಾದ ಹಲವಾರು ಬೆಳವಣಿಗೆಗಳನ್ನು ಕಂಡುಕೊಂಡಂತಹ ಹಂತವೇ 'ಶಿಲಾ-ತಾಮ್ರಯುಗ'ವೆಂದು ಕರೆಯಲಾಗಿದೆ.

ಈ ಸಾಂಸ್ಕೃತಿಕ ಹಂತವನ್ನು ಕರ್ನಾಟಕದ ಕೆಲವೇ ಭಾಗಗಳಲ್ಲಿ ಗುರುತಿಸಲಾಗಿದ್ದು, ದಕ್ಷಿಣ ಭಾರತದ್ದೇ ಆದ ಒಂದು ವಿಭಿನ್ನತೆಯನ್ನು ಕಂಡುಕೊಳ್ಳಾಗಿದೆ. ಈ ಸಂಸ್ಕೃತಿಯ ಅವಶೇಷಗಳನ್ನು ವಿವಿಧ ಸ್ಥಳಗಳಲ್ಲಿ ನಡೆಸಿದ ಸರ್ವೇಕ್ಷಣೆ ಹಾಗೂ ಕೆಲವೇ ಸ್ಥಳಗಳಲ್ಲಿ ನಡೆಸಿದ ಉತ್ಖನನದಿಂದ ಕಂಡುಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಚಿತ್ರದುರ್ಗ ಜಿಲ್ಲೆಯಲ್ಲಿಯ ಬ್ರಹ್ಮಗಿರಿ ಉತ್ಖನನವು ಈ ಹಂತದ ಒಂದು ಬೆಳವಣಿಗೆಯನ್ನು ಗುರುತಿಸಲು ಸಹಾಯಕವಾಗಿದೆ. ಚಿತ್ರದುರ್ಗ ಪ್ರದೇಶದಲ್ಲಿ ದೊರೆತ ಶಿಲಾ-ತಾಮ್ರಯುಗದ ನೆಲೆಗಳಾದ ಚಂದ್ರವಳ್ಳಿ[೧೯] ಜಟಿಂಗರಾಮೇಶ್ವರ[೨೦] ಚಿತ್ರದುರ್ಗ[೨೧] ಬ್ರಹ್ಮಗಿರಿ[೨೨] ನೆಲೆಗಳನ್ನು ಗುರುತಿಸಲಾಗಿದೆ. ಬ್ರಹ್ಮಗಿರಿ ಉತ್ಖನನದಿಂದಾಗಿ ಕರ್ನಾಟಕದಲ್ಲಿ 'ಶಿಲಾ-ತಾಮ್ರಯುಗ' ಸಂಸ್ಕೃತಿಯ ಹಂತ ಇರುವುದನ್ನು ಖಚಿತಪಡಿಸಿಕೊಳ್ಳಲಾಯಿತು. ನೂತನ ಶಿಲಾಯುಗ ಸಂಸ್ಕೃತಿಯ ವಿಭಾಗವಾಗಿ 'ಶಿಲಾತಾಮ್ರಯುಗದ ಅವಶೇಷಗಳನ್ನು ಶೋಧಿಸಲಾಗಿದ್ದು, ಈ ಉತ್ಖನನದಲ್ಲಿ ದೊರೆತ ಪ್ರಶಸ್ತಿ ಶಿಲೆಯ ಉದ್ದನೆಯ ಸೂಕ್ಷ್ಮ ಶಿಲೋಪಕರಣಗಳು ಹಾಗೂ ಅಲ್ಪ ಪ್ರಮಾಣದಲ್ಲಿ ದೊರೆತ ಲೋಹದ ವಸ್ತುಗಳು ಮತ್ತು ವಿಭಿನ್ನ ಮಾದರಿಯ ಮಡಿಕೆ ಭಾಗಗಳು ಪ್ರಮುಖವಾಗಿ ಕಂಡುಬಂದು ಶಿಲಾ ತಾಮ್ರಯುಗದ ವಸ್ತು ಅವಶೇಷಗಳಾಗಿವೆ.[೨೩]

**ಕಬ್ಬಿಣ ಯುಗದ ಬೃಹತ್ ಶಿಲಾಯುಗ ಸಂಸ್ಕೃತಿ**

ಲೋಹ ಪ್ರಾಚೀನತೆಯು ಪ್ರಪಂಚದ ಎಲ್ಲ ಪ್ರದೇಶಗಳಲ್ಲಿಯ ತಾಮ್ರ-ಶಿಲಾ (ಚಾಲ್ಕೋಲಿಥಿಕ್) ಸಂಸ್ಕೃತಿಗಳಷ್ಟು ಹಿಂದಿನದಾಗಿದೆ. ಭಾರತದಲ್ಲಿ ವಿಶೇಷವಾಗಿ ದಖನ್‌ನಲ್ಲಿಯೂ ಮಧ್ಯ ಮತ್ತು ಪಶ್ಚಿಮ ಭಾಗಗಳಲ್ಲಿಯ ಅನೇಕ ಸ್ಥಳಗಳಲ್ಲಿಯೂ ಇಂತಹ ತಂತ್ರಗಾರಿಕೆಯ ಅವಶೇಷಗಳು ಕಂಡುಬರುತ್ತದೆ. ಸಾಮಾನ್ಯ ಕ್ರಿ.ಪೂ.೩ನೇ ಶತಮಾನದಿಂದ ಹಿಡಿದು ಕಬ್ಬಿಣಯುಗದ ಪ್ರಾರಂಭದ ಕಾಲಾವಧಿಯವರೆಗೂ ಸಂಬಂಧಿಸಿದಂತೆ ಈ ಅವಶೇಷಗಳು ಇದ್ದಿರಬಹುದು ಎಂದು ತರ್ಕಿಸಲಾಗಿದೆ.[೨೪]

ಕಬ್ಬಿಣ ಯುಗದ ಬೃಹತ್ ಶಿಲಾಯುಗದ ಸಂಸ್ಕೃತಿಯು ಕರ್ನಾಟಕದ ಎಲ್ಲ ಕಡೆ ಪಸರಿಸಿದ್ದು, ಆಯಾಯ ಪ್ರದೇಶಗಳಲ್ಲಿ ದೊರೆತಿರುವ ಗೋರಿ ನೆಲೆಗಳು ಅಥವಾ ವಾಸ್ತವ್ಯದ ನೆಲೆಗಳು ಪುಷ್ಟಿ ನೀಡಿವೆ. ಈ ಎಲ್ಲಾ ಪ್ರದೇಶಗಳ ಅಧ್ಯಯನದಿಂದ ತಿಳಿದುಬರುವ ಹಲವು ಮುಖ್ಯ ಅಂಶಗಳನ್ನು ಪರಿಶೀಲಿಸಿದರೆ ಈ ಸಾಂಸ್ಕೃತಿಕ ಹಂತದಲ್ಲಿ ಎರಡು ವರ್ಗಗಳ ಜನ ಸಮುದಾಯಗಳು ಇರುವುದು ತಿಳಿದುಬರುತ್ತದೆ. ಪಶುಸಂಗೋಪನೆಯನ್ನು ಮುಖ್ಯ ಕಸುಬನ್ನಾಗಿ ಹೊಂದಿದ ಅರೆ ಅಲೆಮಾರಿಗಳಾಗಿದ್ದ ಜನ ಒಂದು ಸಮುದಾಯವಾದರೆ ಮತ್ತೊಂದು ಜನಾಂಗ ಕೃಷಿಯನ್ನು ಮುಖ್ಯ ಕಸುಬನ್ನಾಗಿಸಿಕೊಂಡು ಒಂದೆಡೆ ನೆಲೆ ನಿಂತ ಜನ ಸಮುದಾಯವಾಗಿದೆ. ಕೆಲವೇ ನೆಲೆಗಳಲ್ಲಿ ನಡೆದಿರುವ ಉತ್ಖನನದಿಂದ ಈ ಜನ ಸಮುದಾಯದ ಸಾಂಸ್ಕೃತಿಕ ಪರಂಪರೆ. ಅದರಲ್ಲಾದ ಬೆಳವಣಿಗೆ ಹಾಗೂ ವಿವಿಧ ಗೋರಿ ಮಾದರಿಯ ನಿರ್ಮಾಣ ಇವುಗಳ ಅಧ್ಯಯನದ ದೃಷ್ಟಿಕೋನದಲ್ಲಿ ಈ ಸಂಸ್ಕೃತಿಯ ಬಗೆಗೆ ತಿಳಿಯಲು ಸಹಾಯವಾಗುತ್ತದೆ.[೨೫] ಪ್ರಾಚೀನ ಕಬ್ಬಿಣದ ಗಣಿಗಾರಿಕೆಗೆ ಸಂಬಂಧಿಸಿದ ಮಾಹಿತಿಗಳನ್ನು ಸಂಗ್ರಹಿಸಿ ಪ್ರಸ್ತುತ ಕಾಲಮಾನದ ಬೃಹತ್ ಪ್ರಮಾಣದಲ್ಲಿ ನಡೆಯುತ್ತಿರುವ ಕಬ್ಬಿಣ ಅದಿರುಗಳನ್ನು ಪಡೆಯುತ್ತಿದ್ದ ನೆಲೆಗಳ ಪ್ರಾಚೀನತೆಯ ಬಗ್ಗೆ ತಿಳಿಯಲು ಸಹಾಯಕವಾಗುತ್ತದೆ.

ಗಣಿಗಾರಿಕೆ ಅದಿರು ಸಂಗ್ರಹಿಸುವುದು, ಅದಿರಿನಿಂದ ಲೋಹವನ್ನು ಬೇರ್ಪಡಿಸುವುದು ಹಾಗೂ ಇನ್ನಿತರ ಕ್ಲಿಷ್ಟವಾದ ಕೆಲವು ಹಂತಗಳಲ್ಲಿರುವ ಕ್ರಮಗಳು ಲೋಹ ತಂತ್ರಗಾರಿಕೆಯಲ್ಲಿ ಅಡಕವಾಗಿದೆ. ಲೋಹ ಉಪಕರಣಗಳು ಬಳಕೆಯಲ್ಲಿ ಬಂದ ಅನಂತರ ಮಾತ್ರವೇ ಕೃಷಿ ಮತ್ತು ಪಶುಸಂಗೋಪನೆಗಳ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಲು ತನ್ನ ಸಂರಕ್ಷಣೆಯನ್ನು, ಆರ್ಥಿಕ ಸೌಖ್ಯವನ್ನು ಕೂಡ ಭದ್ರಪಡಿಸಿಕೊಳ್ಳಲು ಅವನಿಗೆ ಸಾಧ್ಯವಾಯಿತು. ಲೋಹ ತಂತ್ರಗಾರಿಕೆಯಲ್ಲಿ ಹಂತಗಳ ಕ್ರಮಗಳನ್ನು ತಿಳಿದುಕೊಳ್ಳಬೇಕಾದರೆ ಈ ಕೆಳಕಂಡ ಕೆಲವು ಅಂಶಗಳತ್ತ ಗಮನಹರಿಸಬೇಕಾಗುವುದು ಅಗತ್ಯ (ಅ) ಅದಿರು ಲಭ್ಯ ಪ್ರದೇಶಗಳಲ್ಲಿ ಗಣಿಗಳು (ಬ) ಲೋಹವನ್ನು ಬೇರ್ಪಡಿಸುವ ಇಲ್ಲವೆ ಅದಿರನ್ನು ಕರಗಿಸುವ ವಿಧಾನದ ಪೂರ್ವ ಸಿದ್ಧತೆ, (ಕ) ವಿಶಿಷ್ಟ ರೀತಿಯ ಪ್ರಯೋಜನೆಗಳಿಗಾಗಿ ಬಳಸಲು ಬೇಕಾದ ಉಪಕರಣ ಉತ್ಪಾದನೆ ಕಂಬಾರಿಕೆಯ ವಿಧಾನಗಳು ರೂಪಿಸುವುದು. ಈ ಅಂಶಗಳು ತಾಮ್ರ ಮತ್ತು ಕಬ್ಬಿಣ. ಈ ಎರಡೂ ಲೋಹಗಳ ತಯಾರಿಕೆಗೆ ಸಂಬಂಧಪಟ್ಟಿರುತ್ತವೆ.[೨೬] ತಾಮ್ರ ಮತ್ತು ಕಬ್ಬಿಣದ ಅದಿರು ನಿಕ್ಷೇಪಗಳು ದೊರೆತಿರುವ ನೆಲೆಗಳಲ್ಲಿ ಬೃಹತ್ ಶಿಲಾಯುಗದ ಮಾನವನು ಗಣಿಗಾರಿಕೆಯನ್ನು ಮಾಡಿದ್ದು ಅದರ ಮೂಲಕ ಬೂದಿದಿಬ್ಬಗಳು, ಗೋರಿ ಮತ್ತು ನೆಲೆಗಳನ್ನು ಗುರುತಿಸಲಾಗಿದೆ.

ವಾಸ್ತವ್ಯದ ನೆಲೆಗಳು ಹೆಚ್ಚಿನದಾಗಿ ನೀರಿನಾಸರೆ, ಕಣಿವೆ ಪ್ರದೇಶ, ಕೃಷಿಗೆ ಯೋಗ್ಯವಾದಂತಹ ಭೂ ಪ್ರದೇಶ ಇರುವಂತಹ ಸ್ಥಳಗಳಲ್ಲಿ ಕಂಡುಬಂದಿರುವುದರಿಂದ ಅಂತಹ ಭೂ ಭಾಗವನ್ನು ಕೃಷಿಗೆ ತೊಡಗಿಸಿರಬಹುದೆಂದು ತಿಳಿಯಬಹುದಾಗಿದೆ.[೨೭]

ಚಿತ್ರದುರ್ಗ ಪ್ರದೇಶದ ಇಂಗಳದಾಳುನಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ನೆಲೆಯೊಂದರಲ್ಲಿ ಶವ ಸಂಸ್ಕಾರ ಪದ್ಧತಿಯು ಅನುಕ್ರಮವಾಗಿ ನವಶಿಲಾಯುಗ, ತಾಮ್ರಶಿಲಾಯುಗ ಹಾಗೂ ಕಬ್ಬಿಣಯುಗ ಸಂಸ್ಕೃತಿಗಳಿಗೆ ಸಂಬಂಧಪಟ್ಟ ಸ್ತರಗಳು ಕಂಡುಬರುತ್ತದೆ.[೨೮] ಇಂಗಳದಾಳು ತಾಮ್ರದ ಅದಿರಿನ ವಲಯಗಳಲ್ಲಿ ಕೆಲವು ಪ್ರಾಚೀನ ಕಾರ್ಯಗಾರಗಳ ಕುರುಹುಗಳಿವೆ. ಇವುಗಳಲ್ಲಿ ಒಂದು ಕುಣಿಯಲ್ಲಿ ಮರದ ಸನ್ನೆ ದೊರೆತಿದ್ದು, ಇದರ ಕಾಲಮಾನ ಸು.ಕ್ರಿ.ಪೂ.೩ನೇ ಶತಮಾನವೆಂದು ಇಂಗಾಲ-೧೪ರ ವಿಧಾನದಿಂದ ತಿಳಿದಿದೆ.[೨೯] ಮಾರ್ಟಿಮರ್ ವ್ಹೀಲರ್ ಅವರು ನಡೆಸಿದ ಭೂ ಸಂಶೋಧನೆಯ ಫಲವಾಗಿ ಈ ಪ್ರದೇಶದ ವಿವಿಧ ನಮೂನೆಯ ಬೃಹತ್ ಗೋರಿಗಳು ಬೆಳಕಿಗೆ ಬಂದವು. ಇದೇ ರೀತಿ ಚಿಕ್ಕ ಮಧುರೆ, ಇಂಗಳದಾಳು, ಕೂನ ಬೇವು, ಚಂದ್ರವಳ್ಳಿ, ನರೇನಾಳ್, ಚಿಪ್ಪಿನಕೆರೆ, ಜಂಪಣ್ಣ ನಾಯಕನ ಕೋಟೆ, ತಮಟಕಲ್ಲು, ಜಟಿಂಗರಾಮೇಶ್ವರ, ನುಂಕಿಮಲೆ, ಮೊಳಕಾಲ್ಮೂರು, ಹಳೆಕೆರೆ, ಹಾನಗಲ್ಲು, ಅಕ್ಕಮನಗುಡ್ಡ, ಕೈಗುಡ್ಡ, ಮೋರ್ಲುಬಂಡೇ ಗುಡ್ಡ, ಬಸಾಪುರ, ವಡೇರಹಳ್ಳಿ, ವೆಂಕಟಾಪುರ, ಸಂತೆ ಗುಡ್ಡ, ಹನುಮನಗುಡ್ಡ, ದಡಗೂರು, ನಾಗಸಮುದ್ರ, ತಳವಾರಹಳ್ಳಿ, ಭಟ್ಟರಹಳ್ಳಿ, ಬೈರಾಪುರ, ಮೇಗಳಹಳ್ಳಿ, ಮೇಚ್ಚಿ, ಯರ್ರನಹಳ್ಳಿ, ರಾಮಸಾಗರ, ಕೆ.ರಾಯಪುರ[೩೦] ಗಂಜಿಗುಂಟೆ, ತಾಳ್ಯ, ನಂಧನ ಹೊಸೂರು, ನೇರ್ಲಗೊಂದಿ, ಪೂಜರಹಟ್ಟಿ, ಬಾರ್ಲಗೊಂದಿ, ಬೂದಿಪುರ, ಬ್ರಹ್ಮಗಿರಿ[೩೧] ಹರಳಯ್ಯ ಗುಡಿ[೩೨] ಹೀಗೆ ಹಲವು ನೆಲೆಗಳನ್ನು ಗುರುತಿಸಿದ್ದು ಕರ್ನಾಟಕದ ಭೂ ಪ್ರದೇಶದಲ್ಲಿ ಇದುವರೆಗೆ ೨೧೮ ವಾಸ್ತವ್ಯದ ನೆಲೆಗಳು ಹಾಗೂ ೬೦೨ ಗೋರಿ ನೆಲೆಗಳನ್ನು ಶೋಧಿಸಿ ಕೂಲಂಕುಷ ಅಧ್ಯಯನ ನಡೆಸಲಾಗಿದೆ.

## ಚಿತ್ರದುರ್ಗ ಜಿಲ್ಲೆಯ ಪುರಾತತ್ವ ನೆಲೆಗಳು

| ಕ್ರ.ಸಂ. | ಗ್ರಾಮ/ ನೆಲೆಯ ಹೆಸರು ತಾಲ್ಲೂಕು | ಹಳೆಯ ಶಿಲಾ ಯುಗ | | | ಸೂಕ್ಷ್ಮ ಶಿಲಾ ಯುಗ | ನೂತನ ಶಿಲಾ ಯುಗ | ಶಿಲಾ ತಾಮ್ರ ಯುಗ | ಬೃಹತ್ ಶಿಲಾಯುಗ | | ಒಟ್ಟು |
|---|---|---|---|---|---|---|---|---|---|---|
| | | ಆದಿ | ಮಧ್ಯ | ಅಂತ್ಯ | | | | ನೆಲೆ | ಗೋರಿ | |
| 1. | ಇಂಗಳದಾಳ (ಚಿತ್ರದುರ್ಗ) | | | | | | | | ✓ | 1 |
| 2. | ಕೂನಬೇವು (ಚಿತ್ರದುರ್ಗ) | | | | | | | | ✓ | 1 |
| 3. | ಗಂಜಿಗುಂಟೆ (ಚಳ್ಳಕೆರೆ) | | | | | | | | ✓ | 1 |
| 4. | ಚಂದ್ರವಳ್ಳಿ (ಚಿತ್ರದುರ್ಗ) | | | | | ✓ | ✓ | ✓ | | 3 |
| 5. | ಚಿಕ್ಕಮದುರೆ (ಚಳ್ಳಕೆರೆ) | | | | | ✓ | | ✓ | | 2 |
| 6. | ಚಿತ್ರದುರ್ಗ (ಚಿತ್ರದುರ್ಗ) | | | | | ✓ | ✓ | ✓ | | 3 |
| 7. | ಚಿಪ್ಪಿನಕೆರೆ (ಚಿತ್ರದುರ್ಗ) | | | | | | | ✓ | | 1 |
| 8. | ಜಂಪಣ್ಣ ನಾಯಕನ ಕೋಟೆ (ಚಿತ್ರದುರ್ಗ) | | | | | | | | ✓ | 1 |
| 9. | ಜಟಿಂಗರಾಮೇಶ್ವರ (ಮೊಳಕಾಲ್ಮೂರು) | | | | | ✓ | ✓ | | | 2 |
| 10. | ಜಾನಕಲ್ಲು (ಹೊಸದುರ್ಗ) | ✓ | | | | | | | | 1 |
| 11. | ತಮಟಕಲ್ಲು (ಚಿತ್ರದುರ್ಗ) | | | | | | | | ✓ | 1 |
| 12. | ತಾಳ್ಯ (ಹೊಳಲ್ಕೆರೆ) | ✓ | | | | | | | ✓ | 2 |
| 13. | ದೊಡ್ಡೇರಿ (ಚಳ್ಳಕೆರೆ) | | | | | ✓ | | ✓ | | 2 |
| 14. | ನಂದನ ಹೊಸೂರು (ಹೊಳಲ್ಕೆರೆ) | | | | | | | | ✓ | 1 |
| 15. | ನುಂಕೆಮಲೆ (ಮೊಳಕಾಲ್ಮೂರು) | | | | ✓ | ✓ | | | ✓ | 3 |

| | | | | | | | | | | |
|---|---|---|---|---|---|---|---|---|---|---|
| 16. | ನೇರ್ಲಗೊಂದಿ (ಚಿತ್ರದುರ್ಗ) | | | | | ✓ | | | ✓ | 1 |
| 17. | ಪರಶುರಾಂಪುರ (ಚಳ್ಳಕೆರೆ) | | | | | | | | | 1 |
| 18. | ಪೋಜರಹಟ್ಟಿ (ಮೊಳಕಾಲ್ಮೂರು) | | | | ✓ | ✓ | | | | 2 |
| 19. | ಬಾರ್ಲಗೊಂದಿ (ಚಂದ್ರವಳ್ಳಿ) ಚಿತ್ರದುರ್ಗ | | | | | ✓ | | | | 1 |
| 20. | ಬೂದಿಪುರ (ಹೊಳಲ್ಕೆರೆ) | | | | | | | | ✓ | 1 |
| 21 | ಬ್ರಹ್ಮಗಿರಿ (ಮೊಳಕಾಲ್ಮೂರು) | | | | ✓ | ✓ | ✓ | | ✓ | 4 |
| 22. | ಮೊಳಕಾಲ್ಮೂರು (ಮೊಳಕಾಲ್ಮೂರು) | | | | | | ✓ | | | 1 |
| 23. | ಯಾದಲಗಟ್ಟ (ಚಳ್ಳಕೆರೆ) | | | | | ✓ | | | ✓ | 2 |
| 24. | ಸಂಗೇನಹಳ್ಳಿ (ಚಿತ್ರದುರ್ಗ) | | | | | ✓ | | | | 1 |
| 25. | ಹರಳಯ್ಯ ಗುಡಿ (ಮೊಳಕಾಲ್ಮೂರು) | | | | ✓ | | | | | 1 |
| 26. | ಹಳೇಕೆರೆ (ಮೊಳಕಾಲ್ಮುರು) | | | | ✓ | ✓ | | | ✓ | 3 |
| 27. | ಹಾನಗಲ್ಲು (ಮೊಳಕಾಲ್ಮುರು) | | | | ✓ | ✓ | | | ✓ | 3 |
| | **ಒಟ್ಟು** | **2** | **–** | **–** | **6** | **14** | **4** | **6** | **14** | **46** |

**ಕೃಪೆ. ಕೆ.ಬಿ.ಶಿವತಾರಕ್, ಚಿತ್ರದುರ್ಗ ಜಿಲ್ಲೆಯ ಪ್ರಾಗಿತಿಹಾಸ**

ಒಟ್ಟಾರೆಯಾಗಿ ಚಿತ್ರದುರ್ಗದಲ್ಲಿ ದೊರೆತಿರುವ ಪ್ರಾಗೈತಿಹಾಸಿಕ ಕಾಲದ ವಿವಿಧ ಕಾಲಮಾನದ ವಸ್ತು ಅವಶೇಷಗಳು ಹಾಗೂ ಇಲ್ಲಿ ನಡೆದಿರುವ ಉತ್ಖನನಗಳು ಇಲ್ಲಿನ ಸಾಂಸ್ಕೃತಿಕ ಹಂತಗಳ ಕಾಲಮಾನವನ್ನು ತಿಳಿಯಲು ಸಹಾಯಕವಾಗಿವೆ. ಅದರಂತೆ ಈಗಾಗಲೇ ತಿಳಿಯಲಾಗಿರುವಂತೆ ಈ ಪ್ರದೇಶದಲ್ಲಿ ಪ್ರಾಗಿತಿಹಾಸಕಾಲದ ರೇಖಾಕೃತಿ, ವರ್ಣ ಚಿತ್ರಗಳು, ಆದಿ ಹಳೇ ಶಿಲಾಯುಗ ಸಂಸ್ಕೃತಿ, ಸೂಕ್ಷ್ಮ ಶಿಲಾಯುಗ ಸಂಸ್ಕೃತಿ, ನೂತನ ಶಿಲಾಯುಗ ಸಂಸ್ಕೃತಿ, ಶಿಲಾ-ತಾಮ್ರಯುಗ ಸಂಸ್ಕೃತಿ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿ, ಹಾಗೂ ಕಬ್ಬಿಣ ಯುಗದ ಗಣಿಗಾರಿಕೆಯು ಮುಂದುವರೆದ ನೆಲೆಗಳ ಸ್ಥಿತ್ಯಂತರ ಇಲ್ಲಿ ಇದ್ದುದು ಸ್ಪಷ್ಟವಾಗಿ ತಿಳಿಯುತ್ತದೆ. ಇಲ್ಲಿನ ಉತ್ಖನನಗಳು ಕೆಲವು ಹಂತಗಳಿಗೆ ನಿರ್ಧಿಷ್ಟ ಕಾಲಮಾನವನ್ನು ಸೂಚಿಸಿದರೆ ಮತ್ತೆ ಉಳಿದ ನೆಲೆಗಳನ್ನು ಅದರಲ್ಲಿಯೂ ಆರಂಭಿಕ ಹಂತಗಳಾದ ಆದಿ ಹಳೆ ಶಿಲಾಯುಗ ಮತ್ತು ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಹಂತಗಳ ಕಾಲಮಾನವನ್ನು ನಿರ್ಧರಿಸಲು ನೆರೆಯ ಪ್ರದೇಶಗಳಾದ ಬಳ್ಳಾರಿ, ಶಿವಮೊಗ್ಗ, ಚಿಕ್ಕಮಗಳೂರು, ತುಮಕೂರು, ಮತ್ತು ಅನಂತಪುರ ಜಿಲ್ಲಾ ಪ್ರದೇಶಗಳಲ್ಲಿ ನಿರ್ಧರಿಸಿರುವ ಕಾಲಮಾನವನ್ನು ಅವಲೋಕಿಸಿ ಪ್ರಸ್ತುತ ಪ್ರಾಗೈತಿಹಾಸಿಕ ನೆಲೆಗಳ ಕಾಲಮಾನವನ್ನು ನಿರ್ಧರಿಸಲಾಗಿದೆ.

**೩.೨. ಇತಿಹಾಸ ಕಾಲ**

ಮಾನವನ ವಿಕಾಸದ ಹಂತದಲ್ಲಿ ಅಕ್ಷರಗಳ ಆವಿಷ್ಕಾರ ಬಹುಮುಖ್ಯ ಹಂತವಾಗಿದೆ. ಅಕ್ಷರಗಳ ಆವಿಷ್ಕಾರದ ನಂತರದ ಹಂತವನ್ನು ಇತಿಹಾಸ ಅಥವಾ ಚಾರಿತ್ರಿಕ ಕಾಲವೆನ್ನಬಹುದು. ಪ್ರಸ್ತುತ ಪ್ರದೇಶದಲ್ಲಿ ಶಾಸನಗಳು ದೊರೆಯುವ ಕಾಲದಿಂದ ಅಂದರೆ, ಮೌರ್ಯರಿಂದ ಹಿಡಿದು ಚಿತ್ರದುರ್ಗದ

ನಾಯಕರ ಕಾಲದವರೆಗೂ ಆಳ್ವಿಕೆ ನಡೆಸಿದ ಪ್ರಭುತ್ವಗಳ ಕಿರು ಪರಿಚಯ ಮಾಡುತ್ತಾ ಅವರ ಕಾಲದ ಕೃಷಿ ಹಾಗೂ ವ್ಯಾಪಾರದ ಜೊತೆಯಲ್ಲಿ ಜನರ ಬದುಕಿನ ಹಿನ್ನಲೆಯ ಅಂಶಗಳನ್ನು ಸಿಕ್ಕಲ್ಲಿ ಬಳಸಿಕೊಳ್ಳಲು ಪ್ರಯತ್ನ ಮಾಡಲಾಗಿದೆ. ಕಾರಣ ಬಹುತೇಕ ದಾಖಲೆಗಳು ನಿಂತಿರುವುದು ರಾಜ, ಮಂತ್ರಿ, ಇನ್ನಿತರೆ ಯುದ್ಧ, ಒಪ್ಪಂದ, ಧಾನ-ದತ್ತಿಗೆ ಸಂಬಂಧಿಸಿದ ಹೆಚ್ಚಿನ ಶಾಸನಗಳು ದೊರೆತಿರುವುದರಿಂದ ಸಾಮಾನ್ಯ ಜನರ ಬದುಕಿನ ಈ ಶಾಸನಗಳನ್ನು ತಳಸ್ಪರ್ಶಿಯಾಗಿ ಅಧ್ಯಯನ ಮಾಡುವುದರ ಮೂಲಕ ಅಲ್ಪ ಪ್ರಮಾಣದ ಮಾಹಿತಿ ನೀಡಲಾಗಿದೆ.

ಚಿತ್ರದುರ್ಗ ಪರಿಸರದಲ್ಲಿ ದೊರೆತಿರುವ ಶಾಸನಗಳನ್ನು ಆಧರಿಸಿ ಪ್ರಾಚೀನ ಕಾಲದ ನಗರಗಳನ್ನು ಗುರುತಿಸುವ ಹಾಗೂ ಯಾವ ರಾಜ ವಂಶಸ್ಥರ ಕಾಲದಲ್ಲಿ ಈ ಪ್ರದೇಶಗಳು ಹೆಚ್ಚು ಆರ್ಥಿಕವಾಗಿ ಪ್ರಬಲವಾಗಿ ಬೆಳೆದವು ಎಂಬುದನ್ನು ಕುರಿತಾಗಿ ಅಧ್ಯಯನ ಮಾಡಲಾಗಿದೆ. ಪ್ರಾಚೀನ ಕಾಲದಿಂದಲೂ ಜನಸಂಸ್ಕೃತಿ ಈ ಪ್ರದೇಶದಲ್ಲಿ ಗಟ್ಟಿಯಾಗಿ ಬೇರೂರಿದ್ದಕ್ಕೆ ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ ಉತ್ಖನನಗಳು ಸಾಕ್ಷಿಯಾಗಿವೆ. ಐತಿಹಾಸಿಕವಾಗಿ ಈ ಪ್ರದೇಶದಲ್ಲಿ ನಮಗೆ ಮಾಹಿತಿ ದೊರೆಯುವುದು ಮೌರ್ಯ ಸಾಮ್ರಾಟ ಅಶೋಕನ ಕಾಲದಿಂದ ಸು.ಕ್ರಿ.ಪೂ.೩ನೇ ಶತಮಾನದಲ್ಲಿಯೇ ಈ ಭಾಗವು ಮೌರ್ಯರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ಹೇಳಬಹುದು.

**ಮೌರ್ಯರು**

ಕರ್ನಾಟಕದ ಬಹುಭಾಗವು ಮೌರ್ಯ ಸಾಮ್ರಾಜ್ಯದ ಒಂದು ಭಾಗವಾಗಿದ್ದಿತು.[೩೪] ಕರ್ನಾಟಕದಲ್ಲಿ ಇತಿಹಾಸ ಯುಗ ಆರಂಭವಾಗುವುದು, ಸದ್ಯ ತಿಳಿದಂತೆ ಸು.ಕ್ರಿ.ಪೂ.೩-೪ನೇ ಶತಮಾನಗಳಿಂದ. ಉತ್ತರ ಭಾರತದಲ್ಲಿ ಆಳುತ್ತಿದ್ದ ಮೌರ್ಯ ವಂಶದ ಅರಸರು ಕರ್ನಾಟಕದ ಉತ್ತರ ಭಾಗದಲ್ಲಂತೂ ತಮ್ಮ ರಾಜ್ಯವನ್ನು ವಿಸ್ತರಿಸಿದ್ದರೆಂಬುದಕ್ಕೆ ಸಾಕ್ಷ್ಯಾಧಾರಗಳಿವೆ. ಕರ್ನಾಟಕದಲ್ಲಿ ಬ್ರಹ್ಮಗಿರಿ, ಸಿದ್ಧಾಪುರ, ಜಟಿಂಗರಾಮೇಶ್ವರ, ಚಂದ್ರವಳ್ಳಿ, ಕೊಪ್ಪಳ, ಉದೆಗೊಳಂ, ನಿಟ್ಟೂರು ಮತ್ತು ಸನ್ನತಿ ಇಲ್ಲಿ ದೊರೆತ ಉತ್ಖನನ ವರದಿ ಹಾಗೂ ಶಾಸನಗಳಿಂದ ಕರ್ನಾಟಕದಲ್ಲಿ ನೇರವಾಗಿ ಮೌರ್ಯ ಸಾಮ್ರಾಜ್ಯದ ಅಧೀನಕ್ಕೊಳಪಟ್ಟ ಪ್ರದೇಶಗಳೆಂಬುದು ಸ್ಪಷ್ಟವಾಗುತ್ತದೆ.[೩೫]

ಮೊಳಕಾಲ್ಮೂರು ತಾಲ್ಲೂಕಿನ ಜಟಿಂಗರಾಮೇಶ್ವರ, ಸಿದ್ದಾಪುರ ಮತ್ತು ಬ್ರಹ್ಮಗಿರಿಗಳಲ್ಲಿ ಅಶೋಕನ ಶಾಸನಗಳು ದೊರೆತಿದ್ದು. ಈ ಭಾಗದಲ್ಲಿ ಹಲವಾರು ವಿದ್ವಾಂಸರ ಪ್ರಕಾರ ಈ ಪ್ರದೇಶವು ಅಶೋಕನ ಶಾಸನದಲ್ಲಿ ಉಲ್ಲೇಖಗೊಂಡಿರುವ 'ಇಸಿಲ' ಎಂಬ ಪಟ್ಟಣ ಇತ್ತೆಂಬುದು ತಿಳಿದುಬರುತ್ತದೆ. ಎಂ.ಎಚ್.ಕೃಷ್ಣ ಅವರು ಇಸಿಲ ನಗರಿಯನ್ನು ಬ್ರಹ್ಮಗಿರಿ ಪ್ರದೇಶದಲ್ಲಿ ಇತ್ತೆಂದು ಊಹಿಸಿರುತ್ತಾರೆ.[೩೬]

ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಯಲ್ಲಿ ನಡೆಸಿದ ಪುರಾತತ್ವ ಉತ್ಖನನಗಳು ಮೌರ್ಯರ ಕಾಲದ ಮೇಲೆ ಬೆಳಕು ಚೆಲ್ಲುತ್ತವೆ. ಮೌರ್ಯರ ಕಾಲಕ್ಕೆ ಸೇರಿರಬಹುದಾದ ಔತ್ತರೇಯ ಕಪ್ಪು ಮಣ್ಣಿನ ಹೊಳಪಿನ ಪಾತ್ರೆಗಳು, ಮುದ್ರಾಂಕಿತ ನಾಣ್ಯಗಳು ಇಲ್ಲಿ ದೊರೆತಿವೆ. ಕಪ್ಪು ಮಣ್ಣಿನ ಹೊಳಪಿನ ಪಾತ್ರೆಗಳು ಮೌರ್ಯರ ಕಾಲದ ಸಂಸ್ಕೃತಿಯ ಕುರುಹುಗಳಾಗಿವೆ. ಅಲ್ಲದೆ ಮುದ್ರಾಂಕಿತ ನಾಣ್ಯಗಳೂ ಸಹ ಆ ಕಾಲಕ್ಕೆ ಸೇರಿಸಲ್ಪಡುತ್ತವೆ. ಇವುಗಳ ಸಹಾಯದಿಂದ ಈ ಪ್ರದೇಶದಲ್ಲಿ ಮೌರ್ಯರ ಸಂಸ್ಕೃತಿ ಗಾಢವಾಗಿ ಬೇರೂರಿತ್ತು ಎಂದು ಹೇಳಬಹುದು. ಬ್ರಹ್ಮಗಿರಿಯಲ್ಲಿ ದೊರೆತಿರುವ ಇಟ್ಟಿಗೆಯ ಗಜಪಿಷ್ಟಾಕೃತಿಯ ಕಟ್ಟಡವು ಬಹುಶಃ ಬೌದ್ಧ ಚೈತ್ಯಾಲಯ ಇದ್ದಿರಬಹುದೆಂದು ತೋರುತ್ತದೆ. ಇವುಗಳ ಆಧಾರದಿಂದ ಧಾರ್ಮಿಕವಾಗಿ ಈ ಪ್ರದೇಶದ ಮಹತ್ವವನ್ನು ಸಹ ತಿಳಿಯಬಹುದಾಗಿದೆ.[೩೭]

ಮೌರ್ಯರ ಕಾಲಾವಧಿಯಲ್ಲಿಯೇ ನಗರ-ಪಟ್ಟಣಗಳು ರೂಪುಗೊಂಡಿದ್ದು ಕೆಲವು ನೆಲೆಗಳು ಶಾಶ್ವತ ನೆಲೆಗಳಾಗಿ ಕಂಡು ಬಂದರೆ ಇನ್ನೂ ಕೆಲವು ನೆಲೆಗಳು ಹಲವು ಕಾರಣಗಳಿಂದ ಕಣ್ಮರೆಯಾಗಿರುವ ಉದಾಹರಣೆಗಳು ಸಾಕಷ್ಟು ದೊರೆಯುತ್ತವೆ. ಉದಾ: ಮೌರ್ಯ ಸಾಮ್ರಾಜ್ಯದ ಅಧೀನಕ್ಕೆ ಒಳಪಟ್ಟ ಬ್ರಹ್ಮಗಿರಿ ಪ್ರದೇಶದಲ್ಲಿ ಶಾಸನ ಉಲ್ಲೇಖವಿರುವ 'ಇಸಿಲ' ಪಟ್ಟಣ ಹಾಗೂ ಜಗಳೂರು ತಾಲ್ಲೂಕಿನ ಅಸಗೋಡು ಹಿಂದೆ ಅಶೋಕ ಪಟ್ಟಣವೆಂದು ಕರೆಯಲ್ಪಡುತ್ತಿತ್ತು. ಇಲ್ಲಿ ಬೌದ್ಧ ಧರ್ಮವು ವ್ಯಾಪಿಸಿದ್ದುದರ ಸೂಚನೆಗಳು ಸಿಗುತ್ತವೆ. ಈ ಪ್ರದೇಶ ಮೌರ್ಯ ಸಾಮ್ರಾಜ್ಯಕ್ಕೆ ಸೇರಿದ್ದಿತೆಂದು ಹೇಳಬಹುದು.[೩೮]

ಒಟ್ಟಿನಲ್ಲಿ ಚಿತ್ರದುರ್ಗ ಮತ್ತು ಸುತ್ತಲಿನ ಪ್ರದೇಶಗಳು ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದು, ಅವರ ದಕ್ಷ ಆಡಳಿತ ಪದ್ಧತಿಯಿಂದ ಪ್ರಯೋಜನ ಹೊಂದಿದವು. ಮೌರ್ಯರ ಸಾಂಸ್ಕೃತಿಕ ಪರಂಪರೆಯ ವ್ಯಾಪ್ತಿಗೆ ಒಳಗಾದವು. ಚಿತ್ರದುರ್ಗದ ಸುತ್ತಲೂ ಬೌದ್ಧ ಧರ್ಮದ ಸ್ಮಾರಕಗಳು ಅಲ್ಲಲ್ಲಿ ದೊರೆತಿವೆ. ಮೌರ್ಯರ ಕಾಲದ ಕಲೆಯ ಅವಶೇಷಗಳು ಇಲ್ಲಿ ಕಾಣಸಿಗುತ್ತವೆ. ಮೌರ್ಯರ ಕಾಲದ ಧಾರ್ಮಿಕ ಸಹಿಷ್ಣುತೆ ಇಲ್ಲಿನ ಜನರ ಅನುಕರಣಿಯ ಆದರ್ಶಗಳಾದವು. ಈ ರೀತಿಯಲ್ಲಿ ಚಿತ್ರದುರ್ಗ ಹಾಗೂ ಸುತ್ತಲಿನ ಪ್ರದೇಶಗಳಲ್ಲಿ ಮೌರ್ಯರ ಶಾಸನ ಮತ್ತಿತರ ಅವಶೇಷಗಳು ಸಿಗುವುದಲ್ಲದೆ ಮೌರ್ಯ ಸಾಮ್ರಾಟರ ಧಾರ್ಮಿಕ, ಸಾಂಸ್ಕೃತಿಕ ಪರಂಪರೆಯೂ ಮುಂದುವರೆಯಿತು.[೩೯] ಈ ಪ್ರಾಂತ್ಯವು ಹಲವು ಶತಮಾನಗಳ ಕಾಲ ಮೌರ್ಯರ ಆಳ್ವಿಕೆಗೆ ಒಳಪಟ್ಟಿದ್ದು, ಭಾರತದ ಇತರ ಜನರೊಂದಿಗೆ ವ್ಯಾಪಾರ, ವಾಣಿಜ್ಯ ಹಾಗೂ ಸಾಂಸ್ಕೃತಿಕ ಸಂಪರ್ಕವನ್ನು ಹೊಂದಿದ್ದುದಲ್ಲದೆ, ರಾಜಕೀಯ, ಧಾರ್ಮಿಕ ವಲಯಗಳಲ್ಲಿ ಶ್ರೀಮಂತಗೊಂಡಿತ್ತು.

**ಶಾತವಾಹನರು**

ಮೌರ್ಯರ ನಂತರ ಭಾರತದಲ್ಲಿ ಬಹುದೊಡ್ಡ ಸಾಮ್ರಾಜ್ಯವನ್ನು ಆಳಿದವರೆಂದರೆ ಶಾತವಾಹನರು. ಅದು ದಕ್ಷಿಣ ಭಾರತಕ್ಕೆ ಅನ್ವಯಿಸಿ, ಇವರನ್ನು ಸಾತವಾಹನರು, ಶಾತಕರ್ಣಿಗಳು, ಸಾತಕರ್ಣಿಗಳು, ಸಾತಕಣ್ಣಿಗಳು, ಆಂಧ್ರರು, ಆಂದ್ರಭೃತ್ಯರು ಎಂತಲೂ ಹೆಸರಿಸಲಾಗಿದೆ. ಇವರ ಶಾಸನಗಳು ಸುಮಾರು ೩೦ಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿದ್ದರೂ ಇವರ ಬಗೆಗಿನ ವಿಶೇಷ ಮಾಹಿತಿ ದೊರೆಯುವುದು ಪುರಾಣಗಳಿಂದ.[೪೦] ನಾಣ್ಯಗಳ ಸಹಾಯದಿಂದ. ಚಿತ್ರದುರ್ಗ ಜಿಲ್ಲೆಯಲ್ಲಿ ಶಾತವಾಹನರ ಆಳ್ವಿಕೆ ಇದ್ದೀತ್ತೇ? ಎಂಬ ಪ್ರಶ್ನೆಗೆ ಸಂಬಂಧಿಸಿದಂತೆ ಇದುವರೆಗೆ ನಮಗೆ ತಿಳಿದುಬಂದಿರುವಂತೆ ಚಿತ್ರದುರ್ಗ ಪ್ರದೇಶದಲ್ಲಿ ಶಾತವಾಹನರ ಶಾಸನಗಳು ದೊರೆತಿಲ್ಲ. ಆದರೂ ಬ್ರಹ್ಮಗಿರಿ, ಚಂದ್ರವಳ್ಳಿಗಳಲ್ಲಿ ಇದುವರೆಗೆ ಸಿಕ್ಕಿರುವ ಶಾಸನೇತರ ಪುರಾತತ್ವ ವಸ್ತು ವಿಶೇಷಗಳನ್ನೂ, ನಾಣ್ಯಗಳನ್ನೂ ಆಧರಿಸಿಯೇ ಅವರ ಆಳ್ವಿಕೆಯ ಇತಿಮಿತಿಯನ್ನು ಸ್ಥೂಲವಾಗಿ ತಿಳಿಯುವ ಪ್ರಯತ್ನವನ್ನು ಮಾಡಬಹುದು.[೪೧]

ಚಿತ್ರದುರ್ಗದ ಇಂಗಳದಾಳು ತಾಮ್ರಗಣಿಗಳು ಹಾಗೆಯೇ ಚಂದ್ರವಳ್ಳಿ ಮತ್ತು ಬ್ರಹ್ಮಗಿರಿಗಳನ್ನು ಈ ಸಾಲಿನಲ್ಲಿ ಗುರುತಿಸಲಾಗುತ್ತದೆ. ಗಣಿಗಾರಿಕೆ ಮತ್ತು ಖನಿಜ ಸಂಪನ್ಮೂಲಗಳು ಚಂದ್ರವಳ್ಳಿ ಪ್ರದೇಶದಿಂದ ಸುಮಾರು ೧೫-೨೦ ಕಿ.ಮೀ ವ್ಯಾಪ್ತಿಯಲ್ಲಿದೆ. ಯಾವುದೇ ನದಿ ದಡದಲ್ಲಿಲ್ಲದ ಚಂದ್ರವಳ್ಳಿಯು ಪ್ರಾಚೀನ ನಗರ ಪ್ರದೇಶದಲ್ಲಿ ಸಂಸ್ಕೃತಿ ವಿಕಾಸಗೊಂಡುದು ಹೇಗೆ? ನೀರಿನ ಆಸರೆಗಾಗಿ ಹಾಗೂ ನೀರಾವರಿ ಕೃಷಿಗಾಗಿ ಈ ಪ್ರದೇಶದ ಕಣಿವೆಗಳಲ್ಲಿ ಅಥವಾ ಗೊಂದಿಗಳಲ್ಲಿ ನಿರ್ಮಿಸಲಾದ

ಕೃತಕ ಕೆರೆ ಕಟ್ಟೆಗಳು ನೆರವಾಗುತ್ತಿದ್ದವೆಂಬುದೇ ಇದಕ್ಕೆ ದೊರೆಯಬಹುದಾದ ಉತ್ತರ.[೪೨] ಇದರ ಮೂಲಕ ಕ್ರಿ.ಪೂ.೩ನೇ ಶತಮಾನದಲ್ಲಿಯೇ ಕೆರೆಗಳನ್ನು ನಿರ್ಮಿಸಿ ಕೃಷಿಯಲ್ಲಿ ಹೆಚ್ಚು ಪರಿಣಿತಿಯನ್ನು ಈ ವಲಯದಲ್ಲಿ ಮಾಡುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಚಿತ್ರದುರ್ಗ ಬೆಟ್ಟ ಮತ್ತು ಪರಿಸರದಲ್ಲಿ ಕಾಲಕಾಲಕ್ಕೆ ನಿರ್ಮಾಣಗೊಂಡ ಕೃತಕ ಜಲಾಶಯಗಳು ಮತ್ತು ಅವುಗಳ ಸರಣಿಯನ್ನು ಗಮನಿಸಿದರೆ ಇದು ಅರಿವಿಗೆ ಬರುತ್ತದೆ. ಇಲ್ಲಿ ಪರಿಗಣನಾರ್ಹವಾದುದು, ಚಂದ್ರವಳ್ಳಿ ಪರಿಸರಕ್ಕೆ ಅನುಕೂಲಕರವಾದ ಭೌಗೋಳಿಕ ಹಾಗೂ ಪ್ರಾಕೃತಿಕ ಪರಿಸರ. ಈ ನಿಟ್ಟಿನಲ್ಲಿ ಇಲ್ಲಿ ಗಮನಿಸಬೇಕಾದುದು, ಚಿತ್ರದುರ್ಗ ಬೆಟ್ಟದ ಪಶ್ಚಿಮದ ತಪ್ಪಲಿನಲ್ಲಿ ನೆಲೆಗೊಂಡಿದ್ದ ಚಂದ್ರವಳ್ಳಿ, ಪ್ರಾಚೀನ ಪಟ್ಟಣ ನಿವೇಶನಕ್ಕೆ ಹೊಂದಿಕೊಂಡಿರುವ ಹುಲಿಗೊಂದಿ, ಬಸವನಗೊಂದಿ, ಬಾರಲಗೊಂದಿ ಮತ್ತು ನೇರಲಗೊಂದಿ ಎಂಬ ನಾಲ್ಕು ಗೊಂದಿಗಳು ಅಥವಾ ಉಪಕಣಿವೆಗಳನ್ನು ಗುರುತಿಸಲಾಗಿದೆ.[೪೩]

ಚಿತ್ರದುರ್ಗ ಪ್ರದೇಶದಲ್ಲಿ ದೊರೆತ ಉತ್ತಮ ಜಾತಿಯ ಜಾಸ್ಪರ್, ಕಾರ್ನಿಲಿಯನ್, ಅಗೇಟ್ ಮುಂತಾದ ಶಿಲೆಗಳ ಮಣಿಗಳು, ದಂತ, ಶಂಖ, ಸುಟ್ಟಮಣ್ಣಿನ ಗಾಜಿನ ವಿವಿಧ ಬಗೆಯ ಮಣಿಗಳು ಶಾತವಾಹನರ ಸಾಮಾಜಿಕ ಸಂಸ್ಕೃತಿಗೆ ಹಿಡಿದ ಕನ್ನಡಿಯಂತಿವೆ. ಆ ಕಾಲದ ವ್ಯಾಪಾರ ವಾಣಿಜ್ಯಗಳಲ್ಲಿ ನಾಣ್ಯ ಚಲಾವಣೆಯಲ್ಲಿತ್ತೆಂಬುದು ಸ್ಪಷ್ಟವಾಗಿದೆ. ಚಂದ್ರವಳ್ಳಿ ಹಾಗೂ ಚಿಪ್ಪಿನಕೆರೆ ನೆಲೆಗಳಲ್ಲಿ ಸುಮಾರು ೫೦ಕ್ಕೂ ಹೆಚ್ಚು ನಾಣ್ಯಗಳು ದೊರೆಕಿದ್ದು ಬೆಳ್ಳಿ, ಸೀಸ, ತಾಮ್ರ, ಸತು, ತವರ ಮತ್ತು ಸೀಸ ಮಿಶ್ರಿತ ಲೋಹ ಮುಂತಾದವುಗಳಲ್ಲಿ ಟಂಕಿಸಿದ ನಾಣ್ಯಗಳು ಈ ಭಾಗದಲ್ಲಿ ಆಳ್ವಿಕೆ ಮಾಡಿದ ಶಾತವಾಹನರ ಆರ್ಥಿಕ ಸ್ಥಿತಿಗತಿಯನ್ನು ಸೂಚಿಸುವವು.[೪೪] ಅಲ್ಲದೆ ಭಾಷೆ ಮತ್ತು ಲಿಪಿಗಳ ಅಧ್ಯಯನದಿಂದ ಶಾತವಾಹನರ ರಾಜರ ಹೆಸರು ಹಾಗೂ ಮಾಂಡಲಿಕರ ಹೆಸರಿನ ನಾಣ್ಯಗಳು ಹೇರಳವಾಗಿ ದೊರೆತಿವೆ.

ಒಟ್ಟಿನಲ್ಲಿ ಚಿತ್ರದುರ್ಗ ಪ್ರದೇಶ ಶಾತವಾಹನರ ಆಳ್ವಿಕೆಗೊಳಪಟ್ಟಿದ್ದು, ಕ್ರಿ.ಶ.ಸುಮಾರು ೨೦೦ರ ತರುವಾಯ ಈ ಪ್ರದೇಶದ ಚಂದ್ರವಳ್ಳಿಯನ್ನು ಅವರು ವಾಸಸ್ಥಾನವನ್ನಾಗಿ ಮಾಡಿಕೊಂಡಿದ್ದಿರಬಹುದೆಂದು ಹೇಳಬಹುದು. ಶಾತವಾಹನರ ಸಾಂಸ್ಕೃತಿಕ ಅವಶೇಷಗಳು ದೊರೆತ ಪ್ರಮಾಣವನ್ನು ಗಮನಿಸಿದರೆ ಚಂದ್ರವಳ್ಳಿಯು ರಾಜಧಾನಿಗಳಲ್ಲಿ ಒಂದಾಗಿತ್ತೆಂದು ಊಹಿಸಬಹುದು.[೪೫] ಬನವಾಸಿಯಂತೆ ಚಂದ್ರವಳ್ಳಿಯೂ ಆ ಕಾಲದ ವಾಣಿಜ್ಯ ಕೇಂದ್ರವಾಗಿದ್ದಿರಬಹುದು. ಚಿತ್ರದುರ್ಗ ಪ್ರದೇಶ ಈಗ ಹತ್ತಿ, ಎಣ್ಣೆ ಕಾಳುಗಳನ್ನವಲಂಬಿಸಿದ ವಾಣಿಜ್ಯಕ್ಕೆ ಹೆಸರಾಗಿರುವಂತೆ ಶಾತವಾಹನರ ಕಾಲದಲ್ಲೂ ಸಮೃದ್ಧವಾಗಿದ್ದಿರಬಹುದು. ಅಲ್ಲದೆ ಭೌಗೋಳಿಕವಾಗಿ ಚಂದ್ರವಳ್ಳಿ, ಬನವಾಸಿ, ಕಾರವಾರ, ಶ್ರವಣಬೆಳಗೊಳ, ಬಾದಾಮಿ ಮುಂತಾದ ನೆಲೆಗಳು ಪರಸ್ಪರ ಸಂಪರ್ಕವನ್ನಿಟ್ಟುಕೊಂಡಿರಬಹುದು. ಈ ಸಮೃದ್ಧಿಯ ಪರಿಣಾಮವಾಗಿ ರೋಮ್, ಚೀನಾ, ಗ್ರೀಕ್ ದೇಶಗಳೊಡನೆ ವ್ಯಾಪಾರ ಸಂಪರ್ಕವನ್ನಿಟ್ಟುಕೊಂಡಿದ್ದಿರಬಹುದು.

**ಕದಂಬರು**

ಪ್ರಸ್ತುತ ಅಧ್ಯಯನ ಪ್ರದೇಶವು ಶಾತವಾಹನ ಹಾಗೂ ಚುಟು ಅರಸರ ನಂತರ ಕದಂಬರ ಆಳ್ವಿಕೆಗೆ ಒಳಪಟ್ಟಿದ್ದನ್ನು ಕಾಣಬಹುದು. ಶಾತವಾಹನರ ಪತನದ ನಂತರ ಅವರ ಸಾಮ್ರಾಜ್ಯವು ಅನೇಕ ಚಿಕ್ಕ-ಮಟ್ಟ ಆಡಳಿತ ವಿಭಾಗಗಳಲ್ಲಿ ಹರಿದು-ಹಂಚಿಹೋಗಿತ್ತು. ವಾಯುವ್ಯದಲ್ಲಿ ಅಭೀರರು

ಮತ್ತು ತ್ರೈಕೂಟರು, ಪೂರ್ವದಲ್ಲಿ ರಾಷ್ಟ್ರಕೂಟರು, ಚುಟುಗಳು ಹಾಗೂ ನಾಗರಸರು, ದಕ್ಷಿಣದಲ್ಲಿ ಕದಂಬರು ಮತ್ತು ಪಲ್ಲವರು ಏಳಿಗೆಗೆ ಬಂದರು. ಹೀಗೆ ಶಾತವಾಹನರ ನಂತರ ಪ್ರಸ್ತುತ ಈ ಪ್ರದೇಶವು ಕದಂಬರ ಆಳ್ವಿಕೆಗೆ ಒಳಪಟ್ಟಿದ್ದನ್ನು ನೋಡಬಹುದು. ವೈಜಯಂತಿಪುರ ಅಥವಾ ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಕದಂಬರು ಉತ್ತರಕನ್ನಡ, ಧಾರವಾಡ, ಬೆಳಗಾಂ, ಹಾವೇರಿ, ಶಿವಮೊಗ್ಗ, ದಾವಣಗೆರೆ ಹಾಗೂ ಚಿತ್ರದುರ್ಗ ಜಿಲ್ಲೆಗಳ ಭೂ ಪ್ರದೇಶವನ್ನು ತಮ್ಮ ಅಧೀನ ಇದ್ದವು.[೪೬] ಕದಂಬರಿಗೆ ಸಂಬಂಧಿಸಿದಂತ ಮಾಹಿತಿಯನ್ನು ಇಲ್ಲಿಯ ಶಾಸನಗಳಿಂದ ತಿಳಿಯಬಹುದಾಗಿದೆ.

ಕದಂಬಳಿಗೆ ಸಾಸಿರದ ಉಲ್ಲೇಖ ಕ್ರಿ.ಶ.೯ನೇ ಶತಮಾನದಿಂದ ಈಚೆಗೆ ಕಂಡುಬಂದರೂ ಕದಂಬ ಸಾಮ್ರಾಜ್ಯದ ಸ್ಥಾಪಕನಾದ ಮಯೂರವರ್ಮನು ತನ್ನ ಆಳ್ವಿಕೆಯ ಆರಂಭವನ್ನು ಚಿತ್ರದುರ್ಗ ಜಿಲ್ಲೆಯ ಪರಿಸರದಲ್ಲೇ ಮಾಡಿದನೆಂದು ಹೇಳಲು ಸಾಧ್ಯವಿದೆ. ಇದಕ್ಕೆ ಆಧಾರವಾಗಿ ಈ ಪ್ರದೇಶದಲ್ಲಿ ಕಂಡುಬರುವ ಕದಂಬರ ಶಾಸನ ಮತ್ತು ಅವರ ಬಗ್ಗೆ ಪ್ರಚಲಿತವಿರುವ ಐತಿಹ್ಯ-ಸಹ ಸಂಬಂಧಗಳು ಸಹಾಯ ಮಾಡುತ್ತವೆ.[೪೭]

ಕದಂಬರ ಮಯೂರವರ್ಮನು ಚಂದ್ರವಳ್ಳಿ ಪ್ರದೇಶಕ್ಕೆ ಬಂದ ಕಾಲಕ್ಕೆ ಅಲ್ಲಿ ಯಾರಾದರೂ ಪ್ರಭುಗಳಿದ್ದರೆ? ಇದ್ದರೆ ಅವರು ಯಾವ ವಂಶದವರು? ಮತ್ತು ಯಾರು? ಎಂಬ ಈ ಪ್ರಶ್ನೆಗಳು ಸಹಜ ಹುಲ್ಲೂರು ಶ್ರೀನಿವಾಸ ಜೋಯಿಸರು ಒಂದು ಕಡೆ 'ಮಯೂರ ಶರ್ಮನ ಕಾಲದಲ್ಲಿ ಚಂದ್ರವಳ್ಳಿಯಲ್ಲಿ ಮಹಾರಥಿಗಳೆಂಬ ಸರದಾರರು ಇದ್ದರೆಂಬ ಅಂಶಗಳನ್ನು ತಿಳಿಸುತ್ತಾರೆ.[೪೮] ಇಲ್ಲಿ ಕೆಲವು ಅಂಶಗಳನ್ನು ಪರಿಶೀಲಿಸಿರುವ ಅಗತ್ಯವಿದೆ.

ಕದಂಬ ರಾಜ್ಯ ಸಂಸ್ಥಾಪಕನಾದ ಮಯೂರ ಶರ್ಮನ ಏಕೈಕ ಶಾಸನ ದೊರೆತಿರುವುದು ಚಂದ್ರವಳ್ಳಿಯಲ್ಲಿ. ಈ ಶಾಸನವನ್ನು ಕುರಿತು ಅಧ್ಯಯನ ನಡೆಸಿದ ಎಂ.ಎಚ್.ಕೃಷ್ಣ ಅವರು ಶಾಸನದ ಭಾಷೆ ಪ್ರಾಕೃತ ಎಂದು, ಇದರ ಕಾಲಮಾನ ಕ್ರಿ.ಶ.೨೫೮ ಎಂದು ನಿರ್ಧರಿಸಿದರು. ಮೂರು ಸಾಲುಗಳಲ್ಲಿರುವ ಈ ಶಾಸನವು ಈ ಪ್ರದೇಶದಲ್ಲಿ ಒಂದು ಕೆರೆಯನ್ನು ನಿರ್ಮಿಸಿದ್ದು ಹಾಗೂ ಅನೇಕ ದಿಗ್ವಿಜಯಗಳನ್ನು ತಿಳಿಸುವುದಾಗಿದೆ. ತ್ರೈಕೂಟ, ಅಭೀರ, ಪಲ್ಲವ, ಪಾರಿಯಾತ್ರಿಕ, ಶಕಸ್ಥಾನ, ಸಯಿನ್ದಕ, ಪುಣಾಟ ಹಾಗೂ ಮೋಕರಿಣ ಪ್ರದೇಶಗಳನ್ನು ವಶಪಡಿಸಿಕೊಂಡನೆಂದು ಎಂ.ಎಚ್.ಕೃಷ್ಣರವರು ಅಭಿಪ್ರಾಯ ಪಟ್ಟಿದ್ದಾರೆ.[೪೯] ನಂತರ ಈ ಶಾಸನದ ಕಾಲ ಭಾಷೆ ಮತ್ತು ವಿಷಯವನ್ನು ಕುರಿತಂತೆ ಅನೇಕ ವಿದ್ವಾಂಸರು ಅಧ್ಯಯನ ನಡೆಸಿ ಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಸ್ಥಳೀಯ ಸಂಶೋಧಕರಾದ ಬಿ.ರಾಜಶೇಖರಪ್ಪನವರು ಪುನರ್ ಅಧ್ಯಯನ ನಡೆಸಿ ಹಲವಾರು ಹೊಸ ಸಂಗತಿಗಳನ್ನು ಬೆಳಕಿಗೆ ತಂದಿದ್ದಾರೆ. ಮಯೂರ ಶರ್ಮನು ಇನ್ನೂ ಈ ಕಾಲಕ್ಕೆ ಮಯೂರ ವರ್ಮನಾಗಿರಲಿಲ್ಲವೆಂದು, ಶಾಸನದ ಭಾಷೆ ಪ್ರೌಢ ಸಂಸ್ಕೃತ ಹಾಗೂ ಶಾಸನದ ಮೂಲ ಉದ್ದೇಶ ಇಲ್ಲಿದ್ದ ಕೆರೆಯನ್ನು ಮತ್ತಷ್ಟು ಬಲಪಡಿಸಿದನೆನ್ನುವುದಾಗಿದೆ. ಹೀಗೆ ಪ್ರಸ್ತುತ ಶಾಸನದ ಮರುಪರಿಶೀಲನೆಯಿಂದ ಅವರು ಮಯೂರ ಶರ್ಮನು ಆಗಲೇ ಇದ್ದ ಕೆರೆಯೊಂದನ್ನು ದುರಸ್ತಿಪಡಿಸಿ ಬಲಪಡಿಸಿದುದನ್ನು ಹಾಗೂ ಇಲ್ಲಿ ಕಾಡಿನ ವಾಸದ ನೆಲೆಯೊಂದನ್ನು ಮಾಡಿಕೊಂಡಿದ್ದುದನ್ನು ಹೇಳಲಾಗಿದೆ.[೫೦]

ಚಂದ್ರವಳ್ಳಿ ಶಾಸನ ಕುರಿತು ಶಾಸನದ ಹೊಸ ಪಾಠ ಈ ಕೆಳಗಿನಂತಿದೆ.

**ಕದಂಬಾಣಂ ಮಯೂರ ವರ್ಮ್ಮಣಾ**

**ತಟಾಕಂ ದೃಢಂಕೃತಂ ಅಭಿರುಪಂ ರ(ಚ)ಯಿತ್ವಾ**

**ವಾನ(ವಾ)ಸಕಂ ಸ್ಥಾಪಯಿತ್ವಾ ಕುಪಣ(ಮೊ)...**[೫೧]

ಚಿತ್ರದುರ್ಗ ಪ್ರದೇಶದಲ್ಲಿ ಪೂರ್ವ ಕದಂಬರ ಶಾಸನಗಳು ದೊರೆತಿರುವುದು ತೀರಾ ವಿರಳ. ಆದರೆ ದೊರೆತಿರುವ ಕೆಲವೇ ಶಾಸನಗಳು ಈ ಮೇಲಿನ ಮಯೂರ ಶರ್ಮನ ಶಾಸನದಂತೆ ಪ್ರಮುಖವಾದವು ಅತ್ಯಂತ ಕುತೂಹಲಕರವೂ ಆಗಿದ್ದು ಈ ಪ್ರದೇಶದ ಕದಂಬರ ಆಳ್ವಿಕೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿತ್ತೆಂಬುದಕ್ಕೆ ಸಾಕ್ಷಿಯಾಗಿ ತಿಳಿದು ಬಂದಿದೆ. ಅಂತಹ ಮತ್ತೊಂದು ಮುಖ್ಯವಾದ ಶಾಸನವೆಂದರೆ ಪ್ರಸ್ತುತ ದಾವಣಗೆರೆ ತಾಲ್ಲೂಕಿನ ಅಣಜಿಯಲ್ಲಿ ದೊರೆತಿರುವ ಶಿವನಂದ ವರ್ಮನ ಶಾಸನವಾಗಿದೆ. ನೊಣಕ್ಕದ ಪಲ್ಲವನಿಗೂ, ಕದಂಬ ಕೃಷ್ಣವರ್ಮನಿಗೂ ತುಮುಲ ಯುದ್ಧ ನಡೆದ ಸಂಗತಿಯನ್ನು ವಿವರಿಸುತ್ತದೆ.[೫೨]

ಒಟ್ಟಾರೆಯಾಗಿ ಚಿತ್ರದುರ್ಗ ಪ್ರದೇಶವು ಕದಂಬರ ರಾಜಧಾನಿ. ಬನವಾಸಿ ಪ್ರಮುಖ ರಾಜಧಾನಿಯಾಗಿದ್ದರು ವ್ಯಾಪಾರ–ವಾಣಿಜ್ಯಗಳ ದೃಷ್ಟಿಯಿಂದ ಇದೊಂದು ಉಪ ರಾಜಧಾನಿಯಾಗಿದ್ದು, ಇವರ ಕಾಲದಲ್ಲಿ 'ಕದಂಬಳಿಗೆ ನಾಡು' 'ಸೂಳ್ಗಲ್ಲು' ಎಂದು ಕರೆಯಲ್ಪಟ್ಟ ಪ್ರದೇಶವೆಂದು ಖಚಿತಪಡಿಸಿಕೊಳ್ಳಬಹುದಾಗಿದೆ.

**ಬಾದಾಮಿ ಚಾಳುಕ್ಯರು (ಚಾಲುಕ್ಯರು)**

ದಕ್ಷಿಣ ಭಾರತದಲ್ಲಿ ಚಾಲುಕ್ಯ ಮನೆತನದ ಪ್ರಭಾವವು ಗಣನೀಯವಾದುದಾಗಿದೆ. ಕ್ರಿ.ಶ.೬ನೆಯ ಶತಮಾನದಿಂದ ಕ್ರಿ.ಶ.೮ನೆಯ ಶತಮಾನದವರೆಗೂ, ಪುನಃ ಕ್ರಿ.ಶ.೧೦ನೆಯ ಶತಮಾನದಿಂದ ಕ್ರಿ.ಶ.೧೨ನೆಯ ಶತಮಾನದವರೆಗೂ ಇವರು ಆಳಿದರು. ಕರ್ನಾಟಕದಲ್ಲಿ ಅತಿ ಬಲಿಷ್ಠಾವಾದ ಹಾಗೂ ವಿಶಾಲವಾದ ಸಾಮ್ರಾಜ್ಯವನ್ನು ಕಟ್ಟಿ ಬೆಳೆಸಿದ ಕೀರ್ತಿ ಇವರಿಗೆ ಸಲ್ಲುತ್ತದೆ.

ಚಾಲುಕ್ಯರಲ್ಲಿ ಮೂರು ಶಾಖೆಗಳುಂಟು– ಬಾದಾಮಿ ಚಾಲುಕ್ಯರು, ಕಲ್ಯಾಣ ಚಾಲುಕ್ಯರು ಮತ್ತು ವೆಂಗಿಯ ಚಾಲುಕ್ಯರು, ಅಖಂಡ ಕರ್ನಾಟಕದ ಪ್ರಪ್ರಥಮ ಚಕ್ರವರ್ತಿಗಳಾಗಿ ಬಾದಾಮಿಯ ಚಾಲುಕ್ಯರು ಇನ್ನೂರು ವರ್ಷಗಳ ಕಾಲ (ಕ್ರಿ.ಶ.೫೪೩–೭೫೩) ವೈಭವದಿಂದ ಆಳಿದರು.[೫೪] ಇವರ ಕಾಲದಲ್ಲಿ ಕನ್ನಡನಾಡಿನ ಆರ್ಥಿಕ ಮತ್ತು ಸಾಂಸ್ಕೃತಿಕ ವೈವಿಧ್ಯಮಯವಾಗಿ ವಿಕಾಸಗೊಂಡಿತು.

ಕದಂಬರ ನಂತರ ಚಿತ್ರದುರ್ಗ ಪ್ರದೇಶವು ಬಾದಾಮಿ ಚಾಳುಕ್ಯರ ವಶಕ್ಕೆ ಬಂದಿತು. ಆ ಕಾಲಕ್ಕೆ ಚಿತ್ರದುರ್ಗವು ಪ್ರಾಯಶಃ 'ಉಚ್ಚಶೃಂಗ' ವಿಷಯದಲ್ಲಿ ಸೇರಿ ಹೋಗಿತ್ತೆಂದು ಹೇಳಬಹುದು. ಬಾದಾಮಿ ಚಾಲುಕ್ಯರ ಪುಲಿಕೇಶಿಯ ಉತ್ತರಾಧಿಕಾರಿಯಾಗಿ ಬಂದವನು ಒಂದನೆಯ ವಿಕ್ರಮಾದಿತ್ಯ (ಕ್ರಿ.ಶ.೬೫೫–೬೮೧) ಈತ ಪಲ್ಲವರನ್ನು ಸೋಲಿಸಿ, ಕಳೆದುಕೊಂಡಿದ್ದ ಪ್ರದೇಶಗಳನ್ನೆಲ್ಲ ಮತ್ತೆ ಗಳಿಸಿದನು. ಬೇವಿನಹಳ್ಳಿ ಶಾಸನವು ಚಾಲುಕ್ಯರ ವಂಶಾವಳಿಯನ್ನು ನೀಡಿದೆ. ಇದರಿಂದ ಬಾದಾಮಿ ಚಾಲುಕ್ಯರಿಗೂ ಕಲ್ಯಾಣ ಚಾಲುಕ್ಯರಿಗೂ ಮಧ್ಯೆ ಚಿತ್ರದುರ್ಗ ಪ್ರದೇಶದಲ್ಲಿ ಇನ್ನೊಂದು ಚಾಲುಕ್ಯ ವಂಶವು ಆಳುತ್ತಿತ್ತು ಎಂಬ ವಿಚಾರವು ತಿಳಿಯುತ್ತದೆ. ಇವರು ಮುಂದೆ ರಾಷ್ಟ್ರಕೂಟರಿಗೆ ಮಾಂಡಲಿಕರಾಗಿದ್ದುಕೊಂಡು ಆಳ್ವಿಕೆ ನಡೆಸುತ್ತಿದ್ದರು ಎನ್ನುವ ಅಂಶವು ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಕ್ರಿ.ಶ.೯೭೦ರ ಗಂಜಿಗಟ್ಟಿ ಶಾಸನವು ಸಾಂಪ್ರದಾಯಿಕ ವಿವರಗಳನ್ನು ಬಿಟ್ಟು ನೇರವಾಗಿ ಚಂದಿಯಮ್ಮರಸ ದೇವರಿಗೆ ಭೂಮಿಯನ್ನು ಬಿಟ್ಟನು, ಸುವ್ಗಿಲ್ನಾಡು, ಪಿಟ್ಟಗೇಜ್ ಪನ್ನೆರಡು, ಗಾವುಂಡ ಪ್ರಜೆಗಳು ಸಾಕ್ಷಿ ಎಂಬ ಉಲ್ಲೇಖವಿದೆ. ಆರು ಸಾಲಿನ ಈ ಶಾಸನದ ಕೊನೆಯಲ್ಲಿ 'ಶರೀ ಬಿಜಾಬೆ' ಎಂದಿದೆ. ಲಿಪಿಯ ದೃಷ್ಟಿಯಿಂದ ಈ ಶಾಸನವನ್ನು ಬಾದಾಮಿ ಚಾಲುಕ್ಯರ ಕಾಲಕ್ಕೆ ಸೇರಿಸಲಾಗಿದೆ. ಇದೊಂದು ದಾನ-ಶಾಸನವಾಗಿದ್ದು, ದಾನವನ್ನು ಸ್ವೀಕರಿಸಿದವರು ಕಾವಳಿಗ ಭಟಾರರು ಎಂದು ತಿಳಿದು ಬರುತ್ತದೆ.[೫೫]

ಚಿತ್ರದುರ್ಗ ಪ್ರದೇಶವು ಪಲ್ಲವ ಹಾಗೂ ಬಾದಾಮಿ ಚಾಲುಕ್ಯರಿಗೂ ಗಡಿಭಾಗದಲ್ಲಿದ್ದ ಈ ಪ್ರದೇಶವು ಎರಡು ಮನೆತನಗಳ ಕಾಳಗದ ಭೂ ಪ್ರದೇಶವೂ ಆಗಿತ್ತು ನಂತರ ಸುಮಾರು ೧೦ನೆಯ ಶತಮಾನದಲ್ಲಿ ಬಾದಾಮಿ, ಪಟ್ಟದಕಲ್ಲು, ಐಹೊಳೆಗಳು ಅತ್ಯಂತ ಉನ್ನತ ಮಟ್ಟದ ವ್ಯಾಪಾರಿ ಕೇಂದ್ರಗಳಾಗಿ ಬೆಳೆದಿರುವುದು ಇದೇ ಸಮಯದಲ್ಲಿ. ವ್ಯಾಪಾರದ ಮಾರ್ಗ ಸಂಧಿಸುವ ಸ್ಥಳವಾಗಿ ಚಿತ್ರದುರ್ಗ ಪ್ರದೇಶವನ್ನು ಗುರುತಿಸಬಹುದಾಗಿದೆ.

ಇಮ್ಮಡಿ ಪುಲಿಕೇಶಿಯ ಕಾಲಕ್ಕೆ ಈ ಭಾಗವು ಆತನ ನೇರ ಆಳ್ವಿಕೆಗೆ ಒಳಪಟ್ಟಿತ್ತಲ್ಲದೆ ದಾವಣಗೆರೆ ತಾಲ್ಲೂಕಿನ ನಲ್ಲುಂದ ಗ್ರಾಮದಲ್ಲಿ ದೊರೆತಿರುವ ತಾಮ್ರದ ಶಾಸನವೊಂದು ಆತನ ನಂತರದ ಕಾಲದ ಮೇಲೆ ಬೆಳಕನ್ನು ಚೆಲುತ್ತದೆ.[೫೬] ಅಭಿನವಾದಿತ್ಯನ ಶಾಸನವೆಂದೇ ಪ್ರಸಿದ್ದವಾದ ಈ ಶಾಸನದಲ್ಲಿ ನಲ್ಲುಂದ ಗ್ರಾಮವನ್ನು 'ನಲ್ಲಿಕುಡಿ' ಎಂದು ಹೆಸರಿಸಿದೆ. ಉಚ್ಚಂಗಿ ಪರಿಸರದ ಈ ಶಾಸನವು ದಾನ ಶಾಸನವಾಗಿದ್ದು, ಇಲ್ಲಿನ ಕುಪ್ಪಶರ್ಮ ಎಂಬ ಬ್ರಾಹ್ಮಣನಿಗೆ ದಾನ ನೀಡಿದ ವಿವರಗಳನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಅಭಿನವಾದಿತ್ಯನು ತನ್ನನ್ನು ಸತ್ಯಾಶ್ರಯಿ ಮತ್ತು ಪರಮೇಶ್ವರ ಎಂಬುದಾಗಿ, ಪೃಥ್ವೀವಲ್ಲಭ ಮಹಾರಾಜಾಧಿರಾಜ ಎಂದೂ ಸಹ ಕರೆದುಕೊಂಡಿದ್ದಾನೆ. ಇದರಿಂದಾಗಿ ಈತನು ಪುಲಿಕೇಶಿಯ ನಂತರ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದಂತೆ ತೋರುತ್ತದೆ.[೫೭]

ಬಾದಾಮಿಯ ಚಾಲುಕ್ಯರ ಕಾಲದಲ್ಲಿ ಚಂದ್ರವಳ್ಳಿ ಅದೇ ಸುವ್ಗಿಳ್ ಅಥವಾ ಸೊಳ್ಗಲ್ ೭೦ ಎಂಬ ಹೆಸರಿನ ಒಂದು ಚಿಕ್ಕ ಪ್ರಾಂತ್ಯವಾಗಿತ್ತು.[೫೮] ನಂತರ ಇದೇ ಪ್ರಾಂತ್ಯಕ್ಕೆ ನೊಳಂಬರ ಕಾಲಕ್ಕೆ 'ನೊಳಂಬವಾಡಿ ೩೨೦೦೦'[೫೯] ಪ್ರಾಂತ್ಯವೆಂದು ಕರೆಯಲ್ಪಟ್ಟಿತ್ತು. ಇವುಗಳಿಂದ ಚಂದ್ರವಳ್ಳಿ ಅಂದರೆ ಇಂದಿನ ಚಿತ್ರದುರ್ಗ ಪ್ರದೇಶವು ಚಾಲುಕ್ಯರ ಕಾಲದಲ್ಲಿ ಇದೊಂದು ಆಡಳಿತ ಪ್ರಾಂತ್ಯವಾಗಿತ್ತು ಎಂದು ತಿಳಿಯಬಹುದು.

ಚಾಲುಕ್ಯ ವಂಶದಲ್ಲಿಯೇ ಶ್ರೇಷ್ಠ ಚಕ್ರವರ್ತಿ ಎಂದೆನಿಸಿಕೊಂಡಿರುವ ಇಮ್ಮಡಿ ಪುಲಿಕೇಶಿಯು ಮೂವತ್ತೆರಡು ವರ್ಷಗಳ ಕಾಲ ಆಳ್ವಿಕೆಯಲ್ಲಿ (ಕ್ರಿ.ಶ.೬೧೦-೬೪೨) ಇಪ್ಪತ್ತು ವರ್ಷಗಳನ್ನು ಕದನಗಳಲ್ಲೇ ಕಳೆದಿದ್ದು ಗುಜರಾತ್, ರಾಜಪುಟಾಣ, ಕೊಂಕಣ ಮತ್ತು ಮಾಳ್ವಗಳು ಪುಲಿಕೇಶಿಯ ಅಧೀನಕ್ಕೆ ಬಂದನಂತರ ಬಹುಪಾಲು ವ್ಯಾಪಾರಿ ಸಮುದಾಯಗಳು ಚಾಲುಕ್ಯರ ಕಾಲದಲ್ಲಿ ಪರಸ್ಪರ ವಲಸೆ ಹಾಗೂ ವ್ಯಾಪಾರಿ ಮಳಿಗೆಗಳನ್ನು ಸ್ಥಾಪಿಸುವಲ್ಲಿ ಪುಲಿಕೇಶಿಯ ಆಡಳಿತದ ಕಾಲದಲ್ಲಿ ವ್ಯಾಪಾರ ಹೆಚ್ಚು ಪ್ರಭುದ್ದಕ್ಕೆ ಬಂದಿತ್ತು. ಚಾಲುಕ್ಯರ ಕಾಲದಲ್ಲಿಯೇ ಹೆಚ್ಚು ಉತ್ತರ ಭಾರತದ ವರ್ತಕ ಸಮುದಾಯಗಳು ದಕ್ಷಿಣ ಭಾರತದ ಕಡೆ ವಲಸೆ ಬಂದವು ಎಂದು ಸ್ಪಷ್ಟೀ ಕರಿಸಬಹುದು.

ಒಟ್ಟಾರೆಯಾಗಿ ಪಲ್ಲವ ಮತ್ತು ಬಾದಾಮಿ ಚಾಲುಕ್ಯರ ಗಡಿ ಭಾಗದಲ್ಲಿ ಇರುವುದರಿಂದ ಈ ಪ್ರದೇಶದ ರಾಜಕೀಯ ವಿಧ್ಯಮಾನಗಳಿಗೆ ಸಂಬಂಧಿಸಿದ ಮಾಹಿತಿಯು ಹೆಚ್ಚು ದೊರೆಯುವುದಿಲ್ಲ.

ಆದರೆ ವ್ಯಾಪಾರ-ವಾಣಿಜ್ಯಗಳ ದೃಷ್ಠಿಯಿಂದ ಚಿತ್ರದುರ್ಗ ಪ್ರದೇಶಕ್ಕೆ ವರ್ತಕ ಸಮುದಾಯಗಳು ಇಮ್ಮಡಿ ಪುಲಿಕೇಶಿಯ ಕಾಲದಲ್ಲಿ ವಲಸೆ ಬಂದ ಅಂಶವನ್ನು ಗ್ರಹಿಸಬಹುದಾಗಿದೆ.

**ನೊಳಂಬರು**

ಚಿತ್ರದುರ್ಗ ಪ್ರದೇಶವು ನೊಳಂಬರ ಆರಂಭದ ಆಳ್ವಿಕೆಯ ಪ್ರದೇಶಗಳಲ್ಲಿ ಒಂದಾದರೂ, ಇವರ ಶಾಸನಗಳು ದೊರೆತಿರುವುದು ಕಡಿಮೆ, ಇವರು ಕ್ರಿ.ಶ.೮ನೆಯ ಶತಮಾನದಲ್ಲಿ ನೊಳಂಬಳಿಗೆ ಸಾಸಿರ ಎಂಬ ಚಿಕ್ಕ ಪ್ರಾಂತ್ಯದ ಅಧಿಪತಿಗಳಾಗಿ ಆಳ್ವಿಕೆ ಆರಂಭಿಸಿದರು. ಉತ್ತರದಲ್ಲಿ ಬಳ್ಳಾರಿ ಜಿಲ್ಲೆ, ಪೂರ್ವದಲ್ಲಿ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆ, ಆಗ್ನೇಯದಲ್ಲಿ ತುಮಕೂರು ಜಿಲ್ಲೆ, ನೈರುತ್ಯದಲ್ಲಿ ಚಿಕ್ಕಮಗಳೂರು ಜಿಲ್ಲೆ ಇವುಗಳ ನಡುವೆ ಚಿತ್ರದುರ್ಗ, ಹಿರಿಯೂರು, ಜಗಳೂರು, ಮೊಳಕಾಲ್ಮೂರು, ಚಳ್ಳಕೆರೆ, ತಾಲೂಕುಗಳನ್ನು ಒಳಗೊಂಡು ಈ ನೊಳಂಬರ ಪ್ರಾಂತ್ಯವಿತ್ತು.[೬೦]

ಕ್ರಿ.ಶ.೯೨೦ರ ಹೇಮಾವತಿಯ ಶಾಸನದಲ್ಲಿ ಉಲ್ಲೇಖಿಸಿರುವ ನೊಳಂಬರ ವಂಶಾವಳಿಯು ಅತ್ಯಂತ ಪ್ರಾಚೀನವೆಂದು ತಿಳಿಯಲಾಗಿದೆ. ಆದರೆ ಚಿತ್ರದುರ್ಗ ಜಿಲ್ಲೆಗೆ ಸೇರಿದ ಪುರಾತನ ಗ್ರಾಮವಾದ ಮಹದೇವಪುರದ ಈಶ್ವರ ದೇವಾಲಯದ ಜೀರ್ಣೋದ್ಧಾರದ ಸಮಯದಲ್ಲಿ ವಿಗ್ರಹದ ಹಿಂಬದಿಯ ಮಣ್ಣಿನ ದಿಬ್ಬದಲ್ಲಿ ದೊರೆತ ತಾಮ್ರಶಾಸನ ಆರಂಭದ ನೊಳಂಬ ಅರಸರ ಬಗ್ಗೆ ಮಾಹಿತಿ ನೀಡುತ್ತದೆ. ಈ ಪ್ರಭುರಾಮ ಮಂಗಲದ ತಾಮ್ರಶಾಸನವನ್ನು ಹುಲ್ಲೂರು ಶ್ರೀನಿವಾಸ ಜೋಯಿಸರು ಸಂಪಾದಿಸಿ ಪ್ರಕಟಿಸಿದ್ದಾರೆ.[೬೧] ಇವರು ಆಳುತ್ತಿದ್ದ ಈ ಜಿಲ್ಲೆಯ ಮತ್ತಿತರ ಪ್ರದೇಶಗಳನ್ನೊಳಗೊಂಡ ಸೀಮೆಗೆ ನೊಳಂಬವಾಡಿ ಅಥವಾ ನೊಳಂಬವಾಡಿ ೩೨,೦೦೦ ನಾಡು ಎಂಬ ಹೆಸರಿದ್ದಿತು. ಕ್ರಿ.ಶ.೮೫೦ರ ಚಳ್ಳಕೆರೆ ತಾಲೂಕಿನ ಶಾಸನವು ಪಲ್ಲವ ಚೋರ ಎಂಬ ರಾಜನ ವಿಷಯ ತಿಳಿಸುವುದು. ಈತನು ಹೆಂಜೇರುವಿನ ಶಾಸನದಲ್ಲಿ ತಿಳಿಸಿರುವ ಪೊಳಲ್ಚೋರ ನೊಳಂಬನೆಂಬುದರಲ್ಲಿ ಸಂಶಯವಿಲ್ಲ. ಕ್ರಿ.ಶ.೮೯೦ರ ಹಿರಿಯೂರು ಶಾಸನವು ನೊಳಂಬ ಪಲ್ಲವ ರಾಜ ಮಹೇಂದ್ರನ ಆಳ್ವಿಕೆಯಲ್ಲಿ ಚಿತ್ತಪ್ಪನ ಕೆರೆಯ ನಿರ್ಮಾಣವಾದುದನ್ನು ತಿಳಿಸುತ್ತದೆ. ಬಾಗೇನಾಳು ಹಾಗೂ ಮೂಸ್ಟೂರಿನ ಹಾಳುಬಿದ್ದ ದೇವಾಲಯಗಳನ್ನು ಕಟ್ಟಿಸಿದ ಉಲ್ಲೇಖಗಳು ಶಾಸನಗಳಿಂದ ತಿಳಿದು ಬರುತ್ತವೆ.[೬೩]

ವಿಸ್ತಾರವಾಗಿದ್ದ ನೊಳಂಬವಾಡಿ ೩೨೦೦೦ ಪ್ರಾಂತ್ಯವನ್ನು ತಮ್ಮ ಆಡಳಿತದ ಅನುಕೂಲಕ್ಕಾಗಿ ನೊಳಂಬರು ಅನೇಕ ಭಾಗಗಳನ್ನಾಗಿ ವಿಂಗಡಿಸಿದ್ದರು. ಅವುಗಳೆಂದರೆ ವಾಡಿ, ನಾಡು, ಊರು, ವಳ್ಳಿ, ಹಳ್ಳಿ ಇಂತಹ ಭಾಗಗಳ ಹೆಸರುಗಳು ಅವರ ಶಾಸನಗಳಲ್ಲಿ ಕಂಡುಬಂದಿವೆ.[೬೪] ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಅಮ್ಮವಳ್ಳಿ, ಮುದರಿಕಲ್ಲು, ನೀರಗುಂದ ನಾಡು, ನೋಳಂಬರಿಗೆ ೧೦೦೦, ಇವು ಆಡಳಿತ ವಿಭಾಗಗಳಾದರೆ ಹಿರೆಮಧುರೆ, ಚಿಕ್ಕಮಧುರೆ, ದೊಡ್ಡುಳಾರ್ಥಿ, ಗಂಜಿಗಟ್ಟೆ, ಬಾಗೇನಾಳು, ಧರ್ಮಪುರ, ಐಮಂಗಲ, ಸಿದ್ದಾಪುರ, ಮೊಳಕಾಲ್ಮೂರು, ತುರುವನೂರು ಗ್ರಾಮಗಳು ನೊಳಂಬರ ಶಾಸನಗಳನ್ನು ಹೊಂದಿದ್ದ ಗ್ರಾಮಗಳಾಗಿವೆ.[೬೫]

ಒಟ್ಟಾರೆಯಾಗಿ ನೊಳಂಬರು ಚಿತ್ರದುರ್ಗ ಪ್ರದೇಶದಲ್ಲಿ ಆಡಳಿತ ಮಾಡಿದ ಉಲ್ಲೇಖಗಳು ಹೆಚ್ಚಾಗಿ ಶಾಸನಗಳಿಂದ ತಿಳಿದು ಬರುತ್ತದೆ. ಅಲ್ಲದೆ ಹಿರೇಮಧುರಿ ಗ್ರಾಮದಲ್ಲಿ ಬದಿಯಮ್ಮ ಶೆಟ್ಟಿ ಹಾಗೂ ನಾಗಯ್ಯ ಎಂಬುವರು ಭೂಮಿಯನ್ನು ನನ್ನಿಗಾವುಂಡ, ನಾಗನಾವುಂಡ, ಎಳವರಿ ಗಾವುಂಡ, ಎರೆಮಾರ, ಎರೆಯಮ್ಮಗಾವುಂಡ, ನೊಳಂಬ ಗಾವುಂಡನ ಮಗ ಅಣ್ಣಿಗ ಇವರುಗಳನ್ನು ಸಾಕ್ಷಿಯಾಗಿ

ದಾನ ಮಾಡಿ ರಕ್ಷಿಸುವಂತೆ[೬೬] ಹೇಳುವ ಅನೇಕ ದಾನ ಶಾಸನಗಳು, ಕೆರೆ ಕಟ್ಟಿಸಿದ ಹಾಗೂ ದೇವಾಲಯಗಳ ನಿರ್ಮಾಣ' ಜೀರ್ಣೋದ್ಧಾರ ಮಾಡಿದ ಅಂಶಗಳು ಶಾಸನಗಳಿಂದ ತಿಳಿದುಬರುತ್ತದೆ.

**ರಾಷ್ಟ್ರಕೂಟರು**

೮ನೆಯ ಶತಮಾನದ ಮಧ್ಯಭಾಗದಿಂದ ೧೦ನೆಯ ಶತಮಾನದ ಕೊನೆಯ ಭಾಗದವರೆಗೆ ಕರ್ನಾಟಕ ಮತ್ತು ಮಹಾರಾಷ್ಟ್ರದ ಬಹುಭಾಗಗಳನ್ನು ಆಳಿದ ರಾಜಮನೆತನ.[೬೭]

ಚಿತ್ರದುರ್ಗ ಜಿಲ್ಲೆಯಲ್ಲಿ ರಾಷ್ಟ್ರಕೂಟರ ಶಾಸನಗಳು ಬಹು ಸಂಖ್ಯೆಯಲ್ಲಿ ದೊರೆಯದಿದ್ದರೂ ಈ ಭೂ ಭಾಗ ಅವರ ಆಳ್ವಿಕೆಗೆ ಸು.ಕ್ರಿ.ಶ.೭೯೮ರಿಂದ ಸು.೯೮೨ರ ವರೆಗೆ ಇದ್ದಿತೆಂದು ಇಲ್ಲಿ ಹಾಗೂ ಬೇರೆ ಕಡೆ ದೊರೆತ ಶಾಸನಗಳಿಂದ ಸದ್ಯ ಹೇಳಬಹುದಾಗಿದೆ.[೬೮]

ರಾಷ್ಟ್ರಕೂಟರ ಆಡಳಿತ ಅವಧಿಯಲ್ಲಿ ಚಿತ್ರದುರ್ಗದ ಭಾಗ ಅಂದರೆ ಸುಳ್ಗಲ್ ೭೦[೬೯] ಸುಳುಂಗಲ್ ೭೦ ಎಂದು ಕದಂಬಳಿಗೆ ೧೦೦೦, ಮಂಡಳಿ-೧೦೦೦[೭೦] ಎಂಬ ಹೆಸರುಗಳಿಂದ ಅಂತರ್ಗತವಾಗಿ ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತ್ತು.

ಇಸಾಮುದ್ರ, ಆಡನೂರು, ಹೆಬ್ಬಳ್ಳಿ, ಬೇವಿನಹಳ್ಳಿ, ಇನ್ನೂ ಹಲವು ಕಡೆ ರಾಷ್ಟ್ರಕೂಟರ ಶಾಸನ, ವೀರಗಲ್ಲುಗಳು ಹಾಗೂ ಮಹಾಸತಿ ಕಲ್ಲುಗಳು ದೊರಕಿವೆ. ಊರಿನ ಗೌಡಿಕೆಗೆ ಸಂಬಂಧಿಸಿದ ಮಾಹಿತಿಗಳನ್ನು ನೀಡುವ ಶಾಸನಗಳು, ಕೆರೆ ಹಾಗೂ ದೇವಾಲಯಗಳ ನಿರ್ಮಾಣಕ್ಕೆ ಸಂಬಂಧಿಸಿದವುಗಳಾಗಿವೆ. ಅಗ್ರಹಾರಗಳಿಗೆ, ದೇವಾಲಯಗಳಿಗೆ ಭೂಮಿಯನ್ನು ದಾನವಾಗಿ ಧತ್ತಿ ಬಿಟ್ಟ ಉಲ್ಲೇಖಗಳು ಶಾಸನಗಳಿಂದ ತಿಳಿದು ಬರುತ್ತದೆ. ನಂತರ ವಿಶೇಷವಾಗಿ ಇಸಾಮುದ್ರದಲ್ಲಿ ದೊರೆತಿರುವ ಶಾಸನವು ಕ್ರಿ.ಶ.೯೩೭ರಲ್ಲಿ ರಚನೆಗೊಂಡಿದ್ದು ರಾಷ್ಟ್ರಕೂಟರ ವಂಶಾವಳಿಯನ್ನು ಸೂಚಿಸುತ್ತದೆ.[೭೧]

ರಾಷ್ಟ್ರಕೂಟರ ರಾಜಧಾನಿಯಾಗಿದ್ದ ಮಳಖೇಡದಿಂದ ಆಳ್ವಿಕೆಯನ್ನು ನಡೆಸಿದ ಇವರು ಮಾನ್ಯಕೇಟದ ರಾಷ್ಟ್ರಕೂಟರು ಎಂದು ಪ್ರಸಿದ್ದಿಯಾಗಿದ್ದು ೯-೧೦ನೆಯ ಶತಮಾನದಲ್ಲಿ ಮಾನ್ಯಕೇಟ ರಾಜಧಾನಿ ಕೇಂದ್ರ ಹಾಗೂ ಪ್ರಮುಖ ವ್ಯಾಪಾರಿ ಕೇಂದ್ರವಾಗಿ ಗುರುತಿಸಿಕೊಂಡಿತ್ತು. ಸೂಳ್ಗಲ್೭೦ಎಂದು ಶಾಸನಗಳಲ್ಲಿ ಕಲೆಯಲ್ಪಡುವ ಚಿತ್ರದುರ್ಗವು ರಾಷ್ಟ್ರಕೂಟರ ಕಾಲದಲ್ಲಿಯೇ ಶಾಸನ ಉಲ್ಲೇಖದಂತೆ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು ಎಂದು ಹೇಳಬಹುದಾಗಿದೆ.

ಹೀಗೆ ರಾಷ್ಟ್ರಕೂಟ ಅರಸರಿಗೆ ಸಂಬಂಧಿಸಿದ ಅನೇಕ ಶಾಸನಗಳು ಈ ಪ್ರದೇಶದಲ್ಲಿ ದೊರೆತಿದ್ದು ಈ ಪ್ರದೇಶವನ್ನು ಕದಂಬಳಿ ಸಾರದ ಎನ್ನುವ ಆಡಳಿತ ವಿಭಾಗದ ಹೆಸರಿನಿಂದ ಕರೆಯಲಾಗುತ್ತಿತ್ತು. ಮಧುರೆ, ಗೊಡಬನಾಳ್ ಮೊದಲಾದ ಕಡೆಗಳಲ್ಲಿ ಈ ಕಾಲದ ವೀರಗಲ್ಲುಗಳೂ ಸಹ ದೊರೆತು ರಾಷ್ಟ್ರಕೂಟರ ಪ್ರಭಾವವನ್ನು ಸೂಚಿಸುತ್ತವೆ.

**ಕಲ್ಯಾಣದ ಚಾಲುಕ್ಯರು**

ಕಲ್ಯಾಣದ ಚಾಲುಕ್ಯರು ಸುಮಾರು ಕ್ರಿ.ಶ.೧೦ನೆಯ ಶತಮಾನದಿಂದ ೧೨ನೆಯ ಶತಮಾನದವರೆಗೆ ದಕ್ಷಿಣ ಭಾರತದ ಇತಿಹಾಸದಲ್ಲಿ ಅದರಲ್ಲೂ ವಿಶೇಷವಾಗಿ ಕರ್ನಾಟಕ ಇತಿಹಾಸದಲ್ಲಿ ಮಹತ್ತರ ಪಾತ್ರವಹಿಸಿದ್ದಾರೆ. ಕ್ರಿ.ಶ.೯೭೩ರ ಸುಮಾರಿನಲ್ಲಿ ರಾಷ್ಟ್ರಕೂಟರ ಕೊನೆಯ ದೊರೆ ಎರಡನೇ ಕರ್ಕನನ್ನು ಚಾಲುಕ್ಯ ವಂಶದ ಎರಡನೇ ತೈಲಪನು ಅಧಿಕಾರದಿಂದ ಕೆಳಗಿಳಿಸಿ ಚಾಲುಕ್ಯ ವಂಶವನ್ನು ಪುನಃ

ಸ್ಥಾಪನೆ ಮಾಡಿದನು. ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ್ದರಿಂದ ಇವರನ್ನು ಕಲ್ಯಾಣದ ಚಾಲುಕ್ಯರು ಎಂದು ಕರೆಯಲಾಗಿದೆ.[೨೨]

ಕರ್ನಾಟಕವನ್ನು ಆಳಿದವರು ಕಲ್ಯಾಣದ ಚಾಲುಕ್ಯರು ಇವರ ಕಾಲದಲ್ಲಿ ಕೂಡಾ ಚಿತ್ರದುರ್ಗ ಒಂದು ಭಾಗ ಅಂದರೆ ಸೂಳ್ಗಲ್ಲು ೭೦ರ ನಾಡು ಕದಂಬಳಿಗೆ ೧೦೦೦ ಪ್ರಾಂತದ ಭಾಗವಾಗಿ, ಕೆಲಕಾಲಾನಂತರದಲ್ಲಿ ಈ ಪ್ರಾಂತ ಕೂಡಾ ನೊಳಂಬವಾಡಿ ೩೨೦೦೦ ಎಂಬ ವಿಶಾಲ ಪ್ರಾಂತದ ಭಾಗವಾಗಿ ಬಂದದ್ದು ತಿಳಿದುಬರುತ್ತದೆ. ಇವರ ಆಳ್ವಿಕೆಯ ಕಾಲದಲ್ಲಿ ನೊಳಂಬವಾಡಿ ೩೨೦೦೦ಪ್ರಾಂತವೆಂಬ ಹೆಸರಿನಿಂದ ಕರೆಯಲ್ಪಡುತ್ತಿದ್ದ ಚಿತ್ರದುರ್ಗ ಜಿಲ್ಲೆಯು ಕಲಹಕ್ಕೆ ಕಾರಣ ಪ್ರದೇಶವಾಗಿದ್ದಿತು. ಬಾದಾಮಿಯ ಚಾಲುಕ್ಯರಿಗೆ ಪಲ್ಲವರು ವೈರಿಗಳಾಗಿದ್ದರೆ, ಕಲ್ಯಾಣದ ಚಾಲುಕ್ಯರಿಗೆ ಚೋಳರು ವೈರಿಗಳಾಗಿದ್ದರು. ಚೋಳ ಮತ್ತು ಚಾಲುಕ್ಯ ರಾಜ್ಯಗಳ ನಡುವೆ ಅನೇಕ ಬಾರಿ ಯುದ್ಧಗಳು ನಡೆದವು.[೨೩] ಇದು ರಾಜಕೀಯ ಕಲಹಗಳಿಗೆ ಸಂಬಂಧಿಸಿದಂತೆ ಯುದ್ಧಗಳು ಸಂಬಂವಿಸಿದಂತೆ. ಆದರೆ ಚೋಳರು ಮೂಲತಃ ವ್ಯಾಪಾರಿ ಸಮುದಾಯದವರು ಕ್ರಿ.ಶ.೧೦-೧೨ನೆಯ ಶತಮಾನದಲ್ಲಿಯೇ ಚೋಳರು ವ್ಯಾಪಾರ ನಡೆಸುತ್ತಿದ್ದ ಅಂಶಗಳು ನಮಗೆ ಲಭ್ಯವಾಗಿವೆ. ಅದೇ ರೀತಿ ಕಲ್ಯಾಣ ಚಾಲುಕ್ಯರು ಬಾದಾಮಿ, ಐಹೊಳೆ, ಪಟ್ಟದಕಲ್ಲು, ಕಲ್ಯಾಣ, ಮಾನ್ಯಕೇಟ, ಬನವಾಸಿ ಶ್ರವಣಬೆಳಗೋಳ ಇನ್ನು ಅನೇಕ ಪ್ರದೇಶಗಳು ೧೦-೧೨ನೆಯ ಶತಮಾನದಲ್ಲಿ ವ್ಯಾಪಾರಿ ಕೇಂದ್ರಗಳಾಗಿ ಗುರುತಿಸಿಕೊಂಡಿದ್ದು ಚಿಮ್ಮಚನೂರ್ ಎಂದು ಕರೆಯಲ್ಪಡುವ ಚಿತ್ರದುರ್ಗವು ಸಹ ಪ್ರಮುಖ ವ್ಯಾಪಾರಿ ಕೇಂದ್ರವಾಗಿ, ಆಡಳಿತ ವಿಭಾಗವಾಗಿ ಗುರುತಿಸಿಕೊಂಡಿದೆ.

ಕಲ್ಯಾಣ ಚಾಲುಕ್ಯರಲ್ಲಿ ಅತ್ಯಂತ ಪ್ರಸಿದ್ದನಾದ ಆರನೇ ವಿಕ್ರಮಾದಿತ್ಯ ಈತನು ಕ್ರಿ.ಶ.೧೦೭೬ ರಿಂದ ೧೧೨೬ರ ವರೆಗೆ ಆಳ್ವಿಕೆ ನಡೆಸಿದ್ದು, ಬೇತೂರು, ಗಾರೆಹಟ್ಟಿಗಳಲ್ಲಿ ದೊರೆತ ಶಾಸನಗಳ ಪಾಠದ ಪ್ರಕಾರ ಬಾಗಳಿ ಕಲ್ಲೇಶ್ವರ ದೇವಾಲಯಕ್ಕೆ ದತ್ತಿ ಬಿಟ್ಟ ವಿವರಗಳು ತಿಳಿದು ಬರುತ್ತದೆ.[೨೪] ಅಲ್ಲದೆ ಬೇತೂರು ಗ್ರಾಮವು ಪ್ರಮುಖ ಸಂತೆ ನಡೆಯುತ್ತಿದ್ದ ಪ್ರದೇಶವಾಗಿದೆ. ಅಲ್ಲದೆ ಆಡಳಿತ ಪ್ರದೇಶವಾಗಿತ್ತೆಂದು ಶಾಸನದಿಂದ ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯರಿಗೆ ಸಂಬಂಧಿಸಿದ ಅನೇಕ ಶಾಸನಗಳು ಚಿತ್ರದುರ್ಗ ಪರಿಸರದಲ್ಲಿ ದೊರೆತಿದ್ದು, ಅವು ಹೆಚ್ಚಾಗಿ ಯುದ್ಧಗಳ ಮಾಹಿತಿಯನ್ನು ವಂಶಾವಳಿಗಳನ್ನು ನೀಡುತ್ತವೆ. ಕ್ರಿ.ಶ.೧೦೭೩ರ ಚಿತ್ರದುರ್ಗ ಶಾಸನವೊಂದು ಚಿತ್ರದುರ್ಗದಲ್ಲಿ ಕೋಟೆಯಿದ್ದ ವಿಷಯ ಶಾಸನೋಕ್ತವಾಗಿರುವುದು ಇದೆ ಮೊದಲು.[೨೫] ಅಂದರೆ ಕ್ರಿ.ಶ.೧೧ನೆಯ ಶತಮಾನಕ್ಕಿಂತ ಹಿಂದೆಯೇ ಇಲ್ಲಿ ಕೋಟೆಯಿತ್ತೆನ್ನುವ ವಿಚಾರ ಈ ಶಾಸನದಿಂದ ತಿಳಿಯುತ್ತದೆ.

ಈ ರೀತಿಯಾಗಿ ಕಲ್ಯಾಣ ಚಾಲುಕ್ಯ ಅರಸರ ಅನೇಕ ಶಾಸನಗಳನ್ನು ಪ್ರಸ್ತುತ ಪ್ರದೇಶದಲ್ಲಿ ದೊರೆತು ಅವರ ಸಾಮಂತಾಗಿ ನೊಳಂಬರು, ಪಲ್ಲವರು ಮತ್ತು ಪಾಂಡ್ಯರು ಈ ಭಾಗದಲ್ಲಿ ಆಳ್ವಿಕೆ ನಡೆಸುತ್ತಿದ್ದರೆನ್ನುವ ವಿವರಗಳು ದೊರೆಯುತ್ತವೆ. ಪ್ರಸ್ತುತ ಪ್ರದೇಶವು ಪ್ರಮುಖ ಕೃಷಿ ಯೋಗ್ಯ ಭೂಮಿಯನ್ನು ಹೊಂದಿದ್ದು ಈ ಕಾಲಮಾನದಲ್ಲಿಯೇ ಸೂಳ್ಗಲ್ ೭೦ ಪ್ರಮುಖ ವ್ಯಾಪಾರಿ ಕೇಂದ್ರವಾಗಿರುವುದನ್ನು ಗಮನಿಸಬಹುದಾಗಿದೆ.

**ಹೊಯ್ಸಳರು**

೧೦ನೆಯ ಶತಮಾನದ ಮಧ್ಯ ಭಾಗದಿಂದ ೧೪ನೆಯ ಶತಮಾನದ ಮಧ್ಯ ಭಾಗದವರೆಗೆ, ವಿಶೇಷವಾಗಿ ದಕ್ಷಿಣ ಕರ್ನಾಟಕ ಮತ್ತು ಸುತ್ತಲಿನ ಭಾಗಗಳನ್ನು ಆಳಿದ ರಾಜ ಮನೆತನ. ಈ ವಂಶದ ಅರಸರ ರಾಜಧಾನಿ ಮೊದಲು ಶಶಕಪುರ ಅಥವಾ ಸೊಸೆವೂರು ಅನಂತರ ಬೇಲೂರು ಮತ್ತು ದೋರಸಮುದ್ರ (ದ್ವಾರಸಮುದ್ರ). ಮಲೆನಾಡಿನ ಒಂದು ಚಿಕ್ಕ ಪಾಳೆಯಪಟ್ಟಾಗಿ ಆರಂಭವಾಗಿ ತಾತ್ಕಾಲಿಕವಾಗಿ ಅಸ್ಥವ್ಯಸ್ತವಾದ ರಾಜಕೀಯ ಪರಿಸ್ಥಿತಿಯನ್ನು ಲಾಭಪಡೆದು, ಮೊದಲು ಕಲ್ಯಾಣ ಚಾಲುಕ್ಯರ ಸಾಮಂತರಾಗಿ ನೆಲೆಗೊಂಡು ಮುಂದೆ ಶೌರ್ಯ ಹಾಗೂ ಸ್ವಸಾಮರ್ಥ್ಯದಿಂದ ರಾಜ್ಯ ವಿಸ್ತಾರ ಮಾಡಿ ಸ್ವತಂತ್ರರಾದರು. ಸುಸಂದರ್ಭದಲ್ಲಿ ತಮ್ಮ ಪ್ರಭಾವವನ್ನು ತಮಿಳುನಾಡಿಗೂ ವಿಸ್ತರಿಸಿ, ನಾಡಿನ ಆರ್ಥಿಕ ಸಾಂಸ್ಕೃತಿಕ ರಂಗಗಳಲ್ಲಿ ಉನ್ನತ ಸಾಧನೆಗಳಿಗೆ ಪ್ರೋತ್ಸಾಹ ನೀಡಿ, ಸುಮಾರು ಶತಮಾನಗಳ ಕಾಲ ಆಡಳಿತ ಮಾಡಿದ ಈ ಮನೆತನದ ಚರಿತ್ರೆಯಲ್ಲಿ ಒಂದು ಮುಖ್ಯ ಅಧ್ಯಯವಾಗಿದೆ.[೨೬] ಅದರಲ್ಲೂ ವಿಶೇಷವಾಗಿ ವ್ಯಾಪಾರ-ವಾಣಿಜ್ಯದ ದೃಷ್ಠಿಯಿಂದ.

ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯ ಅಧಿಕಾರ ಅಸ್ತಂಗತವಾಗುವ ವೇಳೆಗೆ ತಲೆಯೆತ್ತಿದ್ದ ಹೊಯ್ಸಳರು, ಜೊತೆಯಲ್ಲಿಯೇ ಪ್ರಬಾಲ್ಯಕ್ಕೆ ಬಂದ ಸೇವುಣರು ಅಥವಾ ಯಾದವರು ಕರ್ನಾಟಕದ ಸಾಮ್ರಾಟರಾಗಿ ಆಳ್ವಿಕೆಯನ್ನು ನಡೆಸಿದರೆಂದು ಚರಿತ್ರೆಯಲ್ಲಿ ಕಾಣಬಹುದು. ನಾಡಿನ ಉತ್ತರ ಭಾಗದಲ್ಲಿ ಬಹುಕಾಲ ಸೇವುಣರು ಆಳ್ವಿಕೆಯಲ್ಲಿ ಬಂದರೆ, ನಾಡಿನ ದಕ್ಷಿಣ ಭಾಗದಲ್ಲಿ ಹೊಯ್ಸಳರ ಆಳ್ವಿಕೆಯಲ್ಲಿ ಸಾಗಿಬಂದಿತು. ಮಧ್ಯದಲ್ಲಿ ಬರುವ ಹರಿಹರ, ದಾವಣಗೆರೆ, ಹೊಳಲ್ಕೆರೆ, ತಾಲೂಕುಗಳಲ್ಲಿ ಕೆಲವು ಕಾಲ ಹೊಯ್ಸಳರ ಆಳ್ವಿಕೆಯಲ್ಲಿ, ಕೆಲವು ಕಾಲ ಸೇವುಣರ ಆಳ್ವಿಕೆಯಲ್ಲಿ ಸಾಗಿ ಬಂದಂತೆ ಶಾಸನಗಳಿಂದ ತಿಳಿಯುತ್ತದೆ. ಚಿತ್ರದುರ್ಗ ಪ್ರಾಂತ್ಯವಂತೂ ಸಂಪೂರ್ಣವಾಗಿ ಹೊಯ್ಸಳ ಸಾಮ್ರಾಜ್ಯದ ಭಾಗವಾಗಿತ್ತು. ಚಿತ್ರದುರ್ಗ ಜಿಲ್ಲೆಯು ಅನೇಕ ಚಿಕ್ಕ ಭಾಗಗಳಾಗಿ ವಿಭಜಿಸಲ್ಪಟ್ಟು, ಒಂದೊಂದು ಚಿಕ್ಕ ಭಾಗವು ಒಬ್ಬರು ಇಲ್ಲವೇ ಕೆಲವೊಮ್ಮೆ ಇಬ್ಬರು ಪ್ರಾಂತ ಪ್ರಭುಗಳ ಆಳ್ವಿಕೆಗೆ ಒಳಪಟ್ಟಿರುತ್ತಿದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ. ಹೀಗೆ ಪ್ರಾಂತ ಪ್ರಭುಗಳ ಆಳ್ವಿಕೆಯಲ್ಲಿ ಬಂದ ಚಿಕ್ಕ ಪ್ರಾಂತಗಳಲ್ಲಿ ಚಿತ್ರದುರ್ಗವೂ ಒಂದಾಗಿತ್ತು. ಕೆಲವೊಮ್ಮೆ ಚಿತ್ರದುರ್ಗಕ್ಕೆ ಹೆಚ್ಚಿನ ಸ್ಥಾನ ಮಾನ ಇದ್ದಂತೆ, ಕೆಲವೊಮ್ಮೆ ಸಾಮಾನ್ಯ ಸ್ಥಾನಮಾನ ಇದ್ದಂತೆ ಕಂಡುಬರುತ್ತದೆ.[೨೭]

ಪ್ರಸ್ತುತ ಚಿತ್ರದುರ್ಗ ಜಿಲ್ಲೆಯಲ್ಲಿ ಹೊಯ್ಸಳರ ಆಳ್ವಿಕೆಯನ್ನು ಚಿತ್ರಿಸಲು ಸಹಾಯಕವಾಗಿ ಐವತ್ತಕ್ಕೂ ಹೆಚ್ಚು ಶಾಸನಗಳಿವೆ. ಅವುಗಳಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಕೆರೆ-ಕಾಲುವೆ, ದೇವಾಲಯ, ಅಗ್ರಹಾರ, ಇತ್ಯಾದಿಗಳನ್ನು ಕುರಿತು ಈ ಪ್ರದೇಶದಲ್ಲಿ ಸಿಕ್ಕ ಶಾಸನಗಳು ಸಾರುತ್ತವೆ.

ಹಿರಿಯೂರು ತಾಲ್ಲೂಕು ಯರಬಳ್ಳಿ ಗ್ರಾಮದಲ್ಲಿರುವ ಕ್ರಿ.ಶ.೧೨೦೫ರ ಶಾಸನವು ಇಮ್ಮಡಿ ಬಲ್ಲಾಳನ ಮಂತ್ರಿ ಬೇಟೆಯ ದಣ್ಣಾಯಕನು ಕರಡಿಕೆರೆ ಪೆರುಮಗೌಡನ ಮಗ ನಾಗೇಯ ನಾಯಕನಿಗೆ 'ನೆತ್ತರು ಕೊಡುಗೆ' ಹೊಲವನ್ನು ನೀಡಿದನ್ನು ಹೇಳುತ್ತದೆ. ಅದೇ ಊರಿನಲ್ಲಿರುವ ಕ್ರಿ.ಶ.೧೨೦೮ರ ಶಾಸನದಲ್ಲಿ ಬೇಟೆಯ ದಣ್ಣಾಯಕನ ಮಾತಿನ ಮೇರೆಗೆ ಆಲತೋಟೆಯ ಕಂನಯ ನಾಯಕನು ತವ ನಿಧಿಯ ನಾಗಗೌಡನಿಗೆ ಕೊಟ್ಟ 'ಸರ್ಬ್ಬಕೊಡುಗೆ'ಯ ಬಗ್ಗೆ ಪ್ರಸ್ತಾಪಿಸುತ್ತದೆ.[೨೮]

ಹೊಳಲ್ಕರೆ ಶಾಸನವು ಕ್ರಿ.ಶ.೧೨೧೪ರಲ್ಲಿ ಚಿತ್ರದುರ್ಗವನ್ನು ಆಗ 'ಬೆಮ್ಮತೂರು ಪಟ್ಟಣ'ವೆಂದು ಕರೆಯಲಾಗುತ್ತಿತ್ತೆಂದು ತಿಳಿಸುತ್ತದೆ. ಈ ಶಾಸನದಿಂದ ಚಿತ್ರದುರ್ಗವು ಹೊಯ್ಸಳ ಸಾಮಂತರ ಮುಖ್ಯ ಪಟ್ಟಣವಾಗಿತ್ತೆಂದು ವ್ಯಕ್ತಪಡಿಸುತ್ತದೆ. ಭರಮಸಾಗರ ಹೋಬಳಿ ಕೋಗುಂಡಿ ಗ್ರಾಮದ ಈಶ್ವರ ದೇವಾಲಯದ ಬಳಿ ಇರುವ ಶಾಸನವು ಕಮ್ಮಕುಲದ ಮಹಾ ವಡ್ಡ ವ್ಯವಹಾರಿ, ರಾಜಶ್ರೇಷ್ಠಿ ಮಲ್ಲಿಯೋಗಪ್ಪನೆಂಬುವನು ತನ್ನ ತಂದೆಯ ಹೆಸರಿನಲ್ಲಿ ಬಾಚೇಶ್ವರ ದೇವಾಲಯವನ್ನು ಕಟ್ಟಿಸಿದ ಬಗ್ಗೆ ತಿಳಿಸುತ್ತದೆ. ಕ್ರಿ.ಶ.೧೨೧೫ರ ಸಿದ್ದಾಪುರದ ವೀರಗಲ್ಲು ಹೊಯ್ಸಳರ ಕಾಲದ ಸಾಮಾಜಿಕ ಪದ್ಧತಿಯೊಂದನ್ನು ಕುರಿತು ಸಾರುತ್ತದೆ. ಇಮ್ಮಡಿ ಬಲ್ಲಾಳನು ಹಾಗೆಯ ಕೋಟೆಯನ್ನು ಆಕ್ರಮಿಸಿ ಅಲ್ಲಿ ವಿಜಯಗಿರಿ ಎಂಬ ಪಟ್ಟಣ ನಿರ್ಮಿಸಿದುದನ್ನೂ, ಹೊನ್ನಿ ಎಂಬುವಳು ಈ ಸಂದರ್ಭದಲ್ಲಿ ಆತ್ಮಾರ್ಪಣೆ (ಆತ್ಮಬಲಿ)[೭೯] ಮಾಡಿಕೊಂಡ ಅಪರೂಪದ ಘಟನೆಯನ್ನು ಸಾರುತ್ತದೆ.

ಕ್ರಿ.ಶ.೧೨೧೮ರ ಕುಂದವಾಡ ಗ್ರಾಮದ ಶಾಸನವು ಹೊಯ್ಸಳರ ಕಾಲದ ಚಿತ್ರದುರ್ಗ ಜಿಲ್ಲೆಯ ಆರ್ಥಿಕ ಜೀವನಕ್ಕೆ ಹಿಡಿದ ಕನ್ನಡಿಯಂತಿದೆ. ರಾಣಿಯಾದ ಅಭಿನವ ಕೇತಲ ದೇವಿಯು ಈ ಕುಂದವಾಡದಲ್ಲಿ ಪ್ರತಿ ಬುಧವಾರ ಸಂತೆ ನಡೆಯುವಂತೆ ಏರ್ಪಡಿಸಿದಳಂತೆ.[೮೦] ಅಲ್ಲದೆ ಹಿರೇ ಎಮ್ಮಿಗನೂರು ಕಲ್ಲೇಶ್ವರ ದೇವಾಲಯದ ಶಾಸನವು ಅಲ್ಲಿನ ವರ್ತಕರಾದ ಜಕ್ಕರಸ, ಬಯಾಳಗೇತಿ ಶೆಟ್ಟಿ, ಕೇತಗೌಡ ಇವರೆ ಮೊದಲಾದ ಗೌಡರು ಮತ್ತು ಶೆಟ್ಟಿಗಳು ಸೂರ್ಯಗ್ರಹಣದ ಸಮಯದಲ್ಲಿ ದೇವಾಲಯಕ್ಕೆ ದತ್ತಿ ಬಿಟ್ಟ ಉಲ್ಲೇಖವು ಕಂಡುಬರುತ್ತದೆ.

ಪ್ರಜಾಹಿತ ಕಾರ್ಯಗಳಲ್ಲಿ ಅತ್ಯಂತ ಆಸಕ್ತನಾಗಿದ್ದ ಪೆರಮಾಳೆ ದೇವನು ಕ್ರಿ.ಶ.೧೨೮೫ರಲ್ಲಿ ಚಿತ್ರದುರ್ಗದ ಬ್ರಹ್ಮಪುರಿ ಬೆಟ್ಟವನ್ನು ಪೆರಮಾಳಪುರವೆಂದು ನಾಮಕರಣ ಮಾಡಿದುದನ್ನು ಚಿತ್ರದುರ್ಗ ಬೆಟ್ಟದ ಮೇಲೆ ಇರುವ ಬಂಡೆ ಶಾಸನವು ತಿಳಿಸುತ್ತದೆ. ಈ ಅವಧಿಯಲ್ಲಿ ಚಿತ್ರದುರ್ಗವನ್ನು ಚಿಮ್ಮತ್ತನೂರು ವೃತ್ತಿ, ಚೆಮ್ಮತ್ತನೂರು ಪಟ್ಟಣ, ಚಿಮ್ಮತ್ತನಕಲ್ಲು ಪಟ್ಟಣ ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತಿತ್ತು. ಪೆರಮಾಳೆಪುರದಲ್ಲಿ ಬ್ರಹ್ಮಪುರಿಯೊಂದನ್ನು ಸ್ಥಾಪಿಸಿ, ಅದರ ನಿರ್ವಹಣೆಗೆ ಮತ್ತು ಆ ವಿದ್ಯಾಲಯದ ಆಚಾರ್ಯರ ಪೋಷಣೆಗೆ ಚಿತ್ರದುರ್ಗ ಬೆಟ್ಟದ ಪೂರ್ವಕ್ಕೆ ಇದ್ದ ಕುರುಬ ಕಾಳೇಯನ ಕೆರೆಯನ್ನು ಅಲ್ಲಿನ ಭೂಮಿಯನ್ನು ಕೊಂಡು ಮೇಲ್ಕಂಡ ವಿದ್ಯಾಲಯಕ್ಕೆ ದತ್ತಿ ಕೊಟ್ಟಿದ್ದನೆಂದು ಬೆಟ್ಟದ ಮೇಲಿನ ಹಿಡಿಂಬೇಶ್ವರ ದೇವಾಲಯದಲ್ಲಿ ನಿಲ್ಲಿಸಿರುವ ಶಾಸನ ತಿಳಿಸುತ್ತದೆ. ಈ ಕಾರ್ಯವು ಪೆರಮಾಳೆ ದೇವ ದಣ್ಣಾಯಕನು ವಿದ್ಯೆಗೆ ನೀಡುತ್ತಿದ್ದ ಮಹತ್ವವನ್ನು ವ್ಯಕ್ತಪಡಿಸುತ್ತದೆ.[೮೧]

ಒಟ್ಟಾರೆಯಾಗಿ ಹೊಯ್ಸಳರ ಕಾಲದಲ್ಲಿಯೇ ಚಿತ್ರದುರ್ಗ ಹೆಚ್ಚು ಬೆಳವಣಿಗೆಯನ್ನು ಕಂಡಿದ್ದು ಎಂದು ನಿಸ್ಸಂದೇಹವಾಗಿ ಹೇಳಬಹುದು. ಸಣ್ಣಕ್ಕಿ ಬಾಗೂರಿನಲ್ಲಿ ದೊರೆತ ಶಾಸನದಿಂದ ಐಯ್ಯಾವೊಳೆ ಐನೂರು ವರ್ತಕ ಸಂಘವು ಎಡ ಶಾಖೆಯನ್ನು ಹೊಂದಿದ್ದು, ಆಡಳಿತದಲ್ಲಿ ಅನೇಕ ದೇವಾಲಯಗಳ, ಮಠಗಳ, ಅಗ್ರಹಾರಗಳ ನಿರ್ಮಾಣ ಕಾರ್ಯವನ್ನು ವರ್ತಕ ಸಮುದಾಯಗಳು ಮಾಡಿರುವುದು ತಿಳಿದುಬರುತ್ತದೆ.

**ವಿಜಯನಗರ**

ಹೊಯ್ಸಳ ಸಾಮ್ರಾಜ್ಯವು ಪತನದ ತರುವಾಯ ವಿಜಯನಗರ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದಿತು. ಇದನ್ನು 'ಮರೆತು ಹೋದ' ಹಾಗೂ 'ಎಂದೆಂದೂ ಮರೆಯಲಾಗದ' ಮಹಾ ಸಾಮ್ರಾಜ್ಯವೆಂದು

ಚರಿತ್ರಾಕಾರರು ಕರೆದಿದ್ದಾರೆ. ೧೪ನೆಯ ಶತಮಾನದಿಂದ ೧೬ನೆಯ ಶತಮಾನದಲ್ಲಿ ಅಸ್ತಂಗತವಾದ ವಿಜಯನಗರವು ಆ ಅವಧಿಯಲ್ಲಿ ಭಾರತದಲ್ಲಿ ಮಾತ್ರವಲ್ಲದೆ, ಪ್ರಪಂಚದಲ್ಲಿಯೇ ಖ್ಯಾತಿ ಪಡೆದಿತ್ತು. ದೇಶಿಯ ಹಾಗೂ ವಿದೇಶಿಯ ಲೇಖಕರು, ಇತಿಹಾಸಕಾರರು, ಪ್ರವಾಸಿಗರು, ವರ್ತಕರು ಇವರೇ ಮೊದಲಾದವರು ವಿಜಯನಗರದ ಭವ್ಯತೆಯನ್ನು ಮನಸಾರೆ ಕೊಂಡಾಡಿದ್ದಾರೆ. ಕ್ರಿ.ಶ.೧೩೩೬ರಿಂದ ೧೫೬೫ರವರೆಗೆ ಆಳ್ವಿಕೆ ನಡೆಸಿದ ವಿಜಯನಗರ ಅರಸರು ಚಿತ್ರದುರ್ಗವನ್ನು ತಮ್ಮ ಸಾಮ್ರಾಜ್ಯದ ಭಾಗವನ್ನಾಗಿಸಿಕೊಂಡು ಆಳಿದರು.[೮೨]

ಈ ಭಾಗದ ಮೇಲೆ ವಿಜಯನಗರ ಅರಸರು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ತಮ್ಮ ಆಡಳಿತ ನಡೆಸಿದ್ದಾರೆ. ಅವರ ಅನೇಕ ಶಾಸನಗಳು ಈ ಪ್ರದೇಶದಲ್ಲಿ ದೊರೆತಿದ್ದು ಅವುಗಳ ಸಹಾಯದಿಂದ ವಿಜಯನಗರದ ಅರಸರು ಈ ಪ್ರದೇಶದ ಮೇಲೆ ಹೊಂದಿದ್ದ ಆಡಳಿತಾತ್ಮಕ ಸಂಬಂಧಗಳನ್ನು ತಿಳಿಯಬಹುದು. ವಿಜಯನಗರದ ಅರಸರು ಈ ಪ್ರದೇಶವನ್ನು ತಮ್ಮ ಆಡಳಿತದ ಅನುಕೂಲಕ್ಕೋಸ್ಕರ ಅನೇಕ ಭಾಗಗಳಾಗಿ ವಿಭಾಗಿಸಿದ್ದರು. ಅವುಗಳಲ್ಲಿ ಸೀಮೆ.[೮೩]ವೆಂತೆ ಮತ್ತು ಚಾವಡಿ ಎಂಬ ವಿಭಾಗಗಳು ಮುಖ್ಯವಾಗಿದ್ದವು. ಅನೇಕ ಗ್ರಾಮಗಳನ್ನು ಸೇರಿಸಿ ಸೀಮೆ ಎಂಬ ವಿಭಾಗವನ್ನಾಗಿ ಮಾಡಿ, ಹಲವು ಸೀಮೆಗಳನ್ನು ಸೇರಿಸಿ ವೆಂತೆ ಎಂಬುದಾಗಿ ಮಾಡಿ, ಹಲವು ವೆಂತೆಗಳನ್ನು ಸೇರಿಸಿ ಚಾವಡಿಗಳನ್ನಾಗಿ ಮಾಡಿಕೊಂಡ ವಿಷಯ ಮೊದಲನೆಯ ಬುಕ್ಕನ ಕಾಲದಲ್ಲಿಯೇ ತಿಳಿದುಬರುತ್ತದೆ.[೮೪]

ದಾವಣಗೆರೆಯಲ್ಲಿ ದೊರೆತಿರುವ ಒಂದು ಶಾಸನದ ಪ್ರಕಾರ ಎರಡನೆಯ ಹರಿಹರನು ಶಂಕರ ಪುರವೆಂಬ ಗ್ರಾಮವನ್ನು ದಾನ ಕೊಟ್ಟನು. ಈ ಗ್ರಾಮವು ಹರಿಹರ ಸೀಮೆ, ಉಚ್ಚಂಗಿ ವೆಂತೆ ಕೊಟ್ಟೂರು ಚಾವಡಿಗೆ ಸೇರಿದ್ದಿತೆಂದು ಶಾಸನ ತಿಳಿಸುತ್ತದೆ.[೮೫]

ಒಟ್ಟಾರೆಯಾಗಿ ಚಿತ್ರದುರ್ಗ ಪ್ರದೇಶದಲ್ಲಿ ಶಾಸನಗಳಲ್ಲಿ ಉಲ್ಲೇಖಿತ ದಣ್ಣಾಯಕರಾಗಿ ಮಲ್ಲಿನಾಥ ಒಡೆಯ, ಮಾದರಸ ದಣ್ಣಾಯಕ, ಕಂಪಣ್ಣ ಒಡೆಯ, ವೀರ ಮಲ್ಲಣ್ಣ ಒಡೆಯ, ಗಣಪತಿರಾಯ, ವಿಜಯರಾಯ, ವಿರುಪಣ್ಣ, ವಿಠಲಪ್ಪನಾಯಕ, ನರಸಪ್ಪನಾಯಕ, ನರಸಪ್ಪ ನಾಯಕನ ಮಕ್ಕಳ ಉಲ್ಲೇಖವಿದೆ.[೮೬] ನಂತರ ತಿಮ್ಮಣ್ಣ ನಾಯಕ ಮತ್ತು ೧ನೆಯ ಓಬಣ್ಣ ಅಥವಾ ೧ನೆಯ ಮದಕರಿ ನಾಯಕ ಇವರೇ ೧೫೪೯ರ ವೇಳೆಗೆ ಹೊಳಲ್ಕೆರೆ ಸೀಮೆಯ ದಣ್ಣಾಯಕರಾಗಿದ್ದರು. ಹಾಗೂ ಚಿತ್ರದುರ್ಗದ ಮೊದಲ ಪಾಳೆಯಗಾರರಾಗಿ ಆಡಳಿತ ಮಾಡಿದರು ಎಂಬ ಅಂಶವನ್ನು ಬಿ.ರಾಜಶೇಖರಪ್ಪ ಅವರು 'ಪ್ರಾಚೀನ ಚಿತ್ರದುರ್ಗ' ಎಂಬ ಕೃತಿಯಲ್ಲಿ ತಿಳಿಸಿದ್ದಾರೆ. ವಿಜಯನಗರ ಸಾಮ್ರಾಜ್ಯ ಪತನವಾಗುವ ಕ್ರಿ.ಶ.೧೫೬೫ರ ತಾಳಿಕೋಟೆಯ ಯುದ್ಧದ ವೇಳೆಗೆ ಚಿತ್ರದುರ್ಗದ ಪಾಳೆಪಟ್ಟಿನ ನಾಯಕತ್ವವನ್ನು ತಿಮ್ಮಣ್ಣ ನಾಯಕ ಹಾಗೂ ೧ನೆಯ ಓಬಣ್ಣ ನಾಯಕನು ಆಳ್ವಿಕೆ ಆರಂಭಿಸಿದ ಅಂಶ ಸ್ಪಷ್ಟವಾಗುತ್ತದೆ.[೮೭]

**ಚಿತ್ರದುರ್ಗದ ನಾಯಕರು**

ವಿಜಯನಗರೋತ್ತರ ಕರ್ನಾಟಕದ ಪ್ರಬಲ ಪಾಳೆಯಗಾರರಲ್ಲಿ ಚಿತ್ರದುರ್ಗದ ನಾಯಕರು ಪ್ರಮುಖರು. ಇವರು ಮದಕರಿ ನಾಯಕರು ಎಂತಲೂ ಪ್ರಸಿದ್ಧರಾಗಿದ್ದಾರೆ. ಚಿತ್ರದುರ್ಗವನ್ನು ಕೇಂದ್ರವಾಗಿರಿಸಿಕೊಂಡು ಒಟ್ಟು ಹದಿಮೂರು ಮಂದಿ ನಾಯಕರು ಕ್ರಿ.ಶ.೧೫೬೮ರಿಂದ ೧೭೭೯ರವರೆಗೆ ಒಟ್ಟು ಇನ್ನೂರಾ ಹನ್ನೊಂದು ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ಚಿತ್ರದುರ್ಗ ನಾಯಕರಿಗೆ ಹಲವು ಯುದ್ಧಗಳ ಮೂಲಕ ಕೆಲವು ಬಿರುದಾವಳಿಗಳನ್ನು ತನ್ನದಾಗಿಸಿಕೊಂಡಿದ್ದಾರೆ.

ಈ ಅರಸರು ಕ್ಷತ್ರಿಯವರ್ಗದವರಸನ್ನು ತಲ್ಲಣಗೊಳಿಸುವಂತಹ ಮಹಾರಣ ಪಂಡಿತರು ಮಾತ್ರವಲ್ಲದೆ, ಮಹಾಧರ್ಮ ನಿಷ್ಠರೂ, ಗುರು ವರ್ಗದಲ್ಲಿ ಭಕ್ತಿಯನ್ನು ಉಳ್ಳವರು ಆಗಿದ್ದರು. ಪ್ರಜಾವತ್ಸಲರೂ, ಪರಂಪರೆಗೆ ಧಕ್ಕೆಯುಂಟಾಗದಂತೆ ಪಕ್ಷಪಾತರಹಿತ ರಾಜನೀತಿಯನ್ನು ರೂಪಿಸಿದ ನಿಪುಣರು, ಕೃಷಿ ವ್ಯಾಪಾರ, ವಾಣಿಜ್ಯ ಇತ್ಯಾದಿಗಳ ಪೋಷಕರೂ ಸಂರಕ್ಷಕರೂ ಆಗಿದ್ದರು. ಇವರ ಆಡಳಿತ ಕಾಲದಲ್ಲಿ ರಾಜ್ಯದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮತ್ತು ಆರ್ಥಿಕ ಮೊದಲಾದ ಪರಿಸ್ಥಿತಿಗಳು ಉತ್ತಮವಾಗಿದ್ದು, ಸಹಕಾರ, ಸೌಹರ್ದತೆ, ಸಹನೆ ಇತ್ಯಾದಿಗಳನ್ನು ಚೆನ್ನಾಗಿ ವ್ಯಕ್ತಪಡಿಸುವಂತಹವಾಗಿವೆ. ಇವರು ನ್ಯಾಯನಿಷ್ಠರಾದರೂ ಪ್ರಜೆಗಳಿಗೆ ಹೊರೆಯೆನಿಸದ ರಾಜಧರ್ಮವನ್ನು ಪರಿಪಾಲಿಸಿದವರೆಂತಲೂ ಚರಿತ್ರೆಯಲ್ಲಿ ಕೊಂಡಾಡಲಾಗಿದೆ.[೮೭] ಇಲ್ಲಿ ಇವರ ಮೇಲ್ನೋಟದ ರಾಜಕೀಯ ಕಿರು ಚಿತ್ರವನ್ನು ಮಾತ್ರ ಕೊಡಲೆತ್ನಿಸಿದೆ.

ಈ ಮನೆತನದ ಮೂಲ ಪುರುಷ ಚಿತ್ರನಾಯಕ ಹಾಗೂ ಮೊದಲ ದೊರೆ ಮತ್ತಿ ತಿಮ್ಮಣ್ಣ ನಾಯಕ ಎಂದು ಹೇಳಲಾಗಿದೆ. ಶಾಸನಗಳಿಂದ ಮೂಲಪುರುಷ ಮತ್ತಿ ತಿಮ್ಮಣ್ಣ ನಾಯಕನೆಂದು ದೃಢಪಡಿಸುತ್ತವೆ. ವಿಜಯನಗರ ಪ್ರತಿನಿಧಿಯಾಗಿ, ಅಮರ ನಾಯಕನಾಗಿ ತನ್ನ ಪ್ರೀತಿ ಸಂಪಾದಿಸಿದ ಇವರು ಕೃಷ್ಣ ದೇವರಾಯನಿಂದ ಉಂಬಳಿಯಾಗಿ ೧೫೬೦ರಲ್ಲಿ ಹೊಳಲ್ಕೆರೆಯನ್ನು ಪಡೆದನು. ನಂತರ ಅರಸರ ಅನುಮತಿಯಿಂದ ಹಿರಿಯೂರು ಮತ್ತು ಚಿತ್ರದುರ್ಗ ಪ್ರದೇಶವನ್ನು ಸೇರಿಸಿಕೊಳ್ಳಲಾಯಿತು.[೮೮]

ತಿಮ್ಮಣ್ಣ ನಾಯಕನು ಕಲ್ಬುರ್ಗಿ ಕೋಟೆಯನ್ನು ವಿಜಯನಗರ ಅರಸರಿಗೆ ಗೆದ್ದುಕೊಟ್ಟು 'ಹಗಲು ಕಗ್ಗೊಲೆಯ ಮಾನ್ಯ' ಎಂಬ ಬಿರುದಿನಿಂದ ಸನ್ಮಾನಿತನಾದ. ನಂತರ ವಿಜಯನಗರ ಅರಸರಿಗೆ ತಿಮ್ಮಣ್ಣ ನಾಯಕ ಮೇಲೆ ಸೇಡು ಇದ್ದ ಕಾರಣ ಇವನ ಬೆಂಬಲಿಗನಾದ ರಾಮರಾಜಯ್ಯನು ತಿಮ್ಮಣ್ಣ ನಾಯಕನನ್ನು ಸಾಯಿಸಲಾಯಿತು.

ದುರ್ಗದ ಬೆಟ್ಟಗಳ ಪೂರ್ವಭಾಗದ ಕಣಿವೆಯೊಂದರಲ್ಲಿರುವ 'ತಿಮ್ಮಣ್ಣ ನಾಯಕನ ಕೆರೆ' ಇವನ ಕಾಲದಲ್ಲಿ ಜೀರ್ಣೋದ್ಧಾರಗೊಂಡ ಒಂದು ಪುರಾತನ ಕೆರೆ. ಪ್ರಜೆಗಳಿಗೆ ಬಹು ಉಪಯೋಗಿಯಾಗಿದ್ದ ಕೆರೆಗಳ ನಿರ್ಮಾಣ, ಜೀರ್ಣೋದ್ಧಾರ ಮತ್ತು ನಿರ್ವಹಣೆಯ ವಿಷಯದಲ್ಲಿ ಚಿತ್ರದುರ್ಗ ನಾಯಕರು ತೋರಿದ ಆಸಕ್ತಿಗೆ ಮೇಲ್ಪಂಕ್ತಿ ಹಾಕಿದವನು ತಿಮ್ಮಣ್ಣ ನಾಯಕ ಎನ್ನಬಹುದು.[೮೯]

ತಿಮ್ಮಣ್ಣ ನಾಯಕನ ನಂತರ ಈತನ ಮಗನಾದ ಓಬಣ್ಣ ನಾಯಕ ಅಧಿಕಾರಕ್ಕೆ ಬಂದನು. ಕೆಲವೇ ವರ್ಷಗಳಲ್ಲಿ ಈತನು ರಸಸಿದ್ದರಿಂದ 'ಮದಕರಿ ನಾಯಕ' ಎನ್ನುವ ಬಿರುದನ್ನು ಧರಿಸಿ ವಿಜಯನಗರ ಅರಸರಿಂದ ಸ್ವತಂತ್ರವಾಗಿ ಆಳ್ವಿಕೆ ನಡೆಸಲು ಆರಂಭಿಸಿದ. ಇವನಿಗೆ ಗಡ್ಡದ ಮದಕರಿ ನಾಯಕ ಎಂತಲೂ ಕರೆಯಲಾಗಿತ್ತು.[೯೦] ಕ್ರಿ.ಶ.೧೬೦೨ರಲ್ಲಿ ಓಬಣ್ಣ ನಾಯಕನ ತರುವಾಯ ಆತನ ಮಗನಾದ ಕಸ್ತೂರಿ ರಂಗಪ್ಪನಾಯಕನು ಅಧಿಕಾರಕ್ಕೆ ಬಂದನು. ಈತನು ಕ್ರಿ.ಶ.೧೬೦೨ರಿಂದ ೧೬೫೨ರವರೆಗೆ ಸುಮಾರು ಐವತ್ತು ವರ್ಷಗಳ ಕಾಲ ಆಳ್ವಿಕೆ ನಡೆಸುವುದರ ಮೂಲಕ ಸಂಸ್ಥಾನವನ್ನು ವಿಸ್ತರಿಸಿದ.

ಈ ಹಿನ್ನಲೆಯಲ್ಲಿ ಈತನು ತನ್ನ ಸುತ್ತಮುತ್ತಲ ಪಾಳೆಯಗಾರರೊಂದಿಗೆ ಹಲವಾರು ಯುದ್ಧಗಳನ್ನು ಮಾಡಬೇಕಾಯಿತು.[೯೧] ಬಸವಾಪಟ್ಟಣದ ಪಾಳೆಯಗಾರರೊಂದಿಗೆ ಯುದ್ದವನ್ನು ಮಾಡುವುದರ ಮೂಲಕ ಮಾಯಕೊಂಡ, ಸಂತೆ ಬೆನ್ನೂರು, ಹೊಳಲ್ಕೆರೆ, ಅಣಜಿ, ಜಗಳೂರು ಮತ್ತಿತರ ಪ್ರದೇಶಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಈತನ ಆಳ್ವಿಕೆಯ ಕೊನೆಯ ಕಾಲಕ್ಕೆ ಚಿತ್ರದುರ್ಗದ ಪಾಳೆಪಟ್ಟಿನ ವಾರ್ಷಿಕ ಆದಾಯ ೬೫,೦೦೦ ಪಗೋಡಗಳಿಗೇರಿತು.[೯೨] ಇವನ ಕಾಲದಲ್ಲಿ ಚಿತ್ರದುರ್ಗದ ದೊಡ್ಡಣ್ಣನ ಕೆರೆ,

ಹುಲ್ಲೂರು ಕೆರೆ ನಿರ್ಮಾಣವಾದವು.[೩] ಕ್ರಿ.ಶ.೧೬೫೨ರಲ್ಲಿ ರಂಗಪ್ಪನಾಯಕನು ಮರಣಹೊಂದಿದ ನಂತರ ಆತನ ಮಗನಾದ ಎರಡನೇ ಮದಕರಿ ನಾಯಕನು ಅಧಿಕಾರಕ್ಕೆ ಬಂದನು. ಈತನೂ ಸಹ ಹಲವಾರು ಯುದ್ಧಗಳನ್ನು ಮಾಡಿದನು.

ಈತನು ಆಡಳಿತದ ಅನುಕೂಲಕ್ಕೋಸ್ಕರ ತನ್ನ ಸಾಮ್ರಾಜ್ಯವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ, ಪ್ರತಿಯೊಂದು ಭಾಗಕ್ಕೂ ಸ್ಥಳೀಯ ಅಧಿಕಾರಿಗಳನ್ನು ನೇಮಿಸಿದನು. ಹೊಟ್ಟೆ ಗುರುಕಣ್ಣ, ಕರಣಿ ಭುಣಪ್ಪ, ಅಬ್ಬಿಗೆರೆ ಮಲ್ಲಣ್ಣ ಮತ್ತು ಕರಣಿಕ ಅಪ್ಪಣ್ಣ ಇವರು ನಾಯಕನಿಂದ ನೇಮಕಗೊಂಡ ಅಧಿಕಾರಿಗಳು. ಇತನ ಆಳ್ವಿಕೆಯ ಕೊನೆಯ ವೇಳೆಗೆ ರಾಜ್ಯದ ಆದಾಯ ೧,೦೦,೦೦೦ ದುರ್ಗಿ ಪಗೋಡಗಳಿಗೇರಿತ್ತು. ಈತನು ಕ್ರಿ.ಶ. ೧೬೭೪ರಲ್ಲಿ ಮರಣ ಹೊಂದಿದನು.[೪] ಈತನ ಆಳ್ವಿಕೆಗೆ ಸಂಬಂಧಿಸಿದ ಶಾಸನವೊಂದು ಹುಲ್ಲೂರಿನಲ್ಲಿ ದೊರೆತಿದ್ದು ವೀರಭದ್ರ ದೇವರ ಪೂಜೆಗಾಗಿ ನೀಡಿದ ದತ್ತಿಯನ್ನು ದುರುಪಯೋಗ ಪಡಿಸಿಕೊಂಡ ಕಾರಣಕ್ಕಾಗಿ ಪೂಜಾರಿಗೆ ಶಿಕ್ಷೆ ವಿಧಿಸುವ ಅಧಿಕಾರ ದಳವಾಯಿ ಮಲ್ಲಪ್ಪನಿಗೆ ನೀಡಿದ್ದರ ಬಗ್ಗೆ ಮಾಹಿತಿ ಇದೆ.

ಎರಡನೇ ಮದಕರಿ ನಾಯಕನ ಮರಣದ ನಂತರ ಪುತ್ರ ಸಂತಾನವಿಲ್ಲದ್ದರಿಂದ ದತ್ತು ಪುತ್ರನಾದ ಓಬಣ್ಣ ನಾಯಕನು ಅಧಿಕಾರಕ್ಕೆ ಬಂದನು. ಆದರೆ ಕೆಲವೇ ತಿಂಗಳುಗಳಲ್ಲಿ ದಳವಾಯಿಗಳು ದಂಗೆಯೆದ್ದು, ನಾಯಕನನ್ನೇ ಕೊಲೆ ಮಾಡಿದರು. ಹಾಗಾಗಿ ಎರಡನೇ ಮದಕರಿ ನಾಯಕನ ಸಹೋದರನಾದ ಚಿಕ್ಕಣ್ಣ ನಾಯಕನನ್ನು ಕ್ರಿ.ಶ.೧೬೭೬ರಲ್ಲಿ ಅಧಿಕಾರಕ್ಕೆ ತರಲಾಯಿತು. ರಾಜ್ಯದಲ್ಲಿ ದಿನೇ ದಿನೇ ಹರಪನಹಳ್ಳಿ ಪಾಳೆಯಗಾರರ ಉಪಟಳವು ಹೆಚ್ಚಾಗಿದನ್ನು ತಾಳಲಾರದ ಚಿಕ್ಕಣ್ಣನಾಯಕನು ಅವರನ್ನು ಸದೆ ಬಡಿದನು. ಹರಿಹರದ ಹರಿಹರೇಶ್ವರ ದೇವಾಲಯದ ಸಂಪತ್ತನ್ನು ದೋಚಲು ಬಂದಿದ್ದ ಷೇರ್ ಖಾನ್‌ನ ಸೈನ್ಯವನ್ನು ಹಿಮ್ಮೆಟ್ಟಿಸಿದನು. ಈತನು ಮೂಲತಃ ನಾಯಕ ಜನಾಂಗದವನು ಆಗಿದ್ದು, ವೀರಶೈವ ಧರ್ಮದ ಪ್ರಭಾವಕ್ಕೆ ಒಳಗಾಗಿ ವೀರಶೈವ ಧರ್ಮವನ್ನು ಸ್ವೀಕರಿಸಿ ಸ್ವಲ್ಪ ದಿನಗಳ ನಂತರ ಪುನಃ ನಾಯಕನಾಗಿ ಪರಿವರ್ತನಾದನು. ಆದರೆ ಮಲ್ಲವ್ವ ನಾಗತಿ ಮಾತ್ರ ವೀರಶೈವ ಧರ್ಮವನ್ನು ತೊರೆಯಲಿಲ್ಲ. ಅಲ್ಲದೇ ಕೂಡಲಿ ಶೃಂಗೇರಿ ಜಗದ್ಗುರು ಮಠದೊಂದಿಗೆ ಸಂಪರ್ಕ ಏರ್ಪಡಿಸಿಕೊಂಡಿದ್ದರು.[೫]

ಚಿಕ್ಕಣ್ಣ ನಾಯಕನ ಮರಣಾನಂತರ ಈತನ ಸಹೋದರನಾದ ಲಿಂಗಣ್ಣ ನಾಯಕನು ಅಧಿಕಾರಕ್ಕೆ ಬಂದನು. ಈತನನ್ನು ಮೂರನೇ ಮದಕರಿನಾಯಕ ಎಂದು ಕರೆಯುತ್ತಾರೆ. ಈತನ ಆಡಳಿತವು ಸಮರ್ಪಕವಾಗಿರದೇ ಇದ್ದುದ್ದರಿಂದ ದಳವಾಯಿ ಮುದ್ದಣ್ಣನು ಈತನನ್ನು ಕೊಲೆ ಮಾಡಿಸಿ ತಾನೇ ಅಧಿಕಾರ ವಹಿಸಿಕೊಂಡನು. ಇದನ್ನು ಸಹಿಸದ ದಳವಾಯಿ ಭರಮಪ್ಪನು ಮುದ್ದಣ್ಣನನ್ನು ರಾಜ್ಯದಿಂದ ಓಡಿಸಿ, ದೊಣ್ಣೆ ರಂಗಪ್ಪನನ್ನು ಬಂಧನದಲ್ಲಿರಿಸಿ ಸಂಸ್ಥಾನದ ಅಧಿಕಾರವನ್ನು ತಾನೇ ವಹಿಸಿಕೊಂಡನು.[೬] ಇಲ್ಲಿಗೆ ಮತ್ತಿ ಮನೆತನದ ಆಳ್ವಿಕೆಯು ಕೊನೆಗೊಂಡಿತು.

ಬಿಳಿಚೋಡು ಸಂತತಿಯ ನಾಯಕನಾಗಿ ಗುರುತಿಸಿಕೊಂಡಿದ್ದು ಭರಮಣ್ಣ ನಾಯಕ. ಇವನ ಕಾಲದಲ್ಲಿ ಯುದ್ಧಗಳಿಂದ ಹಾಗೂ ಬರಗಾಲಕ್ಕೆ ತುತ್ತಾದ ಸಮಯದಲ್ಲಿ ಆಡಳಿತವನ್ನು ಮಾಡಲಾಯಿತು. ನಿರಂತರ ಯುದ್ಧಗಳಿಂದ ಕೂಡಿದ ಆಡಳಿತಾವಧಿಯನ್ನು ನೋಡಿ ಬಿಚ್ಚುಗತ್ತಿ ಭರಮಣ್ಣ ನಾಯಕ ಎಂದು ಕರೆಯಲ್ಪಟ್ಟಿರಬಹುದು. ಭರಮಣ್ಣನು ಹರಪನಹಳ್ಳಿ, ಬಿದನೂರು, ಮರಾಠ, ಗುಡೇಕೋಟೆ,

ರಾಯದುರ್ಗ, ಬಿಜಾಪುರದ ದಿಲಾವರ್‌ಖಾನ್ ಈಗೆ ತನ್ನ ಸುತ್ತಿಲಿನ ಸಂಸ್ಥಾನಗಳೊಂದಿಗೆ ಯುದ್ಧವನ್ನು ಮಾಡಬೇಕಾದ ಸನ್ನಿವೇಶ ಭರಮಣ್ಣ ನಾಯಕನ ಕಾಲದಲ್ಲಿತ್ತು.

ದುರ್ಗದ ನಾಯಕರಲ್ಲೇ ಭರಮಣ್ಣ ನಾಯಕ ಅತ್ಯಂತ ಉಲ್ಲೇಖನೀಯನಾಗಿದ್ದಾನೆ. ಅವನು ಅಧಿಕಾರಕ್ಕೆ ಬರುವ ಪೂರ್ವ ಇದ್ದ ಎಲ್ಲ ಅರಾಜಕತೆಯನ್ನು ಯಶಸ್ವಿಯಾಗಿ ಕೊನೆಗೊಳಿಸಿದ್ದಲ್ಲದೆ, ತನ್ನ ಅವಧಿಯಲ್ಲಿ ಪ್ರಜೆಗಳಿಗೆ ಬಹು ರೀತಿಯಲ್ಲಿ ಉಪಯೋಗವಾಗುವ ಅನೇಕ ಕೆರೆಗಳ ನಿರ್ಮಾಣ ಹಾಗೂ ಜೀರ್ಣೋದ್ದಾರ ಕಾರ್ಯವನ್ನು ಕೈಗೊಂಡನು. ಚಿತ್ರದುರ್ಗ ನಾಯಕರಲ್ಲೇ ಅತ್ಯಂತ ಹೆಚ್ಚು ಕೆರೆಗಳನ್ನು ನಿರ್ಮಿಸಿದ ಕೀರ್ತಿ ಭರಮಣ್ಣ ನಾಯಕನಿಗೆ ಸಲ್ಲುತ್ತದೆ. ಮುರುಘ ರಾಜೇಂದ್ರ ಎರಡು ಮಠ ಹಾಗೂ ಹಲವು ದೇವಾಲಯಗಳನ್ನು ಕಟ್ಟಿಸಿ ಧರ್ಮ–ಪಂಥ, ನಗರದ ಅಭಿವೃದ್ಧಿಗೆ ತನ್ನ ಶ್ರದ್ಧೆಯನ್ನು ತೋರಿಸಿದ್ದಾನೆ.[೬೭]

ಕ್ರಿ.ಶ.೧೭೨೧ರಲ್ಲಿ ಭರಮಪ್ಪ ನಾಯಕನ ಮಗನಾದ ಹಿರೇಮದಕರಿ ನಾಯಕನು ಅಧಿಕಾರಕ್ಕೆ ಬಂದನು. ಹಿರೇ ಮದಕರಿ ನಾಯಕ ಪಟ್ಟಕ್ಕೆ ಬರುತ್ತಿದ್ದಂತೆ ದುರ್ಗದ ದಂಡು ಮೂರು ಸಣ್ಣ ಕೋಟೆಗಳನ್ನು ಕೈವಶ ಮಾಡಿಕೊಂಡಿತು. ಇದೇ ವೇಳೆಯಲ್ಲಿ ಶ್ರೀರಂಗಪಟ್ಟಣದವರು ಚಿತ್ರದುರ್ಗದ ನಾಯಕರು ತನ್ನ ಸಮಾನರಾದ ಮಿತ್ರರೆಂದು ಭಾವಿಸಿ ಪಾಭಾ ಎಂಬ ರಾಯಬಾರಿಯ ಸಂಗಡ ರಾಜಗೋಪಾಲನೆಂಬ ಆನೆ, ಕುದುರೆ, ಫಿರಂಗಿ ಮೊದಲಾದ್ದನ್ನು ಕಾಣಿಕೆಯಾಗಿ ಕಳುಹಿಸಿದರು. ಸೀರ್ಯದ ಸುಬೇದಾರನ ಮಗನು ಸಣ್ಣಕ್ಕಿ ಬಾಗೂರು ಕೋಟೆ, ಹೊದ್ದಿಗೆರೆ ಕೋಟೆ, ಇವುಗಳನ್ನು ದುರ್ಗದವರಿಗೆ ಕೊಟ್ಟನು. ಮಲೆನಾಡಿನವರು, ಹರಪನಹಳ್ಳಿ ಸೋಮಶೇಖರ ನಾಯಕ, ಆನೆಗೊಂದಿಯ ಫೌಜು, ರಾಯದುರ್ಗದ ದಂಡು, ಸವಣೂರಿನ ದಂಡು ಇತರೆ ಪಾಳೆಯಗಾರರೆಲ್ಲ ಸೇರಿ ದುರ್ಗದ ಸೀಮೆಗೆ ಸೇರಿದ್ದ ರಾಮಗಿರಿ ದುರ್ಗವನ್ನು ಹಿಡಿದುಕೊಂಡು ಯುದ್ಧಕ್ಕೆ ಬಂದರು. ಆಗ ಹಿರೇ ಮದಕೇರಿಯು ತುಂಬಾ ಶೌರ್ಯದಿಂದ ಯುದ್ಧ ಮಾಡಿದ. ಫಿರಂಗಿಯ ಪ್ರಯೋಗದಿಂದ ಕೋಟೆಯನ್ನು ವಶಪಡಿಸಿಕೊಂಡನು. ಕೊನೆಗೆ ಮಾಯಕೊಂಡ ಯುದ್ಧದಲ್ಲಿ ಸೋಮಶೇಖರ ನಾಯಕನಿಂದ ಹಿರೇ ಮದಕರಿ ನಾಯಕ ಸಾವುಕಂಡನು.[೬೮] ಈ ವಿಷಯ ಕುರಿತು ಕೆಳದಿ ಲಿಂಗಣ್ಣ ಕವಿಯ 'ಕೆಳದಿ ನೃಪವಿಜಯಂ'ನಲ್ಲಿ ಹೇಳಿರುವ ಮಾತು ಇಲ್ಲಿ ಅನ್ವಯಿಸುತ್ತದೆ ಎನ್ನಬಹುದು. ಅಲ್ಲದೆ ಇವನ ಕಾಲಕ್ಕೆ ಸುಮಾರು ಮೂರು ಲಕ್ಷ ವರಹದ ಆದಾಯದ ಸಂಸ್ಥಾನವಾಗಿ ಬೆಳೆದಿತ್ತು.

ಹಿರೇ ಮದಕೇರಿ ನಾಯಕನ ಮರಣದ ನಂತರ ಅವನ ಮಗನಾದ ೨ನೇ ಕಸ್ತೂರಿ ರಂಗಪ್ಪನಾಯಕ ರಾಜನಾದನು. ಇವನು ತನ್ನ ತಂದೆಯ ಕೈತಪ್ಪಿ ಹೋದ ಮಾಯಕೊಂಡವನ್ನು ಶತ್ರುಗಳ ಕೈಯಿಂದ ಮರಳಿಸಿಕೊಳ್ಳಲು ಗುತ್ತಿ, ಆದವಾನಿಗಳ ಪಾಲಕರ ನೆರವಿನಿಂದ ಪ್ರಯತ್ನಿಸಿ ಯಶಸ್ವಿಯಾದನು. ಇದಕ್ಕೆ ಪ್ರತಿಯಾಗಿ ಶತ್ರು ಸೈನ್ಯ ಸಂತೆ ಬೆನ್ನೂರನ್ನು ಮುತ್ತಿಗೆ ಹಾಕಲು ಮುಂದಾಯಿತು. ಈ ವೇಳೆಗೆ ಶತ್ರುಗಳ ಆಮಿಷಕ್ಕೊಳಗಾಗಿದ್ದ ತನ್ನ ರಾಜಕೀಯ ಮಿತ್ರರ ವರ್ತನೆಯಿಂದ ಬೇಸತ್ತು ದುರ್ಗಕ್ಕೆ ಮರಳಿದನು. ಮುಂದೆ ಇವನು ಕೆಲವು ಕೋಟೆಗಳನ್ನು ಸಾಧಿಸಿದನು. ಆನೆಗೊಂದಿಯವರೊಂದಿಗೂ ಯುದ್ಧ ಮಾಡಲಾಗಿದೆ. ಹಿಂದೆ ೧ನೆಯ ಕಸ್ತೂರಿ ರಂಗಪ್ಪ ನಾಯಕನು ಮಾಡಿದಂತೆ ಇವನೂ ಕೂಡಾ ತನ್ನ ದರ್ಜೆಗಿಂತ ಕಡಿಮೆ ಎಂದು ಭಾವಿಸಿದ್ದವರನ್ನು ಪಾಳೆಯಗಾರರೆಂದು ಸಂಬೋಧಿಸಿ ಪತ್ರಗಳನ್ನು ಬರೆಸಿದನು.

ಮರಾಠರ ನಾನಾಜಿರಾಯನ ದಂಡು ದುರ್ಗದ ಪ್ರಾಂತ್ಯದಲ್ಲಿ ಹಾವಳಿ ಮಾಡಿದಾಗ ಒಂದಷ್ಟು ಹಣ ಕೊಟ್ಟು ಕಳಿಸಬೇಕಾಯಿತು. ಹಾಗೆ ಹೋದ ದಂಡೇ ಮತ್ತೆ ಮರಳಿ ಬಂದು ಇನ್ನಷ್ಟು ಪಡೆದು ಹೊರಟು ಹೋಯಿತು. ಈ ದೊರೆ ಅಸ್ವಸ್ಥತೆಯಲ್ಲಿದ್ದಾಗ ವಿಷಪ್ರಾಶನದಿಂದ ೧೭೫೪ರಲ್ಲಿ ಮರಣಿಸಿದನು. ಇವನು ಮರಣಿಸುವ ಮುಂಚೆ ತನಗೆ ಮಕ್ಕಳಿಲ್ಲದ ಕಾರಣ ತನ್ನ ದಾಯಾದಿ ಸಂಬಂಧದ ಹುಡುಗ ದೊಡ್ಡ ಮದಕೇರಿ ನಾಯಕನನ್ನು ದತ್ತು ತೆಗೆದುಕೊಂಡಿದ್ದನು. ಆದರೆ ರಾಜಮಾತೆ ಓಬವ್ವ ನಾಗತಿಯ ರಾಜಕೀಯ ತಂತ್ರದಿಂದ ದೊಡ್ಡ ಮದಕೇರಿನಾಯಕನ ಬದಲಿಗೆ ಜಾನಕಲ್ಲಿನ ಬಾಲಕ ಚಿಕ್ಕ ಮದಕೇರಿ ನಾಯಕ ಪಟ್ಟವೇರುವ ಸಂದರ್ಭ ಒದಗಿತು.[೯೯] 

ಕ್ರಿ.ಶ.೧೭೫೪ರಿಂದ ೧೭೭೯ರವರೆಗೆ ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಚಿತ್ರದುರ್ಗದ ಪಾಳೆಯಗಾರನಾಗಿ ಆಳ್ವಿಕೆ ನಡೆಸಿದ ರಾಜ ವೀರ ಮದಕರಿ ನಾಯಕನು ಚಿತ್ರದುರ್ಗದ ನಾಯಕರಲ್ಲಿಯೇ ಮತ್ತೊಬ್ಬ ಪ್ರಮುಖನು ಹಾಗೂ ಕೊನೆಯ ನಾಯಕನೂ ಹೌದು. ಎರಡನೇ ಕಸ್ತೂರಿ ರಂಗಪ್ಪ ನಾಯಕನಿಗೆ ಪುತ್ರ ಸಂತಾನ ಇರಲಿಲ್ಲ ಆದ್ದರಿಂದ ಜಾನಕಲ್ಲಿನ ತೊದಲು ಭರಮಪ್ಪ ನಾಯಕನ ಮಗನಾದ ಈತನನ್ನು ಸಂಸ್ಥಾನದ ಪಾಳೆಯಗಾರನಾಗಿ ನೇಮಿಸಲಾಯಿತು. ಈತನ ಕಾಲಾವಧಿಯಲ್ಲಿ ಚಿತ್ರದುರ್ಗದ ಕೀರ್ತಿ ಹೊರರಾಜ್ಯಗಳಲ್ಲೂ ಹಬ್ಬಿತು. ರಾಜ ವೀರ ಮದಕರಿನಾಯಕನ ಕಾಲದಲ್ಲಿ ರಾಯದುರ್ಗ, ಹರಪನಹಳ್ಳಿ, ಸವಣೂರು, ತರೀಕೆರೆ, ಜರಿಮಲೆ ಇತ್ಯಾದಿ ಪಾಳೆಯಗಾರರ ವಿರುದ್ಧ ಯುದ್ಧಗಳನ್ನು ಮಾಡುವುದರ ಮೂಲಕ ರಾಜ್ಯದ ಆದಾಯ ಹೆಚ್ಚಾಗುವಂತೆ ಹಲವು ಪ್ರದೇಶಗಳನ್ನು ವಶಪಡಿಸಿಕೊಂಡನು.[೧೦೦] ಈತನ ಸಹಾಯದಿಂದ ಶ್ರೀರಂಗಪಟ್ಟಣದಲ್ಲಿ ಆಳ್ವಿಕೆ ನಡೆಸುತ್ತಿದ್ದ ಹೈದರಾಲಿಯು ಬಂಕಾಪುರ, ನಿಡಗಲ್ಲು ಮತ್ತು ಬಿದನೂರುಗಳನ್ನು ಗೆಲ್ಲಲು ಸಾಧ್ಯವಾಯಿತು. ಮರಾಠರೊಂದಿಗೆ ಹೋರಾಟದ ಸಂದರ್ಭದಲ್ಲೂ ಹೈದರನು ನಾಯಕನ ಸಹಾಯವನ್ನು ಪಡೆದಿದ್ದನು. ಆದರೆ ಚಿತ್ರದುರ್ಗವನ್ನು ವಶಪಡಿಸಿಕೊಳ್ಳಬೇಕೆಂಬ ಬಯಕೆ ಹೈದರ್‌ಗೆ ಮೊದಲಿನಿಂದಲೂ ಇದ್ದಿತು. ಹಾಗಾಗಿ ಮೊದಲಬಾರಿಗೆ ಹೈದರನು ಕ್ರಿ.ಶ.೧೭೭೬ರಲ್ಲಿ ಚಿತ್ರದುರ್ಗವನ್ನು ಮುತ್ತಿ ವಿಫಲವಾದನು. ಅಷ್ಟಕ್ಕೆ ಸುಮ್ಮನಾಗದ ಹೈದರಾಲಿಯು ಚಿತ್ರದುರ್ಗವನ್ನು ವಶಪಡಿಸಿಕೊಳ್ಳಲೇಬೇಕೆಂದು ಕ್ರಿ.ಶ.೧೭೭೯ರಲ್ಲಿ ಹರಪನಹಳ್ಳಿ, ಜರಿಮಲೆ ಮತ್ತು ರಾಯದುರ್ಗದ ಪಾಳೆಯಗಾರರ ಸಹಾಯದಿಂದ ಎರಡನೇ ಬಾರಿ ಮುತ್ತಿದನು. ಈ ವೇಳೆಗಾಗಲೇ ಚಿತ್ರದುರ್ಗ ಸಂಸ್ಥಾನದಲ್ಲಿದ್ದ ಹೈದರಾಲಿಯ ಅನುಯಾಯಿಗಳ ಸಹಾಯದಿಂದ ರಕ್ಷಣಾ ವ್ಯವಸ್ಥೆಯ ಲೋಪದೋಷಗಳನ್ನು ಅರಿತಿದ್ದ ಹೈದರನಿಗೆ ಮದಕರಿ ನಾಯಕನು ಸುಲಭವಾಗಿ ಸೆರೆಸಿಕ್ಕನು. ನಂತರ ಹಿರೇಮದಕರಿ ನಾಯಕನನ್ನು ಸೆರೆಹಿಡಿಯುವುದರ ಮೂಲಕ ಹೈದರಾಲಿಯು ಚಿತ್ರದುರ್ಗ ಸಂಸ್ಥಾನವನ್ನು ಮೈಸೂರು ಸಂಸ್ಥಾನಕ್ಕೆ ಸೇರಿಸಿಕೊಂಡನು.[೧೦೧]

ನಂತರ ಚಿತ್ರದುರ್ಗ ಪ್ರದೇಶದಲ್ಲಿ ಹೈದರಾಲಿ ಟಿಪ್ಪು ಸುಲ್ತಾನರ ಆಳ್ವಿಕೆಗೆ ಒಳಪಟ್ಟ ಪ್ರದೇಶವಾಯಿತ್ತು. ಟಿಪ್ಪುಸುಲ್ತಾನ ರಾಜಧಾನಿಯನ್ನು ಚಿತ್ರದುರ್ಗಕ್ಕೆ ಬದಲಾಯಿಸುವ ಯೋಚನೆಯನ್ನು ಮಾಡಲಾಗಿದ್ದ ಎಂದು ತಿಳಿದು ಬರುತ್ತದೆ. ಆದರೆ ೧೭೯೯ರ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದ ಮೂಲಕ ಟಿಪ್ಪು ಕೊನೆಗೊಂಡು ಬ್ರಿಟಿಶರ ಅಧೀನ ಸಂಸ್ಥಾನವಾಗಿ ರೂಪುಗೊಂಡು ಮೈಸೂರು ಒಡೆಯರ, ಕಮೀಷನರ್ ಹಾಗೂ ದಿವಾನರ ಆಡಳಿತಕ್ಕೆ ಚಿತ್ರದುರ್ಗ ಪ್ರದೇಶ ಒಳಪಟ್ಟಿತ್ತು. ನಂತರ ಮೈಸೂರು ರಾಜ್ಯದಲ್ಲಿ ಜಿಲ್ಲಾ ಕೇಂದ್ರ ಪ್ರದೇಶವಾಗಿ ಪ್ರಸ್ತುತ ಪ್ರದೇಶವನ್ನು ಕಾಣಬಹುದು.

ಒಟ್ಟಾರೆಯಾಗಿ ಚಿತ್ರದುರ್ಗ ಪ್ರದೇಶಕ್ಕೆ ಪ್ರಾಚೀನ ಪುರಾಣಗಳ ಕಾಲದಿಂದ ಪ್ರಸ್ತುತದ ಚಿತ್ರದುರ್ಗ ಎಂದು ಕರೆಯುವ ವೇಳೆಗೆ ಅನೇಕ ರಾಜ ಮನೆತನಗಳ ಆಳ್ವಿಕೆಯ ಕೇಂದ್ರವಾಗಿದ್ದು, ನಗರದ ಅಭಿವೃದ್ಧಿಗೆ ಪೂರಕವಾಗಿ ಹಲವು ಹೆಸರುಗಳಿಂದ ಈ ಪ್ರದೇಶ ಗುರುತಿಸಿಕೊಂಡಿದೆ.

ಪುರಾಣಕ್ಕಿಂತ ಮುಂಚೆ ಈ ನಗರದ ಬಳಿ ಇರುವ ಬೆಟ್ಟಕ್ಕೆ 'ಚಿನ್ಮೂಲಾದ್ರಿ' ಎಂದು ನಗರಕ್ಕೆ 'ಚಿನ್ಮೂಲಾದ್ರಿ ಪುರ'ವೆಂದೂ ಹೆಸರಿತ್ತು. ದ್ವಾಪರಾಂತ್ಯದಲ್ಲಿ ಹಿಡಿಂಬನೆಂಬ ರಾಕ್ಷಸನು ಈ ಪಟ್ಟಣದಲ್ಲಿ ಆಳುತ್ತಿದ್ದರಿಂದ 'ಹಿಡಿಂಬ ಪಟ್ಟಣ'ವೆಂದು ಕರೆಯಲ್ಪಟ್ಟಿರುವುದು. ಕ್ರಿ.ಪೂ.ಮೂರನೇ ಶತಮಾನದಿಂದ ಸುಮಾರು ನಾಲ್ಕು-ಐದು ನೂರು ವರ್ಷಗಳು ಆಳಿದ ಆಂಧ್ರಭೃತ್ಯರ ಕಾಲದಲ್ಲಿ 'ಚಂದ್ರವಳ್ಳಿ'ಯೆಂದು ಕರೆಯಲ್ಪಟ್ಟಿರುವುದು. ಅನಂತರ ಇದಕ್ಕೆ ಸೂಳ್ಗಲ್ಲು ಎಂದೂ ಈ ಪ್ರದೇಶಕ್ಕೆ ಸೂಳ್ಗಲ್ಲು ನಾಡು ಎಂದೂ ಹೆಸರಿತ್ತು. ಕ್ರಿ.ಶ.೧೧ನೆಯ ಶತಮಾನದಿಂದ ಚಿಮ್ಮತ್ತನಕಲ್ಲು ಪಟ್ಟಣ ಎಂದು ಶಾಸನಗಳಲ್ಲಿ ಉಕ್ತವಾಗಿದೆ. ಹೊಯ್ಸಳ ಮಹಾಪ್ರಧಾನನಾದ ಪೆರುಮಾಳೆ ಮಂತ್ರಿಯು ಈ ನಗರವನ್ನು ತನ್ನ ಹೆಸರಿನಲ್ಲಿ ಪೆರುಮಾಳೆಪುರವೆಂದು ಹೆಸರಿಟ್ಟು ಬೆಟ್ಟದ ಮೇಲೆ ತಾನು ನಿರ್ಮಿಸಿದ ಅಗ್ರಹಾರಕ್ಕೆ ಬ್ರಹ್ಮಪುರಿ ಎಂಬ ಹೆಸರಿಟ್ಟಿದ್ದನು. ವಿಜಯನಗರದ ಮಹಾ ಮಂಡಲೇಶ್ವರರು ಇಲ್ಲಿ ಆಳುತ್ತಿದ್ದಾಗ, ಚಿತ್ರಕಲ್ಲು ದುರ್ಗವೆಂದು ಹೆಸರಾಯಿತು. ನಂತರ ಶ್ರೀಕೃಷ್ಣ ದೇವರಾಯನು ತನ್ನ ದಿನಚರಿಯಲ್ಲಿ ಚಿಮಟಕಲ್ಲು ದುರ್ಗ ಎಂದು ನಮೂದಿಸಲಾಗಿದೆ. ಚಿತ್ರದುರ್ಗದ ಪಾಳೆಯವನ್ನು ಮೈಸೂರಿನವರು ವಹಿಸಿಕೊಂಡ ಮೇಲೆ ಟಿಪ್ಪು ಸುಲ್ತಾನನು ದೇವರ ಹೆಸರಿನಲ್ಲಿ ಫರೂಕಾಬಾದ್ ಎಂಬ ಹೆಸರಿಟ್ಟನು. ಬ್ರಿಟಿಶ್ ಅಧಿಕಾರಿಯಾಗಿದ್ದ ಹಾಗೂ ಪ್ರವಾಸಿಯಾದ ಫ್ರಾನ್ಸಿಸ್ ಬುಕಾನನ್ ಚಿಟಲ್ ಡ್ರೂಗ್ ಎಂದು ಕರೆದಿದ್ದಾನೆ. ಅವನ ಕಾಲಾನಂತರ ಈ ಹೆಸರು ಅಳಿದು ಚಿತ್ರದುರ್ಗವೆಂಬ ಹೆಸರು ಶಾಶ್ವತವಾಗಿದೆ.

## ಕೊನೆಟಿಪ್ಪಣಿಗಳು


೧. ರಾಜಶೇಖರಪ್ಪ ಬಿ., ಪ್ರಾಚೀನ ಚಿತ್ರದುರ್ಗ, ಶ್ರೀ ಮುರುಘ ರಾಜೇಂದ್ರ ಗ್ರಂಥಮಾಲೆ, ಚಿತ್ರದುರ್ಗ, ೨೦೧೬, ಪು.ಸಂ.೧೧೦

೨. ಶ್ರೀ ಶೈಲ ಆರಾಧ್ಯ, ಚಿತ್ರದುರ್ಗ ಪರಿಸರದ ಪ್ರಾಗೈತಿಹಾಸಿಕ ಚಿತ್ರಗಳು, ಲಕ್ಷ್ಮಣ್ ತೆಲಗಾವಿ (ಸಂ)., ಹರತಿ ಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭, ಪು.ಸಂ.೩೨

೩. ಲಕ್ಷ್ಮಣ್ ತೆಲಗಾವಿ, ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರಾಕ್ಚಾರಿತ್ರಿಕ ಕಲೆ, ಬಾ.ರಾ.ಗೋಪಾಲ್ (ಸಂ)., ಚಿತ್ರದುರ್ಗ ಜಿಲ್ಲೆಯ ಇತಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೦೫, ಪು.ಸಂ.೩೭

೪. ಶ್ರೀ ಶೈಲ ಆರಾಧ್ಯ, ಪೂರ್ವೋಕ್ತ, ಪು.ಸಂ.೩೩

೫. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.ಸಂ.೩೭

೬. ಲಕ್ಷ್ಮಣ್ ತೆಲಗಾವಿ, ಚಿತ್ರದುರ್ಗ ಪರಿಸರದ ಬಯಲು ಬಂಡೆ ರೇಖಾ ಕೃತಿಗಳು, ಕನ್ನಡ ವಿಶ್ವವಿದ್ಯಾಲಯದ ವಿಶೇಷ ಯೋಜನಾ ಕೃತಿ, ೨೦೧೦, ಪು.ಸಂ.೪

೭. ಲಕ್ಷ್ಮಣ್ ತೆಲಗಾವಿ, ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಕಲೆ, ಪೂರ್ವೋಕ್ತ, ಪು.ಸಂ.೩೭

೮. ಲಕ್ಷ್ಮಣ್ ತೆಲಗಾವಿ, ಚಿತ್ರದುರ್ಗ ಪರಿಸರದ ಬಯಲು ಬಂಡೆ ರೇಖಾ ಕೃತಿಗಳು, ಪೂರ್ವೋಕ್ತ, ಪು.ಸಂ.೫

೯. ಲಕ್ಷ್ಮಣ್ ತೆಲಗಾವಿ, ಮೌರ್ಯ ಮತ್ತು ಶಾತವಾಹನ ಯುಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೪, ಪು.ಸಂ.೫-೬
೧೦. ಅದೇ, ಪು.ಸಂ.೫
೧೧. ಸುಬ್ಬನರಸಿಂಹಯ್ಯ ಕೆ.ಎನ್., (ಅನು)., ಭಾರತದ ಚರಿತ್ರೆಯಲ್ಲಿ ಭೌಗೋಳಿಕ ಅಂಶಗಳು, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೦, ಪು.ಸಂ.೧೪
೧೨. ಶಿವತಾರಕ್ ಕೆ.ಬಿ., ಚಿತ್ರದುರ್ಗ ಜಿಲ್ಲೆಯ ಪ್ರಾಗಿತಿಹಾಸ, ಬಾ.ರಾ.ಗೋಪಾಲ್, ಪೂರ್ವೋಕ್ತ, ಪು.ಸಂ.೨೪
೧೩. ಅದೇ, ಪು.ಸಂ.೨೫
೧೪. ಸೋಮಶೇಖರ್ ಎಸ್.ವೈ.(ಸಂ)., ಬ್ರಹ್ಮಗಿರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೦, ಪು.ಸಂ.೩
೧೫. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು.ಸಂ.೨೬
೧೬. ಸೋಮಶೇಖರ್ ಎಸ್.ವೈ., ಪೂರ್ವೋಕ್ತ, ಪು.ಸಂ.೩
೧೭. ಅದೇ, ಪು.ಸಂ.೩-೪
೧೮. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು.ಸಂ.೨೭
೧೯. ಜಯಣ್ಣ, ಚಂದ್ರವಳ್ಳಿ ಭೂ ಶೋಧನೆ, ಎಂ.ವಿ.ಶ್ರೀನಿವಾಸ್, ಲಕ್ಷ್ಮಣ್ ತೆಲಗಾವಿ (ಸಂ)., ಚಂದ್ರವಳ್ಳಿ, ಜಿಲ್ಲಾ ಇತಿಹಾಸ ಸಂಶೋಧನಾ ಮಂಡಲಿ, ಚಿತ್ರದುರ್ಗ, ೧೯೭೬, ಭಾಗ-೩, ಪು.ಸಂ.೩
೨೦. ಸೋಮಶೇಖರ್ ಎಸ್.ವೈ., ಪೂರ್ವೋಕ್ತ, ಪು.ಸಂ.೪
೨೧. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು.ಸಂ.೨೯
೨೨. ಸೋಮಶೇಖರ್ ಎಸ್.ವೈ., ಪೂರ್ವೋಕ್ತ, ಪು.ಸಂ.೪
೨೩. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು.ಸಂ.೨೯
೨೪. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ೨೦೦೯, ಪು.ಸಂ.೨೦೮
೨೫. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು.ಸಂ.೩೦
೨೬. ಕನ್ನಡ ವಿಷಯ ವಿಶ್ವಕೋಶ, ಪು.ಸಂ.೨೦೮
೨೭. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು.ಸಂ.೩೧
೨೮. ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ, ಪು.ಸಂ.೨೦೯
೨೯. ಅದೇ, ಪು.ಸಂ.೨೧೦
೩೦. ಸುರೇಶ ಬಿ., ಚಿತ್ರದುರ್ಗ ದಾವಣಗೆರೆ ಜಿಲ್ಲೆಗಳ ದೇವಾಲಯಗಳು, ಸಂಶೋಧನಾ ಪ್ರಕಾಶನ, ಬಾಲೇನಹಳ್ಳಿ, ೨೦೦೯, ಪು.ಸಂ.೧೧-೧೨
೩೧. ನಯನ್ ಜೋಟ್ ಲಾಹಿರಿ, ದ ಆರ್ಕ್ಯಾಲಜಿ ಆಫ್ ಇಂಡಿಯನ್ ಟ್ರೇಡ್ ರೂಟ್ಸ್ (ಆಫ್ ಟು ೨೦೦, ಬಿ.ಸಿ), ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರಸ್, ನ್ಯೂ ಡೆಲ್ಲಿ, ೨೦೦೫, ಪು.ಸಂ.೧೯೬
೩೨. ಸೋಮಶೇಖರ್ ಎಸ್.ವೈ., ಪೂರ್ವೋಕ್ತ, ಪು.ಸಂ.೬-೭
೩೩. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು.ಸಂ.೩೧-೩೨
೩೪. ಶ್ರೀನಿವಾಸ್ ಎಂ.ವಿ., ಚಿತ್ರದುರ್ಗ ಜಿಲ್ಲೆಯಲ್ಲಿ ಮೌರ್ಯರ ಆಳ್ವಿಕೆ, ಚಂದ್ರವಳ್ಳಿ, ಪೂರ್ವೋಕ್ತ, ಪು.ಸಂ.೧
೩೫. ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ, ಪು.ಸಂ.೮೩೭
೩೬. ಕರ್ನಾಟಕ ಪರಂಪರೆ, ಭಾಗ-೧ (ಚಾರಿತ್ರಿಕ ಯುಗ), ಪು.ಸಂ.೧೧೭

೩೭. ಸುರೇಶ ಬಿ., ಪೂರ್ವೋಕ್ತ, ಪು.ಸಂ.೧೫
೩೮. ಶ್ರೀನಿವಾಸ್ ಎಂ.ವಿ., ಪೂರ್ವೋಕ್ತ, ಪು.ಸಂ.೨
೩೯. ಅದೇ, ಪು.ಸಂ.೪
೪೦. ರಾಜಶೇಖರಪ್ಪ ಬಿ., ಪ್ರಾಚೀನ ಚಿತ್ರದುರ್ಗ, ಪೂರ್ವೋಕ್ತ, ಪು.ಸಂ.೧೨೨
೪೧. ರಘುನಾಥ್ ಭಟ್ ಎಚ್.ಆರ್. ಚಂದ್ರವಳ್ಳಿ, ಪೂರ್ವೋಕ್ತ, ಪು.ಸಂ.೬
೪೨. ಲಕ್ಷ್ಮಣ್ ತೆಲಗಾವಿ, ಮೌರ್ಯ ಮತ್ತು ಶಾತವಾಹನರ ಯುಗ, ಪುರ್ವೋಕ್ತ, ಪು.ಸಂ.೧೪೧
೪೩. ಅದೇ, ಪು.ಸಂ.೧೪೧–೧೪೨
೪೪. ರಘುನಾಥ್ ಭಟ್ ಎಚ್.ಆರ್., ಪೂರ್ವೋಕ್ತ, ಪು.ಸಂ.೯
೪೫. ಅದೇ, ಪು.ಸಂ.೧೦
೪೬. ಸುರೇಶ ಬಿ., ಪೂರ್ವೋಕ್ತ, ಪು.ಸಂ.೧೭
೪೭. ಭಾರತೀ ಬಿ.ಆರ್., ಬಾ.ರಾ.ಗೋಪಾಲ್ (ಸಂ)., ಪೂರ್ವೋಕ್ತ, ಪು.ಸಂ.೬೬
೪೮. ಹುಲ್ಲೂರು ಶ್ರೀನಿವಾಸ ಜೋಯಿಸರು, ಐತಿಹಾಸಿಕ ಲೇಖನಗಳು, ಪು.ಸಂ.೧೬೨
೪೯. ಸುರೇಶ್ ಬಿ., ಪೂರ್ವೋಕ್ತ, ಪು.ಸಂ.೧೮
೫೦. ಅದೇ, ಪು.ಸಂ.೧೮–೧೯
೫೧. ರಾಜಶೇಖರಪ್ಪ ಬಿ., ಇತಿಹಾಸ ಕಥನ, ಸಿ.ವಿ.ಜಿ., ಪಬ್ಲಿಕೇಷನ್ಸ್, ಬೆಂಗಳೂರು, ೨೦೦೧, ಪು.ಸಂ.೩೪
೫೨. ಉಷಾ ಎಂ.ಎಚ್., ಚಂದ್ರವಳ್ಳಿ, ಪೂರ್ವೋಕ್ತ, ಪು.ಸಂ.೧೩
೫೩. ರಾಜಶೇಖರಪ್ಪ ಬಿ., ಪ್ರಾಚೀನ ಚಿತ್ರದುರ್ಗ, ಪೂರ್ವೋಕ್ತ, ಪು.ಸಂ.೧೨೩
೫೪. ದೀಕ್ಷಿತ್ ಸಿ.ಕೆ., ವೈ. ಚಂದ್ರವಳ್ಳಿ, ಪೂರ್ವೋಕ್ತ, ಪು.ಸಂ.೧೭
೫೫. ಭಾರತೀ ಬಿ.ಆರ್., ಪೂರ್ವೋಕ್ತ, ಪು.ಸಂ.೬೭
೫೬. ಎಪಿಗ್ರಾಫಿಯಾ ಕರ್ನಾಟಕ ಸಂಪುಟ–೧೧, ದಾವಣಗೆರೆ, ಪು.ಸಂ.೩೭
೫೭. ಸುರೇಶ್ ಬಿ., ಪೂರ್ವೋಕ್ತ, ಪು.ಸಂ.೨೦
೫೮. ರಾಜಶೇಖರಪ್ಪ ಬಿ., ಪ್ರಾಚೀನ ಚಿತ್ರದುರ್ಗ, ಪೂರ್ವೋಕ್ತ, ಪು.ಸಂ.೧೩೩
೫೯. ದೀಕ್ಷಿತ್ ಸಿ.ಕೆ., ವೈ. ಚಂದ್ರವಳ್ಳಿ, ಪೂರ್ವೋಕ್ತ, ಪು.ಸಂ.೧೯
೬೦. ಜಯಮ್ಮ ಕರಿಯಣ್ಣ ಎಚ್., ಬಾ.ರಾ.ಗೋಪಾಲ್ (ಸಂ)., ಪೂರ್ವೋಕ್ತ, ಪು.ಸಂ.೭೧
೬೧. ಅದೇ, ಪು.ಸಂ.೭೧
೬೨. ಬಸವಲಿಂಗಪ್ಪ, ಸಿ.ಎಸ್. ಚಂದ್ರವಳ್ಳಿ, ಪೂರ್ವೋಕ್ತ, ಪು.ಸಂ.೨೮
೬೩. ಅದೇ, ಪು.ಸಂ.೩೧
೬೪. ತಿಪ್ಪೇಸ್ವಾಮಿ ಎಸ್., ರಕ್ಷಣಾ ವಾಸ್ತುಶಿಲ್ಪ : ಚಿತ್ರದುರ್ಗ ಜಿಲ್ಲೆ (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ), ೨೦೦೪, ಪು.ಸಂ.೩೩
೬೫. ಮಹಂತೇಶ್ ಎನ್.ಎಸ್., ಚಿತ್ರದುರ್ಗ ಕೋಟೆ ಪರಿಸರದ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ, ರೇಣುಕಾ ಪ್ರಕಾಶನ, ಚಿತ್ರದುರ್ಗ, ೨೦೧೫, ಪು.ಸಂ.೨೬
೬೬. ಜಯಮ್ಮ ಕರಿಯಣ್ಣ ಎಚ್., ಪೂರ್ವೋಕ್ತ, ಪು.ಸಂ.೭೨
೬೭. ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ, ಪು.ಸಂ.೮೭೭
೬೮. ಸೀತಾರಾಮ ಜಾಗೀರ್‌ದಾರ್, ಚಂದ್ರವಳ್ಳಿ, ಪೂರ್ವೋಕ್ತ, ಪು.ಸಂ.೨೩
೬೯. ರಾಜಶೇಖರಪ್ಪ ಬಿ., ಪ್ರಾಚೀನ ಚಿತ್ರದುರ್ಗ, ಪೂರ್ವೋಕ್ತ, ಪು.ಸಂ.೧೩೭
೭೦. ಸೀತಾರಾಮ ಜಾಗೀರ್‌ದಾರ್, ಚಂದ್ರವಳ್ಳಿ, ಪೂರ್ವೋಕ್ತ, ಪು.ಸಂ.೨೩
೭೧. ಎಪಿಗ್ರಾಫಿಯಾ ಕರ್ನಾಟಕ ಸಂ–೧೧, ಸಂಖ್ಯೆ–೭೬, ಚಿತ್ರದುರ್ಗ, ಪು.ಸಂ.೪೬
೭೨. ಸುರೇಶ್ ಬಿ., ಪೂರ್ವೋಕ್ತ, ಪು.ಸಂ.೨೧–೨೨

೭೩. ರಾಜಶೇಖರಪ್ಪ ಬಿ., ಪ್ರಾಚೀನ ಚಿತ್ರದುರ್ಗ, ಪೂರ್ವೋಕ್ತ, ಪು.ಸಂ.೧೩೭-೧೩೮
೭೪. ಸುರೇಶ್ ಬಿ., ಪೂರ್ವೋಕ್ತ, ಪು.ಸಂ.೨೩
೭೫. ತಿಪ್ಪೇಸ್ವಾಮಿ ಎಸ್., ಪೂರ್ವೋಕ್ತ, ಪು.ಸಂ.೩೬
೭೬. ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ, ಪು.ಸಂ.೧೧೪೨
೭೭. ರಾಜಶೇಖರಪ್ಪ ಬಿ. ಪೂರ್ವೋಕ್ತ, ಪು.ಸಂ.೧೪೬-೧೪೭
೭೮. ಶ್ರೀಲತೆ, ಚಿತ್ರದುರ್ಗ ಜಿಲ್ಲೆಯಲ್ಲಿ ಹೊಯ್ಸಳರ ಆಳ್ವಿಕೆ, ಚಂದ್ರವಳ್ಳಿ, ಪೂರ್ವೋಕ್ತ, ಪು.ಸಂ.೪೪
೭೯. ಅದೇ, ಪು.ಸಂ.೪೫
೮೦. ಅದೇ, ಪು.ಸಂ.೪೬
೮೧. ಅದೇ, ಪು.ಸಂ.೫೧
೮೨. ರಾಜಶೇಖರಪ್ಪ ಬಿ., ಪೂರ್ವೋಕ್ತ, ಪು.ಸಂ.೧೬೦
೮೩. ಸುರೇಶ ಬಿ., ಪೂರ್ವೋಕ್ತ, ಪು.ಸಂ.೨೮
೮೪. ಶ್ರೀಲತೆ, ಪೂರ್ವೋಕ್ತ, ಪು.ಸಂ.೫೮
೮೫. ಎಪಿಗ್ರಾಫಿಯಾ ಕರ್ನಾಟಕ ಸಂ-೧೧, ಚಿತ್ರದುರ್ಗ, ೨,೩
೮೬. ರಾಜಶೇಖರಪ್ಪ ಬಿ., ಪೂರ್ವೋಕ್ತ, ಪು.ಸಂ.೧೭೧
೮೭. ಲಕ್ಷ್ಮಣ್ ತೆಲಗಾವಿ, ಚಿತ್ರದುರ್ಗ ನಾಯಕ ಅರಸರು ರಾಜಕೀಯ ಚಿತ್ರ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೨೦೦೯, ಪು.ಸಂ.೧
೮೮. ಮಹಾಂತೇಶ್ ಎನ್.ಎಸ್., ಪೂರ್ವೋಕ್ತ, ಪು.ಸಂ.೩೦
೮೯. ರಾಜಶೇಖರಪ್ಪ ಬಿ., ಚಿತ್ರದುರ್ಗದ ಪಾಳೆಯಗಾರರು, ಬಾ.ರಾ.ಗೋಪಾಲ್ (ಸಂ)., ಪೂರ್ವೋಕ್ತ, ಪು.ಸಂ.೧೧೫
೯೦. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.ಸಂ.೩
೯೧. ಮಂಜಣ್ಣ ಟಿ., ಚಿತ್ರದುರ್ಗ ಪಾಳೆಯಗಾರರ ಅವನತಿ ಒಂದು ಅಧ್ಯಯನ (ಕ್ರಿ.ಶ.೧೭೦೦-೧೮೦೦) (ಅಪ್ರಕಟಿತ ಪಿಎಚ್.ಡಿ., ಮಹಾಪ್ರಬಂಧ), ೨೦೧೦, ಪು.ಸಂ.೨೮
೯೨. ಸುರೇಶ್ ಬಿ., ಪೂರ್ವೋಕ್ತ, ಪು.ಸಂ.೩೧
೯೩. ಗುಡ್ಡದೇಶ್ವರಪ್ಪ ಎಚ್., ಚಿತ್ರದುರ್ಗದ ಐತಿಹಾಸಿಕ ಸ್ಮಾರಕಗಳು, ಪೂಜಾ ಪ್ರಕಾಶನ, ಚಿತ್ರದುರ್ಗ, ೨೦೧೪, ಪು.ಸಂ.೯
೯೪. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳೆಯಗಾರರು, ಟಿ.ಎನ್. ಗಂಡುಗಲಿ, ಮದಕರಿ ಪ್ರಕಾಶನ, ಚಿತ್ರದುರ್ಗ, ೧೯೯೭, ಪು.ಸಂ.೩೭
೯೫. ಲಕ್ಷ್ಮಣ್ ತೆಲಗಾವಿ., ಪೂರ್ವೋಕ್ತ, ಪು.ಸಂ.೫
೯೬. ರಾಜಶೇಖರಪ್ಪ ಬಿ., ಇತಿಹಾಸ ಕಥನ, ಪೂರ್ವೋಕ್ತ, ಪು.ಸಂ.೭೮
೯೭. ರಾಜಶೇಖರಪ್ಪ ಬಿ., ಚಿತ್ರದುರ್ಗದ ಪಾಳೆಯಗಾರರು, ಬಾ.ರಾ.ಗೋಪಾಲ್ (ಸಂ)., ಪೂರ್ವೋಕ್ತ, ಪು.ಸಂ.೧೧೮
೯೮. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.ಸಂ.೧೩
೯೯. ರಾಜಶೇಖರಪ್ಪ ಬಿ., ಪೂರ್ವೋಕ್ತ, ಪು.ಸಂ.೧೨೦
೧೦೦. ಸುರೇಶ ಬಿ., ಪೂರ್ವೋಕ್ತ, ಪು.ಸಂ.೩೪, ೩೫
೧೦೧. ಸತ್ಯನ್ ಬಿ.ಎನ್., ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್, ಬೆಂಗಳೂರು, ೧೯೬೭, ಪು.ಸಂ.೫೭

## ಅಧ್ಯಾಯ – ನಾಲ್ಕು

# ನಾಯಕ ಪೂರ್ವ ಅವಧಿಯ ಕೃಷಿ ಹಾಗೂ ವ್ಯಾಪಾರ ಸಂಬಂಧಗಳು

ಒಂದು ರಾಷ್ಟ್ರದ ಏಳಿಗೆ ಅಥವಾ ಅವನತಿಯು ಅದರ ಆರ್ಥಿಕ ವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ಪ್ರಾಚೀನ ಕರ್ನಾಟಕದ ಆಡಳಿತವು ಒಂದು ಸುವ್ಯವಸ್ಥಿತ ಆರ್ಥಿಕ ವ್ಯವಸ್ಥೆಯ ತಳಹದಿಯ ಆಧಾರವನ್ನು ಅವಲಂಬಿಸಿದ್ದಿತು. ಅನಾದಿಕಾಲದಿಂದಲೂ ಕೆಲವು ಆರ್ಥಿಕ ಸಂಸ್ಥೆಗಳು ಬೆಳೆದು ಬಂದು ಅವು ತಮ್ಮ ತಮ್ಮ ಕಾರ್ಯವನ್ನು ಯೋಗ್ಯ ರೀತಿಯಿಂದ ನೋಡಿಕೊಂಡು ಹೋಗುತ್ತಿದ್ದವು. ಗ್ರಾಮ ಜೀವನದಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆ, ಅಗ್ರಹಾರ ಪದ್ಧತಿ, ಸಹಕಾರ, ಸಾಮೂಹಿಕ ಬೇಸಾಯ, ಮಹಾಜನರ ಸಂಸ್ಥೆ ಇವುಗಳ ಆಧಾರದ ಮೇಲೆ ಗ್ರಾಮ ಮತ್ತು ನಗರ ಆಡಳಿತ ವ್ಯವಸ್ಥೆ ಸಮರ್ಪಕ ರೀತಿಯಿಂದ ನಡೆಸಿಕೊಂಡು ಹೋಗುತ್ತಿದ್ದವು.

ಗ್ರಾಮವನ್ನು ವಿಂಗಡಿಸಿ ಬ್ರಾಹ್ಮಣರ ಕೇರಿ, ದೇವಸ್ಥಾನ, ಬಡಗಿಗಳು, ಕಮ್ಮಾರರು, ಕುಂಬಾರರು, ಕೆಲಸಿಗರು, ಗಾಣಿಗರು, ಅಗಸರು ಇವರೆಲ್ಲಾ ಪ್ರತ್ಯೇಕವಾಗಿ ವಾಸಮಾಡಲು ಗ್ರಾಮದ ಭಾಗಗಳನ್ನು ಹಂಚಿಕೊಡಲಾಗುತ್ತಿತ್ತು. ಸುಗ್ಗಿಯ ಕಾಲದಲ್ಲಿ ಧಾನ್ಯ ರೂಪದಲ್ಲಿ ಅವರಿಗೆ ವೇತನವನ್ನು ಕೊಡಲಾಗುತ್ತಿತ್ತು. ವ್ಯವಸಾಯ ಪದ್ಧತಿಯನ್ನು ಸಾಮೂಹಿಕ ತಳಹದಿಯ ಮೇಲೆ ರೂಪಿಸಲಾಗಿದ್ದಿತು.

ಗ್ರಾಮದಲ್ಲಿ ರಾಜನ ಪ್ರತಿನಿಧಿಗಳು ಕೂಡ ಅಧಿಕಾರಿಗಳಾಗಿರುತ್ತಿದ್ದರು. ಅವರು ಗ್ರಾಮಾಧಿಕಾರಿಗಳಾಗಿ ವರ್ತಿಸುತ್ತಿದ್ದರು. ಪಟೇಲ, ಗೌಡ, ಕುಲಕರ್ಣಿ, ಶಾನುಬೋಗ, ಹೆಗ್ಗಡೆ, ತಳವಾರ, ನೀರುಗಂಟಿ ಇಂತವರ ಹೆಸರುಗಳು ಇಂದಿಗೂ ಕೇಳಿಬರುತ್ತವೆ. ಅವರು ಗ್ರಾಮಸ್ಥರ ಯೋಗಕ್ಷೇಮವನ್ನು ತಕ್ಕ ಮಟ್ಟಿಗೆ ಗಮನಿಸುತ್ತಿದ್ದರು. ಗ್ರಾಮ ವಿವಾದಗಳ ಸಮಯದಲ್ಲಿ ಅವರುಗಳು ಉಪಸ್ಥಿತರಿರುತ್ತಿದ್ದರು. ನಮಗೆ ತಿಳಿದ ಮಟ್ಟಿಗೆ ಗ್ರಾಮಗಳಲ್ಲಿ ಚುನಾಯಿತ ಸಮಿತಿಗಳಿದ್ದಂತೆ ಕಂಡುಬರುವುದಿಲ್ಲ. ತಮಿಳುನಾಡಿನ ಉತ್ತರ ಮೇರೂರು (ಕ್ರಿ.ಶ. ೯೨೧) ಶಾಸನದಲ್ಲಿ ಸಮಿತಿಗಳ ಆಯ್ಕೆಯನ್ನು ವಿವರವಾಗಿ ಕೊಡಲಾಗಿದೆ. ಅದೇ ಮಾದರಿಯ ಶಾಸನವು ಕರ್ನಾಟಕದಲ್ಲಿ ದೊರೆಯದಿದ್ದರೂ ಪ್ರಾಚೀನ ಕಾಲದಲ್ಲಿ ಪ್ರಸ್ತುತ ರಾಜ್ಯಗಳ ಗಡಿಯಂತೆ ಇರಲಿಲ್ಲ. ಹಾಗಾಗಿ ದಕ್ಷಿಣ ಭಾರತದಾದ್ಯಂತ ಈ ವ್ಯವಸ್ಥೆ ಇತ್ತು ಎಂದು ಖಚಿತವಾಗಿ ಹೇಳಬಹುದಾಗಿದೆ.

ನಗರಗಳು ಕೂಡ ತಮ್ಮದೇ ಆದ ಆರ್ಥಿಕ ವ್ಯವಸ್ಥೆಯನ್ನು ಹೊಂದಿದ್ದವು. ಬಹುಮಟ್ಟಿಗೆ ನಗರಗಳು ವ್ಯಾಪಾರಿ ಹಾಗೂ ಕೈಗಾರಿಕೆಯ ಕೇಂದ್ರಗಳಾಗಿದ್ದವು. ಪ್ರತಿಯೊಂದು ಕೈಗಾರಿಕೆಗೂ ಶ್ರೇಣಿಗಳಿದ್ದವು. ಅದೇ ರೀತಿ ವಾಣಿಜ್ಯ ವ್ಯವಸ್ಥೆಯನ್ನು ನೋಡಿಕೊಳ್ಳಲು ಪ್ರತ್ಯೇಕ ಶ್ರೇಣಿ ಇದ್ದಿತು. ಈ ಶ್ರೇಣಿಗಳು ನಗರದ ಆಡಳಿತದಲ್ಲಿ ಬಹುಮುಖ ಪಾತ್ರವನ್ನು ವಹಿಸಿದ್ದವು. ಗಾಣಿಗರು, ಅಕ್ಕಸಾಲಿಗರು, ಕಮ್ಮಾರರು, ನೇಕಾರರು, ಬುಟ್ಟಿ ಹೆಣೆಯುವವರು, ಮೊದಲಾದ ವಿವಿಧ ಕೈಗಾರಿಕೆಗಳವರು ಶ್ರೇಣಿಗಳನ್ನು ಹೊಂದಿದ್ದರು. ಪ್ರತಿಯೊಂದು ಶ್ರೇಣಿಯೂ ತನ್ನದೇ ಆದ ನಿಬಂಧನೆಗಳನ್ನು ರಚಿಸಿಕೊಂಡಿತಲ್ಲದೆ ಸದಸ್ಯರ ಯೋಗಕ್ಷೇಮದ ಬಗೆಗೂ ಗಮನ ಹರಿಸುತ್ತಿತ್ತು. ಈ ಶ್ರೇಣಿಗಳು ಸದಸ್ಯರ ರಕ್ಷಣೆಯ ಸಲುವಾಗಿ ತಮ್ಮದೇ ಆದ ಸೇನೆಯನ್ನು ಇಟ್ಟುಕೊಂಡಿದ್ದವು. ದಾನ ಧರ್ಮದಲ್ಲಿ ಹೆಚ್ಚು ಆಸಕ್ತಿಯನ್ನು ವಹಿಸಿದ್ದವು. ಸಂತೆಯ ಕಾಲದಲ್ಲಾಗಲಿ, ಇತರ ಸಂದರ್ಭದಲ್ಲಾಗಲಿ ತೆರಿಗೆ ಅಥವಾ ದೇಣಿಗೆಯ ರೂಪದಲ್ಲಿ ತಮ್ಮ ಪದಾರ್ಥಗಳನ್ನು ಮಾರುತ್ತಿದ್ದವರಿಂದ ಸ್ವಲ್ಪ ಭಾಗವನ್ನು ಸಂಗ್ರಹಿಸುತ್ತಿದ್ದವು. ಇದರ ಸಲುವಾಗಿ ಸಮಯ ಅಥವಾ ಒಪ್ಪಂದವನ್ನು ಮಾಡಿಕೊಳ್ಳುತ್ತಿದ್ದವು. ತಮ್ಮ ಸದಸ್ಯರ ಯೋಗಕ್ಷೇಮವನ್ನು ದಕ್ಷತೆಯಿಂದ ನೋಡಿಕೊಳ್ಳುವುದು ಇವುಗಳ ಹೊಣೆಗಾರಿಕೆಗಳಲ್ಲಿ ಒಂದಾಗಿದ್ದಿತು.

ವ್ಯಾಪಾರ ಶ್ರೇಣಿಗಳು ಬಹು ಮಟ್ಟಿಗೆ ಪ್ರಖ್ಯಾತವಾಗಿದ್ದು ಪ್ರಾಚೀನ ಕಾಲದಲ್ಲಿಯೇ.[1] ನಂತರ ಪಾಶ್ಚಿಮಾತ್ಯರ ಸಂಪರ್ಕದಿಂದಾಗಿ ಪಾರಿಭಾಷಿಕವಾಗಿ ಕಂಪನಿಗಳಾದವು. ಆರ್ಥಿಕ ಚಟುವಟಿಕೆಗಳ ಒಂದು ಭಾಗವಾಗಿ ವ್ಯಾಪಾರ – ವಾಣಿಜ್ಯ ವಿಷಯಗಳು ಪರಿಗಣಿಸಲ್ಪಡುತ್ತವೆ. ಕೃಷಿ, ಕೈಗಾರಿಕಾ ವಲಯ ಹಾಗೂ ಇವುಗಳ ಉಪ ಉತ್ಪನ್ನ ಘಟಕಗಳು ಉತ್ಪಾದಿಸುವ ವಸ್ತುಗಳನ್ನು ಮಾರಾಟ ಮಾಡುವ ಪ್ರಕ್ರಿಯೆಗಳು ಸಾಮಾನ್ಯವಾಗಿ ವ್ಯಾಪಾರ – ವಾಣಿಜ್ಯ ಚಟುವಟಿಕೆಗಳೆಂದೆನಿಸಿಕೊಂಡಿವೆ. ಇಂಥ ಕಾರ್ಯಗಳು ದೂರದೂರದ ಪ್ರದೇಶಗಳಿಗೆ ಸಂಬಂಧ ಕಲ್ಪಿಸುವ ಪರಿಣಾಮಕಾರಿ ಮಾರ್ಗವಾಗಿ ನಿರೂಪಿತವಾಗಿವೆ. ನಾಗರಿಕ ವ್ಯವಸ್ಥೆಗಳು ಹುಟ್ಟಿಕೊಂಡಾಗಿನಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಇಂಥ ಚಟುವಟಿಕೆಗಳು ಮುಂದುವರೆದುಕೊಂಡು ಬಂದಿರುವುದು ಚರಿತ್ರಾರ್ಹ. ಭಾರತದ ಚರಿತ್ರೆಯಲ್ಲಿ ಹರಪ್ಪ ಸಂಸ್ಕೃತಿಯ ನೆಲೆಗಳು ಬೇರೆ ಬೇರೆ ಪ್ರದೇಶಗಳ ಜೊತೆಗೆ ವ್ಯಾಪಾರ ಸಂಬಂಧಗಳನ್ನು ಹೊಂದಿರುವ ಮೊದಲ ವಿವರಗಳಾಗಿವೆ. ಅಲ್ಲದೆ ಆ ಕಾಲದಲ್ಲಿ ಆಂತರಿಕ ಮತ್ತು ಬಾಹ್ಯ ವ್ಯಾಪಾರ ಚಟುವಟಿಕೆಗಳು ನಡೆಯುತ್ತಿದ್ದವು.[2]

ನವ ಶಿಲಾಯುಗ – ತಾಮ್ರಯುಗದ ದಕ್ಷಿಣದ ಭಾರತದ ವಾಣಿಜ್ಯ ಮಾರ್ಗಗಳ ಬಗೆಗೆ ಗಮನಹರಿಸಬೇಕಾಗುತ್ತಾದೆ. ಬಹು ಹಿಂದೆಯೇ ಈ ಮಾರ್ಗಗಳು ಮಹಾರಾಷ್ಟ್ರದಿಂದ ಕರ್ನಾಟಕದೊಳಗೆ ವಿಸ್ತಾರಗೊಂಡದ್ದು ಗಮನಕ್ಕೆ ಬರುತ್ತದೆ. ಕರ್ನಾಟಕದಲ್ಲಿ ದೊರೆತ ಸಾವಳ್ದ (ಮಹಾರಾಷ್ಟ್ರ) ಮೃತ್ಪಾತ್ರೆ ಇದನ್ನು ಸಮರ್ಥಿಸುತ್ತದೆ. ವಾಸ್ತವದಲ್ಲಿ ಇದು ಜೋರ್ವೆ (ಮಹಾರಾಷ್ಟ್ರ) ಸಂಸ್ಕೃತಿ ಹಂತದಲ್ಲಿ ಸಂಸ್ಕೃತಿ ಪ್ರಸರಣ ಉತ್ತರದ ಮೈದಾನ ಪ್ರದೇಶದಿಂದ ದಕ್ಷಿಣದಲ್ಲಿ ಕರ್ನಾಟಕದ ತರುಮಕೂಡಲು, ನರಸೀಪುರದವರೆಗೂ ಮುಂದುವರೆದಿದ್ದು ನೋಡಬಹುದು. ಪೂರ್ವ ಭಾಗದಲ್ಲಿ ಶ್ರೀಶೈಲಗುಡ್ಡ ಸಾಲು ಆಂಧ್ರಪ್ರದೇಶದ ಪ್ರಸ್ಥಭೂಮಿಯಿಂದ ಮಾರ್ಗವನ್ನು ಕಲ್ಪಿಸಿದೆ. ಇದು ದೃಢಪಡುವುದು ಕರಾವಳಿಯತ್ತ ವಿಸ್ತರಿಸಿದ ಗುಂಡಿನೂರು, ಕರ್ನೂಲು ಮತ್ತು ಮೆಹಬೂಬ್‌ನಗರ ಜಿಲ್ಲೆಗಳ ನಿವೇಶನಗಳಲ್ಲಿ ದೊರೆತಿರುವ ಸಮುದ್ರದ ಚಿಪ್ಪಿನಿಂದ ತಯಾರಿಸಿದ ವಸ್ತುಗಳಿಂದ.[3] ಬೃಹತ್ ಶಿಲಾಯುಗದ ಸಮಾಧಿಗಳು ಕರ್ನಾಟಕದ

ಬೀದರ್, ರಾಯಚೂರು, ಬಳ್ಳಾರಿ, ಧಾರವಾಡ, ಬೆಳಗಾವಿ, ಗುಲ್ಬರ್ಗಾ, ಉತ್ತರ ಕನ್ನಡ, ಚಿತ್ರದುರ್ಗ, ಶಿವಮೊಗ್ಗ, ಮೈಸೂರು, ಕೊಡಗು ಮತ್ತು ಕೋಲಾರ ಜಿಲ್ಲೆಗಳಲ್ಲಿ ಕಂಡುಬರುತ್ತವೆ. ಈ ಸಂಸ್ಕೃತಿ ಎಲ್ಲೆಡೆಯೂ ಒಂದೇ ಲಕ್ಷಣ ಹೊಂದಿದ್ದು, ಕ್ರಿ.ಪೂ. ೧೦೦೦ದ ವೇಳೆಗೇ ಆರಂಭಗೊಂಡಿದ್ದರೂ ಕೆಲವೆಡೆಗಳಲ್ಲಿ ಅದು ಕ್ರಿಪೂ. ೫ ರಿಂದ ೧ನೇ ಶತಮಾನದವರೆಗೆ ಹಾಗೂ ಕೆಲವೆಡೆ ಕ್ರಿಸ್ತಶಕಾರಂಭದ ಶತಮಾನದವರೆಗೂ ಮುಂದುವರೆಯಿತು. ಅಶೋಕನ ಶಾಸನಗಳಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಚೋಳರು, ಪಾಂಡ್ಯರು ಮತ್ತು ಕೇರಳಪುತ್ರರು ಅಥವಾ ಚೇರರು ಬಹುಶಃ ಬೃಹತ್ ಶಿಲಾಸಮಾಧಿ ಹಂತದ ಅಂತಿಮ ಭಾಗದ ಐಹಿಕ ಸಂಸ್ಕೃತಿಗೆ ಸೇರಿದ್ದವರಾಗಿರಬೇಕು ಎಂದು ಆರ್.ಎಸ್.ಶರ್ಮಾ ಅವರು ಅಭಿಪ್ರಾಯ ಪಟ್ಟಿದ್ದಾರೆ.[೪] ಬೃಹತ್ ಶಿಲಾಸಂಸ್ಕೃತಿ ಜನರಲ್ಲಿ ರೂಢಿಯಲ್ಲಿದ್ದ ಕೆಲವು ವಿಶಿಷ್ಠ ಆಚರಣೆಗಳು ಪ್ರಾದೇಶಿಕವಾಗಿ ಭಿನ್ನಬಗೆಯವಾಗಿದ್ದವು. ಈ ಜನರು ಕಬ್ಬಿಣ ಬಳಸುತ್ತಿದ್ದು ಬೆಟ್ಟಗಳ ಇಳಿಜಾರುಗಳಲ್ಲಿ ವಾಸಿಸುತ್ತಿದ್ದರು. ಇವರು ಕಬ್ಬಿಣದ ಅದಿರನ್ನು ಕರಗಿಸುವುದರಲ್ಲಿ ಮತ್ತು ಕಮ್ಮಾರಿಕೆಯಲ್ಲಿ ತೀರಾ ಪರಿಣತರಾಗಿದ್ದರು. ಈ ಕಾರಣಕ್ಕಾಗಿಯೇ ಅಂದರೆ ಕರ್ನಾಟಕದ ಪ್ರದೇಶದ ಆರ್ಥಿಕ ಪರಿಸ್ಥಿತಿ ಉತ್ತಮವಾಗಿದ್ದುದರಿಂದಲೇ ಅಶೋಕ ತನ್ನ ಗಮನವನ್ನು ಇತ್ತ ಹರಿಸಿದನೆಂಬುದನ್ನು ತಳ್ಳಿ ಹಾಕಲಾಗುವುದಿಲ್ಲ.[೫] ತನ್ನ ಸಾಮ್ರಾಜ್ಯಕ್ಕೆ ಉಪಯೋಗಕಾರಿಯಾದ ಪ್ರದೇಶ ಮತ್ತು ಸಂಪತ್ತು ಹಾಗೂ ತಮ್ಮ ಕಸುಬಿನಲ್ಲಿ ಚೆನ್ನಾಗಿ ಪರಿಣಿತ ಸಮುದಾಯಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳುವ ಪ್ರಯತ್ನದಲ್ಲಿ ಅಶೋಕ ತಡಮಾಡುತ್ತಿರಲಿಲ್ಲ. ಆರ್.ಎಸ್.ಶರ್ಮಾ ಗುರುತಿಸುವಂತೆ ಆಂಧ್ರ ಮತ್ತು ಕರ್ನಾಟಕಗಳಲ್ಲಿ ದೊರೆತ ಕಬ್ಬಿಣದ ಆಯುಧ ಮೊದಲಾದವು ಬೃಹತ್ ಶಿಲಾ ಸಮಾಧಿಗಳಿಂದಾಗಿಯೇ ಪ್ರಸಿದ್ಧವಾದ ಜನರ ಕೊಡುಗೆ. ಆಂಧ್ರದ ಅಮರಾವತಿ ಮತ್ತಿತರ ಸ್ಥಳಗಳು ಹಾಗೂ ಕರ್ನಾಟಕದ ಕೆಲವೆಡೆಗಳಲ್ಲಿ ಅಶೋಕನ ಶಾಸನಗಳು ದೊರೆತಿರುವುದರಿಂದ ಗಂಗಾ ಬಯಲಿನ ಸಂಸ್ಕೃತಿಯ ಐಹಿಕ ಅಂಶಗಳು ಪೂರ್ವ ಕರಾವಳಿಯ ಮೂಲಕ ದಖನ್ ಪ್ರಸ್ಥಭೂಮಿಯ ದಕ್ಷಿಣ ಭಾಗಗಳಿಗೆ ಹರಡಿರಬಹುದು. ಹಾಗೆಯೇ ಉಕ್ಕು ತಯಾರಿಕೆಯೂ ಮೌರ್ಯರ ಸಂಪರ್ಕಗಳಿಂದಾಗಿ ದೇಶದ ಹಲವು ಭಾಗಗಳಿಗೆ ಹರಡಿರಬಹುದು. ಅಲ್ಲದೇ ಬೃಹತ್ ಶಿಲಾ ಸಂಸ್ಕೃತಿಗಳು ದೊರೆತಿರುವ ಬಹುತೇಕ ನೆಲೆಗಳು ಚರಿತ್ರಾ ಅವಧಿ ಸೇರಿದಂತೆಯೇ ಕೆರೆಯ ನೀರನ್ನು ಆಧರಿಸಿದ ನೀರಾವರಿ ಬೇಸಾಯದ ಪರಂಪರೆಯನ್ನು ಸೂಚಿಸುತ್ತವೆನ್ನಲಾಗುತ್ತದೆ.

ಭಾರತದ ವ್ಯಾಪಾರ-ವಾಣಿಜ್ಯದ ಬಗ್ಗೆ ಅಧ್ಯಯನ ಮಾಡುವಾಗ ಪ್ರಾಚೀನ ಕಾಲದಲ್ಲಿಯೇ ಭಾರತ ಪಾಶ್ಚಿಮಾತ್ಯ ದೇಶಗಳೊಂದಿಗೆ ವ್ಯಾಪಾರ ಸಂಬಂಧಗಳನ್ನು ಹೊಂದಿರುವ ಹಿನ್ನೆಲೆಯಲ್ಲಿ ಅಂತರಾಷ್ಟ್ರೀಯ ವಾಣಿಜ್ಯ ಎರಡು ಬಗೆಯಲ್ಲಿ ಮುಖ್ಯವಾಗಿ ಮಹತ್ವ ಪಡೆದಿತ್ತು.

ಮೊದಲನೆಯದಾಗಿ ಅಂತರಾಷ್ಟ್ರೀಯ ವ್ಯಾಪಾರ ದೇಶೀಯ ಉತ್ಪನ್ನಗಳಿಗೆ ಬೇಡಿಕೆಯನ್ನು ಹೆಚ್ಚಿಸುತ್ತಿತ್ತು ಮತ್ತು ವಿದೇಶಿ ಉತ್ಪನ್ನಗಳನ್ನು ಪಡೆಯಲು ನೆರವಾಗುತ್ತಿತ್ತು. ಇದರಿಂದ ಒಂದು ದೇಶದ ಆರ್ಥಿಕ ಚಟುವಟಿಕೆ ಹೆಚ್ಚಲು ಮತ್ತು ಹೊರಗಿನ ಸಂಪರ್ಕ ಸಾಧಿಸಲು ಅವಕಾಶವಾಗುತ್ತಿತ್ತು. ಎರಡನೆಯದಾಗಿ ಮತ್ತು ಮುಖ್ಯವಾಗಿ ಅದು ರಾಜ ಬೊಕ್ಕಸವನ್ನೂ ತುಂಬಿಸುತ್ತಿತ್ತು. ಒಂದು ದೇಶದ ಆರ್ಥಿಕ ಉತ್ಪನ್ನಗಳಿಗೆ ಬೇಡಿಕೆ ಇರಲಿ, ಇಲ್ಲದಿರಲಿ ಆ ದೇಶದ ಮೂಲಕ ಅಂತರಾಷ್ಟ್ರೀಯ ವಾಣಿಜ್ಯ ನಡೆಯುತ್ತಿದ್ದರೆ ಅಲ್ಲಿಗೆ ಬರುತ್ತಿದ್ದ ಹಡಗುಗಳ ಮೇಲೆ ಮತ್ತು ಕಾರವಾಹನಗಳ ಮೇಲೆ ಸ್ಥಳೀಯ

ರಾಜರು ಸುಂಕವನ್ನು ವಿಧಿಸುತ್ತಿದ್ದರು. ಅಲ್ಲಿ ವಹಿವಾಟು ಬೆಳೆದಷ್ಟು ಆ ರಾಜ್ಯದ ಆದಾಯ ಹೆಚ್ಚುತ್ತಿತ್ತು. ಈ ಕಾರಣಗಳಿಂದಾಗಿ ಕೆಲವು ಆಯಕಟ್ಟಿನ ಅಂತರಾಷ್ಟ್ರೀಯ ಸರಕು ಸಾಗಾಣಿಕೆ ಮಾರ್ಗವನ್ನು ಹತೋಟಿಯಲ್ಲಿಟ್ಟುಕೊಳ್ಳಲು ವಿವಿಧ ರಾಜ್ಯಗಳು ಮತ್ತು ಗುಂಪುಗಳು ಸೆಣಸುತ್ತಿದ್ದವು. ಈ ಹಿನ್ನೆಲೆಯಲ್ಲಿ ಶಾವಾಹನರು, ಶಕರು, ಗುಪ್ತರು, ಚಾಳುಕ್ಯರು ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರ ಚರಿತ್ರೆಯನ್ನು ಪರಿಶೀಲಿಸಿದಾಗ ಅದೊಂದು ಸ್ವಾರಸ್ಯ ಪೂರ್ಣ ಅಧ್ಯಯವೆನಿಸುತ್ತದೆ. ಆದ್ದರಿಂದ ನಾವು ಈ ಪ್ರಾಚೀನ ಪ್ರಪಂಚದ ಅಂತರಾಷ್ಟ್ರೀಯ ವಾಣಿಜ್ಯ ಮಾರ್ಗಗಳನ್ನು ಕುರಿತು ತಿಳಿಯುವುದು ಈ ಅಧ್ಯಯನಕ್ಕೆ ಉಪಯುಕ್ತ.

ಭಾರತ ಅಥವಾ ಕರ್ನಾಟಕದ ಜನಜೀವನ ಆರಂಭಿಕ ಪ್ರಾಗೀತಿಹಾಸ ಅಧ್ಯಯನದ ಕೆಲವು ನೆಲೆಗಳ ಮೂಲಕ ವ್ಯಾಪಾರ-ವಾಣಿಜ್ಯಗಳನ್ನು ಸೂಚಿಸುವುದರ ಜೊತೆಗೆ ಕ್ರಿಪೂ. ಶತಮಾನಗಳಿಂದಲೂ ಪ್ರಾಚೀನ ಪ್ರಪಂಚದೊಳಗಿನ ಅಂತರಾಷ್ಟ್ರೀಯ ವ್ಯಾಪಾರ ಭೂ ಮಾರ್ಗವಾಗಿ, ಜಲಮಾರ್ಗವಾಗಿ, ಮಧ್ಯವರ್ತಿಗಳ ಮೂಲಕ ನಡೆದು ಬಂದ ಸಂಗತಿಯನ್ನು ನಾವು ಈಗಾಗಲೇ ತಿಳಿದಿದ್ದೇವೆ. ಆದರೆ ರೋಮನ್ ಸಾಮ್ರಾಜ್ಯದ ಸ್ಥಾಪನೆಯ ನಂತರ ಹೊಸ ವ್ಯವಸ್ಥೆಯೊಂದು ರೂಪುಗೊಂಡಿತು. ಈ ವ್ಯವಸ್ಥೆ ವಾಸ್ಕೋಡಿ ಗಾಮ ಕ್ರಿ.ಶ. ೧೪೯೮ರಲ್ಲಿ ಇಂಡಿಯಾವನ್ನು.[೬] ತಲುಪುವವರೆಗೂ ಬಹು ಮಟ್ಟಿಗೆ ಉಳಿದು ಬಂದಿತ್ತು. ಗ್ರೀಕರನ್ನು ಬಿಟ್ಟರೆ ರೋಮನ್ ಸಾಮ್ರಾಜ್ಯದ ಮೂಲಕ ಚರಿತ್ರೆಯಲ್ಲಿ ಮೊದಲ ಬಾರಿಗೆ ಐರೋಪ್ಯ ರಾಷ್ಟ್ರವಾದ ಇಟಲಿ ವ್ಯಾಪಕವಾಗಿ ಪ್ರಪಂಚದ ಗಮನ ಸೆಳೆಯಿತು. ರೋಮನ್ ಸಾಮ್ರಾಜ್ಯದ ಕೇಂದ್ರವು ಇಟಲಿಯ ಪರ್ಯಾಯ ದ್ವೀಪದಲ್ಲಿದ್ದುದರಿಂದ ಅದು ಪೂರ್ವದೇಶಗಳು ಮತ್ತು ಆಗತಾನೇ ನಾಗರಿಕ ಜೀವನಕ್ಕೆ ಕಾಲಿಡುತ್ತಿದ್ದ ಯುರೋಪ್ ಖಂಡದ ವಿವಿಧ ಜನವಸತಿ ಪ್ರದೇಶಗಳ ನಡುವಿನ ವ್ಯಾಪಾರ ಸಂಪರ್ಕವನ್ನು ಕಲ್ಪಿಸುವ ಕೊಂಡಿಯಾಗಿ ಪರಿಣಮಿಸಿತು. ಇದಕ್ಕೂ ಪೂರ್ವದಲ್ಲಿಯೇ ಭಾರತದೊಂದಿಗೆ ನೇರವಾಗಿ ಸಂಪರ್ಕ ಸ್ಥಾಪಿಸಿದ ರೋಮನ್ನರು ಅಲ್ಲಿನ ವಿವಿಧ ಭಾಗಗಳೊಂದಿಗೆ ವಾಣಿಜ್ಯ ವ್ಯವಹಾರ ಹೊಂದಿದ್ದರು. ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿರುವ ಕರ್ನಾಟಕದೊಡನೆ ಅದು ಹೊಂದಿದ್ದ ವಾಣಿಜ್ಯದ ಪ್ರಮಾಣದ ಬಗ್ಗೆ ಸಮಗ್ರ ಚಿತ್ರ ದೊರೆಯಲು ನಾವು ವಿವಿಧ ಆಕರಗಳ ಮೊರೆ ಹೋಗಬೇಕಾಗುತ್ತದೆ. ಈ ಆಕರಗಳಲ್ಲಿ ನಾಣ್ಯಗಳು, ರೋಮನ್ ಅವಶೇಷಗಳು ಮತ್ತು ಪ್ರವಾಸಿಗರ ಕಥನಗಳು ಮುಖ್ಯವಾದವು. ಭಾರತದಲ್ಲಿ ದೊರೆತಿರುವ ರೋಮನ್ ನಾಣ್ಯಗಳಲ್ಲಿ ಬಹುತೇಕ ನಾಣ್ಯ ಕೊಪ್ಪರಿಗೆಗಳಲ್ಲಿ ದೊರೆತಿರುವುದು ದಕ್ಷಿಣ ಭಾರತದಲ್ಲಿ.[೭] ಈ ನಾಣ್ಯ ಕೊಪ್ಪರಿಗೆಗಳು ಆಕಸ್ಮಿಕವಾಗಿ ಕಂಡುಬರುವುದರಿಂದ ಅವುಗಳ ನಿರ್ದಿಷ್ಟ ಪ್ರಮಾಣ ಇನ್ನೂ ರಹಸ್ಯವಾಗಿದೆ. ಆದರೂ ಕರ್ನಾಟಕ, ತಮಿಳುನಾಡು, ಆಂಧ್ರ ಮತ್ತು ಕೇರಳ ರಾಜ್ಯಗಳಲ್ಲಿ ದೊರೆತಿರುವ ನಾಣ್ಯಗಳು ಈ ಭಾಗದೊಂದಿಗೆ ರೋಮನ್ ಸಾಮ್ರಾಜ್ಯ ಹೊಂದಿದ್ದ ನಿಕಟ ವಾಣಿಜ್ಯ ಸಂಪರ್ಕಕ್ಕೆ ಸಾಕ್ಷಿಯಾಗಿವೆ.

೧೮೯೧ರಲ್ಲಿ ಬೆಂಗಳೂರಿನ ಯಶವಂತಪುರದಲ್ಲಿ ರೈಲು ಮಾರ್ಗ ಹಾಕಲು ನಡೆಸಿದ ಅಗೆತದಲ್ಲಿ ೧೬೩ ಬೆಳ್ಳಿ ರೋಮನ್ ನಾಣ್ಯಗಳು ದೊರೆತವು. ಅವು ಕ್ರಿಪೂ. ೩೧ ರಿಂದ ಕ್ರಿ.ಶ. ೫೧ರ ವರೆಗಿನ ಕಾಲಮಾನಕ್ಕೆ ಸೇರಿದವು.[೮] ಈ ನಾಣ್ಯಗಳು ರೋಮನ್ ಚಕ್ರವರ್ತಿಗಳಾದ ಆಗಸ್ಟಸ್, ಟೈಬೀರಿಯಸ್ ಕಾಲಿಗುಲ ಮತ್ತು ಕ್ಲಾಡಿಯಸ್‌ರ ಕಾಲಕ್ಕೆ ಸೇರಿದವು. ೧೯೦೧ರಲ್ಲಿ ಮತ್ತು ತರುವಾಯ ಚಂದ್ರವಳ್ಳಿಯಲ್ಲಿ (ಚಿತ್ರದುರ್ಗ) ನಡೆಸಿದ ಉತ್ಖನನಗಳಲ್ಲಿ ಪ್ರಾಚೀನ ರಾಜಮನೆತನಗಳ ಆಡಳಿತ ಕೇಂದ್ರವಾಗಿ ಈ

ಪಟ್ಟಣ ಇದ್ದುದರಿಂದ ಆಯಾ ಮನೆತನಗಳ ನಾಣ್ಯಗಳೂ, ಆಭರಣಗಳೂ ಮತ್ತಿತರ ನಿತ್ಯೋಪಯೋಗಿ ವಸ್ತುಗಳೂ ಇಲ್ಲಿ ದೊರೆತಿವೆ. ಚಂದ್ರವಳ್ಳಿಯಂತೆಯೇ ಸುತ್ತಮುತ್ತಲಿನ ನೇರಲಗುಂದಿ, ಬಸವನಗೊಂದಿ, ಹುಲೆಗೊಂದಿಗಳೂ ಈ ಪ್ರಾಚೀನ ಸಂಸ್ಕೃತಿಯ ನೆಲೆಬೀಡಾಗಿದ್ದವು.

ಚಂದ್ರವಳ್ಳಿಯ ಭೂ ಶೋಧನೆಯಾಗುವವರೆಗೆ ಚಿತ್ರದುರ್ಗದ ಪ್ರಾಚೀನ ಚರಿತ್ರೆಯದ ಬಗ್ಗೆ ಅಷ್ಟಾಗಿ ಗೊತ್ತಿರಲಿಲ್ಲವೆಂದು ಹೇಳಬಹುದು. ಚಂದ್ರವಳ್ಳಿಯ ನಿವೇಶನದಲ್ಲಿ ಭೂಶೋಧನೆಯ ಕಾರ್ಯ ಕೈಗೊಂಡನಂತರ ಅದುವರೆಗೂ ಅಜ್ಞಾತವಾಗಿದ್ದ ಇಲ್ಲಿನ ಪ್ರಾಚೀನ ಚರಿತ್ರೆಯ ಮೇಲೆ ಹೊಸ ಬೆಳಕು ಚೆಲ್ಲಿದಂತಾಯಿತು. ಈ ಭೂ ಶೋಧನಾ ಕಾರ್ಯ ನಿರಂತರವಾಗಿ ನಡೆಯದೆ ಇದ್ದುದರಿಂದ ಹಲವಾರು ವರ್ಷಗಳ ಕಾಲ ಈ ಪ್ರದೇಶದ ಮಹತ್ವ  ಪ್ರಸಿದ್ಧಿಗೆ ಬಂದಿರಲಿಲ್ಲ. ಆದರೆ ಮೈಸೂರು ಪುರಾತತ್ವ ಇಲಾಖೆಯ ನಿರ್ದೇಶಕರಾಗಿದ್ದ ಎಂ.ಎಚ್. ಕೃಷ್ಣರವರು ೧೯೩೯ರಲ್ಲಿ ಭೂ ಶೋಧನೆ ನಡೆಸುವುದರ ಮೂಲಕ ವ್ಯಾಪಕ ಅಧ್ಯಯನ ಕೈಗೊಂಡು, ಶಾತವಾಹನ ಮತ್ತು ಕದಂಬರ ರಾಜ ಮನೆತನಗಳು ಇಲ್ಲಿ ಆಳ್ವಿಕೆ ನಡೆಸಿದ ಕಾಲದವರೆಗಿನ ಚರಿತ್ರೆಯನ್ನು ಗುರುತಿಸಿದರು.

ಎಂ.ಎಚ್.ಕೃಷ್ಣರವರು ಚಂದ್ರವಳ್ಳಿ ಭೂ ಶೋಧನೆ ಕೈಗೊಳ್ಳುವ ಮುನ್ನ ಬಿ.ಎಲ್. ರೈಸ್, ಆರ್ ನರಸಿಂಹಚಾರ್, ಶಾಮಾಶಾಸ್ತ್ರಿ ಇವರೆ ಮೊದಲಾದವರು ಇತ್ತ ಗಮನಹರಿಸಿ ಭೂ ಶೋಧನೆ ಕಾರ್ಯಕ್ಕೆ ನಾಂದಿ ಹಾಕಿದರು. ಅವರ ಪ್ರಯತ್ನದ ಫಲವಾಗಿ ಕೆಲವು ಅವಶೇಷಗಳನ್ನು ಇಲ್ಲಿ ಹುಡುಕಲು ಸಾಧ್ಯವಾಯಿತು. ದೊರೆತ ಅವಶೇಷಗಳಲ್ಲಿ ಸೀಸದ ನಾಣ್ಯಗಳು ಮುಖ್ಯವಾದುವು. ಈ ನಾಣ್ಯಗಳನ್ನು ಅಭ್ಯಾಸಿಸಿದ ಲಂಡನ್ ಬ್ರಿಟಿಶ್ ಮ್ಯೂಜಿಯಂನ ಇ.ಜೆ.ರ್‍ಯಾಪ್ಸನ್‌ರವರು, ಅವು ಆಂಧ್ರಭೃತ್ಯರ ನಾಣ್ಯಗಳೆಂದು ಗುರುತಿಸಿದರು. ಈ ನಾಣ್ಯಗಳಲ್ಲದೆ ನವಶಿಲಾಯುಗದ ಜನರು ಬಳಸುತ್ತಿದ್ದ ಬೆಳ್ಳಿ, ತಾಮ್ರ, ಬಂಗಾರ ನಾಣ್ಯಗಳೂ ಪೋಟಿನ್ ಲೋಹದ ನಾಣ್ಯಗಳು, ಮಣ್ಣಿನಿಂದ ಮಾಡಿದ ಬಣ್ಣ ಬಣ್ಣದ ಮಡಿಕೆ-ಕುಡಿಕೆಗಳೂ, ಲೋಹಗಳಿಂದ ತಯಾರಿಸಿದ ಅಲಂಕಾರ ಆಭರಣಗಳು ದೊರೆತವು. ಭೂ ಶೋಧನೆಯಿಂದ ಮನೆ ಕಟ್ಟಲು ಉಪಯೋಗಿಸುತ್ತಿದ್ದ (ಈಗಿನ ಮಂಗಳೂರು ಹೆಂಚನ್ನು ಹೋಲುವ) ಹೆಂಚುಗಳು ಇವುಗಳಿಗೆ ಉಪಯೋಗಿಸುತ್ತಿದ್ದ ಕಬ್ಬಿಣದ ಮೊಳೆಗಳು ಕಂಡುಬಂದವು. ಅಲ್ಲದೆ ಕಬ್ಬಿಣ ತಯಾರಿಕೆಗೆ ಉಪಯೋಗಿಸುತ್ತಿದ್ದ ಕುಲುಮೆ, ಕೊಡಲಿಗಳು, ಅರೆಯುವ ಕಲ್ಲುಬಂಡೆಗಳು ಇತ್ಯಾದಿ ಗೋಚರಿಸಿದವು. ಆಗಿನ ಜನರು ಕಟ್ಟಿಕೊಂಡಿದ್ದ ಮನೆಗಳು ಮತ್ತು ಅವುಗಳಲ್ಲಿ ಮಾಡಿದ್ದ ವ್ಯವಸ್ಥೆಗಳು ಸುಂದರವಾಗಿದ್ದವು ಎಂದು ಚರಿತ್ರಾಕಾರರು ಅಭಿಪ್ರಾಯಪಟ್ಟಿರುವರು.

ಚಂದ್ರವಳ್ಳಿಯಲ್ಲಿ ದೊರೆತಿರುವ ಕೆಲವು ನಾಣ್ಯಗಳ ಮೇಲೆ ಬೌದ್ಧ ಧರ್ಮದ ಚಿನ್ಹೆಗಳಾದ ಭೋಧಿವೃಕ್ಷ ಮತ್ತು ಸ್ಥೂಪಗಳ ಚಿತ್ರಗಳಿವೆ. ಈ ಆಧಾರದಿಂದ ಅಶೋಕನ ಕಾಲದಿಂದ ಕದಂಬರ ಮಯೂರ ಶರ್ಮನು ಇಲ್ಲಿ ರಾಜ್ಯ ಸ್ಥಾಪನೆ ಮಾಡುವವರೆಗೂ ಚಂದ್ರವಳ್ಳಿಯು ಬೌದ್ಧ ಧರ್ಮೀಯರ ಆಳ್ವಿಕೆಗೆ  ಒಳಪಟ್ಟಿತ್ತು ಎಂದು ಅಭಿಪ್ರಾಯ ಹೇಳಬಹುದು.

ಚಂದ್ರವಳ್ಳಿ ಪ್ರದೇಶದಲ್ಲಿ ವಾಸವಾಗಿದ್ದ ಅಂದಿನ ಜನರು ಆರ್ಥಿಕವಾಗಿ ಮುಂದುವರೆದ್ದಿರೆಂದು ಅವರು ಮುದ್ರಿಸಿದ ಬೆಳ್ಳಿ, ಬಂಗಾರ, ನಾಣ್ಯಗಳಿಂದಲೇ ವ್ಯಕ್ತ ಪಡುತ್ತದೆ. ಅವರು ಸಾಮಾಜಿಕವಾಗಿ ಮುಂದುವರೆದಿದ್ದರೆಂದೂ, ವಿದೇಶಗಳೊಂದಿಗೆ ವ್ಯಾಪಾರ ಸಂಬಂಧ ಇಟ್ಟುಕೊಂಡಿದ್ದರೆಂದೂ ಈ ಪ್ರದೇಶದಲ್ಲಿ ದೊರೆತ ಚೀನಾ ಮತ್ತು ರೋಮನ್ ದೇಶಗಳ ನಾಣ್ಯಗಳು ಸೂಚಿಸುತ್ತವೆ.[೯] ೧೯೭೫ರಲ್ಲಿ

ಬೆಂಗಳೂರಿನ ವಿಮಾನ ನಿಲ್ದಾಣದ ರನ್‌ವೇ ವಿಸ್ತರಿಸಲು ಅಗೆಯುತ್ತಿದ್ದಾಗ ೨೫೬ ಬೆಳ್ಳಿ ನಾಣ್ಯಗಳಿದ್ದ[೧೦] ಒಂದು ಉದ್ದನೆಯ ಕಂಠವಿರುವ ಮಡಿಕೆಯೊಂದು ಸಿಕ್ಕಿತು. ಅವುಗಳಲ್ಲಿ ೨೯ ನಾಣ್ಯಗಳು ಟೈಬೀರಿಯಸ್‌ನವು ಹಾಗೂ ಉಳಿದಿರುವಗಳು ಆಗಸ್ಟಸ್‌ನ ಕಾಲಕ್ಕೆ ಸೇರಿದವು. ಹೀಗೆ ರೊಮನ್ ನಾಣ್ಯಗಳು ದೊರೆತಿದ್ದು ಅಲ್ಲಿಗೇ ಮುಗಿಯಲಿಲ್ಲ. ಕೆಲವು ವರ್ಷಗಳ ಹಿಂದೆ ಧಾರವಾಡ ಜಿಲ್ಲೆಯ ಹಾನಗಲ್ ತಾಲ್ಲೂಕು ಅಕ್ಕಿ ಆಲೂರು ಗ್ರಾಮದ ಜಮೀನಿನಲ್ಲಿ ಮಡಿಕೆಯೊಂದರಲ್ಲಿ ೪೬ ಚಿನ್ನದ ನಾಣ್ಯಗಳು ದೊರೆತವು.[೧೧] ಈ ನಾಣ್ಯಗಳು ಅಗಸ್ಟಸ್ (ಕ್ರಿ.ಪೂ.೨೯-೧೬), ಆಂಟೋನಿಯಸ್ ಪಯಸ್ (ಕ್ರಿ.ಶ. ೧೩೮-೧೬೧), ಥಿಯೋಡೋನಿಯಸ್II (ಕ್ರಿ.ಶ. ೪೦೮-೪೫೦), ಮಾರ್ಷಿಯಸ್ (೪೫೦-೪೫೭), ಲಿಯೋI (೪೫೭-೭೪)ಜಿನೋ ಅನತ್ತೇಸಿಯಸ್ (೪೯೧-೫೧೮), ಜಸ್ಟಿನಸ್I (೫೧೮-೨೭) ಈ ರಾಜರುಗಳ ಕಾಲಕ್ಕೆ ಸೇರಿದವು.[೧೨] ಈ ನಾಣ್ಯಗಳಲ್ಲಿ ಕೆಲವು ಕಾನ್‌ಸ್ಟ್ಯಾಂಟಿನೋಪಲ್‌ನಲ್ಲಿ ಅಚ್ಚಾಗಿವೆ.

ಕರ್ನಾಟಕದ ನೆರೆಯ ಪ್ರದೇಶಗಳಾದ ಕೃಷ್ಣ ಜಿಲ್ಲೆ ಮತ್ತು ತಮಿಳುನಾಡಿನ ಕೊಯಮತ್ತೂರು ಜಿಲ್ಲೆಗಳಲ್ಲಿ ಗಣನೀಯ ಸಂಖ್ಯೆಯಲ್ಲಿ ರೋಮನ್ ನಾಣ್ಯಗಳು ದೊರೆತಿವೆ.[೧೩] ೧೯೭೫ರಲ್ಲಷ್ಟೇ ಕೃಷ್ಣಾನದಿ ಕಣಿವೆಯ ವಾರಂಗಲ್ ಜಿಲ್ಲೆಯ ಗೊರ್ಲವಾಡಿಯಲ್ಲಿ ಕ್ರಿ.ಶ. ೧೬೦ನೆ ವರ್ಷದ ಚಿನ್ನದ ನಾಣ್ಯವೂ ಅಲ್ಲಿಗೆ ಸಮೀಪದ ನಲ್ಗೊಂಡ ಜಿಲ್ಲೆ ಪ್ರದೇಶದಲ್ಲಿ ೧೦೦ ಬೆಳ್ಳಿಯ ರೋಮನ್ ಕಾಲದ ಸಂಪರ್ಕದ ಬಗ್ಗೆ ಸಾಕಷ್ಟು ಸಾಕ್ಷ್ಯಾಧಾರಗಳನ್ನೊದಗಿಸುತ್ತವೆ. ಇದರೊಂದಿಗೆ ದಕ್ಷಿಣ ಕನ್ನಡ ಜಿಲ್ಲೆಯ ವಿವಿಧ ಭಾಗಗಳಲ್ಲಿ ಹಾಗೂ ಚಂದ್ರವಳ್ಳಿ, ಬನವಾಸಿ, ಬೆಂಗಳೂರುಗಳಲ್ಲಿ ರೋಮನ್ ಸಂಸ್ಕೃತಿಯ ಮಡಿಕೆಗಳು ಮತ್ತಿತರ ವಸ್ತುಗಳು ದೊರೆತಿವೆ.[೧೪] ಹಾಗೆಯೇ ವಿದೇಶಗಳೊಂದಿಗೆ ಭಾರತ ವ್ಯಾಪಾರ ಸಂಬಂಧ ಹೊಂದಿದ್ದು ಇದು ಪ್ರಾಚೀನ ರೋಮ್, ಗ್ರೀಕ್, ಚೀನಾ ಮುಂತಾದ ದೇಶಗಳೊಂದಿಗೆ ಹೊಂದಿದ್ದ ವ್ಯಾಪಾರ ಸಂಬಂಧವು ಆಧುನಿಕ ಜಗತ್ತಿನೊಂದಿಗೂ ತಳಕು ಹಾಕಿಕೊಂಡಿರುವುದನ್ನು ಗುರುತಿಸಬಹುದು. ಆದರೆ ಗ್ರೀಕ್, ರೋಮ್‌ನೊಂದಿಗೆ ಆಧುನಿಕ ಸಂದರ್ಭದಲ್ಲಿ ಹೊಂದಿರುವ ವ್ಯಾಪಕ ಸಂಖ್ಯೆಯನ್ನು ಕುರಿತು ಅಧ್ಯಯನಗಳು ಅಷ್ಟಾಗಿ ಕಂಡುಬಂದಿಲ್ಲ. ಪ್ರಾಚೀನ ಕಾಲದಲ್ಲಿಯೇ ಬೃಹತ್ ಪ್ರಮಾಣದ ವ್ಯಾಪಾರ ಸಂಪರ್ಕಗಳು ರಚನೆಯಾಗುವಲ್ಲಿ ಕರ್ನಾಟಕದ ಪರಿಸ್ಥಿತಿಯ ಬಗ್ಗೆ ನಮಗೆ ಸಹಜ ಚಿತ್ರ ಮೂಡಬೇಕಾದರೆ ಅಲ್ಲಿನ ಭೌಗೋಳಿಕ ಸನ್ನಿವೇಶ ಮತ್ತು ರಾಜಕೀಯ ಹಿನ್ನೆಲೆಗಳನ್ನು ಗಮನಿಸುವುದು ಅಗತ್ಯ. ಕನ್ನಡ ನಾಡಿನ ವಿವಿಧ ಭಾಗಗಳು ಮೌರ್ಯರು, ಶಾತವಾಹನರು ಮತ್ತು ಪಲ್ಲವರ ಅಧೀನದಲ್ಲಿದ್ದವು. ಆ ಕಾಲದಲ್ಲಿ ರೋಮನ್ನರ ವಾಣಿಜ್ಯ ಸಮೃದ್ಧವಾಗಿ ನಡೆಯಿತಾದರೂ ಪ್ರವಾಸಿಗಳಿಗೆ ಕರ್ನಾಟಕದ ಸಂಪನ್ಮೂಲಗಳು ಮತ್ತು ರಾಜಕೀಯ ಸ್ಥಿತಿಯ ಬಗ್ಗೆ ಸ್ಪಷ್ಟ ಚಿತ್ರಣ ದೊರೆಯಲಿಲ್ಲ. ಆದರೂ ಹಿಂದಿನ ವ್ಯಾಪಾರ ಸಂಪರ್ಕಗಳನ್ನು ಕಲ್ಪಿಸುವ ಮಾರ್ಗಗಳನ್ನು ಭೌಗೋಳಿಕವಾಗಿ ಗುರುತಿಸಬಹುದು.

ಪ್ರತಿಷ್ಠಾನದಿಂದ ದಕ್ಷಿಣದತ್ತ ಹೊರಟ ಮಾರ್ಗ ಕೊಲ್ಲಾಪುರ ಅಶೋಕನ ಶಿಲಾಶಾಸನಗಳು ದೊರೆತಿರುವ ಕೊಪ್ಪಳ, ಮಸ್ಕಿ, ಚಂದ್ರವಳ್ಳಿ, ಕನಕಗಿರಿ ಮೊದಲಾದ ಪ್ರಾಚೀನ ಪಟ್ಟಣಗಳನ್ನು ಸಂಪರ್ಕಿಸುತ್ತಿತ್ತು. ಬನವಾಸಿ ಅಥವಾ ವೈಜಯಂತಿ ಮೌರ್ಯರ ಕಾಲದಿಂದಲ್ಲೂ ಪ್ರಸಿದ್ಧ ಬಂದರಾಗಿತ್ತು. ಬಾರಕನೂರು ಘಾಟಿ ಮಾರ್ಗದಲ್ಲಿ ಹೊನ್ನಾವರದಿಂದ ದಕ್ಷಿಣದತ್ತ ಹೊರಟ ಮಾರ್ಗ ಬನವಾಸಿ, ಹಾನಗಲ್,

ಬಂಕಾಪುರ, ಬಳ್ಳಿಗಾಮಿ, ಹರಿಹರ, ಅರಸೀಕೆರೆ, ಶ್ರವಣಬೆಳಗೊಳಗಳನ್ನು ಹಾಯ್ದು ಪಶ್ಚಿಮದತ್ತ ತಲಕಾಡಿಗೂ ಪೂರ್ವದತ್ತ ಬೆಂಗಳೂರು, ಕೋಲಾರದ ಕಡೆಗೂ ಹೋಗುತ್ತಿತ್ತು. ಬೆಂಗಳೂರಿನಲ್ಲಿ ರೋಮನ್ ನಾಣ್ಯಗಳು ಮತ್ತು ಅವಶೇಷಗಳು ದೊರೆತಿರುವುದು ಆ ಸ್ಥಳ ಪ್ರಾಚೀನ ಕಾಲದಿಂದಲೂ ಪ್ರಾಮುಖ್ಯತೆ ಪಡೆದಿತ್ತೆಂಬುದಕ್ಕೆ ಸಾಕ್ಷಿಯಾಗಿದೆ. ಕರ್ನಾಟಕದ ಕಲ್ಯಾಣದಿಂದ ತಮಿಳುನಾಡಿನ ತಂಜಾವೂರಿನವರೆಗೆ ಹಿರಿಯ ಹೆದ್ದಾರಿಯೊಂದು ಇದ್ದುದನ್ನು ಚೋಳ ಶಾಸನ ತಿಳಿಸುತ್ತದೆ.[೧೫] ಇದು ನಮ್ಮ ದೇಶದ ಆರಂಭಿಕ ಸಂಚಾರ ವ್ಯವಸ್ಥೆ ಮತ್ತು ಆರ್ಥಿಕ ಅವಲಂಬನೆ ಎಷ್ಟು ಸಂಘಟಿತವಾಗಿತ್ತೆಂಬುದನ್ನು ತೋರಿಸುತ್ತದೆ.

ಭಟ್ಕಳದಿಂದ ಉತ್ತರಕ್ಕಿದ್ದ ಬಂದರುಗಳಿಗೂ ಒಳನಾಡಿಗೂ ಸಂಪರ್ಕ ಮಾರ್ಗಗಳು ಸುಲಭವಾಗಿದ್ದರೆ ದಕ್ಷಿಣಕ್ಕಿದ್ದ ಮಲ್ಪೆ, ಮಂಗಳೂರು, ಕುಂಬಳೆ ಮೊದಲಾದ ಬಂದರುಗಳೊಡನೆಯ ಸಂಪರ್ಕ ಕಠಿಣವಾಗಿತ್ತು. ಉದಾಹರಣೆಗಾಗಿ ನೋಡುವುದಾದರೆ, ಮಂಗಳೂರು–ಬೇಲೂರು ಮಾರ್ಗವನ್ನು ತೆಗೆದುಕೊಳ್ಳಬಹುದು. ಅದು ಬಂಟವಾಳ, ಬೆಳ್ತಂಗಡಿಗಳ ಮೂಲಕ ಚಾರ್ಮಾಡಿ ಘಾಟಿಯಲ್ಲಿ ಹಾಯ್ದು ಘಟ್ಟದ ಮೇಲೆ ಮೂಡಿಗೆರೆ ತಾಲ್ಲೂಕಿನ ಕಳಸವನ್ನು ಸೇರುತ್ತಿತ್ತು. ಮುಂದೆ ಮೂಡಿಗೆರೆ ಮೂಲಕ ಬೇರೂರು ತಲುಪಿ ನಂತರ ದ್ವಾರಸಮುದ್ರ (ಹಳೇಬೀಡು) ಅರಸೀಕೆರೆ, ಹಾಸನ ಮೊದಲಾದ ಮುಖ್ಯ ಸ್ಥಳಗಳತ್ತ ಮುಂದುವರಿಯುತ್ತಿತ್ತು. ಮುಖ್ಯವಾಗಿ ಒಂದು ಪ್ರಮುಖ ಬಂದರು ಪಟ್ಟಣದಿಂದ ಇಡೀ ದಕ್ಷಿಣ ಭಾರತವನ್ನೇ ವ್ಯಾಪಿಸುವ ರಸ್ತೆ ಮಾರ್ಗಗಳನ್ನು ಈ ಮೂಲಕ ಗುರುತಿಸಬಹುದಾಗಿದೆ. ಕಡಲೋತ್ತರ ವ್ಯಾಪಾರವು ತಂದಿಡುತ್ತಿದ್ದ ಅಪಾರ ಲಾಭ, ಜಾಗತಿಕ ಗೌರವಗಳು ಪ್ರಭುತ್ವಕ್ಕೆ ವ್ಯಾಪಾರದಲ್ಲಿ ಸಕ್ರಿಯವಾಗಲು ಹುರಿದುಂಬಿಸುತ್ತಿದ್ದವು. ಆದ್ದರಿಂದಲೇ ಬಂದರುಗಳ ಮೇಲೆ ಹತೋಟಿ ಸಾಧಿಸಲು ರಾಜರುಗಳು ಇನ್ನಿಲ್ಲದ ಪೈಪೋಟಿ ನಡೆಸಿದ್ದರು. ಇದರ ಇನ್ನೊಂದು ರೂಪವಾಗಿ ಅರಮನೆಯೇ ವ್ಯಾಪಾರಿಗಳನ್ನು ಪೋಷಿಸಿ ಕಡಲೋತ್ತರ ವ್ಯಾಪಾರಕ್ಕೆ ಕಳಿಸುತ್ತಿತ್ತು.[೧೬]

ಕರ್ನಾಟಕದ ವ್ಯಾಪಾರ–ವಾಣಿಜ್ಯ ವ್ಯವಸ್ಥೆಗೆ ಸಂಬಂಧಿಸಿದಂತೆ ಪ್ರಾಚೀನ ಶಾಸನಗಳಲ್ಲಿ ಬಟ್ಟೆದಾರಿ, ಬಂಡಿದಾರಿ, ಹೆದ್ದಾರಿ, ಹೆಬ್ಬಟ್ಟೆ ಮೊದಲಾದ ಮಾರ್ಗಗಳ ಉಲ್ಲೇಖಗಳಿವೆ.[೧೭] ಆಂತರಿಕ ಪಥ (ಹೆದ್ದಾರಿ) ಪದ್ಧತಿಯು ಒಳವ್ಯಾಪಾರದ ಮತ್ತು ಸಂಸ್ಕೃತಿಯ ಬೆಳವಣಿಗೆಗೆ ಮಾತ್ರ ಸಹಾಯಕವಾಗಿರದೆ ವಿದೇಶಗಳೊಡನೆ ಸಂಪರ್ಕಕ್ಕೂ ಪೂರಕವಾಗಿತ್ತೆಂದು ಮೋತಿ ಚಂದ್ರರು ತಿಳಿಸಿದ್ದಾರೆ.[೧೮] ಅವರು ಮುಂದುವರಿದು ಭಾರತ ರಾಜಮಾರ್ಗಗಳು ಅಥವಾ ಪಥಗಳು ಪ್ರಾಚೀನ ಕಾಲದಿಂದಲೂ ಹೆಚ್ಚು ಬದಲಾವಣೆಗಳಿಗೆ ಒಳಗಾಗದೆ ಸಾಮಾನ್ಯವಾಗಿ ಹಾಗೆಯೇ ಮುಂದುವರಿದಿವೆ ಎಂದೂ ಹೇಳಿದ್ದಾರೆ. ಈ ಮಾತು ಸರಿಯಾದುದೇ; ಅದಕ್ಕೆ ಮುಖ್ಯ ಕಾರಣ ಭಾರತದ ಬಂದರುಗಳ ಸನ್ನಿವೇಶ ಮತ್ತು ದೇಶದ ಭೌಗೋಳಿಕ ಸ್ವರೂಪ. ಇದನ್ನು ನಾವು ಪ್ರಾಚೀನ ಮತ್ತು ಆಧುನಿಕ ಮಾರ್ಗಗಳ ಭೂಪಟಗಳೊಂದಿಗೆ ಹೋಲಿಸಿದಾಗ ಸುಲಭವಾಗಿ ತಿಳಿಯಬಹುದು. ಕರ್ನಾಟಕದ ಬಗ್ಗೆ ಉದಾಹರಿಸುವುದಾದರೆ ಬೆಂಗಳೂರಿನಿಂದ ಹೊನ್ನಾವರಕ್ಕೆ, ಮಂಗಳೂರಿಗೆ, ಕೊಯಮತ್ತೂರಿಗೆ, ಸೇಲಂ, ಮದ್ರಾಸ್, ಚಿತ್ರದುರ್ಗ, ಹುಬ್ಬಳ್ಳಿ, ಪುಣೆ, ಗುಂಟನೂರು ಇತ್ಯಾದಿ ಸ್ಥಳಗಳಿಗೆ ಹೋಗುವ ಆಧುನಿಕ ರಸ್ತೆ ಮಾರ್ಗ ವ್ಯವಸ್ಥೆಯನ್ನು ಪರಿಶೀಲಿಸಿದರೆ ಅವು ಹಿಂದಿನ ಮಾರ್ಗ ವ್ಯವಸ್ಥೆಯ ಜಾಡಿನಲ್ಲೇ ಸಾಗುವುದು ತಿಳಿದು ಬರುತ್ತದೆ. ಚರಿತ್ರೆಯ ಕಾಲದಲ್ಲಿ ಸ್ಥಾಪಿತವಾದ ವಿವಿಧ ಪ್ರಮುಖ ರಾಜಧಾನಿಗಳೂ

ಈ ರಾಜಮಾರ್ಗಗಳ ಬದಲಾವಣೆಗೆ ಕಾರಣವಾಗಿರುವುದುಂಟು. ಆದರೆ ಕೆಲವೊಂದು ವಿರಳ ನಿದರ್ಶನಗಳನ್ನು ಬಿಟ್ಟರೆ ಪ್ರಾಚೀನ ರಾಜಧಾನಿಗಳೂ ಕೂಡ ರೂಢಿಗತ ಹೆದ್ದಾರಿ ಮಾರ್ಗಗಳಲ್ಲಿ ನದಿ ದಡಗಳಲ್ಲಿ ಸ್ಥಾಪಿತವಾಗಿರುವುದು ಕಂಡು ಬರುತ್ತದೆ. ಮೊದಲನೆಯದಾಗಿ ವಾಣಿಜ್ಯ ಮತ್ತು ಸಂಪರ್ಕದ ಹಿತಾಸಕ್ತಿ ಕಾರಣವಾದರೆ, ಎರಡನೆಯದು ರಕ್ಷಣೆ ಮತ್ತು ನೀರು ಸರಬರಾಜು ಅನುಕೂಲಕ್ಕೆ ಕಾರಣವಾಗಿದ್ದವು.[೧೯]

ಅಶೋಕನು ಕರ್ನಾಟಕದ ಇಂದಿನ ಚಿತ್ರದುರ್ಗದ ಭಾಗದವರೆಗೂ ತನ್ನ ರಾಜ್ಯ ವ್ಯಾಪ್ತಿಯನ್ನು ಹೊಂದಿದ್ದನೆಂಬುದು ಸರ್ವ ವಿಧಿತವಾಗಿದೆ. ಇಲ್ಲಿನ ಬ್ರಹ್ಮಗಿರಿ ಮತ್ತು ಜಟಿಂಗರಾಮೇಶ್ವರದಲ್ಲಿ ದೊರೆತ ಅವನ ಶಾಸನಗಳು ಈ ಕುರಿತು ಬೆಳಕು ಚೆಲ್ಲುತ್ತವೆ. ಶಾಸನದಲ್ಲಿ ಉಲ್ಲೇಖಿತ ಇಸಿಲಾ ಪಟ್ಟಣ ಹಾಗೂ ಈ ಭಾಗವನ್ನು ನೋಡಿಕೊಳ್ಳಲು ಅಶೋಕನು ಮಹಾಮಾತ್ರರನ್ನು ನೇಮಿಸಿದನೆಂದು ತಿಳಿದು ಬರುತ್ತದೆ. ಐತಿಹಾಸಿಕವಾಗಿ ಇದೊಂದು ಪ್ರಮುಖ ದಾಖಲೆಯಾಗಿದೆ. ಇಲ್ಲಿಂದ ಪ್ರಾಯಶಃ ಅಶೋಕನ ಕಾಲದ ಶಾಸನಗಳನ್ನು ನಾವು ಗಮನಿಸಿದಾಗ ಬನವಾಸಿ, ಸನ್ನತಿ, ಮಸ್ಕಿ, ಕೊಪ್ಪಳ ಉಡೆಗೊಳ್ಳ, ನಿಟ್ಟೂರು, ಸಿದ್ಧಾಪುರ ಹಾಗೂ ಬ್ರಹ್ಮಗಿರಿಗಳು ಆ ಕಾಲದಲ್ಲಿ ಪ್ರಮುಖ ಜನವಸತಿಗಳ ಕೇಂದ್ರಗಳಾಗಿದ್ದವು ಎಂದು ಹೇಳಬಹುದಾಗಿದೆ. ಇವುಗಳಲ್ಲಿ ದೊರೆತಿರುವ ಅಶೋಕನ ಕಿರುಬಂಡೆ ಶಾಸನಗಳು ಅವನ ಧರ್ಮ ಪ್ರಚಾರದ ಬಗ್ಗೆ ಅತ್ಯಂತ ವಿವರವಾಗಿ ತಿಳಿಸುತ್ತದೆ. ಬನವಾಸಿಯು ಹಲವಾರು ಬೌದ್ಧಕೃತಿಗಳಲ್ಲಿಯೂ ಉಲ್ಲೇಖಗೊಂಡಿದೆ. ಆದರೆ ಇದು ಬಹುಶಃ ಧಾರ್ಮಿಕ ಸಂಘಟನೆಯ ಕೇಂದ್ರವಾಗಿತ್ತೆಂದು ತೋರುತ್ತದೆ.

ಆರ್ಥಿಕತೆಯ ಸೃಷ್ಠಿಯಲ್ಲಿ ಕರ್ನಾಟಕ ಮತ್ತು ಆಂಧ್ರ ಪ್ರದೇಶಗಳಲ್ಲಿ ಇದುವರೆಗೆ ದೊರಕಿರುವ ಅಶೋಕನ ಶಾಸನಗಳಲ್ಲಿ ಕಂಡು ಬಂದಿರುವ ಸ್ಥಳನಾಮಗಳು ಎರಡು: ಸುವರ್ಣಗಿರಿ ಮತ್ತು ಇಸಿಲ. ಇಸಿಲವು ಸುವರ್ಣಗಿರಿಗೆ ಸೇರಿದ ಜಿಲ್ಲೆಗಳಲ್ಲೊಂದಾಗಿದ್ದಿತೆಂಬ ಅಭಿಪ್ರಾಯವಿದೆ. ಸುವರ್ಣಗಿರಿ ಅಥವಾ ಸುವಂನಗಿರಿಯು ಕೆಲವು ವಿದ್ವಾಂಸರ ಪ್ರಕಾರ ಅಶೋಕನ ಶಾಸನಗಳು ದೊರೆತ ರಾಯಚೂರು ಜಿಲ್ಲೆಯ ಮಸ್ಕಿ ಪರಿಸರ. ಚರಿತ್ರಕಾರ ಯಾಜ್‌ದಾನಿ ಅವರ ನಿಲುವು ಸಹ ಇದೆ. ಇದಕ್ಕೆ ಕಾರಣ, ಈ ಪ್ರದೇಶದಲ್ಲಿ ಕಂಡುಬದಿರುವ ಚಿನ್ನದ ಗಣಿ ಅವಶೇಷಗಳು. ಈ ಪ್ರದೇಶದಲ್ಲಿ ಖನಿಜ ಪರಿವೀಕ್ಷಣೆ ನಡೆಸಿದ ಭೂಶಾಸ್ತ್ರಜ್ಞ ಲಿಯೋನಾರ್ಡ್ ಮನ್ ಅವರು ಇಲ್ಲಿ ಸುವರ್ಣನಗರ ಇದ್ದಿರಬೇಕೆಂದು ತರ್ಕಿಸಿದ್ದಾರೆ. ಅವರು ತಮ್ಮ ವಾದವನ್ನು ಸಮರ್ಥಿಸಿಕೊಂಡಿದ್ದು, ತಾನೇ ಗುರುತಿಸಿದ ಚಿನ್ನದ ಅದಿರನ್ನು ಕುಟ್ಟಿ ಪುಡಿಯಾಗಿಸಲು ಅಂದಿನ ಜನರು ಬಳಸುತ್ತಿದ್ದ ಕಲ್ಲುಗುಂಡುಗಳಿಂದ. ಮಸ್ಕಿ ನಿವೇಶನಕ್ಕೆ ಸ್ವಲ್ಪ ದೂರದಲ್ಲಿ ಪ್ರಾಚೀನ ಚಿನ್ನದ ಗಣಿಗಳಿವೆ. ಈ ಎಲ್ಲಾ ಸಾಕ್ಷ್ಯಗಳು ಒತ್ತು ನೀಡಿದುದು ಮೌರ್ಯರ ಕಾಲದಲ್ಲಿ ಗೋದಾವರಿಯ ದಕ್ಷಿಣಕ್ಕಿರುವ ಪ್ರದೇಶಗಳಲ್ಲಿ ಚಿನ್ನದ ಗಣಿಗಾರಿಕೆ ವಿಶೇಷವಾಗಿ ನಡೆದಿದ್ದಿತೆಂಬುದಕ್ಕೆ ಜೆ.ಎಚ್.ಮಾರ್ಷಿಲ್ ಅವರು, ಸಿಂಧೂಕೊಳ್ಳದ ಭೂ ಶೋಧದಲ್ಲಿ ದೊರೆತ ಚಿನ್ನ ದಕ್ಷಿಣಾಪಥದಿಂದ, ಅಂದರೆ ಪ್ರಾಯಶಃ ಹಟ್ಟಿ ಚಿನ್ನದ ಗಣಿಗಳಿಂದ ಹೋದ ಚಿನ್ನವೇ ಆಗಿದ್ದಿರಬೇಕೆಂದಿದ್ದಾರೆ.[೨೦]

ಇಸಿಲ ನಗರ ಮೌರ್ಯರ ಕಾಲದ ಪ್ರಮುಖ ಪಟ್ಟಣ ಹಾಗೂ ಧಾರ್ಮಿಕ ಕೇಂದ್ರವಾಗಿತ್ತು ಎಂಬುದಾಗಿ ಆ. ಸುಂದರ ಅವರು ಸ್ಪಷ್ಟಪಡಿಸಿದ್ದಾರೆ. ಇಸಿಲಾ ಎಂಬ ಹೆಸರಿನ ಊರಿನ ಉಲ್ಲೇಖವಿದೆ. ಈ ಊರು ಒಂದು ನಗರವೇ ಆಗಿದ್ದಿರಬೇಕು. ಏಕೆಂದರೆ ಇಲ್ಲಿ ಅಶೋಕನ ಮಂತ್ರಿಗಳಾದ 'ಮಹಾಮಾತ್ರ'ರ ಈ ಭಾಗದ ಆಡಳಿತದ ಕಾರ್ಯಕ್ಷೇತ್ರವಾಗಿತ್ತು.

ಉತ್ತರ ಭಾರತದಲ್ಲಿ ಪ್ರ.ಶ.ಪೂ. ೬-೩ನೇ ಶತಮಾನಗಳ ಸಮಯದಲ್ಲಾಗಲೆ ದೊಡ್ಡ ದೊಡ್ಡ ಪಟ್ಟಣಗಳು, ರಾಜ್ಯಗಳು ಇದ್ದವು. ಬೌದ್ಧ, ಜೈನ ಗ್ರಂಥಗಳಲ್ಲಿ ೧೬ ಮಹಾಜನಪದಗಳ ವರ್ಣನೆಯಿದೆ. ಅಂಗ, ಮಗಧ, ಕಾಶಿ, ಕೌಶಾಂಬಿ, ಕೋಸಲ, ವಜ್ಜಿ, ಮಲ್ಲ, ಚೇದಿ ವಂಶ, ಕುರು, ಪಾಂಚಾಲ, ಮತ್ಸ್ಯ, ಶೂರಸೇನ, ಅಸ್ಸರ, ಆವಂತಿ, ಗಾಂಧಾರ ಮತ್ತು ಕಾಂಭೋಜ – ಇವೇ ೧೬ ಮಹಾಜನಪದಗಳು. ಹಾಗೆಯೇ ದಕ್ಷಿಣ ಭಾರತದ ತಮಿಳುನಾಡು, ಕೇರಳ ಭಾಗಗಳಲ್ಲಿ ಸುಮಾರು ಪ್ರ.ಶ.ಪೂ. ೩–೧ನೇ ಶತಮಾನದ ಹೊತ್ತಿಗೆ ಕೆಲವು ಪಟ್ಟಣಗಳಿದ್ದವೆಂದು ತಮಿಳು ಭಾಷೆಯ ಅತ್ಯಂತ ಪ್ರಾಚೀನ ಗ್ರಂಥವಾದ 'ಸಂಗಮ್' ಗ್ರಂಥದಲ್ಲಿದೆ. ಆದರೆ ಆ ಕಾಲದ ನಮ್ಮ ಕನ್ನಡ ನಾಡಿನ ಬಗ್ಗೆ ಯಾವುದೇ ಉಲ್ಲೇಖಗಳಿರಲಿಲ್ಲ; ಇದರ ಬಗ್ಗೆ ಬೇರಾವ ಐತಿಹಾಸಿಕ ಆಧಾರಗಳು ದೊರೆತಿರಲಿಲ್ಲ. ದಂತಕಥೆಗಳಷ್ಟೇ ಪ್ರಚಲಿತವಾಗಿದ್ದವು. ಹೀಗಾಗಿ ಕನ್ನಡ ನಾಡಿನ ಬಗ್ಗೆ ಹೆಚ್ಚಿನ ಚರಿತ್ರೆ ಇಲ್ಲವೆನಿಸುತ್ತಿತ್ತು ಅಥವಾ ತಮಿಳುನಾಡಿನಷ್ಟು ಪ್ರಾಚೀನ ಇತಿಹಾಸವೇ ಇಲ್ಲವೆನ್ನುವಂತಿತ್ತು. ಪ್ರ.ಶ. ೧ನೇ ಶತಮಾನದ ಅನಾಮಧೇಯನ 'ಪೆರಿಪ್ಲಸ್ ಆಫ್ ಎರಿಥ್ರಿಯನ್ ಸಿ' ಮತ್ತು ಟಾಲೆಮಿಯ ೨ನೇ ಶತಮಾನದ ಗ್ರಂಥಗಳಲ್ಲಿ ಕನ್ನಡ ನಾಡಿನ ಅಂದಿನ ವ್ಯಾಪಾರ ಕೇಂದ್ರಗಳಾಗಿದ್ದ ಬಾದಾಮಿ (ಬಾಗಲಕೋಟೆ ಜಿಲ್ಲೆ) ಇಂಡಿ (ಬಿಜಾಪುರ ಜಿಲ್ಲೆ), ಕಾರವಾರ, ಹೊನ್ನಾವರ, ಚಂದ್ರವಳ್ಳಿ, ಇಸಿಲಾ, ಉದ್ಯಾವರ ಮುಂತಾದ ಅಲ್ಲೊಂದು, ಇಲ್ಲೊಂದು ಸ್ಥಳಗಳ ಉಲ್ಲೇಖವಿದೆ. ರಾಜಕೀಯ ಚರಿತ್ರೆಯಲ್ಲಂತೂ ೪ನೇ ಶತಮಾನದ ಬನವಾಸಿ ಕದಂಬರಿಂದಲೇ ಆರಂಭ. ಇಂಥ ನಿರಾಶಾದಾಯಕವಾದ ಪರಿಸ್ಥಿತಿಯಲ್ಲಿ ಪ್ರ.ಶ.ಪೂ.೩ನೇ ಶತಮಾನದಲ್ಲಿ ಆಡಳಿತ ಕೇಂದ್ರವಾಗಿದ್ದ ಒಂದು ನಗರ ಇದ್ದ ಬಗ್ಗೆ ಮತ್ತು ಅದು ಮಗಧ ಸಾಮ್ರಾಜ್ಯಕ್ಕೆ ಸೇರಿದ್ದರ ವಿಷಯ ಉಲ್ಲೇಖ. ದೊರೆತದ್ದು ನಿಜವಾಗಿಯೂ ಒಂದು ಮಹತ್ವದ ಹಾಗೂ ಹೆಮ್ಮೆ ಪಡುವಂತಹ ವಿಷಯ. ಅಲ್ಲದೆ ಕನ್ನಡ ನಾಡಿನ ಪ್ರಾಚೀನ ರಾಜಕೀಯ ಚರಿತ್ರೆಯಲ್ಲಿ ಇದು ಒಂದು ನಿರ್ಣಾಯಕ ಘಟ್ಟವಾಯಿತು. ಅದು ಸರಿ, ೨೩೦೦ ವರ್ಷಗಳ ಹಿಂದೆ ಇದ್ದ ನಗರದ ಉಲ್ಲೇಖವೇನೊ ದೊರೆಯಿತು. ಅಷ್ಟಕ್ಕೆ ಆಗಿನ ಜನರ ನಗರ ಜೀವನ ತಿಳಿಯದ ಹಾಗಾಯಿತೆ? ಆ ನಗರ ಎಲ್ಲಿತ್ತು? ಹೇಗಿತ್ತು? ಆ ನಗರವು ನಮ್ಮ ನಾಡಿನ ನಾಗರೀಕತೆಯ ಬೆಳವಣಿಗೆಯ ಯಾವ ಹಂತದಲ್ಲಿತ್ತು? ಹೀಗೆ ವಿಚಾರ ಮಾಡುತ್ತಾ ಆ ನಗರದ ಕುರುಹುಗಳನ್ನು ಬ್ರಹ್ಮಗಿರಿ ಬಳಿಯಲ್ಲಿ ಸಿಗಬಹುದೇನೋ ಎಂಬ ಆಶಯದಿಂದ ಎಂ.ಎಚ್. ಕೃಷ್ಣರವರು ಶೋಧನೆ ಕಾರ್ಯ ಆರಂಭಿಸಿ ಬೆಟ್ಟದಿಂದ ಸ್ವಲ್ಪ ಕಡಿಮೆ ಅರ್ಧ ಚಂದ್ರಾಕಾರದ ಹಾಗೆ ವಿಸ್ತಾರವಾಗಿದ್ದ ಇಸಿಲ ಪಟ್ಟಣವಿದ್ದ ನೆಲೆ ಚಿನ್ನ–ಹಗರಿ ನದಿಯ ದಂಡೆಯ ಮೇಲೆ ಇದ್ದುದನ್ನು ಗುರುತಿಸಿದರು. ಇಲ್ಲಿ ಒಟ್ಟು ೧೬ ಗುಂಡಿಗಳನ್ನು ಪುರಾತತ್ವದ ವಿಧಾನದಿಂದ ತೋಡಿದರು. ಒಟ್ಟು ೫ ಪದರಗಳು ಇಲ್ಲಿ ದೊರೆತಿದ್ದು ಕಪ್ಪು–ಕೆಂಪು, ಪೂರ್ಣಕಪ್ಪು, ಕೆಂಪು ಬಣ್ಣದ ಮಣ್ಣಿನ ಪಾತ್ರೆಗಳು, ಕಬ್ಬಿಣದ ಸಾಮಾನುಗಳು ದೊರೆತವು.[೨೧]

ಪ್ರಾಚೀನ ಕಾಲದ ಮಾನವನಿಗೆ ಮಣ್ಣಿನಿಂದ ಮಾಡಿದ ಮಡಿಕೆ–ಕುಡಿಕೆಗಳಿಂದ ಅವನ ಆರಂಭಿಕ ಜೀವನದ ಸಾಂಸ್ಕೃತಿಕ ಅಂಶಗಳನ್ನು ಹಾಗೂ ಆರ್ಥಿಕ ಅಂಶಗಳನ್ನು ತಿಳಿಯಬಹುದು. ಆದರೆ ಕಬ್ಬಿಣದ ಲೋಹದ ಬಳಕೆಯು ಒಂದು ಹೊಸ ಮೈಲುಗಲ್ಲು ಆಗಿದೆ.[೨೨]

ಇಸಿಲಾ ಪಟ್ಟಣದಲ್ಲಿ ಕಬ್ಬಿಣದ ಬಳಕೆಯ ಸಮಾಜದಲ್ಲಿ ಕಬ್ಬಿಣ ಪ್ರವೇಶಿಸುವವರೆಗೆ, ಇನ್ನೂ ಹೇಳಬೇಕೆಂದರೆ ಕಬ್ಬಿಣದ ಸಾಮಾನುಗಳು, ಉಕ್ಕಿನ ಮೊನೆಗಳುಳ್ಳ ಉಪಕರಣಗಳು ತಯಾರು ಮಾಡುವ

ಲೋಹ ಕೈಗಾರಿಕೆ ಅಭಿವೃದ್ಧಿ ಹೊಂದುವವರೆಗೆ ಈ ಜನವಸತಿಗಳು ಅದಕ್ಕೂ ಹೆಚ್ಚಾಗಿ ವಿಸ್ತರಿಸುವುದಕ್ಕೆ ಅವಕಾಶವಿಲ್ಲ. ಕಬ್ಬಿಣ ತಾಮ್ರಕ್ಕಿಂತಲೂ ಅಗ್ಗ ಆದ್ದರಿಂದ ಜನರು ಕಂಚಿನ ಉಪಕರಣಗಳನ್ನು ಕಲ್ಲಿನ ಕೊಡಲಿಗಳನ್ನು ಬಿಟ್ಟು ಕಬ್ಬಿಣವನ್ನು ಸ್ವೀಕರಿಸಿರುವುದಕ್ಕೆ ಅವಕಾಶವಿದೆ. ಅಷ್ಟೇ ಅಲ್ಲದೆ, ಕಬ್ಬಿಣ ಕೈಯಲ್ಲಿದ್ದರೆ ಇತರೆ ಉಪಕರಣಗಳನ್ನು (ಉದಾಹರಣೆಗೆ ಬಾಣಗಳಿಗೆ ಮೊಳೆ ತುಣುಕುಗಳನ್ನು) ಕೂಡ ಮತ್ತಷ್ಟು ಸುಲಭವಾಗಿ ಮಾಡಬಹುದು. ಅದಕ್ಕೆ ಕಬ್ಬಿಣ ಅದಿರು ಪ್ರವೇಶ ಮಾಡಿದ ನಂತರದ ಕಾಲಕ್ಕೆ ಸೇರಿದ ಪುರಾತತ್ವ ಉತ್ಖನನಗಳಲ್ಲಿ ಅದರ ಪ್ರಭಾವ ಸ್ಪಷ್ಟವಾಗಿ ಕಾಣಿಸುತ್ತದೆ.[೨೩] ಕಬ್ಬಿಣ ಅದಿರು ಪ್ರವೇಶ ಮಾಡಿದ್ದು ಯಾವಾಗ? ಈ ಕಾಲವನ್ನು ಪುರಾತತ್ವಶಾಸ್ತ್ರಜ್ಞರು ಸ್ವಲ್ಪಸ್ವಲ್ಪವೇ ಹಿಂದಕ್ಕೆ ತಳ್ಳುತ್ತಿದ್ದಾರೆ. ಪ್ರಸ್ತುತ ಲಭಿಸುತ್ತಿರುವ ಆಧಾರಗಳನ್ನು ಗಮನಿಸಿ, ಗಂಗಾ ಕಣಿವೆಯ ಕಬ್ಬಿಣ ಕ್ರಿ.ಪೂ. ೧೦೦೦ರಲ್ಲಿ ಪ್ರವೇಶಿಸಿದೆಯೆಂದು ಹೇಳಬಹುದು. ಅಂದರೆ ಕ್ರಿ.ಪೂ.೧೦೦೦–೫೫೦ರ ಕಾಲಕ್ಕೆ ಸೇರಿದ ರಂಗು ಬಳಿದ ಹೊಗೆ ಬಣ್ಣ (ಪೆಯಿಂಟೆಡ್ ಗ್ರೇಪೀರ್–ಪಿ.ಜಿ.ಡಬ್ಲು) ಸಂಸ್ಕೃತಿಯ ಆರಂಭದ ದಿನಗಳಲ್ಲಿ ಕಬ್ಬಿಣ ಪ್ರವೇಶಿದೆಯೆಂದಾಯಿತು. ಪುರಾತತ್ವ ಆಧಾರಗಳಿಗೂ ಸಾಹಿತ್ಯಿಕ ಮೂಲಾಧಾರಗಳಿಗೂ ನಡುವೆ ಹೊಂದಾಣಿಕೆ ಸರಿಯಾಗಿ ಆಗುತ್ತಿಲ್ಲ. ಆದರೆ ಪಿ.ಜಿ.ಡಬ್ಲು.ಅವರ ಸಂಸ್ಕೃತಿ "ಆರ್ಯರ" ಹಂತವನ್ನು ಪ್ರತಿಬಿಂಬಿಸುತ್ತಿದೆಯೆಂಬ ಮಾತು ಮಾತ್ರ ಖಾಯಂ. ವೇದಗಳ ಕೊನೆಯ ಕಾಲದ ಭಾಗಗಳಲ್ಲಿ ಕಬ್ಬಿಣದ ಕುರಿತು ಪ್ರಸ್ತಾವನೆಗಳಿವೆ. ಅಥರ್ವಣ ವೇದದಲ್ಲಿ ಕಬ್ಬಿಣದ ಪ್ರಸ್ತಾಪವಿದ್ದು, ಕಬ್ಬಿಣದ ಉಪಯೋಗದಿಂದ ಬೃಹತ್ ಪ್ರಮಾಣದ ಕಾಡುಗಳನ್ನು ಕಡಿದು ವ್ಯಾಪಕ ಜನವಸತಿಗಳನ್ನು ಹಾಗೂ ಕೃಷಿ ಕ್ಷೇತ್ರದಲ್ಲಿ ಹೊಸ ಪಲ್ಲಟವನ್ನು ಪ್ರಾಚೀನ ಕಾಲದ ಮಾನವರು ಮಾಡಿದ್ದಾರೆ ಎಂಬುವುದು ಸ್ಪಷ್ಟ. ಮುಖ್ಯವಾದ ಅಂಶ ಎಂದರೆ ಕಬ್ಬಿಣ ಅಂದಿನಕಾಲದ ಕೈಗಾರಿಕಾ ವಲಯವನ್ನು ಸ್ಥಾಪಿಸಿ ಹೊಸ ಲೋಹದ ಆವಿಷ್ಕಾರದಿಂದಾಗಿ ಜನವಸತಿ ನೆಲೆಸಿ ವ್ಯವಸಾಯ–ವ್ಯಾಪಾರಕ್ಕೆ ನಾಂದಿಯಾಡಿದ ಮೊದಲ ಕಾಲಘಟ್ಟ ಎಂಬುವುದು ಇದರ ಅರ್ಥ. ಕೃಷಿಗಾಗಿ ಕಾಡುಗಳನ್ನು ಕಡಿಯುವುದು ಒಂದು ದಿನದಲ್ಲಿ ಮುಗಿಯಲಿಲ್ಲ. ಬಹಳ ಕಾಲ ಮುಂದುವರಿಯಿತು. ಇದು ಪ್ರಸ್ತುತವನ್ನು ಹೊರತುಪಡಿಸಿಲ್ಲ. ಕ್ರಿ.ಪೂ. ಮೊದಲನೇ ಸಹಸ್ರಮಾನದ ಮಧ್ಯಕಾಲಕೆಲ್ಲಾ ಇದರ ಫಲಿತವಾಗಿ ವಿಶೇಷ ಸಾಮಾಜಿಕ ರಚನೆ ಉಂಟಾಯಿತು. ಪಂಗಡಗಳ ಒಳಗೇ ಸ್ಪಷ್ಟವಾದ ರೈತಾಪಿ ವರ್ಗಗಳು ಏರ್ಪಟ್ಟವು. ಜಮೀನ್ದಾರಿ ಯಜಮಾನರ ಹತ್ತಿರ ಕೆಲಸ ಮಾಡುವ ಗುಲಾಮರು, ಅರೆಗುಲಾಮರು ರೈತರೊಂದಿಗೆ ಸೇರುತ್ತಿದ್ದರು. ಬೇಟೆಯಾಡಿ ಜೀವಿಸುವ ಗುಂಪುಗಳಿಗೆ ಬಹಳ ಪ್ರಾಮುಖ್ಯತೆ ಏರ್ಪಟ್ಟಿತು. 'ಮಹಾಜನಪದ'ಗಳಲ್ಲಿ ರಾಜಕೀಯವಾಗಿ ಪರಸ್ಪರ ಭಿನ್ನವಾದ ಹೊಸಹೊಸ ರೂಪಗಳು ಪಡೆದುಕೊಳ್ಳುವುದಕ್ಕೆ ಈ ಸಂಕೀರ್ಣ ಸಾಮಾಜಿಕ ಪರಿಸ್ಥಿತಿಯೇ ಕಾರಣವೆಂದು ಹೇಳಬಹುದು. ಅದಾಗಲೆ ಬ್ರಾಹ್ಮಣ ಅರ್ಚಕರಿಗೆ, ಶಕ್ತಿವಂತರಾದ ಪ್ರಭುತ್ವದ ವರ್ಗಗಳಿಗೆ ವಿಶಾಲ ಭೂಭಾಗಗಳ ಮೇಲೆ ಅಧಿಕಾರ ಏರ್ಪಟ್ಟಿತು. ಈ ಪರಿಸ್ಥಿತಿಯಲ್ಲಿ ರಾಜನ ಅಧಿಕಾರ ಸೀಮಿತವಾಯಿತು. ತಪ್ಪಲಿಲ್ಲ. ರಾಜನಿಗೆ ಧಾನ್ಯದ ತೆರಿಗೆ ಲಭಿಸುವುದು ಜಮೀನ್ದಾರರಿಂದಾಗಲಿ, ಬ್ರಾಹ್ಮಣರಿಂದಾಗಲಿ ಅಲ್ಲ, ರೈತಾಪಿವರ್ಗವೇ ಧಾನ್ಯದ ತೆರಿಗೆಯನ್ನು ಅರ್ಪಿಸುತ್ತಿತ್ತು. ಅದಕ್ಕೆ ರಾಜನಿಗೆ ರೈತಾಪಿ ವರ್ಗದ ಮೇಲೆ ಆಧಾರ ಪಟ್ಟು ಬದುಕುವವನೆಂದು ಹೆಸರು ಬಂತು.[೨೪] ಹಾಗೆಯೇ ವ್ಯಾಪಾರಸ್ಥರು ಒಂದು ಪ್ರದೇಶದಲ್ಲಿ ವ್ಯವಹಾರ ಮಾಡಬೇಕೆಂದರೆ ಸ್ಥಳೀಯ ರಾಜನಿಗೆ ತೆರಿಗೆ ನೀಡಬೇಕಿತ್ತು. ಅದು ಅಂದಿನ ಕಾಲದ ವಿನಿಮಯ ಪದ್ಧತಿಯ ರೂಪದಲ್ಲಿ ಧಾನ್ಯ ಇನ್ನಿತರೆ

ವಸ್ತುಗಳನ್ನು ನೀಡುವುದು ಅನಿವಾರ್ಯವಾಗಿತ್ತು. ಇದು ಬಹುಮಟ್ಟಿಗೆ ಮೌರ್ಯರ ಪೂರ್ವ ಹಾಗೂ ಮೌರ್ಯರ ಕಾಲಕ್ಕೆ ಹೆಚ್ಚು ಪ್ರಚಲಿತವಿತ್ತು.

ದಕ್ಷಿಣ ಭಾರತದಲ್ಲಿ ಕೃಷಿ ಪ್ರಧಾನವಾಗಿ ಬೆಳೆದಂತೆಲ್ಲ ಮೌರ್ಯರ ಕಾಲದಲ್ಲಿ ವ್ಯಾಪಾರವು ಅತೀ ಶೀಘ್ರಗತಿಯಲ್ಲಿ ಬೆಳೆಯಲಾರಂಭಿಸಿತು. ಕ್ರಿ.ಪೂ. ಎರಡನೇ ಸಹಸ್ರಮಾನದಲ್ಲಿ ಹೊಸ ಶಿಲಾಯುಗ ಸಂಸ್ಕೃತಿಯಲ್ಲಿ ನೇಗಿಲು ಪ್ರವೇಶಿಸಿತು. ರಾಗಿ (ಎರಡು ಬಗೆ) ಗೋಧಿ, ಹುರುಳಿ, ಹೆಸರು, ಮೊದಲಾದ ಬೆಳೆಗಳು ಕಾಣಿಸಿಕೊಂಡವು. ಕಬ್ಬಿಣವನ್ನು ಕಂಡುಕೊಂಡ ನಂತರ ಕ್ರಿ.ಪೂ.೧೦೦೦ದಲ್ಲಿ ಭತ್ತ, ಸಜ್ಜೆ ಬೆಳೆಗಳು ಆರಂಭವಾದವು. ಇದನ್ನು ಗಮನಿಸಿದರೆ ದಕ್ಷಿಣ ಭಾರತದಲ್ಲಿ ಹೊಸ ಶಿಲಾಯುಗದ ಕಾಲಕ್ಕೆ ರೈತಾಪಿವರ್ಗ ಹುಟ್ಟಿದೆಯೆಂದು ಅಂದುಕೊಳ್ಳಬಹುದು.[೨೫] ಅದೇ ರೀತಿಯಾಗಿ ಶಿಲಾಯುಗದ ಸಂಸ್ಕೃತಿಯಿಂದ ಆಧುನಿಕ ಸಂಸ್ಕೃತಿಗೆ ಒಳಗಾದ ಹಲವು ನೆಲೆಗಳು ಚಿತ್ರದುರ್ಗ ಪರಿಸರದಲ್ಲಿ ಕಂಡು ಬಂದಿದ್ದು, ಇಸಿಲಾ ಹೆಸರಿರುವ ಬ್ರಹ್ಮಗಿರಿ ಇಲ್ಲಿ ಅಶೋಕನ ಶಾಸನವಿದ್ದು ಆ ಶಾಸನದ ಪಾಠ ಈ ರೀತಿ ಇದೆ.

ಸುವಂಣಗಿರೀತೇ ಅಯಪುತಸ ಮಹಾಮಾತಾಣಂಚವಚನೇ ಇಸಿಲಸಿ ಮಹಾಮತಾ ಆಯೋಗಿಯಂ ವತವಿಯಾಹೆಮ ಚವತವಿಯಾ ದೇವಾಣಂಪಿಯೇ ಆಣಪಯತಿ

ಅಧಿಕಾನಿ ಅಢಾತಿಯಾನಿವ ಸಾನಿಯಹಕಂ..... ನೋತುಬೋಬಾಢಂ ಪಕಂತೇ ಹುಸಂಪಿಕಂಸವಛರಂಸಾಲಿರೇಕೇ ತುಖೋಸಂ ವಛರೇಂ

ಯಂ ಮಯಾ ಸಂಘೇ ಉಪಯಿತೇ ಭಾಢಂ ಚಮೇ ಪಕಂತೇ ಇಮಿನಾ ಚುಕಾಲೇನ ಅಮಿಸಾ ಸಮನಾ ಮುನಿನಾ ಜಂಬುದೀಪಸಿ

ಮಿಸಾದೇವೇಹಿಪಕಮಸಹಿ ಇಯಂ ಫಲೇನೋಹೀಯಂ ಸಕ್ಯೇ ಮಹಾಪ್ತೇನೇವ ಪಾಪೋತವೇಕಾ ಮಂತು ಖೋಖುದಕೇನಪಿ.

ಪಕಮಿಣೇಣವಿಪುಲೇ ಸ್ವಗೇಸಕ್ಯೇ ಆರಾಧೇತವೇ ಏತಾಯತಾಯ ಇಯಂ ಸಾವಣೇ ಸಾವಾಪಿತೇ

...... ಮಹಾಪ್ತಚಇಮಂಪಕಮೆ ಆಅಂತಾಚ ಮೇಜಾನೇಯು ಚಿರಠಿತೀಕೇಚ ಇಯಂ.

ಪಕ.... ಇಯಂಚ ಅರೇವಢಿಸಿತಿವಿಪುಲಂಪಿಚ ವಡಿಸಿ ಅವರಧಿಯಾ ದಿಯಢಿಯಂ.

ವಡಿಸಿತಿ ಇಯಂಚಸಾವಣೇ ಸಾವಾಪಿತೇವ್ಯೂಥೇನ ೨೫೬ ಸೇಹೇವಂ ದೇವಾಣಂ ಪಿಯೆ

ಹಮಾತಾಪಿತಿಸುಸುಸೂಸಿತವಿಯೆಹೇ ಮೇವಗರು ತ್ಪಾಂಪ್ರಾಣೇಸುವ್ರುಭ್ಯಿತ ವ್ಯಂಸಚಂ.

ವತವಿಯಂಸೇಇಮೇಧಂಮಗುಣಾಪವತಿತವಿಯಾಹೇ ಮೇವಅಂತೇ ವಾಸಿನಾ.

ಆಚರಿಯೇ ಅಪಚಾಯಿತವಿತವಿಯೇ ಞಾತಿಕೇ ಸುಚಕ. ಯರಹಂ ಪವತಿತವಿಯೇ

ಏಸಾಪೋರಾಣಾಪಕಿತೀದೀ ಘಾವುಸೇಚ ಏಸಹೇವಂ ಏಸಕಟಿವಿಯೇ

ಚಪಡೇನಲಿಖಿತೇಲಿಪಿಕರೇಣ.[೨೬]

ಈ ಶಾಸನದ ಸಾರಾಂಶದಲ್ಲಿ ದೇವನಾಂ ಪ್ರಿಯದರ್ಶಿಯು (ಅಶೋಕನು) ಬೌದ್ಧ ಧರ್ಮದ ಉಪಾಸಕನಾಗಿ ಎರಡು ವರ್ಷಗಳಿಗಿಂತ ಹೆಚ್ಚಾಯಿತು. ಸಂಘದಲ್ಲಿ ವಿಶೇಷ ಆಸಕ್ತಿಯುಳ್ಳವನಾದನು. ಜಂಬೂ ದ್ವೀಪದಲ್ಲಿರುವ ಅವನ ಪ್ರಜೆಗಳು ಮೊದಲು ಅಂಧಃ ಶ್ರದ್ಧೆಯಿಂದ ಕೆಳಮಟ್ಟದಲ್ಲಿದ್ದರು. ಅವನ ಧರ್ಮ ಪ್ರಸಾರದ ಪ್ರಯತ್ನದ ಫಲದಿಂದ ಅವರು ಗುಣವಂತರಾಗಿ ಉತ್ತಮರಾಗಿದ್ದಾರೆ. ಈ

ರೀತಿ. ಹೇಳುತ್ತಾ ಸಮಾಜದಲ್ಲಿ ಬಡವ ಶ್ರೀಮಂತ ಎಂಬ ಬೇಧಭಾವ ಇಲ್ಲದೇ ಸರಿಸಮಾನರಾಗಿ ಬಾಳಬಹುದು ಎಂದು ಹೇಳಿದ್ದಾನೆ.

ಮುಖ್ಯವಾಗಿ ಸಾಮಾನ್ಯ ಜನ ಹಾಗೂ ಶ್ರೀಮಂತ ಎಂಬ ಅಂಶದಿಂದ ಸಾಮಾಜಿಕ ಅಂತಸ್ಥಿನ ಹಂತವನ್ನು ಗಮನದಲ್ಲಿ ಇಟ್ಟುಕೊಂಡು ಶ್ರೀಮಂತ ಎಂಬ ಭಾವನೆ ಆರ್ಥಿಕವಾಗಿ ಪ್ರಬಲವಾದವರು ಎಂಬ ಅರ್ಥದಲ್ಲಿ, ಅವರು ವ್ಯಾಪಾರಿ ಸಮುದಾಯದವರು ಆಗಿದ್ದರು ಎಂಬುವುದು ಗಮನಿಸಬಹುದು. ಬೌದ್ಧರಲ್ಲಿ ವ್ಯಾಪಾರಿ ವರ್ಗಗಳು ಹುಟ್ಟಿ ಬೆಳೆದಿರುವ ಬಗ್ಗೆ ನಮಗೆ ತಿಳಿದಿದೆ. ಬಹುಶಃ ಈ ಕಾರಣದಿಂದಲೇ ಬನವಾಸಿ ವ್ಯಾಪಾರದ ಕೇಂದ್ರವು ಆಗಿತ್ತೆಂದು ತೋರುತ್ತದೆ. ಬನವಾಸಿಯ ವಣಿಕ ಭೂತಪಾಲ ಶ್ರೇಷ್ಟಿಯು ಮಹಾರಾಷ್ಟ್ರದ ಕಾರ್ತಿಯ ಬೌದ್ಧಾಲಯವನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ.[೨೭] ಈ ಎಲ್ಲಾ ಕಾರಣಗಳು ಮೌರ್ಯರ ಅವಧಿಯಲ್ಲಿ ವ್ಯಾಪಾರಭಿವೃದ್ಧಿಗೆ ಪೂರಕವಾದಂತಹ ಸನ್ನಿವೇಶಗಳಿದ್ದಿರುವುದನ್ನು ಸ್ಪಷ್ಟಪಡಿಸುತ್ತದೆ.

ಸನ್ನತಿ ಅಶೋಕನ ಕಾಲದಿಂದಲೂ ಪ್ರಮುಖ ಧಾರ್ಮಿಕ ನೆಲೆಯಾಗಿದ್ದಿತು ಎನ್ನುವುದು ಇತ್ತೀಚಿನ ಸಂಶೋಧನೆಗಳಿಂದ ತಿಳಿದುಬರುತ್ತದೆ. ಸನ್ನತಿಯಲ್ಲಿ ದೊರೆತಿರುವ ಅಶೋಕನ ಶಾಸನ ಹಾಗೂ ಅಶೋಕ ಮತ್ತು ಅವನ ಪತ್ನಿಯರ ಶಿಲ್ಪಗಳು, ವಿಶಾಲವಾದ ಬೌದ್ಧ ಸ್ತೂಪ ಮೌರ್ಯರ ಕಾಲದ ಕಲಾ ಚಟುವಟಿಕೆಗಳಿಗೆ ಕೈಗನ್ನಡಿಯಾಗಿದೆ. ಆ ಕಾಲದಲ್ಲಿ ಸ್ತೂಪವನ್ನು ಅಶೋಕನೇ ನಿರ್ಮಿಸಿದನೆಂದು ಹೇಳಲು ಸಾಕಷ್ಟು ಬಲವಾದ ಕಾರಣಗಳು ದೊರೆಯುತ್ತವೆ.[೨೮] ಪ್ರಾಯಶಃ ಸನ್ನತಿಯ ಸ್ಥಳ ಆಯ ಕಟ್ಟಿನ ಸ್ಥಳವಾಗಿದ್ದು, ನದಿ ತೀರದಲ್ಲಿದೆ. ಇತ್ತ ಆಂಧ್ರ ಪ್ರದೇಶಕ್ಕೂ ಮತ್ತು ಬನವಾಸಿಗೂ ಮಧ್ಯ ಭಾಗದಲ್ಲಿ ಈ ನೆಲೆ ನಿಂತಿದೆ. ಮೌರ್ಯರ ಕಾಲದ ವ್ಯಾಪಾರ ನೆಲೆಗಳ ನಕ್ಷೆಯಲ್ಲಿ ಚಂದ್ರವಳ್ಳಿ, ಬ್ರಹ್ಮಗಿರಿಯೊಂದಿಗೆ ಬನವಾಸಿಯ ವ್ಯಾಪಾರ ಸಂಪರ್ಕ ಇರುವುದು ತಿಳಿದು ಬಂದಿದ್ದು, ಅಲ್ಲದೆ ಮಹಾರಾಷ್ಟ್ರದ ಬೌದ್ಧ ನೆಲೆಗಳಿಗೆ ನೇರ ಸಂಪರ್ಕ ಕಲ್ಪಿಸುತ್ತದೆ. ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಯ ಭೂಶೋಧನೆಯಂತೆ ಮೌರ್ಯರ ಕಾಲದಲ್ಲಿಯೇ ಸನ್ನತಿಯು ಒಂದು ಪ್ರಮುಖ ಧಾರ್ಮಿಕ ಕೇಂದ್ರವಾಗಿ ಬೆಳವಣಿಗೆಯನ್ನು ಹೊಂದಿತ್ತು ಮತ್ತು ವಾಣಿಜ್ಯಗಳಿಗೆ ಪೂರಕವಾದಂತಹ ಹಲವಾರು ದಾಖಲೆಗಳು ದೊರೆಯುತ್ತವೆ. ಶಾಸನಗಳು ಹಲವಾರು ವರ್ತಕರು ಮತ್ತು ಸಂಘಗಳ ಹೆಸರುಗಳನ್ನು ಉಲ್ಲೇಖಿಸುತ್ತವೆ. ಅವರುಗಳ ಕುರಿತಾದಂತಹ ಸ್ಮಾರಕ ಶಿಲೆಗಳು ಇಲ್ಲಿ ಕಂಡುಬರುತ್ತವೆ.[೨೯] ಈ ಸ್ಮಾರಕ ಶಿಲೆಗಳಲ್ಲಿ ಉಬ್ಬು ಕೆತ್ತನೆಯಲ್ಲಿ ಕೆತ್ತಲ್ಪಟ್ಟಿರುವ ಹಲವಾರು ವರ್ತಕರನ್ನು ಸ್ವತಂತ್ರವಾಗಿ ಮತ್ತು ಗುಂಪುಗಳಲ್ಲಿ ಭಾವ ಶಿಲ್ಪಗಳನ್ನಾಗಿ ಚಿತ್ರಸಲಾಗಿದೆ. ಶಿಲ್ಪಗಳಲ್ಲಿ ಮಲಗಿರುವ ಎತ್ತುಗಳು, ನೊಗಸಹಿತ ಚಕ್ಕಡಿ ಮತ್ತು ಹಲವಾರು ರಥಗಳ ನಿದರ್ಶನಗಳು ಕಂಡುಬರುತ್ತವೆ. ಇದರಿಂದ ಈ ಜನರೆಲ್ಲ ವ್ಯಾಪಾರ ವಹಿವಾಟುಗಳಲ್ಲಿ ಸ್ಥಳಕ್ಕೆ ಸಂಚರಿಸಲು ಎತ್ತಿನ ಗಾಡಿಗಳನ್ನು ಕುದುರೆಗಳಿಂದ ಎಳೆಯುವ ರಥಗಳನ್ನು ಹೊಂದಿದ್ದರು ಎಂದು ಈ ಶಿಲ್ಪಗಳು ಸೂಚಿಸುತ್ತವೆ. ವಿಶೇಷವೆಂದರೆ ಸತ್ತ ವರ್ತಕರ ಮತ್ತು ವರ್ತಕರ ಜೊತೆಯಲ್ಲಿ ಎತ್ತು ಬಂಡಿಗಳು, ಕುದುರೆ ರಥಗಳ ಉಬ್ಬು ಶಿಲ್ಪಗಳು ಕಂಡುಬರುತ್ತವೆ. ಪ್ರಾಯಶಃ ವರ್ತಕನಿಗೆ ಪ್ರಿಯವಾಗಿರುವಂತಹ ಎತ್ತು ಬಂಡಿಗಳನ್ನು ಶಿಲ್ಪ ರೂಪದಲ್ಲಿ ತೋರಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಸನ್ನತಿಯನ್ನು ಗಮನಿಸಿದಾಗ ಇತ್ತೀಚಿನ ಪುರಾತತ್ವ ಶೋಧನೆಗಳು ಈ ಸ್ಥಳದ ಪಾರಂಪರಿಕತೆಯನ್ನು ಹೆಚ್ಚು ಸ್ಪಷ್ಟವಾಗಿ ಬಿಂಬಿಸುತ್ತವೆ. ಇಲ್ಲಿನ ಸ್ಥಳ, ಅಂದರೆ ಸನ್ನತಿ ಪರಿಸರ ಆ

ಕಾಲದಲ್ಲಿ ಚಂದ್ರವಳ್ಳಿಯಂತೆ ಒಂದು ಪ್ರಮುಖ ವ್ಯಾಪಾರಿ ಕೇಂದ್ರವಾಗಿದ್ದಿತ್ತು ಎಂದು ಹೇಳಲು ಸಾಕಷ್ಟು ದಾಖಲೆಗಳು ದೊರೆಯುತ್ತವೆ.

ಈ ಮೇಲೆ ಚರ್ಚಿಸಿದ ಹಾಗೆ ಮೌರ್ಯರು ಈ ಭಾಗಕ್ಕೆ ಬಂದ ಮೇಲೆಯೇ ಸಾಮಾಜಿಕ ಮತ್ತು ಆರ್ಥಿಕ ರಂಗಗಳಲ್ಲಿ ಒಂದು ತೆರನಾದ ಪ್ರಗತಿ ಕಂಡುಬರಲು ಆರಂಭಿಸಿತ್ತು ಎಂದು ಹೇಳಬಹುದು. ಅಶೋಕನು ಈ ಭಾಗಕ್ಕೆ ಬರುವ ಮೊದಲೇ ಈ ಮನೆತನದ ಮೊದಲರಾಜ ಚಂದ್ರಗುಪ್ತನು ಜೈನ ಗುರುವಾಗಿದ್ದಂತಹ ಶೃತ ಕೇವತಿಯನ್ನು ಕರೆದುಕೊಂಡು ಕರ್ನಾಟಕದ ಶ್ರವಣಬೆಳಗೊಳದಲ್ಲಿ ಬಂದು ತಪಸ್ಸನ್ನು ಕೈಗೊಂಡು ಇಲ್ಲಿಯೇ ಸಲ್ಲೇಖನ ವ್ರತದಿಂದ ಪ್ರಾಣ ತ್ಯಾಗ ಮಾಡಿದನೆಂದು ಜೈನ ಸಾಹಿತ್ಯದಲ್ಲಿ ವಿವರಿಸಲಾಗಿದೆ. ಇದರಿಂದ ಬೌದ್ಧ ಧರ್ಮವು ಇಲ್ಲಿ ತನ್ನ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳುವ ಮೊದಲೇ ಜೈನ ಧರ್ಮ ಈ ಭಾಗಕ್ಕೆ ತಲುಪಿತ್ತು.[೩೦] ಅಲ್ಲದೆ ಜೈನ ಧರ್ಮವು ಹಲವಾರು ಒತ್ತಡಗಳ ಮಧ್ಯೆಯೂ ಬೌದ್ಧ ಧರ್ಮಕ್ಕೆ ಸರಿಸಾಟಿಯಾಗಿ ಜೈನಧರ್ಮವು ಬೆಳೆದಿತ್ತು ಎಂದು ಹೇಳಬಹುದು.

ವಿಶೇಷವಾಗಿ ಈ ಕಾಲದಲ್ಲಿಯೇ ಜೈನಧರ್ಮವು ಕ್ರಮೇಣವಾಗಿ ತನ್ನ ಪ್ರಭಾವವನ್ನು ಅಧಿಕವಾಗಿ ಬೆಳೆಸತೊಡಗಿತು. ಅಂದರೆ ಈ ಕಾಲದಲ್ಲಿ ಆಗಲೇ ವ್ಯಾಪಾರದ ಬಗ್ಗೆ ಒಂದು ಸ್ಪಷ್ಟ ಚಿತ್ರಣ ದೊರೆಯಿತು ಎಂದು ಹೇಳಬಹುದಾಗಿದೆ. ಅಂದರೆ ಜೈನರು ಮತ್ತು ಬೌದ್ಧರು ಧಾರ್ಮಿಕ ಕೆಲಸಗಳ ಜೊತೆ ಜೊತೆಯಲ್ಲಿಯೇ ವ್ಯಾಪಾರ ಕುರಿತಾದಂತೆ ಸಾಕಷ್ಟು ಒಲವು ಹೊಂದಿದ್ದರೆಂಬುದು ಕಂಡುಬರುತ್ತದೆ. ನಂತರದ ಕಾಲದಲ್ಲಿ ಸುಮಾರು ಆರನೇ ಶತಮಾನದ ನಂತರದಲ್ಲಿ ಜೈನ ಧರ್ಮವು ಹೆಚ್ಚು ಪ್ರಬಲವಾಗಿ, ಈ ಧರ್ಮಿಯರೇ ವ್ಯಾಪಾರ–ವಾಣಿಜ್ಯದಲ್ಲಿ ಹೆಚ್ಚು ಪ್ರಭಾವಲಿಗಳಾಗಿ ಬೆಳೆದಿರುವುದನ್ನು ಗಮನಿಸಬಹುದು. ಪ್ರಾಚೀನ ಕಾಲದಲ್ಲಿ ಬ್ರಾಹ್ಮಣ ಮತ್ತು ಜೈನರು ವ್ಯವಸಾಯ ಮಾಡಿದರೆ ಭೂಮಿಯ ಒಳಗಿನ ಹುಳಗಳು ಸತ್ತು, ಹೋಗಿ ನಮಗೆ ಪಾಪ ಪ್ರಾಪ್ತಿಯಾಗುತ್ತದೆ[೩೧] ಎಂಬುದನ್ನು 'ಪ್ರಾಚೀನ ಭಾರತದಲ್ಲಿ ಶೂದ್ರರು ಎಂಬ ಕೃತಿಯಲ್ಲಿ ಆರ್.ಎನ್.ಶರ್ಮ ಅವರು ಪ್ರಸ್ತಾಪಿಸಿರುವುದನ್ನು ಗಮನಿಸಬಹುದು. ಈ ದೆಸೆಯಲ್ಲಿ ಜೈನ ಮತ್ತು ಬೌದ್ಧ ಧರ್ಮೀಯರು ಪ್ರಾಚೀನ ಕಾಲದ ಆರಂಭಿಕ ವರ್ತಕರಾಗಿದ್ದರು. ಆ ನಂತರದ ಕಾಲದಲ್ಲಿ ವೀರಶೈವ ಧರ್ಮಕ್ಕೆ ಸೇರಿದವರು ಶೆಟ್ಟಿ, ಬಣಜಿಗ ಎಂಬೆಲ್ಲ ಹೆಸರುಗಳುಳ್ಳ ಸಮುದಾಯದ ವರ್ತಕರಾಗಿದ್ದು ಕಂಡುಬರುತ್ತದೆ. ಈ ಕುರಿತಾಗಿ ಮುಂದೆ ಚರ್ಚಿಸಲಾಗುವುದು.

ಈ ಮೇಲೆ ಚರ್ಚಿಸಿದ ಮೌರ್ಯರ ಕಾಲ ಕರ್ನಾಟಕದ ಸರ್ವತೋಮುಖ ಅಭಿವೃದ್ಧಿಗೆ ಕಾರಣವಾಯಿತೆಂದು ಸ್ಪಷ್ಟವಾಗಿ ಹೇಳಬಹುದು. ಮೌರ್ಯರ ಕಾಲ ರಾಜಕೀಯ ಸ್ಥಿರತೆಯ ಜೊತೆಯಲ್ಲಿ ಧಾರ್ಮಿಕ ಸಂವೇದನೆಗಳನ್ನು ಬೆಳೆಸುತ್ತ, ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಹೊಸ ಆಯಾಮವನ್ನು ಸೃಷ್ಟಿಸಿತು. ಮೌರ್ಯರು ವಿದೇಶಗಳೊಡನೆ ರಾಜಕೀಯ ಸಂಬಂಧಗಳು ಹಾಗೂ ಸಾಂಸ್ಕೃತಿಕ ಕೊಡುಕೊಳ್ಳುವಿಕೆಯಲ್ಲಿ ಪ್ರಗತಿಯನ್ನು ಕಂಡಿದ್ದರು.

ಗ್ರೀಕ್, ಪರ್ಷಿಯಾ, ಬ್ಯಾಕ್ಟ್ರಿಯಾ, ಟರ್ಕಿ ಮೊದಲಾದ ದೇಶಗಳೊಡನೆ ವ್ಯಾಪಾರ ಸಂಬಂಧಗಳು ಈ ಕಾಲದಲ್ಲಿ ತೀವ್ರಗೊಂಡವು.[೩೨] ಅಲೆಗ್ಸಾಂಡರನ ನಂತರದಲ್ಲಿ ರಾಜಕೀಯ ಸಂಬಂಧಗಳು ಹೆಚ್ಚು

ಸ್ನೇಹಪರವಾಗಿ ಬೆಳೆದುದನ್ನು ಅಶೋಕನ ಖರೋಷ್ಠಿ ಶಾಸನದಿಂದ ತಿಳಿಯಬಹುದಾಗಿದೆ. ಇತ್ತ ಕರ್ನಾಟಕದಲ್ಲಿ ಚಿತ್ರದುರ್ಗದವರೆಗಿನ ಭಾಗ ಅವನ ಆಡಳಿತಕ್ಕೆ ಸೇರಿತ್ತು ಎಂದು ಮೇಲೆ ಹೇಳಲಾಗಿದೆ. ಸ್ವತಃ ಅಶೋಕನೇ ಸುವರ್ಣಗಿರಿ ಎಂಬ ನಗರದಲ್ಲಿ ಬಂದಿದ್ದನೆಂದು ಮತ್ತು ತಂಗಿದ್ದನೆಂದು ಬ್ರಹ್ಮಗಿರಿಯ ಶಾಸನ ಹೇಳುತ್ತದೆ. ಅಶೋಕನು ತಂಗಿದ್ದ ಸುವರ್ಣಗಿರಿಯನ್ನು ವಿದ್ವಾಂಸರು ಮಸ್ಕಿ, ಹಟ್ಟಿ, ಕನಕಗಿರಿ, ಮತ್ತು ಆಂಧ್ರಪ್ರದೇಶದ ಜೊನ್ನಗಿರಿಯಂತಲೂ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಅದೇನೆ ಇದ್ದರು ಕರ್ನಾಟಕದ ಕಡಲಾಚೆಯ ಸಂಪರ್ಕಗಳು ಎಂಬ ಕೃತಿಯಲ್ಲಿ, ಡಿ.ಎಸ್.ಜಯಪ್ಪಗೌಡ ಅವರು ಹೊನ್ನಾವರ, ಘಾಟಿಮಾರ್ಗ, ಚಂದ್ರವಳ್ಳಿ, ಪೆನುಗೊಂಡ, ಕಡಪ, ನೊಲ್ಲೂರು ಮಾರ್ಗವನ್ನು ಪೂರ್ವ, ಪಶ್ಚಿಮವಾಗಿ, ಅರಿಕಮೇಡು, ಶ್ರವಣಬೆಳಗೊಳ, ಬೆಂಗಳೂರು, ಮಣೆ, ಚಂದ್ರವಳ್ಳಿ, ಕುರುಗೋಡು, ತೆಕ್ಕಲಕೋಟೆ, ಕನಕಗಿರಿ, ಮಾನ್ಯಖೇಟ, ಕಲ್ಯಾಣ, ದೇವಗಿರಿ, ನಾಸಿಕ, ಉಜ್ಜಯಿನಿ ಮಾರ್ಗಗಳನ್ನು ಗುರುತಿಸಿದ್ದಾರೆ.

ಈ ಮೇಲೆ ಹೆಸರಿಸಿದ ಸಂಪರ್ಕ ರಸ್ತೆಗಳು ಮೌರ್ಯರ ಕಾಲದಿಂದ ಆರಂಭವಾಗಿ ಈಗಲೂ ಸಹ ಬಹುತೇಕ ಸಂಪರ್ಕ ರಸ್ತೆಗಳು ರಾಷ್ಟ್ರೀಯ ಹೆದ್ದಾರಿಗಳಾಗಿ ಕಾರ್ಯ ನಿರ್ವಹಿಸುತ್ತವೆ. ಪ್ರಾಚೀನ ಕಾಲದಲ್ಲಿ ವ್ಯಾಪಾರಿಗಳು ಈ ಮಾರ್ಗಗಳನ್ನೇ ತಮ್ಮ ದೈನಂದಿನ ಪ್ರಯಾಣಕ್ಕಾಗಿ ಉಪಯೋಗಿಸುತ್ತಿದ್ದರು ಎಂದು ನಂಬಬಹುದಾಗಿದೆ. ಕರ್ನಾಟಕದ ಒಳಗಡೆಯೇ ರಾಜ್ಯದ ವಿವಿಧ ಭಾಗಗಳನ್ನು ಸಂಪರ್ಕಿಸುವ ರಸ್ತೆಗಳು ಅಂದೇ ಬೆಳವಣಿಗೆ ಹೊಂದಿದ್ದವು. ಇಲ್ಲಿಯು ಕೂಡ ಅರಬ್ಬಿ ಸಮುದ್ರಕ್ಕೆ ತೆರೆದುಕೊಂಡಿರುವ ಕರಾವಳಿಯ ಬಹು ಭಾಗದಲ್ಲಿ ಹಲವಾರು ಬಂದರುಗಳಿದ್ದುದನ್ನು ಎಸ್.ಎನ್ ಸ್ವಾಮಿ ಗುರುತಿಸಿದ್ದಾರೆ. ಈ ಎಲ್ಲ ವಿವರಗಳನ್ನು ಇಟ್ಟುಕೊಂಡು ನೋಡಿದಾಗ ಮೌರ್ಯರ ಕಾಲದಿಂದಲೇ ವ್ಯಾಪಾರದಲ್ಲಿ ಸಾಕಷ್ಟು ಪ್ರಗತಿ ಕಂಡುಬರಲು ಆರಂಭವಾಯಿತೆಂದು ಹೇಳಬಹುದು.

ಆರಂಭದಲ್ಲಿ ವ್ಯಾಪಾರ ವಹಿವಾಟು ವಸ್ತುಗಳ ವಿನಿಮಯ ಪದ್ಧತಿಯಲ್ಲಿದ್ದಿತು. ಅಥವಾ ಹಸುವನ್ನು ವಸ್ತುಗಳಿಗೆ ಬದಲಾಗಿ ನೀಡಲಾಗುತ್ತಿತ್ತು ಎಂದು ವೇದಗಳ ಕಾಲದ ವ್ಯಾಪಾರದಲ್ಲಿ ತಿಳಿದು ಬರುತ್ತದೆ. ಆದರೆ ಮೌರ್ಯರ ಕಾಲದಲ್ಲಿ ನಾಣ್ಯ ಚಲಾವಣೆ ಆರಂಭವಾಯಿತು. ನಾಣ್ಯಗಳು ಹೆಚ್ಚು ವಿಶಿಷ್ಟವಾಗಿರದೆ ಸರಳವಾದ ವಿನ್ಯಾಸವನ್ನು ಹೊಂದಿವೆ. ಮುದ್ರಾಂಕಿತ ನಾಣ್ಯಗಳೆಂದು ಕರೆಯಲ್ಪಡುವ ಈ ನಾಣ್ಯಗಳಲ್ಲಿ ಚೌಕ, ತ್ರಾಪಿಜ್ಯ, ಆಯತ, ಇತ್ಯಾದಿ ಆಕಾರಗಳಿದ್ದು, ಮೇಲ್ಭಾಗದಲ್ಲಿ ಹಲವಾರು ಸಂಕೇತಿಕ ಚಿನ್ಹೆಗಳಿಂದ ಕೂಡಿರುತ್ತದೆ. ಶ್ರೀವತ್ಸ, ಸ್ವಸ್ತಿಕ, ವೃತ್ತ, ಸೂರ್ಯ, ಚಂದ್ರ, ಬೆಟ್ಟ, ಅಂಕುಶ ಹೀಗೆ ಹಲವಾರು ಚಿನ್ಹೆಗಳು ಮುದ್ರಾಂಕಿತ ನಾಣ್ಯಗಳಲ್ಲಿ ಕಂಡುಬರುತ್ತವೆ. ಈ ನಾಣ್ಯಗಳು ಅಂದು ವಿನಿಮಯ ಪದ್ಧತಿಗೆ ಪರ್ಯಾಯವಾಗಿ, ವ್ಯಾಪಾರ ವಾಣಿಜ್ಯದಲ್ಲಿ ಹಾಗೂ ರಾಜ್ಯದ ಆರ್ಥಿಕ ಪ್ರಗತಿಯಲ್ಲಿ ಪ್ರಮುಖ ಪಾತ್ರ ವಹಿಸಿದವು ಎಂದು ಹೇಳಬಹುದು.[೩೪]

ಚಿತ್ರದುರ್ಗ ಪರಿಸರದಲ್ಲಿ ಮೌರ್ಯರ ಕಾಲಕ್ಕೆ ಸಂಬಂಧಿಸಿದಂತೆ ಕ್ರಿ.ಶ.೪ನೇ ಶತಮಾನದಲ್ಲಿ ಖಾರವೇಲನು ಕುಂತಲ ರಾಜ್ಯವನ್ನು ಆಳುತ್ತಿದ್ದನೆಂದು ಹಾತಿಗುಂಪ ಶಾಸನದಿಂದ ತಿಳಿಯುವುದು. ಮೌರ್ಯರ ಅಶೋಕ, ಬಿಂದುಸಾರನ ಬಗ್ಗೆ ಈ ಪರಿಸರದಲ್ಲಿ ವಿವರಗಳಿವೆ. ಅಶೋಕನ ಹೆಸರಿನಲ್ಲಿ ಅಸಗೋಡು (ಅಸಗ ಪಾಳಿಭಾಷೆಯಲ್ಲಿ ಅಶೋಕ) ನಿರ್ಮಾಣವಾಗಿರುವ ಬಗ್ಗೆ ಚರ್ಚಿಸಲಾಗಿದೆ.[೩೫] ಅದೇ ರೀತಿಯಾಗಿ ಶಾಮನೂರು, ಲೋಕಿಕೆರೆ ಮುಂತಾದ ಗ್ರಾಮಗಳಲ್ಲಿ ಬೌದ್ಧರ ಮೂರ್ತಿಗಳು ದೊರೆತಿದ್ದು ಅದು ಮೌರ್ಯರ ಕಾಲದ ಬೌದ್ಧಮತಾವಲಂಬಿಗಳ ಮೂರ್ತಿಗಳು ಎಂದು

ಗುರುತಿಸಲಾಗಿದೆ.[೨೬] ಪ್ರಾಚೀನ ಚಿತ್ರದುರ್ಗ ಪ್ರದೇಶದಲ್ಲಿ ಮೌರ್ಯ ಮತ್ತು ಶಾತವಾಹನರ ಕಾಲದಲ್ಲಿ ಬೃಹತ್ ಪ್ರಮಾಣದ ಖನಿಜ ಸಂಪತ್ತು ದೊರೆಯುತ್ತಿತ್ತು ಎಂಬುವುದಕ್ಕೆ ದಾವಣಗೆರೆ ತಾಲೂಕಿನ ಹಳೆಕಲ್ಲ, ಜಗಳೂರು ತಾಲೂಕಿನ ಹೊನ್ನೆಮರಡಿ, ಚಿತ್ರದುರ್ಗ ತಾಲೂಕಿನ ಗೋನೂರು ಮತ್ತು ಗುಡ್ಡದ ರಂಗವ್ವನಹಳ್ಳಿ, ವಾಣಿವಿಲಾಸ ಸಾಗರದ ಹತ್ತಿರದ ಇರುವ ಬೋದಿ ಮರಡಿ, ಹಿರಿಯೂರು ತಾಲೂಕಿನ ಆನೆಸಿದ್ರಿ ಮತ್ತು ದಿಂಡಾವರ ಎಂಬ ಹಳ್ಳಿಗಳ ಬಳಿ ಇಲ್ಲಿರುವ ಮೌರ್ಯರ ಕಾಲದ ಕುಣಿಗಳಿಂದ ತಿಳಿದುಬರುತ್ತದೆ. ಇವು ಅತೀ ಪುರಾತನ ಕಾಲದಲ್ಲಿ ಇಲ್ಲಿ ಚಿನ್ನಕ್ಕಾಗಿ ಗಣಿಗಾರಿಕೆ ನಡೆದ ಕುರುಹುಗಳಿವೆ.[೨೭]

ಒಟ್ಟಿನಲ್ಲಿ ಚಿತ್ರದುರ್ಗ ಮತ್ತು ಸುತ್ತಲಿನ ಪ್ರದೇಶಗಳು ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದು ಅವರ ದಕ್ಷ ಆಡಳಿತದಿಂದಾಗಿ ಈ ಪ್ರದೇಶದಲ್ಲಿ ಬೌದ್ಧಧರ್ಮ ಹಾಗೂ ಸ್ಮಾರಕ ಕಲೆಗಳು ಇಲ್ಲಿ ಕಾಣಬಹುದು. ಚಿತ್ರದುರ್ಗ ಹಾಗೂ ಸುತ್ತಲಿನ ಪ್ರದೇಶಗಳಲ್ಲಿ ಮೌರ್ಯರ ಶಾಸನ ಮತ್ತಿತರ ಅವಶೇಷಗಳು ಸಿಕ್ಕುವುವದಲ್ಲದೆ ಮೌರ್ಯ ಸಾಮ್ರಾಜ್ಯದ ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ಪರಂಪರೆಯೂ ಮುಂದುವವರೆಯಿತು. ಈ ಪ್ರಾಂತ್ಯವು ಹಲವು ಶತಮಾನಗಳ ಕಾಲ ಮೌರ್ಯರ ಆಳ್ವಿಕೆಗೆ ಒಳಪಟ್ಟಿದ್ದು, ಭಾರತದ ಇತರ ಜನರೊಂದಿಗೆ ಸಂಪರ್ಕವನ್ನು ಹೊಂದಿದ್ದಲ್ಲದೆ ಭಾರತದಲ್ಲಿ ವ್ಯಾಪಾರ ವಾಣಿಜ್ಯಕ್ಕೆ ಈ ಪ್ರದೇಶವನ್ನು ಕೊಂಡಿಯಾಗಿಸಿ ಶ್ರೀಮಂತಗೊಳಿಸಿರುವುದು ನೋಡಬಹುದಾಗಿದೆ.

* * *

ಮೌರ್ಯೋತ್ತರ ಕಾಲದ ಪ್ರಾಚೀನ ಭಾರತದ ಕುಶಲ ಕಸುಬುಗಳು ಹಾಗೂ ವ್ಯಾಪಾರಗಳ ಚರಿತ್ರೆಯಲ್ಲಿ ಶಕರು, ಕುಶಾನರು, ಶಾತವಾಹನರು ಹಾಗೂ ಮೊದಲ ತಮಿಳು ರಾಜ್ಯಗಳ ಕಾಲವು ಅತ್ಯಂತ ಉಚ್ಛ್ರಾಯ ಕಾಲ. ಕಲೆ ಮತ್ತು ಕುಶಲ ಕಸುಬುಗಳು ಆಗ ಸಾಧಿಸಿದ ಪ್ರಗತಿ ಅದ್ಭುತ. ಮೌರ್ಯ ಪೂರ್ವಕಾಲದ ಡಿಘ ನಿಕಾಯವು ಸುಮಾರು ಇಪ್ಪತ್ತೈದು ವೃತ್ತಿಗಳನ್ನು ಹೆಸರಿಸಿದರೆ, ಈ ಕಾಲಾವಧಿಯ ಮಹಾವಸ್ತುವು, ರಾಜಗೃಹದಲ್ಲಿ ಮೂವತ್ತಾರು ಬಗೆಯ ವೃತ್ತಿಗಾರರಿದ್ದುದನ್ನು ಪ್ರಸ್ತಾಪಿಸುತ್ತದೆ. ಆ ಪಟ್ಟಿಯೂ ಪೂರ್ಣವಲ್ಲ. ಮಿಲಿಂದ ಪನ್ಹೋ ಅಥವಾ ಮಿಲಿಂದ ಪ್ರಶ್ನೆಯು ೭೫ ವೃತ್ತಿಗಳನ್ನು ಹೆಸರಿಸಿವೆ. ಅವುಗಳಲ್ಲಿ ೬೦ ನಾನಾ ಬಗೆಯ ಕುಶಲ ಕಸುಬುಗಳು, ಸಾಹಿತ್ಯ ಕೃತಿಗಳಲ್ಲಿ ಕಸುಬುಗಾರರು ನಗರಗಳೊಂದಿಗೆ ಸಂಬಂಧ ಪಟ್ಟವರಾದರೂ, ಅವರು ಹಳ್ಳಿಗಳಲ್ಲೂ ಇದ್ದುದನ್ನು ಉತ್ಖನನಗಳು ತೋರಿಸಿಕೊಟ್ಟಿವೆ. ತೆಲಂಗಾಣದ ಕರೀಂನಗರ ಜಿಲ್ಲೆಯ ಒಂದು ಗ್ರಾಮದ ಬಡಗಿಗಳು, ಕಮ್ಮಾರರು, ಅಕ್ಕಸಾಲಿಗರು, ಕುಂಬಾರರು ಮುಂತಾದವರು ತಮ್ಮದೇ ಬೀದಿಗಳಲ್ಲಿ ವಾಸ ಮಾಡುತ್ತಿದ್ದುದನ್ನು, ಕೃಷಿ ಕಾರ್ಮಿಕರು ಹಾಗೂ ಇತರೇ ಕಾರ್ಮಿಕರು ಒಂದು ಅಂಚಿನಲ್ಲಿ ವಾಸ ಮಾಡುತ್ತಿದ್ದುದನ್ನೂ ಉತ್ಖನನವು ಸಾಬೀತುಪಡಿಸಿದೆ.

ಚಿನ್ನ, ಬೆಳ್ಳಿ, ಸೀಸ, ತವರ, ತಾಮ್ರ, ಹಿತ್ತಾಳೆ, ಕಬ್ಬಿಣ ಹಾಗೂ ರತ್ನಗಳಿಗೆ ಸಂಬಂಧಪಟ್ಟಂತಹ ಎಂಟು ಕಸುಬುಗಳಿದ್ದುವು. ಹಲವಾರು ಬಗೆಯ ಹಿತ್ತಾಳೆ, ಸತು ಅನ್ಟಿಮೊನಿ ಮತ್ತು ಮಣಿಗಳನ್ನು ಸಹ ಪ್ರಸ್ತಾಪಿಸಲಾಗಿದೆ. ಗಣಿಗಾರಿಕೆ ಮತ್ತು ಲೋಹ ತಾಂತ್ರಿಕತೆಯಲ್ಲಾದ ಅಪಾರ ಪ್ರಗತಿಯನ್ನು ಇವು ತೋರಿಸುತ್ತವೆ. ಕಬ್ಬಿಣದ ಕಾಮಗಾರಿಕೆಯ ತಿಳುವಳಿಕೆಯಂತೂ ಅಪಾರವಾಗಿ ಪ್ರಗತಿ ಸಾಧಿಸಿತು. ಉತ್ಖನನಗೊಂಡ ಹಲವಾರು ನಿವೇಶನಗಳ ಕುಶಾನ ಮತ್ತು ಶಾತವಾಹನ ಪದರಗಳಲ್ಲಿ ಹೆಚ್ಚು

ಸಂಖ್ಯೆಯ ಕಬ್ಬಿಣದ ವಸ್ತುಗಳು ದೊರೆತಿವೆ. ಆಂಧ್ರದ ತೆಲಂಗಾಣ ಪ್ರದೇಶ ಈ ದೃಷ್ಟಿಯಲ್ಲಿ ಅತ್ಯುತ್ತಮ. ಕರೀಂನಗರ ಮತ್ತು ನಲಗೊಂಡ ಜಿಲ್ಲೆಗಳಲ್ಲಿ ಆಯುಧಗಳ ಜೊತೆಗೆ ಕಬ್ಬಿಣದ ತಕ್ಕಡಿ, ಕೋಲುಗಳು, ಕಾವು ಕೂರಿಸಬಹುದಾದ ಕೊಡಲಿ ಮತ್ತು ಗುದ್ದಲಿಗಳು, ಕುಡುಗೋಲುಗಳು, ಗುಳಗಳು, ಕ್ಷೌರಕತ್ತಿಗಳು ಮತ್ತು ಸೌಟುಗಳು ದೊರೆತಿವೆ. ಚೂರಿ, ಚಾಕು, ಕತ್ತರಿ ಮುಂತಾದವೂ ಸೇರಿದಂತೆ ಭಾರತದ ಕಬ್ಬಿಣ ಹಾಗೂ ಉಕ್ಕಿನ ವಸ್ತುಗಳನ್ನು ಅಬಿಸೀನಿಯಾದ ಬಂದರುಗಳಿಗೆ ರಫ್ತು ಮಾಡಲಾಗುತ್ತಿತ್ತು. ಈ ವಸ್ತುಗಳಿಗೆ ಪಶ್ಚಿಮ ಏಷ್ಯಾದಲ್ಲಿ ಒಳ್ಳೇ ಬೇಡಿಕೆ ಇತ್ತು.

ಹತ್ತಿ ಬಟ್ಟೆ, ರೇಷ್ಮೆ, ಆಯುಧಗಳು ಮತ್ತು ಭೋಗ ವಸ್ತುಗಳು ತಯಾರಿಕೆ ಪ್ರಗತಿ ಹೊಂದಿತು. ಮಥುರಾದಲ್ಲಿ ಶತಕ ಎಂಬ ಹೆಸರಿನ ವಿಶಿಷ್ಟ ಬಟ್ಟೆ ತಯಾರಿಸುತ್ತಿದ್ದರು. ದಕ್ಷಿಣ ಭಾರತದ ಕೆಲವು ಊರುಗಳಲ್ಲಿ ಬಟ್ಟೆಗಳಿಗೆ ಬಣ್ಣ ಹಾಕುವುದೇ ಒಂದು ಲಾಭದಾಯಕ ಕಸುಬಾಗಿತ್ತು. ತಿರುಚಿರಾಪಳ್ಳಿ ನಗರದ ಉಪನಗರವಾದ ಉರೈಯೂರಿನಲ್ಲಿ ಇಟ್ಟಿಗೆಯಲ್ಲಿ ಕಟ್ಟಿದ ಬಣ್ಣ ಹಾಕುವ ತೊಟ್ಟಿಯೊಂದು ದೊರೆತಿದೆ. ಅರಿಕಮೇಡಿನ ಉತ್ಖನನಗಳಲ್ಲೂ ಅಂತಹ ತೊಟ್ಟಿಗಳು ಸಿಕ್ಕಿವೆ. ಇವು ಈ ಊರುಗಳಲ್ಲಿ ಜವಳಿ ಕೈಗಾರಿಕೆಯು ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕ್ರಿ.ಶ. ಒಂದು–ಮೂರನೇ ಶತಮಾನಕ್ಕೆ ಸೇರಿದಂತಹವು. ಗಾಣವು ಬಳಕೆಗೆ ಬಂದು ಎಣ್ಣೆಯ ಉತ್ಪಾದನೆ ಏರಿತು. ಆ ಅವಧಿಯ ಶಾಸನಗಳು ನೇಕಾರರು, ಅಕ್ಕಸಾಲಿಗರು, ಬಣ್ಣಕಾರರು, ಲೋಹ ಹಾಗೂ ದಂತಗಳ ಕೆಲಸಗಾರರು[೩೮] ರತ್ನಪಡಿ ತಯಾರಕರು, ಶಿಲ್ಪಿಗಳು, ಬೆಸ್ತರು, ಕಮ್ಮಾರರು ಹಾಗೂ ಸುಗಂಧ ತಯಾರಕರನ್ನು ಬೌದ್ಧ ಸನ್ಯಾಸಿಗಳಿಗಾಗಿ ಗುಹೆಗಳನ್ನು ನಿರ್ಮಿಸಿದ್ದು ಕಂಬಗಳು, ಫಲಕಗಳು ನೀರಿನ ತೊಟ್ಟಿಗಳು ಮುಂತಾದುವನ್ನು ದಾನ ಮಾಡಿದವರಾಗಿ ಹೆಸರಿಸಿವೆ. ಇವೆಲ್ಲವೂ ಆ ಕಸುಬುಗಳು ಉಚ್ಛ್ರಾಯ ಸ್ಥಿತಿ ಮುಟ್ಟಿದ್ದುದನ್ನು ಸೂಚಿಸುತ್ತವೆ.[೩೯]

ಶಾತವಾಹನರ ಆಳ್ವಿಕೆಯ ಸಂದರ್ಭದಲ್ಲಿನ ಕೆಲವು ವ್ಯಾಪಾರ ನಗರ ಪ್ರದೇಶಗಳೆಂದರೆ, ಚಂದ್ರವಳ್ಳಿ, ಮಸ್ಕಿ, ಸನ್ನತಿ, ಬನವಾಸಿ, ಇಂಡಿ, ಬಾದಾಮಿ, ತಾಳಗುಂದ, ಹೀರಕಲ್ ವಡಗಾಂವ್, ಮಾಧವಪುರ, ಹಲಶಿ, ಹಾನಗಲ್, ಕಾರವಾರ ಮುಂತಾದವು. ಇವುಗಳಲ್ಲಿ ಚಂದ್ರವಳ್ಳಿಯು ಶಾತವಾಹನರ ಆಳ್ವಿಕೆಗೆ ಸಂಬಂಧಿಸಿದಂತೆ ಪ್ರಮುಖ ಕೇಂದ್ರ. ಸುಮಾರು ಕ್ರಿ.ಶ. ೨೦೦ರ ನಂತರ ಶಾತವಾಹನರು ಚಂದ್ರವಳ್ಳಿಯನ್ನು ಕೇಂದ್ರವನ್ನಾಗಿ ಮಾಡಿಕೊಂಡಿದ್ದರೆಂಬ ಅಂಶ ಶಾಸನಗಳಿಂದ ತಿಳಿದುಬರುತ್ತದೆ. ಚಂದ್ರವಳ್ಳಿಯಲ್ಲಿ ನಡೆದ ಭೂ ಸಂಶೋಧನೆಯಿಂದ ಶಾತವಾಹನರ ಆಳ್ವಿಕೆಯ ಮೇಲೆ ಹಾಗೂ ಚಂದ್ರವಳ್ಳಿಯ ನಗರ ವ್ಯವಸ್ಥೆಯ ಮೇಲೆ ಹೆಚ್ಚಿನ ಅಧ್ಯಯನ ಮಾಡುವುದರ ಮೂಲಕ ಅಂದಿನ ವ್ಯಾಪಾರ–ವಾಣಿಜ್ಯಗಳ ಕುರಿತಾದ ಅನೇಕ ಅವಶೇಷಗಳಿಂದ ತಿಳಿಯಲು ಸಾಧ್ಯವಾಯಿತು. ಶಾತವಾಹನರ ಹಾಗೂ ಅವರ ಸಾಮಂತ ಅರಸರ ನಾಣ್ಯಗಳು ಚಂದ್ರವಳ್ಳಿಯಲ್ಲಿ ದೊರೆತಿವೆ. ಭೂ ಸಂಶೋಧನೆಯಲ್ಲಿ ನಾಣ್ಯಗಳು, ಇಟ್ಟಿಗೆಗಳು, ಹೆಂಚುಗಳು, ವಿಧವಿಧವಾದ ಬಣ್ಣದ ಗಾಜಿನ ಬಳೆಗಳು, ಕಪ್ಪೆ ಚಿಪ್ಪುಗಳು, ಮಣಿಗಳು, ವರ್ಣಾಲಂಕಾರದ ಮಡಕೆಗಳು, ಮಣ್ಣಿನ ಜಾಡಿಗಳು, ಬಟ್ಟಲು, ತಟ್ಟೆ, ಪಾತ್ರೆಗಳು ದೊರೆತಿವೆ. ಈ ಎಲ್ಲ ಕಾರಣಗಳಿಂದಾಗಿ ಚಂದ್ರವಳ್ಳಿಯು ಶಾತವಾಹನರ ರಾಜಧಾನಿ ಅಥವಾ ರಾಜಧಾನಿಗಳಲ್ಲಿ ಒಂದು ಆಗಿರಬೇಕೆಂಬ ತೀರ್ಮಾನಕ್ಕೆ ಬರಲಾಗಿದೆ.[೪೦] ಚಂದ್ರವಳ್ಳಿಯಲ್ಲಿ ದೊರೆತ ಶಾತವಾಹನರ ಕಾಲದ ನಾಣ್ಯಗಳನ್ನು ಆಧರಿಸಿ ಅವರ ಕಾಲದ ತೆರಿಗೆ ಉಲ್ಲೇಖಿತ ಕೆಲವು ಶಾಸನಗಳನ್ನು ಆಧಾರವಾಗಿ ಇಟ್ಟುಕೊಂಡು ಮೌರ್ಯ ಮತ್ತು ಶಾತವಾಹನ ಕಾಲದ ತೆರಿಗೆ ಪದ್ಧತಿಯ ಕೆಲವು ಅಂಶಗಳನ್ನು

ನೋಡುವಾಗ-ಆಡಳಿತಕ್ಕೆ ಆದಾಯ ಬರಲು ಅನೇಕ ತೆರಿಗೆಗಳನ್ನು ರಾಜರು ಹಾಕುತ್ತಿದ್ದು, ಪ್ರಸ್ತುತ ವ್ಯಾಪಾರ-ವಾಣಿಜ್ಯದ ಮೇಲೆ ಹಾಕುತ್ತಿದ್ದ ಕೆಲವು ತೆರಿಗೆಗಳಲ್ಲಿ ಕೊನೆದೆರೆ ಹಣ್ಣುಗಳ ಗೊಚಿನ ಮೇಲೆ ಹಾಕುವ ತೆರಿಗೆ, ಪನ್ನವಣ-ವೀಳೆದೆಲೆ ಮಾರಾಟದ ಮೇಲಿನ ತೆರಿಗೆ, ಬೀರವಣ-ವೀಳೆದೆಯ ಕಟ್ಟಿನ ಮೇಲಿನ ತೆರಿಗೆ ಮುಖ್ಯವಾದವು. ಪ್ರಾಚೀನ ಅರ್ಥವ್ಯವಸ್ಥೆಯಲ್ಲಿ ವೀಳೆದೆಲೆ ಬೆಲೆಯ ಮಾರಾಟ, ಅದರ ಉಪಯೋಗ, ಈ ಉದ್ಯೋಗದಲ್ಲಿ ತೊಡಗಿದವರು ಒಂದು ಪ್ರಮುಖ ಸ್ಥಾನವನ್ನು ಪಡೆದಿದ್ದರೆಂದು ತೋರುತ್ತದೆ. ವೀಳೆದೆಲೆಯ ಮಾರಾಟ ರಾಜ್ಯದ ಬೊಕ್ಕಸಕ್ಕೆ ಒಂದು ಪ್ರಮುಖ ಆದಾಯ ತರುವಂತಹದಾಗಿರಬೇಕು. ಆದ್ದರಿಂದಲೇ ಈ ಉದ್ಯೋಗಕ್ಕೆ ಸಂಬಂಧಿಸಿದಂತೆ ಅನೇಕ ತೆರಿಗೆಗಳು ಇದ್ದುದನ್ನು ನಾವು ಕಾಣುತ್ತೇವೆ. ತಳಸಾರಿಗೆ-ರಸ್ತೆ ಸಾಗಣಿಕೆಯ ಮೇಲಿನ ಸುಂಕ. ಈ ತೆರಿಗೆಯನ್ನು ಗಮನಿಸಿದಾಗ ರಸ್ತೆಗಳು ರಾಜ್ಯದ ಸೊತ್ತಾಗಿರಬೇಕು ಎನಿಸುತ್ತದೆ. ಅವುಗಳ ನಿರ್ವಹಣೆಗಾಗಿ ತೆರಿಗೆ ರೂಪದಲ್ಲಿ ಸಂಗ್ರಹಿಸಿದ ಹಣವನ್ನು ಬಳಸುತ್ತಿರಬಹುದು. ಮಾರ್ಗಗಳನ್ನು ಉಪಯೋಗಿಸುವವರು ಅದರ ನಿರ್ವಹಣೆಗಾಗಿ ಸುಂಕ ಕೊಡಬೇಕಾಗುತ್ತದೆಂದು 'ಶುಕ್ರನೀತಿ'ಯಲ್ಲಿ ಹೇಳಲಾಗಿದೆ. ಪಸುಬೆದೆರೆ-ವ್ಯಾಪಾರಕ್ಕಾಗಿ ಹಸೂಬೆಯಲ್ಲಿ ಸಾಗಿಸುತ್ತಿದ್ದ ಸರಕುಗಳ ಮೇಲಿನ ಕರ, ಹೊಳೆಯ ಸುಂಕ-ಹೊಳೆ ದಾಟುವ ನಾವೆಗಳ ಮೇಲಿನ ಕರ. ಈ ತೆರಿಗೆಯನ್ನು ಹೊಳೆಯ ಉಪಯೋಗ ಮಾಡಿಕೊಳ್ಳುವವರ ಮೇಲೂ ವಿಧಿಸಿರಬೇಕು. ಹೊಳೆಯ ಮೂಲಕ ನಡೆಯುವಂತಹ ವಹಿವಾಟಿನ ಮೇಲೆ ನಿಯಂತ್ರಣ ಇರಿಸಿಕೊಳ್ಳುವುದಕ್ಕೋಸ್ಕರ ಇಂತಹ ಕರಗಳನ್ನು ಸಂಗ್ರಹಿಸುವ ಅಧಿಕಾರಿಗೆ ಅರ್ಥಶಾಸ್ತ್ರದಲ್ಲಿ 'ಸೌ ಅಧ್ಯಕ್ಷ' ಎಂಬ ಉಲ್ಲೇಖವು ಬರುತ್ತದೆ. ಆಮೆದೆರೆ[೮೧] ಆಮೆಯನ್ನು ಹಿಡಿಯುವ ಗುತ್ತಿಗೆಯ ಮೇಲೆ ಕೊಡಬೇಕಾದ ತೆರಿಗೆ. ಆಮೆಗಳನ್ನು ಹಿಡಿದು ಅವುಗಳ ಉಪಯೋಗವೇನು ಎಂಬುದನ್ನು ವಿವರಿಸುವುದು ಕಷ್ಟ. ಬಹುಶಃ ಅವುಗಳನ್ನು ಹಿಡಿದುತಂದು ನೀರಿನ ಸ್ವಚ್ಛತೆ ಕಾಯ್ದುಕೊಳ್ಳಲು ಕೆರೆ, ಬಾವಿಗಳಲ್ಲಿ ಬಿಡುತ್ತಿರಬಹುದು. ಯೆರೆಪಿಂಡಿಸುಂಕ-ಎಣ್ಣೆಯ ಹಿಂಡಿಯ ಮೇಲಿನ ಸುಂಕ. ಎಣ್ಣೆಯ ಉದ್ಯಮ ಕೂಡ ಒಂದು ಪ್ರಮುಖ ಕೈಗಾರಿಕೆಯಾಗಿತ್ತು. ಈ ತೆರಿಗೆಯ ಜೊತೆಗೆ 'ಗಾಣದೆರೆ' ಎಂಬ ಪದವನ್ನು ಕೂಡ ಗಮನಿಸಬಹುದು. ಲವಣ-ಉಪ್ಪಿನ ಮೇಲಿನ ಕರ ಕನ್ನಡಿ ವಣ-ಕನ್ನಡಿಯ ಮೇಲೆ ಹಾಕುತ್ತಿದ್ದ ತೆರಿಗೆ; ದೇವಾಲಯಗಳಲ್ಲಿನ ನೃತ್ಯಗಾರ್ತಿಯರ ಮೇಲಿನ ಕರ; ಕನ್ನಡಿ ಶೃಂಗಾರ ಸಾಧನಗಳಲ್ಲಿ ಒಂದು. ನೃತ್ಯಗಾರ್ತಿಯರಿಗೆ ಇದರ ಉಪಯೋಗ ಹೆಚ್ಚಾಗಿತ್ತು. ಆದ್ದರಿಂದ ಕನ್ನಡಿಯ ಮೇಲೆ ತೆರಿಗೆ ವಿಧಿಸಿದ್ದರು. ಕಂಠವಣ-ಕಂಠದ ಮೇಲೆ ವಿಧಿಸುವ ತೆರಿಗೆ; ಹಸ್ತಪ್ರತಿ ಲಿಪಿಗಾರನ ಮೇಲೆ ವಿಧಿಸುವ ತೆರಿಗೆ. ಚಕ್ರಕಾಣಿಕೆ-ಕುಂಬಾರನ ತಿಗರಿಯ ಮೇಲಿನ ಕರ, ಏಣಿ-ಎಲೆ ಕೊಯ್ಯುವಾಗ ಉಪಯೋಗಿಸುವ ಏಣಿಯ ಮೇಲೆ ಹಾಳುವ ತೆರಿಗೆ, ಹೊಗೆದೆರೆ-ಕಮ್ಮಾರನ ವೃತ್ತಿಯ ಮೇಲೆ ವಿಧಿಸುವ ತೆರಿಗೆ. ಬಹುಶಃ ಈ ತೆರಿಗೆ ಕಮ್ಮಾರನ ಕುಲುಮೆಯ ಮೇಲೆ ವಿಧಿಸುವ ತೆರಿಗೆಯಾಗಿರಬೇಕು. ಈ ಮೇಲಿನ ತೆರಿಗೆಗಳು ವೃತ್ತಿ ತೆರಿಗೆಗಳು ಆಗಿದ್ದರೂ ಕೂಡ ತೆರಿಗೆಯನ್ನು ವೃತ್ತಿ ಮಾಡುವ ವೃತ್ತಿಕಾರನ ಮೇಲೆ ವಿಧಿಸದೇ ಆತನ ವೃತ್ತಿಯಲ್ಲಿ ಅತ್ಯವಶ್ಯವಾದ ಉಪಕರಣ/ವಸ್ತುವಿನ ಮೇಲೆ ವಿಧಿಸಿದುದು ಒಂದು ವೈಶಿಷ್ಟವಾಗಿದೆ. ಈ ಅಂಶಕ್ಕೆ ಹೊರತಾಗಿರುವ ಕೆಲವು ವೃತ್ತಿತೆರಿಗೆಗಳು ಇಂತಿವೆ. ಜಟ್ಟಿತೆರೆ ಕುಸ್ತಿಪಟುಗಳ ಮೇಲಿನ ಕರ. ನೋಟವಣ-ನಾಣ್ಯ ಪರೀಕ್ಷಕರ ಮೇಲಿನ ಕರ. ದೊಂಬದೆರಿಗೆ-ದೊಂಬರಾಟ ಆಡುವವರ ಮೇಲೆ ಹಾಕುವ ತೆರಿಗೆಗಳು ಇವಾಗಿವೆ.[೮೨] ಈ ತೆರಿಗೆಗಳನ್ನು ಗಮನಿಸಿದಾಗ ಇಲ್ಲಿ ಕೇವಲ ಕೃಷಿ

ವಸ್ತುಗಳು ಮಾತ್ರ ಬೇಡಿಕೆ ಹೊಂದಿರಲಿಲ್ಲ. ಶ್ರೇಣಿಗಳ ರೂಪದಲ್ಲಿ ಪ್ರತಿಯೊಂದು ಉದ್ಯೋಗಕ್ಕೂ ಒಂದೊಂದು ಗುಣವನ್ನು ನಾವು ಕಾಣಬಹುದಾಗಿದೆ. ಕುಶಲಕಲಾವಿದರುಗಳೂ ಸಹ ತಮ್ಮದೇ ಆದ ಗುಂಪುಗಳನ್ನು ರಚಿಸಿಕೊಂಡಿದ್ದರು. ಅಂದು ಪ್ರಚಲಿತದಲ್ಲಿ ಆಕರ್ಷಕ ಗೊಂಬೆಗಳ ನಿರ್ಮಾಣ ಇವುಗಳು ಸಾವಾಜಿಕ ಹಾಗೂ ಧಾರ್ಮಿಕ ಬದುಕಿನಲ್ಲಿ ಅತ್ಯಂತ ಗಣನೀಯುವಾಗಿ ಉಪಯೋಗವಾಗಿರುವುದನ್ನು ಕಾಣಬಹುದು. ಸನ್ನತಿಯೊಂದರಲ್ಲೇ ನೂರಾರು ಸುಟ್ಟಿರುವ ಮಣ್ಣಿನ ಗೊಂಬೆಗಳು ದೊರೆತಿವೆ. ಪ್ರಾಯಶಃ ಗೊಂಬೆ ತಯಾರಿಕಾ ಕೇಂದ್ರವೂ ಆಗಿರಬಹುದೆಂದು ತರ್ಕಿಸಬಹುದು. ಈ ಕಾಲದಲ್ಲಿ ಕಟ್ಟಡಗಳ ನಿರ್ವಾಣಕ್ಕೆ ಬಹುತೇಕ ಒಂದೇ ಅಳತೆಯ ಇಟ್ಟಿಗೆಗಳನ್ನು ಉಪಯೋಗಿಸಿರುವುದನ್ನು ರಾಜ್ಯದಲ್ಲಿ ಇದುವರೆಗೂ ಶೋಧಿಸಿರುವ ಶಾತವಾಹನರ ಕಾಲದ ಸಾಂಸ್ಕೃತಿಕ ನೆಲೆಗಳಲ್ಲಿ ಕಾಣಬಹುದು.

ಶಾತವಾಹನ ಮೂಲದ ಬಗ್ಗೆ ಚರ್ಚೆ ಮಾಡುವಾಗ ಇವರು ಮೂಲತಃ ವ್ಯಾಪಾರಿ ವರ್ಗವಾಗಿತ್ತು ಎಂಬುದಾಗಿ ಚರ್ಚಿಸುತ್ತಾ, ಕೆಲವು ವಿದ್ವಾಂಸರು ಸಾತ ಎಂದರೆ ಕುದುರೆ ಎಂದು ಹೇಳಿ ಶಾತವಾಹನರು ಕುದುರೆಗಳನ್ನು ವಾಹನವಾಗಿ ಬಳಸುತ್ತಿದ್ದರೆಂದು ಹೇಳಿದ್ದಾರೆ. ಮತ್ತೆ ಕೆಲವರು ಸಾತ ಎಂದರೆ ಮತ್ಸ್ಯ (ಮೀನು) ಎಂಬರ್ಥ ನೀಡಿ, ಅವರು ಮೀನು ಹಿಡಿದು ಜೀವಿಸುವ ಜನರೆಂದು ವಾದಿಸಿದ್ದಾರೆ. ಕರ್ಣಿ ಎಂದರೆ ಹಡಗಿನ ಯಜಮಾನ ಎಂಬರ್ಥ ಬರುವುದರಿಂದ ಅವರು ಸಮುದ್ರ ವ್ಯಾಪಾರ ಮಾಡುತ್ತಿದ್ದರು[೪೩] ಎಂದು ಹೇಳಿದ್ದಾರೆ. ಮತ್ತೆ ಕೆಲವರು ವ್ಯಾಪಾರಸ್ಥರೆಂದಿದ್ದಾರೆ.

ಪುರಾತನ ವರ್ಣಾಶ್ರಮ ವ್ಯವಸ್ಥೆಯು ಸಾತವಾಹನರ ಕಾಲದಲ್ಲೂ ನಡೆದು ಬಂದಿದ್ದಿತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚತುರ್ವರ್ಣೀಯರು ತಮ್ಮ ರೂಢಿಗತ ಕರ್ತವ್ಯಗಳನ್ನು ನಿರ್ವಹಿಸುತ್ತ, ತಮಗೆ ಮಿಸಲಾಗಿದ್ದ ಹಕ್ಕು ಬಾಧ್ಯತೆಗಳನ್ನು ನಿರಂತರವಾಗಿ ಅನುಭವಿಸುತ್ತಿದ್ದರು. ವ್ಯಾಪಾರ-ಕೃಷಿಗಳೇ ಪ್ರಜಾಕೋಟಿಯ ಮುಖ್ಯ ಜೀವಿಕೆಯಾಗಿದ್ದವು. ಶಾಸನಗಳಲ್ಲಿ ಅಂದಿನ ಹಲವಾರು ವೃತ್ತಿಗಳ ಉಲ್ಲೇಖವಿದೆ. 'ಧನ್ನಿಕ' (ಧಾನ್ಯ ವ್ಯಾಪಾರಿ), 'ಮಾಲಾಕಾರ' (ಮಾಲೆ ಮಾಡುವವನು), 'ಕೋಲಿಕ' (ನೇಕಾರ) 'ತಿಲಪಿಸರ' (ಗುಣಿಗ), 'ಕಾಸಕಾರ' (ಕಂಚುಗಾರ), 'ಕಮಾರ' (ಕಮ್ಮಾರ), 'ಚಮ್ಮಕಾರ' (ಚಮ್ಮಾರ), 'ಗಂಧಿಕ' (ಸುಗಂಧ ದ್ರವ್ಯಕಾರ), 'ಸುವರ್ಣಕಾರ' (ಅಕ್ಕಸಾಲಿಗ), 'ಮಣಿಕಾರ' (ಆಭರಣ ಮಾಡುವವನು), 'ಮಿಠಿಕ', ಬದಯಾಂತ್ರಿಕ (ಜಲಯಂತ್ರಕಾರ), 'ದಾಶಕ' (ಬೆಸ್ತ).[೪೪] ಇತ್ಯಾದಿ ಹಲವಾರು ವೃತ್ತಿ ಸೂಚಕ ಪದಗಳು ಶಾಸನಗಳಲ್ಲಿ ಬರುತ್ತವೆ. ಈ ವೃತ್ತಿಯಲ್ಲಿ ಹಲವಾರು ನಾನಾ ಬಿಕ್ಕು ಸಂಘಗಳಿಗೂ ವಿಹಾರಗಳಿಗೂ ದತ್ತಿ ಕೊಟ್ಟ ಬೌದ್ಧ ವರ್ತಕರಿದ್ದರು.

ಆಂತರಿಕ ಹಾಗೂ ವಿದೇಶಿ ವ್ಯಾಪಾರಗಳೆರಡೂ ಪ್ರಗತಿಯಲ್ಲಿದ್ದವು. ಗ್ರೀಕ್ ಅನಾಮಿಕನ ವಿರಚಿತ 'ಪೆರಿಪ್ಲಸ್ ಆಫ್ ದಿ ಎರಿತ್ರಿಯನ್ ಸೀ' (ಕ್ರಿ.ಶ. ೭೦) ಎಂಬ ಕೃತಿ ಶಾತವಾಹನರ ಕಾಲದ ವಿದೇಶಿ ವ್ಯಾಪಾರದ ಮೇಲೆ ಬೆಳಕು ಚೆಲ್ಲುತ್ತದೆ. ಅದು ಕರ್ನಾಟಕದ ವಾಣಿಜ್ಯ ಕೇಂದ್ರಗಳು ಹಾಗೂ ರೇವು ಪಟ್ಟಣಗಳನ್ನು ಉಲ್ಲೇಖಿಸಿದೆ. ಉದಾಹರಣಗೆ ಬ್ರೋಚ್, ಜುನ್ನಾರ್, ಕಲ್ಯಾಣ, ಸೊಪಾರ, ಬಾಜ, ಸ್ವಪಾದಕ, ವಿನುಕೊಂಡ, ನರಸಾಲ, ನಾಸಿಕ್, ಧಾನ್ಯಕಟಿಕ, ನಾಗಾರ್ಜುನಕೊಂಡ, ಕನ್ಹೆರಿ, ಭಟ್ಕಳ, ತಗಾರ, ಮಲ್ಪೆ, ಮಂಗಳೂರು, ಕರ್ಲೆ, ಪೈಠಾನ್ ಬನವಾಸಿ ಇತ್ಯಾದಿ ಇವು ಆಂತರಿಕ ವಾಣಿಜ್ಯ ಕೇಂದ್ರಗಳಾಗಿದ್ದವು. ಅವುಗಳಲ್ಲಿ ಕೆಲವು ರೇವು ಪಟ್ಟಣಗಳಾಗಿದ್ದವು. ಆಂತರಿಕ ವ್ಯಾಪಾರವು ಎತ್ತಿನ

ಗಾಡಿಗಳ ಮೂಲಕ ನಡೆಯುತ್ತಿತ್ತು. ಸಾರಿಗೆ ಸಂಪರ್ಕಗಳು ಅಭಿವೃದ್ಧಿಗೊಂಡು ಅವನ್ನು ಹೆದ್ದಾರಿಗಳ ಮೂಲಕ ಸಂಪರ್ಕಿಸುತ್ತಿದ್ದವು. ಚಂದ್ರವಳ್ಳಿಯಿಂದ[೪೫] ಬಳ್ಳಾರಿ ಮಾರ್ಗವಾಗಿ ತೀರ ಪ್ರದೇಶವನ್ನು ಕೂಡಿಸುವ ಹೆದ್ದಾರಿ ಇದ್ದಿತು. ಸಾಗರೋತ್ತರ ವ್ಯಾಪಾರವು ಸಹ ಪ್ರಗತಿಯಲ್ಲಿ ಇದ್ದಿತು. ಯಜ್ಞಶ್ರೀ ಶಾತಕರ್ಣಿಯ ನಾಣ್ಯದ ಮೇಲೆ ಪಟಸ್ತಂಭವುಳ್ಳ ಹಡಗು ಚಿತ್ರ ಇದನ್ನು ಸಮರ್ಥಿಸುತ್ತದೆ. ಶಾತವಾಹನರು ಪರ್ಶಿಯಾ, ಆಫ್ರೀಕಾ, ಗ್ರೀಸ್, ಯುರೋಪ್ ರಾಷ್ಟ್ರಗಳು ಹಾಗೂ ರೋಮನ್ ಸಾಮ್ರಾಜ್ಯದೊಂದಿಗೆ ಕಡಲ ವಾಣಿಜ್ಯ ಸಂಬಂಧ ಹೊಂದಿದ್ದರು. ಇದಕ್ಕೆ ಸಾಕ್ಷಿಯಾಗಿ ಅಕ್ಕಿ ಆಲೂರು (ಧಾರವಾಡ), ಬನವಾಸಿ, ಮಾನ್ವಿ, ಬ್ರಹ್ಮಗಿರಿ ಹಾಗೂ ಚಂದ್ರವಳ್ಳಿಯಲ್ಲಿ ರೋಮನ್ ಸಾಮ್ರಾಟರ ಚಿನ್ನದ ನಾಣ್ಯಗಳು ದೊರೆತಿವೆ. ಜೊತೆಗೆ ಅರಿಕಮೇಡು, ಪಾಂಡಿಚೇರಿ, ನಾಗಾರ್ಜುನಕೊಂಡ ಮತ್ತು ಬೆಂಗಳೂರುಗಳಲ್ಲೂ ರೋಮನ್ ಸಾಮ್ರಾಟರ ನಾಣ್ಯಗಳು ದೊರೆತಿವೆ.

ಮಚಲೀಪಟ್ಟಣ, ಬ್ರೋಚ್, ಕಲ್ಯಾಣ ಮತ್ತು ಸೋಪಾರಗಳು ಪ್ರಸಿದ್ಧ ಬಂದರುಗಳಾಗಿದ್ದವು.[೪೬] ಅವು ವಿದೇಶಿ ವ್ಯಾಪಾರಕ್ಕೆ ಹೆಸರಾಗಿದ್ದವು. ರೋಮಿನ ಮಾರುಕಟ್ಟೆಗಳಲ್ಲಿ ಭಾರತದ ವಸ್ತುಗಳಿಗೆ ಹೆಚ್ಚಿನ ಬೆಲೆ ಇತ್ತೆಂದು ಪ್ಲಿನಿ ಹೇಳಿದ್ದಾನೆ. ವ್ಯಾಪಾರಕ್ಕೆ ಅರಬ್ಬರು ಮಧ್ಯವರ್ತಿಗಳಾಗಿದ್ದರು. ಅಲ್ಲದೆ ಪೂರ್ವದ ಆಗ್ನೇಯ ಏಷ್ಯಾ ರಾಷ್ಟ್ರಗಳೊಂದಿಗೆ ಸಹ ವ್ಯಾಪಾರ ಸಂಬಂಧ ಇದ್ದಿತು. ಚಿನ್ನ, ವಜ್ರ, ಪಚ್ಚೆಕಲ್ಲು, ಬೆಳ್ಳಿ, ಆಭರಣಗಳು, ಮಸ್ಲಿನ್ ಬಟ್ಟೆ, ಕಾಳು ಮೆಣಸು, ಸಂಬಾರದ ವಸ್ತುಗಳು, ಶ್ರೀಗಂಧ, ಚರ್ಮದ ವಸ್ತುಗಳು, ಔಷಧಿಗಳು, ಏಲಕ್ಕಿ, ದಂತ ಆಗಿನ ರಫ್ತುಗಳಾಗಿದ್ದವು. ಆಮದುಗಳೆಂದರೆ ಮಧ್ಯ, ಗಾಜು, ತಾಮ್ರ, ಮದಿರೆ, ಲವಂಗ, ಸೀಸ, ಕೆಲವು ಬಗೆಯ ಮುಲಾಮುಗಳು, ಪರಿಮಳ ದ್ರವ್ಯಗಳು. ಪೂರ್ವದಲ್ಲಿ ಕಾವೇರಿ ಪಟ್ಟಣಂ ಪ್ರಸಿದ್ಧ ಬಂದರಾಗಿತ್ತು. ಈ ವಿದೇಶಿ ವ್ಯಾಪಾರದಿಂದಾಗಿ ಆರ್ಥಿಕ ಸಮೃದ್ಧತೆ ಉಂಟಾಯಿತು. ಮರದ ವಸ್ತುಗಳ ತಯಾರಿಕೆ ಕೈಗಾರಿಕೆ ಪ್ರಗತಿಯಲ್ಲಿತ್ತು. ಈ ಸಮೃದ್ಧಿ ವ್ಯಾಪಾರದಿಂದ ರೋಮನ್ ಸಾಮ್ರಾಜ್ಯದಿಂದ ವಿಫಲವಾದ ಚಿನ್ನ ದಕ್ಷಿಣ ಭಾರತದತ್ತ ಹರಿಯಿತೆಂದು ಪ್ಲಿನಿ ಹೇಳಿದ್ದಾನೆ. ಶಾತವಾಹನರು ಪೌರಾತ್ಯ ವ್ಯಾಪಾರ ಸಂಪರ್ಕದಿಂದಾಗಿ ಅಲ್ಲಿ ಭಾರತೀಯ ಸಂಸ್ಕೃತಿ ಪ್ರಸಾರವಾಯಿತು. ಸಯಾಂ, ಅನ್ನಾಂ, ಮಲಯ್‌ಗಳಲ್ಲಿ ಭಾರತೀಯ ವಸಾಹತುಗಳು ಸ್ಥಾಪನೆಯಾದವು. ದಕ್ಷಿಣ ಭಾರತದ ವರ್ತಕರು, ವಿದ್ವಾಂಸರು ಧರ್ಮ ಪ್ರಚಾರದಂತಹ ಸಾಂಸ್ಕೃತಿಕ ವಿಸ್ತರಣೆಯಲ್ಲಿ ತೊಡಗಿದ್ದರು. ಕಾವೇರಿ ಪಟ್ಟಣನಿಂದ ಹಡಗುಗಳು ಪ್ರಾಚ್ಯ ದೇಶಗಳಿಗೆ ಹೋಗುತ್ತಿದ್ದವೆಂದು ಪೆರಿಪ್ಲಸ್ ಗ್ರಂಥ ತಿಳಿಸುತ್ತದೆ.[೪೭] ಮಲಯ ಪರ್ಯಾಯ ದ್ವೀಪದಲ್ಲಿ ಇಲ್ಲಿನ ಸಾಂಸ್ಕೃತಿಕ ನೆಲೆಗಳು ಸ್ಥಾಪನೆಯಾಗಿದ್ದವು.

ಒಟ್ಟಿನಲ್ಲಿ ಶಾತವಾಹನರ ಆಳ್ವಿಕೆಯ ಕಾಲದಲ್ಲಿ ದಕ್ಷಿಣ ಭಾರತ ಹಾಗೂ ಕರ್ನಾಟಕದಲ್ಲಿ ಬೃಹತ್ ಪ್ರಮಾಣದ ವ್ಯಾಪಾರ-ವಾಣಿಜ್ಯ ನಡೆಯುತ್ತಿದ್ದುದು ಈ ಮೇಲಿನ ಎಲ್ಲ ಅಂಶಗಳಿಂದ ತಿಳಿದು ಬರುತ್ತವೆ. ಚಿತ್ರದುರ್ಗ ಪ್ರದೇಶ ಶಾತವಾಹನರ ಆಳ್ವಿಕೆಗೊಳಪಟ್ಟಿದ್ದು ಕ್ರಿ.ಶ. ಸುಮಾರು ೨೦೦ರ ತರುವಾಯ. ಈ ಪ್ರದೇಶದಲ್ಲಿ ಚಂದ್ರವಳ್ಳಿಯನ್ನು ಅವರು ವಾಸಸ್ಥಾನವನ್ನಾಗಿ ಮಾಡಿಕೊಂಡಿದ್ದಿರಬಹುದೆಂದು ಹೇಳಬಹುದು. ಶಾತವಾಹನರ ಸಾಂಸ್ಕೃತಿಕ ಅವಶೇಷಗಳು ದೊರೆತ ಪ್ರಮಾಣವನ್ನು ಗಮನಿಸಿದರೆ ಚಂದ್ರವಳ್ಳಿ ಅವರ ರಾಜಧಾನಿಗಳಲ್ಲಿ ಒಂದಾಗಿತ್ತೆಂದು ಊಹಿಸಬಹುದು. ಬನವಾಸಿಯಂತೆ ಚಂದ್ರವಳ್ಳಿಯೂ ಆ ಕಾಲದ ವಾಣಿಜ್ಯ ಕೇಂದ್ರವಾಗಿತ್ತು. ಚಿತ್ರದುರ್ಗ ಈಗ ಹತ್ತಿ, ಎಣ್ಣೆ ಕಾಳು, ಅಡಿಕೆ ಇನ್ನಿತರೆ

ಧಾನ್ಯಗಳಿಗೆ ಹೆಸರಾಗಿರುವ ವಾಣಿಜ್ಯ ಕೇಂದ್ರವಾಗಿದ್ದು ಇದು ಶಾತವಾಹನರ ಕಾಲಕ್ಕೆ ಸಮೃದ್ಧವಾಗಿದ್ದಿರಬಹುದು. ಅಲ್ಲದೆ ಭೌಗೋಳಿಕವಾಗಿ ಚಂದ್ರವಳ್ಳಿ, ಬನವಾಸಿ, ಕಾರವಾರ ಮುಂತಾದ ನೆಲೆಗಳು ಪರಸ್ಪರ ಸಂಪರ್ಕವನ್ನಿಟ್ಟುಕೊಂಡಿದ್ದ ಬಗ್ಗೆ ಸ್ಪಷ್ಟ ಮಾಹಿತಿ ಈ ಹಿಂದೆಯೇ ನೀಡಲಾಗಿದೆ. ಹೀಗೆ ಪ್ರಾಚೀನ ಕಾಲದಲ್ಲಿಯೇ ಇದೊಂದು ವಾಣಿಜ್ಯ ಕೇಂದ್ರವಾಗಿ ಬೆಳೆದಿತ್ತು.

* * *

ಕದಂಬರ ರಾಜಕೀಯ ವ್ಯವಸ್ಥೆಯನ್ನು ಗಮನಿಸಿದರೆ ಈ ಕಾಲದಲ್ಲಿ ಭದ್ರವಾದ ಆರ್ಥಿಕ ಸ್ಥಿತಿ ಮತ್ತು ವ್ಯವಸ್ಥೆಗಳು ಇದ್ದಂತೆ ತೋರುತ್ತದೆ. ವ್ಯವಸಾಯ ನಾಡಿನ ಮುಖ್ಯ ಆರ್ಥಿಕ ಮೂಲವಾಗಿತ್ತು. ಹಲವಾರು ಶಾಸನಗಳಲ್ಲಿರುವ ಭೂದಾನ ಮಾಡಿರುವುದರ ಪ್ರಸ್ತಾಪ ಈ ಅಂಶವನ್ನು ಸ್ಪಷ್ಟಪಡಿಸುತ್ತದೆ. ಭೂಮಿ ಸ್ಥಿರಾಸ್ತಿ, ಸರ್ವಕಾಲದಲ್ಲೂ ಉತ್ಪನ್ನ ನೀಡಬಲ್ಲುದು ಎಂಬುದೇ ಇದಕ್ಕೆ ಕಾರಣ. ವ್ಯವಸಾಯ ಭೂಮಿಗಳಲ್ಲಿ ಗಜಿದ, ಖಜ್ಜಾಣ ಮುಂತಾದ ವಿಧಗಳು ಕಂಡು ಬರುತ್ತದೆ. ವ್ಯವಸಾಯದ ಅಭಿವೃದ್ಧಿಗೆ ರಾಜ್ಯದ ಪ್ರೋತ್ಸಾಹವೂ ಇರುತ್ತಿತ್ತು. ಚಂದ್ರವಳ್ಳಿ ಶಾಸನದಲ್ಲಿ ಮಯೂರಶರ್ಮ ಅಲ್ಲಿ ಕೆರೆ ಕಟ್ಟಿಸಿದ ವಿಷಯವಿದೆ. ರವಿಮಹಾರಾಜನ ಗುಡ್ನಾಪುರ ಶಾಸನದಲ್ಲಿ ಗುಡ್ಡ ತಟಾಕದ ಪ್ರಸ್ತಾಪವಿದೆ. ಕಾಕುತ್ಥವರ್ಮ ತಾಳಗುಂದದಲ್ಲಿ ಕೆರೆಯೊಂದನ್ನು ಕಟ್ಟಿಸಿದ. ಪಶುಪಾಲನೆ, ನೇಯ್ಗೆ ಮುಂತಾದ ಇತರ ಕಸಬುಗಳೂ ಈ ಕಾಲದಲ್ಲಿದ್ದಿರಬೇಕು. ಬಹುಶಃ ವ್ಯಾಪಾರ ಸಾಕಷ್ಟು ಅಭಿವೃದ್ಧಿಯಾಗಿರಬೇಕು. ಆದರೆ ಈ ವಿಷಯದಲ್ಲಿ ತಕ್ಕಷ್ಟು ಆಧಾರಗಳು ದೊರಕುವುದಿಲ್ಲ. ಕದಂಬರು ಗುಪ್ತರು ಮೊದಲಾದವರೊಡನೆ ಸಂಬಂಧ ಬೆಳೆಸಿದ್ದುದು, ಮಯೂರಶರ್ಮನ ಕಂಚಿಯ ಪ್ರಯಾಣ ಮುಂತಾದ ಪ್ರಸ್ತಾಪಗಳು ಅಂದಿನ ಕಾಲದಲ್ಲಿ ಭಾರತದ ಇತರ ಭಾಗಗಳೊಡನೆ ಕದಂಬ ರಾಜ್ಯವು ಒಳ್ಳೆಯ ಸಂಪರ್ಕವ್ಯವಸ್ಥೆ ಹೊಂದಿರಬೇಕೆನಿಸುತ್ತದೆ. ಇವು ವ್ಯಾಪಾರಕ್ಕೂ ಸಹಕಾರಿಯಾಗಿರಬೇಕು. ಅಲ್ಲದೆ ಆಗ್ನೇಯ ಏಷ್ಯದಲ್ಲಿ ದೊರಕಿರುವ ಶಾಸನಗಳಲ್ಲಿ ಕದಂಬರ ಕಾಲದಲ್ಲಿದ್ದ ಲಿಪಿ ಹಾಗೂ ಶಾಸನ ಸ್ವರೂಪ ಅಲ್ಲಿಯೂ ಪ್ರಚಲಿತವಾಗಿತ್ತು ಎಂಬುದಕ್ಕೆ ಸ್ಪಷ್ಟ ಸಾಕ್ಷ್ಯಗಳು ದೊರಕುವುದರಿಂದ ದ್ವೀಪಾಂತರಗಳೊಡನೆ ಕದಂಬರ ಕಾಲದಲ್ಲಿ ಕರ್ನಾಟಕ ಸಂಪರ್ಕ ಬೆಳೆಸಿಕೊಂಡಿತ್ತೆಂಬುದು ತಿಳಿಯುತ್ತದೆ.[೪೮] ಕದಂಬರ ಕಾಲದಲ್ಲಿ ಶಾತವಾಹನರ ಕಾಲದಲ್ಲಿದ್ದ ವ್ಯಾಪಾರ ಪದ್ಧತಿಗಳನ್ನು ಮುಂದುವರೆಸಲಾಯಿತು. ಈ ಕಾಲದಲ್ಲಿ ಉತ್ತರ ಭಾರತದಲ್ಲಿ ಕುಶಾನರು ನೇಪಥ್ಯಕ್ಕೆ ಸೇರಿದ್ದರು ಮತ್ತು ಗುಪ್ತರು ಪಾಟಲೀಪುತ್ರವನ್ನು ರಾಜಧಾನಿಯಾಗಿ ಮಾಡಿಕೊಂಡು ಆಡಳಿತ ಆರಂಭಿಸಿದ್ದರು. ಇಡೀ ಉತ್ತರ ಭಾರತ ಅವರ ಅಧೀನದಲ್ಲಿತ್ತು. ವಿದರ್ಭದಲ್ಲಿ ವಾಕಾಟಕರು, ಕೊಂಕಣದಲ್ಲಿ ಕೊಂಕಣ ಮೌರ್ಯರು ಮತ್ತು ಕಲಚೂರಿಗಳು, ಕೃಷ್ಣಾ ಮುಖಜ ಭೂಮಿಯಲ್ಲಿ ವಿಷ್ಣುಕುಂಡಿಗಳು, ತಮಿಳುನಾಡಿನ ತೊಂಡೈಮಂಡಲದಲ್ಲಿ ಪಲ್ಲವರು, ಪಾಂಡ್ಯ, ಚೇರರು ಹಾಗೂ ಕರ್ನಾಟಕದ ದಕ್ಷಿಣ ಭಾಗದಲ್ಲಿ ಗಂಗರು ಆಡಳಿತ ನಡೆಸುತ್ತಿದ್ದರು. ಕದಂಬರು, ಗಂಗರು ಸಮಕಾಲೀನವಾಗಿ ಆಡಳಿತ ನಡೆಸುತ್ತಿದ್ದಾಗಲೇ ಅವರ ಮಾಂಡಲೀಕರಾಗಿ ಆಳುಪರು, ಸೇಂದ್ರಕರೂ ಆಳುತ್ತಿದ್ದರು. ಅದೇ ರೀತಿ ಭಾರತದಲ್ಲಿ ಹಲವಾರು ಕಿರಿ ರಾಜ ಮನೆತನಗಳೂ ಆಳುತ್ತಿದ್ದವು.[೪೯] ಇಂತಹ ರಾಜಕೀಯ ಹಿನ್ನೆಲೆಯಲ್ಲಿ ಆಂತರಿಕ ಹಾಗೂ ವಿದೇಶಗಳೊಂದಿಗೆ ವ್ಯಾಪಾರವು ಉತ್ತಮ ಬೆಳವಣಿಗೆ ಕಂಡಿತ್ತು ಎಂದು ಹೇಳಬಹುದು.

ಚಿತ್ರದುರ್ಗ ಪ್ರದೇಶದಲ್ಲಿ ಶಾತವಾಹನರ ನಂತರ ಕದಂಬರ ಆಳ್ವಿಕೆಯು ಕಂಡುಬರುತ್ತದೆ. ಕದಂಬಳಿಗೆ ಸಾಸಿರದ ಉಲ್ಲೇಖ ಕ್ರಿ.ಶ.೯ನೇ ಶತಮಾನದಿಂದ ಈಚೆಗೆ ಕಂಡು ಬಂದರೂ ಕದಂಬ

ಸಾಮ್ರಾಜ್ಯದ ಸ್ಥಾಪಕನಾದ ಮಯೂರ ಶರ್ಮನು ತನ್ನ ಆಳ್ವಿಕೆಯ ಪ್ರಾರಂಭವನ್ನು ಚಿತ್ರದುರ್ಗ ಪರಿಸರದಲ್ಲೇ ಮಾಡಿದನೆಂದು ಹೇಳಲು ಸಾಧ್ಯವಿದೆ. ಇದಕ್ಕೆ ಆಧಾರವಾಗಿ ಈ ಪ್ರದೇಶದಲ್ಲಿ ಕಂಡುಬರುವ ಕದಂಬರ ಶಾಸನ ಮತ್ತು ಅವರ ಬಗ್ಗೆ ಪ್ರಚಲಿತವಿರುವ ಐತಿಹ್ಯಗಳು ಸಹಾಯ ಮಾಡುತ್ತವೆ.

ಚಿತ್ರದುರ್ಗದ ಚಂದ್ರವಳ್ಳಿ ಶಾಸನವು ಮಯೂರ ಶರ್ಮನು ಕೆರೆಯನ್ನು ದುರಸ್ತಿಗೊಳಿಸಿದ್ದ ಅಂಶವನ್ನು ಬಿ.ರಾಜಶೇಖರಪ್ಪ ಶಾಸನದ ಮರು ಓದಿನಿಂದ ತಿಳಿಸಿದ್ದಾರೆ.[೫೦] ಕದಂಬರ ಕಾಲದಲ್ಲಿಯೇ ಹೆಚ್ಚಿನ ಯುದ್ದಗಳು ಹಾಗೂ ದಾನ-ದತ್ತಿಗಳ ಬಗ್ಗೆ ಹೇರಳವಾದ ಮಾಹಿತಿ ದೊರೆತಿದೆ. ಕದಂಬರ ಕಾಲದಲ್ಲಿ ಆರ್ಥಿಕವಾಗಿ ಸಾಕಷ್ಟು ಪ್ರಬಲವಾಗಿದ್ದು ಅವರ ಹಲವಾರು ಶಾಸನೋಕ್ತ ದಾಖಲೆಗಳಿಂದ ಕಂಡುಬರುತ್ತದೆ. ಮಯೂರ ಶರ್ಮನ ಚಂದ್ರವಳ್ಳಿಯ ಶಾಸನದಲ್ಲಿ ಅವನು ಆಕ್ರಮಿಸಿಕೊಂಡಂತಹ ಹಲವಾರು ಸ್ಥಳಗಳ ಹೆಸರುಗಳು ಕಂಡುಬರುತ್ತವೆ. ಹಾಗೆಯೇ ಬನವಾಸಿಯೂ ರಾಜಧಾನಿಯಾಗಿದ್ದು ಅದೊಂದು ಪ್ರಾಚೀನ ಮತ್ತು ಮಧ್ಯಕಾಲದಲ್ಲಿ ಪ್ರಮುಖ ವ್ಯಾಪಾರಿ ಕೇಂದ್ರವಾಗಿತ್ತು ಎಂಬುವುದನ್ನು ಮರೆಯುವಂತಿಲ್ಲ. ಚಂದ್ರವಳ್ಳಿ ಶಾಸನದಲ್ಲಿ ಮಯೂರ ಶರ್ಮನು ತ್ರೈಕೂಟಕ, ಅಭಿರ, ಪಲ್ಲವ ಪಾಯಾತ್ರಕ, ಶಕಸ್ಥಾನ, ಮೋಕರಿ, ಪುನ್ನಾಟ ಮತ್ತು ಸೇಂದ್ರಕ[೫೧] ಭಾಗಗಳನ್ನು ಆಕ್ರಮಿಸಿಕೊಂಡನು ಎಂದು ತಿಳಿದುಬರುತ್ತದೆ. ಅದೇನೆ ಇರಲಿ ಮಯೂರ ಶರ್ಮನ ಶಾಸನದಿಂದ ಈ ಎಲ್ಲಾ ಭಾಗಗಳಿಗೂ ಅವನ ಸಂಪರ್ಕವಿದ್ದಿತು ಎಂದು ಹೇಳಬಹುದು. ಈ ಕಾಲದಲ್ಲಿ ತಾಳಗುಂದ, ಚಂದ್ರವಳ್ಳಿ, ಬ್ರಹ್ಮಗಿರಿ, ಹಲಸಿ, ಉಚ್ಚಂಗಿ ಇವುಗಳಲ್ಲದೆ ಕರಾವಳಿಯ ಉದ್ದಕ್ಕೂ ಇದ್ದಂತಹ ಹಲವಾರು ಸ್ಥಳಗಳು ಇವುಗಳ ಜೊತೆಯಲ್ಲಿ ಬನವಾಸಿ ಮತ್ತು ಗುಡ್ನಾಪುರಗಳು ವೈಭವಯುತವಾಗಿ ವಿಜೃಂಭಿಸಿದ ನಗರಗಳಾಗಿದ್ದವು. ಈ ಕಾಲದಲ್ಲಿ ಕದಂಬರದ್ದೇ ಆದಂತಹ ನಾಣ್ಯಗಳು ಚಲಾವಣೆಗೊಂಡವು. ಪದ್ಮಟಂಕಗಳೆಂದು ಇಂದು ಹೆಸರಿಸುವ ಚಿನ್ನದ ನಾಣ್ಯವು ಆ ಕಾಲದ ಪ್ರಮುಖ ನಾಣ್ಯವಾಗಿದ್ದಿತು. ಹಾಗೆಯೇ ಬಯಲು ಸೀಮೆಯಲ್ಲಿ ಹತ್ತಿ, ಗೋಧಿ, ಜೋಳ ಇತರ ತೈಲ ಬೀಜಗಳ ಬೆಳೆಗಳು ಹೇರಳವಾಗಿ ಬೆಳೆಯುತ್ತಿದ್ದವು. ಆ ಕಾಲದಲ್ಲಿ ಗಣಿಕಾರಿಕೆಯು ಸಹ ಇದ್ದಿತ್ತು ಎಂದು ಇಂಗಳದಾಳು ಪರಿಸರದ ಉತ್ಖನನದ ವರದಿಗಳಿಂದ ಹೇಳಬಹುದಾಗಿದೆ.

ಸಾಮಾನ್ಯವಾಗಿ ಎತ್ತಿನ ಗಾಡಿ ಅಂದಿನ ಯಾನ ಸಾಧನವಾಗಿತ್ತು. ಶ್ರೀಮಂತರು ಪಲ್ಲಕ್ಕಿಗಳನ್ನೂ ತುರಗ ರಥಗಳನ್ನೂ ಬಳಸುತ್ತಿದ್ದರು. ಯುದ್ದ ರಂಗಗಳಲ್ಲಿ ಕರಿ ತುರಗಳೆರಡೂ ಬಳಕೆಯಲ್ಲಿದ್ದುವು.

ಜನರ ರಕ್ಷಣೆಯೇ ರಾಜನ ಕರ್ತವ್ಯವಾಗಿದ್ದರಿಂದ ಯುದ್ಧ, ಯಜ್ಞ ಯಾಗದಿಗಳು ಸಾಮಾನ್ಯವಾಗಿದ್ದರೂ ಯುದ್ಧಗಳು ಆರ್ಥಿಕತೆಯ ದೃಷ್ಠಿಯಿಂದಲೇ ನಡೆಯುತ್ತಿದ್ದವು ಎಂಬುವುದನ್ನು ಮರೆಯುವಂತಿಲ್ಲ.

ಜನರು ತಮ್ಮ ವೃತ್ತಿಗಳಿಗೆ ತಕ್ಕಂತೆ ಬೇರೆ ಬೇರೆ ವೃತ್ತಿ ಶ್ರೇಣಿಗಳನ್ನು ರಚಿಸಿಕೊಂಡಿದ್ದರು. ಈ ಶ್ರೇಣಿಗಳು ಮುಖ್ಯವಾಗಿ ಆರ್ಥಿಕ ಸಂಸ್ಥೆಗಳಾಗಿದ್ದುವು. ಪುರ, ನಗರಗಳ ಪಾಲನೆಯೂ ಇವುಗಳ ಅಧಿಕಾರಕ್ಕೊಳಪಟ್ಟಿದ್ದಿತು. ಇಂತಹ 'ಶ್ರೇಣಿ'ಗಳಲ್ಲಿ 'ಮೇಂಟಿ' ಮಹತ್ವದ ಸಂಸ್ಥೆಯಾಗಿದ್ದಿತು. 'ಮೇಂಟಿ' ಎಂದರೆ ನೇಗಿಲು. ನೇಗಿಲು ಕೃಷಿಯ ಸಂಕೇತ 'ಮೇಂಟಿ ಶ್ರೇಣಿ'ಯು ಕೃಷಿಕರ ಶ್ರೇಣಿ ಆಯಾ ಊರಿನ ಕೃಷಿಕರು ಅದರ ಸದಸ್ಯರಾಗಿದ್ದರು.

ಕೃಷಿಯೇ ಜನರ ಮುಖ್ಯ ಜೀವಿಕೆಯಾಗಿತ್ತು. ಆದ ಕಾರಣ, ರಾಜ್ಯಾದಾಯಕ್ಕೆ ಭೂಕರವೇ ಮುಖ್ಯ ಮೂಲವಾಗಿತ್ತು. ಭೂಮಿಯ ವಿಂಗಡಣೆ ಬಹುವಿಧವಾಗಿತ್ತು. ತರಿ, ಖುಷ್ಕಿ, ಎಂದು ಮಾತ್ರವಲ್ಲದೆ,

ಭೂಮಿಯ ಫಲವತ್ತತೆಗೆ ಅನುಗುಣವಾಗಿಯೂ ಭೂಮಿ ವಿಂಗಡಣೆಯಾಗುತ್ತಿತ್ತು. ಭೂಮಿಯ ಫಲವತ್ತತೆಗೆ ತಕ್ಕಂತೆ ಕಂದಾಯದಲ್ಲೂ ಹೆಚ್ಚು ಕಡಿಮೆಯಾಗುತ್ತಿದ್ದಿತು.[೫೨]

ಕೃಷಿಯನ್ನು ಬಿಟ್ಟರೆ, ಉದ್ಯಮ ವಾಣಿಜ್ಯಗಳೇ ನಾಡಿನ ಆರ್ಥಿಕ ಜೀವನದ ಊರುಗೋಲಾಗಿದ್ದವು. ಕುಂಭ ಕರ್ಮ, ಎಣ್ಣೆಗಾಣ, ನೆಯ್ಗೆ, ಹಿತ್ತಾಳೆ ಕೆಲಸ– ಇವು ಮುಖ್ಯವಾದ ಉದ್ದಿಮೆಗಳಾಗಿದ್ದುವು. ವೃತ್ತಿ ಶ್ರೇಣಿಗಳು ಉದ್ದಿಮೆಗಳೊಂದಿಗೆ ವ್ಯವಹಾರ ನಡೆಸಿ ಉದ್ದಿಮೆಗಳಿಗೆ ಪ್ರೋತ್ಸಾಹ ನೀಡುತ್ತಿದ್ದವು. ಈ ಶ್ರೇಣಿಗಳು ಅತ್ಯಂತ ಪ್ರಭಾವಶಾಲಿಗಳಾಗಿದ್ದ ಕಾರಣ, ರಾಜನಾಗಲಿ, ರಾಜಾಧಿಕಾರಿಗಳಾಗಲಿ ತೆರಿಗೆ ವಿಧಿಸುವ ಅಥವಾ ತೆರಿಗೆಯ ಹಣದಿಂದ ದಾನ ಕೊಡುವ ಶ್ರೇಣಿಗಳೊಡನೆ ಸಮಾಲೋಚನೆ ನಡೆಸುತ್ತಿದ್ದರು.

ಅಂದು ಚಿನ್ನದ ನಾಣ್ಯಗಳು ಪ್ರಚಾರದಲ್ಲಿದ್ದುವು. ಕೆಲವೊಮ್ಮೆ ರಜತ ನಾಣ್ಯಗಳೂ ಚಲಾವಣೆಯಲ್ಲಿದ್ದುವು. ಬೆಳ್ಳಿಗಮ್ಮಟ ಎಂಬ ಹೆಸರು ಶಾಸನಗಳಲ್ಲಿ ಬಂದಿದೆ. 'ಬೆಳ್ಳಿ ಗಮ್ಮಟ' ಎಂದರೆ ಬೆಳ್ಳಿ ನಾಣ್ಯಗಳ ಟಂಕ ಸಾಲೆಯಾಗಿದ್ದಿರಬೇಕು. ದ್ರಾಮ, ಗದ್ಯಾಣ, ಪಣ, ಪೊನ್, ಸುವರ್ಣ, ಸಾಹನಿಕಾತಿ, ಸಲಿಕೆ, ಗುಳಿಕೆ, ಕಾಗಿಣಿ, ಪ್ರತಾಪ, ಧರಣ ಇತ್ಯಾದಿಗಳು ಅಂದು ಬಳಕೆಯಲ್ಲಿದ್ದ ಬೇರೆ ಕೆಲವು ನಾಣ್ಯಗಳು. ಮತ್ತರ್, ಕುಲ, ಕೊಂಡುಗ, ಅಡಯ ಮುಂತಾದ ಕೆಲವು ಭೂ ಮಾಪನ ಸಾಧನೆಗಳನ್ನು ಶಾಸನಗಳು ಸೂಚಿಸುತ್ತವೆ. ಹಾಗೆಯೇ ದ್ರವಮಾಪನ ಸಾಧನಗಳನ್ನೂ ಧಾನ್ಯದ ಅಳತೆಗಳನ್ನೂ ಶಾಸನಗಳು ಹೆಸರಿಸುತ್ತವೆ.[೫೩] ಈ ಪರಿಭಾಷಿಕ ಪದಗಳ ನೈಜಾರ್ಥ ತಿಳಿದಿಲ್ಲ. ಅಳತೆಯ ಕೋಲು ಎಲ್ಲ ಕಡೆಗೂ ಒಂದೇ ಬಗೆಯಾಗಿರಲಿಲ್ಲವೆಂದು ತೋರುವುದು.

ಕದಂಬರು ದಕ್ಷಿಣದಲ್ಲಿ ಕಾವೇರಿ ನದಿಯವರೆಗಿನ ಭಾಗವನ್ನು ಉತ್ತರದಲ್ಲಿ ಮಲಾಪಹಾರಿ (ಮಲಪ್ರಭ) ನದಿಯವರೆಗಿನ ಭಾಗವನ್ನು ಪೂರ್ವದಲ್ಲಿ ಉಚ್ಚಂಗಿಯವರೆಗೂ,[೫೪] [ಶಾಸನೋಕ್ತ (ನುಂಕೆಮಲೆ) ಶ್ರೀಪರ್ವತವೆಂಬುದು ಈಗಿನ ಉಚ್ಚಂಗಿಯ ಪ್ರದೇಶವೇ? ಇದು ಹರಪನಹಳ್ಳಿ ತಾಲೂಕು ಉಚ್ಚಂಗಿಗಿಂತ ಭಿನ್ನ, ಅಣಜಿಯ ಶಾಸನದಲ್ಲಿ ಯುದ್ಧದ ಉಲ್ಲೇಖವಿದ್ದು ನಣಕ್ಕಾಸ ಪಲ್ಲವನಿಗೂ, ಕೃಷ್ಣ ವರ್ಮನಿಗೂ ಯುದ್ಧ ನಡೆದಿದೆ. ಇಲ್ಲಿ ಪ್ರಸ್ತಾಪಿಸಲಾಗಿರುವ ಕೃಷ್ಣವರ್ಮ ಕದಂಬ ದೊರೆಯೇ ಆಗಿದ್ದಾನೆ.] ಹಾಗೆಯೇ ಇತ್ತ ಪಶ್ಚಿಮದಲ್ಲಿ ಕರಾವಳಿಯವರೆಗೂ ರಾಜ್ಯದ ವ್ಯಾಪ್ತಿಯನ್ನು ಹೊಂದಿದ್ದು ಸಾಕಷ್ಟು ಸಂಪತ್ತಿನಿಂದ ಕೂಡಿದ ರಾಜ್ಯವಾಗಿದ್ದಿತ್ತು. ಇಲ್ಲಿನ ನೈಸರ್ಗಿಕ ಪರಿಸರ ಸಾಂಬಾರ ಪದಾರ್ಥಗಳ ಬೆಳವಣಿಗೆ ಅನುಕೂಲಕರವಾಗಿದ್ದಿತ್ತು. ಅಲ್ಲದೆ ರಾಯಚೂರು ಜಿಲ್ಲೆಯ ಹಟ್ಟಿ ಮತ್ತು ಗದಗ ಹತ್ತಿರದ ಚಿನ್ನದ ನಿಕ್ಷೇಪಗಳು ಹಾಗೂ ಬಳ್ಳಾರಿ ಜಿಲ್ಲೆಯ ಕಬ್ಬಿಣದ ಗಣಿಗಾರಿಕೆ[೫೫] ಪ್ರಾಯಶಃ ಆ ಕಾಲದಲ್ಲೂ ಪ್ರಚಲಿತದಲ್ಲಿದ್ದವು ಎಂದು ಊಹಿಸಬಹುದು.

ಕ್ರಿ.ಶ.ಎರಡನೆಯ ಶತಮಾನದ ಕೊನೆಯ ವೇಳೆಗೆ ರೋಮನ್ ವಾಣಿಜ್ಯದ ಇಳಿಮುಖ ಆರಂಭಗೊಂಡಿತು. ಇದರ ಪ್ರಭಾವ ಅಂತರಾಷ್ಟ್ರೀಯ ಮಟ್ಟದಲ್ಲೂ ಕಾಣಿಸಿಕೊಂಡಿತು. ಅನೇಕ ಪೇಟೆ–ಪಟ್ಟಣಗಳು ಅವನತಿಯತ್ತ ಸಾಗತೊಡಗಿದವು ಕರ್ನಾಟಕದ ರಾಜಕೀಯ ಕ್ಷೇತ್ರದಲ್ಲೂ ಬದಲಾವಣೆಗಳು ಕಾಣಿಸಿಕೊಂಡವು. ಶಾತವಾಹನರ ಅವನತಿಯಾಗಿ ಬನವಾಸಿಯ ಕದಂಬರು ಮತ್ತು ತಲಕಾಡಿನ ಗಂಗರು ಆಡಳಿತದ ಚುಕ್ಕಾಣಿ ಹಿಡಿದರು. ಇವರ ಕಾಲದಲ್ಲಿ ವ್ಯಾಪಾರದ ಇಳಿಮುಖ ಕಾಣಿಸಿಕೊಳ್ಳಲಾರಂಭಿಸಿತು. ಈ ಪ್ರಕ್ರಿಯೆ ಸುಮಾರು ೭–೧೦ನೆಯ ಶತಮಾನದವರೆಗೂ ಕೆಲವೊಂದು

ಪರಿಳಿತಗಳೊಂದಿಗೆ ಮುಂದುವರಿಯಿತು. ಶಾತವಾಹನರ ಕಾಲದ ಹೆಚ್ಚಿನ ವ್ಯಾಪಾರ ಪೇಟೆ-ಪಟ್ಟಣಗಳು ಕ್ರಿ.ಶ. ೪ನೇ ಶತಮಾನದ ಬಳಿಕ ಅವನತಿಯತ್ತ ಸಾಗಬೇಕಾಯಿತು. ಕದಂಬರು, ಗಂಗರು, ಚುಟುಗಳು, ವಾಕಾಟಕರು ಮುಂತಾದವರು ವ್ಯಾಪಾರಕ್ಕೆ ಹೆಚ್ಚಿನ ಮಹತ್ವ ನೀಡಲಿಲ್ಲ. ಅವರು ದೊಡ್ಡ ಪ್ರಮಾಣದಲ್ಲಿ ನಾಣ್ಯಗಳನ್ನೂ ಹೊರಡಿಸಲಿಲ್ಲ. ಕೃಷಿ-ವ್ಯವಸಾಯ ಹೆಚ್ಚು ವೃದ್ಧಿಯಾಗುತ್ತಾ ಹೋಯಿತು. ಭೂಮಿಯನ್ನು ದಾನ ನೀಡುವ ಪ್ರಕ್ರಿಯೆ ಹೆಚ್ಚೆಚ್ಚು ಕಾಣಿಸಿಕೊಳ್ಳಲಾರಂಭಿಸಿತು. ಇದು ಊಳಿಗಮಾನ್ಯ ಉತ್ಪಾದನಾ ವಿಧಾನದ ಹುಟ್ಟಿಗೂ ಕಾರಣವಾಯಿತು. ಭೂಮಾಲೀಕ ವರ್ಗಗಳು ನಿರ್ಧಾರಕ ಶಕ್ತಿಗಳಾಗಿ ರೂಪುಗೊಳ್ಳಲಾರಂಭಿಸಿದವು. ವಾಣಿಜ್ಯ ಕೇಂದ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ಮತ್ತೆ ಕಾಣಿಸಿಕೊಳ್ಳುವುದು ಹತ್ತನೆಯ ಶತಮಾನದ ವೇಳೆಗೆ. ಈ ಅವಧಿಯನ್ನು ಭಾರತದ ತೃತೀಯ ನಗರೀಕರಣದ ಅವಧಿ ಎಂಬುದಾಗಿ ಕರೆಯಲಾಗಿದೆ. ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಅವಧಿಗಳಲ್ಲಿ ರಾಜಧಾನಿ ಪಟ್ಟಣಗಳು, ಆಡಳಿತ ಕೇಂದ್ರಗಳು, ಧಾರ್ಮಿಕ ಕೇಂದ್ರಗಳು ಹೆಚ್ಚಾಗಿ ಕಾಣಿಸಿಕೊಂಡವು. ವಾಣಿಜ್ಯ ಕೇಂದ್ರಗಳು ಬೆರಳೆಣಿಕೆಯಷ್ಟೇ ಸಿಗುತ್ತವೆ. ಬಂದರು ಪಟ್ಟಣಗಳಾದ ಮಂಗಳೂರು, ಕಾರವಾರ, ಬಸ್ರೂರು ಮುಂತಾದವು ಈ ಅವಧಿಯಲ್ಲಿ ಹೆಚ್ಚಿನ ಪ್ರೋತ್ಸಾಹವನ್ನು ಪಡೆಯಲಿಲ್ಲ.[36]

ಆರನೆಯ ಶತಮಾನದ ಕೊನೆಯವರೆಗೆ ಆಳಿದ ಪೂರ್ವ ಕದಂಬರು ಬಹುಶಃ ಚಾಲುಕ್ಯರಿಗೆ ಸೋತು ಹಿಮ್ಮೆಟ್ಟಿದರು. ಆದರೂ ಅವರ ಮನೆತನದ ಕೆಲವು ಸಣ್ಣ ಪುಟ್ಟ ಅರಸರು ಚಿತ್ರದುರ್ಗ ಪ್ರದೇಶದಲ್ಲಿ ಆಳ್ವಿಕೆ ಮಾಡುತ್ತಿದ್ದು, ಚಿತ್ರದುರ್ಗ, ಉಚ್ಚಂಗಿ ದುಮ್ಮಿ, ಅಸಂದಿ, ಅಣಜಿ, ಲುಂಕೆ, ಹರಿಹರ ಮುಂತಾದ ಪ್ರದೇಶಗಳು ಕದಂಬರ ಕಾಲದ ಪ್ರಮುಖ ಪಟ್ಟಣಗಳಾಗಿದ್ದು, ವ್ಯಾಪಾರ-ವಾಣಿಜ್ಯಗಳು ನಡೆಯುತ್ತಿದ ಕೇಂದ್ರಗಳು ಎಂಬುದಾಗಿ ಶಾಸನಗಳಿಂದ ತಿಳಿದು ಬಂದಿದೆ.

* * *

ಬಾದಾಮಿ ಚಾಲುಕ್ಯರು ದೇಶಿಯ ರಾಜಮನೆತನದವರಾಗಿದ್ದು ತಮ್ಮ ಅಧಿಪತ್ಯದ ಉಚ್ಛ್ರಾಯ ಕಾಲದಲ್ಲಿ ಕರ್ನಾಟಕವು ಸೇರಿದಂತೆ ಸುತ್ತಲಿನ ಭಾಗವನ್ನೆಲ್ಲ ಆಳುತ್ತಿದ್ದರು. ಬಾದಾಮಿ ಚಾಲುಕ್ಯರ ಮೂಲ ಕುರಿತಾಗಿ ವಿವರಗಳು ಸ್ಪಷ್ಟವಾಗಿಲ್ಲ. ಆರಂಭದಲ್ಲಿ ಬನವಾಸಿಯ ಕದಂಬರ ಸಾಮಂತರಾಗಿದ್ದರೆಂದು ಮುಂದೆ ಈ ವಂಶದ ರಾಜರುಗಳಾದ ಒಂದನೆಯ ಪುಲಿಕೇಶಿ, ಒಂದನೆಯ ಕೀರ್ತಿವರ್ಮ, ಮಂಗಳೇಶ, ಎರಡನೆಯ ಪುಲಿಕೇಶಿ, ಒಂದನೆಯ ವಿಕ್ರಮಾದಿತ್ಯ, ವಿನಯಾದಿತ್ಯ, ವಿಜಯಾದಿತ್ಯ, ಎರಡನೆಯ ವಿಕ್ರಮಾದಿತ್ಯ ಹಾಗೂ ಎರಡನೆಯ ಕೀರ್ತಿವರ್ಮರ ಸುದೀರ್ಘ ಆಡಳಿತದಲ್ಲಿ ಚಾಲುಕ್ಯರು ರಾಜಕೀಯ ಮತ್ತು ಸಾಂಸ್ಕೃತಿಕ ರಂಗಗಳಲ್ಲಿ ಗಮನಾರ್ಹವಾದ ಸೇವೆಯನ್ನು ಸಲ್ಲಿಸಿದ್ದಾರೆ. ಪ್ರಾಚೀನ ಕರ್ನಾಟಕದಲ್ಲಿ ಚಾಲುಕ್ಯರು ಆರ್ಥಿಕ ರಂಗಕ್ಕೆ ಅಪಾರ ಕೊಡುಗೆ ನೀಡಿದ್ದಾರೆ.

ಕೃಷಿ ಮತ್ತು ಕೈಗಾರಿಕೆಗಳ ಉತ್ಪನ್ನವು ಮುಂದೆ ವ್ಯಾಪಾರ ವಾಣಿಜ್ಯಗಳಿಗೆ ದಾರಿ ಮಾಡಿಕೊಡುತ್ತದೆ. ಚಾಲುಕ್ಯ ಸಾಮ್ರಾಜ್ಯವು ದಕ್ಷಿಣ ಭಾರತವನ್ನು ವ್ಯಾಪಿಸಿದ್ದಲ್ಲದೇ ಅದು ಉತ್ತರ ಭಾರತದೊಂದಿಗಿನ ವ್ಯಾಪಾರಕ್ಕೆ ಅನುಕೂಲಕರವಾಗಿತ್ತು. ಅಲ್ಲದೇ ಸಾಮ್ರಾಜ್ಯದ ಸಮುದ್ರ ತೀರ ಪ್ರದೇಶದ ಬಂದರುಗಳು ಬಾಹ್ಯ ದೇಶಗಳೊಂದಿಗೆ ಸಂಪರ್ಕವನ್ನು ಕಲ್ಪಿಸಿದ್ದವು. ಶಾತವಾಹನರ ಕಾಲದಿಂದಲೂ ವ್ಯಾಪಾರದಲ್ಲಿ ಮುಂಚೂಣಿಯಲ್ಲಿದ್ದ ದಕ್ಷಿಣ ಭಾರತವು ಚಾಲುಕ್ಯರ ಆಡಳಿತಾವಧಿಯಲ್ಲಿಯೂ ಉತ್ತಮ ಸ್ಥಿತಿಯಲ್ಲಿ

ಇತ್ತೆಂದು ತಿಳಿದುಬರುತ್ತದೆ.[೫೭] ಚಾಲುಕ್ಯರ ಆರ್ಥಿಕ ವಹಿವಾಟುಗಳ ಕೇಂದ್ರವಾಗಿ ಪರಿಣಮಿಸಿದ್ದ ಐಹೊಳೆಯು ಮುಂದೆ ಪ್ರವರ್ಧಮಾನಕ್ಕೆ ಬೆಳೆದು 'ಐಯ್ಯಾಹೊಳೆ ಐನೂರ್ವರು'[೫೮] ಎಂಬ ಸುಮಾರು ಐದುನೂರು ಸದಸ್ಯರಿಂದ ಕೂಡಿದ ವ್ಯಾಪಾರಿ ಸಂಘ ಶ್ರೇಣಿಯನ್ನು ಹುಟ್ಟುಹಾಕಿತು.

ಇಮ್ಮಡಿ ಪುಲಿಕೇಶಿಯ ಕಾಲದಲ್ಲಿ ಪರ್ಶಿಯಾ ದೇಶದೊಂದಿಗೆ ರಾಜಕೀಯ ಸಂಬಂಧದ ಜೊತೆಗೆ ವಾಣಿಜ್ಯದ ಸಂಬಂಧಗಳು ಸಹ ಇದ್ದವು. ಈ ಕಾಲದಲ್ಲಿ ಖಮೇರ, ಪಾರಸಿಕ, ಸಿಂಹಳ, ರಾಜರುಗಳು ಕಪ್ಪಕಾಣಿಕೆ ನೀಡುತ್ತಿದ್ದರು. ಎಂದು ವಿನಯಾದಿತ್ಯನ ಕ್ರಿ.ಶ. ೭೦೦ರ ಮಯಲೂರು ತಾಮ್ರಪಟ ಶಾಸನಗಳಲ್ಲಿ ಉಲ್ಲೇಖಿಸಿದೆ.[೫೯] ಇದಲ್ಲದೆ ಸತ್ಯಾಶ್ರಯನ ಶಾಸನವು ಹರಿಹರದ ಚಿಲಮಗೆರೆ ಬಸವಣ್ಣನ ದೇವಾಲಯದ ಮುಂಭಾಗದಲ್ಲಿದ್ದು, ಈ ಶಾಸನದಲ್ಲಿ ವ್ಯಾಪಾರಕ್ಕೆ ಸಂಬಂಧಿಸಿದಂತೆ ಶಾಸನದ ಪಾಠ ಈ ರೀತಿ ಇದೆ.

ತ್ರೀ ಜಯತ್ಯಾನಮ್ರರಾಜೇಂದ್ರಚೂಡಾರತ್ನಾಂಕು ... ಯೋಗೀಶ್ಯ
ರಸ್ಯಪಾದಾಬ್ಜಂಕ್ರೀಡಾ...... ಶ್ರಿಯಂ॥ ಸ್ವಸ್ತಿಸಮ
ಸ್ತಭುವನಾಶ್ರಯಂ । ಶ್ರೀಪೃಥ್ವೀವಲ್ಲಭಂಮಹಾರಾಜಾಧಿರಾಜಂಪರಮೇಶ್ಯ
ರಂಪರಮಭಟಾರಕಂಸತ್ಯಾಶ್ರಯಕುಳತಿಳಕಂಚಾಳುಕ್ಯಾಭರಣಂ ।
ಶ್ರೀಮತ್ಪ್ರ–ತಾಪಚಕ್ರವರ್ತ್ತಿಜಗದೇಕಮಲ್ಲದೇವರವಿಜಯರಾಜ್ಯಮು
ತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂಸಲುತ್ತಮಿರೆ ॥ ಶ್ರೀಮ
ತ್‌ಪ್ರತಾಪಚಕ್ರ ವರ್ತ್ತಿಜಗದೇಕಮಲ್ಲವರ್ಷದಯ್ದೆನೆಯದುಂದುಬಿಸಂ
ವತ್ಸರದಶ್ರಾವಣಶುದ್ಧ ಪೌರ್ಣ್ನಮಿಬೃಹಸ್ಪತಿವಾರಸೋಮಗ್ರಹ
ಣದಂದುಭ್ರಾನ್ತಿ ಮೂವತ್ತಱಮನೆಯಐಹರೆಸನಾಯಯ್ಯನಳಿ
ಯಮಾಚರಸರುಂತದನುಜಮಲ್ಲರಸರುಂಕಾಮ .... ಹರಸನುಂಶ್ರೀಹರಿಹ
ರದೇವರಕೂಡಲೂರಲುತಂಮಹೊ .. ಮಣ್ನಿ ನಮನ್ನೆಯಗೆಯ್ಯೊಳಗೆಬೆಳೆಯ
ಗೆಱಯಿಂಪಡುವಲುಕೇಕರಕೊಳದಬ.. ತೆಂಕಲುತಂಮಶ್ರೀಯೋಗೇ
ಶ್ಯರದೇವರ್ಗ್ಗೆನೈವೇದ್ಯಕ್ಕೆಂದುಧಾರಾಪೂರಕಂಮಾಡಿಕೊಟ್ಟ ಎರೆಯಕೆಯಿಮತ್ತರೊಂದು
೧॥ ನಂದನಸಂವತ್ಸರದಚೈತ್ರದಶುದ್ಧ ಪಂಚಮಿಬೃಹಸ್ಪತಿವಾರಪುಷ್ಯ
ನಕ್ಷತ್ರ ವ್ಯತೀಪಾತಯೋಗದಂದುಹಳ್ಳವೂರುಮಾಚರಸರಮಮ್ಮ
ಈಶ್ವರದೇವರಸರುಶ್ರೀಯೋಗೇಶ್ವರದೇವರ್ಗ್ಗೆಮುಂನಬೆಳ್ಯಡಿಯಲುತಂ
ಮಮನ್ನೆ ಯಗೆಯ್ಯೊಳಗೆತಾವುಕೊಟ್ಟಕೆಯ್ಗೆಪ್ರತಿಪೂರವಾ
ಗಿಕೂಡಲೂರಲುತಂಮಮಂನೆಯಕೆಯ್ಯೊಳಗೆಮುಂನಮಾಚರ
ಸರುಕೊಟ್ಟಮತ್ತರೊಂದಱಹತ್ತಿ ರಬಡಗದೆಸೆಯಲುಕೂಡಿಸ್ಥಳವೃತ್ತಿಯಾ
ಗಿಯಾಚಂದ್ರಾರ್ಕ್ಕಸ್ಥಾಯಿಯಾಗಿನಡವಂತಾಗಿಧಾರಾಪೂರ್ವ್ವಕಂಮಾ
ಡಿಕೊಟ್ಟ ಎರೆಯಕೆಯಿಮತ್ತರೆರಡು ೨ ಅನ್ತು ಮತ್ತರುಮೂಱು ೩ ॥ ಊ
ರೊಡೆಯಪ್ರಮುಖಯಶೇಷಮಹಾಜನುಂನೂಱನಾಲ್ವರುಂಶ್ರೀಹರಿಹರದೇ
ವರಮಾಲಗಾಱಗೆಮನೆಯಿಲ್ಲದಿರ್ದ್ದಡೆಶ್ರೀಯೋಗೇಶ್ವರದೇವರಭೂಮಿಯ
ಮಣ್ಣು ಮಱಾಟವಾಗಿವಸನ್ತರಾಮದೇವರಕಯ್ಯಲುಧಾರೆಯಂಕೊಂಡು

ಆಭೂಮಿಗೆಪ್ರತಿವೂರವಾಗಿಶ್ರೀಹರಿಹರದೇವರಕೆಯ್ಯೊಳಗೆ
ಮೊದಲುಎರೆಪಿಟ್ಟೆಯಗುಜುವದಮೊಂಮೇರೆಯಲ್ಲಿಶ್ರೀಯೋಗೇಶ್ವರದೇ
ವರಪಾದಾರಾಧಕರಪ್ಪವಸಂತರಾಮದೇವರ್ಗ್ಗೆಧಾರಾಪೂರ್ವ್ವಕಂಮಾ
ಡಿಕೊಟ್ಟಎಮತ್ತರು೧ ಕಮ್ಮ ೧೦೦ ಯೋಗಿನಾಗದೇವ... ಬೆಟ್ಟದಗೌ
ಡಗೆಜೆಯಕಳೆಗೆತಂಮಅಂಶದಲ್ಲಿಶ್ರೀಯೋಗೇಶ್ವರದೇವರೆ... ದ್ಯಕ್ಕೆಂ
ದುಧಾರಾಪೂರ್ಬ್ಬಕಂಮಾಡಿಕೊಟ್ಟಕೆಂಗಾಡುಕಂಮ ೨೫೦ ಮ ......
ಹದೇವಚಟ್ಟೆಯ್ಯಂಗಳುಶ್ರೀಯೋಗೇಶ್ವರದೇವರ್ಗ್ಗೆಹೂದೋಂಟಕ್ಕೆಂ ....
ಪ್ರಮುಖಅಶೇಷಮಹಾಜನಂಗಳಸಂನಿಧಿಯಲು .........
ಯಹತ್ತಿರೆಮೂಡದೆಸೆಯಲುನೂಱಯ್ವತ್ತು ೧೫೦ ಕಮ್ಮ ....
ದೇವದಾನವಾಗಿಅಚಂದ್ರಾರ್ಕ್ಕಸ್ಥಾಯಿಯಾಗಿನಡವನ್ತಾ ......
ದೇವರ್ಗ್ಗೆಧಾರಾಪೊರ್ಬ್ಬಕಂಮಾಡಿಕೊಟ್ಟರು ॥ ಊರಡೆಯಪ್ಪ .....
ಷಮಹಾಜನಂನೂಱನಾಲ್ವರಸನ್ನಿಧಿಯಲುಸ್ಥಳದಸೆಟ್ಟಿ. ......
ಲ್ಲಿಗರಯ್ವತ್ತೊಕ್ಕಲುಂಶ್ರೀಯೋಗೇರದೇವರ್ಗ್ಗೆನೈವೇದ್ಯ .......
ಅಂಗಡಿಯಲುಅರೆವಾನಪ್ರಮಾಣಿನಲುಅಕ್ಕಿಸಟ್ಟು ......
ದೀವಿಗೆಗೆಗಾಣದಲುಸೊಲ್ಲಗೆಯಪ್ರಮಾಣಿನಲುನಿ .....
ಗೆ ೧ ವಂಆಚಂದ್ರಾರ್ಕ್ಕಸ್ಥಾಯಿಯಾಗಿನವನ್ತಾಗಿಧಾರಾ .......
ಕಂಮಾಡಿಕೊಟ್ಟರು ॥ ಸುಂಕದಹೆಗ್ಗಡೆಹರಿಯಪಯ್ಯನಾಯ ....
ವಾಗಿಸಮಸ್ತಭರತನೆರವಿಯನಿಬರುಂ. ಹೊಳೆಯಸುಂಕದಲ್ಲಿತಿಂ ....
ಹಣಮಂಶ್ರೀಯೋಗೇಶ್ವರದೇವರನೈವೇದ್ಯದಭಿಗಾರಕ್ಕೆಆಚಂದ್ರಾರ್ಕ್ಕ....
ವನ್ತಾಗಿಧಾರಾಪೂರ್ವಕಂಮಾಡಿಕೊಟ್ಟರು ॥ ದಮ್ಮಪಾಳದಂ .....
ಶ್ರೀಯೋಗೇಶ್ವರದೇವರ್ಗ್ಗೆತಾವರೆಯಹಳ್ಳಿಯಲ್ಲಿಧಾರಾಪೂ .....
ಟ್ಟವೃತ್ತಿಯೊಂದಜೊಳಗೆವಸಂತರಾಮದೇವರುಅವೂರ ....
ಅರಳಿಯಗದ್ದೆಯಲ್ಲಿಕಮ್ಮ ೨೨೦ ಹಿರಿಯಕೆಯಬಡ ....
ಕಮ್ಮ ೪೫೦ ನಾರಾಯಣದೇವರಬಡಗದೆಸೆಯಲುಮನೆಯೆ .....
ಂದುಇನ್ತಿನಿತುಭೂಮಿಯುಮಂಶ್ರೀಯೋಗೇಶ್ವರದೇವರ್ಗ್ಗೆಸರ್ವ್ವ .....
ವಾಗಿಕಾದೂಡುವನ್ತಾಗಿಗಿಮೇಲಾದಭೂಮಿಯ್ಮಂಶ್ರೀನಿಜ ....
ಕುಮಾರಗಾಲದಲುಶ್ರೀಯೋಗೇಶ್ವರದೇವರ್ಗ್ಗೆಕೊಟ್ಟ ಅಲ್ಲಿಯಕೊ .....
ಣವೊಂದುವನಾವೂರಮಹಾಜನಂಗಳ್ಗೆಗಾದಪೂಜೆಯಾ .....
ರ್ಮ್ಮಮನಾಮಹಾಜನಂಗಳಾಚಂದ್ರಾರ್ಕ್ಕಸ್ಥಾಯಿಯಾಗಿನಡವೆ ....
ವಾಪಾಲನಂವಾಪಿದಾನಾಛ್ರೇಯೋನುಪಾಲನಂ .....
ತ್ಸ್ವರ್ಗ್ಗಮವಾಪ್ನೋತಿಪಾಲನಾದಚ್ಯುತಂಪದಂ.....[೬೦]

ಈ ಶಾಸನದಲ್ಲಿ ಹರಿಹರದ ಹರಿಹರರೇಶ್ವರ ದೇವಾಲಯ ಮುಂದೆ ಮಾಲಗಾರ ವೃತ್ತಿಯವರಿಗೆ ಸ್ಥಳವನ್ನು ಕಲ್ಪಿಸಿಕೊಡುವುದು, ಆ ಸ್ಥಳದಲ್ಲಿ ಮಾರಾಟವಾಗುವ ವಸ್ತುಗಳಿಗೆ ತೆರಿಗೆ ವಿವರಿಸುವುದು.

ಶೆಟ್ಟಿಗುತ್ತಿಯ ಅರವತ್ತೊಕ್ಕಲುಗಳು ಅವರ ಅಂಗಡಿಯ ಅಕ್ಕಿಯನ್ನು ದೇವರಿಗೆ ನೈವೇದ್ಯಕ್ಕೆ ನೀಡುವುದು. ದೀವಿಗೆಗೆ ಗಾಣದ ಸೊಲ್ಲಿಗೆಯ ಪ್ರಮಾಣದಲ್ಲಿ ಕಂದಾಯ ನೀಡುವುದು. ಹೊಳೆಯ ಸುಂಕವನ್ನು ಯೋಗೇಶ್ವರದೇವರ ನೈವೇದ್ಯಕ್ಕೆ ನೀಡುವುದು, ಅರಳಿಯಗದ್ದೆಯಲ್ಲಿ ಕಮ್ಮ ೨೨೦, ಹಿರಿಯ ಕೆರೆಯ ಹಿಂದಿನ ಗದ್ದೆಯ ತೆರಿಗೆಯನ್ನು ನಾರಾಯಣದೇವರಿಗೆ ನೀಡುವುದು ಎನ್ನುವ ಉಲ್ಲೇಖಗಳಿವೆ. ತೆಲ್ಲಿಗರೈವತ್ತೊಕ್ಕಾಲು[೬೧] ವರ್ತಕ ಸಂಘದ ಉಲ್ಲೇಖ ಈ ಶಾಸನದಲ್ಲಿ ಇದೆ.

ಕ್ರಿ.ಶ ಆರನೇ ಶತಮಾನದಲ್ಲಿ ಗ್ರೀಸ್‌ನ ಅಲೆಕ್ಸಾಂಡ್ರಿಯಾದ ಕಾಸ್‌ಮಸ್ ಎಂಬ ವರ್ತಕನು ಭಾರತಕ್ಕೆ ಭೇಟಿ ನೀಡಿದ್ದು, ವಿಶೇಷವಾಗಿ ಅವನು ಹಲವಾರು ಬಂದರುಗಳನ್ನು ಉಲ್ಲೇಖಿಸಿದ್ದಾನೆ.[೬೨] ಇವುಗಳಲ್ಲಿ ಕಲ್ಲಿಯಾಣ್ (ಕಲ್ಯಾಣ) ಥಾಣಾ, ಬ್ರೋಚ್ (ಭರೂಚ್), ಸೋಪಾರ, ಮಂಗರೂತ್ (ಮಂಗಳೂರು) ಮಲೆ (ಮಲ್ಪೆ) ಮೊದಲಾದವುಗಳು ಚಾಲುಕ್ಯರ ಸಾಮ್ರಾಜ್ಯದಲ್ಲಿದ್ದು ಪ್ರಮುಖ ಬಂದರುಗಳಾಗಿದ್ದವು. ಕಾಸ್‌ಮಸ್‌ನು ಈ ಬಂದರುಗಳನ್ನು ಉಲ್ಲೇಖಿಸುತ್ತಾನೆ.

ಇವನು ಈ ಸ್ಥಳಗಳಿಗೆ ಸ್ವತಃ ಹೋಗಿ ವ್ಯಾಪಾರ ಕೈಗೊಂಡಿದ್ದನೆಂದು ತಿಳಿದುಬರುತ್ತದೆ. ಮತ್ತು ಇಲ್ಲಿಂದ ಅವನು ರಫ್ತು ಮಾಡಿದ ವಸ್ತುಗಳ ವಿವರಗಳು ತಿಳಿದುಬರುತ್ತವೆ. ಮಲ್ಪೆಯು ಆ ಕಾಲದಲ್ಲಿ ಒಂದು ದೊಡ್ಡ ಬಂದರಾಗಿತ್ತೆಂದು ಹೇಳಬಹುದು. ಪುಲಿಕೇಶಿಯ ತಮ್ಮನಾದ ಚಂದ್ರಾದಿತ್ಯನು ಕರಾವಳಿ ಪ್ರದೇಶದ ಅಧಿಕಾರಿಯಾಗಿದ್ದನು. ಚೌಲ್, ಕಲ್ಯಾಣ, ಬ್ರೋಚ್, ಕ್ಯಾಂಬೆ, ಪುರಿ (ಎಲಿಫೆಂಟಾ), ರೇವತಿದ್ವೀಪ (ರೇಡಿ), ಭಟ್ಕಳ, ಹೊನ್ನಾವರ, ಕಲ್ಲಿಕೋಟೆ ಮೊದಲಾದ ಬಂದರುಗಳ ವಿವರವನ್ನು ನಾವು ಪಡೆಯಬಹುದಾಗಿದೆ. ಐಹೊಳೆಯ ಶಾಸನದಲ್ಲಿ ಪುರಿ (ಎಲಿಫೆಂಟಾ) ಬಂದರನ್ನು ಪಶ್ಚಿಮ ಕರಾವಳಿಯ ಲಕ್ಷ್ಮೀ ಎಂದೇ ವಿವರಿಸುತ್ತದೆ. ಈ ಬಂದರುಗಳಿಂದ ರೇಷ್ಮೆ ಬಟ್ಟೆ, ಲೋಳೆಸರದ ಔಷದಗಳು, ಲವಂಗ, ಗಂಧದಮರ, ಸೀಸಮ್ ಮರ, ಮೆಣಸು, ಹತ್ತಿಬಟ್ಟೆ, ಏಲಕ್ಕಿ, ಕರ್ಪೂರ, ಇಂಗು, ಅಡಿಕೆ, ತೆಂಗು, ಶುಂಠಿ, ಸಾಸಿವೆ, ನಿಂಬೆ, ಮುತ್ತು, ರತ್ನ, ವಜ್ರ–ವೈಢೂರ್ಯ ಸುಗಂಧ ದ್ರವ್ಯಗಳು ಮುಖ್ಯವಾಗಿ ರಫ್ತು ಆಗುತ್ತಿದ್ದವು.[೬೩]

ಚಾಲುಕ್ಯರ ರಾಜ್ಯದಲ್ಲಿ ಹೇರಳವಾದ ಆಹಾರ ಧಾನ್ಯಗಳು ಉತ್ಪಾದನೆಯಾಗುತ್ತಿದ್ದವು. ಏಳನೇ ಶತಮಾನದಲ್ಲಿ ಚಾಲುಕ್ಯ ಸಾಮ್ರಾಜ್ಯಕ್ಕೆ ಬಂದಿದ್ದ ಹುಯೆನ್‌ತ್ಸಾಂಗನು ಇಲ್ಲಿ ಹಲವಾರು ಬಗೆಯ ಹಣ್ಣು ಹಂಪಲುಗಳು ಬೆಳೆಯುತ್ತಿದ್ದವು ಎಂದು ಹೇಳಿದ್ದಾನೆ. ಇವುಗಳ ಜೊತೆಯಲ್ಲಿ ನೇಕಾರಿಕೆಯೂ ಒಂದು ಪ್ರಮುಖ ಉದ್ಯಮವಾದಂತೆ ತೋರುತ್ತದೆ. ಏಕೆಂದರೆ ಆ ಕಾಲದಲ್ಲಿನ ಶಿಲ್ಪಗಳನ್ನು ಗಮನಿಸಿದರೆ ಹಲವು ಬಗೆಯ ವಿನ್ಯಾಸದ ಬಟ್ಟೆಗಳು, ಕುಪ್ಪಸ ಇತ್ಯಾದಿಗಳು ಕಂಡುಬರುತ್ತವೆ. ಇದರಿಂದ ಆ ಕಾಲದಲ್ಲಿ ಬಟ್ಟೆಯ ತಯಾರಿಕೆ ಕೂಡಾ ಒಂದು ಪ್ರಮುಖ ಉದ್ಯಮವಾಗಿತ್ತು. ಈ ಹಿನ್ನೆಲೆಯನ್ನು ಗಮನಿಸಿದಾಗ ಚಾಲುಕ್ಯರ ರಾಜ್ಯದಲ್ಲಿ ಬಟ್ಟೆಗಳ ತಯಾರಿಕೆಯು ಉದ್ಯಮವಾಗಿ ಬೆಳೆದಿತ್ತು ಮತ್ತು ಅವುಗಳನ್ನು ರಫ್ತು ಮಾಡುತ್ತಿದ್ದರು ಎಂದು ಊಹಿಸಬಹುದು ಇದರ ಜೊತೆಗೆ ಇನ್ನಿತರ ಉದ್ಯಮಗಳಾದ ಕಮ್ಮಾರಿಕೆ, ಕಂಚುಗಾರಿಗೆ, ಕುಂಬಾರಿಕೆ, ವಜ್ರ ಕೈಗಾರಿಕೆ, ಅಕ್ಕಸಾಲಿಗ, ಬಡಗಿತನದಂತಹ ಕರಕುಶಲ ಕೈಗಾರಿಕೆಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದವು.[೬೪] ಅಷ್ಟೇ ಅಲ್ಲದೆ ಶೃಂಗಾರ ಸಾಧನಗಳ ತಯಾರಿಕೆಯು ಪ್ರಮುಖ ಉದ್ಯಮವಾಗಿತ್ತೆಂದು ತಿಳಿದುಬರುತ್ತದೆ.

ಈಜಿಪ್ಟ್ ದೇಶದ ವ್ಯಾಪಾರಿ ಕಾಸ್ಮಸ್ ಎಂಬಾತನು ಆರನೆಯ ಶತಮಾನದ ದಕ್ಷಿಣ ಭಾರತದ ವ್ಯಾಪಾರದ ಚಿತ್ರಣವನ್ನು ನೀಡಿದ್ದಾನೆ. ದವಸಧಾನ್ಯಗಳು, ಮಸಾಲೆ ಪದಾರ್ಥಗಳು, ಆನೆಗಳು, ಕುದುರೆಗಳು,

ಸುಗಂಧದ್ರವ್ಯಗಳು, ದಂತದ ವಸ್ತುಗಳು, ವಿವಿಧ ಬಟ್ಟೆಗಳು, ಬಂಗಾರ ಬೆಳ್ಳಿಗಳು ಮತ್ತು ರೇಷ್ಮೆಯ ವಸ್ತುಗಳು ಪ್ರಮುಖವಾಗಿದ್ದವೆಂದು ತಿಳಿಸುತ್ತಾನೆ.[೬೦] ವ್ಯಾಪಾರದ ಸರಕುಗಳನ್ನು ಭೂ ಮಾರ್ಗವಾಗಿ ಬೃಹತ್ತಾಕಾರದ ಬಂಡಿ, ಚಕ್ಕಡಿಗಳನ್ನು ಒಂಟೆ, ಎತ್ತು, ಕುದುರೆ, ಕತ್ತೆಗಳಿಂದ ಒಯ್ಯುತ್ತಿದ್ದರು. ಸ್ಥಳೀಯವಾಗಿ ನಗರ-ಪಟ್ಟಣಗಳಲ್ಲಿ ಸಣ್ಣ ಬಂಡಿಗಳನ್ನು ಮತ್ತು ಕೈಗಾಡಿಗಳನ್ನು, ದೂರದ ಸ್ಥಳಗಳಿಗೆ ಬೃಹತ್ ಆಕಾರದ ಬಂಡಿಗಳನ್ನು ಬಳಸುತ್ತಿದ್ದರು. ಜೊತೆಗೆ ಸಮುದ್ರ ವ್ಯಾಪಾರವು ಇತ್ತೆಂದು ಕೌಲಯಮಾಲಾದಿಂದ ವ್ಯಕ್ತವಾಗುತ್ತದೆ. ಸಿದ್ಧಯಾತ್ರಾ[೬೧] ಎಂಬ ಈ ಗ್ರಂಥದಲ್ಲಿ ಕಂಡು ಬರುವ ಪದವು ಬಹುಶಃ ಸಮುದ್ರ ಮಾರ್ಗಕ್ಕೆ ಸಂಬಂಧಿಸಿರಬೇಕೆಂದು ತಿಳಿದುಬರುತ್ತದೆ.

ಚಾಲುಕ್ಯರ ಕಾಲಾವಧಿಯಲ್ಲಿ ಕೈಗಾರಿಕೋದ್ಯಮಗಳು ಬೃಹತ್ ರೂಪವನ್ನು ಹೊಂದಿರದೇ ಸ್ಥಳೀಯ ಸಂಸ್ಥೆಗಳ ಅಧೀನದಲ್ಲಿ ಸಣ್ಣ ಪ್ರಮಾಣದಲ್ಲಿ ಉತ್ಪಾದನೆಯನ್ನು ಮಾಡಲಾಗುತ್ತಿತ್ತು. ವಸ್ತುಗಳ ಮೇಲೆ ವಿಧಿಸುವ ತೆರಿಗೆಗಳಿಂದ ಇಲ್ಲಿ ಉದ್ದಿಮೆಗಳಿದ್ದ ಬಗೆಗೆ ತಿಳಿದುಬರುತ್ತದೆ. ಕೃಷಿಯ ಜೊತೆಗೆ ಉದ್ದಿಮೆಗಳಿಗೂ ಸೂಕ್ತವಾದ ಗಮನವನ್ನು ನೀಡಲಾಗುತ್ತಿತ್ತು. ಬೃಹತ್ ಸಾಮ್ರಾಜ್ಯವನ್ನು ವಿಸ್ತರಿಸಿದ್ದಲ್ಲದೇ ಅವಶ್ಯಕವಾದ ಉಪಕರಣಗಳ ಜೊತೆಗೆ ದಿನನಿತ್ಯದ ಜೀವನಕ್ಕೆ ಬೇಕಾಗುವ ವಸ್ತುಗಳ ತಯಾರಿಕೆಯು ಅವಶ್ಯಕವೆನಿಸಿತ್ತು. ಉದ್ದಿಮೆಗಳ ಕುರಿತಾಗಿ ನೇರವಾಗಿ ಉಲ್ಲೇಖಗಳು ಲಭ್ಯವಾಗಿಲ್ಲವಾದರೂ ಶಿಲ್ಪಕಲಾಕೃತಿಗಳೇ ಪ್ರಮುಖ ಆಧಾರಗಳಾಗಿವೆ. ಆಭರಣಗಳ ರಚನೆ, ಪೀಠೋಪಕರಣಗಳು, ಸಂಗೀತ ವಾದ್ಯಗಳಿಗೆ ಸಂಬಂಧಿಸಿದ ಉಪಕರಣಗಳು, ಪಂಚಲೋಹಗಳಿಂದ ಮಾಡಿದ ವಿಗ್ರಹಗಳು, ಕಬ್ಬಿಣದಿಂದ ತಯಾರಿಸಿದ ಯುದ್ಧೋಪಕರಣಗಳು, ಹತ್ತಿ, ರೇಷ್ಮೆಯಿಂದ ತಯಾರಿಸಿದ ಉಡುಪುಗಳು, ದಿನನಿತ್ಯದ ಜನಜೀವನಕ್ಕೆ ಬೇಕಾಗಿದ್ದ ಎಣ್ಣೆ, ಬೆಲ್ಲ (ಗಾಣಗಳಿಂದ) ಸಕ್ಕರೆಗಳನ್ನು ತಯಾರಿಸುವ ಉದ್ದಿಮೆಗಳಿದ್ದವೆಂದು ವ್ಯಕ್ತವಾಗುತ್ತದೆ. ಗಾಣಗಳು ಸಹ ಈ ಕಾಲಕ್ಕೆ ಚಿಕ್ಕ ಉದ್ದಿಮೆಗಳೆಂಬುದಾಗಿ ಪರಿಗಣನೆಗೆ ತೆಗೆದುಕೊಳ್ಳಲಾಗುತ್ತಿತ್ತು. ಕೆಲವು ವಸ್ತುಗಳು ಗೃಹ ಕೈಗಾರಿಕೆಗಳಿಂದಲೂ ಉತ್ಪಾದನೆ ಮಾಡಲಾಗುತ್ತಿತ್ತು.[೬೨] ಮುಂದೆ ಇವು ಬೃಹತ್ ಉದ್ದಿಮೆಗಳ ರೂಪವನ್ನು ಪಡೆದುಕೊಂಡವು.

ಕ್ರಿ.ಶ. ೭೩೨-೩೩ರ ಒಂದು ಶಾಸನವು ಆ ಕಾಲದ ಕೆಲವು ಮಾಪಕಗಳ ಪಟ್ಟಿಯನ್ನು ಕೊಡುತ್ತದೆ. ಮಣ, ಸೇರು, ವೀಸ, ಭಾಂಡಪೇರು ಇವು ಉಲ್ಲೇಖಗೊಂಡಿವೆ. ಇವುಗಳಲ್ಲಿ 'ಮಣ' ಎಂಬುದು ಆಧುನಿಕ ಮಣದಳತೆಯೇ (೧೧.೨ ಕಿಲೋಗ್ರಾ) ಆಗಿದೆ. 'ಪೇರು' ಎಂಬುದು ೬೪ ಸೇರಿನ ಒಂದು ಕಾಳಿನ ಮೂಟೆಗೆ ಸಮ. 'ವೀಸ' ಅಥವಾ 'ವೀಸೆ' ಎಂಬುದು ದಕ್ಷಿಣ ಕರ್ನಾಟಕದಲ್ಲಿ ಮೊನ್ನೆ ಮೊನ್ನೆಯವರೆಗೆ ಪ್ರಚಲಿತವಿದ್ದ ಅಳತೆ. ೧೨೦ ರೂಪಾಯಿಗಳ ತೂಕಕ್ಕೆ ಅಥವಾ ೫ ಸೇರಿನಳತೆಗೆ ಸಮನಾವಾದ ಪ್ರಮಾಣ 'ಭಾಂಡಪೇರು' ಒಂದು ಭಂಡಿಯ ಭಾರದಳತೆ.[೬೩] ಕುಳ ಎಂಬುದು ಧಾನ್ಯದಳತೆ. ಫ್ಲೀಟರು ಇದನ್ನು ೬೪ ಸೇರು ಅಥವಾ ೧೭. ೨೮ ಕಿಲೋಗ್ರಾಂ ತೂಕದಳತೆಗೆ ಸಮವಾದ 'ಕೊಳಗ' ಎಂಬ ಅಳತೆಯೆಂದು ಗುರುತಿಸಿದ್ದಾರೆ. 'ಸೊಂಟಿಗೆ' ಎಂಬುದು ದ್ರವಪದಾರ್ಥಗಳ ಮಾಪಕ 'ಎಲ್ಲಿದ್ದರೂ ಪ್ರತಿಯೊಂದು ಎಣ್ಣೆಗಾಣದವರು ಒಂದು ಸೊಂಟಿಗೆ ಎಣ್ಣೆಯ ದಾನವೀಯಬೇಕೆಂದು'[೬೪] ಕ್ರಿ.ಶ. ೭೧೮ರ ಶಾಸನವೊಂದು ಉಲ್ಲೇಖಿಸುತ್ತದೆ. ಫ್ಲೀಟರು 'ಸೊಂಟಿಗೆ' ಎಂಬುದು ಇಂದಿನ ಒಂದು 'ಸವುಟು' ಎಂಬಳತೆಗೆ ಸಮ ಎಂದಿದ್ದಾರೆ. ಆದರೆ 'ಸವುಟು' ಎಂಬುದು ವಿವಿಧ ಆಕಾರದ ಮತ್ತು ಅಳತೆಯಲ್ಲಿರುವುದರಿಂದ ಒಂದು ನಿರ್ದಿಷ್ಟ ಅಳತೆಯ 'ಸೊಂಟಿಗೆ'ಯನ್ನು ಎಣ್ಣೆಯ ಮಾಪನಕ್ಕಾಗಿ ಬಳಸುತ್ತಿದ್ದಿರಬೇಕು.

ಶಾಸನಗಳು ಮೇಲಿಂದ ಮೇಲೆ 'ರಾಜಮಣ' ಎಂಬ ಅಳತೆಯನ್ನು ಉಲ್ಲೇಖಿಸುತ್ತಿವೆ. ಇದು ಬಹುಶಃ ಒಂದು ಆಡಳಿತದವರು ನಿರ್ದಿಷ್ಟಪಡಿಸಿದ್ದ ಅಳತೆ ಎಂದು ತೋರುತ್ತದೆ. 'ಮಸ್ತರ'ವು ಅಥವಾ 'ಮತ್ತಲ' ಮತ್ತು 'ನಿವರ್ತನ'ಗಳು ಭೂಮಿಯಳತೆಯ ಮಾಪಕಗಳು. 'ಮತ್ತರ'ವು ೪ ಅಥವಾ ೫ ಎಕರೆ ಭೂಮಿಗೆ ಸಮ; ಎಂದರೆ ಒಂದು 'ನಿವರ್ತನ'ದ ಅಳತೆಗೆ ಸರಿಯಾದುದು. ಭೂಮಿಯನ್ನು ಅದರ ಸಾಗುವಳಿಯ ಯೋಗ್ಯತೆಯ ಪ್ರಕಾರವಾಗಿ 'ಖಜ್ಜನ' 'ವಾಗುಲಕಚ್ಚಕ್ಷೇತ್ರ', 'ಗಜ್ಜೆ', 'ನೆಲ್ಲುಗೆ' ಇತ್ಯಾದಿಯಾಗಿ ವಿಭಜಿಸುತ್ತಿದ್ದರು. ಈ ಪದಗಳಲ್ಲಿ ಗಜ್ಜೆ ಎಂಬುದು ಕನ್ನಡದ 'ಗದ್ದೆ' ಎಂಬ ಪದದ ಪ್ರಾಚೀನ ರೂಪ, ಇದರ ಅರ್ಥ 'ತರಿಜಮೀನು' ಎಂದು. 'ನೆಲ್ಲುಗೆ' ಎಂದರೆ ಭತ್ತ ಬೆಳೆಯುವ ಭೂಮಿ, ನೆಲ್ಲು ಎಂದರೆ ಅಕ್ಕಿ ಎಂಬರ್ಥ ಇಂದಿಗೂ ಪ್ರಚಲಿತವಿದೆ. 'ವಾಕುಲ-ಕಚ್ಚ-ಕ್ಷೇತ್ರ' ಎಂಬುದು 'ವಾಕು'ವೆಂಬ ಹುಲ್ಲು ಬೆಳೆಯುವ ಜವುಳು ಭೂಮಿ, 'ಖಜ್ಜನ' ಪದದ ಅರ್ಥ ತಿಳಿದಿಲ್ಲ.[೭೦]

ಒಟ್ಟಾರೆಯಾಗಿ ಚಿತ್ರದುರ್ಗ ಪ್ರದೇಶದಲ್ಲಿ ಚಾಲುಕ್ಯ ಮನೆತನವು ಆಳ್ವಿಕೆಯನ್ನು ಮಾಡಿದ್ದು ಅನೇಕ ಶಾಸನಗಳನ್ನು ಈ ಪ್ರದೇಶದಲ್ಲಿ ಹಾಕಿಸಿದ್ದಾರೆ. ಹಾಗೆಯೇ ಇವರ ಶಾಸನಗಳಲ್ಲಿ ಕ್ರಿ.ಶ. ಸುಮಾರು ೬ನೆಯ ಶತಮಾನದ ಮಧ್ಯದಿಂದ ದಕ್ಷಿಣ ಭಾರತದಲ್ಲಿ ಬಾದಾಮಿ ಚಾಲುಕ್ಯರಿಗೆ ಹಾಗೂ ಕಂಚಿಯ ಪಲ್ಲವರಿಗೆ ಮತ್ತು ಮಧುರೆಯ ಪಾಂಡ್ಯರಿಗೆ ಅಧಿಕಾರಕ್ಕಾಗಿ, ಸಾಮ್ರಾಜ್ಯದ ವಿಸ್ತರಣೆಗಾಗಿ ಕಿತ್ತಾಟಗಳು ನಡೆಯುತ್ತಲೇ ಇದ್ದವು. ಇಂತಹ ಸಮಯದಲ್ಲಿ ಪರ್ಶಿಯಾದಿಂದ ಬಂದ ವರ್ತಕ ಸಮುದಾಯಗಳು ದಕ್ಷಿಣ ಭಾರತದ ವ್ಯಾಪಾರ ವಾಣಿಜ್ಯಕ್ಕೆ ಹೊಸ ತಿರುವನ್ನು ನೀಡಿದಂತಾಗಿ ಆರ್ಥಿಕ ಕ್ಷೇತ್ರದಲ್ಲಿ ಪಲ್ಲಟನೆಯನ್ನು ಉಂಟು ಮಾಡಿರುವುದು ಗಮನರ್ಹ ವಿಷಯವಾಗಿದೆ. ಆರು-ಏಳನೇ ಶತಮಾನದಲ್ಲಿ ಬೃಹತ್ ಪ್ರಮಾಣದ ವರ್ತಕ ಸಂಘಗಳು ಶ್ರೇಣಿಗಳನ್ನು ರೂಪಿಸಿಕೊಂಡು ಸ್ಥಳೀಯ ಸಮುದಾಯಗಳ ಒಗ್ಗೂಡುವಿಕೆ ಹಾಗೂ ಪರಸ್ಪರ ವ್ಯಾಪಾರ ವಿನಿಮಯ ಮಾಡಿಕೊಂಡ ಅಂಶಗಳು ಈ ಪ್ರದೇಶದ ಅನೇಕ ಶಾಸನಗಳಿಂದ ಗುರುತಿಸಬಹುದಾಗಿದೆ. ಚಾಲುಕ್ಯರ ಕಾಲದಲ್ಲಿ ವ್ಯಾಪಾರವು ರಾಜ್ಯದ ಆದಾಯಗಳಲ್ಲಿ ಒಂದು ಎಂದು ಹೇಳಬಹುದು. ಏಕೆಂದರೆ ವ್ಯಾಪಾರದ ವಸ್ತುಗಳ ಮೇಲೆ ವಿಧಿಸುತ್ತಿದ್ದ ತೆರಿಗೆಯು ರಾಜ್ಯದ ಬೊಕ್ಕಸಕ್ಕೆ ಸೇರುತ್ತಿತ್ತು. ಉದ್ಯೋಗ ಸಂಘಗಳು ಹುಟ್ಟಿಕೊಂಡಿದ್ದವು. ಈ ಕುರಿತು ವಿಶೇಷವಾಗಿ ಐಯ್ಯಾವೊಳೆ ಐನೂರ್ವರರ ಕುರಿತು ಹಿಂದೆ ವಿವರವಾಗಿ ಹೇಳಿದ್ದೇವೆ. ಸಾಮಾನ್ಯ ವರ್ತಕ ಸಂಘಗಳಿಗೆ ಮುಖ್ಯವಾಗಿ ನಾಯಕನೋರ್ವ ಇರುತ್ತಿದ್ದು, ಅವನ ಮಾರ್ಗದರ್ಶದಲ್ಲಿ ವ್ಯಾಪಾರವು ನಡೆಯುತ್ತಿತ್ತು ಎಂದು ಹೇಳಬಹುದು. ಈ ಕಾಲದ ಕೆಲವು ಶಾಸನಗಳು ಹಲವಾರು ಉದ್ಯೋಗ ವರ್ಗಗಳನ್ನು ಹೆಸರಿಸುತ್ತದೆ. ಈ ಮೇಲೆ ಹೆಸರಿಸಿದ ಕರಕುಶಲ ಉದ್ಯೋಗಗಳ ಜೊತೆಯಲ್ಲಿ ಆ ಕಾಲದ ಅಳತೆ ಸಾಧನಗಳು, ಸಂಘ-ಸಂಸ್ಥೆಗಳು ಪ್ರತಿಯೊಂದು ಹಂತದ ಕೈಗಾರಿಕೆ ಅಥವಾ ವಾಣಿಜ್ಯದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದವು. ಪ್ರಾಯಶಃ ಈ ಎಲ್ಲ ಕಾರಣದಿಂದಲೇ ಚಾಲುಕ್ಯರ ಕಾಲವು ಆರ್ಥಿಕವಾಗಿ ಪ್ರಬಲವಾದ ರಾಜ್ಯವಾಗಿತ್ತು. ಚಾಲುಕ್ಯರ ಅವನತಿಯ ನಂತರ ಅವರ ಕಾಲದ ಎಲ್ಲ ವಾಣಿಜ್ಯದ ಚಟುವಟಿಕೆಗಳು ರಾಷ್ಟ್ರಕೂಟರ ಅಧೀನದಲ್ಲಿ ಮುಂದುವರೆದುಕೊಂಡು ಹೋದವು.

ರಾಷ್ಟ್ರಕೂಟರು ಬಾದಾಮಿ ಚಾಲುಕ್ಯರ ಮಾಂಡಳಿಕರಾಗಿದ್ದರು. ಕ್ರಿ.ಶ.೭೫೩ರ ಹೊತ್ತಿಗೆ ರಾಷ್ಟ್ರಕೂಟರು ಬಾದಾಮಿ ಚಾಲುಕ್ಯರಿಂದ ಸಾಮ್ರಾಜ್ಯವನ್ನು ಗೆದ್ದುಕೊಂಡಿದ್ದರು. ಪ್ರಭುತ್ವಗಳು ನಿರಂತರವಾಗಿ ಬದಲಾವಣೆಯನ್ನು ಪಡೆದುಕೊಂಡವು. ಅವುಗಳನ್ನು ರಾಜಕೀಯ ಕೇಂದ್ರಿತವಾಗಿ ಅಧ್ಯಯನ ಮಾಡುವ

ಅನಿವಾರ್ಯತೆಯನ್ನು ಅರಿತಾಗ ನಿಜವಾಗಿಯೂ ಅರಸು ಮನೆತನಗಳು ವಿಫಲತೆ ಸಾಧಿಸಿದ್ದು ಶಕ್ತಿ ಸಾಮರ್ಥ್ಯಗಳಿಂದ ಅಲ್ಲ ಅದು ಆರ್ಥಿಕ ದುರ್ಬಲತೆಯಿಂದ ಎಂಬುವುದು ತಿಳಿದು ಬರುತ್ತದೆ.

ರಾಷ್ಟ್ರಕೂಟರ ರಾಜರು ತಮಗೆ ಸೈನ್ಯಬಲವನ್ನು ನೀಡಿ ಬೆಂಬಲಿಸಿದವರಿಗೆ ಒಂದು ವಿಶೇಷ ಪರವಾನಿಗೆ ನೀಡಿದ್ದರು; ಅದೇನೆಂದರೆ, ಅವರ ಅಧೀನದಲ್ಲಿದ್ದ ಪ್ರದೇಶದಲ್ಲಿ ಭೂಮಿಯನ್ನು ತಮ್ಮಿಷ್ಟ ಬಂದವರಿಗೆ ದಾನ ಮಾಡುವ ಹಕ್ಕು.[೬೧] ಧಾರ್ಮಿಕ ಆಚರಣೆಯ ಮೂಲಕ ಇಲ್ಲವೆ ಸೈನಿಕ ಬಲವನ್ನು ಒದಗಿಸುವ ಮೂಲಕ ಸೇವೆ ಸಲ್ಲಿಸಿದವರಿಗೆ ರಾಜರು ಭೂಮಿಯನ್ನು ಯಥೇಚ್ಛವಾಗಿ ದಾನ ಮಾಡುವ ಪರಿಪಾಠವನ್ನು ಬೆಳೆಸಿಕೊಂಡಿದ್ದರು. ಇಂತಹ ದಾನಗಳನ್ನು ಮಾಡಬೇಕಾದರೆ ಮೊದಲೇ ಭೂಮಿಯಲ್ಲಿ ಕೃಷಿ ಮಾಡುತ್ತಿದ್ದವರು ಭೂಮಿಯನ್ನು ಕಳೆದುಕೊಳ್ಳುತ್ತಿದ್ದರು ಇಲ್ಲವೆ ಹೊಸ ಒಡೆಯರ ಊಳಿಗದವರಾಗಿ ಬಿಡುತ್ತಿದ್ದರು. ಆರ್.ಎಸ್.ನಂದಿ ಬೇರೊಂದು ಪುರಾವೆಯನ್ನೊದಗಿಸಿದ್ದಾರೆ. ಅದು ರಾಷ್ಟ್ರಕೂಟ ರಾಜರಿಗೆ ಸಂಬಂಧಿಸಿದ್ದು. ಕರ್ನಾಟಕದ ೬೦ ಬ್ರಾಹ್ಮಣ ಕುಟುಂಬಗಳಿಗೆ ಮತ್ತು ೨೪೦ ಕರಾಡ್ ಬ್ರಾಹ್ಮಣ ಕುಟುಂಬಗಳಿಗೆ ಕ್ರಿ.ಶ. ೯೩೦ರಲ್ಲಿ ಮಾನ್ಯಖೇಟದ ಪಶ್ಚಿಮ ಸೀಮಾ ರೇಖೆಯ ಬಳಿ ಒಂದು ಹಳ್ಳಿಯನ್ನು ದಾನವಾಗಿ ನೀಡಲಾಯಿತು. ಹಾಗೆಯೇ ಹಿರಿಯೂರು ಶಾಸನದಲ್ಲಿ ದಾನ ನೀಡಿದ ಸಂಪೂರ್ಣ ಹಳ್ಳಿಗೆ ಒಂದು ಬೃಹತ್ ಕೆರೆ ಇದ್ದು ಅದಕ್ಕೆ ನಾಲ್ಕು ಕಾಲುವೆಗಳ ನೀರಾವರಿ ಭೂಮಿ ಇದ್ದ ಅಂಶವಿದೆ.[೬೨] ತನ್ನ ಸುತ್ತಲಿನ ಗ್ರಾಮಗಳಲ್ಲಿ ೪ ಖಂಡುಗ ಭತ್ತ ಬೆಳೆಯುವ ಭೂಮಿಯನ್ನು ದಾನ ನೀಡಿರುವ ಅಂಶ ದಾವಣಗೆರೆ ಶಾಸನದಲ್ಲಿದೆ.[೬೩] ರಾಜರ ಸೇವೆಯಲ್ಲಿದ್ದ ಅಧಿಕಾರಿಗಳಿಗೂ ಸಹ ಭೂಮಿಯಿಂದ ಬರುತ್ತಿದ್ದ ತೆರಿಗೆಯ ಭಾಗಗಳನ್ನು ಹಂಚಿಬಿಡಲಾಗುತ್ತಿತ್ತು ಎಂದು ಹೂಯೆನೆತ್ಸಾಂಗ್ ಹೇಳಿರುವುದಾಗಿ ವಿ.ಕೆ.ಠಾಕೂರ್ ದಾಖಲಿಸಿದ್ದಾರೆ.[೬೪] ಆರಂಭಿಕ ಊಳಿಗಮಾನ್ಯ ಪದ್ಧತಿಯ ಸಂದರ್ಭದಲ್ಲಿ ಕನ್ನಡ ನಾಡಿನ ಎಲ್ಲ ರಾಜಮನೆತಗಳೂ ಬ್ರಾಹ್ಮಣರಿಗೆ ಅಗ್ರಹಾರಗಳನ್ನು ದಾನ ಮಾಡಿವೆ. ಅಂತಹ ಮನೆತನಗಳಲ್ಲಿ ರಾಷ್ಟ್ರಕೂಟರು, ಹೊಯ್ಸಳರು, ಕಲ್ಯಾಣದ ಚಾಲುಕ್ಯರು, ಕಲಚೂರಿಗಳು, ಸೇವುಣರು ಎಲ್ಲ ಅರಸು ಮನೆತನದವರು ಸೇರಿದ್ದಾರೆ. ಹೀಗೆ ಅಸ್ತಿತ್ವಕ್ಕೆ ಬಂದ ಅಗ್ರಹಾರಗಳ ಸಂಖ್ಯೆಯನ್ನು ಗಮನಿಸಿದರೆ ಒಟ್ಟು ಪ್ರಭುತ್ವಗಳ ಶೇಕಡ ೬೦ರಷ್ಟು ದಾನ ಪಡೆದ ಅಗ್ರಹಾರಗಳ ಸಂಖ್ಯೆಯೇ ಹೆಚ್ಚು. ಉದಾಹರಣೆಗೆ ೯ನೇ ಶತಮಾನದಲ್ಲಿ ೫, ೧೦ನೇ ಶತಮಾನದಲ್ಲಿ ೧೩, ೧೧ನೇ ಶತಮಾನದಲ್ಲಿ ೪೩, ೧೨ನೇ ಶತಮಾನದಲ್ಲಿ ೫೧ ಮತ್ತು ೧೩ನೇ ಶತಮಾನದಲ್ಲಿ ೩೦ ಅಗ್ರಹಾರಗಳು ಅಸ್ತಿತ್ವಕ್ಕೆ ಬಂದವು. ಇಷ್ಟೊಂದು ಅಗ್ರಹಾರಗಳಿಂದ ಒಟ್ಟು ಎಷ್ಟು ಭೂಮಿ ಹಸ್ತಾಂತರವಾಯಿತು ಮತ್ತು ಎಷ್ಟು ಕೃಷಿಕ ಕುಟುಂಬಗಳು ಭೂಮಿಯನ್ನು ಕಳೆದುಕೊಂಡವು ಎಂಬುದನ್ನು ಊಹಿಸಿಕೊಳ್ಳಬಹುದು.[೬೫] ಇದರಿಂದ ಸಾಮಾನ್ಯರ ಜನಜೀವನವು ದೊಡ್ಡ ಪ್ರಮಾಣದಲ್ಲಿ ಬಿಕ್ಕಟ್ಟುಗಳಿಗೆ ಸಿಲುಕಿದವು. ಕನ್ನಡ ನಾಡಿನ ಚರಿತ್ರೆಯಲ್ಲಿ ಈ ಶತಮಾನಗಳು ಬ್ರಾಹ್ಮಣರಿಗೆ ಸುವರ್ಣಯುಗದೋಪಾದಿಯಲ್ಲಿದ್ದವೆಂದರೆ ತಪ್ಪಾಗದು.

ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದ ಬ್ರಾಹ್ಮಣರ ಅಗ್ರಹಾರದ ಉಲ್ಲೇಖವಿರುವ ಶಾಸನವು ಗೊಡಬನಾಳ್ ಗ್ರಾಮದಲ್ಲಿದ್ದು, ರಾಷ್ಟ್ರಕೂಟರ ಕಾಲದಲ್ಲಿ ಚಿತ್ರದುರ್ಗ ಪ್ರದೇಶವನ್ನು ಕದಂಬಳಿಗೆ

ನಾಡು ಎಂದು ಕರೆಯುತ್ತಿದ್ದು, ಸಾವಿರ ಬಳ್ಳಿಗಳ ಎಲೆ ತೋಟವನ್ನು ಅಗ್ರಹಾರಕ್ಕೆ ದಾನ ನೀಡಿದ ಕನ್ನಯ್ಯನ ಉಲ್ಲೇಖವಿದೆ. ಹಾಗೆಯೇ ಎಪಿಗ್ರಾಫಿಯಾ ಕರ್ನಾಟಿಕ ಸಂ:೧೧ರ ಚಿತ್ರದುರ್ಗ ತಾಲೂಕಿನ ಶಾಸನ ಸಂಖ್ಯೆ ೭೮ರಲ್ಲಿ ಭತ್ತ ಬೆಳೆಯುವ ನಾಲ್ಕು ಗ್ರಾಮಗಳನ್ನು, ಕಪಿಲೆಗಳನ್ನು ಸಿರಿಯಮ್ಮ ಗೌಡನು ಭೋಗೇಶ್ವರದೇವರ್ಗ್ಗೆ ತೋಂಟದಲಾದ ಗಾವುಣ್ಡ ಸುಂಕ ಬಿಟ್ಟ ಉಲ್ಲೇಖವಿದೆ.[೬೬] ಹಾಗೆಯೇ ಪ್ರಾಚೀನ ಕರ್ನಾಟಕದಲ್ಲಿ ಅನೇಕ ತೆರಿಗೆಗಳನ್ನು ವಸೂಲು ಮಾಡಲಾಗುತ್ತಿತ್ತು. ಅವುಗಳಲ್ಲಿ ಒಟ್ಟೊಟ್ಟಾಗಿ ಸಾಮಾನ್ಯವಾಗಿ ವಡ್ಡರಾವುಳ, ಪೆರ್ಜ್ಜುಂಕ ಮತ್ತು ಬಿಲ್ಕೊಡೆ ಕಾಣಿಸಿಕೊಳ್ಳುತ್ತವೆ. ಶ್ರೀನಿವಾಸ ರಿತ್ತಿ ತಮ್ಮ 'ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶದಲ್ಲಿ'[೬೭] ವಡ್ಡರಾವುಳ ವೃದ್ಧರಾಜಕುಲ ಎಂಬ ಸಂಸ್ಕೃತ ಪದದಿಂದ ಬಂದ ಶಬ್ದವೆಂದು ರಾಜ ಮನೆತನದ ವೃದ್ಧರ ಪೋಷಣೆಗಾಗಿ ಈ ಕರವನ್ನು ಹಾಕಲಾಗುತ್ತಿತ್ತೆಂದು ಹೇಳಿರುತ್ತಾರೆ. ಆದರೆ ಈ ವಿವರಣೆ ಸಂದರ್ಭಕ್ಕೆ ಹೊಂದುವುದಿಲ್ಲ. ಬಹುಶಃ ನಗದು ವ್ಯಾಪಾರಕ್ಕೆ ಸಂಬಂಧಿಸಿದ ದೊಡ್ಡ ಮೊತ್ತದ ತೆರಿಗೆ ಇರಬೇಕು ಎಂದು ತಿಳಿಸುತ್ತಾರೆ. ಪೆರ್ಜ್ಜುಂಕ ಕುರಿತಾಗಿ ಹಿರಿದಾದ ಸುಂಕ, ಯಾವುದೊಂದು ಊರಿನ ಅಥವಾ ಪ್ರದೇಶದ ಒಟ್ಟು ಸುಂಕ, ಹೆಚ್ಚು ಆದಾಯ ತರುವ ಸುಂಕ ಎಂಬ ವಿವರಣೆ ಇದೆ.

ಸಾಮಾನ್ಯವಾಗಿ ವಡ್ಡರಾವುಳ ಮತ್ತು ಪೆರ್ಜ್ಜುಂಕವನ್ನು ಒಟ್ಟಾಗಿ ಅನೇಕ ಶಾಸನಗಳಲ್ಲಿ ನಮೂದಿಸಿರುವದನ್ನು ಕಾಣಬಹುದು. ಇದು ಮಾರಾಟದ ಸರಕುಗಳ ಮೇಲಿನ ಕರ ಎಂಬ ವಿವರಣೆ ಇದೆ.

ಗವರೇಶ್ವರ ದೇವರ ಅಂಗಭೋಗಕ್ಕದಲ್ಲಿಯ ಖಂಡ
ಸ್ಫುಟಿತ ಜೀರ್ಣೋದ್ಧಾರಕಂ ಕೊಟ್ಟ ಧಂರ್ಮ್ಮಾಯಂ
ಶ್ರೀನಗರಂಗಳಂಡಿಗಳಲು ವರ್ಷಕ್ಕೆ ಪ್ರತ್ಯೇಕ ವೀಸಂ ಹತ್ತು,
ಚಿಂನ ಗೆಯಿಕದ ಬೆವಹಾರಿಗರು ಪ್ರತ್ಯೇಕ ವರ್ಷಕೆ ವೀಸಂ
ಹತ್ತು, ಸ್ಥಳದ ಗವಜೆಗಳು ವರ್ಷಕೆ ಹಸುಂಬೆಗೆ ಪಣವೊಂದು,
ನಾನಾದೇಶಿಗವಜೆಗಳು ವರ್ಷಕ್ಕೆ ಹಸುಂಬೆಗೆ ಹಾಗವೊಂದು,
ಕರ್ಪೂರ ಕಸ್ತೂರಿ ಕುಂಕುಮ ಶ್ರೀಖಂಡ ಮುತ್ತೊಳಗಾಗಿ
ಸಮಸ್ತ ತೂಕದ ಭಂಡವನತಕ್ಕಂ ಪೊಂಗೆ ಕಾಣಿ ಎರಡು,
ಸ್ಥಳದ ದೂಸಿಗ ವ್ಯವಹಾರಿಗಳಲುಂ ನಾನಾ ದೇಶಿ ದೂಸಿಗ
ವ್ಯವಹಾರಿಗಳಲುಂ ಪೊಂಗೆ ಕಾಣಿ ಎರಡು, ಮೆಳಸು
ಜೀರಿಗೆ ಸಾಸವಿ ಸದಹುಗೆವೋವ ಕೊತ್ತುಂಬರಿ ಯೊಳಗಾಗಿ
ಪೊಂಗೆ ವೀಸವೊಂದು, ಸಖ್ಖರೆ ಮಿಂಗು ಸೂಂಠಿ ಹಿಪ್ಪಲಿ
ಏಲೆಯಕ್ಕಿ ಯಲ್ಲ ವರಿಸಿನಾರು ಪೇರು ಸಮಸ್ತ ತೂಕದ
ಭಂಡಕ್ಕೆ ಪೊಂಗೆ ವೀಸವೊಂದು, ಹೆಜ್ಜಂಕ ವಡ್ಡರಾವುಳಕೆ
ನಡವ ದಂಡನಾಯಕರು ಹತ್ತಕೊಂದ ಹೇಪಿನ ಸುಂಕವಂ
ಬಿಟ್ಟುಕೊಟ್ಟರು ಸ್ಥಳದ ಹೇಜುವ ಬಂಣಂಜಿಗರು

ಹೊಟಿಗಣಿಂದ ಬಂದ ಸಮಸ್ತ ಬಣಜಿಗರು ಹೇಜಿಂಗೆ
ಮಾನವೊಂದು ಮಾಲಗಾಜಿ ನಾಲ್ವೊತ್ತೊಕಲಲು ತಂಮ
ಕರಂಠಗೆಗಳಲು ಪ್ರತ್ಯೇಕ ಹೂವಿನ ಸರವೊಂದು ತುಂಬುಲಿ
ಗುರು ಸಾಸಿರ್ಬರಲು ಚೈತ್ರ ಪವಿತ್ರ ಪರ್ವ್ವ ಬಿಯಕ್ಕೆ ವೊಕ್ಕಲಲು
ಎಲೆ ಸಾಯಿರವೊಂದುಮ ತೆಲ್ಲಿಗಯ್ವತ್ತೊಕ್ಕಲಲುಂ ದೇವರ
ನಂದಾದೀವಿವಿಗೆಗೆ ಗಾಣಂಗಳಲು ಪ್ರತ್ಯೇಕ ಎಣ್ಣೆ ಸೊಂಟಿಗೆ
ವೊಂದು ಜಿಡ್ಡುಗಳಿಗೆ ಯೆಪ್ಪತ್ತಜಿ ಮಂನೆಯ ಎಕ್ಕಲರಸಂ
ಮುಖ್ಯವಾಗಿ[೬೮]..... ಎಂದು ಶಿಕಾರಿಪುರ ಶಾಸನ ಉಲ್ಲೇಖಿಸುತ್ತದೆ.

ಹಾಗೆಯೇ... ಅರ್ಘ್ಯತೀರ್ತಂಪಯಾಗೆವಾರಣಾಸಿಕುರುಕ್ಷೇತ್ರಂಗಯೆಯೆಂ ಬೀತೀ
ರ್ತಸ್ಥಾನಂಗಳೊಳು ಭಯಮುಖಿತಳಾಪುರುಷಮೆಂಬ ಮಹಾ
ದಾನಂಗೆಯ್ದು ಪುಣ್ಯಮನ್ತು ರೀಧರ್ಮ್ಮಮಂ। ನಳಿದವ।
ರೀಪುಣ್ಯತೀರ್ಥಂಗಳೊಳ್। ಕಪಿಲೆಯಮಂ। ಬ್ರಾಹ್ಮಣರು
ಮಂ। ತಪೋಧನರು ಮನೆಗಳಿದಮಹಾಪಾತಕರ್॥ ಸಾಮಾನ್ಯೋಯಂ
ಧರ್ಮಸೊತುಂನೃಪಾಣಾಂಕಾಲೇಕಾಲೇ
ಪಾಲನೀಂಯೋಭವದ್ಭಿಃ। ಸರ್ವಾನೀತಾನ್ಭಾಗಿನಃಪಾರ್ತ್ಥಿವೇಂದ್ರೋಭೂಂಯೋ
ಭೂಯೋಯಾಚತೇರಾಮಭದ್ರಃ॥

ಸ್ವಸ್ತಿಶ್ರೀಸಿರಿಯಮ್ಮಗಾವುಣ್ಣಂ ಭೋಗೇಶ್ವರದೇವರ್ಗೆತೋಂಟದಲಾದಗಾವುಣ್ಡಸುಂಕಮಂಬಿಟ್ಟಂ। ಶ್ರೀವಡ್ಡರಾವುಳದಪನ್ನಾಯದ ಪೆರ್ಗ್ಗಡೆಆಲಿಮಯ್ಯಂತಮ್ಮ ದೆಸೆಯ ಸುಂಕಮಂಬಿಟ್ಟಂ। ಪೆರ್ಜುಂಕದನ ಬಿಯಣ್ಣಂತಮ್ಮ ದೆಸೆಯ ಸುಂಕಮಂಬಿಟ್ಟ ನಿನ್ತೀಮೂಱು ಸುಂಕ ಪರಿಹಾರಂ॥ಕಂ॥ ನೀಡಿರದಗುರುಪರೋಕ್ಷದೆ । ಮಾಡಿಸಿದಂ । ಗಂಗರಾಸಿ । ಬಾಪ್ಪಮಳಯ ಶೋನಿಡಂ । ಸಂಜೀರ್ಣ್ನ ಭೈರವನೀಡಮುಮ। ಗುಹೆಯದೇವತಾಭವನಮುಮಂ॥

ಪರಮತಪೋಥನಭಕ್ತಂ ಗುರುಭಕ್ತಂ ದೇವಭಕ್ತ । ನತಿಸಯ ಮಾಹೇಶ್ವರಭಕ್ತ । ನೆನ್ದೆಪೊಗಳ್ಗುಂನಿರಂತರಂಥರಣಿ। ಗಂಗರಾಶಿವ್ರತಿಯಂ॥[೬೯]

ಜಗಳೂರು ತಾಲೂಕು ಅಸಗೋಡು ಶಾಸನದಲ್ಲಿ "ಸಮಸ್ತ ಪ್ರಸಸ್ತಿಸ ಹಿತಂ ಶ್ರೀಮತ್ಪರ್ಗ್ಗಡೆ ಹೆಮ್ಮ ಸೆಟ್ಟಿಯ ರುಕದಂಬಳಿಗೆ ಸಾಸಿರದಪೆಜ್ಜಂಕ ಮನ್ನು ಷ್ಟನಿಗ್ರಹಸಿಷ್ಟಪ್ರತಿ ಪಾಳೆನೆಯಿಂ ದಾತ್ತಮಿರ್ದ್ದು ಶ್ರೀ ಮಚ್ಚಾಳುಕ್ಯ ವಿಕ್ರಮಾಕಾಲದ ೩೫ನೆಯ ವಿಕ್ರಿತ ಸಂವತ್ಸರದ ಪುಷ್ಯದಮಾವಶ್ಯೆ ಸೋಮವಾರ ಉತ್ತರಾಯಣ ಸಂಕ್ರಾನ್ತಿಬ್ಯತೀಪಾತಂ ಕೂಡಲು ಅಸಗಗೋಡ ಶ್ರೀ ಸ್ವಯಂಭುಕಲಿದೇವಸ್ವಾಮಿದೇವರ ಅಂಗಭೂಗಕ್ಕಂ ಧೂಪಕ್ಕಂ ನಿವೇದ್ಯಶ್ರೀಖಣ್ಣಕ್ಕ ಮಾಗಿತಮ್ಮ ಪೆಜ್ಜುಂಕದಲು ಅಡಕೆಯ ಪೇಜಿಂಗೆಲಕ್ಷಕೆ ಬೇಳೆಯುಂ ಎಲೆಯ ಪೇಱುದವಸದ ಪೇಱುಭಣ್ಣಿಯ ಸುಂಕ ಮೊಳಗಾಗಿಯೂರಲ್ಪುಟ್ಟಿದ ಸುಂಕಕೆಲ್ಲಂ ದಶವನ್ದಮ ಬಿಟ್ಟು ಯಮಸ್ವಾಧಾಯಧ್ಯಾನಧಾರಣ ಮೋನಾನುಷ್ಟಾಣಜಪ ಸಮಾಧಿಶೀಳಗುಣಸರಪನ್ನರಪ್ಪ ಶ್ರೀ ಮತುಧರ್ಮ್ಮಕರ್ತ್ತಾರಪಣ್ಣಿತ ದೇವರ ಸಿಷ್ಯರು ವಾದಿ ಪ್ರಳಯಕಾಲ ಭೈರವ ದೇವರ ಪಾದ ಪುಕ್ಷಾಳನಂಮ್ಮಾಡಿಧಾರಾ ಪೂರ್ವ್ವಕದಿಂ ಕೊಟ್ಟರು ಇಂನ್ತೀಧರ್ಮ ಮಂಪ್ರತಿಪಾಳಿಸಿದಾತಂಗೆ ವಾರಣಾಸಿಕುರುಕ್ಷೇತ್ರ, ಪ್ರಯಾಗೆಯದರ್ಘ್ಯಲೇ ರ್ತ್ಥಂಗಳೊಳ್ಸಾಸಿರಕವಿಲೆಯ ಕೋಡುಂಕೊಳಗುಮಂಪಞ್ಚ

ರತ್ನಂಗಳೊಳು ಕಟ್ಟಿಸಿಚತುರ್ವೇದಪಾರಗರಪ್ಪ ಸಾಸಿರ್ಬ್ಬ ಬ್ರಾಹ್ಮಣರ್ಗ್ಗಂ ಸಾಸಿರ್ಬ್ಬರ್ತ್ತಪೋಧನರ್ಗ್ಗಂ ವಿಭಯಮುಖಿದಾನಂ.[೬೦]

ಕದಂಬಳಿಗೆ ಸಾಸಿರದ ಪೆರ್ಜುಂಕವನ್ನಾಳುತ್ತಿದ್ದವ, ಹೆಮ್ಮಸೆಟ್ಟಿ ಚಿಕ್ಕಸೆಟ್ಟಿ, ಇನ್ನಿತರೆ ಸೆಟ್ಟಿಗಳು ಮತ್ತು ಮಣಿ, ಮಾಣಿಕ್ಯ, ಬಂಗಾರ, ಸುಗಂಧ ದ್ರವ್ಯ, ಅಡಕೆ, ಏಲಕ್ಕಿ, ಹತ್ತಿ, ಸೀರೆ, ಗೊಂಗಡಿ, ಬಾಳೆಹಣ್ಣು ಹಾಗೂ ಬಟ್ಟೆಗಳ ವ್ಯಾಪಾರ[೬೧] ಮಾಡುತ್ತಿದ್ದ ಸೆಟ್ಟಿಗಳ ಹೆಸರುಗಳು ಚಿತ್ರದುರ್ಗ ಪರಿಸರದಲ್ಲಿ ಕಂಡು ಬರುವ ಅನೇಕ ಶಾಸನಗಳಿಂದ ತಿಳಿದುಬರುತ್ತವೆ. ಕ್ಯಾಸಪುರದ ಶಾಸನದಲ್ಲಿ ಬಿವಿವೃತ್ತಿಯ ಕಾವಲು ವೃತ್ತಿ ಉಲ್ಲೇಖ ಬಂದಿದ್ದು ಅಧಿರಾಜ ಹಾಗೂ ಸಾಮಂತರ ಸಂಬಂಧ ಸೂಚಿಸುತ್ತದೆ. ಬೇವಿನಹಳ್ಳಿಯ ಶಾಸನದಲ್ಲಿ ಮೇಲಾಳ್ಗೆಯ ಉಲ್ಲೇಖ ಬಂದಿದ್ದು ಆಡಳಿತದ ವಿವರಣೆಯಾಗಿದೆ. ಕಿಱುದೇಜೆಯ ಉಲ್ಲೇಖ ಬಂದಿದ್ದು ಇನ್ನೊಂದು ಬಗೆಯ ತೆರಿಗೆಯನ್ನು ಸೂಚಿಸುತ್ತದೆ. ವೇಶ್ಯಾವೃತ್ತಿ ಆಗಿನ ಕಾಲದ ಪದ್ಧತಿಯಂತೆ ಶ್ರೇಷ್ಠವೆಂಬ ಒಂದು ಸಂಗತಿ ಕಾಡಜ್ಜಿಯ ಶಾಸನದಲ್ಲಿ ಬಂದಿದೆ.

ರಾಷ್ಟ್ರಕೂಟರ ಕಾಲದ ಅನೇಕ ಪ್ರದೇಶಗಳು ಪ್ರಾಚೀನ ಕಾಲದ ನಗರಗಳಾಗಿ ಬೆಳೆದಿದ್ದು ವ್ಯಾಪಾರ ಕೇಂದ್ರಗಳಾಗಿದ್ದವು. ಸಾಮಾನ್ಯವಾಗಿ ಶಾಸನ ಉಲ್ಲೇಖಿತ ನಗರ ಪ್ರದೇಶದ ಕೇಂದ್ರಗಳ ಸ್ಥಳೀಯ ಉತ್ಪನ್ನ ಸರಬರಾಜಾಗುತ್ತಿದ್ದ ಗ್ರಾಮಾಂತರ ಪ್ರದೇಶಗಳು, ವಿನಿಮಯ ಕೇಂದ್ರಗಳಲ್ಲಿ ದೊಡ್ಡ ಸಂಖ್ಯೆಯ ಜನರು ಸೇರುತ್ತಿದ್ದ ಯಾತ್ರಾಸ್ಥಳಗಳಲ್ಲಿ ಅಥವಾ ಉತ್ಸವಗಳು, ಸಂತೆಗಳು ಮನರಾವರ್ತನೆಗೊಳ್ಳುತ್ತಿದ್ದ ಪ್ರದೇಶಗಳಲ್ಲಿತ್ತು. ಆದಾಯ ಗಳಿಸಲು ಗ್ರಾಮಾಂತರ ಮಾರುಕಟ್ಟೆಗಳು ಆರ್ಥಿಕವಾಗಿ ಪ್ರಮುಖವಾದುವುಗಳೆಂದು ಮುಖ್ಯಸ್ಥರು ಮತ್ತು ಆಡಳಿತಗಾರರು ಗುರುತಿಸಿದ್ದರು. ತಪಾಸಣೆಯ ನಿಯತಕಾಲಿಕ ಪ್ರವಾಸದ ಅಂಗವಾಗಿ ಹೂಡಲಾಗುತ್ತಿದ್ದ ಮಿಲಿಟರಿ ಶಿಬಿರಗಳು ಪಟ್ಟಣಕ್ಕೆ ಪೂರ್ವಗಾಮಿಯಾಗಿ ಮುಂದುವರೆಯಿತು. ೧೦ನೇ ಶತಮಾನದ ಹಿಂದೆ ಅಸ್ತಿತ್ವದಲ್ಲಿದ್ದ ಪಟ್ಟಣಗಳು ಈ ಅವಧಿಯಲ್ಲಾದ ವ್ಯಾಪಾರ ವಹಿವಾಟಿನ ವಿಕಾಸದಿಂದಾಗಿ ಬೆಳೆದವು.[೬೩]

ಕರ್ನಾಟಕ ಮತ್ತು ತಮಿಳುನಾಡಿನಲ್ಲಿ ಪಟ್ಟಣಮ್ ಎಂದು ಕರೆಸಿಕೊಳ್ಳುತ್ತಿದ್ದವು ವ್ಯಾಪಾರ ವಹಿವಾಟಿನ ಕೇಂದ್ರಗಳಾಗಿ ಆರಂಭವಾದವು; ಹೆಚ್ಚಾಗಿ ಕಡಲ ಸಂಬಂಧದ ವಹಿವಾಟಿನ ಕೇಂದ್ರಗಳಾಗಿ ಆರಂಭವಾದವು ಕೆಲವೊಮ್ಮೆ ಪ್ರಮುಖ ಕಸುಬಗಳನ್ನು ಹೆಸರಲ್ಲಿ ಸೂಚಿಸಲಾಗುತ್ತಿತ್ತು. ಉದಾಹರಣೆಗೆ ಬನಜು ಪಟ್ಟಣ ವ್ಯಾಪಾರಿಗಳ ಒಂದು ಪಟ್ಟಣವಾಗಿತ್ತು. ಆದರೆ ಆದಕ್ಕೂ ಮುನ್ನ ಅವು ಸ್ಥಳೀಯ ಆಡಳಿತದ ಕೇಂದ್ರ ಬಿಂದುಗಳಾಗಿ ಅಥವಾ ಯಾತ್ರಾಸ್ಥಳಗಳಾಗಿ ಇದ್ದಿರಬಹುದು. ಉದಾಹರಣೆ, ಶ್ರವಣಬೆಳಗೊಳ ೭ನೆಯ ಶತಮಾನದಲ್ಲಿ ಯಾತ್ರಾಸ್ಥಳವಾಗಿ ಆರಂಭಗೊಂಡು ೧೨ನೆಯ ಶತಮಾನದ ಹೊತ್ತಿಗೆ ಅನೇಕ ಸಂಖ್ಯೆಯ ಜೈನರ ವ್ಯಾಪಾರ ಸಂಸ್ಥೆಗಳನ್ನು ಹೊಂದಿದ ಒಂದು ಪ್ರಮುಖ ವ್ಯಾಪಾರ ಸ್ಥಳವಾಯಿತು.[೬೪] ವಿನಿಮಯ ಅಥವಾ ಆಡಳಿತದ ಗ್ರಾಮೀಣ ಕೇಂದ್ರಗಳಾಗಿ ವ್ಯಾಪಾರಿಗಳ ಸಂಘಗಳು ಮತ್ತು ವೃತ್ತಿಪರ ವರ್ತಕರನ್ನ ಆರಂಭದಿಂದಲೇ ಗುರುತಿಸಬಹುದು.

ರಾಷ್ಟ್ರಕೂಟರ ಕಾಲದಲ್ಲಿ ಪಟ್ಟಣಗಳ ಆಡಳಿತದಲ್ಲಿ ವರ್ತಕರು ಮತ್ತು ಶ್ರೀಮಂತ ಜಮೀನ್ದಾರರು ಅಧಿಕಾರ ಚಲಾಯಿಸುತ್ತಿದ್ದರು. ಇತರೆ ಪ್ರದೇಶಗಳಲ್ಲಿ ವಾರದ ಸಂತೆಗಳು ಕೆಲವೊಮ್ಮೆ ಪಟ್ಟಣವಾಗಿ ಬೆಳೆಯಲು ಕಾರಣವಾದವು. ವಿಶೇಷ ಸಂದರ್ಭಗಳಲ್ಲಿ ಗೌಂಡರು ಮತ್ತು ಹೆಗ್ಗಡೆಗಳೂ ಪಟ್ಟಣದ ಅಧಿಕಾರದ ಸ್ಥಾನಗಳೊಡನೆ ಸಂಬಂಧ ಹೊಂದಿದ್ದರು. ಪಟ್ಟಣದ ಆಡಳಿತದಲ್ಲಿ ಉನ್ನತ ಮಟ್ಟದಲ್ಲಿ

ಕಾರ್ಯನಿರ್ವಹಿಸುತ್ತಿದ್ದವರಿಗೆ ಮನೆಯೊಡೆಯರಿಂದ ಸಂಗ್ರಹಿಸಲಾದ ಕಂದಾಯದ ಒಟ್ಟು ಮೊತ್ತದಲ್ಲಿ ಒಂದು ಶೇಕಡಾವಾರನ್ನು ಪುರಸ್ಕಾರವೆಂದು ಅವರಿಗೆ ನೀಡಲಾಗುತ್ತಿತ್ತು. ನಗರಗಳು ವ್ಯತ್ಯಯಗಳ ಅವಧಿಯನ್ನು ಕಾಣಬೇಕಾಗುತ್ತಿತ್ತು. ಆದರೆ ಸುಮಾರು ೧೦ನೆಯ ಶತಮಾನದಿಂದ ಕ್ಷೀಣಿಸಿದಂತಹ ಬೆಳವಣಿಗೆ ಕಂಡುಬಂದಿತು.[೨೫]

ಸಾಗರ ವ್ಯಾಪಾರ ವಹಿವಾಟು ಚೋಳ ವರ್ತಕರ ಶಕ್ತಿಯಾಗಿತ್ತು. ಪೂರ್ವ ಕರಾವಳಿಯ ಮಹಾಬಲಿಪುರಂ, ಕಾವೇರಿ ಪಟ್ಟಣಂ, ಪೂಲಿಯೂರು ಮತ್ತು ಕೋರ್ಕೈ ಪೂರ್ವದ ಕಡೆಯ ದಕ್ಷಿಣ ಭಾರತದ ವ್ಯಾಪಾರ ವಹಿವಾಟನ್ನು ನಿಯಂತ್ರಿಸುವ ಸವಿಸ್ತಾರವಾದ ಸಂಘಸಂಸ್ಥೆಗಳನ್ನು ಹೊಂದಿತ್ತು. ವಿಶಾಖಪಟ್ಟಣಂನ ಬಂದರಿಗೆ ಅರಸನ ಹೆಸರಲ್ಲಿ ಕುಲೋತ್ತುಂಗ ಚೋಳಪಟ್ಟಣಂ ಎಂದು ಕರೆಯಲಾಗುತ್ತಿತ್ತು. ೧೧ನೆಯ ಶತಮಾನದ ಆರಂಭದಲ್ಲಿ ಚೋಳ ಆಸ್ಥಾನಕ್ಕೆ ಬಂದ ಕಾಂಬೋಡಿಯಾದ ಮಿಷನ್ ಒಂದರಿಂದಾಗಿ ಪೂರ್ವದ ಕಡೆಯ ವ್ಯಾಪಾರಕ್ಕೆ ಮೇಲಿನ ವ್ಯಾಪಾರ ಈ ಶತಮಾನಗಳಲ್ಲಿ ಹಿಂದೆಂದೂ ಕಂಡರಿಯದ ಪ್ರಮಾಣಕ್ಕೇರಿತು. ಮಂಗೋಲಿಯನ್ನರು ಕೇಂದ್ರೀಯ ಏಷ್ಯಾದ ನಿಯಂತ್ರಣ ಹೊಂದಿದ್ದು ಚೀನಾದಿಂದ ಬಂದ ಮಾರಾಟದ ಸರಕುಗಳನ್ನು ಸಮುದ್ರದ ಮೂಲಕ ರವಾನಿಸಲಾಗುತ್ತಿತ್ತು ಅದರಲ್ಲೂ ದಕ್ಷಿಣ ಚೀನಾದಿಂದ ಪಶ್ಚಿಮ ಏಷ್ಯಾ ಮತ್ತು ಯುರೋಪಿಗೆ ರವಾನಿಸಲಾಗುತ್ತಿತ್ತು. ದಕ್ಷಿಣ ಭಾರತ ಬಟ್ಟೆ, ಮಸಾಲಾ ಪದಾರ್ಥಗಳು, ಔಷಧಿಯ ಸಸ್ಯಗಳು, ಆಭರಣಗಳು, ದಂತ, ಕೊಂಬು, ಎಬೊನಿ ಮತ್ತು ಕರ್ಪೂರವನ್ನು[೨೬] ಚೀನಾಕ್ಕೆ ರಫ್ತು ಮಾಡುತ್ತಿತ್ತು.

ದಕ್ಷಿಣ ಭಾರತದ ಪ್ರಾಚೀನ ಸಾಹಿತ್ಯದಲ್ಲಿ ಮತ್ತು ಶಾಸನಗಳಲ್ಲಿ ಶ್ರೇಣಿ ಅಥವಾ ವೃತ್ತಿಸಂಘಗಳು ಪ್ರಮುಖವಾಗಿ ಉತ್ಪಾದಕರ ಸಂಘಟನೆಗಳಾಗಿ ತೋರಿದರೂ ವ್ಯಾಪಾರಗಳ ವೃತ್ತಿಸಂಘಗಳೂ ಇದ್ದವು. ಮಧ್ಯಕಾಲೀನದಲ್ಲಿ ಇಂಥ ವ್ಯಾಪಾರ ಸಂಘಗಳು ತುಂಬಾ ಮಹತ್ವ ಪಡೆದವು. ಅನೇಕ ನಗರಗಳಲ್ಲಿ ಶಾಖೆಯನ್ನು ಹೊಂದಿದ್ದವು. ಇಂಥದೇ ಒಂದು ಶಬ್ದ ವೀರಬಣಜಿಗರ್. ಅದರ ಸರಳ ಅನುವಾದ ಸದ್ಗೃಹಸ್ಥ ವ್ಯಾಪಾರಿಗಳ ಸಂಘ, ಪರ್ಯಾಯದ್ವೀಪದ ಪ್ರತಿಯೊಂದು ಮಹತ್ವದ ನಗರದಲ್ಲಿಯೂ ತನ್ನ ಸದಸ್ಯರನ್ನು ಹೊಂದಿತ್ತು. ಅದನ್ನು ಕರ್ನಾಟಕದಲ್ಲಿರುವ ಐಹೊಳೆಯಲ್ಲಿದ್ದ ಮಧ್ಯವರ್ತಿ ಸಮಿತಿ ನಿಯಂತ್ರಿಸುತ್ತಿತ್ತು. ಮಣಿಗ್ರಾಮವೆಂದು ಕರೆಯಲ್ಪಡುತ್ತಿದ್ದ ಸಂಘ ದಕ್ಷಿಣ ಭಾರತದಲ್ಲಷ್ಟೇ ಅಲ್ಲ, ಶ್ರೀಲಂಕಾದಲ್ಲೂ ಕೆಲಸ ಮಾಡುತ್ತಿತ್ತು. ತನ್ನ ರಕ್ಷಣೆಗೆಂದು ಇಟ್ಟುಕೊಂಡಿದ್ದ ಸೈನಿಕರನ್ನು ಶ್ರೀಲಂಕಾದ ಅರಸರಿಗೆ ಬಾಡಿಗೆ ಕೊಡುತ್ತಿತ್ತು.

ಭಾರತದಲ್ಲಿ ಸಹಕಾರ ಕ್ಷೇತ್ರದಲ್ಲಿ ಉತ್ಪಾದನೆ ಮತ್ತು ಹಂಚಿಕೆಗಳೆರಡೂ ಪರಿಚಿತವಾಗಿದ್ದವು. ಆದರೆ ಸಾಮಾನ್ಯವಾಗಿ ಅವುಗಳನ್ನು ಕಸುಬುದಾರರ ಮತ್ತು ವ್ಯಾಪಾರಿಗಳ ತಾತ್ಪೂರ್ತಿಕ ಸಂಘಗಳು ನಡೆಸಿಕೊಂಡು ಹೋಗುತ್ತಿದ್ದವು. ಈ ವ್ಯಾಪಾರಿ ಸಂಘಗಳು ಯಾವ ವಿಧದಲ್ಲೂ ಆಧುನಿಕ ಜಾಯಿಂಟ್ ಸ್ಟಾಕ್ ಕಂಪನಿಗಳಿಗೆ ಹೋಲುವಂತಿರಲಿಲ್ಲ. ಹಾಗಾಗ ಈ ಕಂಪನಿಗಳು ಸಂಸ್ಥೆಯಂತೆ ಕಾರ್ಯ ನಿರ್ವಹಿಸಿರಬಹುದು. ಆದರೆ ವ್ಯಾಪಾರಿ ಕಂಪನಿಗಳ ಸಾಮಾನ್ಯ ಕೆಲಸ ವ್ಯಾಪಾರವಾಗಿರಲಿಲ್ಲ. ತಮ್ಮ ಸದಸ್ಯರ ಚಟುವಟಿಕೆಗಳನ್ನು ವಿಸ್ತರಿಸುವುದು, ವಿಧಿಬದ್ಧಗೊಳಿಸುವುದು ಮತ್ತು ರಕ್ಷಿಸುವುದಾಗಿತ್ತು. ಬಂಡಿಗಳು, ಮತ್ತು ಭಾರಹೊರುವ ಪ್ರಾಣಿಗಳಿಂದ ಭೂ ಮಾರ್ಗ ವ್ಯಾಪಾರಗಳನ್ನು[೨೭] ವ್ಯಕ್ತಿಶಃ ವ್ಯಾಪಾರಿಗಳು ಸ್ವತಃ ಅವರೇ ನಡೆಸುತ್ತಿದ್ದರೂ ಕಂಪನಿಯ ಅಧಿಕಾರಿಗಳು ವ್ಯವಸ್ಥೆಗೊಳಿಸಿ ನಿಯಂತ್ರಿಸುತ್ತಿದ್ದರು,

ಕಂಪನಿಯ ಬಾಡಿಗೆ ಸೈನಿಕರೇ ರಕ್ಷಣೆ ಒದಗಿಸುತ್ತಿದ್ದರು. ಸಮುದ್ರ ವ್ಯಾಪಾರದಲ್ಲಿಯೂ ಅವರು ಇಂಥದೇ ಕಾರ್ಯ ನಿರ್ವಹಿಸುತ್ತಿದ್ದರು. ಬಹುಶಃ ಅವು ಗೋದಾಮುಗಳನ್ನೂ ಹೊಂದಿರಬೇಕು. ಅವುಗಳಲ್ಲಿ ಸದಸ್ಯರು ತಮ್ಮ ಸಾಮಗ್ರಿಗಳನ್ನು ಸುರಕ್ಷಿತವಾಗಿ ಸಂಗ್ರಹಿಸಿ ಇಡಬಹುದಾಗಿತ್ತು. ಅಪರಿಚಿತ ನಗರಗಳಿಗೆ ಪ್ರವಾಸ ಮಾಡುವ ಸದಸ್ಯರು ಕಂಪನಿಯ ಸ್ಥಳೀಯ ಶಾಖೆಯ ಅಧಿಕಾರಿಗಳಿಂದ ಸಹಾಯ ಪಡೆಯಬಹುದಿತ್ತು. ಕಸುಬು ಶ್ರೇಣಿಗಳಂತೆ ವ್ಯಾಪಾರಿ ಕಂಪನಿಗಳು ನಿಸ್ಸಂದೇಹವಾಗಿಯೂ ಕಷ್ಟದಲ್ಲಿದ್ದ ಸದಸ್ಯರಿಗೆ ಸಹಾಯ ಸಲ್ಲಿಸುತ್ತಿದ್ದವು[೮೮] ಕಲಬೆರಕೆಯನ್ನು ತಡೆದು, ಮೋಸ ಮತ್ತು ಇನ್ನಿತರ ದುಷ್ಕೃತ್ಯಗಳಿಂದ ರಕ್ಷಿಸಿ, ತಮ್ಮ ಸದಸ್ಯರನ್ನು ರಾಜ ಸಭೆಯಲ್ಲಿ ಪ್ರತಿನಿಧಿಸುತ್ತಿದ್ದವು.

ಒಟ್ಟಾರೆಯಾಗಿ ರಾಷ್ಟ್ರಕೂಟರ ಕಾಲದಲ್ಲಿ ಅತ್ಯಂತ ಪ್ರಬಲ ಸೈನ್ಯ ವ್ಯವಸ್ಥೆಯನ್ನು ಪ್ರಭುತ್ವ ಹೊಂದಿದ ಹಾಗೆ ವ್ಯಾಪಾರಿ ಸಂಘಗಳು ಸೈನ್ಯ ವ್ಯವಸ್ಥೆಯನ್ನು ಹೊಂದಿದ್ದು ಪ್ರಾಯಶಃ ಈ ಎಲ್ಲ ಕಾರಣಗಳು ಆ ಕಾಲದ ವ್ಯಾಪಾರ–ವಾಣಿಜ್ಯಕ್ಕೆ ಪೂರಕವಾದ ಬೆಳವಣಿಗೆಯನ್ನು ಗಮನಿಸಬಹುದು. ರಾಷ್ಟ್ರಕೂಟರು ಕ್ರಿ.ಶ. ೯೭೨ರ ವರೆಗೂ ಅಧಿಕಾರದಲ್ಲಿದ್ದು, ಚಾಲುಕ್ಯ ಮನೆತನದ ತೈಲಪನು ರಾಷ್ಟ್ರಕೂಟರ ಕರ್ಕನನ್ನು ಸೋಲಿಸಿ, ತಮ್ಮ ಹಿಂದಿನ ಸೇಡನ್ನು ತೀರಿಸಿಕೊಂಡು ರಾಜ್ಯವನ್ನು ಸ್ಥಾಪಿಸಿದನು. ರಾಷ್ಟ್ರಕೂಟರ ಆಡಳಿತವು ಅವನತಿಗೊಂಡು ಮತ್ತೊಮ್ಮೆ ಕನ್ನಡದ ಅರಸರಿಂದಲೇ ಪುನಃ ಸ್ಥಾಪಿಸಲಾಯಿತು. ಆದರೆ ಸಾಮ್ರಾಜ್ಯಗಳು ಪದೇ ಪದೇ ಅವನತಿ ಮತ್ತು ನಿರ್ಮಾಣಗಳು ಆದ ಹಾಗೆ ವ್ಯಾಪಾರ–ವಾಣಿಜ್ಯವು ತಟಸ್ಥಿಕೆಯನ್ನು ಪಡೆಯುವುದಿಲ್ಲ ಅದು ನಿರಂತರತೆಯನ್ನು ಸಾಧಿಸುತ್ತದೆ.

* * *

ಸ್ವತಂತ್ರ ರಾಜಮನೆತನಗಳಾದ ಶಾತವಾಹನ, ಕದಂಬ, ಗಂಗ, ಪಲ್ಲವ, ರಾಷ್ಟ್ರಕೂಟ, ಚಾಲುಕ್ಯ, ಚೋಳ, ಹೊಯ್ಸಳ ಸಾಮ್ರಾಟರು ಚಿತ್ರದುರ್ಗ ಪ್ರದೇಶದಲ್ಲಿ ವೈಭವದಿಂದ ವ್ಯಾಪಾರ ವಾಣಿಜ್ಯ ನಡೆಸಿದ ಹಾಗೆ ಸೇವುಣ, ನೊಳಂಬ ಹಾಗೂ ಉಚ್ಚಂಗಿ ಪಾಂಡ್ಯರು ಸಹ ಈ ಪ್ರದೇಶದಲ್ಲಿ ವ್ಯಾಪಾರ ನಡೆಸಿದ ವಿವರಗಳು ಅನೇಕ ಶಿಲಾಶಾಸನಗಳ ಪಾಠಗಳಲ್ಲಿ ಕಂಡು ಬರುತ್ತವೆ. ಎಪಿಗ್ರಾಫಿಯಾ ಕರ್ನಾಟಿಕ ಸಂ–೧೧ರಲ್ಲಿ ಚಳ್ಳಕೆರೆ ೯ರಲ್ಲಿ ಬಸವ ಸೆಟ್ಟಿಯು ಒಬ್ಬ ದೊಡ್ಡ ವ್ಯಾಪಾರಿಯಾಗಿದ್ದು ಕೆರೆಯನ್ನು ಕಟ್ಟಿಸಿದ ಉಲ್ಲೇಖ ಸಿಗುತ್ತದೆ. ಹಾಗೆಯೇ ಇದೇ ತಾಲೂಕಿನ ಶಾಸನ ಸಂಖ್ಯೆ–೫,೭,೮,೩೩,೩೪, ಶಾಸನಗಳಲ್ಲಿ ಹಲವು ದತ್ತಿಗಳನ್ನು ವ್ಯಾಪಾರಿಗಳು ದಾನ ನೀಡಿದ ಅಂಶಗಳು ತಿಳಿದುಬರುತ್ತವೆ. ಮೊಳಕಾಲ್ಮೂರು ಪ್ರದೇಶದಲ್ಲಿ ರಾಮೇಶ್ವರ ದೇವರಿಗೆ ದಾನ ನೀಡಿದ ಅಂಶವಿದೆ. ಜಗಳೂರು ಶಾಸನ ೧೦ ರಲ್ಲಿ ತಳವೃತ್ತಿಯ ಉಲ್ಲೇಖವಿದ್ದು ಇವರು ಗಾಣದ ಮೂಲಕ ಎಣ್ಣೆ ತೆಗೆದು ಕಡಿಮೆ ಪ್ರಮಾಣದಲ್ಲಿ ತೆರಿಗೆಯನ್ನು ನೀಡಿ ವ್ಯಾಪಾರ ಮಾಡಲು ಅನುಮತಿಸಿದ ಅಂಶವಿದೆ.[೮೯] ಹಾಗೆಯೇ ಸೇವುಣ ಮತ್ತು ನೊಳಂಬರ ಕಾಲಕ್ಕೆ ಈ ಪ್ರದೇಶದಲ್ಲಿ ಅತೀ ಹೆಚ್ಚು ಒಣ ಕೊಬ್ಬರಿಯ ವ್ಯಾಪಾರ ಹಾಗೂ ಕಂಬಳಿಯ ವ್ಯಾಪಾರ ನಡೆಯುತ್ತಿದ್ದ ಅಂಶ ತಿಳಿದುಬರುತ್ತದೆ.

ನೊಳಂಬರು ಅಥವಾ ನೊಳಂಬ–ಪಲ್ಲವರು (ಪಲ್ಲವರ ಸಂತತಿಯೆಂದು ಹೇಳಿಕೊಳ್ಳುವ ನೊಳಂಬರು) ಮುಖ್ಯವಾಗಿ ನೊಳಂಬವಾಡಿ–೩೨,೦೦೦ ಅಥವಾ ಮೈಸೂರಿನ ಚಿತ್ರದುರ್ಗ ಜಿಲ್ಲಾ ಪ್ರದೇಶವನ್ನು ಆಳಿದರು. ಉಚ್ಚಂಗಿ, ಹೆಂಜೇರು (ಹೇಮಾವತಿ) ಮತ್ತು ಚಿತ್ರದುರ್ಗ ಇವು ಅವರ ಪ್ರಮುಖ ವ್ಯಾಪಾರಿ ಪಟ್ಟಣಗಳಾಗಿದ್ದವು. ಹಾಗೆಯೇ ಅವರು ಒಳನಾಡಿನ ಹಾಗೂ ಹೊರನಾಡಿನೊಂದಿಗೆ ವ್ಯಾಪಾರ

ಸಂಬಂಧಗಳನ್ನು ಹೊಂದಿದ್ದರು. ನೊಳಂಬ ಅರಸು ಸಿಂಗಪೋತನು ಎರಡನೆಯ ಶಿವಮಾರನ ಮಾಂಡಲಿಕನಾಗಿದ್ದನು; ಎರಡನೆಯ ಶಿವಮಾರನನ್ನು ರಾಷ್ಟ್ರಕೂಟರು ಬಂಧಿಸಿದ್ದರಿಂದ ನೊಳಂಬರು ರಾಷ್ಟ್ರಕೂಟರ ಹಿಡಿತಕ್ಕೊಳಗಾದರು. ಒಂದನೆಯ ರಾಜಮಲ್ಲನು ಅವರೊಂದಿಗೆ ರಾಜವಂಶೀಯ ವಿವಾಹಗಳ ನೀತಿ ಅನುಸರಿಸಿದ್ದನ್ನು ನಾವು ಗಮನಿಸಿದ್ದೇವೆ.[೯೦] ಇವೆಲ್ಲಾ ಪರಸ್ಪರ ಸಾಮ್ರಾಜ್ಯಗಳ ಅಸ್ತಿತ್ವವನ್ನು ನಿರ್ಧರಿಸಿದರೆ ಅಂದಿನ ಕಾಲದ ವ್ಯಾಪಾರಕ್ಕೆ ಸಾಮ್ರಾಜ್ಯಗಳ ಅಸ್ಥಿತ್ವವೂ ಮುಖ್ಯ ಎಂಬುವುದಕ್ಕೆ ಶಾಸನ ಉಲ್ಲೇಖಿತ ಅನೇಕ ಪ್ರದೇಶಗಳೇ ಕಾರಣ. ಗದಗ, ಹುಬ್ಬಳ್ಳಿ, ಬಳ್ಳಿಗಾವೆ, ಶ್ರವಣಬೆಳಗೊಳ, ಬನವಾಸಿ, ಬಾದಾಮಿ, ಐಹೊಳೆ ಹೀಗೆ ಅನೇಕ ಶಾಸನದಲ್ಲಿ ಉಲ್ಲೇಖಿತ ವ್ಯಾಪಾರಿ ಕೇಂದ್ರಗಳು ಹಾಗೂ ಸ್ಥಳೀಯ ಗ್ರಾಮಗಳಲ್ಲಿ ನಡೆಯುವ ಸಂತೆಗಳ ಉಲ್ಲೇಖವಿದೆ.

ಪ್ರಾಚೀನ ಕಾಲದಲ್ಲಿ ಅನೇಕ ನಗರಗಳು ವ್ಯಾಪಾರ ಮತ್ತು ವಾಣಿಜ್ಯದಿಂದ ಅನೇಕ ಶತಮಾನಗಳ ಕಾಲ ಬಾಳಿ ಬದುಕಿದವು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಐಹೊಳೆ, ಅಯ್ಯಾವೊಳೆ ಅಥವಾ ಆರ್ಯಪುರ ಗಮನಾರ್ಹವಾದುದು. ಈ ಹೆಸರನ್ನು ಕೇಳಿದ ಕೂಡಲೇ ನಮ್ಮ ಮನಸ್ಸು, ಇಲ್ಲಿರುವ ಹತ್ತಾರು ದೇವಾಲಯಗಳು ಬಾದಾಮಿ ಚಾಲುಕ್ಯರ ನಿರ್ಮಾಣ ಮತ್ತು ಪ್ರಯೋಗ ಕೇಂದ್ರವಾಗಿದ್ದು, ವಾಸ್ತುಶಿಲ್ಪ ಅಧ್ಯಯನಕಾರರು ವಾಸ್ತುಶಿಲ್ಪದ ತೊಟ್ಟಿಲು ಎಂದು ಐಹೊಳೆಯನ್ನು ಗುರುತಿಸಿದ್ದಾರೆ.

ಆದರೆ ಬಾದಾಮಿ ಚಾಲುಕ್ಯರ ನಂತರದ ಕಾಲದಲ್ಲಿ ಇದು ಅಯ್ಯಾವೊಳೆ ಐನೂರು ಎಂಬ ವ್ಯಾಪಾರಿಗಳ ಸಂಘದ ರಾಜಧಾನಿ ನಗರವಾಗಿತ್ತು.[೯೧] ಕ್ರಿ.ಶ.೮೦೦ರಿಂದ ಆರಂಭವಾಗಿ ಮಧ್ಯಕಾಲೀನ ಶಾಸನಗಳವರೆಗೆ ಇದು ವ್ಯಾಪಾರ-ವಾಣಿಜ್ಯ ನಗರವಾಗಿದ್ದಿತೆಂಬುದನ್ನು ಈ ಶಾಸನಗಳು ವರ್ಣಿಸುತ್ತವೆ. ಈ ವಾಣಿಜ್ಯ ಸಂಘವು ಕರ್ನಾಟಕದಲ್ಲಿ ಮಾತ್ರವಲ್ಲದೆ, ಇತರ ಕಡೆಗಳಲ್ಲಿಯೂ ಹೆಸರುಗಳಿಸಿದೆ. ಕೊಲ್ಲಾಪುರ, ತಿನ್ನವೆಲ್ಲಿ, ಕೊಯಮತ್ತೂರು ಮುಂತಾದ ಕಡೆಗಳಲ್ಲಿ ದೊರಕಿರುವ ಶಾಸನಗಳಿಂದ ತಿಳಿದುಬರುತ್ತದೆ. ಈ ವ್ಯಾಪಾರಿಗಳು ಕೇವಲ ಭಾರತ ದೇಶದಲ್ಲಿ ಮಾತ್ರವಲ್ಲದೆ, ಆಗ್ನೇಯ ಏಷ್ಯಾ ರಾಷ್ಟ್ರಗಳೊಡನೆಯೂ ವ್ಯಾಪಾರ ಸಂಬಂಧಗಳನ್ನು ಹೊಂದಿದ್ದರು. ಜಾವ, ಸುಮಾತ್ರ, ಬಲಿ, ಬೋರ್ನಿಯಾ, ಸೆಲಿಬೆಸ್, ಸಯಾಂ ಮುಂತಾದ ದೇಶಗಳಿಗೆ ಈ ಸಂಘದ ವ್ಯಾಪಾರಿಗಳು ಹೋಗಿ ಸಾಂಬಾರ ಪದಾರ್ಥಗಳು, ಚಿನ್ನ, ಬೆಳ್ಳಿ, ಕುದುರೆ, ಆನೆ, ಸುಗಂಧ ದ್ರವ್ಯಗಳು, ಔಷಧಿಗಳು ಮುಂತಾದ ವಸ್ತುಗಳಲ್ಲಿ ವ್ಯಾಪಾರ ನಡೆಸಿ, ಹೇರಳ ಲಾಭವನ್ನು ಗಳಿಸುತ್ತಿದ್ದರು. ಸತ್ಯಸಂಧತೆಗೆ ಹೆಸರಾದ ಈ ವ್ಯಾಪಾರಿಗಳು ತಮ್ಮ ಉತ್ತಮ ನಡತೆಗೆ ಹೆಸರುವಾಸಿಯಾಗಿದ್ದರು. ಅವರು ತಮ್ಮದೇ ಆದ ಆರಕ್ಷಕರನ್ನು ಹೊಂದಿದ್ದು, ತಮ್ಮ ವ್ಯಾಪಾರ ಸಾಮಗ್ರಿಗಳನ್ನು ಹಾಗೂ ಹಣವನ್ನು ಸಂರಕ್ಷಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದರು. ಇವರು ಪ್ರಭಾವಿಗಳಾಗಿದ್ದು ರಾಜರು, ಮಂತ್ರಿಗಳು, ಅಧಿಕಾರಿಗಳು ಹಾಗೂ ಸಮಾಜದಿಂದ ಗೌರವ ಪಡೆಯುತ್ತಿದ್ದರು. ಇವರು ಧರ್ಮ ಹಾಗೂ ಕಲೆಗಳ ಪೋಷಕರೂ ಆಗಿದ್ದರು. ಈ ಎಲ್ಲ ಉತ್ತಮ ಕಾರ್ಯಗಳಿಂದ ಐಹೊಳೆಯು ಶ್ರೇಷ್ಠ ನಗರವಾಗಿ ಕಂಗೊಳಿಸುತ್ತಿತ್ತು. ಆದುದರಿಂದ ಇದು ವಾಣಿಜ್ಯ ಕೇಂದ್ರದ ಪ್ರತಿನಿಧಿಕ ನಗರವಾಗಿತ್ತು ಮತ್ತು ಇತರ ನಗರಗಳಿಗೆ ಆದರ್ಶಪ್ರಾಯವಾಗಿತ್ತು.[೯೨]

ಸೇವುಣ ಮತ್ತು ನೊಳಂಬರ ಸಮಕಾಲೀನವಾಗಿದ್ದ ಹೊಯ್ಸಳರ ಕಾಲದಲ್ಲಿ ವ್ಯಾಪಾರದ ಚಟುವಟಿಕೆಗಳನ್ನು ಕುರಿತ ವಿವರಗಳು ಬೇರಾವ ಕಾಲದಲ್ಲೂ ದೊರೆಯುವುದಿಲ್ಲ. ಈ ಕಾಲದಲ್ಲಿ

ವಿನಿಮಯ ವರ್ತಕರು ಮತ್ತು ವರ್ತಕ ಸಂಘಗಳು ಪ್ರಚಲಿತದಲ್ಲಿದ್ದವು. ವಿನಿಮಯ ವರ್ತಕರನ್ನು ವ್ಯಾಪಾರ ವೃತ್ತಿ ಮಾಡುವ ಶುದ್ಧ ವರ್ತಕರೆಂದು ಗುರುತಿಸಲಾದೆ.[೧೩] ಇವರನ್ನು ಕುರಿತಂತೆ ಶಾಸನಗಳಲ್ಲಿ ಶ್ರೀಮದಯ್ಯ ವೊಳೆಯಯ್ಯೂಬ್ಯ ಸ್ವಾಮ ಇಗಳುಮಾಮುಖ್ಯ ಶ್ರೀಮತುಸಮಂತು ಚಕ್ರವರ್ತಿ ಜಯಯ್ಯ ಸೆಟ್ಟಿಯರುಂ ಸೋವಿ ಸೆಟ್ಟಿಯರುಂ ಮುಖ್ಯ ಎರಡರು ನೂರರೆಂಟುಂ ಪಟ್ಟಣದ ಸೆಟ್ಟಿಗುತ್ತರುಂ ಸಮಸ್ತರುಂ ನಾನಾದೇಸಿಗ ...... ಗವರೆಗಳುಂ ...... ಗಾತ್ರಿಗರು ಮತ್ತ್ವತ್ತುಕ್ಕುಲಂ ಸಮಸ್ತ ನಕರಂಗಳು ಎಂಬ ವಿಭಿನ್ನ ವರ್ತಕ ವರ್ಗಗಳನ್ನು ಶಿರಸಂಗಿಯು (ತಾ.ಸಂವದತ್ತಿ) ಕ್ರಿ.ಶ. ೧೧೮೬ರ ಶಾಸನದಲ್ಲಿ ಹೇಳಿದೆ. ವೃತ್ತಿ ನಾಮದ ಮುಂದೆ ಸಂಖ್ಯೆಗಳು ಬಂದಲ್ಲಿ ಅವುಗಳು ಸಾಮಾನ್ಯವಾಗಿ ಆ ಸಂಘದ ಸದಸ್ಯರ ಅಥವಾ ಉಪಸಂಘಗಳ ಸಂಖ್ಯೆಯನ್ನು ಹೆಸರಿಸುತ್ತದೆ ಎಂದು ಹೇಳಬಹುದು. ಒಂದು ವೇಳೆ ವೃತ್ತಿ ನಾಮದ ಮುಂದೆ ಸಂಖ್ಯೆ, ಸಂಘದ ಹೆಸರನ್ನು ಸೂಚಿಸುವಂತಹ ಪದಗಳಿಲ್ಲದಿದ್ದಾಗ ಅವುಗಳು ಸಂಘಸಂಸ್ಥೆಗಳನ್ನು ಕಟ್ಟಿಕೊಳ್ಳುವುದು ಎಂದು ಹೇಳಬಹುದು.

ಸೇವುಣ ಮತ್ತು ನೊಳಂಬರ ಕಾಲದಲ್ಲಿ ಸಾಮಾನ್ಯವಾಗಿ ಉದ್ದಿಮೆಗಳು ಸ್ಥಳೀಯ ಮಾರುಕಟ್ಟೆಗಳನ್ನೇ ಗಮನದಲ್ಲಿಟ್ಟುಕೊಂಡಂತೆ ತೋರುತ್ತದೆ. ಆದರೆ ವ್ಯಾಪಾರಿಗಳೂ ವ್ಯಾಪಾರ ಶ್ರೇಣಿಗಳೂ ಊರಿಂದೂರಿಗೆ ಹೋಗುತ್ತಿದ್ದುದರಿಂದ, ಒಳನಾಡಿನ ವ್ಯಾಪಾರವೇನೋ ಸಮೃದ್ಧವಾಗಿತ್ತೆಂದು ಹೇಳಬಹುದು. ವಾರಂಗಲ್ಲಿನಲ್ಲಿ ನೆಲಕಂಬಳಿಗಳು ತಯಾರಾಗುತ್ತಿದ್ದವು. ಹೆಂಡ ತಯಾರಿಕೆ, ಚಾಪೆ ಹೆಣೆತ, ಬುಟ್ಟಿ ಹೆಣೆತಗಳು ಮುಖ್ಯ ಉದ್ದಿಮೆಗಳಾಗಿದ್ದುವು. ನೇಕಾರರು, ಅಕ್ಕಸಾಲಿಗರು, ಕಮ್ಮಾರರು, ಬಡಗಿಗಳು, ವಾಸ್ತುಶಿಲ್ಪಿಗಳೇ ಮೊದಲಾದ ವೃತ್ತಿಗಾರರು ಹೆಚ್ಚಾಗಿದ್ದರು, ಭಾರತದ ಪ್ರಾಚೀನವಾದ ಉದ್ಯಮಗಳಲ್ಲಿ ಒಂದಾದ ಬಟ್ಟೆ ಉದ್ಯಮವು ಈ ಯುಗದಲ್ಲಿ ಏಳಿಗೆಗೆ ಬಂದಿದ್ದಿತು. ರಾಜರುಗಳ ದಾಖಲೆಗಳ ಪ್ರಕಾರ ಪಟ್ಟಿಯನ್ನೂ ಅವು ಸಿದ್ಧವಾಗುವ ಸ್ಥಳಗಳನ್ನೂ 'ಮಾನಸೋಲ್ಲಾಸ'[೧೪]ವು ವಿವರವಾಗಿ ಕೊಟ್ಟಿದೆ. ಆಭರಣ ಕಲೆ ಅತ್ಯುಚ್ಚ ಮಟ್ಟದಲ್ಲಿತ್ತು ವಜ್ರ, ಮುತ್ತು, ಮಾಣಿಕ್ಯ, ಪದ್ಮರಾಗ, ಮರಕತ, ಗೋಮೇದ ರತ್ನಗಳು ದೊರೆಯುವ ಸ್ಥಳಗಳನ್ನೂ ಅವುಗಳ ಲಕ್ಷಣವನ್ನೂ 'ಮಾನಸೋಲ್ಲಾಸ'ವು ವಿವರಿಸಿದೆ.

ಒಳನಾಡಿನ ವ್ಯಾಪಾರ ಹೆಚ್ಚಾಗಿ ರಸ್ತೆಗಳ ಮೂಲಕವೇ ನಡೆಯುತ್ತಿದ್ದಿತು. ಬಂಡಿಗಳೂ, ಮೂಟೆ ಪ್ರಾಣಿಗಳು ಸರಕುಗಳನ್ನು ಊರಿಂದೂರಿಗೆ ಸಾಗಿಸುತ್ತಿದ್ದವು. ರಸ್ತೆ ಸಾಗಾಟವು ಆಗಿನ ಕಾಲದಲ್ಲಿ ಅಷ್ಟೊಂದು ಸುರಕ್ಷಿತವಾಗಿರಲಿಲ್ಲ. ಆದುದರಿಂದ ನದಿ ಸಂಚಾರವು ಪ್ರಚಾರದಲ್ಲಿತ್ತು. ನದಿಯಾನಕ್ಕೆ ದೋಣಿಗಳು ಬಳಕೆಯಲ್ಲಿದ್ದವು. ನಾಡಿನ ವ್ಯಾಪಾರದಲ್ಲಿ 'ಶೆಟ್ಟಿ'ಗಳ ಪಾತ್ರ ಮಹತ್ವದ್ದಾಗಿತ್ತು. ಹಣ ಸಾಲ ಕೊಡುವ ಶೆಟ್ಟಿಗಳು ಕೆಲವರಿದ್ದರು. ಅವರಿಗೆ 'ಹೆರುವ ಸೆಟ್ಟಿಗಳು' ಎಂಬ ಸಾಮಾನ್ಯ ನಾಮಧೇಯವಿತ್ತು. ಆಭರಣ ಕಲೆಗೆ ಅರಮನೆ ದೇಗುಲಗಳ ಆಶ್ರಯ ಪ್ರೋತ್ಸಾಹಗಳಿದ್ದವು; ಸೋವಿ ಸೆಟ್ಟಿ ಎಂಬ ವ್ಯಾಪಾರಿಯು ಚಕ್ರವರ್ತಿಗೂ ಸೇನಾನಿ ಬರಮದೇವನಿಗೂ ಪ್ರಶಸ್ತಿ ರತ್ನಗಳನ್ನು[೧೫] ಒದಗಿಸುತ್ತಿದ್ದನಂತೆ ಎಂಬ ಹೇಳಿಕೆಗಳಿವೆ.

ದಿನಬಳಕೆ ಸಾಮಗ್ರಿಗಳ ಮತ್ತು ವಿಲಾಸ ಸಾಮಾಗ್ರಿಗಳ ಮಾರಾಟ ನಡೆಸುತ್ತಿದ್ದ ವರ್ತಕರಲ್ಲಿ ಸ್ಥಳೀಯರೂ ಇದ್ದರೂ, ಹೊರಗಿನವರೂ ಇದ್ದರು, ಅವರಿಗೆ ತಮ್ಮದೇ ಪ್ರತ್ಯೇಕ ಶ್ರೇಣಿಯಿತ್ತು. ಅಂತಹ ಶ್ರೇಣಿಯೊಂದಕ್ಕೆ 'ಹರದ ವನೆ' ಎಂಬ ಹೆಸರಿದ್ದಿತಂತೆ. 'ಹರದ ವನೆ' ಯೆಂದರೆ ನಾನಾ ಸರಕುಗಳ ವರ್ತಕರು ಒಂದೆಡೆ ಸೇರಿ ಸರಕು ಬೆಲೆಗಳನ್ನೂ, ವ್ಯಾಪಾರ ನಿಯಮಾವಳಿಗಳನ್ನೂ ಚರ್ಚಿಸುವ

ಸ್ಥಳವಾಗಿದ್ದಿರಬೇಕು. ವೀಳೆದೆಲೆ ವರ್ತಕರು (ಎಲೆಯ ಗತ್ರಿಕರು) ತಾವು ಮಾರಾಟ ಮಾಡಿದ ವೀಳೆದೆಲೆಗಳಿಗೆ ತಕ್ಕಂತೆ ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಕನಗೋಳಿಯ ಬಸವಣ್ಣ ದೇವಾಲಯಕ್ಕೆ 'ಹೊನ್ನು' ಕೊಡುತ್ತಿದ್ದರಂತೆ. 'ನಕರ' ಶ್ರೇಣಿಗೆ ಸೇರಿದವರು ಹತ್ತಿ, ಪದ್ಮರಾಗ ಮತ್ತು ಧಾನ್ಯಗಳ ವರ್ತಕರಾಗಿದ್ದರು. ಅವರು ಅದೇ ರೀತಿ ಬಸವಣ್ಣ ದೇವಾಲಯಕ್ಕೆ ಹೊನ್ನು[೬] ಕಾಣಿಕೆ ಕೊಡುತ್ತಿದ್ದರು. ಸೆಟ್ಟಿಗಳಲ್ಲಿ ಪ್ರತಿಷ್ಠಿತರಾದವರು ಪದ್ಮಾರಾಗಗಳನ್ನೂ ಧಾನ್ಯಗಳನ್ನೂ ಮಾರುತ್ತಿದ್ದರು. ಹಣಸಾಲ ಕೊಡುವ ವ್ಯವಹಾರ ನಡೆಸುವವರ ವರ್ಗ ಬೇರೊಂದಿತ್ತು. ಒಂದು ಕಡೆ 'ಸಾಲಿಗ ಕೇರಿ' ಎಂಬ ಪ್ರತ್ಯೇಕ ಕೇರಿಯೇ ಇದ್ದಿತಂತೆ.

ಕ್ರಿ.ಶ.೯೫೩ ರಿಂದ ೧೩೩೭ರ ಅವಧಿಯಲ್ಲಿ ವಿಶೇಷವಾಗಿ ಕರ್ನಾಟಕ ಚರಿತ್ರೆಯಲ್ಲಿ ರಾಜಕೀಯ ಹಾಗೂ ಆರ್ಥಿಕ ಚಟುವಟಿಕೆಗಳಿಗೆ ಅತ್ಯಂತ ಪ್ರಮುಖ ಕಾಲವಾಗಿದೆ. ಈ ಕಾಲದಲ್ಲಿ ಕಲ್ಯಾಣದ ಚಾಲುಕ್ಯರು, ಗೋವಾ ಕದಂಬರು, ಕಲಚೂರಿಗಳು, ಸೇವುಣರು, ನೊಳಂಬರು ಹಾಗೂ ದೋರಸಮುದ್ರದ ಹೊಯ್ಸಳರು ರಾಜ್ಯಗಳ ಸ್ಥಾಪನೆಯ ಜೊತೆಯಲ್ಲಿ ಧಾರ್ಮಿಕ, ಸಾಂಸ್ಕೃತಿಕ ಪ್ರಗತಿಗೆ ಕಾರಣರಾದರು. ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ತ್ವರಿತ ಅಭಿವೃದ್ಧಿಗಳು ಆದವು. ಕಲ್ಯಾಣ ಚಾಲುಕ್ಯರು ರಾಷ್ಟ್ರಕೂಟರ ತರುವಾಯದಲ್ಲಿ ವಿಶಾಲ ಸಾಮ್ರಾಜ್ಯವನ್ನು ಕಟ್ಟುವುದರ ಜೊತೆಗೆ ವ್ಯಾಪಾರಾಭಿವೃದ್ಧಿಗೆ ಪೂರಕವಾದ ಹಿನ್ನೆಲೆಯನ್ನು ಒದಗಿಸಿದ್ದರು. ಈ ಹಿಂದೆ ಹೇಳಿದಂತೆ ಒಳನಾಡ ವ್ಯಾಪಾರಾಭಿವೃದ್ಧಿಯ ಜೊತೆಯಲ್ಲಿ ವಿದೇಶಗಳಲ್ಲೂ ವ್ಯಾಪಾರ ನಡೆಯುತ್ತಿತ್ತು.

೧೦-೧೧ನೇ ಶತಮಾನದಲ್ಲಿ ಕಡಲುಗಳ ಮೂಲಕ ವ್ಯಾಪಾರ ಸಂಪರ್ಕ ಹೊಂದಿದ್ದರು. ಇದಕ್ಕೆ ದಾಖಲೆಗಳನ್ನು ಹಲವಾರು ಶಿಲ್ಪಗಳಲ್ಲಿ ವೀರಗಲ್ಲುಗಳಲ್ಲಿ ಹಡಗುಗಳ ಚಿತ್ರಗಳು ಕಂಡುಬರುತ್ತವೆ. ಶಿಕಾರಿಪುರದ ಶಾಸನದಲ್ಲಿ ಚೇರ, ಚೋಳ, ಪಾಂಡ್ಯ, ಮಲಯ (ಮಲೇಶಿಯಾ), ಕಾಂಭೋಜ (ಕಾಂಬೋಡಿಯಾ), ಪಾರಸ (ಪರ್ಷಿಯಾ) ನೇಪಾಳಗಳಲ್ಲಿ ಪಾದ ಮಾರ್ಗ ಹಾಗೂ ಜಲಮಾರ್ಗಗಳಲ್ಲಿ ಅನೇಕ ಭೂ ಮಂಡಲಗಳಿಗೆ ಹೋಗಿ ಹಲವಾರು ವಸ್ತುಗಳನ್ನು ಮಾರಿ ಬಂದ ವಿವರ ಹಾಗೂ ತಮ್ಮ ಶಕ್ತಿ ಶೌರ್ಯಗಳನ್ನು ಹೇಳಿಕೊಂಡಿದ್ದಾರೆ. ಇದರಿಂದ ಅಯ್ಯಾವೊಳೆ ಐನೂರ್ವರ್ ಸ್ವಾಮಿಗಳು ಜಲ ಮಾರ್ಗದಲ್ಲೂ ವ್ಯಾಪಾರವನ್ನು ನಡೆಸಲು ಶಕ್ತರಾಗಿದ್ದರು ಎಂದು ಹೇಳಲು ಸಾಕ್ಷಾಧಾರ ದೊರೆತಂತಾಗುತ್ತದೆ. ಈ ಮೇಲೆ ಹೆಸರಿಸಿದ ಶಾಸನದಲ್ಲಿ ವ್ಯಾಪಾರಕ್ಕೆ ಸಾಗಿಸುತ್ತಿದ್ದ ವಸ್ತುಗಳ ಹೆಸರುಗಳೂ ಸಹ ಹೆಸರಿಸಲ್ಪಟ್ಟಿವೆ. ಮುಖ್ಯವಾಗಿ ಸಾಂಬಾರು ಪದಾರ್ಥಗಳು, ಕರ್ಪೂರ, ಸುಗಂಧ ದ್ರವ್ಯಗಳು, ಆನೆ, ಅಲ್ಲದೇ ಕರಕುಶಲವಸ್ತುಗಳು ವ್ಯಾಪಾರಕ್ಕೆ ಸಾಗಿಸಲ್ಪಡುತ್ತಿದ್ದವು.

ಒಟ್ಟಾರೆಯಾಗಿ ಚಿತ್ರದುರ್ಗ ಪ್ರದೇಶದಲ್ಲಿ ನೊಳಂಬ, ಸೇವುಣ, ಪಲ್ಲವರ ಅನೇಕ ಕೇಂದ್ರಗಳನ್ನು ಆಡಳಿತ ಕೇಂದ್ರವಾಗಿಸಿಕೊಂಡು ಮುಂದೆ ಅವು ಹೊಯ್ಸಳರ ಕಾಲಕ್ಕೆ ಪ್ರಮುಖ ವ್ಯಾಪಾರ ಕೇಂದ್ರಗಳಾಗಿ ಬೆಳೆಯಲು ಸಹಾಯವಾದವು. ಹಾಗೆಯೇ ಅವರ ಕಾಲದಲ್ಲಿ ಕಲೆ ಮತ್ತು ವಾಸ್ತುಶಿಲ್ಪಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿ ಜೈನ, ವೈಷ್ಣವ, ಶೈವ ಹಾಗೂ ನಾಗರ, ದ್ರಾವಿಡ ಶೈಲಿಯ ದೇವಾಲಯಗಳು, ಆರಾಧನ ಮಂದಿರಗಳು ಈ ಪ್ರದೇಶದಲ್ಲಿ ರಚನೆಯಾಗಿರುವುದು ಗುರುತಿಸಬಹುದಾಗಿದೆ.

ಕರ್ನಾಟಕದ ರಾಜ ಮನೆತನಗಳಲ್ಲಿ ಹೊಯ್ಸಳರ ಸ್ಥಾನ ಮಹತ್ವವಾದುದು. ಇವರು ತಮ್ಮ ಸಮಕಾಲೀನ ರಾಜ ಮನೆತನ ಹಾಗೂ ಸಾಮಂತ ಕುಲಗಳಿಗಿಂತಲೂ ಹೆಚ್ಚು ಪ್ರಸಿದ್ಧರಾಗಿದ್ದು. ಕ್ರಿ.ಶ.

ಹನ್ನೊಂದನೆಯ ಶತಮಾನದಿಂದ ಹದಿನಾಲ್ಕನೆಯ ಶತಮಾನದ ಮಧ್ಯ ಕಾಲದವರೆಗೆ ಕರ್ನಾಟಕ ಮಾತ್ರವಲ್ಲದೆ ದಕ್ಷಿಣ ಭಾರತದಲ್ಲಿ ಆಳ್ವಿಕೆ ನಡೆಸಿದರು. ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ಆರ್ಥಿಕ ದೃಷ್ಟಿಯಿಂದ ಹೊಯ್ಸಳರ ಆಳ್ವಿಕೆಯ ಅವಧಿ ಅತ್ಯಂತ ಪ್ರಭಾವಯುತವಾದುದು. ಶಿಲ್ಪ ಕಲಾಶೈಲಿ ಇವರ ಕಾಲದಲ್ಲಿ ತನ್ನದೇ ಆದ ಶೈಲಿಯನ್ನು ಹೊಂದಿದ್ದು ಜಾಗತಿಕ ಕಲಾಕ್ಷೇತ್ರಕ್ಕೆ ವಿಶಿಷ್ಟವಾದ ಕೊಡುಗೆಯನ್ನು ನೀಡಿದೆ.[೯೯]

ಹೊಯ್ಸಳರ ಕಾಲಾವಧಿಗೆ ಅಪರಿಮಿತ ಗ್ರಾಮಗಳು ಹುಟ್ಟಿಕೊಂಡಿದ್ದು, ಇದರ ಜೊತೆಗೆ ಅನೇಕ ನಗರಗಳು ವ್ಯಾಪಾರ ಕೇಂದ್ರಗಳಾಗಿ ಹುಟ್ಟಿಕೊಂಡಿದ್ದು ನಗರ ಚರಿತ್ರೆಯ ಮೂಲಕ ಕ್ರಿ.ಶ. ೧೦ನೇ ಶತಮಾನದಿಂದ ೧೪ನೇ ಶತಮಾನದ ಹೊತ್ತಿಗೆ ಬೃಹತ್ ಪ್ರಮಾಣದ ನಗರಗಳು ಹುಟ್ಟಿಕೊಂಡಿರುವುದು ಕಾಣಬಹುದಾಗಿದೆ. ಗ್ರಾಮೀಣ ಪ್ರದೇಶಗಳಿಗೆ ಹೋಲಿಸಿ ನೋಡಿದಾಗ ನಗರಪ್ರದೇಶಗಳು ತೀರಾ ಕಡಿಮೆ ಸಂಖ್ಯೆಯಲ್ಲಿದ್ದಿದ್ದು ಕಂಡು ಬರುತ್ತದೆ. ಅದರಲ್ಲೂ ನಗರ ಲಕ್ಷಣಗಳಷ್ಟೇ ಸೂಚಿಸುತ್ತಿದ್ದ ಪ್ರದೇಶಗಳ ಸಂಖ್ಯೆ ತೀರಾ ಕಡಿಮೆಯಿತ್ತು. ಗ್ರಾಮೀಣ ಮತ್ತು ನಗರಗಳೆರಡರ ಲಕ್ಷಣಗಳು ಸೇರಿಕೊಂಡಿದ್ದ ಪ್ರದೇಶಗಳು ಅನೇಕ ಸಂಖ್ಯೆಯಲ್ಲಿದ್ದವು. ಪ್ರಾಚೀನ ಮತ್ತು ಮಧ್ಯಕಾಲೀನ ಸಂದರ್ಭದ ನಗರ ಹಾಗೂ ಗ್ರಾಮ ಪ್ರದೇಶಗಳ ನಡುವೆ ವ್ಯತ್ಯಾಸ ಖಚಿತವಾಗಿ ಕರಾರುವಾಕ್ಕಾಗಿ ಇರಲಿಲ್ಲ. ಕ್ರಿ.ಶ. ಹತ್ತನೆಯ ಶತಮಾನದ ನಂತರ ಅನೇಕ ಗ್ರಾಮೀಣ ಪ್ರದೇಶಗಳು ನಗರ ಪ್ರದೇಶಗಳಾಗಿ ಪರಿವರ್ತನೆಗೊಂಡವು. ಶಾಸನಗಳು ಮತ್ತು ಸಾಹಿತ್ಯ ಆಕರಗಳು ಈ ಕುರಿತು ಮಾಹಿತಿಯನ್ನು ನೀಡುತ್ತವೆ. ಕ್ರಿ.ಶ. ೧೦೭೪ರಲ್ಲಿ ಪುಲಿಗೆರೆಯು ನಗರ ಪ್ರದೇಶವಾಗಿ ಪರಿವರ್ತನೆಗೊಂಡಿತು. ಕ್ರಿ.ಶ. ೧೨೫೧ರಲ್ಲಿ ಮಲ್ಲಿಸೆಟ್ಟಿ ಎನ್ನುವ ಬಳೆ ವ್ಯಾಪಾರಿಯು ಗ್ರಾಮವೊಂದನ್ನು ಪಟ್ಟಣವಾಗಿ ಪರಿವರ್ತಿಸಿದ. ಅದಕ್ಕಾಗಿ ಅವನಿಗೆ ಆ ಗ್ರಾಮದ ಮುಖಂಡ ಮಲ್ಲಗಾವುಂಡ ಹಾಗೂ ಅಲ್ಲಿನ ಹಳ್ಳಿಗರು ದಾನವನ್ನು ನೀಡಿದರು. ಹೊಳಲ್ಕೆರೆ ಶಾಸನ ಸಂಖ್ಯೆ-೧೨,೧೪ರಲ್ಲಿ ಅನೇಕ ಕೆರೆಯ ಹಿಂದಿನ ಭೂಮಿಯನ್ನು ದೇವಾಲಯಕ್ಕೆ ಪಟ್ಟಣಸ್ವಾಮಿ ದಾನ ನೀಡಿದ ಅಂಶಗಳಿದ್ದು 'ಹೊಳಲಕೆರೆ ಪಟ್ಟಣವನ್ನು ಆಳುತ್ತಿದ ಶ್ರೀಮಂತ ಪಟ್ಟಣದ ಹೊಳೂದಬಮಯ್ಯ ನಾರಾಯಣ ದೇವಾಲಯದ ಮುಂದೆ ವ್ಯಾಪಾರ ಮಾಡಲು ಅನುಮತಿಸಿದ ಅಂಶವಿದೆ.'[೧೦೧] ಎಣ್ಣೆಯ ಉತ್ಪಾದನೆ, ಮಾರಾಟಗೆಳೆರಡೂ ತೆಲ್ಲಿಗರ ಪ್ರಭುತ್ವದಲ್ಲಿದ್ದವು. ಎಳ್ಳು, ಮೊದಲಾದ ಎಣ್ಣೆ ಬೀಜಗಳು ಎತ್ತುಗಾಣ,[೧೦೨] ಕೈಗಾಣ, ಮೆಟ್ಟು ಗಾಣ, ಹೊಯ್ದಗಾಣಗಳಲ್ಲಿ ಹಾಕಿ ಎಣ್ಣೆ ಉತ್ಪಾದಿಸುತ್ತಿದ್ದರು. ಒಂದೆತ್ತಿನ ಮೂಲಕ ಎತ್ತುಗಾಣ, ಕೈಯಿಂದ ಕೈಗಾಣ, ಕಾಲಿನಿಂದ ಮೆಟ್ಟುಗಾಣ ನಡೆಸುತ್ತಿದ್ದರು. ಸಾಮಾನ್ಯವಾಗಿ ಕಲ್ಲಿನಿಂದ ತಯಾರಿಸಿದ 'ಕಲ್ಲುಗಾಣ'ಗಳಿದ್ದವು.

ವೈಯಕ್ತಿಕ ಗಾಣಗಳಂತೆ ದೇವಾಲಯದ ಹೆಸರಿನಲ್ಲಿಯೂ 'ದೇವಗಾಣ'ಗಳಿದ್ದವು ಇವುಗಳನ್ನು ದೇವಾಲಯದ ಆವರಣ ಅಥವಾ ಮುಂದೆ ಸ್ಥಾಪಿಸುವ ಪರಿಪಾಠವಿದ್ದಿತ್ತು. ತಾಳಿಕೋಟೆಯಲ್ಲಿ ಸೋಮನಾಥದೇವರ ಗಾಣ, ಬಚ್ಚಪ್ಪನ ಹಳ್ಳಿಯಲ್ಲಿ ಶ್ರೀ ಶಂಕರನಾರಾಯಣಸ್ವಾಮಿಯ ಗಾಣಗಳಿದ್ದವು. ದೇವಾಲಯದ ನಂದಾದೀವಿಗೆ ನಡೆಯಲು ಗಾಣ ಹಾಕಿದರೆ ಪುಣ್ಯ ಪ್ರಾಪ್ತವಾಗುವುದೆಂಬ ಭಾವನೆಯಿಂದ ಬಿಟ್ಟಿಗೌಡ ಕೊಳಲ್ಲೂರ ಸೋಮೇಶ್ವರದೇವರ ಮುಂದೆ ಗಾಣ ನಡಿಸಿದುದನ್ನು ಕಾರಗಳ್ಳಿ ಶಾಸನ, ನಾಗಿದೇವ ನವಲೆನಾಡ ಮಣಿಗಳ್ಳಿಯ ರಾಮನಾಥದೇವರಿಗೆ ಗಾಣ ಮಾಡಿಸಿದ ವಿಷಯವನ್ನು ಕಟ್ಟಿಮನುಗನಹಳ್ಳಿ ಶಾಸನ ಕಾಮಿಸೆಟ್ಟಿ ಸ್ಥಾಪಿಸಿದ ಗಾಣವನ್ನು ಲಕ್ಷ್ಮೇಶ್ವರ ಶಾಸನಗಳು ವಿವರಿಸುತ್ತವೆ.

ತೆಲ್ಲಿಗರು ಎಣ್ಣೆಯಲ್ಲಿ ಸುಗಂಧದ್ರವ್ಯ ಕೂಡಿಸಿ ಸುಗಂಧದಣ್ಣೆ ತಯಾರಿಸುತ್ತಿರುವ ಸುಳಿವು ಅಲ್ಲಮನ ವಚನ ಚಂದ್ರಿಕೆಯಲ್ಲಿ ಸಿಗುತ್ತದೆ. ಚಿತ್ರದುರ್ಗ ಶಾಸನ ಸಂಖ್ಯೆ ೩೪ರಲ್ಲಿ ತಳವ್ರಿತ್ತಿಹೊಸಗೆಜೆಯ ಕೆಳಗೆ ಬಿಟ್ಟ ಗುಜ್ಜೆಕಮ್ಮ ೪೦೦೦॥ ಸುಂಕ ೧ ಎಲೆಯ ಹೇಜೆಂಗೆ ಎಲೆ ೧೦೦ ಅಡಕೆಯ ಹೇಜೆಂಗೆ ಅಡಕೆ ೩೦ ಎಣ್ಣೆಂಯು ಕೊಡಕ್ಕೆ ಎಣ್ಣೆವಾನ ೧ ಇನ್ತೀಧರ್ವ್ಮ ಮಂಕಾದಾತಂಗೆಗಂಪೆ ವಾರಣಾಸಿಕುರುಕ್ಷೇತ್ರಮೆಂಬತ್ತೀರ್ತ್ಥ ಸ್ಥಾನಂಗಳಲು ಸಾಯಿರಕವಿಲೆಯ ಆಳುಕಾರ ಸಂಹಿತವಾಗಿ ಚತುರ್ವ್ವೇದಪಾರಗರೆಪ್ಪಸಹಶ್ರಬ್ರಾಹ್ಮಣರ್ಗ್ಗೆ ಉಭಯ ಮುಖಿಗೊಟ್ಟಫಲನೆಕೋಟಿ ತೀರ್ತ್ಥ ದೆಕೋಟ ಮಹಾದಿನದೊಳಳಿದನಿಂತಿದನಳಿಂದ[೧೦೩] ಎಂದಿದ್ದು. ಗಾಣಗಳಲ್ಲಿ ಉತ್ಪಾದಿಸಿದ ಎಣ್ಣೆಯನ್ನು ಕೊಡ, ಚರ್ಮದ ಚೀಲಗಳಲ್ಲಿ ತುಂಬಿ ಪ್ರಾಣಿ (ಎತ್ತು, ಕತ್ತೆ, ಕೋಣ), ತಲೆ, ಹೆಗಲ ಮೇಲಿಟ್ಟುಕೊಂಡೇ ಅಥವಾ ಬಂಡಿಗಳ ಮೂಲಕವೂ ಸಂತೆದಿನ ಹಾಗೂ ಪ್ರತಿದಿನ ಮಾರಾಟ ಮಾಡುತ್ತಿದ್ದರು. ಆದುದರಿಂದ ಶಾಸನಗಳು ತೆಲ್ಲಿಗಸೆಟ್ಟಿ, ಅಯ್ವತ್ತೊಕ್ಕಿಲಸೆಟ್ಟಿಯರೆಂದು ಇವರನ್ನು ಕರೆದಿವೆ.[೧೦೪] ಹೀಗೆ ಉತ್ಪಾದನೆ ಹಾಗೂ ಮಾರಾಟ ಎರಡು ವೃತ್ತಿಯನ್ನು ಮಾಡುವ ತೆಲ್ಲಿಗರು ವಿಶಿಷ್ಟವರ್ತಕರಾಗಿ ಕಂಡುಬರುತ್ತಾರೆ.

ಮೇಲೆ ತಿಳಿಸಿದಂತೆ ಒಂದು ವೃತ್ತಿಯ ಸಮುದಾಯ ಉತ್ಪಾದನೆ ಹಾಗೂ ಮಾರಾಟ ಎರಡೂ ಕಾರ್ಯಗಳನ್ನು ಮಾಡುವುದು ಆ ಕಾಲಕ್ಕೆ ಸರಿ ಎಂಬಂತೆ ಸ್ಥಳೀಯವಾಗಿ ಉತ್ಪಾದನೆ ಮಾಡುವಂತಹ ತೈಲ ಅಥವಾ ವಸ್ತುಗಳು ಗ್ರಾಮೀಣ ಮಾರುಕಟ್ಟೆಯನ್ನು ರೂಪಿಸಿದರೆ, ಉಳಿದಂತೆ ಬೇರೊಂದು ಕಡೆ ಮಾರಾಟ ಮಾಡಿದರೆ ಅದು ನಗರ, ಪಟ್ಟಣಗಳ ಹುಟ್ಟಿಗೆ ಕಾರಣವಾಗುತ್ತದೆ ಎನ್ನಬಹುದು.

ಈ ಕುರಿತಂತೆ ಅಪ್ಪಾದೊರೈ ಈ ರೀತಿ ಅಭಿಪ್ರಾಯಪಟ್ಟಿದ್ದಾರೆ. ಮೊದಲನೆಯದಾಗಿ ಗ್ರಾಮಗಳು ತಮ್ಮ ಬೇಡಿಕೆಗಳನ್ನು ತಾವೇ ಪೂರೈಸಿಕೊಳ್ಳುತ್ತವೆ. ಆದರೆ ನಗರಗಳು ತಮ್ಮ ದೈನಂದಿನ ಬೇಡಿಕೆಗಳನ್ನು ಹೊರಗಿನಿಂದ ಪೂರೈಸಿಕೊಳ್ಳುತ್ತವೆ. ಕೆಲವು ನಗರಗಳು ದೊಡ್ಡ ಗ್ರಾಮಗಳಂತಿದ್ದವು. ಎರಡನೆಯದಾಗಿ ಪಟ್ಟಣಗಳಲ್ಲಿ ಅತಿಯಾದ ಜನಸಂಖ್ಯೆಯ ಕಾರಣ ಉತ್ಪಾದನೆಗೆ ಹೆಚ್ಚು ಒತ್ತು ಇರುತ್ತದೆ. ಈ ಉತ್ಪಾದನೆಯು ಮುಖ್ಯವಾಗಿ ಸ್ಥಳೀಯ ಉಪಯೋಗಕ್ಕಿಂತ ಮಾರುಕಟ್ಟೆಗಳಿಗೆ ಅಥವಾ ವ್ಯಾಪಾರಕ್ಕೆ ಮೀಸಲಾಗಿರುತ್ತದೆ.[೧೦೫] ಹಾಗೆಯೇ ಜಿ.ಆರ್. ಕುಪ್ಪಸ್ವಾಮಿ ಅವರು ಮಧ್ಯಕಾಲೀನ ಕರ್ನಾಟಕದ ಗ್ರಾಮೀಣ ಮತ್ತು ನಗರಗಳ ಅರ್ಥವ್ಯವಸ್ಥೆಯನ್ನು ಸ್ಪಷ್ಟವಾಗಿ ವರ್ಗೀಕರಿಸುವುದು ತುಂಬಾ ಕಠಿಣವಾದ ಕೆಲಸ. ವಾಸ್ತವ್ಯದಲ್ಲಿ ಹಲವಾರು ವಿಷಯಗಳಲ್ಲಿ ಗ್ರಾಮ ಮತ್ತು ಪಟ್ಟಣಗಳ ಜೀವನದಲ್ಲಿ ಸಾಮರಸ್ಯ ಕಂಡುಬರುತ್ತದೆ. ಈ ವ್ಯತ್ಯಾಸ ಕೇವಲ ಶ್ರೇಣಿಯೇ ಹೊರತು ಪ್ರಕಾರದಲ್ಲಿ ಅಲ್ಲ ಎಂದಿದ್ದಾರೆ.[೧೦೬] ಇವರ ಹೇಳಿಕೆಗಳಿಗೆ ಪೂರಕವಾಗಿ ಜಿ.ಎಸ್.ದೀಕ್ಷಿತರು ಒಂದು ಹಳ್ಳಿಯಲ್ಲಿ ಸಂತೆಯನ್ನು ಸ್ಥಾಪಿಸುವುದರೊಂದಿಗೆ ಅದು ಪಟ್ಟಣವಾಗಿ ಮಾರ್ಪಡುತ್ತದೆ, ಅಗ್ರಹಾರಗಳ ರೀತಿ ಇವು ಸಹ ಕೆಲವೊಮ್ಮೆ ಸಂತೆ ನಡೆಸುವುದರಿಂದ ಅಥವಾ ರಾಜಾಜ್ಞೆ ಹೊರಡಿಸುವುದರ ಮೂಲಕ ಹಳ್ಳಿಗಳು ನಗರಗಳಾಗಿ ಮಾರ್ಪಾಡಾಗುತ್ತಿದ್ದವು. ಕೆಲವು ವೇಳೆ ಹಳ್ಳಿಯ ಜನತೆ ಮತ್ತು ಮುಖ್ಯಸ್ಥರು ತಮ್ಮ ಊರನ್ನು ನಗರಗಳಾಗಿ ಪರಿವರ್ತಿಸಲು ತೀರ್ಮಾನ ಕೈಗೊಳ್ಳುತ್ತಿದ್ದರು ಎಂದಿದ್ದಾರೆ.[೧೦೭] ಕ್ರಿ.ಶ. ೧೨೫೧ರಲ್ಲಿ ಬಳೆಗಾರ ಮಲ್ಲಿಶೆಟ್ಟಿಯು ಒಂದು ಹಳ್ಳಿಯನ್ನು ಪಟ್ಟಣವಾಗಿ ಮಾರ್ಪಡಿಸಿದನು.[೧೦೮]

ಕ್ರಿ.ಶ.೧೨೧೮ರ ಕುಂದವಾಡ ಗ್ರಾಮದ ಶಾಸನವು (ದಾವಣಗೆರೆ ೧೦೫) ಹೊಯ್ಸಳರ ಕಾಲದ ಚಿತ್ರದುರ್ಗ ಪ್ರದೇಶದ ವ್ಯಾಪಾರ-ವಾಣಿಜ್ಯದ ಆರ್ಥಿಕ ಜೀವನ ಹಿಡಿದ ಕನ್ನಡಿಯಂತಿದೆ. ರಾಣಿಯಾದ

ಅಭಿನವಕೇತಲ ದೇವಿಯು ಈ ಕುಂದವಾಡದಲ್ಲಿ ಪ್ರತಿ ಬುಧವಾರ ಸಂತೆ ನಡೆಯುವಂತೆ ಏರ್ಪಡಿಸಿದಳಂತೆ.[೧೦೮] ಅದಕ್ಕೆ ಸಂಬಂಧಿಸಿದ ಇಡೀ ಶಾಸನದ ಪಾಠ ಈ ರೀತಿ ಇದೆ.

ಸ್ವಸ್ತಿ ॥ ಮನಸ್ತುಂಗಶಿರಶ್ಚುಂಬಿಚಂದ್ರ
ಚಾಮಕಚಾರವೇತ್ರೈಲೋಕ್ಯನಗರಾರಂಭಮೂಲಸ್ತಂಭಾಯ
ಶಂಭವೇ ॥ ಸ್ವಸ್ತಿ ಸಮಸ್ತ ಭುವನಾಶ್ರಯಂಶ್ರೀಪ್ರಿ
ಥ್ವೀವಲ್ಲಭಂಮಹಾರಾಜಾದಿರಾಜಪರಮೇಶ್ವರಮೇಶ್ವರಂದ್ವಾರಾ
ಪತೀಪುರವರಾಧೀಶ್ವರಂಯಾದವಕುಲಾಂಬ
ರದ್ಯುಮಣಿಶಮ್ಯಕ್ತಚೂಡಾಮಣಿಮಲಪರೊ
ಳುಗಂಡನಿಸ್ಸಂಕಹೊಯ್ಸಣವೀರಬಲ್ಲಾಳದೇವರಶ್ರೀ
ಮತುಪ್ರತಾಪಚಕ್ರವರ್ತಿಯವಿಜಯರಾಜ್ಯಮುತ್ತರೋ
ತ್ತರಾಭಿವ್ರಿದ್ಧಿಮಾಚಂದ್ರಾರ್ಕ್ಕತಾರಂಬರಂಸಲುತ್ತಮಿರೆ । ತದ್ವಿಶಾಲ
ವಕ್ಷಸ್ಥಳನಿವಾಸಿನಿಯರಪ್ಪಸ್ವಸ್ತಿಯನವರತಪ
ರಮಕಲ್ಯಾಣಾಭ್ಯುದಯಫಳಸಹಸ್ರಭೋಗಭಾಗಿನಿದ್ವಿತೀ
ಯಲಕ್ಷ್ಮೀಸಮಾನೆಯರುಂಪ್ರತ್ಯಕ್ಷವಾರ್ವ್ವತಿಯ
ರುಂಪತಿಬ್ರತಾರುಂಧಿತಿಯರುಂಶರಣಾಗತ
ವಜ್ರಪಂಜರೆಯರುಂಶ್ರೀಸೋ(ಮ)ನಾಥದೇವದಿಬ್ಯಶ್ರೀಪಾದಪದ್ಮಾ
ರಾಧಕೆಯರುಪಪ್ಪಶ್ರೀಮದಭಿನವಕೇತಲಮಹಾದೇವಿಯ
ರುಸ್ವಸ್ತಿ ಸಮಸ್ತ ಸುರಾಸುರನರಗರುಡೋರಗಯಕ್ಷಸಿದ್ಧ
ವಿದ್ಯಾಧರಗಂಧರ್ಬ್ಬಕಿಂನರಕಿಂಪುರುಷಾದ್ಯನೇಕಾನೀಕಮ
ಣಿಮಕುಟಘಟ್ಟಿತಚರಣಾರವಿಂದಯುಗಳನುಪ್ಪಶ್ರೀ
ಮದ್ದಕ್ಷಿಣಸೌರಾಷ್ಟ್ರವೆನಿಸಿದಶ್ರೀಮತ್ಸ್ಯಯಂಭು
ಸೋಮನಾಥದೇವರ ! ಕುಂದವಾಡದಸೋವಗಲು
ಡಹುಳ್ಳಗಲುಡಹರಿಯಮಗಲುಡೆಂಗಳಂಚಿಂನಗೆ
ರ್ವ್ವಿಕದಬಿರಿಸೆಟ್ಟಿಯರಮಗಪಟ್ಟಣಸ್ವಾಮಿಸಂಗಿ
ಸೆಟ್ಟಿಮುಟ್ಟಸೆಟ್ಟಿಗಳ್ಗೆ ಬುದವಾರದಸಂಥೆಯ
ಮಾಡಿಯೆಂದುನಿಯಾಮಿಸಲುಮಹಾಪ್ರಸಾದವೆಂ
ದುಕೈಕೊಂಡು ಅಯ್ಯವಳೆಯಯಿನೂರ್ಬ್ಬಸ್ವಾಮಿಗ
ಳುಮುಖ್ಯವಾದನೊಣಂಬವಾಡಿಮೂವತ್ತಿರ್ಚ್ಛಾಯಿರದ
ರೋಮಣಿಮಹಾರಾಜಧಾನಿಯುಚ್ಚಗಿಯಸಮಸ್ತವಳಿ
ನಖರಮುಂಮುರಿದಂಡಉಭಯನಾನಾದೇಸಿನಾಲ್ಕುನಾ
ಡುಂಅಪಂಚಮಠದತಪೋಧನಮುಕ್ಯವಾದಎ
ಕ್ಕೋಟಿಗಳುಂಅಸಂಖ್ಯಾತಗಣಂಗಳುಂಹದಿನೆಂಟುಸಮೆ

ಯಮುಂಮುಂತಾಗಿಶಕವರುಷ ೧೧೬೨ನೆಯ
ಬಹುಧಾನ್ಯಸಂವತ್ಸರದಮಾರ್ಗ್ಗಶಿರಶುದ್ಧ ೨ಬುಧ
ವಾರದೆಂದುಸುಭಲಗ್ನದಲುನಂನಿಕಂಭವಂಪ್ರತಿ
ಷ್ಟಿಸಿಸಂಥೆಯಂಮಾಡಿಆಶ್ರೀಸೋಮನಾಥದೇವರ್ಗ್ಗೆ
ಬಿಟ್ಟಆಯುಬಂಡಿಗೆಭತ್ತಪಡಿಅಡಕೆಯಕೊ ೧ ಹೇಜೆಂಗೆ
ಬ ೧ ಎಣ್ಣೆಕೊಡಂಕ್ಕೆಸ್ತೊ ೨ ಹೇಜೆಂಗೆಅಡಕೆ ಹೇಜೆಂಗೆಎಲೆ ೧೦೦
.... ಮಗಳ್ಗಂಬಿಟ್ಟಯಭಂಡಿಗೆಭತ್ತಪರಿಛೇದಿಯ
ಕೊ ೧ ಹೇಜೆಂಗೆಬ ೧ ಎಣ್ಣೆ ಕೊಡಕ್ಕಸ್ತೊ ೨ ಹೇಜೆಂಗೆಅಡಕೆ ೧೦
ಹೇಂಜೆಂಗೆಎಲೆ ೧೦೦ ಪಟ್ಟಣಸ್ವಾಮಿಗಂಭಂಡಿಗೆಭತ್ತಕೊ ೧
೨ ಹೇಜೆಂಗೆ ... ಎಣ್ಣೆಕೊಡಕ್ಕಸೊಹೇಜೆಂಗೆಅಡಕೆ
೧೦ ಹೇಜೆಂಗೆಎಲೆ ೧೦೦ ಮೇಲಾದಭಂಡಕ್ಕಂದಳಸಾದವ
ಜೆದುಕೊಡುವರುದೇವರ್ಗ್ಗೆಎತ್ತು ನೂಱಕ್ಕಂಸರ್ವ್ವಮಾನ್ಯಗೌಡಂಗಂ
ಎತ್ತು ೩೦ ತಕ್ಕಂಸರ್ವ್ವಮಾನ್ಯಪಟ್ಟಣಸ್ವಾಮಿಎತ್ತು ೩೦ ಕ್ಕಂಸರ್ವ್ವ
ಮಾನ್ಯಮುಂಮುರಿದಂಡಸ್ಥಳದಲ್ಲಿದಂಡದೋಷ
ಅಲಿ. ತ್ರಿಕದಾ ... ದನ್ಯಾಯವಂಸ
ಪಾದಿ. ಡೆಹಲರಿಗೆದ್ರೋಹನೆತ್ತರುಗಯ್ಯಬಣಜಿ
ಗಗೊಟ್ಟದಕ್ಕೆನಂನಿಕಂಬದಲುನಡಹಸುಂಬೆಯ
ನಿಕ್ಕಿಪಡುಮಾಗಲಿಜವರಿಯನಿಕ್ಕಿದಡಂಆಂತಿಂತೆಂದುಹಿ
ಗೆಹಿಡಿದೆ. ಡಂಹಲಗಿಗೆದ್ರೋಹಿಯಿಧರ್ಮ್ಮಮಂಹಲರು
ಪ್ರತಿಪಾಳಿಸಿಪಾಲನಾದಚ್ಯುತಂಪದಂಎಂಬನ್ಯಾಯ
ಮಂಕೈಕೊಂಬುದುಮಂಗಳಮಹಾ ಶ್ರೀಶ್ರೀಶ್ರೀ
ಅಕಸಗೆಹಸುಂಬಿಹಳಿನಿಲಗೆವಿಬೂತಿಪಟ್ಟಂಕ್ಕಟ
ಶಿವಪುರಿಇದನಾಲಸ. ವವಸುರಲೋಕಮಾರ್ತ್ಯಲೋಕಕೆ
ಹೊರಗು[೧೯]

ಹಿರೇ ಎಮ್ಮಿಗನೂರ ಶಾಸನದಲ್ಲಿ ಇಮ್ಮಡಿ ನರಸಿಂಹನ ಅಧೀನದ ಎಮ್ಮಿಗನೂರು ವೃತ್ತಿಯನ್ನಾಳುತ್ತಿದ್ದ ಅಧಿಕಾರ ರಾಘವದೇವ ಮತ್ತು ಪಂಪಯ್ಯ ಇವರ ಹಿರಿತನದಲ್ಲಿ ಜಕ್ಕರಸ ಬಯಾಳಗೇತಿಸೇಟ್ಟಿ, ಕೆತಗೌಡ ಮತ್ತು ಈ ಗ್ರಾಮದ ಸುತ್ತಲಿನ ಗೌಡರು ಮತ್ತು ಶೆಟ್ಟಿರು ಸೇರಿ ಎಮ್ಮಿಗನೂರಲ್ಲಿ ದೇವರಿಗೆ ಸೂರ್ಯಗ್ರಹಣದ ಕಾಲದಲ್ಲಿ ದತ್ತಿ ಬಿಟ್ಟ ಉಲ್ಲೇಖವಿದೆ.[೧೧೦] ಅದರಲ್ಲಿ ಪ್ರಥಮ ಸ್ಥಳದಗದ್ದೆ ತುಂಬಿನ ಮೊದಲಲುಗಂಗನಗಳೆಯಲು... ಮತ್ತರು ೧. ಬಯಾಲಕೇತಿಸೆಟ್ಟಿಗಂಚಿಕ್ಕ ಎಪಿಗಂಹುಟ್ಟಿದ ಕೇಸವಸೆಟ್ಟಿ ಕೊಟ್ಟಗದ್ದೆ ಕಂಬ ೫೦೦ ಸೀಮಾಮೂಡಲು ಎರೆಯಕೆಯ್ಯದೊಡಬಹುದು ತೆರಕಲು ಹಿರಿಯ ಬಾ ಇಕಲುಪಡು....ಲು ಹಲ್ಲೆಯಬಾಯಿಕಲು ಬಡಗಲು ಹಳುಗಿನ ಹುಣಸೆಕರಡಿಯ ಕಟ್ಟದ ಹಿಂದೆ ಗದೆಮತ್ತ ೧ ದೇಪಾಲ್ಯದಿಂ ಮೂಡಲು ಬೆದಲು ಮಣಲಕಯಿಮತ್ತರು ೧ ಅಲಿಂ ಮೂಡಲು

ಹಿರಿಯೋಣಿಯಿಂದ ಆಲದಕೆಇಕಂಬ ೪೦೦ ಗುರುಗಳ ಮನೆಯಸ್ತಳ ಬಿಯಾಳಕೇತಿಸೆಟ್ಟಿಯ ಬಳದಲು ಮನೆಎಡುಮುದ್ದಯ್ಯನಬಳ್ಳದಲುಮನೆಯ .... ಸಣ ೨ ಶ್ರೀಮತುಪಾಡ್ಯನಾಡ ಹೆಜ್ಜುಂಕದ ಹೆಗ್ಗಡೆರುದ್ದಣ್ಣನುಎಂಮ್ಮೆಗನೂರು ವ್ರಿತ್ತಿಯದವಸಾಯದ ಸುಂಕದೊಳಗೆಶ್ರೀ ಸ್ವಯಂಭುಕಲಿದೇವರ ನಂದಾದೀವಿಗೆ ಬಿಟ್ಟಗ ೩ ಪ ೪ ದೇವರ ನಂದಾದೀವಿಗೆ ಗಾಣವೊಂದು ಹಂನೆರಡುಹಳ್ಳಿಯ ಓಜುಗಳು ದೇವರನಂದಾದೀವಿಗೆಗ । ಪ ೨ ಯಿಧರ್ಮ್ಮ ಮಂಪುತಿಪಾಲಿಸಿದವರು ಗಂಗಾದೇವಿಯ ತಡಿಯಸ ಬ್ರಾಹ್ಮಣರಿಗೆ ಸಾಯಿರಕವಿಲೆದಾನ...[೧೧೧] ಈ ರೀತಿಯಾಗಿ ಗಾಣದ ಉಲ್ಲೇಖವಿರುವ ಮತ್ತೊಂದು ಶಾಸನವಿದೆ.

ಹೊಯ್ಸಳರ ಕಾಲಕ್ಕೆ ಸಂಬಂಧಿಸಿದ ಅನೇಕ ಶಾಸನಗಳಲ್ಲಿ ಗಾಣ, ಸಂತೆ, ಜೀರ್ಣೋದ್ಧಾರ ಮಾಡಿದ ಹಲವು ಶಾಸನಗಳಿದ್ದು ಅವುಗಳಲ್ಲಿ ಬಲ್ಲಾಳ ನಲ್ಲೆಸೆಟ್ಟಿ ದೇಮೇಶ್ವರ ದೇವಾಲಯದ ಅಂಗಭೋಗ, ರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರ, ನಂದಾದೀವಿಗೆ ಚೈತ್ರಪವಿತ್ರಾರೋಪಣ, ತಪೋಧನರ ಆಹಾರ, ಸಂತೆ, ಆಯ ಹಾಗೂ ಭೂ ಧಾನ[೧೧೨] ಮಾಡಿದ ಮಾಹಿತಿ ಇದೆ.

ವಡ್ಡವ್ಯವಹಾರಿ ರಾಜಶ್ರೇಷ್ಠಿ ಬಾಚೇಶ್ವರ ಗುಡಿಗೆ ದತ್ತಿ[೧೧೩] ಬಿಟ್ಟ ಮಾಹಿತಿಯು ಇದೆ. ಹಿರಿಯ ವ್ಯಾಪಾರಿ ಎಂಬರ್ಥವುಳ್ಳ ಪದ ವಡ್ಡ ವ್ಯವಹಾರಿ, ಕರ್ನಾಟಕದ ವರ್ತಕ ಪ್ರಕಾರಗಳಲ್ಲಿ ಒಬ್ಬರಾದ ಇವರು ಮಹಾ ವಡ್ಡ ವ್ಯವಹಾರಿಗಳೆಂದೂ ಪ್ರಖ್ಯಾತರಾಗಿದ್ದಾರೆ. ಸೆಟ್ಟಿ ಕುಟುಂಬಗಳಿಗೆ ಸೇರಿದ ಇವರು ಬೆಲೆ ಬಾಳುವ ವಸ್ತುಗಳ ಸಗಟು ವ್ಯಾಪಾರ ಮಾಡುತ್ತ, ರಾಜಭಂಡಾರ ಅಕ್ಷಯವಾಗಿ ನಿಲ್ಲುವಂತೆ ನೋಡಿಕೊಳ್ಳುತ್ತಿದ್ದರು. ಇನ್ನೂ ಕೆಲವು ಸಲ ಪಟ್ಟಣ ಸ್ವಾಮಿಗಳಾಗಿಯೂ ಕಾರ್ಯ ಮಾಡಿದ್ದಾರೆ. ಹೀಗಾಗಿ ವಡ್ಡ ವ್ಯವಹಾರಿಗಳು ರಾಜವರ್ಗ, ವರ್ತಕ ವರ್ಗ, ಪ್ರಜಾವರ್ಗಗಳಲ್ಲಿ ಉನ್ನತಸ್ಥಾನ ಪಡೆದುಕೊಂಡಿದ್ದರು. ಕರ್ನಾಟಕದಲ್ಲಿ ವೈದಿಕ, ಜೈನ, ಶೈವ, ಮತದ ಅನೇಕ ವಡ್ಡ ವ್ಯವಹಾರಿ ಮನೆತನಗಳಿದ್ದವು. ಕೆಲವು ಮಲೆಯಾಳಿ ವಡ್ಡ ವ್ಯವಹಾರಿಗಳು ಕರ್ನಾಟಕದಲ್ಲಿ ನೆಲೆಸಿದ್ದರು.[೧೧೪] ಹೀಗೆ ಹೊಯ್ಸಳರ ಕಾಲದಲ್ಲಿ ಅಧಿಕ ಸಂಖ್ಯೆಯಲ್ಲೂ ವಡ್ಡ ವ್ಯವಹಾರಿಗಳು ಕಂಡುಬರುತ್ತಾರೆ. ದಾವಣಗೆರೆ ಶಾಸನ ಸಂಖ್ಯೆ ೬೧ ರಲ್ಲಿ, ಹರಿಹರದ ಶಾಸನದಲ್ಲಿ ತೆಲ್ಲಿಗರೈವತ್ತೊಕ್ಕಲು ಎಂಬ ವಿವರ ಇದೆ.

ಚಿತ್ರದುರ್ಗ ಪ್ರದೇಶ ಹೊಯ್ಸಳರ ಕಾಲಕ್ಕೆ ನಗರೀಕರಣ ಪ್ರಕ್ರಿಯೆಯಲ್ಲಿ ಮುಂದೆ ಇತ್ತು ಎಂಬುದಕ್ಕೆ ಹಲವು ಅಂಶಗಳಿವೆ. ಇನ್ನು ನಗರೀಕರಣಕ್ಕೆ ಮೂಲ ಚೇತನ ನೀಡಿದ್ದು ವ್ಯಾಪಾರ. ವ್ಯಾಪಾರಕ್ಕೆ ಪ್ರೇರಣೆ ನೀಡಿದ್ದು ಕೃಷಿಯಲ್ಲಾದ ಕ್ರಾಂತಿ. ಕೃಷಿಗೆ ನೀರೊದಗಿಸುವ ತಂತ್ರಜ್ಞಾನದಿಂದಾಗಿ ಮತ್ತು ಕೃಷಿಗೆ ಬೇಕಾದ ಕಬ್ಬಿಣದ ಸಲಕರಣೆಗಳು ದೊರೆಯುತ್ತಿದ್ದುದರ ಪರಿಣಾಮವಾಗಿ ಅಧಿಕ ಪ್ರಮಾಣದ ಭೂಮಿ ಕೃಷಿಗೊಳಪಟ್ಟಿತು. ಇದರಿಂದಾಗಿ ಕೃಷಿ ಕ್ಷೇತ್ರದಲ್ಲಿ ಅಧಿಕ ಉತ್ಪಾದನೆ ಉಂಟಾಗಲಾರಂಭಿಸಿತು. ಇದರ ಜೊತೆಗೆ ಇದೇ ಸಮಯದಲ್ಲಿ ಸಮಾಜದಲ್ಲಿ ಒಂದು ಹೊಸ ಪ್ರತಿಷ್ಠಿತ ವರ್ಗ ಹುಟ್ಟಿ ಅದರ ದೈನಂದಿನ ಬೇಡಿಕೆಗಳು ದಿನೇ ದಿನೇ ಹೆಚ್ಚಾಗತೊಡಗಿದವು. ಅದರ ಬೇಡಿಕೆಗಳನ್ನು ಪೂರೈಸಲು ಇನ್ನೊಂದು ವರ್ಗ ಹುಟ್ಟಿಕೊಂಡಿತು. ಅದೇ ವ್ಯಾಪಾರಿಗಳ ವರ್ಗ ಅಥವಾ ಸಂಘಗಳು. ವ್ಯಾಪಾರಿಗಳು ಸ್ಥಳೀಯ ವ್ಯಾಪಾರ ಕೈಗೊಳ್ಳುವುದರ ಜೊತೆಗೆ ಅಕ್ಕ ಪಕ್ಕದ ರಾಜ್ಯಗಳೊಡನೆ, ನಂತರ ಪರದೇಶಿಯ ವ್ಯಾಪಾರಿಗಳ ಜೊತೆ ಸಂಪರ್ಕವನ್ನು ಬೆಳೆಸಿಕೊಂಡರು. ಇವೆರಡರ ಪರಿಣಾಮವಾಗಿ ಈ ಅವಧಿಯಲ್ಲಿ

ಕೆಲವು ನಗರಗಳು ಅಸ್ತಿತ್ವಕ್ಕೆ ಬಂದವು.[೧೧೬] ಈ ನಗರಗಳು ಕೇವಲ ವ್ಯಾಪಾರದ ಕೇಂದ್ರವಾಗಿರದೆ, ಕೈಗಾರಿಕೆ, ಆಡಳಿತ ಮತ್ತು ಧಾರ್ಮಿಕ ಕೇಂದ್ರಗಳಾಗಿದ್ದವು.

ಇದಕ್ಕೆ ಸಂಬಂಧಿಸಿದಂತೆ ಅನೇಕ ಉದಾಹರಣೆಗಳು ಇವೆ. ವ್ಯಾಪಾರವೇ ಒಂದು ಪಟ್ಟಣ, ನಗರದ ಹುಟ್ಟಿಗೆ ಮೂಲ ಕಾರಣ ಎಂಬಂತೆ ಮೂರನೆಯ ವೀರಬಲ್ಲಾಳನ ಅಧಿಕಾರಿ ನಾಗರಸ ಎನ್ನುವವನು ಬೇಹೂರಿನ ದಕ್ಷಿಣಕ್ಕೆ ಬೊಮ್ಮರಸನೆನ್ನುವನ ಹೆಸರಿನಲ್ಲಿ ಪಟ್ಟಣವನ್ನು ನಿರ್ಮಿಸಿದ್ದಕ್ಕಾಗಿ ನಿರ್ದಿಷ್ಟ ತೆರಿಗೆ ವಿನಾಯಿತಿಯ ಮೂಲಕ ಹರಿಬಸೆಟ್ಟಿ ಎನ್ನುವವನಿಗೆ ಧನಸಹಾಯ ಮಾಡಿದನು. ತೆರಿಗೆ ಎಂಬುವುದು ವ್ಯಾಪಾರಿ ಹಾಗೂ ಸ್ಥಳೀಯರ ಮೇಲೆ ವಿಧಿಸುವ ಕಂದಾಯ. ಕ್ರಿ.ಶ. ೧೩೨೮ರ ಯಳಂದೂರು ಶಾಸನವು ಉಪೇಂದ್ರ ಪಟ್ಟಣ(ಮದ್ದೂರು)ವು ನಿರ್ಮಾಣಗೊಂಡಿದರ ಬಗ್ಗೆ ತಿಳಿಸುತ್ತದೆ. ಕೊಳ್ಳೆಗಾಲದ ಶಾಸನವೊಂದು ಬೊಮ್ಮನಹಳ್ಳಿಯಲ್ಲಿ ಹೊಸ ಪಟ್ಟಣವನ್ನು ನಿರ್ಮಿಸಲಾಯಿತೆಂದು ತಿಳಿಸುತ್ತದೆ.[೧೧೭]

ಹೆಸರಿಸಲು ಅನೇಕ ಹೊಸ ಪಟ್ಟಣಗಳಲ್ಲಿ ಹೊಯ್ಸಳರ ಅವಧಿಗೆ ಸಂಬಂಧಪಟ್ಟವು ಅನೇಕ ಸಂಖ್ಯೆಯಲ್ಲಿವೆ. ಹೊಯ್ಸಳರ ಆಳ್ವಿಕೆಯ ಅವಧಿಯಲ್ಲಿ ಅನೇಕ ಹಳ್ಳಿಗಳು ಪಟ್ಟಣಗಳಾಗಿ ಪರಿವರ್ತನೆಗೊಂಡವು. ಹೊಯ್ಸಳರ ಆಳ್ವಿಕೆಯ ಸಂದರ್ಭದಲ್ಲಿ ಕಂಡು ಬಂದ ಕೃಷಿಯ ವಿಸ್ತರಣೆ ಹೆಚ್ಚುವರಿ ಉತ್ಪಾದನೆ ಹಾಗೂ ಮಾರುಕಟ್ಟೆ ವ್ಯವಸ್ಥೆ ಹೊಸ ನಗರ ಕೇಂದ್ರಗಳ ಹುಟ್ಟಿಗೆ ಮೂಲ ಕಾರಣಗಳಾದವು. ಗ್ರಾಮೀಣ ಪ್ರದೇಶವನ್ನು ನಗರ ಪ್ರದೇಶವನ್ನಾಗಿ ಪರಿವರ್ತಿಸುವ ಪ್ರಕ್ರಿಯೆಯಲ್ಲಿ ಬೇರೆ ಬೇರೆ ವ್ಯವಸ್ಥೆಗಳು, ಹಿತಾಸಕ್ತಿಗಳು ನೇರವಾಗಿ ಬಾಗಿಗಳಾದವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಹೊಯ್ಸಳ ಪ್ರಭುತ್ವವನ್ನು ಪ್ರತಿನಿಧಿಸುತ್ತಿದ್ದ ನಾಡಿನ ಅಧಿಕಾರಿಗಳು, ಹಳ್ಳಿಗಳನ್ನು ಪ್ರತಿನಿಧಿಸುತ್ತಿದ್ದ ನಾಡ ಮುಖಂಡರು ಹಾಗೂ ವ್ಯಾಪಾರಸ್ಥರನ್ನು ಪ್ರತಿನಿಧಿಸುತ್ತಿದ್ದ ವರ್ತಕ ಸಂಘಗಳು ಇವರೆಲ್ಲರೂ ಸಭೆ ಸೇರಿ ಒಮ್ಮತದ ನಿರ್ಣಯಕ್ಕೆ ಬರುತ್ತಿದ್ದರು. ಹೊಯ್ಸಳರ ಅವಧಿಯಲ್ಲಿ ಭೂಮಿಯನ್ನು ಹೆಚ್ಚಿನ ಸಂಖ್ಯೆಯಲ್ಲಿ ದಾನ ನೀಡಿರುವುದು ಶಾಸನಗಳಿಂದ ತಿಳಿದುಬರುತ್ತದೆ.[೧೧೮] ಇದು ಊಳಿಗಮಾನ್ಯತೆಯ ಲಕ್ಷಣವನ್ನು ಸೂಚಿಸುತ್ತವೆ. ಇದರಿಂದ ಕೃಷಿ ವಿಸ್ತರಣೆಗೊಂಡು ಹೆಚ್ಚುವರಿ ಉತ್ಪಾದನೆಗೆ ಅವಕಾಶ ಮಾಡಿಕೊಟ್ಟಿತು. ಹೆಚ್ಚುವರಿ ಉತ್ಪಾದನೆಯೇ ಸಂತೆ ಹಾಗೂ ಮಾರುಕಟ್ಟೆಗಳ ಹುಟ್ಟಿಗೆ ಹಾಗೂ ವ್ಯಾಪಾರ ವಹಿವಾಟು ಚುರುಕುಗೊಳ್ಳುವುದಕ್ಕೆ ಕಾರಣವಾಯಿತು.

ಹೊಯ್ಸಳರ ಆಡಳಿತವು ಸಂಪದ್ಭರಿತವಾಗಿ ಮುಂದುವರೆದು ಅಭಿವೃದ್ಧಿಯನ್ನು ಸಾಧಿಸಲು ಹಲವು ಅಂಶಗಳು ಕಾರಣವಾಗಿವೆ. ಆ ಕಾಲದಲ್ಲಿ ಜಾನುವಾರು, ಮೇಕೆ ಮತ್ತು ಹುಲ್ಲುಗಾವಲುಗಳು ಹಾಗೂ ಆಸ್ತಿಯ ಮೇಲೂ ತೆರಿಗೆಗಳನ್ನು ಹಾಕಲಾಗುತ್ತಿತ್ತು. ವಿವಿಧ ವೃತ್ತಿಗಳಿಗೆ ಸಂಬಂಧಿಸಿದಂತೆ ಅಗಸರು, ದನಗಾಹಿಗಳು, ನಾಯಿಂದರು, ವೇಶ್ಯೆಯರು ಮತ್ತು ಇತರ ವರ್ಗಗಳಿಗೆ ತೆರಿಗೆ ಬೀಳುತ್ತಿದ್ದಿತು. ಮರಗೆಲಸದವರಿಗೆ, ಕುಶಲಕರ್ಮಿಗಳಿಗೆ, ಜಟ್ಟಿಗಳಿಗೆ ಸಹ ತೆರಿಗೆ ಅನ್ವಯಿಸುತ್ತಿತ್ತು. ಉಪ್ಪು ತಯಾರಿಕೆ, ಕುಂಬಾರಿಕೆ, ಕಮ್ಮಾರಿಕೆ ವೃತ್ತಿಗಳು ತೆರಿಗೆಯ ವ್ಯಾಪ್ತಿಗೆ ಬರುತ್ತಿದ್ದವು. ವಿವಿಧ ಕೈಗಾರಿಕೆಗಳು ನೀಡುವ ತೆರಿಗೆ ಸರ್ಕಾರದ ಮುಖ್ಯ ಆದಾಯ ಮೂಲಗಳಲ್ಲಿ ಒಂದಾಗಿತ್ತು. ಎಣ್ಣೆಕಾಳುಗಳಿಗೆ, ಮಗ್ಗಗಳಿಗೆ, ಕನಕಶೇಷ, ಆನೆಯಶೇಷ, ಮನೆದೆರೆ, ಕುದುರೆಯ ಹದಿಕ ಮುಂತಾದ ತೆರಿಗೆಗಳಿದ್ದವು.[೧೧೯]

ಹೊಯ್ಸಳರ ಕಾಲದಲ್ಲಿ ಅಂಗಡಿ, ಬೇಲೂರು, ಹಳೇಬೀಡು, ಅರಸೀಕೆರೆ, ಶ್ರವಣಬೆಳಗೊಳ, ಬನವಾಸಿ, ಬೆಮ್ಮಾತೂರು ಪಟ್ಟಣ,[೨೦] ಬಳ್ಳಿಗಾಮೆ, ಬಂಕಾಪುರ, ತಲಕಾಡು, ಶ್ರೀರಂಗಪಟ್ಟಣ, ನಾಗಮಂಡಲ, ಕೋಲಾರ, ಶಿರುಮಕೂಡ್ಲ, ನರಸೀಪುರ, ರಾಮನಾಥರ, ನಂಜನಗೂಡು, ಜಾವಗಲ್, ಉಚ್ಚಂಗಿ ಇತ್ಯಾದಿ ಪಟ್ಟಣಗಳು ಈ ಕಾಲದ ಪ್ರಮುಖವಾದವುಗಳಾಗಿವೆ. ಸ್ಥಳೀಯ ಉತ್ಪನ್ನಗಳನ್ನು ಮಾರುಕಟ್ಟೆಯಲ್ಲಿ ಮಾರುತ್ತಿದ್ದರು ಅವುಗಳೆಂದರೆ ಅಕ್ಕಿ, ಜೋಳ, ಸಕ್ಕರೆ, ಅಡಿಕೆ, ಎಲೆ, ಮಾವಿನ ಹಣ್ಣು, ಕಿತ್ತಳೆ, ಉಪ್ಪು, ಲವಂಗ, ಎಣ್ಣೆ, ಹತ್ತಿ, ಅರಳೆಬಟ್ಟೆ, ಬಳೆಗಳು ಹಾಗೂ ದಿನಬಳಕೆಯ ವಸ್ತುಗಳು ದೊರೆಯುತ್ತಿದ್ದವು.[೨೧] ಪಟ್ಟಣ ಕೇಂದ್ರಗಳಲ್ಲಿ ವಿವಿಧ ವ್ಯಾಪಾರಿ ವರ್ಗಗಳ ಹೆಸರುಗಳನ್ನು ಹೊಂದಿದ್ದವು. ಉದಾ: ಒಮ್ಮಲದೇವಿಯ ಅಂಗಡಿ, ಕೇತಾಲದೇವಿಯ ಅಂಗಡಿ, ದೊರೆಸಮುದ್ರದಲ್ಲಿನ ಮಾರುಕಟ್ಟೆಗಳ ಹೆಸರುಗಳನ್ನು ಹೊಂದಿದ್ದವು ಎಂದು ತಲಕಾಡು ಶಾಸನದಲ್ಲಿ ತಿಳಿದುಬರುತ್ತದೆ.[೨೨] ಹೊಯ್ಸಳ ಸಾಮ್ರಾಜ್ಯವು ೧೨-೧೩ನೇ ಶತಮಾನಗಳಲ್ಲಿ ವಿದೇಶಗಳೊಡನೆ ವ್ಯಾಪಾರ ಸಂಪರ್ಕ ಹೊಂದಿತ್ತು. ಇದರಿಂದ ವಿದೇಶಿ ವರ್ತಕರ ಸಂಪರ್ಕವು ವಿಶೇಷವಾಗಿ ಬೆಳವಣಿಗೆ ಹೊಂದಿತು. ಇವರುಗಳು ಕೆನರಾ ಕರಾವಳಿಗಳ ಬಂದರುಗಳಿಗೆ ತಪ್ಪದೇ ಬಂದು ವ್ಯಾಪಾರ ಕೈಗೊಳ್ಳುತ್ತಿದ್ದರು. ಕೆನರಾದ ಬಂದರುಗಳು, ಒಳನಾಡ ವರ್ತಕ ಸಂಘಗಳೊಂದಿಗೆ ಹಾಗೂ ವಾಣಿಜ್ಯ ಕೇಂದ್ರಗಳೊಡನೆ ವ್ಯಾಪಾರದ ಸಂಪರ್ಕಕ್ಕೆ ಹೊಂದಿದ್ದರು. ಮುತ್ತುಗಳು, ವಜ್ರವೈಢೂರ್ಯ, ಅಡಿಕೆ, ತೆಂಗು, ಸಂಬಾರ ಪದಾರ್ಥಗಳು, ಹತ್ತಿ, ಆಹಾರಧಾನ್ಯಗಳು, ಚಂದನ, ಗಿಡಮೂಲಿಕೆಗಳು, ದಂತ ವಸ್ತುಗಳು ಹಾಗೂ ಅಂತರಾಷ್ಟ್ರೀಯ ವಿನಿಮಯವುಳ್ಳ ವಸ್ತುಗಳನ್ನು ಕರಾವಳಿ ಬಂದರುಗಳಿಗೆ ತಲುಪಿಸಲು ಸಾಕಷ್ಟು ವ್ಯವಸ್ಥೆ ಇತ್ತು.[೨೩]

ಬಳ್ಳಿಗಾವೆಯ ಶಾಸನವೊಂದು ವಿದೇಶಗಳೊಡನೆ ಹೊಯ್ಸಳರ ವರ್ತಕರು ಹೊಂದಿದ್ದ ವಿವರವನ್ನು ನೀಡುತ್ತವೆ. ಹೊಯ್ಸಳ ವರ್ತಕರು ನೌಕಾಯಾನದಲ್ಲೂ ಸಿದ್ಧಹಸ್ತರಾಗಿದ್ದು, ಈಜಿಪ್ಟ್, ಗ್ರೀಸ್, ರೋಮ್ ಮತ್ತು ಪರ್ಷಿಯಾಗಳೊಡನೆ ನೇರ ಸಂಪರ್ಕ ಹೊಂದಿದ್ದರು.[೨೪] ಇದರಿಂದ ಪರ್ಷಿಯಾದಿಂದ ಕುದುರೆಗಳ ಆಮದು ಮಾಡಿಕೊಳ್ಳುತ್ತಿದ್ದರು. ವ್ಯಾಪಾರದಿಂದ ಬಂದಂತಹ ಲಾಭವನ್ನು ತಮಗೆ ಇಟ್ಟುಕೊಂಡು ಅದರಲ್ಲಿ ವರ್ತಕರು ಹಲವಾರು ಜನೋಪಯೋಗಿ ಕೆಲಸಗಳನ್ನು ಮಾಡುತ್ತಿದ್ದರು. ಇವರನ್ನು ಕುರಿತ ಅನೇಕ ಶಾಸನಗಳು ದೊರೆತಿವೆ. ಚಿತ್ರದುರ್ಗ ಪ್ರದೇಶದ ಪಟ್ಟಣಗಳಲ್ಲಿ ಪಟ್ಟಣಸ್ವಾಮಿಗಳಿರುತ್ತಿದ್ದರು. ದುಂಮಿಯಲ್ಲಿ ಇಂತಹ ಪಟ್ಟಣಸ್ವಾಮಿಯಿದ್ದಂತೆ ಹೇಳಿದೆ. ಚಿತ್ರದುರ್ಗದಲ್ಲಿ ಸೋಯಿಸೆಟ್ಟಿಯ ಉಲ್ಲೇಖ ಬಂದಿದೆ (ಚಿತ್ರದುರ್ಗ-೬) ಹೊಯ್ಸಳರ ಕಾಲದ ಒಂದು ಶಾಸನದಲ್ಲಿ ಇವರನ್ನು ಸಮಸ್ತ ಭುವನ ವಿಖ್ಯಾತ ಹರಿ ಹಿರಣ್ಯ ಗರ್ಭಾದ್ಯನೇಕ ಪಂಚಸತ.... ಶಿಕ್ಷಾನಾಗತ ವಸುಂಧರಾಚಾರ್ಯನುಂ ಶ್ರೀ ಮಂ ..... ಯಿನೂರ್ಬ್ಬ ಸ್ವಾಮಿಗಳು ಯೇಳುವರೆ ಹನ್ನೊಂದುವರೆಗೆ ಜಂಬೂದ್ವೀಪ ಶಿರೋಮಣಿ ಮಹತಾ... ಎಂದು ಮಾರಸೆಟ್ಟಿಯೆಂಬುವವನನ್ನು ಹೊಗಳಲಾಗಿದೆ. (ಹೊಳಲ್ಕೆರೆ-೧೦೪) ಚಿತ್ರದುರ್ಗದಲ್ಲಿ ೧೩೩೪ರಲ್ಲಿದ್ದ ಅನೇಕ ಸೆಟ್ಟಿಗಳನ್ನು ಹೆಸರಿಸಲಾಗಿದೆ. ಈ ಹೆಸರುಗಳಲ್ಲಿ ಕೆಲವು ಹೆಸರಿನ ಮುಂದೆ ವಿಶೇಷಣವನ್ನು ಸೇರಿಸಲಾಗಿದೆ. (ಚಿತ್ರದುರ್ಗ-೬) ಮೊಳಕಾಲ್ಮೂರು ತಾಲೂಕಿನ ಶಾಸನವೊಂದರಲ್ಲಿ ಶೆಟ್ಟರ ಒಳಪಂಗಡವಾದ ಸ್ಥಳ, ಪರಸ್ಥಳದ ಸೆಟ್ಟಿ, ಸವುದ್ರಿ ಕೋಮಟಿಯನ್ನು ಹೆಸರಿಸಿದೆ (ಮೊಳಕಾಲ್ಮೂರು-೨೦). ಇದೇ ತಾಲೂಕಿನ ನುಂಕೆಹಳ್ಳಿ ಶಾಸನದಲ್ಲಿ ಬೀಡಿನ ಸಮಸ್ತ

ಮುಂಮುರಿ ದಂಡಂಗಳು ಮತ್ತು ಗಾತ್ರಿಗರು ದಾನ ನೀಡಿದ ಸಮಯದಲ್ಲಿದ್ದರೆಂದು ಹೇಳಿದ (ಮೊಳಕಾಲ್ಮೂರು-೪೧) ಚಳ್ಳಕೆರೆ ತಾಲೂಕಿನ ಶಾಸನವೊಂದರಲ್ಲಿ ಮಾಚಿಸೆಟ್ಟಿ ಎಂಬುವವನನ್ನು 'ಸ್ವಸ್ತಿ ಸಮಸ್ತಗುಣ ಗಣಾಲಂಕಿತ ಶಿವಚರಣ ಕಮಳ ಬ್ರಿಂಗನುಂಚತುಸ್ಸಮಯ ಸಮುದ್ದರಣನು ಮಹಾರಾಭಯ ಭೈಷಜ್ಯಶಾಸ್ತ್ರ ದಾನ ವಿನೋದನು ಶ್ರೀರಾಮೇಶ್ವರ ದೇವರ ಪಾದಾರಾಧಕ ನುಮಪ್ಪ... ಬೀಚಿಸೆಟ್ಟಿಗಂ ಚವುಡ ಸೆಟ್ಟಿಗಂ ಪುಟ್ಟಿದ ಮಾಚಿಸೆಟ್ಟಿ .... ಎಂದು ಮಾಚಿಸೆಟ್ಟಿಯನ್ನು ಹೊಗಳಲಾಗಿದೆ. ಹೊಳಲ್ಕೆರೆ ಶಾಸನವೊಂದರಲ್ಲಿ 'ತೆಂಕಣ ಅವ್ವಾವಳು (ಅಯ್ಯಾವೊಳೆ) ಎಂದೆನಿಸಿದ ನಿರುಗುಂದದ ನಲ್ಲೆಸೆಟ್ಟಿ ಮುಖ್ಯವಾದ ಸಮಸ್ತ ನಖರ ಮುಂಮುಂರಿದಂಡಗಳ ಉಲ್ಲೇಖ ಬರುತ್ತದೆ. (ಹೊಳಲ್ಕೆರೆ-೧೨೧)

ಒಟ್ಟಾರೆಯಾಗಿ ಹೊಯ್ಸಳರ ಕಾಲದ ಅವಧಿಯವರೆಗೆ ವ್ಯಾಪಾರ-ವಾಣಿಜ್ಯ ಪ್ರಧಾನವಾಗಿದ್ದ ನಗರ ಕೇಂದ್ರಗಳು ಹೆಚ್ಚಿನ ಅಭಿವೃದ್ಧಿಯನ್ನು ಸಾಧಿಸಿದವು. ಒಳನಾಡ ಮತ್ತು ಸಾಗರೋತ್ತರ ವ್ಯಾಪಾರ-ವಾಣಿಜ್ಯದಲ್ಲಿ ಅಭಿವೃದ್ಧಿ ಹೊಂದಿದ್ದು, ಸಂತೆಗಳು ಮತ್ತು ಮಾರುಕಟ್ಟೆಗಳ ವಿಸ್ತರಣೆ, ನಾಣ್ಯಗಳ ವ್ಯಾಪಕ ಚಲಾವಣೆ, ಬಂದರು ಪಟ್ಟಣಗಳ ಅಭಿವೃದ್ಧಿಗೆ ನೇರವಾಗಿ ಕಾರಣವಾದವು. ಚಿತ್ರದುರ್ಗದಂತಹ ಅನೇಕ ವ್ಯಾಪಾರಿ ಕೇಂದ್ರಗಳು ಹೊಯ್ಸಳರ ಕಾಲದಲ್ಲಿ ಬೃಹತ್ ನಗರಗಳಾಗಿ ಬೆಳೆದು ನಿಂತವು. ಈ ಎಲ್ಲಾ ಅಂಶಗಳನ್ನು ಮನಗಂಡು ಮುಂದೆ ಕರ್ನಾಟಕದ ಆರ್ಥಿಕ ಪರಿವರ್ತನೆಗೆ ಕಂಪನಿ ವ್ಯಾಪಾರಿ ಸಂಘಗಳು ಯುರೋಪ್ ಮೂಲದಿಂದ ಭಾರತಕ್ಕೆ ಬಂದಾಗ ಹೊಸ ಆರ್ಥಿಕ ವಲಯವನ್ನು ವಿಜಯನಗರ ಕಾಲಕ್ಕೆ ತಂದಿರಿಸಿದ ಅನೇಕ ಪುರಾವೆಗಳನ್ನು ಕಾಣಬಹುದಾಗಿದೆ.

* * *

ಅಂತರ್ದೇಶೀಯ ಮತ್ತು ವಿದೇಶಿಯ ವ್ಯಾಪಾರವು ವಿಜಯನಗರ ಕಾಲದ ಆರ್ಥಿಕ ಜೀವನದ ಒಂದು ಮುಖ್ಯವಾದ ವೈಶಿಷ್ಟವಾಗಿತ್ತು. ಕಲ್ಲಿಕೋಟೆಯು ಅಂದಿನ ಮುಖ್ಯ ಬಂದರಾಗಿತ್ತು. ಅಬ್ದುಲ್ ರಜಾಕ್‌ನ ಪ್ರಕಾರ ಈ ಸಾಮ್ರಾಜ್ಯದಲ್ಲಿ ಮುನ್ನೂರು ಬಂದರುಗಳಿದ್ದವು. ಹಿಂದೂಮಹಾಸಾಗರದ ದ್ವೀಪಗಳೊಂದಿಗೆ ಮಲಯ, ಬರ್ಮ, ಚೀನಾ, ಅರೇಬಿಯಾ, ಪರ್ಶಿಯಾ, ದಕ್ಷಿಣ ಆಫ್ರಿಕಾ, ಅಬಿಸೀನಿಯಾ ಮತ್ತು ಪೋರ್ಚುಗಲ್ಲಿನೊಂದಿಗೆ ವಾಣಿಜ್ಯ ಸಂಪರ್ಕಗಳನ್ನು ಈ ರಾಜ್ಯವು ಇರಿಸಿಕೊಂಡಿತ್ತು. ಆನೆ, ಕುದುರೆ ಮತ್ತು ತಾಮ್ರ, ಹವಳ, ಪಾದರಸ, ಚೀನಾಂಬರ, ರೇಷ್ಮೆ ಮತ್ತು ವೆಲ್ವೆಟ್ ಬಟ್ಟೆಗಳನ್ನು ಆಮದು ಮಾಡಿಕೊಳ್ಳುತ್ತಿತ್ತು. ಒಳನಾಡಿನ ಸಾಗಣಿಕೆ ಅಗ್ಗವಾಗಿತ್ತು. ಕಾವಡಿ (ಅಡ್ಡೆ)ಗಳು, ತಲೆಹೊರೆಗಳು, ಕುದುರೆಗಳು, ಎತ್ತುಗಳು, ಗಾಡಿಗಳು ಮತ್ತು ಕತ್ತೆಗಳು- ಇವುಗಳ ಮೇಲೆ ಸಾಮಾನುಗಳ ಸಾಗಾಣಿಕೆ ನಡೆಯುತಿತ್ತು. ಕರಾವಳಿ ಪ್ರದೇಶದ ವ್ಯಾಪಾರವು ಹಡಗುಗಳಲ್ಲಿ ನಡೆಯುತ್ತಿತ್ತು. ಬಾರ್ಬೋಸಾನ ಪ್ರಕಾರ ದಕ್ಷಿಣ ಭಾರತವು ಮಾಲ್ಡೀವ್ಸ್ ದ್ವೀಪಗಳಲ್ಲಿ ತಯಾರಾದ ಹಡಗುಗಳನ್ನು ಪಡೆದಿತ್ತು. ಶಾಸನಗಳ ಪ್ರಕಾರ ವಿಜಯನಗರದ ರಾಜರು, ಹಡಗಿನ ಪಡೆಯೊಡೆಯರಾಗಿದ್ದುದಲ್ಲದೆ, ಆಗಿನ ಜನ ಹಡಗುಗಳನ್ನು ಕಟ್ಟುವ ಕಲೆಯನ್ನು ಪೋರ್ಚುಗೀಸರಿಗಿಂತ ಮೊದಲೇ ಬಲ್ಲವರಾಗಿದ್ದರು. ಜವಳಿ ಉತ್ಪಾದನೆ, ಗಣಿಯಿಂದ ಅದಿರು ತೆಗೆಯುವುದು, ಲೋಹ ತೆಗೆಯುವುದು ಮತ್ತು ಸುಗಂಧ ದ್ರವ್ಯಗಳ ನಿರ್ಮಾಣ-ಇವು ರಾಜ್ಯದ ಮುಖ್ಯ ಕೈಗಾರಿಕೆಗಳಾದ್ದವು.[೧೨]

ವಿಜಯನಗರದ ಅರಸರು ಕೃಷಿಯಲ್ಲಿ ಅತಿಯಾದ ಆಸಕ್ತಿ ಹೊಂದಿದ್ದರು ಎಂಬುದಕ್ಕೆ ರಾಯಲ ಸೀಮೆಯ ಜಿಲ್ಲೆಗಳಾದ ಬಳ್ಳಾರಿ, ಅನಂತಪುರಗಳಲ್ಲಿ ನೀರಾವರಿ ಸಾಧ್ಯತೆಗಳ ಬಗ್ಗೆ ಸರ್. ಥಾಮಸ್

ಮನ್ರೋ ಹೀಗೆ ಹೇಳುತ್ತಾನೆ: "ಈ ಪ್ರದೇಶದಲ್ಲಿ ಹೊಸ ಕೆರೆಗಳನ್ನು ಕಟ್ಟುವ ಪ್ರಯತ್ನ ತೀರಾ ನಿರರ್ಥಕವಾದದ್ದು, ಅದರ ಬದಲು ಇರುವ ಕೆರೆಗಳನ್ನು ರಿಪೇರಿ ಮಾಡಿಸುವುದೆ ಉತ್ತಮ. ಏಕೆಂದರೆ ಇಲ್ಲಿನ ನಿವಾಸಿಗಳಿಂದ ನೀರಾವರಿಗೆಂದು ಕಟ್ಟಲ್ಪಟ್ಟಿರುವ ಕೆರೆಗಳೇ ಬೇಕಾದಷ್ಟಿರುವಾಗ ಬೇರೆಯ ಕೆರೆಗಳ ನಿರ್ಮಾಣಕ್ಕೆ ಸ್ಥಳವೇ ಇಲ್ಲದಾಗಿದೆ" ಇದಕ್ಕೆ ವಿಜಯನಗರ ಕಾಲದ ರಾಜರುಗಳಿಂದ ಅನುಸರಿಸಲ್ಪಟ್ಟ ನೀರಾವರಿ ಯೋಜನೆಗಳೇ ಕಾರಣ. ಶ್ರೀಕೃಷ್ಣ ದೇವರಾಯನೇ ಈ ಬಗ್ಗೆ ಸ್ಪಷ್ಟವಾಗಿ ಘೋಷಿಸಿದ್ದಾನೆ "ಈ ಸಾಮ್ರಾಜ್ಯವು ನೀರಾವರಿ ವ್ಯವಸಾಯಕ್ಕೆ ಕೆರೆ, ಕಾಲುವೆಗಳ ಸೌಲಭ್ಯವನ್ನು ಒದಗಿಸಬೇಕು. ಜಮೀನನ್ನು ಅನುಕೂಲವಾದ ಕಂದಾಯದ ಬೊಕ್ಕಸಕ್ಕೆ ಲಾಭವುಂಟು"[೧೨೭] ಎಂದು ಹೇಳೀದ್ದಾನೆ.

೧೨ನೇ ಶತಮಾನದ ನಂತರ ದಕ್ಷಿಣ ಭಾರತದಲ್ಲಿ ಅಗಾಧ ಪ್ರಮಾಣದಲ್ಲಿ ಕಾಡು ಭೂಮಿ; ಗುಡ್ಡಗಾಡಿನ ಭೂಮಿ ಮತ್ತು ಹುಲ್ಲುಗಾವಲುಗಳನ್ನು ಹಸನು ಮಾಡಿ ಬೇಸಾಯಕ್ಕೆ ಒಳಪಡಿಸಲಾಯಿತು. ಇದಲ್ಲದೆ ಈ ಕಾಲದಲ್ಲಿ ಕಬ್ಬಿಣದ ಸಲಕರಣೆಗಳನ್ನು ಹೆಚ್ಚು ಹೆಚ್ಚಾಗಿಯೂ ಹಾಗೂ ನೀರಾವರಿ ಸೌಕರ್ಯಗಳನ್ನು ಬಳಸಲಾರಂಭಿಸಿದರು. ಇದರಿಂದಾಗಿ ಬೇಸಿಗೆಯಲ್ಲಿಯೂ ರೈತರು ಆಹಾರ ಧಾನ್ಯಗಳ ಜೊತೆಗೆ ಆಹಾರೇತರ ಧಾನ್ಯಗಳನ್ನು ಬೆಳೆದು ಉತ್ಪನ್ನವನ್ನು ಹೆಚ್ಚಿಸುತ್ತಿದ್ದರು. ದಿನ ನಿತ್ಯದ ಅವಶ್ಯಕತೆಗಿಂತ ಹೆಚ್ಚಾದ ಕೃಷಿ ಉತ್ಪನ್ನಗಳನ್ನು ಕೃಷಿಯೇತರ ಸಮಾಜದವರಿಗೆ ಮಾರುಕಟ್ಟೆಯಲ್ಲಿ ಮಾರಲು ಅವಕಾಶವಾಯಿತು.[೧೨೮] ಹೀಗಾಗಿ ವ್ಯಾಪಾರ ವಹಿವಾಟು ಬೆಳೆಯಲು ಅಧಿಕ ಕೃಷಿ ಉತ್ಪನ್ನಗಳು ಮೂಲ ಪ್ರೇರಣೆ ನೀಡಿದವು.[೧೨೮]

ಹದಿನೈದು ಹದಿನಾರನೆಯ ಶತಮಾನಗಳಲ್ಲಿ ದಕ್ಷಿಣ ಭಾರತದ ವಿದೇಶೀ ವ್ಯಾಪಾರವು ಬಹುಮಟ್ಟಿಗೆ ಕಲ್ಲಿಕೋಟೆ ಮತ್ತು ಪಶ್ಚಿಮದ ಕನ್ನಡ ಕರಾವಳಿಯ ಬಂದರುಗಳ ಮೂಲಕ ನಡೆಯುತ್ತಿತ್ತು. ಪೆಗು ಮತ್ತು ಮಲಕ್ಕಾದಿಂದ ಕೆಂಪು ಸಮುದ್ರಕ್ಕೆ ಹೋಗುತ್ತಿದ್ದ ಹಡಗುಗಳೆಲ್ಲ ದಾರಿಯಲ್ಲಿ ಸಿಗುವ ಈ ಬಂದರುಗಳಲ್ಲಿ ನಿಂತು ಇಂಡಿಯಾ ದೇಶದ ಸಾಮಾನುಗಳನ್ನು ತುಂಬಿಕೊಂಡು ಹೋಗಿ. ಬೇರೆ ಬೇರೆಯ ದಿಕ್ಕುಗಳಲ್ಲಿ ಮಾರುತ್ತಿದ್ದರು. ಈ ವ್ಯಾಪಾರವೆಲ್ಲಾ ಬಹುಮಟ್ಟಿಗೆ ಪಶ್ಚಿಮ ಕರಾವಳಿಯಲ್ಲಿ ನೆಲೆಸಿದ್ದ ಅರಬ್ಬರ ಕೈಯಲ್ಲಿತ್ತು. ಆದರೆ ಹದಿನಾರನೆಯ ಶತಮಾನದ ವೇಳೆಗೆ ಇಂಡಿಯಾದ ಸಾಗಾಣಿಕೆ ವ್ಯಾಪಾರವನ್ನೆಲ್ಲ ಪೋರ್ಚುಗೀಸರು ಅರಬ್ಬರಿಂದ ತೆಗೆದುಕೊಂಡರು.[೧೨೯] ಹದಿನಾರನೆಯ ಶತಮಾನದಲ್ಲಿ ಭಾರತ ಮತ್ತು ಯುರೋಪುಗಳ ಕೈಗಾರಿಕಾ ಪರಿಸ್ಥಿತಿ ಆತ್ಮೀಯ ನೆರೆಹೊರೆಯ ಸಂಬಂಧದ್ದಾಗಿತ್ತು. ಮೋರ್‌ಲ್ಯಾಂಡನ ಪ್ರಕಾರ 'ಪಶ್ಚಿಮ ಯುರೋಪಿನೊಂದಿಗೆ ಇಂದಿನ ಸ್ಥಿತಿ ಏನಿದೆಯೋ ಅದಕ್ಕಿಂತ ಮುಂದುವರಿದ ಸ್ಥಿತಿಯಾಗಿತ್ತು. ಎಂಬುದನ್ನು ಕೈಗಾರಿಕೆಯ ಕ್ಷೇತ್ರಕ್ಕೆ ಅನ್ವಯಿಸಿ ನಾನು ಹೇಳಬಹುದು. ನನ್ನ ಮನಸ್ಸಿಗೆ ಅದು ವಿವಾದಾಸ್ಪದವಾಗಿಲ್ಲ'. ಇಂದಿನ ಮತ್ತು ಮಧ್ಯಯುಗೀನ ಕೈಗಾರಿಕಾ ವ್ಯವಸ್ಥೆಯ ನಡುವೆ ಕಂಡು ಬಂದ ಒಂದು ಮುಖ್ಯವಾದ ವ್ಯತ್ಯಾಸವೆಂದರೆ, ಆಹಾರ ವಸ್ತುಗಳ ಹೊರತು ತಮ್ಮ ಮಿಕ್ಕೆಲ್ಲ ಅಗತ್ಯಗಳಿಗೆ ಭಾರತದ ಜನರು ಇತರ ದೇಶಗಳನ್ನು ಈಗ ಅತಿಯಾಗಿ ಅಲವಲಂಬಿಸಿದ್ದಾರೆ. ಆದರೆ ಮಧ್ಯಯುದಲ್ಲಿ ಭಾರತವು ಸ್ವಯಂಪೂರ್ಣವಾಗಿತ್ತು. ಆಗ ಹೆಚ್ಚಿನದಾಗಿ ಆಮದು ಮಾಡಿಕೊಳ್ಳುತ್ತಿದ್ದುದು ಯುದ್ಧಕ್ಕಾಗಿ ಕುದುರೆಗಳನ್ನು ಹಾಗೂ ರಾಜರ ಆಸ್ಥಾನಗಳಿಗಾಗಿ ವೈಭವದ ವಸ್ತುಗಳನ್ನು. ಜನಸಾಮಾನ್ಯರ ಜೀವನವು ವಿದೇಶೀಯ ಆಮದುಗಳಿಂದಾಗಿ ಅವಲಂಬನೆಗೊಂಡಿರಲಿಲ್ಲ.[೧೩೦]

ಮಧ್ಯಕಾಲೀನ ಕರ್ನಾಟಕದ ಶಾಸನಗಳಲ್ಲಿ ಉಲ್ಲೇಖಿತವಾದ ನೇಕಾರ, ಬಡಗಿ, ಕಮ್ಮಾರ, ಕುಂಬಾರ, ಅಕ್ಕಸಾಲಿ, ಕಂಚುಗಾರ, ಚಮ್ಮಾರ, ಮೇದಾರ, ಗಾಣಿಗ, ಈ ಎಲ್ಲ ಕುಶಲಕಲೆಗಳ ಸರಕು ಹತ್ತಿ, ಹಂಜಿ, ನೂಲುಸೀರೆ, ಪಟ್ಟೆ ಪಟ್ಟೆ ಸೂತ್ರ ಬಟ್ಟೆ, ಹುಲಿಚರ್ಮ, ಎಳ್ಳು, ಎಣ್ಣೆ, ಸಾಸಿವೆ, ತೆಂಗಿನಕಾಯಿ, ಬಳೆ, ಮಣಿ, ಪಚ್ಚೆ, ತವರ, ಅರಗು, ಹೂವು, ಶ್ರೀಗಂಧ, ಮುತ್ತು, ಬಂಗಾರ, ಸುಗಂಧ ದ್ರವ್ಯ, ಮಡಿಕೆ, ಮಿಣಿ, ಪಾದರಕ್ಷೆ, ಮೊರ ಇವೇ ಮೊದಲಾದ ವಸ್ತುಗಳನ್ನು ಸಂತೆಗಳಿಗೆ ಒಯ್ದು ಮಾರುತ್ತಿದ್ದುದು ಸ್ಪಷ್ಟವಾಗುತ್ತದೆ. ಕೆಲವು ಶಾಸನಗಳಂತೂ ಈ ವರ್ತಕರನ್ನು ಮಾತ್ರ ಉಲ್ಲೇಖಿಸುತ್ತವೆ.[೧೩೧] ಈ ವಸ್ತುಗಳ ಜೊತೆಗೆ ಹತ್ತಿಯ ನೂಲು, ಬಣ್ಣದ ನೂಲು; ವಸ್ತ್ರಗಳು, ಮರದ ಹಲಗೆಗಳು, ಬಿದಿರು, ಲೋಹವಿಗ್ರಹಗಳು, ಬರಹ ಸಾಮಗ್ರಿಗಳಾದ ಬಳಪ ಮತ್ತು ಓಲೆಗರಿಗಳು ಇತ್ಯಾದಿಗಳ ವ್ಯಾಪಾರ ನಡೆಯುತ್ತಿದ್ದಿತೆಂದು ಚಿದಾನಂದಮೂರ್ತಿಯರು ತಿಳಿಸುತ್ತಾರೆ.[೧೩೨]

ಮಧ್ಯಕಾಲೀನ ಕರ್ನಾಟಕದ ಆರ್ಥಿಕ ವ್ಯವಸ್ಥೆಯಲ್ಲಿ ಶ್ರೇಣಿಗಳ ಪಾತ್ರ ಬಹಳ ಪ್ರಮುಖವಾದುದು. ವಿಜಯನಗರ ಕಾಲದ ಆರ್ಥಿಕ ವ್ಯವಸ್ಥೆಯೂ ಇದಕ್ಕೆ ಹೊರತಾಗಿರಲಿಲ್ಲ. ಒಂದೇ ವೃತ್ತಿ ಇಲ್ಲವೇ ಜೀವನೋಪಾಯಕ್ಕೆ ಸಮಾನ ಮಾರ್ಗವನ್ನು ಅವಲಂಬಿಸಿರುವ ವ್ಯಕ್ತಿಗಳು ಹಾಗೂ ಸ್ವಯಂ ಸೇವಾ ಸಂಸ್ಥೆಗಳು ಸರಕಾರ ಇಲ್ಲವೆ ಅದರಿಂದ ಅಧಿಕಾರ ಪಡೆದವರ ಕಪಿಮುಷ್ಠಿಯಿಂದ ತಪ್ಪಿಸಿಕೊಂಡು ತಮ್ಮ ಹಿತರಕ್ಷಣೆಗಾಗಿ ವರ್ತಕಶ್ರೇಣಿ ಅಥವಾ ಕುಶಲ ವೃತ್ತಿಯ ಶ್ರೇಣಿಗಳನ್ನು ರಚಿಸಿಕೊಂಡರು. ಒಂದು ಉದ್ಯೋಗದ ಅಥವಾ ವೃತ್ತಿಯ ಶ್ರೇಣಿಯು ಸಾಮಾನ್ಯವಾಗಿ ಒಂದೇ ಜಾತಿ ಅಥವಾ ಜನಾಂಗಕ್ಕೆ ಸೇರಿದ್ದಾಗಿರುತ್ತಿತ್ತು. ಅದರ ಸದಸ್ಯರೆಲ್ಲರೂ ಬಹುಮಟ್ಟಿಗೆ ಆಯಾ ಕಸುಬಿನಲ್ಲಿ ಪ್ರಾವೀಣ್ಯತೆಯನ್ನು ಪಡೆದವರಾಗಿರುತ್ತಿದ್ದರು. ಅದು ಒಂದು ಜಾತಿ ಶ್ರೇಣಿಯೇ ಆಗಿರುತ್ತಿದ್ದಿತು.[೧೩೩]

ನಕರ ಹಾಗೂ ಹಂಜಮಾನ ವರ್ಗಗಳ ಬಗೆಗೆ ವಿಜಯನಗರ ಕಾಲದ ಬಾರಕೂರು ಶಾಸನಗಳಲ್ಲಿ ಹೆಚ್ಚು ಪ್ರಸ್ತಾಪಿಸಲಾಗಿದೆ. ಅವು ಬಹಳ ಪ್ರಭಾವಶಾಲಿ ಗುಂಪುಗಳೆಂದೂ ತಿಳಿದುಬರುತ್ತದೆ. ಶೆಟ್ಟಿ ಎಂಬ ಬೇರೊಂದು ವರ್ತಕ ಶ್ರೇಣಿಯು ಪ್ರಬಲವೂ, ಪ್ರಭಾವಯುತವೂ ಆಗಿದ್ದು, ಉತ್ತಮ ವ್ಯವಸ್ಥೆಯಿಂದ ಕೂಡಿತ್ತು.[೧೩೪]

ವೀರ ಬಣಜಿಗ ಎಂಬ ಸಮೂಹವೂ ಪ್ರಮುಖ ವರ್ತಕ ಶ್ರೇಣಿಯಾಗಿದ್ದು, ಸುಮಾರು ೩೭ ಸ್ಥಳಗಳಲ್ಲಿ[೧೩೫] ತನ್ನ ಕೇಂದ್ರಗಳನ್ನು ಸ್ಥಾಪಿಸಿದ್ದ ವಿವರಗಳು ತಿಳಿದುಬರುತ್ತವೆ. ಶೆಟ್ಟಿಕಾರ ಎಂಬ ಮತ್ತೊಂದು ಪ್ರಮುಖ ಶ್ರೇಣಿಯ ಹೊಸ ಚೈತ್ಯಗಳನ್ನು ನಿರ್ಮಿಸಿರುವುದು[೧೩೬] ಹಳೆಯ ಚೈತ್ಯಗಳನ್ನು ಜೀರ್ಣೋದ್ಧಾರ ಮಾಡುವುದು ಮುಂತಾದ ಕೆಲಸಗಳಲ್ಲಿ ನಿರತವಾಗಿದ್ದ ವಿವರಗಳು ದೊರೆಯುತ್ತವೆ. ಶೆಟ್ಟಿಕಾರರು ಜೈನರಾಗಿದ್ದು ಬಹುಮಟ್ಟಿಗೆ ಕರಾವಳಿ (ದಕ್ಷಿಣ ಕನ್ನಡ) ಪ್ರದೇಶದಲ್ಲಿ ವಾಸಿಸುತ್ತಿದ್ದರು. ಮತ್ತೊಂದು ಪ್ರಮುಖ ಶ್ರೇಣಿಯೆಂದರೆ ಅಲೆಮಾರಿ ವರ್ತಕರದು. ಐಯ್ಯಾವೊಳೆಯೆಂದು ಪ್ರಸಿದ್ಧವಾಗಿದ್ದ ದಕ್ಷಿಣ ಭಾಗದಲ್ಲಿ ಈ ಶ್ರೇಣಿಗೆ ಸೇರಿದ ವರ್ತಕರು ತಮ್ಮ ವಾಣಿಜ್ಯ ಪದಾರ್ಥಗಳನ್ನು ಜೊತೆಯಲ್ಲಿಯೇ ಒಯ್ಯುತ್ತಾ ಹಲವು ಪ್ರದೇಶಗಳನ್ನು ಸುತ್ತುತ್ತಿದ್ದರು.[೧೩೭] ಅವರು ಸುಸಂಘಟಿತರೂ ಪ್ರಭಾವಶಾಲಿಗಳೂ ಆಗಿದ್ದು ದಕ್ಷಿಣ ಪ್ರಾಂತ್ಯದಾದ್ಯಂತ ಹಬ್ಬಿದ್ದರು. ಚಾಮರಾಜನಗರದಲ್ಲಿ ದೊರೆತಿರುವ ಒಂದು ಶಿಲಾ ಶಾಸನವು (ಕ್ರಿ.ಶ.೧೪೦೮), ಇವರು ವಿಜಯನಗರ ಕಾಲದಲ್ಲಿ ಹೆಚ್ಚು ಚಟುವಟಿಕೆಯಿಂದ ಕೂಡಿದ್ದ

ಒಂದು ವರ್ತಕ ತಂಡವೆಂದು ಗುರುತಿಸಿದೆ.[೧೩೮] ಇಂತಹ ಅನೇಕ ವರ್ತಕ ಶ್ರೇಣಿಗಳ ಹೆಸರುಗಳು ನಮಗೆ ಹಲವು ಶಾಸನಗಳಲ್ಲಿ ದೊರೆತಿದ್ದರೂ ಅವುಗಳ ರಚನೆ, ವ್ಯವಸ್ಥೆ ಅಥವಾ ಕಾರ್ಯ ವಿಧಾನಗಳ ಬಗೆಗೆ ಯಾವ ಶಾಸನಗಳೂ ಹೆಚ್ಚಿನ ವಿವರವನ್ನು ದೊರಕಿಸಿಕೊಡುತ್ತಿಲ್ಲ.

ವಿಜಯನಗರದ ಆಳ್ವಿಕೆಯಲ್ಲಿ ಅರಸರು, ಸ್ಥಳೀಯ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿಗಳು, ವಿವಿಧ ಮಂಡಳಿಗಳು, ವೃತ್ತಿ ಸಂಘಗಳು ಹಾಗೂ ವರ್ತಕ ಸಮುದಾಯಗಳು ಸಂತೆಗಳು ಮತ್ತು ಮಾರುಕಟ್ಟೆಗಳನ್ನು ಏರ್ಪಡಿಸುತ್ತಿದ್ದರು. ಇದು ಕೃಷಿಯೇತರ ಉತ್ಪಾದನೆ ಮತ್ತು ಚಟುವಟಿಕೆಗಳ ಬೆಳವಣಿಗೆಗೆ ಕಾರಣವಾಯಿತು. ಇದರಿಂದಾಗಿ ಅನೇಕ ಪ್ರದೇಶಗಳು ವಿಶೇಷ ಪ್ರಾಮುಖ್ಯತೆ ಪಡೆದು ಆರ್ಥಿಕ, ಧಾರ್ಮಿಕ ಹಾಗೂ ರಾಜಕೀಯ ಕೇಂದ್ರಗಳಾಗಿ ಗುರುತಿಸಿಕೊಂಡವು. ಅವುಗಳಲ್ಲಿ ವ್ಯಾಪಾರಿ ಕೇಂದ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ಕಾಣಿಸಿಕೊಂಡವು. ವಿಜಯನಗರ ದ್ವಾರಸಮುದ್ರ, ಚಂದ್ರಗುತ್ತಿ, ಅದೋನಿ, ಇಕ್ಕೇರಿ, ಚಿತ್ರಕಲ್ಲು ದುರ್ಗ, ಪೆನುಗೊಂಡ, ಅಣ್ಣಿಗೇರಿ, ಶ್ರೀರಂಗಪಟ್ಟಣ, ಮಂಗಳೂರು, ಬಾರಕೂರು, ಹೊನ್ನಾವರ, ಅಂಕೋಲ, ಕಾರವಾರ ಮುಂತಾದವು ವಿಜಯನಗರ ಸಂದರ್ಭದ ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು. ಅದೇ ರೀತಿ ವಿಜಯನಗರ ಸಂದರ್ಭದಲ್ಲಿಯೇ ಆಳ್ವಿಕೆ ನಡೆಸುತ್ತಿದ್ದ ಬಹುಮನಿ ಮತ್ತು ಆದಿಲ್‌ಶಾಹಿಗಳು ಅನೇಕ ನಗರ ಕೇಂದ್ರಗಳ ಹುಟ್ಟಿಗೆ ಕಾರಣರಾದರು. ಬೀದರ್, ಗುಲ್ಬರ್ಗ, ಬಿಜಾಪುರ, ಗೋಲ್ಕೊಂಡ, ರಾಯಚೂರು, ಸೋಲ್ಲಾಪುರ, ಹುಬ್ಬಳ್ಳಿ ಮೊದಲಾದವು ಪ್ರಮುಖ ನಗರ ಆರ್ಥಿಕ ಕೇಂದ್ರಗಳಾಗಿದ್ದವು.[೧೩೯]

ಹಾಗೆಯೇ ನಾಡಿನ ಜನರ ಆರ್ಥಿಕ ಬದುಕನ್ನು ರೂಪಿಸಿದವರು ವರ್ತಕರು ಹಾಗೂ ವರ್ತಕ ಸಂಘಗಳು. ಸೆಟ್ಟಿ–ಬಣಜಿಗ, ಸೆಟ್ಟಿಗುತ್ತ, ನಕರ, ಮುಂಮುರಿದಂಡ, ವಡ್ಡ ವ್ಯವಹಾರಿ, ಗವರೆ–ಗಾತ್ರಿಗ, ಸೆಟ್ಟಿಕಾರ, ಹಲರು, ಎಳಮೆ, ಸಾಲಿಕೆಬಲ್ಲಾಳು– ಇವರು ವಿಜಯನಗರ ಕಾಲದ ವಿವಿಧ ವರ್ತಕ ಪ್ರಕಾರದವರು.[೧೪೦] ಈ ವರ್ತಕ ಪ್ರಕಾರದವರ ಮತ್ತು ವಿವಿಧ ವರ್ತಕ ಸಂಘದವರ ಮೂಲಕವೇ ನಾಡಿನಲ್ಲಿ ಆರ್ಥಿಕ ಚಟುವಟಿಕೆಗಳು ಹೆಚ್ಚಾಗಿ ನಡೆದುಬರಲು ಸಾಧ್ಯವಾಯಿತು.

ವರ್ತಕರ ವಿವಿಧ ಸರಕುಗಳನ್ನು ಎತ್ತು –ಕತ್ತೆ–ಕೋಣಗಳ ಮೇಲೆ ಹೇರಿಕೊಂಡೂ, ಹೆಗಲ ಮೇಲೆ, ತಲೆಯ ಮೇಲೆ ಇಟ್ಟುಕೊಂಡೂ ನಾಡಿನ ತುಂಬೆಲ್ಲ ಸಂಚರಿಸಿ, ಅಯಾ ಸಂತೆ, ಪೇಟೆ, ಪಟ್ಟಣಗಳಲ್ಲಿ ವ್ಯಾಪಾರಕಾರ್ಯ ನಿರ್ವಹಿಸುತ್ತಿದ್ದರು[೧೪೧] ಹೀಗೆ ಸಾಮೂಹಿಕವಾಗಿ ವ್ಯಾಪಾರ ಮಾಡುವಲ್ಲಿ ವರ್ತಕರು ಹಾಗೂ ವರ್ತಕ ಸಂಘಗಳು ಅನುಸರಿಸಿದ ಸಹಕಾರತತ್ವ, ಸಹಬಾಳ್ವೆಗಳು ಅನುಕರಣೀಯವೆನಿಸಿವೆ. ಸಹಕಾರತತ್ವ, ಹಾಗೂ ಆರ್ಥಿಕ ಚಟುವಟಿಕೆಗಳನ್ನು ನಾಡಿನ ಜನರಲ್ಲಿ ವಿವಿಧ ವರ್ತಕ ಸಂಘಗಳಿಗೆ ಸಲ್ಲುತ್ತದೆ.[೧೪೨]

ಒಟ್ಟಾರೆಯಾಗಿ ವ್ಯಾಪಾರ–ವಾಣಿಜ್ಯವು ಆರಂಭವಾಗಿರುವುದು ಆದಿ ಮಾನವನ ನೆಲೆಗಳಿಂದಲೇ ಎಂಬುದಾಗಿ ಗುರುತಿಸಲಾಗಿದೆ. ಹಾಗೆಯೆ ಮೌರ್ಯ, ಶಾತವಾಹನ, ಗ್ರೀಕ್, ರೋಮನ್, ಕದಂಬ, ಚಾಲುಕ್ಯ, ಹೊಯ್ಸಳ ಮತ್ತು ವಿಜಯನಗರ ಕಾಲದವರೆಗೂ ಈ ವ್ಯಾಪಾರ–ವಾಣಿಜ್ಯ ಸಂಬಂಧಗಳು ನಿರಂತರವಾಗಿ ಸಾಗಿಬಂದಿರುವ ಹಾದಿಯನ್ನು ಗಮನಿಸಿದಂತೆಯೇ ವಿಜಯನಗರ ಕಾಲದ ವ್ಯಾಪಾರ ವ್ಯವಸ್ಥೆಯಲ್ಲಿ ಬದಲಾದ ಕಾಲಘಟ್ಟವನ್ನು ಗುರುತಿಸುವುದು ಅನಿವಾರ್ಯ. ಕಾರಣ ಸುಮಾರು ಎರಡು ನೂರು ವರ್ಷಗಳು ಮಲಬಾರ್ ತೀರದಾದ್ಯಂತ ನೆಲೆಗೊಂಡು ಸಾಗರೋತ್ತರ ವ್ಯಾಪಾರದಲ್ಲಿ ಸಕ್ರಿಯವಾಗಿ

ಪಾಲ್ಗೊಂಡಿದ್ದ ಪೋರ್ಚುಗೀಸರು, ಸ್ಥಳೀಯ ವರ್ತಕ ಸಮುದಾಯ, ಸ್ಥಳೀಯ ಆಡಳಿತ ಸಂಸ್ಥಾನಗಳು, ಅಂದಿನ ಆದಿಲ್ ಷಾಹಿ ಮನೆತನ ಹಾಗೂ ನಂತರದ ಪಾಳೆಯಗಾರರ ಈ ಎಲ್ಲ ಆರ್ಥಿಕ, ರಾಜಕೀಯ ಶಕ್ತಿಗಳೊಂದಿಗೆ ಸಂಘರ್ಷ, ಹೊಂದಾಣಿಕೆ ಮತ್ತು ರಾಜತಾಂತ್ರಿಕತೆಯೊಂದಿಗೆ ಸಂಬಂಧಗಳನ್ನು ಬೆಸೆದುಕೊಳ್ಳಬೇಕಿತ್ತು. ಮುಂದೆ ಕ್ರಿ.ಶ. ೧೭ನೇ ಶತಮಾನದ ಮಧ್ಯಭಾಗದ ವೇಳೆಗೆ ಅವರ ಕರಾವಳಿ, ಒಳನಾಡಿನ ಮತ್ತು ಸಾಗರೋತ್ತರ ವ್ಯಾಪಾರ-ವಹಿವಾಟುಗಳು ಕ್ಷೀಣಿಸತೊಡಗಿದವು.

ಈ ವೇಳೆಗೆ ಡಚ್ಚರ ತೀವ್ರ ಪೈಪೋಟಿಯನ್ನು ಎದುರಿಸಬೇಕಾಯಿತು. ಅಲ್ಲದೆ, ಆದಷ್ಟು ಬೇಗ ತಮ್ಮ ವ್ಯಾಪಾರಿ ಕಂಪನಿಯನ್ನು ಮುಚ್ಚಲು ಒತ್ತಡಗಳು ಹೆಚ್ಚಾದವು. ಪೋಚುಗೀಸರು ಕೇವಲ ಡಚ್-ಇಂಗ್ಲಿಶ್ ವ್ಯಾಪಾರಿ ಸಂಸ್ಥೆಗಳಿಂದಷ್ಟೇ ಅಲ್ಲದೆ, ಆ ವೇಳೆಗಾಗಲೇ ಮಲಬಾರ್ ತೀರದಾದ್ಯಂತ ಮತ್ತೊಮ್ಮೆ ಏಳಿಗೆಗೆ ಬಂದ ರಾಜಕೀಯ ಸಂಸ್ಥಾನಗಳಿಂದಲೂ ಪೈಪೋಟಿಯನ್ನು ಎದುರಿಸಬೇಕಾಯಿತು. ಕೊಚ್ಚಿನ್ ರಾಜ ಕಣ್ಣನೂರಿನ ಆಲಿ ರಾಜರು, ಕಲ್ಲಿಕೋಟೆಯ ಸಮುದ್ರ ತೀರದ ರಾಜರು ಇಕ್ಕೇರಿ ನಾಯಕರು- ಈ ಎಲ್ಲ ರಾಜ್ಯ ಸಂಸ್ಥಾನಗಳು ಕಡಲ ತೀರದ ವ್ಯಾಪಾರದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ತಮ್ಮದೇ ಹತ್ತಾರು ಹಡಗುಗಳನ್ನು ಹೊಂದಿದ್ದು, ದೂರದ ಕೆಂಪು ಸಮುದ್ರ, ಪರ್ಶಿಯನ್ ಗಲ್ಫ್ ಪ್ರದೇಶಗಳಿಗೆ ನೇರವಾಗಿ ರಫ್ತು ವ್ಯಾಪಾರದಲ್ಲಿ ಪಾಲ್ಗೊಂಡರು. ಹೀಗೆ ರಾಜಕೀಯ ಶಕ್ತಿಗಳು ನೇರವಾಗಿ ಕಡಲ ವ್ಯಾಪಾರದಲ್ಲಿ ಪಾಲ್ಗೊಂಡು ಬಂದರುಗಳ ಮೇಲೆ ಹಿಡಿತ ಸಾಧಿಸಿದ್ದನ್ನು ತಡೆಗಟ್ಟಲು ಪೋರ್ಚುಗೀಸರಿಗೆ ಬೃಹತ್ ಸೈನಿಕ ಶಕ್ತಿಯ ಅವಶ್ಯಕತೆಯಿತ್ತು. ಇದು ಪೋರ್ಚುಗೀಸರಿಗೆ ಸಾಧ್ಯವಾಗದೇ ಹೋದದ್ದು, ಕಡಲ ವ್ಯಾಪಾರದಲ್ಲಿ ಅವರ ಹಿನ್ನೆಡೆಗೆ ಮತ್ತೊಂದು ಕಾರಣವಾಯಿತು. ಈ ಎಲ್ಲ ಸವಾಲುಗಳ ನಡುವೆ ಪಶ್ಚಿಮ ತೀರದುದ್ದಕ್ಕೂ ಯುರೋಪಿಯನ್ ಮತ್ತು ಭಾರತೀಯ ಖಾಸಗಿ ವರ್ತಕರು ರಫ್ತು ವ್ಯಾಪಾರದಲ್ಲಿ ಗಣನೀಯ ಸಂಖ್ಯೆಯಲ್ಲಿ ಪಾಲುದಾರರಾದದ್ದು ಮತ್ತು ಈ ತೀರದುದ್ದಕ್ಕೂ ಕಳ್ಳ ಸಾಗಾಣಿಕೆಯೂ ಪೋರ್ಚುಗೀಸರಿಗೆ ತಲೆ ನೋವಾಗಿ ಪರಿಣಮಿಸಿತು. ಈ ಎಲ್ಲ ದಿಕ್ಕುಗಳಿಂದ ಬಂದೊದಗಿದ ಸವಾಲುಗಳನ್ನು ಎದುರಿಸುವುದು ಪ್ರಯಾಸದಾಯಕವಾಯಿತು. ಒಟ್ಟಾರೆ ಈ ಹಿಂದೆ ರಾಜಕೀಯ ಸಂಘರ್ಷ, ರಾಜತಾಂತ್ರಿಕ ನಿರ್ವಹಣೆಯ ನಡುವೆಯೂ ಕರ್ನಾಟಕದ ಸಾಗರೋತ್ತರ ವ್ಯಾಪಾರ-ವಹಿವಾಟಿನಲ್ಲಿ ಬಹುತೇಕ ಏಕಸ್ವಾಮ್ಯ ಸಾಧಿಸಿಕೊಂಡಿದ್ದರು. ಕ್ರಿ.ಶ. ೧೭ನೇ ಶತಮಾನದ ಮೊದಲಾರ್ಧದ ವೇಳೆಗೆ ಬದಲಾದ ಆರ್ಥಿಕ ಚಿತ್ರಣದಿಂದ ಕಡಲ ವ್ಯಾಪಾರದಲ್ಲಿ ತಮ್ಮ ಪ್ರಾಬಲ್ಯ ಕ್ಷೀಣಿಸಬೇಕಾಯಿತು. ಅನೇಕ ದೃಷ್ಟಿಗಳಿಂದ ಕರ್ನಾಟಕವು ಆರಂಭದಿಂದ ವಿಜಯನಗರದ ಆರ್ಥಿಕ ಪರಿಶೀಲನಾವಧಿಯಲ್ಲಿ ಹೆಚ್ಚುವರಿ ಉತ್ಪಾದನೆಯ ಸ್ಥಿತಿಯಲ್ಲಿತ್ತು ಮತ್ತು ಆ ಹೆಚ್ಚುವರಿಯನ್ನು ವ್ಯಾಪಾರ ವಿಧಾನಗಳ ಮೂಲಕ ಜಾಣತನದಿಂದ ವಿನಿಯೋಗ ಪಡಿಸುತ್ತಿತ್ತು.

## ಕೊನೆ ಟಿಪ್ಪಣಿಗಳು


೧. ಚೆನ್ನಾರೆಡ್ಡಿ ಡಿ., ಗಿಲ್ಡ್ಸ್ ಇನ್ ಮಿಡಿವಲ್ ಆಂಧ್ರದೇಶ, ಶ್ರೀ ವೆಂಕಟೇಶ್ವ ವಿಶ್ವವಿದ್ಯಾಲಯ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ೧೯೮೭, ಪು.ಸಂ-೩೯

೨. ರಮೇಶ ನಾಯಕ (ಸಂ)., ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರು ಚಿಂತನೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭, ಪು.ಸಂ. ೧೩೭

೩. ಲಕ್ಷ್ಮಣ್ ತೆಲಗಾವಿ, ಮೌರ್ಯ ಮತ್ತು ಶಾತವಾಹನ ಯುಗ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.ಸಂ.೩೦.

೪. ಶರ್ಮಾ ಆರ್.ಎಸ್., ಪ್ರಾಚೀನ ಭಾರತ, (ಅನು) ಎಸ್.ಪಿ. ಶಂಕರನಾರಾಯಣ ರಾವ್, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೪, ಪು.ಸಂ.೪೮.

೫. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.ಸಂ.೩೭.
೬. ಆಸಿನ್ ದಾಸ್ ಗುಪ್ತ (ಸಂ)., ರುದ್ರಂಗೋಶ್ ಮುಖರ್ಜಿ ಮತ್ತು ಲಕ್ಷ್ಮಿ ಸುಬ್ರಹ್ಮಣ್ಯನ್, ಪಾಲಿಟಿಕ್ಸ್ ಆ್ಯಂಡ್ ಟ್ರೇಡ್ ಇನ್ ದಿ ಇಂಡಿಯನ್ ಒಕೇಶಿಯನ್ ವರ್ಲ್ಡ್, ಆಕ್ಸಫರ್ಡ್ ಯುನಿವರ್ಸಿಟಿ ಪ್ರೆಸ್, ನ್ಯೂ ದೆಹಲಿ, ೧೯೯೮, ಪು.ಸಂ-೧೬೮
೭. ವಾರ್ನಿಂಗ್‌ಟನ್ ಇ.ಎಚ್., ಕಾಮರ್ಸ್ ಬಿಟ್ವೀನ್ ದಿ ರೋಮನ್ ಎಂಪೈರ್ ಆ್ಯಂಡ್ ಇಂಡಿಯಾ, ವಿಕಾಸ ಪಬ್ಲಿಶಿಂಗ್ ಹೌಸ್ ದೆಹಲಿ, ೧೯೭೪, ಪು.ಸಂ-೨೭೮-೮೨
೮. ನರಸಿಂಹಮೂರ್ತಿ ಎ.ವಿ., ಭಾರತೀಯ ನಾಣ್ಯ ಪರಂಪರೆ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೦೮, ಪು.ಸಂ.೫೯-೬೦.
೯. ಶ್ರೀನಿವಾಸ್ ಎಂ.ವಿ. ಮತ್ತು ಲಕ್ಷ್ಮಣ್ ತೆಲಗಾವಿ (ಸಂ), ಚಂದ್ರವಳ್ಳಿ, ಜಿಲ್ಲಾ ಇತಿಹಾಸ ಸಂಶೋಧನ ಮಂಡಲಿ, ಚಿತ್ರದುರ್ಗ, ೧೯೭೬, ಭಾಗ-೩, ಪು.ಸಂ.೧-೨
೧೦. ನರಸಿಂಹಮೂರ್ತಿ ಎ.ವಿ., ಪೂರ್ವೋಕ್ತ, ಪ್ರ, ಸಂ. ೬೦.
೧೧. ಜಯಪ್ಪಗೌಡ ಡಿ.ಎಸ್., ಕರ್ನಾಟಕ ಕಡಲಾಚೆಯ ಸಂಪರ್ಕಗಳು, ಶುಭೋದಯ ಪ್ರಕಾಶನ, ಮೈಸೂರು, ೧೯೮೩, ಪು.ಸಂ. ೭೯.
೧೨. ಅದೇ ಪು.ಸಂ. ೮೦.
೧೩. ವಾರ್ಮಿಂಗ್‌ಟನ್, ಪೂರ್ವೋಕ್ತ, ಪು.ಸಂ-೨೮೨
೧೪. ಜಯಪ್ಪಗೌಡ ಡಿ.ಎಸ್., ಪೂರ್ವೋಕ್ತ, ಪು.ಸಂ, ೮೦
೧೫. ಗುರುರಾಜಾಚಾರ್ ಎಸ್., ಸಮ್ ಆಸ್ಪೆಕ್ಟ್ಸ್ ಆಫ್ ಎಕಾನಾಮಿಕ್ ಆ್ಯಂಡ್ ಸೋಶೀಯಲ್ ಲೈಫ್ ಇನ್ ಕರ್ನಾಟಕ (ಕ್ರಿ.ಶ.೧೦೦೦-೧೩೦೦) ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೪, ಪು.ಸಂ-೧೨೮
೧೬. ಸುರೇಶ ತಾಂಡೇಲ, ಪ್ರಾಚೀನ ಕರ್ನಾಟಕದ ಬಂದರುಗಳು ವ್ಯಾಪಾರೀ ಸಂಘಗಳ ಚಟುವಟಿಕೆ, ಹೊಸತು ಮಾಸಪತ್ರಿಕೆ, ನವೆಂಬರ್, ೨೦೧೫, ಪು.ಸಂ. ೩೨
೧೭. ಗುರುರಾಜಾಚಾರ್ ಎಸ್., ಪೂರ್ವೋಕ್ತ, ಪು.ಸಂ-೧೨೮
೧೮. ಮೋತಿ ಚಂದ್ರ (ಮೂಲ) ಪಾಟೀಲ್, ಹೆಚ್.ಎಸ್. (ಅನು), ಸಾರ್ಥವಾಹ, ಸಾಹಿತ್ಯ ಅಕಾಡೆಮಿ, ಹೊಸದೆಹಲಿ, ೧೯೭೨, ಪು.ಸಂ. ೩೮
೧೯. ಜಯಪ್ಪಗೌಡ ಡಿ.ಎಸ್., ಪೂರ್ವೋಕ್ತ ಪು.ಸಂ. ೧೨೨.
೨೦. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.ಸಂ. ೪೫.
೨೧. ಸೋಮಶೇಖರ್ ಎಸ್.ವೈ.(ಸಂ), ಬ್ರಹ್ಮಗಿರಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.ಸಂ. ೩೪-೩೫.
೨೨. ಗುರುರಾಜಾಚಾರ್ ಬಿ.ಕೆ., ದಿ ಮೆಗಾಲಿಥಿಕ್ ಕಲ್ಚರ್ ಇನ್ ಸೌತ್ ಇಂಡಿಯಾ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೭೨, ಪು.ಸಂ-೧೪೨
೨೩. ಅದೇ, ಪು.ಸಂ-೧೪೪
೨೪. ಇರ್ಫಾನ್ ಹಬೀಬ್, ಭಾರತ ಚರಿತ್ರೆಯಲ್ಲಿ ರೈತ, (ಕನ್ನಡಕ್ಕೆ), ಬಿ.ಸುಜ್ಞಾನಮೂರ್ತಿ, ಲಡಾಯಿ ಪ್ರಕಾಶನ, ಗದಗ, ೨೦೧೬, ಪು.ಸಂ. ೨೦-೨೧

೨೫. ಅದೇ ೩೪.

೨೬. ಲೂಯಿಸ್ ರೈಸ್ ಬಿ., ಅವರು ಎಪಿಗ್ರಾಫಿಯಾ ಕರ್ನಾಟಕ ಸಂ-XI ಪು.ಸಂ. ೨೪೯ರಲ್ಲಿ ಮೊಳಕಾಲ್ಮೂರು ತಾಲೂಕು ಶಾಸನಗಳಲ್ಲಿ ೧೪ನೇ ಪಾಠವಾಗಿ ಈ ಶಾಸನವನ್ನು ನಮೂದಿಸಿದ್ದು, ಅದರಲ್ಲಿ ಅಕ್ಷರದ ದೋಷ ಹೆಚ್ಚಾಗಿ ಕಂಡುಬಂದಿವೆ. ಅದೇ ಶಾಸನವನ್ನು ಅ.ಸುಂದರ ಅವರು ಬ್ರಹ್ಮಗಿರಿ ಎಂಬ ಕೃತಿಯಲ್ಲಿ ಪು.ಸಂ. ೩೦-೩೧ರಲ್ಲಿ ಶಾಸನದ ಮರು ಓದಿನ ಪಾಠ ಇದಾಗಿದೆ.

೨೭. ನಾಗಾರಾಜು ಎಸ್., ದಿ ಬುದ್ದಿಸ್ಟ್ ಆರ್ಕಿಟೆಕ್ಚರ್ ಆಫ್ ವೆಸ್ಟರ್ನ್ ಇಂಡಿಯಾ, ಆಗಮ್‌ಕಲ್ ಪ್ರಕಾಶನ, ೧೯೮೧, ಪು.ಸಂ-೨೯

೨೮. ವಿಶ್ವೇಶ್ವರ ಎಂ.ವಿ. ಸನ್ನತಿಯ ಅಶೋಕನ ಶಿಲಾಶಾಸನಗಳು, ಸಂಶೋಧನೆ, ಎಂ.ಚಿದಾನಂದಮೂರ್ತಿಯವರ ಅಭಿನಂದನಾ ಗ್ರಂಥ, ೧೯೯೧, ಪು.ಸಂ.೭೨೩, ೭೪೩.

೨೯. ಸುಂದರ ಅ., ಎಕ್ಸವೇಶನ್ಸ್ ಆಟ್ ಸನ್ನತಿ, ಪುರಾತತ್ವ ನಂ:೧೭, (೧೯೮೬-೮೭), ಪು.ಸಂ-೨೧, ೨೪

೩೦. ದೇಸಾಯಿ ಪಿ.ಬಿ., ಎ ಹಿಸ್ಟರಿ ಆಫ್ ಕರ್ನಾಟಕ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೦, ಪು.ಸಂ-೫೨

೩೧. ಶರ್ಮಾ ಆರ್.ಎಸ್., ಪ್ರಾಚೀನ ಭಾರತದಲ್ಲಿ ಶೂದ್ರರು, ನವಕರ್ನಾಟಕ ಪ್ರಕಾಶನ, ೨೦೧೨, ಪು.ಸಂ. ೫೨.

೩೨. ತಪನ್ ರಾಯ್ ಚೌದರಿ ಆ್ಯಂಡ್ ಇರ್ಫಾನ್ ಹಬೀಬ್(ಸಂ)., ದಿ ಕೆಂಬ್ರಿಜ್ ಎಕಾನಾಮಿಕ್ ಹಿಸ್ಟರಿ ಆಫ್ ಇಂಡಿಯಾ ಸಂ-೧, ಓರಿಯಂಟ್ ಬ್ಲ್ಯಾಕ್ ಸ್ವಾನ್ ನ್ಯೂಡೆಲ್ಲಿ, ೧೯೮೨, ಪು.ಸಂ-೧೫೬

೩೩. ಜಯಪ್ಪಗೌಡ ಡಿ.ಎಸ್., ಪೂರ್ವೋಕ್ತ, ಪು.ಸಂ. ೧೨೮.

೩೪. ನರಸಿಂಹಮೂರ್ತಿ ಎ.ವಿ., ಕರ್ನಾಟಕ ನಾಣ್ಯ ಪರಂಪರೆ, ಬೆಂಗಳೂರು, ಪು.ಸಂ. ೩೬-೬೧

೩೫. ಸೋಮಶೇಖರ್ ಎಸ್.ವೈ.(ಸಂ), ಜಗಳೂರು, ಪ್ರಸಾರಾಂಗ. ಕನ್ನಡ, ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.ಸಂ. ೮.

೩೬. ಸಂತೋಷ ಎನ್.ಜಿ. ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ನಾಯಕರ ಕಾಲದ ಕೃಷಿ ವ್ಯವಸ್ಥೆ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ), ೨೦೦೯, ಪು.ಸಂ. ೧೯.

೩೭. ಚಂದ್ರಶೇಖರ ಎಚ್., ಭೂ ವಿಜ್ಞಾನಿಯ ಕಣ್ಣಲ್ಲಿ ಇತಿಹಾಸ, ಸಿವಿಜಿ ಇಂಡಿಯಾ, ಬೆಂಗಳೂರು, ೨೦೧೫, ಪು.ಸಂ. ೭೮.

೩೮. ಸಂಪದ, ನವೆಂಬರ್-ಡಿಸೆಂಬರ್-೨೦೧೭-೧೮ರ ದ್ವಿ ಮಾಸ ಸಂಚಿಕೆ, ಪು.ಸಂ. ೧೭.

೩೯. ಶರ್ಮಾ ಆರ್.ಎಸ್., ಪ್ರಾಚೀನ ಭಾರತ, ಪೂರ್ವೋಕ್ತ, ಪು.ಸಂ. ೧೮೬-೮೭.

೪೦. ಮೋಹನ್‌ಕೃಷ್ಣ ರೈ ಕೆ., ವಸಾಹತು ಪೂರ್ವ ಕರ್ನಾಟಕದ ನಗರ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪ್ರಸಂ. ೮.

೪೧. 'ಆಮೆ' ಎಂದರೆ ಕುಂಬಾರರು ಮಡಿಕೆ ಸುಡಲು ಉಪಯೋಗಿಸುತ್ತಿದ್ದ ಒಲೆಯಾಗಿರಬೇಕು.

೪೨. ವಿಠಲ. ಡಿ. ಪೋತದಾರ, ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತವಿದ್ದ ಕೆಲವು ತೆರಿಗೆಗಳು–ಒಂದು ಅಧ್ಯಯನ; ಇತಿಹಾಸ ದರ್ಶನ, ಸಂ. ೮, ೧೯೯೩, ಪು.ಸಂ. ೧೧೪–೧೧೭.

೪೩. ಶರ್ಮಾ ಆರ್.ಎಸ್., ಪೂರ್ವೋಕ್ತ, ಪು.ಸಂ. ೧೯೦.

೪೪. ಕೃಷ್ಣರಾವ್ ಎಂ.ವಿ. ಮತ್ತು ಟಿ. ಕೇಶವಭಟ್ಟ, ಕರ್ನಾಟಕದ ಇತಿಹಾಸ ದರ್ಶನ, ಕರ್ನಾಟಕ ಸಹಕಾರಿ ಪ್ರಕಾಶನ, ಬೆಂಗಳೂರು, ೧೯೭೦, ಪು.ಸಂ. ೯೪೫.

೪೫. ಲಕ್ಷ್ಮಣ್ ತೆಲಗಾವಿ ಪೂರ್ವೋಕ್ತ, ಪು.ಸಂ. ೧೪೧.

೪೬. ಗೋಶಾಲ್ ಯು.ಎನ್., ಪ್ರಾಚೀನ ಭಾರತದ ಕಂದಾಯ ವ್ಯವಸ್ಥೆ, (ಕನ್ನಡಕ್ಕೆ) ಜಯವಂತ ಕುಳ್ಳಿ, ಎಂ.ಬೈರೋ ಗೌಡ, ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು, ೨೦೧೨, ಪು.ಸಂ. ೧೩೫.

೪೭. ಶರ್ಮಾ ಆರ್.ಎಸ್., ಪೂರ್ವೋಕ್ತ, ಪು.ಸಂ. ೧೫೬.

೪೮. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೨೦೦೯, ಪು.ಸಂ. ೧೯೨.

೪೯. ಜಾರ್ಜ್ ಎಂ., ಮೀರಸ್, 'ದಿ ಕದಂಬ ಕುಲ', ಏಷಿಯನ್ ಎಜುಕೇಶನ್ ಸರ್ವಿಸ್, ಮದ್ರಾಸ್, ೧೯೯೦, ಪು.ಸಂ. ೨೮೪

೫೦. ಗೋಪಾಲ್ ಆರ್.(ಸಂ), ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೦೫, ಪು.ಸಂ. ೬೬.

೫೧. ರಾಜಶೇಖರಪ್ಪ ಬಿ., ಇತಿಹಾಸ ಕಥನ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೧, ಪು.ಸಂ. ೩೧

೫೨. ವಿಠಲ ಡಿ. ಪೋತದಾರ, ಪೂರ್ವೋಕ್ತ, ಪು.ಸಂ. ೧೦೪.

೫೩. ಕೃಷ್ಣರಾವ್ ಎಂ.ವಿ., ಪೂರ್ವೋಕ್ತ, ಪು.ಸಂ. ೯೪೮.

೫೪. ಗೋಪಾಲ್ ಆರ್.(ಸಂ), ಪೂರ್ವೋಕ್ತ, ಪು.ಸಂ. ೬೭.

೫೫. ಸ್ವಾಮಿ ಎಲ್.ಎನ್., ದಿ ಮರಿಟೈಮ್ ಕಾಂಟ್ಯಾಕ್ಟ್ಸ್ ಅಲಾಂಗ್ ದಿ ವೆಸ್ಟರ್ನ್ ಇಂಡಿಯಾ (ವಿತ್ ಸ್ಪೆಷಲ್ ರೆಫರೆನ್ಸ್ ಟು ಕರ್ನಾಟಕ) ಕುವೆಂಪು ವಿಶ್ವವಿದ್ಯಾಲಯ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಪು.ಸಂ.೨೬, ೩೦

೫೬. ಮೋಹನ್‌ಕೃಷ್ಣ ರೈ ಕೆ., ಪೂರ್ವೋಕ್ತ, ಪು.ಸಂ. ೩೬–೩೭.

೫೭. ಸೌತ್ ಇಂಡಿಯನ್ ಇನ್ಸ್‌ಸ್ಕ್ರಿಪ್ಷನ್ಸ್, ಸಂ–೧೧, ಪು.ಸಂ.೪

೫೮. ಹಿರೇಮಠ ಬಿ.ಆರ್., ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಪು.ಸಂ. ೭೮.

೫೯. ವಾರ್ಮಿಂಗ್‌ಟನ್, ಪೂರ್ವೋಕ್ತ, ಪು.ಸಂ.೧೪೭

೬೦. ಎ.ಕ, ಸಂ–XI, ದಾವಣಗೆರೆ–೬೧.

೬೧. ಹಿರೇಮಠ ಬಿ.ಆರ್., ಪೂರ್ವೋಕ್ತ, ಪು.ಸಂ. ೭೨.

೬೨. ಮರಿಂಡಲ್ ಜೆ.ಡಬ್ಲ್ಯೂ, ದಿ ಕಾಮರ್ಸ್ ಅ್ಯಂಡ್ ನೇವಿಗೇಶನ್ ಆಫ್ ದಿ ಎರಿತ್ರಿಯನ್ ಸೀ, ಧ್ಯಾಕರ್ ಸ್ಪಿಂಕ್, ಕ್ಯಾಲಿಕಟ್, ೧೮೭೯, ಪು.ಸಂ.೧, ೧೦, ೧೪

೬೩. ಅದೇ, ಪು.ಸಂ.೧೧೨, ೧೧೪

೬೪. ಜ್ಞಾನ ಪ್ರಕಾಶ್ ಬಿ.ಕೆ., ಪ್ರಾಚೀನ ಕರ್ನಾಟಕದಲ್ಲಿ ವ್ಯಾಪಾರ ಮತ್ತು ವಾಣಿಜ್ಯ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೦೫, (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ) ಪು.ಸಂ. ೫೦.

೬೫. ಕುಲಕರ್ಣಿ ಆರ್.ಎಚ್., ಪ್ರೀ ಆ್ಯಂಡ್ ಅರ್ಲಿ ಚಾಲುಕ್ಯ ಆರ್ಟ್ ಇನ್ ಕರ್ನಾಟಕ, ಮೈಸೂರು, ೨೦೦೩, ಪು.ಸಂ.೧೮೩

೬೬. ಕ್ರಿಸ್ಟಿಯನ್ ಕೊಂಜಾ ಕಿ. ಆ್ಯಂಡ್ ಹಂಪಾನಾಗರಾಜಯ್ಯ (ಸಂ), ಕುವಲಯಮಾಲ, ಭಾಗ-೧, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೧, ಪು.ಸಂ.೧೯೯

೬೭. ಗಂಗಾಧರ ಎಂ. ದೊಡ್ಡಮನಿ, ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಪ್ರಮುಖ ರಾಜಧಾನಿ ಪಟ್ಟಣಗಳು: ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೨, (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು.ಸಂ. ೬೦.

೬೮. ರಾಮೇಂದ್ರನಾಥ ನಂದಿ, ಸ್ಟೇಟ್ ಫಾರ್ಮೇಶನ್, ಅಗ್ರೇರಿಯನ್ ಗ್ರೋಥ್ ಆ್ಯಂಡ್ ಸೋಶಿಯಲ್ ಚೇಂಜ್ ಇನ್ ಫ್ಯೂಡಲ್ ಸೌತ್ ಇಂಡಿಯಾ, ಮನೋಹರ್, ನ್ಯೂಡೆಲ್ಲಿ, ೨೦೦೦, ಪು.ಸಂ.೯೫

೬೯. ಎ.ಕ., ಸಂ-XI, ದಾವಣಗೆರೆ, ೧೩೩.

೭೦. ಕರ್ನಾಟಕ ಪರಂಪರೆ ಭಾಗ-೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪು.ಸಂ. ೨೭೨

೭೧. ಶಿವಣ್ಣ ಕೆ.ಎಸ್., "ಆ್ಯನ್ ಆಸ್ಪೆಕ್ಟ್ಸ್ ಆಫ್ ಪೊಲಿಟಿಕಲ್ ಪ್ಯೂಡಲಿಸಂ ಡ್ಯೂರಿಂಗ್ ದಿ ರಾಷ್ಟ್ರಕೂಟ;" ಎ ಪಿರಿಯಡ್ ಇನ್ ದಿ ರಾಷ್ಟ್ರಕೂಟಾಸ್, ಗೋಪಾಲ್ ಬಿ.ಆರ್., (ಸಂ)., ಮೈಸೂರು, ೧೯೯೪, ಪು.ಸಂ.೧೦೭

೭೨. ರಾಮೇಂದ್ರನಾಥ್ ನಂದಿ, ಪೂರ್ವೋಕ್ತ, ಪು.ಸಂ.೯೪

೭೩. ಎ.ಕ., ಸಂ-XI, ದಾವಣಗೆರೆ-೬೬.

೭೪. ಸಾಕಿ, ಮೇಕಿಂಗ್ ಹಿಸ್ಟರಿ, ದಿ ಕರ್ನಾಟಕಾಸ್ ಪೀಪಲ್ ಆ್ಯಂಡ್ ದೇರ್ ಪಾಸ್ಟ್, ಸಂ-೧, ವಿಮುಕ್ತಿ ಪ್ರಕಾಶನ, ಬೆಂಗಳೂರು, ೧೯೯೮, ಪು.ಸಂ.೧೫೦

೭೫. ಚಂಪ್ರಶೇಖರ್ ಎಸ್., ಸುರೇಂದ್ರರಾವ್ ಬಿ., ಹಾಗೂ ಇತರರು, ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು, ಸಂಪುಟ-೪, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೬, ಪು.ಸಂ. ೬.

೭೬. ಎ.ಕ., ಸಂ-XI, ಚಿತ್ರದುರ್ಗ ೭೮.

೭೭. ಶ್ರೀನಿವಾಸ ರಿತ್ತಿ, ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೦, ಪು.ಸಂ. ೨೬.

೭೮. ಜಗದೀಶ್, ವಡ್ಡರಾವುಳ ಮತ್ತು ಹೆರ್ಜುಂಕ ತೆರಿಗೆ-ಒಂದು ಟಿಪ್ಪಣಿ, ಇತಿಹಾಸ ದರ್ಶನ, ಸಂಪುಟ-೨೭, ೨೦೧೨, ಪು.ಸಂ. ೨೮೭, ೨೮೮.

೭೯. ಎ.ಕ., ಸಂ-XI, ಚಿತ್ರದುರ್ಗ ೭೮.

೮೦. ಅದೇ ಜಗಳೂರು-೯.

೮೧. ಹಿರೇಮಠ ಬಿ.ಆರ್., ಪೂರ್ವೋಕ್ತ, ಪು.ಸಂ. ೧೯-೨೦.

೮೨. ಸೀತಾರಾಮ ಜಾಗೀರ್‌ದಾರ್, ಚಿತ್ರದುರ್ಗ ಜಿಲ್ಲೆಯಲ್ಲಿ ರಾಷ್ಟ್ರಕೂಟ ಆಳ್ವಿಕೆ, ಚಂದ್ರವಳ್ಳಿ, ಶ್ರೀನಿವಾಸ್ ಎಂ.ವಿ., ಲಕ್ಷ್ಮಣ್ ತೆಲಗಾವಿ (ಸಂ), ಜಿಲ್ಲಾ ಇತಿಹಾಸ ಸಂಶೋಧನೆ ಮಂಡಲಿ, ಚಿತ್ರದುರ್ಗ, ೧೯೭೬, ಪು.ಸಂ. ೨೬-೨೭,

೮೩. ಸೈಮನ್ ದಿಗ್‌ಬೈ, ದಿ ಮರಿಟೈಮ್ ಟ್ರೇಡ್ ಆಫ್ ಇಂಡಿಯ ತಪನ್ ರಾಯ್ ಚೌದರಿ ಆ್ಯಂಡ್ ಇರ್ಫಾನ್ ಹಬೀಬ್ (ಸಂ)., ದಿ ಕೇಂಬ್ರಿಜ್, ಎಕಾನಾಮಿಕ್ ಹಿಸ್ಟರಿ ಆಫ್ ಇಂಡಿಯಾ, ಸಂ-೧, ಒರಿಯಂಟ್ ಬ್ಲ್ಯಾಕ್ ಸ್ವಾನ್, ನ್ಯೂಡೆಲ್ಲಿ, ೧೯೮೨, ಪು.ಸಂ.೧೨೬

೮೪. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪ ಪು.ಸಂ. ೮೮.

೮೫. ಧರ್ಮಕುಮಾರ್, ದಿ ಕೇಂಬ್ರಿಜ್ ಎಕಾನಾಮಿಕ್ ಹಿಸ್ಟರಿ ಆಫ್ ಇಂಡಿಯಾ, ಸಂ.೨

೮೬. ಅಶಿನ್‌ದಾಸ್ ಗುಪ್ತ, ಪೂರ್ವೋಕ್ತ, ಪು.ಸಂ.೧೬೫

೮೭. ಸಾರ್ಥ ಎಂದರೆ ಶ್ರೇಣಿ ಅಥವಾ ವೃತ್ತಿ ಸಂಘ ಎಂದು ಪ್ರಾಚೀನ ಕಾಲದಲ್ಲಿ ಕರೆಯುತ್ತಿದ್ದರು.

೮೮. ಬಾಶಮ್ ಎ.ಎಲ್., ಪ್ರಾಚೀನ ಭಾರತವೆಂಬ ಅದ್ಭುತ, ಡಿ.ಆರ್. ಮಿರ್ಜಿ (ಅನು), ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೨೦೧೬, ಪು.ಸಂ. ೩೨೦.

೮೯. ಎ.ಕ., ಸಂ-XI, ಜಗಳೂರು ೧೦.

೯೦. ಕನೋಜ್ ಸಾಮ್ರಾಜ್ಯ ಯುಗ, ಸಂಪುಟ-೭, (ಭಾಗ-ಒಂದು) ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೯, ಪು.ಸಂ. ೨೫೯.

೯೧. ಸೌತ್‌ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ (ಎಸ್.ಡಿ.ಡಿ), ಸಂ-೧೬, ಇನ್ಸ್‌ಕ್ರಿಪ್ಷನ್ ನಂಬರ್, ೧೧೨ ಮತ್ತು ವಿಲ್-೨೦, ಇನ್ಸ್‌ಕ್ರಿಪ್ಷನ್ ನಂ.೧೨೨

೯೨. ಇನ್ಸ್‌ಕ್ರಿಪ್ಷನ್ಸ್ ಆಫ್ ಕರ್ನಾಟಕ ಆ್ಯಂಡ್ ಕೊಲ್ಲಾಪುರ ಸ್ಟೇಟ್, ನಂ.೧೫, ಶಿರಸಂಗಿ ತಾ.ಸವದತ್ತಿ

೯೩. ಚಂದ್ರಶೇಖರ್ ಎಸ್., ಪೂರ್ವೋಕ್ತ, ಸಂ. ಪುಟ-೫

೯೪. ಇನ್‌ಸ್ಕ್ರಿಪ್ಷನ್ಸ್ ಆಫ್ ಕರ್ನಾಟಕ ಮತ್ತು ಕೋಲ್ಹಾಪುರ ಸ್ಟೇಟ್ ನಂ. ೧೫, ಶಿರಸಂಗಿ; ತಾ.ಸವದತ್ತಿ.

೯೫. ಜ್ಞಾನಪ್ರಕಾಶ ಬಿ.ಕೆ., ಪೂರ್ವೋಕ್ತ, ಪು.ಸಂ. ೫೯.

೯೬. ಮಂಜುನಾಥ್ ಸಿ.ಯು., ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಚಿತ್ಕಲಾ ಪ್ರಕಾಶನ, ಕುಪ್ಪಂ, ೨೦೧೨, ಪು.ಸಂ. ೪೮೩.

೯೭. ಕೃಷ್ಣರಾವ್ ಎಂ.ವಿ., ಮತ್ತು ಟಿ.ಕೇಶವಭಟ್ಟ ಭಾಗ-೪ ಪುರ್ವೋಕ್ತ, ಪು.ಸಂ.೯೭೮.

೯೮. ಅದೇ. ಪು.ಸಂ. ೯೭೯.

೯೯. ಜ್ಞಾನಪ್ರಕಾಶ್ ಬಿ.ಕೆ., ಪೂರ್ವೋಕ್ತ ಪು.ಸಂ. ೬೪.

೧೦೦. ಶ್ರೀನಿವಾಸ್ ಎಂ.ವಿ., ಪೂರ್ವೋಕ್ತ. ಪು.ಸಂ.೪೩.

೧೦೧. ಮೋಹನ್‌ಕೃಷ್ಣ ರೈ ಕೆ., ಪೂರ್ವೋಕ್ತ ಪು.ಸಂ. ೨೮.

೧೦೨. ಎ.ಕ. ಸಂ-XI, ಹೊಳಲ್ಕೆರೆ, ೧೩-೧೪.

೧೦೩. ಎ.ಕ. ಸಂ-XI, ದಾವಣಗೆರೆ, ೧೩೩

೧೦೪. ಎ.ಕ. ಸಂ-XI, ಚಿತ್ರದುರ್ಗ ೩೪.

೧೦೫. ಹಿರೇಮಠ ಬಿ.ಆರ್., ಪೂರ್ವೋಕ್ತ ಪು.ಸಂ. ೧೦೬.

೧೦೬. ಅಪ್ಪಾದೊರೈ ಎ., ಎಕಾನಾಮಿಕ್ ಕಂಡೀಶನ್ಸ್ ಇನ್ ಸದರನ್ ಇಂಡಿಯಾ, ಮದ್ರಾಸ್ ವಿಶ್ವವಿದ್ಯಾಲಯ, ೧೯೩೬, ಪು.ಸಂ.೫೦೨೧

೧೦೭. ಕುಪ್ಪಸ್ವಾಮಿ ಜಿ.ಆರ್., ಎಕಾನಾಮಿಕ್ ಕಂಡೀಶನ್ಸ್ ಆಫ್ ಕರ್ನಾಟಕ, ೯೭೩-೧೩೩೬, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫, ಪು.ಸಂ.೯೫

೧೦೮. ದೀಕ್ಷಿತ್ ಜಿ.ಎಸ್., ಲೋಕಲ್ ಸೆಲ್ಫ ಗೌವರ್ನ್‌ಮೆಂಟ್ ಇನ್ ಮಿಡಿವಲ್ ಕರ್ನಾಟಕ, ಧಾರವಾಡ, ೧೯೬೪, ಪು.ಸಂ.೧೪೦

೧೦೯. ಶ್ರೀನಿವಾಸ್ ಎಂ.ವಿ., ಪೂರ್ವೋಕ್ತ ಪು.ಸಂ. ೪೬.

೧೧೦. ಎ.ಕ. ಸಂಪುಟ-XI, ದಾವಣಗೆರೆ-೧೦೫

೧೧೧. ಶ್ರೀಲತೆ, ಚಿತ್ರದುರ್ಗ ಜಿಲ್ಲೆಯಲ್ಲಿ ಹೊಯ್ಸಳರ ಆಳ್ವಿಕೆ, ಚಂದ್ರವಳ್ಳಿ, ಪೂರ್ವೋಕ್ತ ಪು.ಸಂ.೪೭.

೧೧೨. ಎ.ಕ. ಸಂ-XI, ಹೊಲಲ್ಕೆರೆ-೫೬.

೧೧೩. ಮಲ್ಲಿಕಾರ್ಜುನ. ಕೆ., ಇತರರು, ಡಾ. ಬಿ.ಆರ್, ಹಿರೇಮಠರ ಶಾಸನ ಅಧ್ಯಯನ, ಪ್ರಸಾರಾಂಗ ಕನ್ನಡ. ವಿಶ್ವವಿದ್ಯಾಲಯ, ಹಂಪಿ, ೨೦೧೨, ಪು.ಸಂ. ೧೩೭.

೧೧೪. ಎ.ಕ. ಸಂ-XI, ಹೊಳಲ್ಕೆರೆ-೧೨೧.

೧೧೫. ಮಲ್ಲಿಕಾರ್ಜುನ ಕೆ., ಪೂರ್ವೋಕ್ತ ಪು.ಸಂ.೧೮೪-೮೫.

೧೧೬. ಅದೇ ಪು.ಸಂ. ೧೨೯.

೧೧೭. ಹನುಮನಾಯಕ, ಹೊಯ್ಸಳರ ಕಾಲದಲ್ಲಿ ನಗರೀಕರಣ ಪ್ರಕ್ರಿಯೆ. ಕಳಿಕಟ್ಟೆ ಒಂದು ವಿಶ್ಲೇಷಣೆ. ಇತಿಹಾಸ ದರ್ಶನ, ಸಂ.೧೩, ೧೯೯೮, ಪು.ಸಂ. ೨೦೫.

೧೧೮. ಮೋಹನ್‌ಕೃಷ್ಣ ರೈ ಕೆ., ವಸಾಹತು ಪೂರ್ವ ಕರ್ನಾಟಕದ ನಗರ ಚರಿತ್ರೆ, ಪೂರ್ವೋಕ್ತ ಪು.ಸಂ.೨೮.

೧೧೯. ಅದೇ ಪು.ಸಂ.೨೯.

೧೨೦. ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ ಪು.ಸಂ. ೧೧೪೬

೧೨೧. ಶ್ರೀಲತೆ, ಪೂರ್ವೋಕ್ತ ಪು.ಸಂ.೪೫.

೧೨೨. ಎ.ಕ.ಸಂ-IV, ತಲಕಾಡು-೪೫.

೧೨೩. ಷೇಕ್ ಅಲಿ. ಬಿ. (ಪ್ರ.ಸಂ.) ಕರ್ನಾಟಕ ಚರಿತ್ರೆ ಸಂಪುಟ-೪, ೧೯೯೭, ಪು.ಸಂ. ೨೦೩.

೧೨೪. ನಾಗೇಂದ್ರ ಇ.ರಾವ್, ಕ್ರಾಫ್ಟ್ ಪ್ರೊಡಕ್ಷನ್ ಆ್ಯಂಡ್ ಟ್ರೇಡ್ ಇನ್ ಸೌತ್ ಕೆನರಾ, ಗ್ಯಾನ್ ಪಬ್ಲಿಶಿಂಗ್ ಹೌಸ್, ನ್ಯೂಡೆಲ್ಲಿ, ೨೦೦೬, ಪು.ಸಂ.೯೭

೧೨೫. ಎ.ಕ. ಸಂ-V, ಅರಸೀಕೆರೆ-೨೨

೧೨೬. ದೇವರ ಕೊಂಡಾರೆಡ್ಡಿ, ಚಿತ್ರದುರ್ಗ ಜಿಲ್ಲೆಯ ವಾಣಿಜ್ಯ-ವ್ಯಾಪಾರ ಮತ್ತು ಗಣಿಗಾರಿಕೆ, ಗೋಪಾಲ್ ಬಿ.ಆರ್.(ಸಂ), ಪೂರ್ವೋಕ್ತ, ಪು.ಸಂ. ೨೬೦.

೧೨೭. ಬರ್ಟನ್ ಸ್ಟೈನ್, ವಿಜಯನಗರ (೧೩೫೦-೧೫೬೪) ತಪನ್ ರಾಯ್‌ಚೌದರಿ, ಪೂರ್ವೋಕ್ತ, ಪು.ಸಂ.೧೧೭

೧೨೮. ಶ್ರೀನಿವಾಸ ಹಾವನೂರ (ಸಂ), ಮಧ್ಯಕಾಲೀನ ಕರ್ನಾಟಕ, ಪ್ರಸಾರಾಂಗ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು, ೨೦೦೮, ಪು.ಸಂ. ೯೪-೯೫.

೧೨೯. ಮಹೇಶ್.ಜಿ., ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳು- ಒಂದು ಅಧ್ಯಯನ (೧೩೩೬-೧೫೬೫), ಮೈಸೂರು ವಿ.ವಿ. ಮೈಸೂರು, (ಅಪ್ರಕಟ ಪಿಎಚ್.ಡಿ ಮಹಾಪ್ರಬಂಧ) ೨೦೧೩, ಪು.ಸಂ. ೨೩೪.

೧೩೦. ಶ್ರೀನಿವಾಸ್ ಹಾವನೂರು, ಪೂರ್ವೋಕ್ತ, ಪು.ಸಂ.೬೯.

೧೩೧. ಷೇಕ್ ಆಲಿ ಬಿ. (ಸಂ) ಕರ್ನಾಟಕ ಚರಿತ್ರೆ ಸಂಪುಟ-೫, ಪೂರ್ವೋಕ್ತ, ಪು.ಸಂ.೨೧೩.

೧೩೨. ಹಿರೇಮಠ ಬಿ.ಆರ್., ಪೂರ್ವೋಕ್ತ, ಪು.ಸಂ. ೧೯-೭೦

೧೩೩. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ ಮೈಸೂರು. ವಿಶ್ವವಿದ್ಯಾಲಯ, ಮೈಸೂರು, ೧೯೭೦, ಪು.ಸಂ. ೩೮೫.

೧೩೪. ಬಾರಿ ಎಸ್.ಎ., ಶ್ರೇಣಿಗಳು: ವಿಜಯನಗರ ಕಾಲದಲ್ಲಿ, ಲಕ್ಷ್ಮಣ್ ತೆಲಗಾವಿ (ಸಂ), ಹರತಿಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭, ಪು.ಸಂ. ೪೪೦.

೧೩೫. ಅದೇ. ಪು.ಸಂ.೪೪೧.

೧೩೬. ಎ.ಕ. ಸಂ-V, ಬೇಲೂರು-೭೫.

೧೩೭. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ ವಾಲ್ಯುಮ್ VII- ೧೯೬

೧೩೮. ಎ.ಕ. ಸಂ-V, ಅರಕಲುಗೂಡು-೨೨.

೧೩೯. ಬಾರಿ ಎಸ್.ಎ., ಪೂರ್ವೋಕ್ತ, ಪು.ಸಂ. ೪೪೨.

೧೪೦. ಮೋಹನ್‌ಕೃಷ್ಣ ರೈ ಕೆ., ಪೂರ್ವೋಕ್ತ ಪು.ಸಂ. ೩೦.

೧೪೧. ಮಲ್ಲಿಕಾರ್ಜುನ ಕೆ., ಪೂರ್ವೋಕ್ತ, ಪು.ಸಂ. ೧೩೫.

೧೪೨. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್, ಸಂ-VII, ನಂಬರ್-೧೯೬

ಅಧ್ಯಾಯ – ಐದು

# ನಾಯಕರ ಕಾಲದ ಕೃಷಿ ಸಂಬಂಧಗಳು

೫.೧. ನಾಯಕರ ಕೃಷಿ ನೀತಿ

೫.೨. ಭೂ ಹಿಡುವಳಿ ವ್ಯವಸ್ಥೆ

೫.೩. ಭೂ ಮಾಲೀಕರು ಮತ್ತು ಅಧಿಕಾರ ರಚನೆ

೫.೪. ಕೃಷಿ ಭೂಮಿಯ ವರ್ಗೀಕರಣ

೫.೫. ನೀರಾವರಿ ವ್ಯವಸ್ಥೆ

೫.೬. ಕೃಷಿ ಉತ್ಪನ್ನಗಳು

೫.೭. ಭೂ ಕಂದಾಯ ವ್ಯವಸ್ಥೆ

೫.೮. ಬಿಟ್ಟಿ ಸೇವೆ

## ಅಧ್ಯಾಯ – ಐದು

# ನಾಯಕರ ಕಾಲದ ಕೃಷಿ ಸಂಬಂಧಗಳು

### ೫.೧. ನಾಯಕರ ಕೃಷಿ ನೀತಿ

ಕರ್ನಾಟಕವು ಯುರೋಪ್‌ನ ದೇಶಗಳೊಂದಿಗೆ ಸಮುದ್ರ ವ್ಯಾಪಾರ ವ್ಯವಹಾರಗಳಿಗೆ ಸಂಬಂಧಿಸಿದಂತೆ ನಿರಂತರ ಸಂಪರ್ಕದಲ್ಲಿತ್ತು. ಕ್ರಿಸ್ತಪೂರ್ವದ ನಾಲ್ಕೈದು ಶತಮಾನಗಳಿಂದ ಇರುವ ಈ ಸಂಪರ್ಕಗಳು ಲಿಖಿತ ದಾಖಲೆಗಳಲ್ಲಿ ಅಭಿವ್ಯಕ್ತಗೊಂಡಿವೆ. ರೋಮ್, ಗ್ರೀಸ್ ಮೊದಲಾದ ದೇಶಗಳ ಸಾಹಸಮಯ ಸಮುದ್ರ ವ್ಯಾಪಾರಿಗಳು ಸಾಧಾರಣ ಗಾತ್ರದ ನೌಕೆಗಳೊಂದಿಗೆ ಕೆಂಪು ಸಮುದ್ರವನ್ನು ಬಳಸಿಕೊಂಡು ಮಲಬಾರ್ ತೀರದೊಂದಿಗೆ ಸಾಂಬಾರು ಮತ್ತಿತರೆ ವಸ್ತುಗಳ ವ್ಯಾಪಾರ, ವ್ಯವಹಾರ ನಡೆಸುತ್ತಿದ್ದರು. ವೆನಿಷಿಯಾ ಮತ್ತು ಈಜಿಪ್ಟ್ ದೇಶಗಳ ವ್ಯಾಪಾರ ಸಮುದಾಯವು ದೀರ್ಘ ಕಾಲದವರೆಗೆ ಭಾರತದೊಂದಿಗೆ ವ್ಯಾಪಾರ ವ್ಯವಹಾರಗಳಲ್ಲಿ ತೊಡಗಿಸಿಕೊಂಡು ಏಕಸ್ವಾಮತ್ಯತೆಯ ಫಲವನ್ನು, ಸೌಲಭ್ಯಗಳನ್ನು, ಅವಕಾಶಗಳನ್ನು, ಅನುಭವಿಸುತ್ತಿದ್ದರು. ಇದಕ್ಕಿಂತಲೂ ಮೊದಲು ಅಲೆಗ್ಸಾಂಡರ್ ಭಾರತಕ್ಕೆ ದಂಡೆತ್ತಿ ಬಂದ ನಂತರ ಯುರೋಪ್ ರಾಷ್ಟ್ರಗಳು ಭಾರತದೊಂದಿಗೆ ನೇರ ಸಂಪರ್ಕವನ್ನು ಸಾಧಿಸಿದ್ದವು. ಈಜಿಪ್ಟ್ ಭೌಗೋಳಿಕವಾಗಿ ಭಾರತ ಮತ್ತು ಯುರೋಪ್ ದೇಶಗಳ ಸಂಪರ್ಕದ ಕೊಂಡಿಯಲ್ಲಿ 'ಮಧ್ಯ ಬಿಂದು'ವಾಗಿದ್ದ ಹಿನ್ನೆಲೆಯಲ್ಲಿ ಅತ್ಯಂತ ಸಹಜವಾಗಿ ಯುರೋಪ್ ರಾಷ್ಟ್ರಗಳಲ್ಲೇ ಉನ್ನತ ಮಟ್ಟದ ಸ್ಥಾನವನ್ನು ಹೊಂದಿತ್ತು.[೧] ಈ ಹಿನ್ನೆಲೆಯಲ್ಲಿ ಕ್ರಿಸ್ತಪೂರ್ವ ಕಾಲದಿಂದಲೂ ಭಾರತ ಮತ್ತು ಮೆಡಿಟರೇನಿಯನ್ ದೇಶಗಳ ಮಧ್ಯೆ ಚಾಲ್ತಿಯಲ್ಲಿದ್ದ ಮೂರು ಪ್ರಮುಖ ಮಾರ್ಗಗಳ ಬಗ್ಗೆ ಗಮನಹರಿಸಲಾಗಿದೆ. ಈ ಮಾರ್ಗಗಳ ಮೂಲಕ ಕೃಷಿ ಉತ್ಪನ್ನಗಳ ಸಾಗಾಟ ಮತ್ತು ವಾಣಿಜ್ಯದ ಪ್ರಮುಖ ಮಾರ್ಗಗಳನ್ನು ಸೂಚಿಸಲಾಗಿದೆ.

ಒಂದನೆಯ ಮಾರ್ಗ: ಅರಲ್ (Aral) ಮತ್ತು ಕಾಸ್ಪಿಯನ್ ಸಮುದ್ರವನ್ನು ಕ್ರಮಿಸಿ ಕಪ್ಪು ಸಮುದ್ರವನ್ನು ತಲುಪುತ್ತಿತ್ತು. ಅಲ್ಲಿಂದ ಕಾನ್‌ಸ್ಟಾಂಟಿನೋಪಲ್‌ಗೆ ಸುಲಭವಾಗಿ ತಲುಪಬಹುದಿತ್ತು. ಆನಂತರ ವ್ಯಾಪಾರಿಗಳು ಸರಕು ಸರಂಜಾಮುಗಳನ್ನು ಮೆಡಿಟರೇನಿಯನ್ ದೇಶಗಳಿಗೆ ಕೊಂಡೊಯ್ಯುತ್ತಿದ್ದರು.

ಎರಡನೆಯ ಮಾರ್ಗ: ಮೆಸಪಟೋಮಿಯಾ ಮತ್ತು ಸಿರಿಯಾ ದೇಶದ ಮರುಭೂಮಿಯನ್ನು ಕ್ರಮಿಸಿ ಡೆಮಾಸ್ಕಾಸ್‌ನ್ನು ತಲುಪುತ್ತಿತ್ತು. ವ್ಯಾಪಾರಿಗಳು ಅಲ್ಲಿಂದ ಒಂಟೆಗಳ ಸಹಾಯದಿಂದ 'ಲೇವೆಂಟ್' ಎಂಬ ಪ್ರದೇಶವನ್ನು ತಲುಪುತ್ತಿದ್ದರು.

ಮೂರನೆಯ ಮಾರ್ಗ: ಭಾರತದ ಪಶ್ಚಿಮ ಕರಾವಳಿಯಿಂದ ಆರಂಭಗೊಂಡು ಕೆಂಪು ಸಮುದ್ರ ತೀರದ ಬಂದರುಗಳ ಪ್ರಮುಖ ಸರಹದ್ದನ್ನು ತಲುಪುತ್ತಿತ್ತು. ವ್ಯಾಪಾರಿಗಳು ಅಲ್ಲಿಂದ ಬಂದು ಒಂಟೆಗಳ ಮುಖಾಂತರ ಈಜಿಪ್ಟ್‌ನ್ನು ತಲುಪುತ್ತಿದ್ದರು.[3]

ಮೇಲ್ಕಂಡ ಚಾರಿತ್ರಿಕ ವ್ಯಾಪಾರ ಮಾರ್ಗಗಳ ಸ್ವರೂಪವನ್ನು ವಿಶ್ಲೇಷಿಸಿದಾಗ ಯುರೋಪ್ ದೇಶಗಳೊಂದಿಗಿನ ವ್ಯಾಪಾರ ಆ ಸಮಯದಲ್ಲಿ ಬಹು ಪ್ರತಿಷ್ಠೆಯ ವಿಷಯವಾಗಿತ್ತು ಎನ್ನುವ ಅಂಶ ತಿಳಿದುಬರುತ್ತದೆ. ಸಹಜವಾಗಿಯೇ ಕಾನ್‌ಸ್ಟಾಂಟಿನೋಪಲ್, ಈಜಿಪ್ಟ್, ವೆನಿಸ್, ಜಿನೇವಾ ಇವುಗಳು ಅಂತರಾಷ್ಟ್ರೀಯ ವ್ಯಾಪಾರ-ವ್ಯವಹಾರಗಳ ಆಯಕಟ್ಟಿನ ಕೇಂದ್ರಗಳಾಗಿ ರೂಪಿತಗೊಂಡು ಪ್ರತಿಷ್ಠಿತ ಸ್ಥಾನಮಾನವನ್ನು ಹೊಂದಿದ್ದವು. ಅರ್ಥಾತ್ ಅವು ಪ್ರತಿಷ್ಠೆ ಸಂಪತ್ತುಗಳ ಶೃಂಗಬಿಂದುವಾಗಿದ್ದವು. ಈ ಕೇಂದ್ರಗಳ ಹತೋಟಿಗಾಗಿ ಯುರೋಪ್‌ನ ರಾಜಮನೆತನಗಳು ತಮ್ಮ ತಮ್ಮಲ್ಲೇ ಸ್ಪರ್ಧೆಯನ್ನು ಹೊಂದಿದ್ದವು. ಈ ಸ್ಪರ್ಧೆಯ ಸ್ವರೂಪಗಳನ್ನು ವಾಣಿಜ್ಯದ ದೃಷ್ಟಿಕೋನದಲ್ಲಿ ಎರಡು ಪ್ರಮುಖ ಹಂತಗಳಲ್ಲಿ ಗುರುತಿಸಬಹುದು.

ಒಂದನೆಯ ಹಂತ: ಎಂಟನೇ ಶತಮಾನದಲ್ಲಿ ಈಜಿಪ್ಟ್ ಇಸ್ಲಾಂ ಧರ್ಮದ ರಾಜಮನೆತನದ ಆಳ್ವಿಕೆಗೆ ಒಳಪಡುವ ಮೂಲಕ ಯುರೋಪ್ ಮತ್ತು ಇತರೆ ರಾಷ್ಟ್ರಗಳೊಂದಿಗೆ ಈಜಿಪ್ಟ್ ಆಧರಿಸಿ ನಡೆಯುತ್ತಿದ್ದ ಮುಕ್ತ ವ್ಯಾಪಾರಕ್ಕೆ ತಡೆಯುಂಟಾಯಿತು. ಈ ಕೇಂದ್ರ (ಈಜಿಪ್ಟ್) ಆಧರಿತ ಸಮುದ್ರ ವ್ಯಾಪಾರಗಳೆಲ್ಲವೂ ಮಹಮ್ಮದೀಯರ ಪಾಲಾಯಿತು.[4] ಪರಿಣಾಮವಾಗಿ ಅಂತರಾಷ್ಟ್ರೀಯ ವ್ಯಾಪಾರದಲ್ಲಿ ಈ ಮೊದಲಿದ್ದ ಬಿರುಸಿನ ವ್ಯಾಪಾರ ವ್ಯವಹಾರಗಳು ಕಂಡು ಬರಲಿಲ್ಲ. ಮಂದಗತಿಯ ವ್ಯಾಪಾರ ವ್ಯವಹಾರಗಳು ನಡೆಯುತ್ತಿದ್ದವು. ಕಾನ್‌ಸ್ಟಾಂಟಿನೋಪಲ್ ಅನಿವಾರ್ಯವಾಗಿ ಸಮುದ್ರ ವ್ಯಾಪಾರ ಮಾರ್ಗದ ಹೊಸ ಮಧ್ಯಾಂತರ ಕೇಂದ್ರವಾಗಿ ಪ್ರವರ್ಧಮಾನಕ್ಕೆ ಬಂತು. ಈ ಕಾಲಘಟ್ಟದಲ್ಲಿ ವ್ಯಾಪಾರ ಕೇಂದ್ರೀಕೃತ ಸ್ಪರ್ಧಾತ್ಮಕ ಪೈಪೋಟಿಯಲ್ಲಿ ಟರ್ಕರು ಯಶಸ್ಸನ್ನು ಸಾಧಿಸಿ ಕಾನ್‌ಸ್ಟಾಂಟಿನೋಪಲ್‌ನ್ನು ತಮ್ಮ ಕೈವಶಪಡಿಸಿಕೊಂಡರು.[4] ಸಹಜವಾಗಿಯೇ ಕ್ರಿಶ್ಚಿಯನ್ ಸಮುದಾಯದ ಯುರೋಪಿಯನ್ ವ್ಯಾಪಾರಿಗಳಿಗೆ ಮೆಡಿಟರೇನಿಯನ್ ಮಾರ್ಗದ ಮೂಲಕ ವ್ಯಾಪಾರ-ವ್ಯವಹಾರ ನಡೆಸುವುದು ಅಸಾಧ್ಯವಾಯಿತು.[5]

ಎರಡನೇ ಹಂತ: ಯುರೋಪಿನಾದ್ಯಂತ ಏಷ್ಯಾ ಖಂಡದ ಸಾಂಬಾರು ಪದಾರ್ಥಗಳಿಗೆ ಹಾಗೂ ಇನ್ನಿತರ ವಸ್ತುಗಳಿಗೆ ಬಹಳಷ್ಟು ಬೇಡಿಕೆ ಇತ್ತು. ಆದರೆ ಈ ಬೇಡಿಕೆ ಪೂರೈಸಲು ಕ್ರಿಶ್ಚಿಯನ್ ಸಮುದಾಯದ ವ್ಯಾಪಾರಿಗಳಿಗೆ ನೇರ ಮಾರ್ಗದ ಸೌಲಭ್ಯವಿಲ್ಲದೆ ತಡೆಹಿಡಿಯಲ್ಪಟ್ಟಿತ್ತು. ಇದು ಯುರೋಪ್ ರಾಷ್ಟ್ರಗಳ ರಾಜಮನೆತನಗಳಿಗೆ ಮತ್ತು ವ್ಯಾಪಾರಿ ಸಮುದಾಯಗಳಿಗೆ ಒಂದು ಗಂಭೀರ ಸವಾಲಾಗಿ ಕಾಡಿತ್ತು. ಯುರೋಪಿಯನ್ ರಾಜರುಗಳಿಗೆ ವಿವಿಧ ವಲಯಗಳಿಂದ ಈ ಬಗ್ಗೆ ಒತ್ತಡ, ಸಹಾಯ, ಸಹಕಾರಗಳು ಮೂರ್ತ ರೂಪಗೊಂಡು ಹೇಗಾದರೂ ಮಾಡಿ 'ಮೆಡಿಟರೇನಿಯನ್' ಹೊರತುಪಡಿಸಿ ಹೊಸ ಸಮುದ್ರ ಮಾರ್ಗವನ್ನು ಭಾರತಕ್ಕೆ ಕಂಡು ಹಿಡಿಯಲೇಬೇಕೆಂಬ ಪ್ರಬಲ ಅಭಿಲಾಷೆ ಯುರೋಪಿನಾದ್ಯಂತ ಕಂಡುಬಂದಿತು.

ಒಂದೆಡೆಯಲ್ಲಿ ಸರಕು ಸರಂಜಾಮುಗಳಿಗೆ ಹೆಚ್ಚುತ್ತಿರುವ ಬೇಡಿಕೆ, ಮತ್ತೊಂದೆಡೆಯಲ್ಲಿ ಅದನ್ನು ಸಮರ್ಪಕವಾಗಿ ಪೂರೈಸುವ ವ್ಯಾಪಾರಿ ಮಾರ್ಗಕ್ಕೆ ಇದ್ದ ಗಂಭೀರ ಅಡಚಣೆ. ಇವುಗಳೆಲ್ಲವೂ ಏಕಾತ್ಮಕವಾಗಿ ಒಂದು ಗಂಭೀರ ರಾಜಕೀಯ ಮತ್ತು ವಾಣಿಜ್ಯಾತ್ಮಕ ಸವಾಲನ್ನು ಯುರೋಪ್‌ನ ರಾಜಪ್ರಭುತ್ವ ಮತ್ತು ವ್ಯಾಪಾರಿ ಸಮುದಾಯಕ್ಕೆ ಎದುರಾದಾಗ ಅದನ್ನು ಧೈರ್ಯವಾಗಿ ಸ್ವೀಕರಿಸಿ, ಕಾರ್ಯಪ್ರವೃತ್ತರಾದ ರಾಷ್ಟ್ರಗಳಲ್ಲಿ ಪೋರ್ಚುಗಲ್ ದೇಶವೇ ಮೊದಲನೆಯದು ಪೋರ್ಚುಗಲ್ ಈ ರೀತಿಯ ವೈಶಿಷ್ಟ್ಯಮಯ, ಸಾಹಸಮಯ ತಿರುವುಗಳಿಗೆ ಎದೆಯೊಡ್ಡಿದ ದೇಶವಾಗಿದೆ. ಆರ್.ಎಸ್. ವೈಟ್‌ವೇರವರು ಈ ರೀತಿ ಗುರುತಿಸಿರುತ್ತಾರೆ:

"ಪೋರ್ಚುಗಲ್ ಮತ್ತು ಯುರೋಪಿಯನ್ ರಾಷ್ಟ್ರಗಳಿಗೆ ಆಫ್ರಿಕಾ ಮೂಲದಿಂದ ಜಲಮಾರ್ಗವನ್ನು ಶೋಧಿಸಿದ್ದು, ಆಫ್ರಿಕಾವನ್ನು ಬಳಸಿ ಭಾರತಕ್ಕೆ ಬರಬೇಕಾದರೆ ದೀರ್ಘ ಸಮಯ ಬೇಕಾಗುತ್ತಿತ್ತು. ಈ ಪ್ರಕ್ರಿಯೆಗೆ Doubling the cape ಎನ್ನುತ್ತಾರೆ. ಇದರ ಅರ್ಥ ಕೇಪ್ ಆಫ್ ಗುಡ್‌ಹೋಪ್[೬] ಭೂಶಿರದ ಮುಖಾಂತರ ಸಾಗುವುದು ಎಂಬುದಾಗಿದೆ. ೧೫ನೇ ಶತಮಾನದಲ್ಲಿ ಇದು ಕೂಡ ಕಷ್ಟಕರವಾಗಿತ್ತು. ಒಂದು ನೂರು ಟನ್ನಿಗಿಂತ ಕಡಿಮೆ ಭಾರದ ಹಡಗುಗಳಿಗೆ ಇದು ಅಸಾಧ್ಯವೇ ಆಗಿತ್ತು. ಪೋರ್ಚುಗಲ್ ದೇಶದ 'ಸರ್ ಬಾರ್ಥೇಲೋಮಿಯೋ ಡಯಾಸ್' ಇದನ್ನು ಸುಲಭ ಸಾಧ್ಯ ಮಾಡಿದನು."

ಸರಿ ಸುಮಾರು ನೂರು ವರ್ಷಗಳ ನಿರಂತರ ಪ್ರಯತ್ನದ ಫಲವಾಗಿ ಭಾರತಕ್ಕೆ ಹೊಸ ಸಮುದ್ರ ಮಾರ್ಗವನ್ನು ಪೋರ್ಚುಗೀಸರು ಕಂಡುಹಿಡಿದರು. ಈಜಿಪ್ಟ್, ವೆನಿಷಿಯನ್ ಮತ್ತು ಅರಬ್ ವ್ಯಾಪಾರಿಗಳಿಂದ ಭಾರತದ ವಾಣಿಜ್ಯ ವ್ಯಾಪಾರಗಳನ್ನು ತನ್ನ ಕೈವಶ ಪಡಿಸಿಕೊಳ್ಳಬೇಕೆಂಬ ಪೋರ್ಚುಗೀಸರ ಮಹತ್ವಾಕಾಂಕ್ಷೆಯ ಯೋಜನೆಯು ೧೪೯೮ರಲ್ಲಿ ವಾಸ್ಕೋಡಗಾಮನ ಹಡಗುಗಳು ಕಲ್ಲಿಕೋಟೆಯಲ್ಲಿ ಇಳಿದಾಗ ಈಡೇರಿಸಲ್ಪಟ್ಟಿತ್ತು. ಕಲ್ಲಿಕೋಟೆಯಲ್ಲಿ ಅವನ ತಂಡ ನಡೆಸಿದ ಆಕ್ರಮಣಕಾರಿ ಧೋರಣೆಗಳು ಹಾಗೂ ಮರು ಪ್ರಯಾಣದ ಸಂದರ್ಭದಲ್ಲಿ ಕರಾವಳಿ ಕರ್ನಾಟಕದಲ್ಲಿ ತೋರಿದ ವ್ಯಾಪಾರ ಮನೋಭಾವದ ಆಕ್ರಮಣಕಾರಿ ಘಟನೆಗಳನ್ನು ಇಲ್ಲಿ ವಿವರಿಸಲಾಗಿದೆ. ಈ ನಿರ್ಣಯದ ಯಶಸ್ಸನ್ನು ಸಂಪೂರ್ಣವಾಗಿ ಅನುಭವಿಸುವ ಉದ್ದೇಶದಿಂದ 'ಪೋರ್ಚುಗಲ್ ರಾಜಪ್ರಭುತ್ವ' ಪೂರ್ವದ ದೇಶಗಳ ಬಗ್ಗೆ ನಿರ್ದಿಷ್ಟ ಧೋರಣೆಯನ್ನು ರೂಪೀಕರಣ ಮಾಡಿತು. ಈ ಧೋರಣೆಯ ಒಟ್ಟಾರೆ ದೃಷ್ಟಿಕೋನ ಪೂರ್ವ ರಾಷ್ಟ್ರಗಳ ವ್ಯಾಪಾರ–ವ್ಯವಹಾರವನ್ನು ಸರಿಯಾದ ರೀತಿಯಲ್ಲಿ ಸಂರಕ್ಷಿಸಲು ಶಾಂತಿಯ ಸೂತ್ರದ ಬದಲು ಸೈನ್ಯದ ಅಗತ್ಯವಿದೆ ಎಂದು ಪ್ರತಿಪಾದಿಸುವುದು. ಇದೇ ರೀತಿ ಹೊಸ ಪ್ರದೇಶದ ಜನರನ್ನು ಕ್ರೈಸ್ತ ಮತಾವಲಂಬಿಗಳನ್ನಾಗಿಸಲು ಪೋರ್ಚುಗಲ್ ಪ್ರಭುತ್ವ ಕ್ರೈಸ್ತ ಧರ್ಮಗುರುಗಳನ್ನು ಹಡಗಿನಲ್ಲಿ ಕಳುಹಿಸಬೇಕೆಂದು ನಿರ್ಧರಿಸಿತು. ಆ ಪ್ರಕಾರ ಮಾರ್ಚ್ ೯, ೧೫೦೦ರಲ್ಲಿ 'ಪೆಡ್ರೋ ಅಲ್ವರೀಸ್ ಕ್ಯಾಬ್ರೆಲ್' ಕಮಾಂಡರ್ ಆಗಿರುವ ಎರಡನೆಯ ನೌಕಾಯಾನದಲ್ಲಿ ೧೩ ದೊಡ್ಡ ಗಾತ್ರದ ಹಡಗುಗಳಿದ್ದವು. ೧೨೦೦ ಯುದ್ಧ ಸೈನಿಕರೊಂದಿಗೆ ೮ ಮಂದಿ ಫ್ರಾನ್ಸಿಸ್‌ಯನ್‌ಗಳು,[೭] ೮ ಮಂದಿ ಧರ್ಮಗುರುಗಳು ಮತ್ತು ಓರ್ವ 'ವಿಕಾರ್'[೮] ಕೂಡಾ ಇದ್ದರು. ಈ ನೌಕಾಯಾನ ಖಡ್ಗದ ಅಲಗು, ತಕ್ಕಡಿ ಮತ್ತು ಕ್ರೈಸ್ತ ಧರ್ಮದ ಸಂಕೇತವಾದ ಶಿಲುಬೆಯ ಸಮ್ಮಿಶ್ರಣದೊಂದಿಗೆ ಭಾರತಕ್ಕೆ ಪ್ರಯಾಣ ಬೆಳೆಸಿತು. ಆದುದರಿಂದ ಈ ಎರಡನೇ ನೌಕಾಯಾನ ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕ ಸಂಘರ್ಷಗಳ ಪ್ರಕ್ರಿಯೆಗೆ

ನಾಂದಿ ಹಾಡಿತು. ಈ ನೌಕಾಯಾನ ಭಾರತ ಪಶ್ಚಿಮ ಕರಾವಳಿಗೆ ಬಂದಿಳಿದು ವ್ಯಾಪಾರ ಮತ್ತು ಧಾರ್ಮಿಕತೆಗಾಗಿ ನೇರ ಸೈನಿಕ ಕಾರ್ಯಾಚರಣೆಗೆ ಇಳಿಯದೆ ಕರಾವಳಿ ಕರ್ನಾಟಕ ಮತ್ತು ಕಲ್ಲಿಕೋಟೆಯ ಜಾಮೋರಿನ್‌ಗೆ ಪರೋಕ್ಷವಾಗಿ ಪೋರ್ಚುಗಲ್ಲಿನೊಂದಿಗೆ ಸಹಕರಿಸಬೇಕೆಂಬ ಸಂದೇಶವನ್ನು ರವಾನಿಸಿತು.

ಇದೇ ಸ್ವರೂಪದಲ್ಲಿ ಪೋರ್ಚುಗೀಸರ ಮೂರನೆಯ ನೌಕಾಯಾನ ಮಾರ್ಚ್ ತಿಂಗಳ ೧೫೦೧ರಲ್ಲಿ ಆರಂಭವಾಯಿತು. ಇದರಲ್ಲಿ ಒಂದು ದೊಡ್ಡ ಹಡಗು, ನಾಲ್ಕು ಸಾಧಾರಣ ಗಾತ್ರದ ಹಡಗುಗಳು ಇದ್ದವು. ಇದರ ಕಮಾಂಡರ್ ಆಗಿ ಜಾವ್ರೋ ಡಿ ನೋವಾ ಇದ್ದನು. ಭಾರತಕ್ಕೆ ಕಳುಹಿಸುವ ಈ ನೌಕಾಯಾನದಿಂದ ಲಭಿಸುವ ಅಪಾರ ಆದಾಯವನ್ನು ಪರಿಗಣಿಸಿದ ಪೋರ್ಚುಗಲ್ ದೊರೆ ನಿಯಮಿತವಾಗಿ ಪ್ರತೀ ವರ್ಷ ನೌಕಾಯಾನ ತಂಡವನ್ನು ರೂಪಿಸಿ ಭಾರತಕ್ಕೆ ಕಳುಹಿಸಬೇಕೆಂದು ನಿರ್ಧರಿಸಿದನು.[೯]

ವಾಸ್ಕೋಡಗಾಮನು ಪ್ರಥಮ ಯಶಸ್ವೀ ನೌಕಾಯಾನವನ್ನು ಮುಗಿಸಿ ಹಿಂತಿರುಗಿ ಬಂದ ನಂತರ ೧೪೯೯ರಲ್ಲಿ ಪೋರ್ಚುಗೀಸ್ ಸರಕಾರ ಕೇಪ್ ವ್ಯಾಪಾರ ಮಾರ್ಗದ ಸಂಪೂರ್ಣ ಪ್ರಯೋಜನ ಪಡೆಯುವ ದೃಷ್ಟಿಯಿಂದ 'ಸಿಂಡಿಕೇಟ್'ನ್ನು ರೂಪೀಕರಿಸಿತು. ಇದರಲ್ಲಿ ರಾಜನು ಮಾತ್ರವಲ್ಲದೆ ಕೆಲವು ಖಾಸಗಿ ಹಿತಾಸಕ್ತಿದಾರರುಗಳನ್ನು ಸೇರಿಸಿಕೊಳ್ಳಲಾಗಿತ್ತು. ಆದರೂ ಸಹ ಈ ಸಿಂಡಿಕೇಟ್ ಸ್ಪಷ್ಟವಾಗಿ ವ್ಯಾಪಾರದ ಏಕಸ್ವಾಮ್ಯಧಿಕಾರವನ್ನು ಸಂಪೂರ್ಣವಾಗಿ ಅನುಭವಿಸುವ ಪ್ರಯತ್ನ ಮಾಡಿಕೊಳ್ಳಲಿಲ್ಲ. ಬದಲಾಗಿ ೧೪೯೯–೧೫೦೪ರ ಐದು ವರ್ಷಗಳ ಕಾಲಾವಧಿಯಲ್ಲಿ ಭಾರತಕ್ಕೆ ನೌಕಾಯಾನದ ಹಡಗುಗಳನ್ನು ಕಳುಹಿಸುವ ಜವಾಬ್ದಾರಿ ನಿರ್ವಹಿಸಿತು. ಅನಂತರ ಅತ್ಯಂತ ತಾರತಮ್ಯದ ಹೆಚ್ಚಿನ ಲಾಭವನ್ನು ರಾಜನಿಗೆ ದೊರಕಿಸಿಕೊಡುವ ಉದ್ದೇಶದಿಂದ ನೀತಿಗಳನ್ನು ಮಾರ್ಪಡಿಸಿಕೊಳ್ಳಲಾಯಿತು. ೧೫೦೬ರ ನಂತರವಂತೂ ಬೆಲೆಬಾಳುವ ಲೋಹಗಳಿಗೆ ಪರ್ಯಾಯವಾಗಿ ಪೋರ್ಚುಗಲ್ ದೇಶವು ಭಾರತದಿಂದ ಕರಿಮೆಣಸು, ಹತ್ತಿ ಹಾಗೂ ಹುಣ್ಣೆ ಬಟ್ಟೆ ಮತ್ತಿತರೆ ಸಂಬಾರು ಪದಾರ್ಥಗಳನ್ನು ಏಕಸ್ವಾಮ್ಯದ ನೆಲೆಯಲ್ಲಿ ಪೋರ್ಚುಗಲ್ ರಾಜನ ಪರವಾಗಿ ಮಾತ್ರ ವ್ಯಾಪಾರ ಆರಂಭಿಸಿತು.[೧೦] ಬಹಳ ಸ್ಪಷ್ಟವಾಗಿ ವ್ಯಾಪಾರ, ರಾಜಾಧಿಕಾರಗಳ ಮುಖವಾಡದಲ್ಲಿ ಧರ್ಮವೂ ಸೇರ್ಪಡೆಯಾಯಿತು. ಇಲ್ಲಿ ಮೇಲ್ನೋಟಕ್ಕೆ ಈ ಸಿಂಡಿಕೇಟ್‌ನ ಸಾರಾಂಶದಲ್ಲಿ 'ಮಿಲಿಟರಿಸಂ'ನ ಪ್ರಸ್ತಾಪವಿಲ್ಲ. ಬದಲಾಗಿ ವ್ಯಾಪಾರ ಮಾರ್ಗದ ಸಂಪೂರ್ಣ ಬಳಕೆಯ ಉದ್ದೇಶ ವ್ಯಕ್ತವಾಗಿದೆ. ಆದರೆ ರಾಜನ ನೇತೃತ್ವದ ಸಿಂಡಿಕೇಟ್ ಎಂದಾಕ್ಷಣ ಸೈನಿಕ ವ್ಯವಸ್ಥೆಯು ಅವಿಭಾಜ್ಯ ಅಂಗವಾಗಿದೆ. ಇಲ್ಲಿ ಸರ್ ವಿಲಿಯಂ ಹಂಟರ್‌ರವರ ಉಲ್ಲೇಖವನ್ನು ಗಮನಿಸುವುದು ಸೂಕ್ತವಾಗಿದೆ.

"ಒಂದು ವ್ಯಾಪಾರಿ ಕಂಪನಿಯು ಸಾಮ್ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳಬಹುದಾದರೂ, ಅದು ವ್ಯಾಪಾರದ ಮೂಲಕ ಮಾತ್ರವೇ ಆಗುತ್ತದೆ ಎಂಬುದು ಖಚಿತ. ಅಂದರೆ ಅದು ತನ್ನದೇ ಆದ ಸರಿಯಾದ ಕಾರ್ಯಕ್ರಮ ಮತ್ತು ನಿರಂತರ ಪರಿಶ್ರಮದ ಮೇಲೆ ಸಾಧ್ಯವಾಗುತ್ತದೆ. ಚಾರ್ಟರ್ಡ್ ಕಂಪನಿಯ ತನ್ನ ಅಸ್ತಿತ್ವದ ಆರಂಭದ ಹಂತದಲ್ಲಿ ಸೈನಿಕ ಕಾರ್ಯಾಚರಣೆಯು ಅತ್ಯಂತ ಅಪಾಯಕಾರಿಯಾದ ಆಯುಧವಾಗಿರುತ್ತದೆ."

ಆದ್ದರಿಂದ ಪೋರ್ಚುಗೀಸರ ವ್ಯಾಪಾರದ ದಂಡೆಯಾತ್ರೆಯಲ್ಲಿ ಆರಂಭದಿಂದಲೇ ಸಂಘರ್ಷ ದೌರ್ಜನ್ಯಗಳು ರಕ್ತಸಿಕ್ತ ಅಧ್ಯಾಯವಾಗಿದೆ. ಶಾಂತಿಯ ಮುಖವಾಡ ಕನಿಷ್ಟ ಪಕ್ಷ ಧಾರ್ಮಿಕ ಗುರುಗಳ

ಪಾಲಿಗೂ ಇರಲಿಲ್ಲ. ಧರ್ಮಗುರುಗಳು ಯುದ್ಧರಂಗಕ್ಕೆ ಹೋಗುವಾಗ ದಂಡನಾಯಕನಿಗೆ ಶಿಲುಬೆಯೊಂದಿಗೆ ಆಶೀರ್ವಚನ ನೀಡುತ್ತಿದ್ದರು. ಕೆಲವು ಧರ್ಮಗುರುಗಳಂತೂ ಸೈನಿಕರಾಗಿ, ರಾಜತಾಂತ್ರಿಕ ಸಂಧಾನಕಾರರಾಗಿ, ವ್ಯಾಪಾರಿಗಳಾಗಿ, ಏಜೆಂಟರಾಗಿಯೂ ಕಾರ್ಯಾಚರಿಸಿರುವುದು ಆರಂಭದಿಂದಲೇ ನಡೆದುಬಂದಿರುತ್ತದೆ.

ಸ್ಥಳೀಯ ಪಾಳೆಯಗಾರರನ್ನು 'ರಾಜ'ರೆಂದು ಉತ್ಪ್ರೇಕ್ಷೆಯಿಂದ ಸಂಬೋಧಿಸುವ ಮೂಲಕ ತೀವ್ರ ಮೇಲ್ಮಟ್ಟದ ಗೌರವ ನೀಡುವ ನಾಟಕವಾಡಿದ ಪೋರ್ಚುಗೀಸ್ ದಂಡನಾಯಕರುಗಳು ಪಾಳೆಯಗಾರರ ಮಧ್ಯದಲ್ಲಿದ್ದ ಸಾಮಾನ್ಯ ದ್ವೇಷವನ್ನು ತನ್ನ ಮೂಲ ಕಾರ್ಯಯೋಜನೆಯಲ್ಲಿ ಅಸ್ತ್ರವನ್ನಾಗಿಸಿದರು. ವಿಜಯನಗರ ಸಾಮ್ರಾಜ್ಯ ಮತ್ತು ಆದಿಲ್‌ಷಾಹಿಗಳ ಮಧ್ಯೆ ಇದ್ದ ದ್ವೇಷವನ್ನು ಯಶಸ್ವಿಯಾಗಿ ಉಪಯೋಗಿಸಿಕೊಂಡು ತನ್ನ ವ್ಯಾಪಾರಿ ನೀತಿಗೆ ಮತ್ತು ರಾಜಪ್ರಭುತ್ವ ಬಲಗೊಳಿಸುವ ನೀತಿಗೆ ಸೋಪಾನವಾಗಿ ಬಳಸಿಕೊಂಡರು.

ಪೋರ್ಚುಗೀಸರು ಈ ರೀತಿ ಆರಂಭದ ೧೫ ವರ್ಷಗಳ ಕಾಲಾವಧಿಯಲ್ಲಿ ವಾಣಿಜ್ಯೋದ್ಯಮಕ್ಕಾಗಿ ಸಾಮಂತ ರಾಜರುಗಳೊಂದಿಗೆ ಮತ್ತು ವ್ಯಾಪಾರಿಗಳೊಂದಿಗೆ ಕರಾವಳಿ ಹಾಗೂ ಮಧ್ಯ ಕರ್ನಾಟಕದಲ್ಲಿ ತೀವ್ರ ಸ್ವರೂಪದ ಸಂಘರ್ಷವನ್ನು ನಡೆಸಿದರು. ಪೋರ್ಚುಗೀಸರು ಕರಾವಳಿ ಕರ್ನಾಟಕವನ್ನು ತನ್ನ ವಸಾಹತುವನ್ನಾಗಿ ಪರಿವರ್ತಿಸುವ ಯಾವುದೇ ಪ್ರಯತ್ನವನ್ನು ಮಾಡದೆ ಕೇವಲ ವಾಣಿಜ್ಯ ಏಕಸ್ವಾಮ್ಯದ ಮೂಲಕ ಲಾಭಗಳಿಸುವ ಉದ್ದೇಶವನ್ನು ಹೊಂದಿದ್ದರು. ಅಲ್ಲಿಯವರೆಗೆ ಅಸಂಘಟಿತವಾಗಿದ್ದ ವಾಣಿಜ್ಯ ಉತ್ಪನ್ನಗಳನ್ನು ಸಂಘಟಿತ ಸ್ವರೂಪಕ್ಕೆ ಪರಿವರ್ತನೆಯಾಗುವ ರೀತಿಯಲ್ಲಿ ಫ್ಯಾಕ್ಟರಿ ಪದ್ಧತಿ, ಏಜೆಂಟರುಗಳ ನೇಮಕಾತಿ, ಉತ್ಪನ್ನಗಳ ಸಂಸ್ಕರಣೆ ಮೊದಲಾದ ಕ್ರಮಗಳು ಹೊಸದಾಗಿ ಜಾರಿಗೆ ಬಂತು. ಕರ್ನಾಟಕದ ಆರ್ಥಿಕತೆ ಕೃಷಿ ಪ್ರಧಾನ ವ್ಯವಸ್ಥೆಯಿಂದ ವಾಣಿಜ್ಯದತ್ತ ಪಲ್ಲಟಗೊಂಡಿರುವ ಪ್ರಾಥಮಿಕ ಲಕ್ಷಣಗಳನ್ನು ಗುರುತಿಸಬಹುದು. ಕ್ಲಾಸಿಕಲ್ ರಾಜಕೀಯ ಅರ್ಥಶಾಸ್ತ್ರದ ಪ್ರಕಾರ ಈ ಪಲ್ಲಟವು ಬಂಡವಾಳಶಾಹಿ ಆರ್ಥಿಕ ಸಂಚಯದ ಪೂರ್ವೋಪಾಧಿಯಾಗಿದೆ.

ಕ್ರಿ.ಶ. ೧೫೬೫ರ ತಾಳಿಕೋಟೆ ಕದನದ ಬಳಿಕ ಕೆನರಾ ತೀರದ ಬಂದರು ಪ್ರದೇಶಗಳಲ್ಲಿ ವಿಜಯನಗರ ಸಾಮ್ರಾಜ್ಯ ಹೊಂದಿದ್ದ ಪ್ರಾಬಲ್ಯ ನೆಲಕಚ್ಚಿತು. ವಿಜಯನಗರ ಸಾಮ್ರಾಟರಿಗೆ ಕುದುರೆ ಮತ್ತಿತರ ಬೇಡಿಕೆಯ ವಸ್ತುಗಳು ಮಧ್ಯ ಪ್ರಾಚ್ಯದಿಂದ ಸರಬರಾಜಾಗುತ್ತಿದ್ದು, ಆ ವಸ್ತು ವಿನಿಮಯ ವ್ಯಾಪಾರವು ಸ್ಥಗಿತಗೊಂಡಿತು. ಬಂದರು ಪ್ರದೇಶಗಳಲ್ಲಿ ಮತ್ತೆ ಸ್ಥಳೀಯ ಸಂಸ್ಥಾನಗಳು ಪ್ರಾಬಲ್ಯಕ್ಕೆ ಬರತೊಡಗಿದವು. ಆದರೆ ಈ ಎಲ್ಲ ಸ್ಥಳೀಯ ಸಂಸ್ಥಾನಗಳು ಪೋರ್ಚುಗೀಸರ ಪ್ರಬಲ ಪೈಪೋಟಿಯನ್ನು ಎದುರಿಸಬೇಕಾಯಿತು. ಪೋರ್ಚುಗೀಸರು ಕೆನರಾ ತೀರದ ಹೊನ್ನಾವರ, ಬಸ್ರೂರು ಮತ್ತು ಮಂಗಳೂರುಗಳಲ್ಲಿ ಹಿಂದೆಂದಿಗಿಂತಲೂ ಹೆಚ್ಚು ಪ್ರಾಬಲ್ಯತೆ ಸ್ಥಾಪಿಸಿಕೊಂಡರು.

ಈ ಮೂರು ಕೇಂದ್ರಗಳಲ್ಲಿ ಮೊದಲಿಗೆ ಪೋರ್ಚುಗೀಸರು ಮಂಗಳೂರನ್ನು ಕ್ರಿ.ಶ. ೧೫೬೮ರಲ್ಲಿ ಉಲ್ಲಾಳ ಮುಖ್ಯಸ್ಥರೊಂದಿಗೆ ತೀವ್ರವಾಗಿ ಸೆಣಸಿ ವಶಪಡಿಸಿಕೊಂಡರು. ಅಲ್ಲಿ ಒಂದು ಪ್ರಬಲ ವ್ಯಾಪಾರಿ ಕೋಟೆಯನ್ನೂ ನಿರ್ಮಿಸಿಕೊಂಡರು. ಅದೇ ವರ್ಷ ಹೊನ್ನಾವರದ ಮೇಲೆ ದಾಳಿ ನಡೆಸಿ ಅಲ್ಲಿನ ಸಣ್ಣ ವ್ಯಾಪಾರಿ ಕೋಟೆಯನ್ನು ವಶಪಡಿಸಿಕೊಂಡು ಅದಕ್ಕೆ 'ಸಂತ ಕ್ಯಾಥರೀನ್' ಎಂದು ಮರು ನಾಮಕರಣ ಮಾಡಿದರು. ಇನ್ನು ಅಂತಿಮವಾಗಿ ವೈಸರಾಯ್ ಡಿ. ಲೂಯಿಸ್ ಡೆ. ಅತ್ರೈಡೇ ನೇತೃತ್ವದಲ್ಲಿ ಸೈನಿಕ ಕಾರ್ಯಾಚರಣೆ ನಡೆಸಿ ಬಸ್ರೂರನ್ನು ಕ್ರಿ.ಶ. ೧೫೬೯ರಲ್ಲಿ ಅಲ್ಲಿನ ಸ್ಥಳೀಯ ವರ್ತಕರಿಂದ ವಶಪಡಿಸಿಕೊಂಡರು.

ನಂತರ ಕೇವಲ ಎರಡು ವರ್ಷಗಳಲ್ಲಿ ಭಟ್ಕಳದಲ್ಲಿ ಉತ್ತರ ಮತ್ತು ದಕ್ಷಿಣದಲ್ಲಿ ಮತ್ತೆರಡು ಕೋಟೆಗಳನ್ನು ನಿರ್ಮಿಸಿ ಭಟ್ಕಳ ವ್ಯಾಪಾರಿ ಬಂದರನ್ನು ಸಂಪೂರ್ಣವಾಗಿ ತಮ್ಮ ಪ್ರಬಲ ನಿಯಂತ್ರಣಕ್ಕೆ ತೆಗೆದುಕೊಂಡರು. ಅದಾದ ಬಳಿಕ ಸ್ವಲ್ಪ ಸಮಯದಲ್ಲೆ ಬಸ್ರೂರು ಮತ್ತು ಮಂಗಳೂರುಗಳಲ್ಲಿ ಸುಂಕದ ಠಾಣೆಗಳನ್ನು ಸ್ಥಾಪಿಸಿದರು. ಅದರಲ್ಲೂ ಪರ್ಶಿಯಾದ ಕೊಲ್ಲಿಯಿಂದ ಆಮದಾಗುತ್ತಿದ್ದ ಕುದುರೆ ಮತ್ತಿತರ ವಿಶೇಷ ಸರಕುಗಳ ವಹಿವಾಟಿಗೆ ಹೆಸರಾಗಿದ್ದ ಬಸ್ರೂರು ಬಂದರಿನ ಮೇಲಿನ ನಿಯಂತ್ರಣ ಅಗತ್ಯವಾಗಿ ಸಾಧಿಸುವ ಅವಶ್ಯಕತೆ ಹೊಂದಿದ್ದರು.[೧೨]

ಈ ಪೋರ್ಚುಗೀಸ್ ಆಡಳಿತವು ಹೊನ್ನಾವರ ಮುಖಾಂತರ ಇಡೀ ಕೆನರಾ ಭಾಗದಲ್ಲಿ ಬೆಳೆಯುತ್ತಿದ್ದ ಮೆಣಸು ಮತ್ತು ಹತ್ತಿ ಸಂಗ್ರಹಿಸುವ ಕಾರ್ಯಕ್ಕೆ ಮುಂದಾಯಿತು. ಇದು ಈ ಹಿಂದೆ ಹೊನ್ನಾವರದ ಮುಖಾಂತರ ಭಟ್ಕಳ ಬಂದರಿಗೆ ರವಾನೆಗೊಂಡು ಆ ಮುಖಾಂತರ ಕೆಂಪು ಸಮುದ್ರಕ್ಕೆ ವರ್ತಕರು ರಫ್ತು ಮಾಡುತ್ತಿದ್ದರು. ಪೋರ್ಚುಗೀಸರು ಮುಂದೆ ಈ ಮೆಣಸು ರವಾನೆಯನ್ನು ಪಡೆದು ಕರಿಮೆಣಸು ವ್ಯಾಪಾರದಲ್ಲಿಯೂ ಏಕಸ್ವಾಮ್ಯವನ್ನು ಸಾಧಿಸಿದರು.

ವಿಜಯನಗರ ಪತನದ ನಂತರ ಭಟ್ಕಳ ಬಂದರು ಪೋರ್ಚುಗೀಸರ ತೆಕ್ಕೆಗೆ ಒಳಪಟ್ಟರೂ ಮುಂದೆ ಇಕ್ಕೇರಿ ನಾಯಕರ ಕಾಲದವರೆಗೆ ಇಲ್ಲಿ ನಡೆಯುತ್ತಿದ್ದ ಮೆಣಸಿನ ವ್ಯಾಪಾರ ಕ್ಷೀಣಿಸಿತ್ತು. ಇದಕ್ಕೆ ಮುಖ್ಯ ಕಾರಣ ಪೋರ್ಚುಗೀಸರು ತಮ್ಮ ಮೆಣಸಿನ ಬೇಡಿಕೆಗೆ ಪರ್ಯಾಯ ಮಾರ್ಗಗಳನ್ನು ಕಂಡುಕೊಂಡಿದ್ದು, ಪೋರ್ಚುಗೀಸರು ಗೇರುಸೊಪ್ಪ ಸಂಸ್ಥಾನದೊಂದಿಗೆ ಮೆಣಸು ಸರಬರಾಜು ಒಪ್ಪಂದವನ್ನು ಮಾಡಿಕೊಂಡರು. ಕ್ರಿ.ಶ. ೧೫೬೮ರಲ್ಲಿ ಸುಮಾರು ೫೦೦೦-೬೦೦೦ ಕ್ವಿಂಟಾಲ್ ಮೆಣಸನ್ನು ಒಂದು ನಿಶ್ಚಿತ ಬೆಲೆಗೆ ಪೂರೈಸಬೇಕೆಂಬ ಒಪ್ಪಂದಗಳಾಗಿದ್ದವು. ಮುಂದೆ ೧೫೮೦ರ ವೇಳೆಗೆ ಇದರ ವಹಿವಾಟಿನ ಪ್ರಮಾಣ ವಾರ್ಷಿಕವಾಗಿ ೭೦೦೦ ರಿಂದ ೮೦೦೦ ಕ್ವಿಂಟಾಲ್ ದಾಟಿದ್ದನ್ನು ಕಾಣಬಹುದು.[೧೩]

ಗಂಗೊಳ್ಳಿಯು ಹೊನ್ನೆಕಂಬಳಿಯ ರಾಜ್ಯದಲ್ಲಿದ್ದ ಸಣ್ಣ ವ್ಯಾಪಾರಿ ಕೇಂದ್ರವೆಂದು ಪೋರ್ಚುಗೀಸರ ಚರಿತ್ರೆಕಾರ ಫೆರಿಯಾ ಸೋಜಾ ತನ್ನ ಗ್ರಂಥದಲ್ಲಿ ತಿಳಿಸಿದ್ದಾನೆ. ಇಲ್ಲಿಯೇ ಹೊನ್ನೆ ಕಂಬಳಿಯವರು ಒಂದು ಸಣ್ಣ ಕೋಟೆಯನ್ನು ಕಟ್ಟಿದ್ದರು ಎಂದು ಇವನು ತಿಳಿಸಿದ್ದಾನೆ. ಪೋರ್ಚುಗೀಸ್-ಸ್ಪೇನ್ ದೊರೆಗಳು ಗೋವೆಯಲ್ಲಿರುವ ವೈಸ್‌ರಾಯ್‌ರಿಗೆ ಬರೆದ ಪತ್ರಗಳು ಪೋರ್ಚುಗೀಸರ ಹಿತಾಸಕ್ತಿಗೆ ಕಾರಣವಾಗಿವೆ. ಬಸ್ರೂರಿನ ವ್ಯಾಪಾರಸ್ಥರಲ್ಲಿದ್ದ ಈ ಸ್ಥಳವನ್ನು ಪೋರ್ಚುಗೀಸರು ರಾಜಕೀಯ ಲಾಭ ಗಳಿಸುವ ಉದ್ದೇಶದಿಂದ ಹೇಗೆ ಪಡೆದುಕೊಂಡರು ಇತ್ಯಾದಿಗಳ ವಿವರಣೆಗಳಿವೆ. ಈ ದಾಖಲೆಯ ಪತ್ರಗಳು ರೆಮಿಟ್ಟಡೊಸ್ ಇಂಡಿಯ ಮತ್ತು ಪಿಸ್ಸುರ್ಲೆನ್ಕರ್ ಸಂಪಾದಿಸಿದ ಅಸೆಂಟೋದಲ್ಲಿವೆ. ಪೋರ್ಚುಗೀಸರ ನಾವಿಕ ಗಂಗೊಳ್ಳಿಗೆ ಬಂದು ಅಲ್ಲಿನ ಸ್ಥಿತಿಗತಿಗಳ ವಿಚಾರ ವೈಸ್‌ರಾಯ್‌ಗೆ ತಿಳಿಸಿದ ಪತ್ರವು ಗಮನಾರ್ಹವಾಗಿದೆ.[೧೪] ಪರಿಸ್ಥಿತಿಯನ್ನು ಸರಿಯಾಗಿ ವೀಕ್ಷಿಸಿದ ಪೋರ್ಚುಗೀಸ್ ನೌಕಾ ದಳಪತಿ ಮೆಪೀಜಸ್ ೧೬ ಜನವರಿ ೧೬೫೦ರಲ್ಲಿ ಬರೆದ ಪತ್ರದಂತೆ "ಸುಂದರ ಮನೋಹರವಾದ ಗಂಗೊಳ್ಳಿ ದ್ವೀಪವು(ಪರ್ಯಾಯ ದ್ವೀಪವು) ಭತ್ತ ಮತ್ತು ತೆಂಗು ತಾಳೆ ಮರಗಳಿಂದ ತುಂಬಿದೆ. ಈ ಸ್ಥಳದಲ್ಲಿ ೨೦,೦೦೦ ಚೀಲ ಅಕ್ಕಿ ಉತ್ಪನ್ನವಾಗುತ್ತದೆ. ಈ ಸ್ಥಳವು ನಮ್ಮ ವಶವಾದೊಡನೆ ೧೫೦೦ ಖಂಡಿ ಮೆಣಸು ಮತ್ತು ಇತರ ಹಣ ತರುವ ಬೆಳೆಗಳನ್ನು ಬೆಳೆಸಿ ಲಾಭ ಪಡೆಯಬಹುದು. ಕಬ್ಬಿಣ

ಮತ್ತು ಇನ್ನಿತರ ಖನಿಜ ಸಂಪತ್ತು ಇಲ್ಲಿನ ಒಳನಾಡಿನಲ್ಲಿ ಸಿಗುತ್ತದೆ. ಗಂಗೊಳ್ಳಿಯಲ್ಲಿ ನುರಿತ ನಾವಿಕರಿದ್ದಾರೆ. ಇವರನ್ನು ಪೋರ್ಚುಗಿಸರ ನೌಕಾದಳದಲ್ಲಿ ಸೇರಿಸಿಕೊಂಡರೆ ಮಲಬಾರು ಸಮುದ್ರಗಳ್ಳರಿಂದ ಗಂಗೊಳ್ಳಿಯಲ್ಲಿ ಪೋರ್ಚುಗೀಸರ ಸ್ಥಾನವನ್ನು ಭದ್ರಪಡಿಸಿಕೊಳ್ಳಬಹುದು. ಇಲ್ಲಿನ ವ್ಯಾಪಾರ ಹಿಡಿತವನ್ನು ಮಾಡಿಕೊಂಡರೆ ಹತ್ತು ಸಾವಿರ ಕುಸ್ರಾದಕ್ಕೂ ಮಿಕ್ಕಿದ ಲಾಭವನ್ನು ಪ್ರತಿ ವರ್ಷ ಪಡೆಯಬಹುದು. ಆದ್ದರಿಂದ ಪೋರ್ಚುಗೀಸರು ಹೆಚ್ಚಿನ ಖರ್ಚು ಮಾಡದೆ ರಾಜಕೀಯ ನಿಪುಣತೆ ಉಪಯೋಗಿಸಿ ಈ ಪ್ರದೇಶ ಪಡೆದುಕೊಂಡರು.[೧೫]

ಭಾರತದಲ್ಲಿ ಬ್ರಿಟಿಶ್ ಪ್ರಭುತ್ವ ಅಸ್ತಿತ್ವಕ್ಕೆ ಬಂದ ಮೇಲೆ ಭಾರತದ ರಾಜಕೀಯ ಹಾಗೂ ಆರ್ಥಿಕತೆಗಳಲ್ಲಿ ಮಹತ್ತರವಾದ ಬದಲಾವಣೆಗಳು ಕಂಡುಬರಲಾರಂಭಿಸಿದವು. ಕೃಷಿ ಪ್ರಧಾನ ದೇಶವಾದ ಭಾರತ ಚರಿತ್ರೆಯುದ್ದಕ್ಕೂ ಕೃಷಿ ಕ್ಷೇತ್ರದಲ್ಲಿ ಹಲವಾರು ಬಗೆಯ ಬದಲಾವಣೆಗಳನ್ನು ಕಂಡಿತು. ಆದರೆ ಬ್ರಿಟಿಶ್ ಆಳ್ವಿಕೆಯಲ್ಲಿ ಕೃಷಿ ಕ್ಷೇತ್ರದಲ್ಲಾದ ಬದಲಾವಣೆಗಳು ಹಿಂದೆಂದೂ ಕಾಣದಂತಹ ಪರಿಣಾಮಗಳನ್ನು ಬೀರಿದವು. ಕೃಷಿ ಒಂದು ನಿರಂತರ ಪ್ರಕ್ರಿಯೆ. ಅದು ಪ್ರತಿಯೊಂದು ಅವಧಿಯಲ್ಲಿಯೂ ಹೊಸ ಆವಿಷ್ಕಾರಗಳಿಗೆ ಒಳಗಾಗುತ್ತಲೇ ಇತ್ತು. ಉತ್ಪಾದನಾ ವಿಧಾನದಲ್ಲಾಗುತ್ತಿದ್ದ ಬದಲಾವಣೆಗಳು ಸಮಾಜದ ಮೇಲೆ ನೇರ ಪರಿಣಾಮಗಳನ್ನು ಬೀರುತ್ತಿದ್ದವು. ಪ್ರಾಚೀನ ಮತ್ತು ಮಧ್ಯಕಾಲೀನ ಸಂದರ್ಭಗಳಲ್ಲಿ ಕೃಷಿ ಹಾಗೂ ಆರ್ಥಿಕತೆಯ ವ್ಯವಸ್ಥೆಗಳು ಒಂದರ ಮೇಲೊಂದು ಸವಾರಿ ಮಾಡುವ ರೀತಿಯಲ್ಲಿ ರೂಪುಗೊಂಡಿರಲಿಲ್ಲ. ಅವು ಹೆಚ್ಚು ಕಡಿಮೆ ಒಂದಕ್ಕೊಂದು ಪೂರಕವಾಗಿಯೇ ಇದ್ದವು. ಕೆಲವು ಸಂದರ್ಭಗಳಲ್ಲಿ ಕೃಷಿಯು ಪ್ರಧಾನ ಅರ್ಥವ್ಯವಸ್ಥೆಯಾಗಿ ಕಂಡುಬರುತ್ತದೆ. ಮೇಲೆ ಚರ್ಚಿಸಿದ ಯುರೋಪಿನ ರಾಷ್ಟ್ರಗಳು ಹೊಸ ಜಲ ಮಾರ್ಗದ ಆವಿಷ್ಕಾರಗಳು ಹಾಗೂ ಯುದ್ಧ, ಒಪ್ಪಂದ ಇನ್ನಿತರೆ ಎಲ್ಲ ಸನ್ನಿವೇಶಗಳು ಜರುಗಿರುವುದು. ಕೃಷಿಯ ಉತ್ಪನ್ನಗಳ ಉತ್ಪಾದನೆ ಮತ್ತು ಮಾರಾಟದ ಹಿನ್ನೆಲೆಯಲ್ಲಿಯೇ ಬಹುತೇಕ ಕೈಗಾರಿಕೆಗಳು ಕೃಷಿ ಸಂಬಂಧಿತ ಕೈಗಾರಿಕೆಗಳೇ ಆಗಿದ್ದುದರಿಂದಾಗಿ ಆರ್ಥಿಕತೆ ಮತ್ತು ಕೃಷಿ ಎರಡೂ ವ್ಯವಸ್ಥೆಗಳು ಒಂದು ಇನ್ನೊಂದನ್ನು ಬೆಳೆಸುವ ರೀತಿಯಲ್ಲಿದ್ದವು. ಕೃಷಿಯಲ್ಲಿ ಜೀವನಾವಶ್ಯಕ ವಸ್ತುಗಳ ಉತ್ಪಾದನೆಗೆ ಮೊದಲ ಆದ್ಯತೆಯನ್ನು ನೀಡಲಾಗಿತ್ತು. ವಾಣಿಜ್ಯ ಕೃಷಿ ಎನ್ನುವ ಬಂಡವಾಳ ಕೇಂದ್ರಿತ ವ್ಯವಸ್ಥೆ ಜಾರಿಗೊಂಡಿರುವುದು ವಸಾಹತುಶಾಹಿಗಳ ಪ್ರವೇಶದ ಬಳಿಕ. ರಾಜಪ್ರಭುತ್ವ ಸಂದರ್ಭದಲ್ಲಿಯೂ ಕೃಷಿ ರಾಜ್ಯದ ಬೊಕ್ಕಸಕ್ಕೆ ಪ್ರಧಾನವಾದ ಆದಾಯದ ಮೂಲವಾಗಿತ್ತು. ಅದು ಬೃಹತ್ ಸಾಮ್ರಾಜ್ಯದಿಂದ ಅಮರಂ ಪಡೆದ ಪಾಳೆಯ ಪಟ್ಟುಗಳಿಗೂ ಅನ್ವಯವಾಗುತ್ತದೆ. ವ್ಯಾಪಾರ ವಾಣಿಜ್ಯವೂ ಅದೇ ರೀತಿಯ ರಾಜ್ಯದ ಬೊಕ್ಕಸಕ್ಕೆ ಆದಾಯವನ್ನು ತಂದುಕೊಡುತ್ತಿತ್ತು. ವ್ಯಾಪಾರದಲ್ಲಿ ಇಳಿಮುಖವಾದಾಗ ಕೃಷಿ ಹಾಗೂ ಕೃಷಿಯಲ್ಲಿ ಇಳಿಮುಖವಾದಾಗ ವ್ಯಾಪಾರ ರಾಜ್ಯದ ಬೊಕ್ಕಸಕ್ಕೆ ಆದಾಯವನ್ನು ಪೂರೈಸುತ್ತಿದ್ದವು.

ಕೃಷಿಯ ವಿಸ್ತರಣೆ ಚರಿತ್ರೆಯ ಪ್ರತಿಯೊಂದು ಅವಧಿಯಲ್ಲಿಯೂ ನಡೆದಿದೆ.[೧೬] ಅಂದಿನ ಪ್ರಭುತ್ವಗಳಿಗೆ ಅದು ಅನಿವಾರ್ಯವಾಗಿತ್ತು. ಕೃಷಿಯೋಗ್ಯವಲ್ಲದ ಪ್ರದೇಶಗಳನ್ನು ಕೃಷಿ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸುವುದರಿಂದ ರಾಜ್ಯದ ಬೊಕ್ಕಸಕ್ಕೆ ಬರುವ ಆದಾಯದಲ್ಲಿ ಹೆಚ್ಚಳವಾಗುತ್ತಿತ್ತು. ಕಾಡು ಹಾಗೂ ಗುಡ್ಡ ಪ್ರದೇಶಗಳನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸುವ ಪ್ರಕ್ರಿಯೆ ಅಷ್ಟೊಂದು ಸುಲಭದ್ದಾಗಿರಲಿಲ್ಲ. ಈ ಪ್ರಕ್ರಿಯೆ ಕಠಿಣವಾದ ದುಡಿಮೆಯನ್ನು ನಿರೀಕ್ಷಿಸುತ್ತಿತ್ತು. ಸಮಾಜದ ಕೆಳವರ್ಗದ ಜನರು ಬಲತ್ಕಾರದ

ದುಡಿಮೆಗೆ ಒಳಗಾಗುತ್ತಿದ್ದರು ಎನ್ನುವ ಉಲ್ಲೇಖಗಳು ಸಾಕಷ್ಟು ಸಿಗುತ್ತವೆ.[೧೭] ಈ ಬಗೆಯ ದುಡಿಮೆಗೆ ರಾಜಪ್ರಭುತ್ವ ಅಥವಾ ವಸಾಹತು ಪ್ರಭುತ್ವ ಎನ್ನುವ ವ್ಯತ್ಯಾಸಗಳಿರಲಿಲ್ಲ. ಎರಡೂ ಸಂದರ್ಭಗಳಲ್ಲಿ ಇದು ಅವ್ಯಾಹತವಾಗಿ ನಡೆಯಿತು. ಸ್ಥಳೀಯ ಶ್ರೀಮಂತ ಭೂಮಾಲೀಕರು ಪ್ರಭುತ್ವ ಹಾಗೂ ಜನತೆಯ ಮಧ್ಯೆ ಕೊಂಡಿಗಳಾಗಿ ವ್ಯವಹರಿಸಿ ಈ ವ್ಯವಸ್ಥೆಯ ಗರಿಷ್ಠ ಪ್ರಮಾಣದ ಲಾಭವನ್ನು ಪಡೆಯುತ್ತಿದ್ದರು.[೧೮] ಇದನ್ನು ವಿರೋಧಿಸಿ ನಿಲ್ಲುವಷ್ಟು ಸಾಮರ್ಥ್ಯ ಸಣ್ಣ ರೈತರಿಗಾಗಲಿ, ಕೃಷಿ ಕಾರ್ಮಿಕರಿಗಾಗಲಿ ಇರಲಿಲ್ಲ. ಭೂರಹಿತ ಕೃಷಿ ಕಾರ್ಮಿಕರು ದುಡಿಮೆಯಲ್ಲಿಯೇ ತಮ್ಮ ಜೀವನವನ್ನು ಕಳೆಯಬೇಕಾಗಿತ್ತು.[೧೯] ಭೂಮಾಲೀಕರು ಕೃಷಿ ಸಮಾಜ ಹಾಗೂ ಕೃಷಿ ಆರ್ಥಿಕತೆಯ ಮೇಲೆ ಸಂಪೂರ್ಣ ಹಿಡಿತ ಸಾಧಿಸಿದ್ದರು. ವಸಾಹತು ಪ್ರಭುತ್ವದಲ್ಲಿ ಭೂಮಿಯ ಜೊತೆಗೆ ಬಂಡವಾಳವೂ ಸೇರಿಕೊಂಡು ಭೂಮಾಲೀಕರ ಜೊತೆಗೆ ವ್ಯಾಪಾರಿ ಮಧ್ಯವರ್ತಿಗಳೂ ಸಮಾಜವನ್ನು ನಿಯಂತ್ರಿಸುವ ಹಾಗೂ ಬದಲಾದ ಅರ್ಥವ್ಯವಸ್ಥೆಯ ಲಾಭವನ್ನು ಪಡೆಯುವಲ್ಲಿ ಮೊದಲಿಗರಾಗಿದ್ದರು. ಕೃಷಿ ಹಾಗೂ ಕೈಗಾರಿಕಾ ಅರ್ಥ ವ್ಯವಸ್ಥೆಗಳನ್ನು ರಾಜ್ಯದ ಅಥವಾ ಪ್ರಭುತ್ವದ ದೃಷ್ಟಿಯಿಂದ ನೋಡುವಾಗ ಅವು ಹೇಗೆ ಪ್ರಧಾನ ಅರ್ಥವ್ಯವಸ್ಥೆಗಳಾಗಿ ರೂಪುಗೊಂಡವು ಹಾಗೂ ಪ್ರಭುತ್ವವನ್ನು ಗಟ್ಟಿಗೊಳಿಸಿದವು ಎನ್ನುವ ಅಂಶ ಮುಖ್ಯವಾಗುತ್ತದೆ. ಅದೇ ರೀತಿ ಜನತೆಯ ದೃಷ್ಟಿಯಿಂದ ಈ ಎರಡೂ ಅರ್ಥವ್ಯವಸ್ಥೆಗಳನ್ನು ನೋಡುವಾಗ ಶ್ರೇಣೀಕೃತ ಸಾಮಾಜಿಕ ರಚನೆ ಹಾಗೂ ದಾಸ್ಯರೂಪಿ ಸಂಬಂಧಗಳು ಪ್ರಧಾನವಾಗಿ ಕಂಡುಬರುತ್ತವೆ.

ಭೂಮಿ ಹಾಗೂ ಬಂಡವಾಳ ಇವುಗಳೆರಡೂ ವಸಾಹತು ಪ್ರಭುತ್ವದಲ್ಲಿ ಸಾಮ್ರಾಜ್ಯಶಾಹಿ ಹಾಗೂ ಬಂಡವಾಳಶಾಹಿ ಧೋರಣೆಗಳಾಗಿ ಕಂಡುಬಂದು ಸಾಮಾಜಿಕ, ಆರ್ಥಿಕ ಹಾಗೂ ರಾಜಕಾರಣದ ನೆಲೆಗಳಲ್ಲಿ ನಿರ್ಣಾಯಕವಾದ ಪಾತ್ರವನ್ನು ವಹಿಸಿದವು. ಯುರೋಪಿನ ಕೈಗಾರಿಕಾ ಕೇಂದ್ರಿತ ಮಾರುಕಟ್ಟೆಗಳಿಗೆ ಭಾರತದ ಕೃಷಿ ಭೂಮಿ ಹಾಗೂ ಕೃಷಿ ಉತ್ಪನ್ನಗಳು ಅತ್ಯಾವಶ್ಯಕವಾಗಿದ್ದವು. ಬ್ರಿಟನ್‌ನ ಲಂಕಶೈರ್, ಮ್ಯಾಂಚೆಸ್ಟರ್, ಯಾರ್ಕ್‌ಶೈರ್, ಬರ್ಮಿಂಗ್ ಹ್ಯಾಮ್ ಮುಂತಾದ ನಗರಗಳ ವರ್ತಕರ ಹಾಗೂ ಕಂಪನಿಗಳ ಬೇಡಿಕೆಗಳಿಗೆ ಅನುಗುಣವಾಗಿ ಬ್ರಿಟಿಶ್ ಸರ್ಕಾರದ ಧೋರಣೆಗಳು ಹಾಗೂ ನೀತಿಗಳು ಪ್ರಕಟಗೊಳ್ಳುತ್ತಿದ್ದವು. ಲ್ಯಾಟಿನ್ ಅಮೆರಿಕಾ, ಆಫ್ರಿಕಾ ಹಾಗೂ ಏಷ್ಯಾದ ದೇಶಗಳು ಶ್ರೀಮಂತವಾದ ನೈಸರ್ಗಿಕ ಸಂಪತ್ತನ್ನು ಹೊಂದಿದ್ದರಿಂದಾಗಿಯೇ ಯುರೋಪಿಯನ್ನರ ಇಂಪೀರಿಯಲ್ ಹಾಗೂ ಮರ್ಕೆಂಟೈಲ್ ಧೋರಣೆಗಳಿಗೆ ಒಳಗಾಗಬೇಕಾಗಿ ಬಂತು. ಈ ದೇಶಗಳ ಸಂಪತ್ತು ಯುರೋಪಿನಲ್ಲಿ ಬಲಿಷ್ಠವಾದ ಕೈಗಾರಿಕಾ ಅರ್ಥವ್ಯವಸ್ಥೆ ರೂಪುಗೊಳ್ಳುವುದಕ್ಕೆ ನೇರವಾಗಿ ಕಾರಣವಾಯಿತು. ಅದೇ ಮುಂದಿನ ಶತಮಾನಗಳಲ್ಲಿ ಜಾಗತಿಕ ಮಾರುಕಟ್ಟೆಯಾಗಿ ರೂಪುಗೊಂಡು, ಜಾಗತೀಕರಣದ ಮೂಲಕ ಜಗತ್ತನ್ನೇ ವ್ಯಾಪಿಸಿತು. ಸದೃಢ ಆರ್ಥಿಕತೆಯ ಮೂಲಕ ಬಲಿಷ್ಟ ರಾಷ್ಟ್ರಗಳು ರೂಪುಗೊಂಡು ಜಗತ್ತಿನ ಅರ್ಥವ್ಯವಸ್ಥೆಯನ್ನು ನಿರ್ಧರಿಸುವ ಹಂತಕ್ಕೆ ಬೆಳೆದವು. ನಿಜಾರ್ಥದಲ್ಲಿ ಹೇಳುವುದಾದರೆ ಈ ರಾಷ್ಟ್ರಗಳು ಸ್ವತಂತ್ರವಾದ ಆರ್ಥಿಕತೆಯನ್ನು ಹೊಂದಿರಲೇ ಇಲ್ಲ. ಪ್ರಪಂಚದ ಯಾವುದೇ ರಾಷ್ಟ್ರದಲ್ಲಾದರೂ ಆಂತರಿಕ ಕಲಹ ಇಲ್ಲವೇ ಯುದ್ಧಗಳು ಕಾಣಿಸಿಕೊಂಡರೆ ಈ ಬಲಿಷ್ಟ ರಾಷ್ಟ್ರಗಳು ತತ್ತರಿಸಿ ಹೋಗುತ್ತಿದ್ದವು. ಇಡೀ ಆರ್ಥಿಕತೆಯೇ ಕುಸಿಯುತ್ತಿತ್ತು. ಇದಕ್ಕೆ ಅಮೆರಿಕಾದ ಆಂತರಿಕ ಕಲಹವೇ ಉತ್ತಮ ಉದಾಹರಣೆಯಾಗಿದೆ. ಅಮೇರಿಕಾದ ಹತ್ತಿಯನ್ನು ಅತಿಯಾಗಿ ಅವಲಂಬಿಸಿದ್ದ ಕಾರಣ ಆಂತರಿಕ ಕಲಹ ಕಾಣಿಸಿಕೊಂಡಾಗ ಯುರೋಪಿನಲ್ಲಿ ಆರ್ಥಿಕ ಬಿಕ್ಕಟ್ಟು ಎದುರಾಯಿತು. ಜಗತ್ತನ್ನು ಹತ್ತಿರ

ತರುವ ಜಾಗತೀಕರಣ ಈ ಅಪಾಯದಿಂದ ಪಾರಾಗಲು ಮಾಡಿಕೊಂಡ ಒಂದು ಒಪ್ಪಂದ ಎನ್ನುವ ನಿಜಾಂಶ ಮೇಲ್ನೋಟಕ್ಕೆ ಕಂಡುಬರುತ್ತದೆ.

ಬಂಡವಾಳ ಕೇಂದ್ರಿತ ಅರ್ಥವ್ಯವಸ್ಥೆ ಜಾರಿಗೊಂಡ ಮೇಲೆ ಕೃಷಿಯನ್ನು ಲಾಭದಾಯಕ ಉದ್ದಿಮೆಯನ್ನಾಗಿ ಪರಿವರ್ತಿಸುವ ಪ್ರಯತ್ನಗಳು ನಡೆದವು. ಹಳೆಯ ಕೃಷಿ ಪದ್ಧತಿಯನ್ನು ಸಾಂಪ್ರದಾಯಿಕ ಎಂಬುದಾಗಿ ಕರೆದು ವಾಣಿಜ್ಯ ಬೆಳೆಗಳನ್ನು ಬೆಳೆಯುವುದನ್ನು ಆಧುನಿಕ ಕೃಷಿ ಪದ್ಧತಿ ಎಂಬುದಾಗಿ ಕರೆಯಲಾಯಿತು. ಜೀವನಾವಶ್ಯಕ ವಸ್ತುಗಳಾದ ರಾಗಿ, ಗೋಧಿ, ಭತ್ತ, ಸಾಂಬಾರ ಪದಾರ್ಥಗಳು, ಹಣ್ಣು ಹಂಪಲುಗಳು, ತರಕಾರಿ ಮುಂತಾದ ಕೃಷಿ ಉತ್ಪನ್ನಗಳು ಹಾಗೂ ಹತ್ತಿ, ಸೆಣಬು, ಕಾಫಿ, ರಬ್ಬರ್ ಇಂಡಿಗೋ. ಕರಿಮೆಣಸು ಮುಂತಾದ ವಾಣಿಜ್ಯ ಬೆಳೆಗಳು ಕೃಷಿಯಲ್ಲಿ ಪ್ರತ್ಯೇಕವಾದ ಸ್ಥಾನವನ್ನು ಪಡೆದುಕೊಂಡವು.

ಪೋರ್ಚುಗೀಸರು ಯುರೋಪ್‌ನಿಂದ ಅಂದರೆ ಅಮೆರಿಕಾ ಖಂಡಗಳಿಂದ ಮುಸುಕಿನ ಜೋಳ, ಹೊಗೆಸೊಪ್ಪು (ತಂಬಾಕು) ನೆಲಗಡಲೆ (ಶೇಂಗಾ) ಆಲೂಗಡ್ಡೆ, ಮೆಣಸಿನಕಾಯಿ ಮತ್ತು ಟೊಮೋಟೋಗಳ ಹೊಸ ತಳಿಗಳನ್ನು ತಂದು ಭಾರತಕ್ಕೆ ಪರಿಚಯಿಸಿದರು. ಗೋವಾಕ್ಕೆ ಬಹಳ ಸಮೀಪದಲ್ಲಿ ಇರುವುದರಿಂದ ಈ ಹೊಸ ಬೆಳೆಗಳ ತಿಳುವಳಿಕೆಯನ್ನು ಕರ್ನಾಟಕವು ಮೊದ ಮೊದಲೇ ಪಡೆದುಕೊಂಡಿತು. ಅಲ್ಲದೇ ಗೋವಾದ ಕ್ರೈಸ್ತ ಕೃಷಿಕರು ಕರ್ನಾಟಕಕ್ಕೆ ಮುಖ್ಯವಾಗಿ ಕರಾವಳಿ ಹಾಗೂ ಮಲೆನಾಡುಗಳಿಗೆ ಸಾಕಷ್ಟು ಸಂಖ್ಯೆಯಲ್ಲಿ ವಲಸೆ ಬಂದರು. ಬುಕಾನನ್‌ನು ೧೮೦೦ರಲ್ಲಿ "ಅಲ್ಲಿನ ಭತ್ತದ ಗದ್ದೆಗಳು ಮಲಬಾರಿನದಕ್ಕಿಂತಲೂ ಹೆಚ್ಚು ಅಚ್ಚುಕಟ್ಟಾಗಿ ಕೃಷಿಯಾದಂತಹವು" ಎಂದು ಅಭಿಪ್ರಾಯಪಟ್ಟಿದ್ದಾನೆ.[೨೦]

ವಸಾಹತುಶಾಹಿ ಆಳ್ವಿಕೆಯಲ್ಲಿ ಕೃಷಿಯನ್ನು ಲಾಭದಾಯಕ ಉದ್ದಿಮೆಯನ್ನಾಗಿ ಪರಿವರ್ತಿಸುವ ಪ್ರಯತ್ನಗಳು ನಡೆದವು ಎನ್ನುವ ಹೇಳಿಕೆ ಸಾಮಾನ್ಯವಾಗಿ ಕಂಡುಬರುತ್ತದೆ. ಇಲ್ಲಿ ಕೃಷಿ ಎನ್ನುವ ಪದ ವ್ಯಾಪಕಾರ್ಥವನ್ನು ಹೊಂದದೆ ಸೀಮಿತವಾದ ಇಲ್ಲವೇ ಸಂಕುಚಿತವಾಗಿ ಬಳಕೆಯಾಗಿರುವುದನ್ನು ಕಾಣಬಹುದಾಗಿದೆ. ಮೇಲೆ ವಿವರಿಸಿದಂತೆ ಇಲ್ಲಿ ಕೃಷಿ ಎಂದರೆ ವಾಣಿಜ್ಯ ಕೃಷಿ ಎಂದರ್ಥ. ಭಾರತದಲ್ಲಿ ಕೃಷಿಯನ್ನು ಅಭಿವೃದ್ಧಿಪಡಿಸುವುದು ಬ್ರಿಟಿಶ್ ಹಾಗೂ ಇನ್ನಿತರೇ ಯುರೋಪಿನ ವಸಾಹತು ಕಂಪನಿ ಸರ್ಕಾರಗಳ ಉದ್ದೇಶವಾಗಿರಲಿಲ್ಲ.[೨೧] ಆದರೆ ಭಾರತ ಕೃಷಿ ದೇಶವಾಗಿಯೇ ಉಳಿಯಬೇಕೆನ್ನುವದು ಬ್ರಿಟಿಶ್ ಸರ್ಕಾರದ ಧೋರಣೆಯಾಗಿತ್ತು. ಏಷ್ಯಾ, ಆಫ್ರಿಕಾ ಹಾಗೂ ಲ್ಯಾಟಿನ್ ಅಮೆರಿಕಾದ ದೇಶಗಳಲ್ಲಿ ಬ್ರಿಟಿಶ್ ಸರ್ಕಾರ ಇದೇ ಬಗೆಯ ಧೋರಣೆಯನ್ನು ಹೊಂದಿತ್ತು. ಬ್ರಿಟನ್‌ನ ಮಿಲ್‌ಗಳಿಗೆ ಒಂದಲ್ಲ ಒಂದು ದೇಶದಿಂದ ನಿರಂತರವಾಗಿ ಕಚ್ಚಾವಸ್ತುಗಳು ಪೂರೈಕೆಯಾಗುತ್ತಿರಬೇಕು ಎನ್ನುವ ಸ್ವಾರ್ಥ ಈ ಧೋರಣೆಯಲ್ಲಿ ಅಡಕವಾಗಿತ್ತು. ಹಾಗಾಗಿ ಈ ಯಾವ ದೇಶಗಳಲ್ಲೂ ಕೈಗಾರಿಕಾಭಿವೃದ್ಧಿಗೆ ಇಲ್ಲವೇ ನಗರಾಭಿವೃದ್ಧಿಗೆ ಬ್ರಿಟಿಶ್ ಸರ್ಕಾರ ಮುಂದಾಗಲಿಲ್ಲ.[೨೨] ಕೃಷಿಯನ್ನು ಕೈಗಾರಿಕೆಯ ಅಧೀನವನ್ನಾಗಿಸುವ ಹಾಗೂ ತಮ್ಮ ಅಭಿವೃದ್ಧಿಗೆ ಕೃಷಿಯನ್ನೇ ಅವಲಂಬಿಸುವ ಬ್ರಿಟಿಶ್ ಸರ್ಕಾರದ ಧೋರಣೆ ಸಂಕೀರ್ಣವಾದ ಹಾಗೂ ವಿರೋಧಾಭಾಸಗಳಿಂದ ಕೂಡಿದ್ದಾಗಿ ಕಂಡುಬಂದಿತ್ತು.[೨೩]

ತಮ್ಮ ಜಾಗತಿಕ ವಸಾಹತು ಸಾಮ್ರಾಜ್ಯದಲ್ಲಿ ಅತ್ಯಂತ ವಿಶಾಲವೂ ಹಾಗೂ ಶ್ರೀಮಂತವೂ ಆಗಿದ್ದ ಭಾರತವನ್ನು ಒಂದು 'ಕ್ಲಾಸಿಕ್ ಕಲೋನಿ'ಯನ್ನಾಗಿ ಪರಿವರ್ತಿಸಿದ ಬ್ರಿಟಿಶರು "ಪರೋಕ್ಷ ಮಾರ್ಗಗಳ ಮೂಲಕ ದೋಚಲಾರಂಭಿಸಿದರು. ವಸಾಹತುಶಾಹಿ ನೀತಿಗಳು ಭಾರತದ ಸಾಂಪ್ರದಾಯಿಕ ರಾಜಕೀಯ,

ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನದಲ್ಲಿ ಅಪಾರವಾದ ಬದಲಾವಣೆಗಳನ್ನುಂಟು ಮಾಡಿದವು. ಈ ಬದಲಾವಣೆಗಳು ಧನಾತ್ಮಕವಾಗಿರದೆ ಎ.ಜಿ. ಪ್ರಾಂಕ್‌ರ ಭಾಷೆಯಲ್ಲಿ ಹೇಳುವುದಾರೆ 'ಅನಭಿವೃದ್ಧಿಯ ವೃದ್ಧಿ'ಯನ್ನು ಉತ್ತೇಜಿಸಿತ್ತೆನ್ನಬಹುದು. ಭಾರತದ ಅರ್ಥವ್ಯವಸ್ಥೆಯು ವಸಾಹತುಶಾಹಿ ಸಂದರ್ಭದಲ್ಲಿ ಜಾಗತಿಕ ಬಂಡವಾಳವಾದಿ ವ್ಯವಸ್ಥೆಯೊಡನೆ ಅಧೀನ ನೆಲೆಯಲ್ಲಿ ವಿಲೀನಗೊಂಡು ಭಾರತದ ಆರ್ಥಿಕ ಹಿತಾಸಕ್ತಿಗಳು ಬ್ರಿಟನ್‌ನ ಹಿತಾಸಕ್ತಿಗಳ ಉಳಿಕೆ ಹಾಗೂ ಬೆಳೆಯುವಿಕೆಗಾಗಿ ಬಲಿಕೊಡಲ್ಪಟ್ಟವು. ಅಲ್ಲದೆ ಒಂದು ವಿಶಿಷ್ಟವಾದ ಉತ್ಪಾದನಾ ವಿಧಾನ ಹಾಗೂ ಅಂತರಾಷ್ಟ್ರೀಯ ಶ್ರಮ ವಿಭಜನೆಯನ್ನು ಕೂಡ ಭಾರತದ ಮೇಲೆ ಹೇರಲಾಯಿತು; ಅಂದರೆ ಭಾರತವು ಆಹಾರಧಾನ್ಯಗಳು ಹಾಗೂ ಹತ್ತಿ, ಸೆಣಬು, ಕರಿಮೆಣಸು, ಎಣ್ಣೆಬೀಜ, ಎಣ್ಣೆ, ಅದಿರುಗಳು ಮುಂತಾದ ಕಚ್ಚಾವಸ್ತುಗಳನ್ನು ಉತ್ಪಾದಿಸಿ ರಫ್ತು ಮಾಡಬೇಕಾಗಿದ್ದು, ಬ್ರಿಟಿಶ್ ಕೈಗಾರಿಕೆಗಳು ಉತ್ಪಾದಿಸಿದ ಉತ್ಪನ್ನಗಳನ್ನು ಬಿಸ್ಕೆಟ್ ಮತ್ತು ಷೂಗಳಿಂದ ಹಿಡಿದು, ಯಂತ್ರಗಳು, ಕಾರುಗಳು ಹಾಗೂ ರೈಲ್ವೆ ಇಂಜಿನ್‌ಗಳವರೆಗೆ ವಿವಿಧ ವಸ್ತುಗಳನ್ನು ಆಮದು ಮಾಡಿಕೊಳ್ಳಬೇಕಾಗಿತ್ತು. ಆರ್ಥಿಕ ಶೋಷಣೆಯು "ಸೂರೆ"ಯ ಮೂಲಕವೂ ನಿರಂತರವಾಗಿ ನಡೆಯುತ್ತಿತ್ತು.

ಹೀಗೆ ಭಾರತದಲ್ಲಿ ಉಂಟಾಗುತ್ತಿದ್ದ 'ಸೂರೆ'ಯಿಂದಾಗಿ ಬಂಡವಾಳವು ಸೃಷ್ಟಿಯಾಗಲಿಲ್ಲ. ಬ್ರಿಟಿಶ್ ಪ್ರಭುತ್ವವು ವಸಾಹತುಶಾಹಿ ಚೌಕಟ್ಟನ್ನು ನಿರ್ಮಿಸುವಲ್ಲಿ ನಿರ್ಧರಿಸುವಲ್ಲಿ ಹಾಗೂ ಕಾಯ್ದುಕೊಳ್ಳುವಲ್ಲಿ ಮಹತ್ತರ ಪಾತ್ರವನ್ನು ವಹಿಸುತ್ತಿತ್ತು. ಅಂದರೆ ಭಾರತದ ನೀತಿಗಳು ಇಂಗ್ಲೆಂಡ್‌ನಲ್ಲಿ ಬ್ರಿಟಿಶ್ ಅರ್ಥವ್ಯವಸ್ಥೆಯ ಹಿತಾಸಕ್ತಿಗಳನ್ನು ಹಾಗೂ ಬ್ರಿಟಿಶ್ ಬಂಡವಾಳಗಾರ ವರ್ಗದ ಅವಶ್ಯಕತೆಗಳನ್ನು ಗಮನದಲ್ಲಿರಿಸಿಕೊಂಡು ರೂಪುಗೊಳ್ಳುತ್ತಿದ್ದುದರಿಂದ ಭಾರತದ ಕೈಗಾರಿಕೆ ಹಾಗೂ ಕೃಷಿಗೆ ಯಾವುದೇ ಉಪಯುಕ್ತ ಬೆಂಬಲ ದೊರೆಯದೆ ಅವುಗಳು ಹಿಂದುಳಿಯಲು ಕಾರಣವಾಯಿತು. ಈ ಹಿಂದುಳಿಯುವಿಕೆಯು ವಿವಿಧ ಸ್ತರಗಳಲ್ಲಿ ವಿವಿಧ ರೀತಿಯಲ್ಲಿ ಅಭಿವ್ಯಕ್ತಿಗೊಂಡವು. ಬಡತನ, ನಿರುದ್ಯೋಗ, ಕನಿಷ್ಟ ತಲಾ ವರಮಾನ, ಉಳಿತಾಯದ ಕೊರತೆ, ಬಂಡವಾಳ ರಚನೆ ಕ್ಷೀಣಿಸುವಿಕೆ, ಕನಿಷ್ಟ ಹೂಡಿಕೆ, ತಂತ್ರಜ್ಞಾನದ ಕೊರತೆ, ಸಾಂಪ್ರದಾಯಿಕ ಸ್ಥಳೀಯ ತಂತ್ರಜ್ಞಾನದ ಮುಂದುವರಿಕೆ, ಕೈಗಾರಿಕೆ ಹಾಗೂ ಕೃಷಿಯ ಅಲಕ್ಷ್ಯ, ಅಭಿವೃದ್ಧಿಯ ಜಡತ್ವ ಇವೇ ಮುಂತಾದ ಪಿಡುಗುಗಳು ಇದರ ಪರಿಣಾಮವಾಗಿ ಸೃಷ್ಟಿಸಲ್ಪಟ್ಟವು.

ಬ್ರಿಟಿಶ್ ವಸಾಹತುಶಾಹಿಯು ಹೇರಲ್ಪಡುವವರೆಗೂ ಭಾರತವು ಮುಖ್ಯವಾಗಿ ಒಂದು ರಫ್ತು ರಾಷ್ಟ್ರವಾಗಿತ್ತು. ಆದರೆ ಈಗ ಅದೊಂದು ಆಮದು ರಾಷ್ಟ್ರವಾಯಿತು. ಭಾರತದ ಕೈಮಗ್ಗ ಕೈಗಾರಿಕೆಯು ಸಂಪೂರ್ಣ ವಿನಾಶದತ್ತ ಸಾಗಿತು. 'ಬ್ರಿಟಿಶ್ ಸರ್ಕಾರವು ಭಾರತದ ಹತ್ತಿಗೆ ಯುರೋಪ್ ಮಾರುಕಟ್ಟೆಯನ್ನು ನಿರಾಕರಿಸಿತ್ತು. ಹಿಂದೂಸ್ಥಾನದಲ್ಲಿ ಒಂದು ತಿರುವನ್ನು ಜಾರಿಗೆ ತಂದು, ಅಂತಿಮವಾಗಿ ಹತ್ತಿಯ ರಾಷ್ಟ್ರವನ್ನು ಹತ್ತಿಯಿಂದ ತುಂಬಿಸಿತ್ತೆಂದು ಕಾರ್ಲ್‌ಮಾರ್ಕ್ಸ್‌ನು ಬರೆಯುತ್ತಾನೆ. ಕೃಷಿಯ ವಾಣಿಜ್ಯೀಕರಣದಲ್ಲಿ ಇದೊಂದು ಮುಖ್ಯ ಹಂತವಾಯಿತು. ಈಗಾಗಲೇ ವಿಕೈಗಾರಿಕೀಕರಣದಿಂದಾಗಿ ಭಾರತದ ಆರ್ಥಿಕತೆಯು ಹೆಚ್ಚು ಹೆಚ್ಚು ಕೃಷಿ ಕೇಂದ್ರಿತವಾಗತೊಡಗಿತ್ತು. ೧೮೩೩ರ ಚಾರ್ಟರ್ ಕಾಯ್ದೆಯು ಭಾರತಕ್ಕೆ ಯುರೋಪ್‌ನ ವಲಸೆ ಹಾಗೂ ಅವರು ಭಾರತದಲ್ಲಿ ಭೂ ಆಸ್ತಿಯನ್ನು ಗಳಿಸುವುದರ ಮೇಲಿದ್ದ ನಿಷೇಧವನ್ನು ರದ್ದುಪಡಿಸಿದಾಗ ಭಾರತದಲ್ಲಿ ತೋಟಗಾರಿಕಾ ಕೈಗಾರಿಕೆಯು ಜಾರಿಗೆ ಬಂದು ಅದನ್ನು ಅಭಿವೃದ್ಧಿಗೊಳಿಸಲು ಬ್ರಿಟಿಶ್ ಬಂಡವಾಳವು ಹರಿದು ಬರತೊಡಗಿತು. ಕಾಫಿ, ಟೀ, ನೀಲಿ ಮತ್ತು ಸೆಣಬು, ಹೊಗೆಸೊಪ್ಪು,

ಎಣ್ಣೆ ಬೀಜಗಳು, ಕಬ್ಬು ಮುಂತಾದವುಗಳ ಕೃಷಿಯು ಜನಪ್ರಿಯಗೊಳ್ಳತೊಡಗಿತು. ಬ್ರಿಟಿಶರು ಉದ್ದೇಶಪೂರ್ವಕವಾಗಿಯೇ ಭಾರತದಲ್ಲಿ 'ವಿಕೈಗಾರಿಕೀಕರಣ'ವನ್ನುಂಟು ಮಾಡುವ ನೀತಿಗಳನ್ನುಸರಿಸಿದರು. ಕೈಗಾರಿಕೀಕರಣವನ್ನು ಅನುಭವಿಸಿದ ಬ್ರಿಟನ್‌ಗಾಗಿ ಭಾರತವನ್ನು ಒಂದು 'ಕೃಷಿಕ್ಷೇತ್ರ'ವನ್ನಾಗಿ ಉಳಿಸಿಕೊಳ್ಳುವುದೇ ಅವರ ಉದ್ದೇಶವಾಗಿದ್ದು, ಭಾರತದ ಆರ್ಥಿಕತೆಯನ್ನು 'ಗ್ರಾಮೀಣಕರಣ,' 'ರೈತಾಪಿಕರಣ'ಗೊಳಿಸುವುದರಲ್ಲಿ ಹೆಚ್ಚು ಆಸಕ್ತಿ ತೋರಿದರು.[೬] ಭಾರತದಲ್ಲಿದ್ದ ಕೈಗಾರಿಕೆಗಳು ಬ್ರಿಟಿಶ್ ಬಂಡವಾಳ ಹಾಗೂ ಹಣಕಾಸುಗಳಿಂದ ನಿಯಂತ್ರಿತವಾಗಿದ್ದರಿಂದ ಜಾಗತಿಕ ಆರ್ಥಿಕ ಏರುಪೇರುಗಳಿಂದ ತೊಂದರೆಗೊಳಗಾದವು. ಕೆಲವು ಕೈಗಾರಿಕೆಗಳು ಉದಯಿಸಿದರೂ ಪ್ರಮುಖ ಕೈಗಾರಿಕೆಗಳಾದ ಕಬ್ಬಿಣ ಹಾಗೂ ಉಕ್ಕು ಬೃಹತ್ ಇಂಜಿನಿಯರಿಂಗ್ ಹಾಗೂ ಲೋಹದ ಕೈಗಾರಿಕೆಗಳು ಪ್ರಗತಿಯಾಗಲಿಲ್ಲ. ಬ್ರಿಟಿಶ್ ಬಂಡವಾಳವು ಬ್ರಿಟಿಶ್ ಕೈಗಾರಿಕೆಗಳಿಗೆ ಪೂರಕವಾದ ಚಟುವಟಿಕೆಗಳಲ್ಲಿ ಹೂಡಿಕೆಯಾಯಿತು. ಯಾವ ರೀತಿಯಲ್ಲಿಯೂ ಭಾರತದಲ್ಲಿ ಕೈಗಾರಿಕಾ ಅಭಿವೃದ್ಧಿಗಾಗಿ ಅದು ಆಯೋಜಿಸಿರಲಿಲ್ಲ. ಅಲ್ಲದೆ ಬ್ರಿಟಿಶ್ ಬಂಡವಾಳಗಾರರೇ ಭಾರತದ ಬ್ಯಾಂಕಿಂಗ್ ವಾಣಿಜ್ಯ, ವಿನಿಮಯ ಮತ್ತು ವಿಮೆ ಮುಂತಾದವುಗಳ ಮೇಲೆ ಪರಿಣಾಮ ಹಿಡಿತವನ್ನು ಸಾಧಿಸಿದ್ದರು. ಆಧುನಿಕ ಆಂಗ್ಲೊ-ಅಮೆರಿಕನ್ ಪಂಡಿತರು ಜನಪ್ರಿಯಗೊಳಿಸಿದ 'ಬ್ರಿಟಿಶರ ಕಾಲದಲ್ಲಿ ಕೈಗಾರಿಕೀಕರಣಕ್ಕೆ ಬೀಜಾಂಕುರವಾಗಿ ಸ್ವಾತಂತ್ರ್ಯದ ನಂತರ ಅದು ಫಲ ನೀಡಿತು' ಎಂಬ ಸಿದ್ಧಾಂತ ಇಲ್ಲಿ ಸುಳ್ಳಾಗುತ್ತದೆ. 'ಬಿಳಿ ಮನುಷ್ಯರ ಹೊರೆ' ನಿಜಕ್ಕೂ ಭಾರತದಿಂದ ಅವರು ಇಂಗ್ಲೆಂಡಿಗೆ ಸಾಗಿಸಿದ ಸಂಪತ್ತಿನ ಹೊರೆಯಾಗಿತ್ತು. ಭಾರತದಲ್ಲಿ ಆಧುನಿಕ ಪಾಶ್ಚಿಮಾತ್ಯ ಮಾರ್ಗದಲ್ಲಿ ಆಧುನೀಕರಣಗೊಂಡ ಚಿಹ್ನೆಗಳಿದ್ದರೂ ಅವುಗಳ ಲಾಭದಲ್ಲಿ ಭಾರತೀಯರಿಗೆ ದೊರತದ್ದು ಕನಿಷ್ಠ ಪಾಲು.

ಭಾರತದ ಆರ್ಥಿಕತೆಯ ವಿಕಾಸದ ಚರಿತ್ರೆಯಲ್ಲಿ ವಿದೇಶಿ ಪಂಡಿತರ ಕಾಣಿಕೆಗಳು ಅಪಾರವಾಗಿದ್ದು, ಅವರ ವಿಶ್ಲೇಷಣೆಗಳಿಗೆ ಪ್ರತಿಕ್ರಿಯಾತ್ಮಕವಾಗಿ ಭಾರತೀಯ ಆರ್ಥಿಕತೆಯ ಚರಿತ್ರೆ ಹಾಗೂ ಸಿದ್ಧಾಂತಗಳು ಬೆಳೆದಿರುತ್ತವೆ ಎಂದು ಹೇಳಬಹುದು. ರಾಷ್ಟ್ರೀಯವಾದಿಗಳ ಗುರಿಯು ವಸಾಹತುಶಾಹಿ ಆಡಳಿತವು ಭಾರತದಲ್ಲಿ ಉಂಟುಮಾಡಿದ ಆರ್ಥಿಕ ಪರಿಣಾಮಗಳ ಕುರಿತು ಟೀಕೆಯನ್ನು ಹೊರತರುವುದು, ಆರ್ಥಿಕ ಸಿದ್ಧಾಂತಗಳ ಸಾರ್ವತ್ರಿಕತೆಯನ್ನು ತಿರಸ್ಕರಿಸಿ ಭಾರತ ಆರ್ಥಿಕತೆಯ ವಿಶಷ್ಟ ಲಕ್ಷಣಗಳನ್ನು ಸೆರೆಹಿಡಿಯುವುದಾಗಿತ್ತು.

ಆರ್.ಸಿ. ದತ್‌ರು ತಮ್ಮ 'ದಿ ಎಕನಾಮಿಕ್ ಹಿಸ್ಟರಿ ಆಫ್ ಇಂಡಿಯಾ'ದಲ್ಲಿ ಬ್ರಿಟಿಶ್ ಆರ್ಥಿಕ ನೀತಿಯ ಕುರಿತು ಈ ರೀತಿ ಬರೆಯುತ್ತಾರೆ: "ಹದಿನೆಂಟನೇ ಶತಮಾನದ ದ್ವಿತೀಯಾರ್ಧದಿಂದ ಬ್ರಿಟಿಶ್ ರಾಜಕೀಯ ಅರ್ಥಶಾಸ್ತ್ರಜ್ಞರು ಮುಕ್ತ ವ್ಯಾಪಾರದ ತತ್ವಗಳನ್ನು ಬೋಧಿಸಿದರೂ ಬ್ರಿಟಿಶ್ ರಾಷ್ಟ್ರವು ಭಾರತದ ಉತ್ಪಾದಕ ಶಕ್ತಿಯನ್ನು ಹತ್ತಿಕ್ಕುವವರೆಗೂ ಅವುಗಳನ್ನು ಅನುಸರಿಸಿರಲಿಲ್ಲ... ಭಾರತದಲ್ಲಿ ಭಾರತೀಯರ ಉತ್ಪಾದಕ ಶಕ್ತಿಯನ್ನು ಅವರ ಕೈಗಾರಿಕೆಗಳ ವಿರುದ್ಧ ರಕ್ಷಣೆ ನೀಡುವುದರ ಮೂಲಕ ಧ್ವಂಸಗೊಳಿಸಲಾಯಿತು. ನಂತರ ಅವುಗಳ ಪುನರುಜ್ಜೀವನವನ್ನು ಪಡೆಯಲೋಸುಗ ಮುಕ್ತ ವ್ಯಾಪಾರವನ್ನು ಹೇರಲಾಯಿತು."[೭] ದಾದಾಬಾಯಿ ನವರೋಜಿ, ಸುಬ್ರಹ್ಮಣ್ಯ ಐಯ್ಯರ್, ಜಿ.ವಿ. ಜೋಶಿ, ಗೋಪಾಲಕೃಷ್ಣ ಗೋಖಲೆ, ಪಿ.ಸಿ.ರೇ ಮುಂತಾದ ರಾಷ್ಟ್ರೀಯವಾದಿಗಳು ಬ್ರಿಟಿಶರ ನೀತಿಗಳು ಉಂಟುಮಾಡಿದ 'ಬಡತನ' ಹಾಗೂ 'ಆರ್ಥಿಕ ಸೂರೆ'ಯ ಕುರಿತು ಕೂಲಂಕುಶ ಅಧ್ಯಯನ ಮಾಡುವುದರ

ಮೂಲಕ 'ಆರ್ಥಿಕ ರಾಷ್ಟ್ರೀಯವಾದ'ದ ಉದ್ಭವಕ್ಕೆ ಕಾರಣರಾದರು. ಡಿ.ಆರ್. ಗಾಡ್ಗಿಲ್‌ರು ೧೯೨೪ರಲ್ಲಿ ೧೮೬೦ರಿಂದ ೧೯೧೮ರವರೆಗೆ ಭಾರತದ ಕೈಗಾರಿಕೆಗಳ ಕುರಿತ ಅಧ್ಯಯನದಲ್ಲಿ ಮುಕ್ತ ವ್ಯಾಪಾರ ನೀತಿಯನ್ನು ತೀವ್ರವಾಗಿ ತರಾಟೆಗೆ ತೆಗೆದುಕೊಳ್ಳುತ್ತಾರೆ. ರಾಷ್ಟ್ರೀಯವಾದಿ ಟೀಕೆಯನ್ನು ಸಾಮ್ರಾಜ್ಯಶಾಹಿ ಬರಹಗಾರರಾದ ಡಬ್ಲ್ಯು.ಎಚ್. ಮೋರ್‌ಲ್ಯಾಂಡ್‌ನಂತಹವರು ತಿರಸ್ಕರಿಸುತ್ತಾರೆ. ಬ್ರಿಟಿಶ್ ಭಾರತದ ಸಮಸ್ಯೆಗಳಾದ ಕನಿಷ್ಟ ಜೀವನದಮಟ್ಟ, ಸಾರ್ವತ್ರಿಕ ಬಡತನ, ಇವುಗಳು ಭಾರತದ ರಾಜಕೀಯ, ಆರ್ಥಿಕತೆಯ ದೀರ್ಘಕಾಲೀನ ಲಕ್ಷಣವೆಂದು ಅವರು ವಾದಿಸುತ್ತಾರೆ.[೨೫]

ಮಾರ್ಕ್ಸ್‌ವಾದವು ಸ್ವಾತಂತ್ರ್ಯೋತ್ತರ ಕಾಲದ ಆರ್ಥಿಕ ಚರಿತ್ರೆಕಾರರ ಮೇಲೆ ಮಹತ್ತರ ಪರಿಣಾಮ ಬೀರಿತು. ಡಿ.ಡಿ. ಕೋಸಾಂಬಿ, ರೋಮಿಲಾ ಥಾಪರ್, ಆರ್.ಎಸ್. ಶರ್ಮಾ ಮುಂತಾದವರು ಪ್ರಾಚೀನ ಭಾರತದ ಆರ್ಥಿಕ ವಿಕಾಸದ ಕುರಿತು ವಿಶ್ಲೇಷಿಸಿದರೆ, ಇರ್ಫಾನ್ ಹಬೀಬರು ತಮ್ಮ 'ಅಗ್ರೇರಿಯನ್ ಸಿಸ್ಟಮ್ ಆಫ್ ಮೊಘಲ್ ಇಂಡಿಯಾ' ಕೃತಿಯಲ್ಲಿ ಮೊಘಲ್ ಸಾಮ್ರಾಜ್ಯದಲ್ಲಿ ಉಂಟಾದ ಕೃಷಿಕ ಬಿಕ್ಕಟ್ಟಿನ ಮೇಲೆ ಬೆಳಕು ಚೆಲ್ಲುತ್ತಾರೆ.

ಮಾರ್ಕ್ಸ್‌ವಾದಿ ಚರ್ಚೆಯು ಭಾರತದ ಕೃಷಿಕ ಚರಿತ್ರೆಯನ್ನು ಕೈಗೆತ್ತಿಕೊಂಡು 'ಉತ್ಪಾದನಾ ವಿಧಾನ' (ಮೋಡ್ ಆಫ್ ಪ್ರೊಡಕ್ಷನ್) ಕುರಿತು ಗಮನಹರಿಸಿ ತನ್ನದೇ ಆದ ಕೊಡುಗೆಯನ್ನು ನೀಡುತ್ತದೆ. ವಸಾಹತುಶಾಹಿ ಆರ್ಥಿಕ ನೀತಿಗಳು ವಿವಿಧ ಕ್ಷೇತ್ರಗಳಲ್ಲಿ ಉಂಟು ಮಾಡಿದ ಪರಿಣಾಮಗಳ ಕುರಿತು ಅಧ್ಯಯನ ಮಾಡಿದ ಪರಿಣತರಲ್ಲಿ ಅಮಿಯಾ ಕುಮಾರ್ ಬಾಗ್ಚಿಯವರ ಕೊಡುಗೆಗಳು ಅನನ್ಯವಾಗಿವೆ. ಇದೇ ಸಂದರ್ಭದಲ್ಲಿ 'ಇಂಡಿಯನ್ ಎಕನಾಮಿಕ್ ಮತ್ತು ಸೋಷಿಯಲ್ ಹಿಸ್ಟರಿ ರಿವ್ಯೂ' ನಿಯತಕಾಲಿಕೆಯು ತಪನ್ ರೇ ಚೌದರಿ ಮತ್ತು ಧರ್ಮಕುಮಾರ್‌ರ ನೇತೃತ್ವದಲ್ಲಿ ಆರಂಭವಾಗಿ ಭಾರತದ ಆರ್ಥಿಕತೆ ಚರಿತ್ರೆ ಕುರಿತು ಹಲವು ಪ್ರಮುಖ ಲೇಖನಗಳನ್ನು ಪ್ರಕಟಿಸಿ ಈ ಬಗೆಯ ಚಿಂತನೆಗೆ ಹೊಸ ದಿಸೆಯನ್ನು ತೋರಿಸಿತು. ಇವರಿಬ್ಬರು ಮುಂದೆ 'ಕೇಂಬ್ರಿಜ್ ಎಕಾನಾಮಿಕ್ ಹಿಸ್ಟರಿ'ಯನ್ನು ಹೊರತಂದು ಬ್ರಿಟಿಶ್ ಆಡಳಿತದ ಆರ್ಥಿಕ ಪರಿಣಾಮಗಳ ಕುರಿತು ಚರ್ಚಿಸುತ್ತಾರೆ. ಧರ್ಮಕುಮಾರರು ದಕ್ಷಿಣ ಭಾರತದಲ್ಲಿ ಭೂರಹಿತ ಕಾರ್ಮಿಕರ ಸೃಷ್ಟಿಯು ಬ್ರಿಟಿಶ್ ಆಡಳಿತದ್ದಾಗಿರದೆ ಅದಕ್ಕೂ ಮೊದಲಿನದ್ದು ಎಂಬ ವಿವಾದಾತ್ಮಕ ಚಿಂತನೆಯನ್ನು ಹರಿಯಬಿಡುತ್ತಾರೆ.[೨೬]

೧೯೬೦ರ ದಶಕದಿಂದ ಜನಪ್ರಿಯಗೊಂಡ ದೆಹಲಿಯ 'ಡೆಲ್ಲಿ ಸ್ಕೂಲ್ ಆಫ್ ಎಕನಾಮಿಕ್ಸ್' ಉತ್ತಮ ಆರ್ಥಿಕ ಚರಿತ್ರೆಕಾರರನ್ನು ಸೃಷ್ಟಿಸಿತು. ಓಂಪ್ರಕಾಶ, ಓಂಕಾರ್ ಗೋಸ್ವಾಮಿ, ಸಂಜಯ್ ಸುಬ್ರಹ್ಮಣ್ಯಂ, ಎಸ್. ಶಿವಸುಬ್ರಹ್ಮಣ್ಯಂ ಮುಂತಾದವರು ಇದರ ವಿದ್ಯಾರ್ಥಿಗಳಾಗಿದ್ದು, ಭಾರತದ ಆರ್ಥಿಕತೆಯ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಅನನ್ಯ ಕೊಡುಗೆಗಳನ್ನು ನೀಡಿದ್ದಾರೆ. ಪ್ರಸ್ತುತ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ನೋಡುವುದಾದರೆ ವಿಜಯನಗರೋತ್ತರ ದಕ್ಷಿಣ ಭಾರತದ ರಾಜಕೀಯ ಹಾಗೂ ಆರ್ಥಿಕ ಚಿತ್ರಣವೇ ಬದಲಾವಣೆಯನ್ನು ಕಂಡುಕೊಂಡ ಕಾಲವಾಗಿತ್ತು. ಬೃಹತ್ ಸಾಮ್ರಾಜ್ಯಗಳು ಅಳಿದು ಸಣ್ಣ ಪುಟ್ಟ ಪಾಳೆಯಗಾರರ ಆಡಳಿತ ಅವಧಿಯಲ್ಲಿ ಭಾರತಕ್ಕೆ ಯುರೋಪಿಯನ್ ಕಂಪನಿಗಳು ಪ್ರವೇಶ ಪಡೆದು ಸ್ಥಳೀಯ ನಾಯಕರುಗಳೊಂದಿಗೆ ವ್ಯಾಪಾರ-ವಾಣಿಜ್ಯಕ್ಕೆ ಸಂಬಂಧಿಸಿದ ಅನೇಕ ಒಪ್ಪಂದಗಳು ನಡೆದಿವೆ. ಕೆಲವು ದಾಖಲೆಗಳು ಸಂಶೋಧಕರ ಕೈಸೇರಿದರೆ ಮತ್ತೆ ಕೆಲವು ತಿಳಿಯದ ಭಾಷೆಯ ದಾಖಲೆಗಳು ಪತ್ರಾಗಾರ ಇಲಾಖೆಯಲ್ಲಿವೆ.

ಬ್ರಿಟಿಶರು, ಪೋರ್ಚುಗೀಸರು, ಫ್ರೆಂಚರು ಮೊದಲಾದ ಯುರೋಪಿಯನ್ನರು ತಮ್ಮ ವ್ಯಾಪಾರ ನೀತಿ, ಸಿದ್ಧಾಂತಗಳನ್ನು ರೂಡಿಸಿಕೊಂಡ ಹಾಗೆ ಸ್ಥಳೀಯ ಪಾಳೆಯಗಾರರು ಕೂಡ ತಮ್ಮದೇ ಆದ ಕೃಷಿ ನೀತಿಯನ್ನು ರೂಪಿಸಿಕೊಂಡಿದ್ದರು. ಆದರೆ ಪಾಳೆಯಗಾರರು ರೂಪಿಸಿದ ಆರ್ಥಿಕ ನೀತಿ ಸಿದ್ಧಾಂತಗಳು ನೇರವಾಗಿ ತಿಳಿಯದೇ ಹೋದರೂ ಅವರ ಜನೋಪಯೋಗಿ ಕಾರ್ಯ, ದಾನ–ದತ್ತಿ ಮುಂತಾದ ವಿಷಯಗಳು ಜನರ ಮನಸ್ಸಲ್ಲಿ ಹಾಸುಹೊಕ್ಕಾಗಿರುವ ಲಾವಣಿ, ಕಥೆ, ಕಾಮಗಾರಿಗಳ ಮೂಲಕ ಚಿತ್ರದುರ್ಗ ನಾಯಕರ ಕೃಷಿ ನೀತಿಯನ್ನು ತಿಳಿಯಲು ಸಾಧ್ಯವಿದೆ. ಚಿತ್ರದುರ್ಗ ನಾಯಕರು ಕೇವಲ ಆಡಳಿತ ಮತ್ತು ಯುದ್ಧಗಳಿಗಷ್ಟೇ ತಮ್ಮ ಸಮಯವನ್ನು ವ್ಯರ್ಥ ಮಾಡದೇ ಅನೇಕ ಜನೋಪಯೋಗಿ ಕಾರ್ಯಗಳನ್ನು ಕೈಗೊಂಡಿದ್ದರು. ಅವುಗಳಲ್ಲಿ ಕೃಷಿ ಮತ್ತು ನೀರಾವರಿ ವ್ಯವಸ್ಥೆ ಬಹಳ ಮುಖ್ಯವಾಗಿದೆ. ಇವೆರಡೂ ಒಂದಕ್ಕೊಂದು ಪೂರಕವಾದ ಸಂಗತಿಗಳಾಗಿವೆ. ಅಲ್ಲದೇ ಕೃಷಿಯು ಎಲ್ಲ ಆರ್ಥಿಕ ಚಟುವಟಿಕೆಗಳ ಮೂಲವಾಗಿದ್ದರಿಂದ ಪ್ರತಿಯೊಂದು ರಾಜಮನೆತನವೂ ಇದಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿರುವುದು ಪ್ರಾಚೀನ ಕಾಲದ ಅನೇಕ ಶಾಸನ ಮತ್ತು ಸಾಹಿತ್ಯಿಕ ಗ್ರಂಥಗಳಿಂದ ತಿಳಿದುಬರುತ್ತದೆ. ಚಿತ್ರದುರ್ಗ ನಾಯಕರು ಇದಕ್ಕೆ ಹೊರತಾಗಿರಲಿಲ್ಲ. ಅವರ ಕಾಲದ ಶಾಸನ ಹಾಗೂ ಸಾಹಿತ್ಯಿಕ ಗ್ರಂಥಗಳು ಈ ಅಂಶವನ್ನು ಸಮರ್ಥಿಸುತ್ತವೆ.

ಪ್ರತಿಯೊಂದು ರಾಜ್ಯದ ಏಳು–ಬೀಳು ಕೃಷಿಯನ್ನೇ ಅವಲಂಬಿಸಿತ್ತು. ಅಂದರೆ ಎಲ್ಲ ಆರ್ಥಿಕ ಚಟುವಟಿಕೆಗಳಿಗೂ ಕೃಷಿಯೇ ಮೂಲಾಧಾರವಾಗಿತ್ತೆಂದು ಹೇಳಬಹುದು. ರಾಜ್ಯದ ಖಜಾನೆಗೆ ಹೆಚ್ಚಿನ ಆದಾಯ ಬರುತ್ತಿದ್ದ ಮೂಲವೂ ಆಗಿತ್ತು. ಅಲ್ಲದೇ ಪ್ರತಿಯೊಬ್ಬ ಪ್ರಜೆಗೂ ಜೀವನಾಧಾರವಾಗಿತ್ತು. ಹಾಗಾಗಿ ಕೃಷಿಯು ಪ್ರಜೆಗಳಿಂದ–ಪ್ರಭುಗಳವರೆಗೂ ಮನ್ನಣೆ ಗಳಿಸಿತ್ತು. ಅಂದಿನ ಜನತೆ 'ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆಯೇ ಲೇಸು'[೨೭] ಎಂಬ ಗಾದೆ ಮಾತಿನಲ್ಲಿ ಅಚಲವಾದ ನಂಬಿಕೆ, ವಿಶ್ವಾಸವಿಟ್ಟಿದ್ದರು.

ಈ ಹಿಂದೆಯೇ ಹೇಳಿದಂತೆ ಪೋರ್ಚುಗೀಸರು ಯುರೋಪ್‌ನಿಂದ ಭಾರತಕ್ಕೆ ಹೊಸ ಆರ್ಥಿಕ ಬೆಳೆಗಳನ್ನು ಪರಿಚಯಿಸಿದ ಕಾಲದಲ್ಲಿ ಭಾರತದಲ್ಲಿ ನಾಯಕರ ಆಡಳಿತ ಅಸ್ತಿತ್ವದಲ್ಲಿತ್ತು. ಮುಸುಕಿನ ಜೋಳ, ಹೊಗೆಸೊಪ್ಪು (ತಂಬಾಕು), ನೆಲಗಡಲೆ (ಶೇಂಗಾ), ಆಲೂಗಡ್ಡೆ, ಮೆಣಸಿನಕಾಯಿ, ಟೊಮೋಟೋಗಳು ಭಾರತಕ್ಕೆ ಪರಿಚಯಿತ ಬೆಳೆಗಳಾಗಿದ್ದವು. ಬೃಹತ್ ಪ್ರಮಾಣದ ಹತ್ತಿ, ತೆಂಗು, ಭತ್ತ, ಶೇಂಗಾ, ತಂಬಾಕು ಇವು ಚಿತ್ರದುರ್ಗ ನಾಯಕರ ಕಾಲದ ವಾಣಿಜ್ಯ ಬೆಳೆಗಳಾಗಿದ್ದವು. ಬೃಹತ್ ಪ್ರಮಾಣದ ಆರ್ಥಿಕ ಬೆಳೆಗಳನ್ನು ಉತ್ಪಾದಿಸುವ ಭೂ ಪ್ರದೇಶವನ್ನು ನಾಯಕರು ಹೊಂದಿದ್ದರು.[೨೮] ಚಿತ್ರದುರ್ಗ ಪ್ರದೇಶದಲ್ಲಿ ರಾಗಿ, ಜೋಳ, ನವಣೆಗಳನ್ನು ಮೊದಲು ಬೆಳೆದು ಅನಂತರ ಸಜ್ಜೆ ಮತ್ತು ಹತ್ತಿಯನ್ನು ಬೆಳೆಯುತ್ತಿದ್ದರು. ಎಂಟರಿಂದ ಹತ್ತು ಗ್ರಾಮಗಳಿಗೆ ಸೇರಿ ಒಂದು ಸಂತೆ ಇಲ್ಲವೇ ಮಾರುಕಟ್ಟೆ ವ್ಯವಸ್ಥೆಯನ್ನು ಹೊಂದಿದ್ದರು. ಈ ಪ್ರದೇಶದಲ್ಲಿ ಗೋದಿ, ಜೋಳ ಹಾಗೂ ಕಬ್ಬು, ಭತ್ತವನ್ನು ಕೃಷಿ ಹಾಗೂ ತರಿ ಭೂಮಿಗಳಲ್ಲಿ ಬೆಳೆಯುತ್ತಿದ್ದರು. ಇದರಿಂದ ಈ ಪ್ರದೇಶದಲ್ಲಿ ತರಿ ಭೂಮಿಗಿಂತ ಖುಷ್ಕಿ ಭೂಮಿ ಹೆಚ್ಚಾಗಿ ಇತ್ತು.

ಚಿತ್ರದುರ್ಗ ಪ್ರದೇಶದಲ್ಲಿ ಬಾಗಾಯತ ಕಡಿಮೆ ಇದ್ದುದರಿಂದ ಇಲ್ಲಿ ಏನೇನು ಬೆಳೆಯುತ್ತಿದ್ದರೆಂಬುದು ಸ್ಪಷ್ಟವಾಗದು. ಆದರೆ ಬೆಳೆಗೆ, ವ್ಯಾಪಾರಕ್ಕೆ ಸಂಬಂಧಿಸಿದ ಕೆಲವು ಪದಗಳು ಶಾಸನಗಳಲ್ಲಿ ಬಂದಿರುವುದರಿಂದ ಅಲ್ಲಿ ಏನೇನು ಬೆಳೆಯುತ್ತಿದ್ದರೆಂದು ಕಲ್ಪಿಸಿಕೊಳ್ಳಬಹುದು. 'ತೋಟ' ಎಂಬ ಪದದಿಂದ ಅಲ್ಲಿ ತೆಂಗು,

ಬಾಳೆ, ಮಾವು, ನಿಂಬೆ, ಅಡಿಕೆ, ಎಲೆ ಮುಂತಾದವುಗಳನ್ನು ಬೆಳೆಸುತ್ತಿರಬಹುದು. 'ಮುಮ್ಮರಿ ದಂಡಗಳು' ಎಂಬ ಪದದ ಮೇಲಿಂದ ಅಡಿಕೆ, ಅರಿಷಿನ, ಸಾಸಿವೆ, ಮೆಣಸು, ಮೆಂತ್ಯ ಮುಂತಾದ ಸರಕುಗಳನ್ನು, 'ಗಾವರೆಸೆಟ್ಟಿ' ಎಂಬ ಪದದ ಮೇಲಿಂದ ವೀಳ್ಯದೆಲೆಯನ್ನು ಹೇರಿಕೊಂಡು ಸಂತೆಗೆ ಹೋಗಿ ಮಾರುತ್ತಿದ್ದರು ಎಂದ ಮೇಲೆ ಈ ಸರಕುಗಳನ್ನು ಅಲ್ಲಿ ಬೆಳೆಯುತ್ತಿರಬೇಕು.[೩೦] ಬೂದಿಹಾಳಿನ ಸುತ್ತಮುತ್ತ ತೆಂಗು ಹೆಚ್ಚಾಗಿ ಬೆಳೆಯುತ್ತಿದ್ದುದರಿಂದ ಇತರ ಬೂದಿಹಾಳುಗಳಿಂದ ಬೇರ್ಪಡಿಸಲು ಇದಕ್ಕೆ 'ಕಾಯಿ ಬೂದಿಹಾಳು' ಎಂಬ ಹೆಸರಿಟ್ಟರೆಂದು ತಿಳಿದುಬರುತ್ತದೆ.[೩೧] ಮೆಣಸಿನಕಾಯಿ, ಬದನೆ, ಬೆಂಡೆ, ಸಿಹಿಗುಂಬಳ, ಹುರಳಿ, ಅವರೆ, ಬಾಳೆ, ಮಾವು, ನಿಂಬೆ ಮುಂತಾದ ತರಕಾರಿ, ಹಣ್ಣು, ಹೂಗಳನ್ನು ಬೆಳೆಸುತ್ತಿದ್ದರು.[೩೨]

ಚಿತ್ರದುರ್ಗದ ಭರಮಣ್ಣನಾಯಕನೊಬ್ಬನೇ ತನ್ನಾಳ್ವಿಕೆಯ ಕಾಲದಲ್ಲಿ ಸುಮಾರು ಇಪ್ಪತ್ತು ಕೆರೆಗಳನ್ನು ಕಟ್ಟಿಸಿದಂತೆ ಪಾಳೆಯಗಾರರ ದಾಖಲೆಗಳಲ್ಲಿ ಹೇಳಿದೆ. ಇದರಲ್ಲಿ ಕೆಲವು ಹಳೆಯ ಕೆರೆಗಳ ಜೀರ್ಣೋದ್ಧಾರವೂ ಸೇರಿರಬೇಕು. ಇದರಿಂದ ತೋಟದ ಬೆಳೆಗಳನ್ನು ಬೆಳೆಯಲು ಸಾಕಷ್ಟು ನೀರಾವರಿ ಅನುಕೂಲ ಒದಗಿತ್ತೆಂಬುದು ಸುಸ್ಪಷ್ಟ. ನಾಯಕನಹಟ್ಟಿ ಪಾಳೆಯಗಾರರಲ್ಲಿ ಬೋಡಿ ಮಲ್ಲಪ್ಪನಾಯಕ ಏಳು ದೊಡ್ಡ ಕೆರೆಗಳನ್ನು ನಿರ್ಮಿಸಿದ್ದನು. ಧರ್ಮಗುರುವೂ ಸಂತರೂ ಆಗಿದ್ದ ತಿಪ್ಪೇರುದ್ರಸ್ವಾಮಿಗಳು ಕೂಡಾ ಭಕ್ತರಿಗೆ ಅತ್ಯಗತ್ಯವಾಗಿ ಬೇಕಾಗಿದ್ದ ಕೆರೆಯ ನಿರ್ಮಾಣದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೆಂಬ ಹೇಳಿಕೆ ಮನನೀಯ.[೩೨]

ಮದಕರಿನಾಯಕನು ತನ್ನ ಹೆಂಡತಿಯಾದ ಚಿಕ್ಕಮ್ಮ ನಾಗತಿಯ ಹೆಸರಿನಲ್ಲಿ ನೆಲ್ಲಿಕಟ್ಟೆಯಲ್ಲಿ ಒಂದು ಕೆರೆಯನ್ನು ಕಟ್ಟಿಸಿದನು.[೩೪] ಯಸಗೂರು ಕೆರೆಯನ್ನು ಹೊಟ್ಟೆ ಒಡೆಯರ ಕಾಲದಲ್ಲಿ ಬಾಣವಿಗೊಂಡನು ಕಟ್ಟಿಸಿದನು.[೩೫] ಹಟ್ಟಿ ಕಸ್ತೂರಿ ರಂಗಪ್ಪನಾಯಕನು ತನ್ನ ತಾಯಿ ಲಕ್ಷ್ಮಮ್ಮ ನಾಗತಿಯ ಹೆಸರಿನಲ್ಲಿ ಮೊಳಕಾಲ್ಮೂರಿನ ಬೆಟ್ಟದ ಮೇಲೆ ಕೆರೆಯನ್ನು ಕಟ್ಟಿಸಿದನು.[೩೬] ಹಟ್ಟಿ ನಾಯಕನ (ಹೆಸರು ಅಳಿಸಿದೆ) ಕಾಲದಲ್ಲಿ ಎಲ್ಲಪ್ಪ ನಾಯಕರನೆಂಬುವವನು ದೊಡ್ಡೇರಿಯಲ್ಲಿ ಕೆರೆ ಕಟ್ಟಿಸಿದನು.[೩೭] ಹರತಿ ಚಿಕ್ಕಪ್ಪನಾಯಕನು ಎಲ್ಲಪ್ಪನಾಯಕನಿಗೆ ಹೇಳಿ ಹಗರಿ ನದಿಯಿಂದ ಮೈಲೇನಹಳ್ಳಿಗೆ ಒಂದು ಕಾಲುವೆ ತೆಗೆಯಿಸಿದನು.[೩೮] ಹರತಿ ನಿಡುಗಲ್ಲು ಹೊಟ್ಟಣ್ಣನಾಯಕನು ಕೆರೆ, ಬಾವಿ, ಕೊಳಗಳನ್ನು ಕಟ್ಟಿಸಿ ದಾನ ನೀಡಿದನು.[೩೯] ಕಂಚಿಕೆರೆ[೪೦], ಕಾಮಸಮುದ್ರ[೪೧] ಹರತಿಯ ಪದ್ದಣ್ಣನಾಯಕನು ಸಿದ್ದಯ್ಯನ ಕೋಟೆಯ ಪಶ್ಚಿಮದಲ್ಲಿದ್ದ ಕೆರೆಯ ಬಿರುಕನ್ನು ದುರಸ್ತಿ ಮಾಡಿಸಿದನು.[೪೨] ಗುಡ್ಡಗಿರಿಯಗೊಂಡನು ಗುಳೇಯ ಕೆರೆಯನ್ನು ಬಿರುಕು ಬಿಟ್ಟುದುದರಿಂದ ಮತ್ತೆ ಕಟ್ಟಿಸಿದನು.[೪೩] ವೀರಣ್ಣಗೌಡ, ರಾಮಯ್ಯ ಮತ್ತು ಮಹಂತಯ್ಯ ಎಂಬ ಮೂವರು ಸೇರಿ ಬಿರುಕು ಬಿಟ್ಟ ಒಂದು ಕೆರೆಗೆ ಒಡ್ಡು ಕಟ್ಟಿದ್ದರು.[೪೪] ಇದಲ್ಲದೇ ಭರಮಣ್ಣ ನಾಯಕನು ಕಟ್ಟಿಸಿದ ಬಾವಿ/ಕೆರೆಗಳ ಪಟ್ಟಿ ಈ ಕೆಳಗಿನಂತಿದೆ.

೧. ಆಲೂರು ಕೋಡೆಯ ಬಾವಿ (ಆಲೂರು, ಕ್ರಿ.ಶ. ೧೬೯೨ಃ

೨. ಮುರುಗೆಸ್ವಾಮಿಗಳ ಮಠದ ಬಳಿಯ ಕೆರೆಗಳು–೨ (ಚಿತ್ರದುರ್ಗ)

೩. ಭರಮಸಮುದ್ರದ ಕೆರೆ (ಜಗಲೂರು ಸೀಮೆ)

೪. ಭರಮಸಾಗರದ ಕೆರೆಗಳು–೨ (ಭರಮಸಾಗರ)

೫. ಅಣಜಿ ಕೆರೆ (ಅಣಜಿ)

೬. ಭೀಮಸಮುದ್ರದ ಕೆರೆ (ಹೊಲತಿಹಾಳು/ಭೀಮಸಮುದ್ರ, ಕ್ರಿ.ಶ. ೧೭೦೯)

೭. ಜಂಪಣ್ಣನಾಯಕನ ಕೋಟೆಕೆರೆ (ಜಂಪಣ್ಣನಾಯಕನ ಕೋಟೆ, ಈ ಕೆರೆ ನಿರ್ಮಾಣಗೊಂಡುದು ಕುಮಾರ ಜಂಪಣ್ಣನಾಯಕನ ಸ್ಮರಣೆಗಾಗಿ)

೮. ಕೊಮಾರ ಮದಕರಿನಾಯಕನ ಕೋಟೆಕೆರೆ (ಮದಕರಿನಾಯಕನ ಕೋಟೆ)

೯. ಚಿಕ್ಕಸಿದ್ದವನ್ವನಹಳ್ಳಿ ಕೆರೆ (ಚಿಕ್ಕಸಿದ್ದವ್ವನಹಳ್ಳಿ)

೧೦. ಚಿಕ್ಕಸಿದ್ದಕ್ಕ ನಾಗತಿಕೆರೆ (ಅನ್ನೇಹಾಳು)

೧೧. ಚಿಕ್ಕಪಾಲವ್ವನಹಳ್ಳಿ ಕೆರೆ (ಕುರುಮರದೆ ಬಳಿ, ಚಿಕ್ಕಪಾಲವ್ವನಹಳ್ಳಿ)

೧೨. ಭರಮವ್ವನ ಕೆರೆ (ಭರಮನಹಳ್ಳಿ)

೧೩. ಆರೆವಾಳನಕೆರೆ (ಚಿತ್ರಹಳ್ಳಿ ಸೀಮೆ)

೧೪. ಮದಕರಿನಾಯಕನ ಕೆರೆ (ಕ್ಯಾಸರಳ್ಳಿ ಬಳಿ)

೧೫. ಕಸ್ತೂರಿ ರಂಗಪ್ಪನಾಯಕನ ಕೆರೆ

೧೬. ರಂಗಯ್ಯನ ಕೆರೆ (ಚಿತ್ರದುರ್ಗ ಬೆಟ್ಟ)

೧೭. ದ್ಯಾಮವ್ವನ ಕೆರೆ

೧೮. ಕರೆಕಲ್ಲು ಹೊಂಡ

೧೯. ಸಂತೆ ಹೊಂಡ (ಕೆಳದುರ್ಗ)[೪೫]

ಈ ಮೇಲೆ ವಿವರಿಸಿದ ಅನೇಕ ಕೆರೆಗಳು ನಾಯಕರ ಅವಧಿಯಲ್ಲಿ ಅತೀ ಹೆಚ್ಚು ನಿರ್ಮಾಣಗೊಂಡ ಕೆರೆಗಳು ಎಂಬುವುದು ಸ್ಪಷ್ಟ. ಇದಕ್ಕೆ ಪೂರಕವಾಗಿ ಇವರು ಅತಿ ಹೆಚ್ಚು ಕೆರೆಗಳ ನಿರ್ಮಾಣ ಕಾರ್ಯ ಆರಂಭಿಸಿರುವುದೇ ಕೃಷಿ ಉತ್ಪನ್ನಗಳ ಹೆಚ್ಚಿನ ಉತ್ಪಾದನೆ ಉದ್ದೇಶದಿಂದ. ನಾಯಕರ ಕಾಲದ ಅನೇಕ ಬಗೆಯ ತೋಟ ಹಾಗೂ ನೀರಾವರಿಗೆ ಸಂಬಂಧಿಸಿದ ಬೆಳೆಗಳನ್ನು ಬೆಳೆದು ತಮ್ಮ ರಾಜ್ಯದ ಆದಾಯದ ಮೂಲವನ್ನು ಹೆಚ್ಚಿಸಿಕೊಳ್ಳುವುದೇ ಇವರ ಮುಖ್ಯ ಕೃಷಿ ನೀತಿಯಾಗಿತ್ತು. ನಾಯಕರು ಮೂಲತಃ ಜಮೀನ್ದಾರಿ ವರ್ಗಕ್ಕೆ ಸೇರಿದವರಾಗಿದ್ದ ಹಿನ್ನೆಲೆಯಲ್ಲಿ ಇವರ ಕೃಷಿ ನೀತಿಯನ್ನು ತಿಳಿಯಬೇಕಿದೆ. ಭೂಮಿಯ ಮಾಲೀಕರು ತಾವೇ ಸ್ವತಃ ಸಾಗುವಳಿ ಮಾಡುತ್ತಿರಲಿಲ್ಲ. ಸಾಗುವಳಿ ಕೆಲಸಕ್ಕೆ ಅವರು ಕೆಲವು ಜನರನ್ನು ನೇಮಿಸಿಕೊಳ್ಳುತ್ತಿದ್ದರು. ಇವರುಗಳು ಕೂಲಿ ತೆಗೆದುಕೊಂಡು ಸಾಗುವಳಿಯ ಕೆಲಸವನ್ನು ಮಾಡುತ್ತಿದ್ದರು. ಇವರನ್ನು 'ಗೇಣಿದಾರರು' ಅಥವಾ 'ಗುತ್ತಿಗೆದಾರರು' ಎಂದು ಕರೆಯುತ್ತಿದ್ದರು. ಈ ಗೇಣಿದಾರರ ಕೆಳಗೆ ಮತ್ತೆ ಕೆಲವು ಜನರು ಕೂಲಿಗಾಗಿ ಕೆಲಸ ಮಾಡುತ್ತಿದ್ದರು. ಇವರಿಗೆ ದುಡಿಯುವುದೊಂದೇ ಕೆಲಸ ಇವರ ಶ್ರಮಕ್ಕೆ ಸರಿಯಾದ ಕೂಲಿ ಸಿಗದ ಕಾರಣ ಜೀವನ ನಡೆಸುವುದು ಬಹಳ ದುರ್ಬಲವಾಗಿತ್ತು. ಇವರದು ದಾಸ್ಯ ಜೀವನವಾಗಿತ್ತು. ಇವರನ್ನು 'ಜೀತದಾಳು' ಎಂದು ಕರೆಯುತ್ತಿದ್ದರು. ಕೃಷಿ ಕೆಲಸವು ಸುಗಮವಾಗಿ ವ್ಯವಸ್ಥಿತವಾಗಿ ನಡೆಯಬೇಕಿದ್ದರೆ ಒಡೆಯ, ಗೇಣಿದಾರ, ಜೀತದಾಳುಗಳು ಇರಬೇಕು. ಇವರುಗಳ ಉಲ್ಲೇಖ ಶಾಸನಗಳಲ್ಲಿ ದೊರೆಯದಿದ್ದರೂ ಸಾಹಿತ್ಯ ಕೃತಿಗಳಲ್ಲಿ ದೊರಕುತ್ತವೆ. ದಾಸರ ಕೀರ್ತನೆಗಳಲ್ಲಿ, ಭೀಮಕವಿಯ 'ಬಸವ ಪುರಾಣ', ಬುಕಾನನ ಪ್ರವಾಸ ಕಥನಗಳಲ್ಲಿ ದೊರಕುತ್ತವೆ.[೪೬]

ಕೌಲೆರವರು ಉಲ್ಲೇಖಿಸುವಂತೆ 'ನಾಯಕರ ಕೃಷಿ ನೀತಿಯಲ್ಲಿ ಮುಖ್ಯವಾಗಿ ಕಂದಾಯವನ್ನು ಹಣದ ರೂಪದಲ್ಲಿ ಪಡೆಯುತ್ತಿದ್ದರು.' ಹಾಗೆಯೇ ಧಾನ್ಯ ರೂಪದ ಕೆಲವು ತೆರಿಗೆಗಳು ಇದ್ದವು. ಕೃಷಿಗೆ

ಸಂಬಂಧಿಸಿದಂತೆ ಇದ್ದ ಇನ್ನೊಂದು ಪ್ರತ್ಯೇಕ ಕಾನೂನೆಂದರೆ ಭೂ ಒಡೆಯ ಅಥವಾ ರೈತ ಭೂಮಿಯನ್ನು ಉಳುಮೆ ಮಾಡದಿದ್ದರೆ ಶಿಕ್ಷೆಗೆ ಒಳಗಾಗಬೇಕಿತ್ತು ಎಂಬುದು ನಾಯಕರ ಮತ್ತೊಂದು ಕಾನೂನು ಆಗಿತ್ತು. ರೈತನು ಪಟೇಲರ ಭೂಮಿಯನ್ನು ಉಳುವುದನ್ನು ನಿಷೇಧಿಸಿದ್ದರು. ಇವರು ಸೂಚನೆ ನೀಡಿದಂತೆ ಪ್ರತಿಯೊಬ್ಬ ಪಟೇಲನು ತನ್ನ ಸ್ವಂತ ಭೂಮಿಯನ್ನು ತಾನೇ ಉಳುಮೆ ಮಾಡಬೇಕಿತ್ತು. ಇದರಲ್ಲಿ ವ್ಯತ್ಯಾಸ ಕಂಡುಬಂದರೆ ಸಂಪೂರ್ಣ ಉತ್ಪಾದನೆಯನ್ನು ಸರ್ಕಾರಕ್ಕೆ ಸಲ್ಲಿಸಬೇಕಿತ್ತು. ಸಮಯವಿದ್ದರೆ ರೈತರು ತಮ್ಮ ಭೂಮಿಯಲ್ಲೇ ದುಪ್ಪಟ್ಟು ಉತ್ಪಾದನೆ ಮಾಡಬಹುದಿತ್ತು. ಇನ್ನೊಂದು ಸೂಚನೆಯನ್ನು ಹೊರಡಿಸುತ್ತಾ, ಶಾನುಭೋಗರು ರೈತರಿಂದ ದುಡಿಸಿಕೊಂಡರೆ, ಪ್ರತಿಯಾಗಿ ಕೂಲಿಯನ್ನು ಕೊಡಬೇಕಿತ್ತು.[೪೭] ಏಕೆಂದರೆ ಬ್ರಾಹ್ಮಣರಾದ ಶಾನುಭೋಗರಿಗೆ ಉಳುಮೆ ಧಾರ್ಮಿಕವಾಗಿ ನಿಷಿದ್ಧವಾಗಿತ್ತು. ಆದರೆ ಬ್ರಾಹ್ಮಣರಲ್ಲೇ ಒಂದು ಪಂಗಡವಾದ ಹವ್ಯಕ ಬ್ರಾಹ್ಮಣರು ಹಾಗೂ ಸಂಕೇತಿಗಳು ಉಳುಮೆ ಮಾಡುವ ತೋಟಗಾರಿಕೆ ಕೆಲಸದಲ್ಲಿ ತೊಡಗಿಸಿಕೊಂಡಿದ್ದರು.

ಕೃಷಿಗೆ ಸಂಬಂಧಿಸಿದಂತೆ ನಾಯಕರು ಹೊರಡಿಸಿದ ಮತ್ತೊಂದು ನೀತಿ ಎಂದರೆ ಎರಡು ಗ್ರಾಮಗಳಲ್ಲಿ ಭೂಮಿಯನ್ನು ಹೊಂದಿರುವ ಪಟೇಲರು ಮತ್ತು ಶಾನುಭೋಗರು ಏಕ ಕಾಲದಲ್ಲೇ ಬೇಸಾಯ ಮಾಡಬೇಕಿತ್ತು. ಅಧಿಕಾರಿಯ ಪ್ರಕಾರ ಆತನು ಒಂದೇ ಒಂದು ಸ್ಥಳದಲ್ಲಿ ಭೂಮಿಯನ್ನು ಮಂಜೂರು ಮಾಡಬೇಕಿತ್ತು. ಹಾಗೂ ಎರಡು ಪ್ರದೇಶಗಳಲ್ಲಿ ಭೂಮಿಯನ್ನು ಹೊಂದುವಂತಿರಲಿಲ್ಲ. ಏಕೆಂದರೆ ಇದರಿಂದ ಇಳುವರಿಯಲ್ಲಿ ಇಳಿಕೆ ಕಂಡುಬರುವ ಸಾಧ್ಯತೆ ಇತ್ತು. ಪ್ರತಿಯೊಬ್ಬ ರೈತನು ಕರಾರನ್ನು ಮಾಡಬೇಕಿತ್ತು. ಅದರ ಪ್ರಕಾರ ಆತ ಯಾವ ಗ್ರಾಮದಲ್ಲಿ ವ್ಯವಸಾಯ ಮಾಡುತ್ತಾನೋ ಅದನ್ನು ಬಿಟ್ಟು ಬೇರೆ ಗ್ರಾಮದಲ್ಲಿ ವ್ಯವಸಾಯ ಮಾಡುವಂತಿರಲಿಲ್ಲ. ಕಾನೂನನ್ನು ಉಲ್ಲಂಘಿಸಿದರೆ ಕಠಿಣವಾದ ಕ್ರಮವನ್ನು ಸರ್ಕಾರವು ತೆಗೆದುಕೊಳ್ಳುತ್ತಿತ್ತು. ಹೆಚ್ಚಿನ ತೆರಿಗೆಯನ್ನು ವಿಧಿಸಿದರೆ ಅಂತಹ ಅಧಿಕಾರಿಗೆ ದಂಡವನ್ನು ವಿಧಿಸಲಾಗುತ್ತಿತ್ತು.[೪೮] ಲೆಕ್ಕಕ್ಕೆ ರಸೀದಿಯನ್ನು ನೀಡಬೇಕಿತ್ತು. ರೈತನು ಸಾಲವನ್ನು ಪಡೆಯದೆ ಸ್ವತಂತ್ರನಾಗಿದ್ದರೆ ಆತ ತೆರಿಗೆಯನ್ನು ಕೊಡುವ ಹಾಗಿರಲಿಲ್ಲ. ಈ ಆಜ್ಞೆಗಳನ್ನು ಅಧಿಕಾರಿಯು ವಿಧಿಸಿ, ಒಪ್ಪಂದವನ್ನು ಸರ್ಕಾರಕ್ಕೆ ಒಪ್ಪಿಸಬೇಕಿತ್ತು. ಪಟೇಲನು ಆ ಸ್ಥಾನಕ್ಕೆ ಅನರ್ಹನೆಂದು ಕಂಡುಬಂದರೆ ಅವನನ್ನು ಆ ಸ್ಥಾನದಿಂದ ಹೊರಹಾಕಲಾಗುತ್ತಿತ್ತು. ಹಾಗೂ ಅವರಲ್ಲೇ ಒಬ್ಬ ರೈತನನ್ನು ಪಟೇಲನಾಗಿ ನೇಮಿಸಲಾಗುತ್ತಿತ್ತು. ಅನರ್ಹನಾದ ಪಟೇಲನಿಂದ ಎಲ್ಲ ಸೌಲಭ್ಯ ಹಾಗೂ ಅಂತಸ್ತನ್ನು ಹಿಂದಕ್ಕೆ ಪಡೆಯಲಾಗುತ್ತಿತ್ತು. ಅವರು ಸಾಮಾನ್ಯ ರೈತರಂತೆ ತಮ್ಮ ಕಾರ್ಯವನ್ನು ನಿರ್ವಹಿಸಬೇಕಿತ್ತು.[೪೯]

ಒಟ್ಟಾರೆಯಾಗಿ ವಿಜಯನಗರೋತ್ತರ ಕಾಲದ ಕರ್ನಾಟಕ ಹಾಗೂ ಇನ್ನಿತರೇ ಪ್ರದೇಶಗಳಲ್ಲಿ ಕೊಳ್ಳೆ ಹೊಡೆಯಲು ವಸಾಹತುಶಾಹಿ ಮತ್ತು ಊಳಿಗಮಾನ್ಯ ಪದ್ಧತಿಯ ಒಗ್ಗಟೇ ಆಧಾರವಾಗಿತ್ತು. ಬೇರೊಂದು ಪ್ರಮುಖ ವ್ಯವಸ್ಥೆಯ ಸಹಕಾರವಿಲ್ಲದೆ ಭವಿಷ್ಯದ ದಿನಗಳಲ್ಲಿ ರಾಜಕೀಯ ಮತ್ತು ಆರ್ಥಿಕ ಆಕಾಂಕ್ಷೆಗಳನ್ನು ಪೂರೈಸಿಕೊಳ್ಳುವುದು ವಸಾಹತುಶಾಹಿಗೆ ಸಾಧ್ಯವಿರಲಿಲ್ಲ. ಸಾಮಾಜಿಕ ರಚನೆಯ ಮಧ್ಯವರ್ತಿ ವರ್ಗವೇ ಈ ಪ್ರಮುಖ ವ್ಯವಸ್ಥೆಯಾಗಿತ್ತು. ಅದರಲ್ಲಿ ನಾಯಕರು ಮಾತ್ರ ತಮ್ಮ ಆಡಳಿತ ಹಂತದಲ್ಲಿ ಗುರುತಿಸಿಕೊಂಡು ಕೆಲವು ನೀತಿಗಳಿಗೆ ಸಹಿ ಹಾಕುವಂತಹ ಕಾಲ ಅದಾಗಿತ್ತು. ಮೇಲ್ನೋಟಕ್ಕೆ ಊಳಿಗಮಾನ್ಯತೆ ಮತ್ತು ವಸಾಹತುಶಾಹಿ ಸಹಬಾಳ್ವೆಯಿಂದ ಜೊತೆಯಾಗಿ ನಡೆಯುವಂತೆ ತೋರಿದರೂ ಅಂತಿಮವಾಗಿ ವಸಾಹತುಶಾಹಿಯ ಹಸ್ತಕ್ಷೇಪದಿಂದ ಅದರ ನಿಜ ವಕ್ತಾರನಂತೆ ಹೊರಹೊಮ್ಮಿದ್ದು

ಮಧ್ಯವರ್ತಿ ವರ್ಗ. ಪಾಳೆಯಗಾರರು, ದೇಸಾಯಿಗಳು, ಜಾಗೀರುದಾರರು ಮತ್ತು ದೇಶಮುಖರು ನೆಲೆ ನಿಂತ ನಂತರ ವಸಾಹತುಶಾಹಿ ತನ್ನ ನೆಲೆ ಸುಭದ್ರಗೊಳಿಸಲು ಮಾಡಬೇಕಿದ್ದ ಬಹುಮುಖ್ಯ ಕಾರ್ಯವೆಂದರೆ ಮಧ್ಯವರ್ತಿ ವರ್ಗವನ್ನು ಸೃಷ್ಟಿಸುವುದು. ಭೂ ಮಾಲೀಕರು ವಸಾಹತುಶಾಹಿಯ ಮೈತ್ರಿಕೂಟದ ಭಾಗವಾಗಿದ್ದರು. ಮಧ್ಯವರ್ತಿಗಳು ವಸಾಹತುಶಾಹಿ ಬಂಡವಾಳದ ಏಜೆಂಟರುಗಳಾಗಿದ್ದರು. ನಾಯಕರ ಕಾಲದ ಉನ್ನತ ಆಡಳಿತ ವರ್ಗವೇ ಈ ಸ್ಥಾನವನ್ನು ಪಡೆದು ಪಾಶ್ಚಿಮಾತ್ಯ ಸಂಪರ್ಕದಿಂದ ತಮ್ಮ ನೀತಿಯನ್ನು ವಿನಿಮಯ ಮಾಡಿಕೊಂಡರು.

**೫.೨. ಭೂ ಹಿಡುವಳಿ ವ್ಯವಸ್ಥೆ**

ಭೂ ಹಿಡುವಳಿ ಪದ್ಧತಿಯ ರಾಜಕಾರಣದ ಸಾರವು ಭೂಮಿಯ ತಳಹದಿಯ ಮೇಲೆ ಆಡಳಿತ ಪದ್ಧತಿಯನ್ನು ವ್ಯವಸ್ಥೆಗೊಳಿಸುವುದರಲ್ಲಿದೆ ಎಂದು ನಮಗೆ ಯುರೋಪಿನ ಅನುಭವವು ಮನವರಿಕೆ ಮಾಡಿಕೊಡುತ್ತದೆ. ಇದರ ಆರ್ಥಿಕ ಸಾರವು ಜೀತಗಾರ ಪದ್ದತಿಯಲ್ಲಿ ಅಡಗಿದೆ. ಈ ಪದ್ಧತಿಯಲ್ಲಿ ಬೇಸಾಯಗಾರರು ರಾಜ ಮತ್ತು ಭೂಮಿಯನ್ನು ಉಳುವವರ ಹಾಗೂ ಇವರಿಬ್ಬರ ನಡುವಿನ ಮಧ್ಯವರ್ತಿಗಳು ಹೊಂದಿದ್ದ ಭೂಮಿಗೆ ಸೇರಿದವರಾಗಿದ್ದರು. ಆ ಬೇಸಾಯಗಾರರು ಗುತ್ತಿಗೆಯನ್ನು ವಸ್ತುವಿನ ಮತ್ತು ಶ್ರಮದ ರೂಪದಲ್ಲಿ ಮಧ್ಯವರ್ತಿಗಳಿಗೆ ಕೊಡಬೇಕಾಗಿತ್ತು. ಆರ್ಥಿಕ ಸ್ವಾವಲಂಬನೆ ಈ ಪದ್ಧತಿಯ ತಳಹದಿಯಾಗಿದ್ದು, ಸಾಮಗ್ರಿಗಳು ಮಾರುಕಟ್ಟೆಗೆ ಕಳುಹಿಸಲ್ಪಡದೆ ಸ್ಥಳೀಯ ಬೇಸಾಯಗಾರರ ಮತ್ತು ಅವರ ಅಧಿಪತಿಗಳ ಬಳಕೆಗೆ ಮಾತ್ರ ಉತ್ಪಾದಿಸಲ್ಪಡುತ್ತಿದ್ದವು. ಈ ಅರ್ಥದ ಊಳಿಗಮಾನ್ಯ ಪದ್ಧತಿಯ ಕೆಲವೊಂದು ವಿಶಾಲವಾದ ಲಕ್ಷಣಗಳ ಬೆಳಕಿನಲ್ಲಿ ಭಾರತದ ಊಳಿಗಮಾನ್ಯ ಪದ್ಧತಿಯ ಮೂಲಗಳು ಮತ್ತು ಅದರ ಬೆಳವಣಿಗೆ ಎಂಬ ವಿಷಯವನ್ನು ನೋಡಬೇಕಾಗುತ್ತದೆ.

ನಂತರದ ಕಾಲದಿಂದ ಅದರಲ್ಲೂ ಪ್ರತ್ಯೇಕವಾಗಿ ಗುಪ್ತರ ಕಾಲದಿಂದ ಕೆಲವೊಂದು ರಾಜಕೀಯ ಮತ್ತು ಆಡಳಿತ ಬೆಳವಣಿಗೆಗಳು ರಾಜ್ಯವೆಂಬ ಉಪಕರಣವನ್ನು ಭೂ ಹಿಡುವಳಿಗಳನ್ನಾಗಿಸಲು ಹವಣಿಸಿದವು. ಬ್ರಾಹ್ಮಣರಿಗೆ ಭೂದತ್ತಿ ನೀಡುವುದು ಒಂದು ವಿಶಿಷ್ಟವಾದ ಬೆಳವಣಿಗೆಯಾಗಿತ್ತು.[೫೦] ಈ ಪದ್ಧತಿಗೆ ಧರ್ಮಶಾಸ್ತ್ರಗಳಲ್ಲಿ ಮತ್ತು ಮಹಾಕಾವ್ಯದ ಬೋಧನಾತ್ಮಕ ಭಾಗಗಳಲ್ಲಿ ಮತ್ತು ಪುರಾಣಗಳಲ್ಲಿ ಹೇಳಲ್ಪಟ್ಟ ಕಟ್ಟಳೆಗಳ ಮನ್ನಣೆಯಿತ್ತು. ಮಹಾಭಾರತದ ಅನುಶಾಸನ ಪರ್ವದ ಒಂದು ಅಧ್ಯಾಯ ಭೂ ದಾನ ಪ್ರಶಂಸೆಗೆ ಮೀಸಲಾಗಿದೆ. ಮೌರ್ಯಗಿಂತ ಪೂರ್ವದ ಪಾಲಿಗ್ರಂಥಗಳು ಕೋಸಲ ಮತ್ತು ಮಗಧ ರಾಜ್ಯಗಳ ಅರಸರಿಂದ ಬ್ರಾಹ್ಮಣರಿಗೆ ದಾನವಾಗಿ ನೀಡಲ್ಪಟ್ಟ ಗ್ರಾಮಗಳನ್ನು ಕುರಿತು ಹೇಳುತ್ತವೆ. ಆದರೆ ಆ ಗ್ರಂಥಗಳು ದಾನಿಗಳು ಆಡಳಿತ ಅಧಿಕಾರಗಳನ್ನು ಬಿಟ್ಟುಕೊಟ್ಟ ಬಗ್ಗೆ ಹೇಳುತ್ತಿಲ್ಲ. ಈ ಮೇಲಿನ ಭೂ ದತ್ತಿಯ ವಿವರಗಳನ್ನು ಕ್ರಿಪೂ.೧ನೇಯ ಶತಮಾನದ ಶಾಸನವು ಅಶ್ವಮೇಧ ಯಾಗದ[೫೧] ಸಂದರ್ಭವನ್ನು ಒಳಗೊಂಡಿದೆ. ಕ್ರಿ.ಶ.೨ನೇಯ ಶತಮಾನದಲ್ಲಿ ಶಾತವಾಹನರ ಅರಸನಾದ ಗೌತಮೀ ಪುತ್ರಶಾತಕರ್ಣಿಯು ಬೌದ್ಧ ಸನ್ಯಾಸಿಗಳಿಗೆ ಭೂ ದತ್ತಿ ನೀಡುವಾಗ ಅವರಿಗೆ ಆಡಳಿತ ಹಕ್ಕುಗಳನ್ನು ನೀಡಿದುದು ಆಶ್ಚರ್ಯಕರವಾದ ಸಂಗತಿಯಾಗಿದೆ. ಅವರಿಗೆ ನೀಡಲ್ಪಟ್ಟ ಭೂಮಿಯಲ್ಲಿ ರಾಜ, ಸೈನಿಕರು ಪ್ರವೇಶಿಸುವ ಹಾಗಿರಲಿಲ್ಲ ಮತ್ತು ಸರಕಾರಿ ಅಧಿಕಾರಿಗಳು ಯಾವ ತೊಂದರೆಯನ್ನು ಕೊಡುವಂತಿರಲಿಲ್ಲ ಅಥವಾ ಜಿಲ್ಲೆಯ ಕಾವಲು ದಳ ಅಧಿಕಾರಿಗಳು[೫೨] ಹಸ್ತಕ್ಷೇಪ ಮಾಡುವಂತಿರಲಿಲ್ಲ. ಕ್ರಿ.ಶ.೫ನೇಯ ಶತಮಾನದ ಬಳಿಕ ಭೂದತ್ತಿ ಕೊಡುವುದು ಹೆಚ್ಚಾಗಿ ಜಾರಿಯಲ್ಲಿ ಬಂದಿತು. ಆದಾಯದ ಎಲ್ಲ

ಮೂಲಗಳನ್ನು ವರ್ಗಾಯಿಸಿದುದು ಮತ್ತು 'ಪೊಲೀಸ್' ಮತ್ತು ಆಡಳಿತ ಕರ್ತವ್ಯಗಳನ್ನು ಭೂಮಿಯನ್ನು ಪಡೆದವರಿಗೆ ಬಿಟ್ಟುಕೊಟ್ಟದ್ದು ಆ ದತ್ತಿಗಳ ಮುಖ್ಯ ಲಕ್ಷಣಗಳಾಗಿವೆ.[೫೩]

ದಾನಿಯು ತನ್ನ ಕಂದಾಯಗಳನ್ನು ಬಿಟ್ಟುಕೊಟ್ಟುದುದಲ್ಲದೆ, ದತ್ತಿಯ ರೂಪದಲ್ಲಿ ನೀಡಿದ ಗ್ರಾಮಗಳಲ್ಲಿಯ ಜನರನ್ನು ಆಳುವ ಹಕ್ಕನ್ನು ಬಿಟ್ಟುಕೊಟ್ಟದ್ದು ಅಷ್ಟೇ ಮುಖ್ಯವಾದ ವಿಷಯವಾಗಿದೆ. ಮಧ್ಯಭಾರತದ ಹಿರಿಯ ಸಾಮಂತರು ಜನರಿಂದ ತುಂಬಿದ ಗ್ರಾಮಗಳನ್ನು ಬ್ರಾಹ್ಮಣರಿಗೆ ನೀಡಿದ ಅನೇಕ ಉದಾಹರಣೆಗಳನ್ನು ಕಾಣಬಹುದು. ಬೇಸಾಯಗಾರರನ್ನು ಮತ್ತು ಕಸುಬುದಾರರನ್ನೊಳಗೊಂಡ ಆ ಗ್ರಾಮದ ನಿವಾಸಿಗಳಿಗೆ ಅವರ ಅರಸರು ಆ ಗ್ರಾಮಗಳನ್ನು ಪಡೆದವರಿಗೆ ರೂಢಿಯಲ್ಲಿದ್ದ ತೆರಿಗೆಗಳನ್ನು ಕೊಡಬೇಕೆಂದು ಮಾತ್ರವಲ್ಲದೆ ಅವರ ಆಜ್ಞೆಗಳನ್ನೂ ಅನುಸರಿಸಬೇಕೆಂದು ಸಹ ತಿಳಿಸಿದ್ದರು. ಹೊಯ್ಸಳರ ನಂತರದ ಕಾಲದಲ್ಲಿ ನೀಡಲ್ಪಟ್ಟ ಎರಡು ಭೂಮಿಯ ದತ್ತಿಗಳಲ್ಲಿ ಸರ್ವಾಧ್ಯಕ್ಷರೆಂದು ಕರೆಯಿಸಿಕೊಳ್ಳುತ್ತಿದ್ದ ಅಧಿಕಾರಿಗಳು, ನಿಯತ ಸೈನಿಕರು ಮತ್ತು ಛತ್ರಿದಾರಿಗಳು ಬ್ರಾಹ್ಮಣರಿಗೆ ಯಾವ ತೊಂದರೆಯನ್ನು ಕೊಡಬಾರದೆಂಬ ರಾಜಾಜ್ಞೆ ವಿಧಿಸಲ್ಪಟ್ಟಿದೆ.[೫೪] ಅರಸರು ತಮ್ಮ ಆಡಳಿತಾಧಿಕಾರವನ್ನು ಬಿಟ್ಟುಕೊಟ್ಟ ನಿಚ್ಚಳವಾದ ಸಾಕ್ಷಿಯನ್ನು ಇದು ಸೂಚಿಸುತ್ತದೆ.

ವಿಜಯನಗರೋತ್ತರ ನಾಯಕರ ಕಾಲದಲ್ಲಿ 'ಉಪಕಾರಿ' ಮತ್ತು 'ಸೇವೆಗಾಗಿ' ಕೊಟ್ಟ ಭೂಮಿಯ ಹಿಡುವಳಿಗಳೆಂದು ಎರಡು ಭಾಗ ಮಾಡಬಹುದು. 'ಉಪಕಾರಿ' ಹಿಡುವಳಿಯಲ್ಲಿ ಬಹ್ಮದೇಯಾ ದೇವದಾಯಾ ಮತ್ತು ಮಠಾಪುರವೆಂಬ ಮೂರು ರೀತಿಗಳಿದ್ದುವು.

ಬ್ರಾಹ್ಮಣನಿಗೆ ಅಥವಾ ಬ್ರಾಹ್ಮಣ ಸಮುದಾಯಕ್ಕೆ ಗೌರವ ಸೂಚಿಸಲು ಮತ್ತು ಧಾರ್ಮಿಕ ಭೂಮಿಯನ್ನು, ಅಗ್ರಹಾರವನ್ನು ದಾನವಾಗಿ ಕೊಡುತ್ತಿದ್ದು ಇಂತಹ ಭೂಧಾನಕ್ಕೆ 'ಬ್ರಹ್ಮದೇಯಾ'[೫೫] ಎಂದು ಹೆಸರು.

ಇಲ್ಲಿ ಸಾಕೇತ್ ರಾಜನ್ ಅವರು ಶೂದ್ರನ ಒಡೆತನವು ಕಣ್ಮರೆಯಾದುದಕ್ಕೂ ಬ್ರಹ್ಮದೇಯ-ದೇವದಾಯಗಳೇ ಮೊದಲಾದ ಭೂ ಒಡೆತನವುಳ್ಳ ಮಧ್ಯವರ್ತಿಗಳ ಉದಯಕ್ಕೂ ಕಾರಣಗಳನ್ನು ಕೊಡುವುದಿಲ್ಲ. ಆದರೆ ಶಾಸನಗಳಲ್ಲಿ ಉಪಲಬ್ಧವಿರುವ ಮಾಹಿತಿಯ ಪ್ರಕಾರ ಬ್ರಾಹ್ಮಣ ಮತ್ತು ಶೂದ್ರ ನೆಲೆದೊಡೆತನಗಳು ಜೊತೆ ಜೊತೆಯಾಗದೇ ಇದ್ದುವು. ಅಲ್ಲದೇ ಬ್ರಹ್ಮದೇಯ-ದೇವದಾಯಗಳು ಸರಕಾರಕ್ಕೆ ತೆರಿಗೆ ವಸೂಲು ಮಾಡಿಕೊಡುವ ಏಜಂಟರಾಗಿರಲಿಲ್ಲ. ಅವರು ನಿರ್ದಿಷ್ಟ ಪ್ರದೇಶದಲ್ಲಿ ಸರಕಾರದ ಪಾಲು ಏನಿತ್ತೋ ಅದನ್ನು ತಾವು ಉಪಯೋಗಿಸಿಕೊಳ್ಳುತ್ತಿದ್ದರು. ಅಥವಾ ಜಮೀನುದಾರರಾಗಿ ಬಾಕಿಯನ್ನು ವಸೂಲು ಮಾಡಿಕೊಳ್ಳುತ್ತಿದ್ದರು. ಹೀಗಿರುವಾಗ ಬ್ರಹ್ಮದೇಯ-ದೇವದಾಯಗಳನ್ನು ತೆರಿಗೆ ವಸೂಲಿಕಾರರಾಗಿದ್ದರೆಂದು ಗುರುತಿಸುವುದು ಸರಿಯೆಂದು ತೋರುವುದಿಲ್ಲ. ವಾಸ್ತವವಾಗಿ ಅವರು ಅಪವಾದವೇ ಇಲ್ಲದಂತೆ ಎಲ್ಲ ಸಂದರ್ಭಗಳಲ್ಲೂ ಕರ್ನಾಟಕದ ಚರಿತ್ರೆಯುದ್ದಕ್ಕೂ ಸರ್ವಮಾನ್ಯ ಆಧಾರದ ಮೇಲೆ ನೆಲದೊಡೆತನವನ್ನು ಭೋಗಿಸುತ್ತಿದ್ದರು.

ಕರ್ನಾಟಕದ ಇನ್ನು ಕೆಲವು ವಿದ್ವಾಂಸರು ಬ್ರಹ್ಮದೇಯವನ್ನು ತಮ್ಮದೇ ದೃಷ್ಟಿಕೋನಗಳಿಂದ ನೋಡಲು ಪ್ರಯತ್ನಿಸಿದ್ದಾರೆ. ಅವರಲ್ಲಿ ಜಿ.ಎಸ್.ದೀಕ್ಷಿತ್, ಎ.ವಿ.ವೆಂಕಟರತ್ನಂ, ಲೀಲಾ ಶಾಂತಕುಮಾರಿ ಮತ್ತು ಕೆ.ಎಸ್.ಶಿವಣ್ಣ ಇವರನ್ನು ಉಲ್ಲೇಖಿಸಬಹುದು. ಆಧುನಿಕ ಸಂದರ್ಭದಲ್ಲಿ ಅಗ್ರಹಾರಗಳು ಮುಖ್ಯವಾಗಿ ಸ್ಥಳೀಯ ಸರಕಾರದ ಕೇಂದ್ರಗಳಾಗಿದ್ದವು ಎಂದು ಜಿ.ಎಸ್.ದೀಕ್ಷಿತ್ ಅಭಿಪ್ರಾಯ ಪಡುತ್ತಾರೆ.[೫೬]

ಅವರು ಬ್ರಹ್ಮದೇಯಗಳನ್ನು ರಾಜ್ಯನೀತಿಯ ಅಂಗಗಳೆಂದಾಗಲಿ, ಮೂಲ ಅರ್ಥವ್ಯವಸ್ಥೆಯಲ್ಲಿ ಉತ್ಪಾದಕ ಕೇಂದ್ರಗಳೆಂದಾಗಲಿ ಪರಿಗಣಿಸುವುದಿಲ್ಲ. ದೀಕ್ಷಿತ್ ಅವರ ದಾರಿಯನ್ನೇ ಹೆಚ್ಚು ಕಡಿಮೆ ಅನುಸರಿಸಿ ಎ.ವಿ.ವೆಂಕಟರತ್ನಂ ಅವರು ಅಗ್ರಹಾರಗಳು ವಿಜಯನಗರ ಕಾಲದಲ್ಲಿ ಸ್ಥಳೀಯ ಸರಕಾರದ ಕೇಂದ್ರಗಳಾಗಿದ್ದವು ಎಂಬುದಕ್ಕೆ ಸಮರ್ಥನೆಯಾದ ದಾಖಲೆಗಳನ್ನು ವಿವರಿಸುತ್ತಾರೆ.[೫೭] ಅವರು ಕೆಲವು ಅಗ್ರಹಾರಗಳ ಆರ್ಥಿಕ ಚಟುವಟಿಕೆಗಳನ್ನು ತೋರಿಸಿ ಕೊಡುತ್ತಾರೆ. ಮಧ್ಯಕಾಲೀನ ಅಗ್ರಹಾರಗಳನ್ನು ಕುರಿತು ಶಾಂತಕುಮಾರಿಯವರ ಕೃತಿ, ವಿಶ್ಲೇಷಣೆಗಿಂತ ಹೆಚ್ಚಾಗಿ ನಿರೂಪಣೆಯ ಸ್ವರೂಪದ್ದಾಗಿದೆ. ಅಗ್ರಹಾರಗಳ ಉದಯಕ್ಕೆ ಸಂಬಂಧಿಸಿದಂತೆ ಯಾವುದೇ ಒಂದು ತಾತ್ವಿಕ ವಿಚಾರವನ್ನು ಅವರು ಮುಂದಿಡುವುದಿಲ್ಲ.[೫೮] ಆದರೆ ವಿಜಯನಗರ ಮತ್ತು ವಿಜಯನಗರೋತ್ತರ ಅವಧಿಯಲ್ಲಿನ ನಾಯಕರ ರಾಜ್ಯದ ಅಗ್ರಹಾರಗಳನ್ನು ಪರಿಶೀಲಿಸಿದ ಕೆ.ಎಸ್.ಶಿವಣ್ಣನವರು ಅದನ್ನು ಒಟ್ಟಾರೆ ಕೃಷಿ ವ್ಯವಸ್ಥೆಯ ಭಾಗವಾಗಿ ಪರಿಶೀಲಿಸುತ್ತಾರೆ.[೫೯]

ಜಪಾನ್ ದೇಶದವರಾದ ಹಾಗೂ ಭಾರತದ ಚರಿತ್ರೆಯ ಕುರಿತು ಅಧ್ಯಯನ ನಡೆಸಿರುವ ನೊಬೊರು ಕರಾಶಿಮ ದಕ್ಷಿಣ ಭಾರತದ, ವಿಶೇಷವಾಗಿ ತಮಿಳುನಾಡಿನ ಬ್ರಹ್ಮದೇಯಗಳನ್ನು ಉಲ್ಲೇಖಿಸುತ್ತಾ ಹೀಗೆ ಹೇಳುತ್ತಾರೆ: ಬ್ರಹ್ಮದೇಯ ಗ್ರಾಮಗಳ ಅಧ್ಯಯನ ಇನ್ನೂ ಆರಂಭಿಕ ಹಂತದಲ್ಲಿದೆ. ದಕ್ಷಿಣ ಭಾರತದ ಶಕ್ತಿಗಳ ವಿನ್ಯಾಸದಲ್ಲಿ ಬ್ರಹ್ಮದೇಯ ಗ್ರಾಮವು ವಹಿಸಿದ್ದ ನಿಜವಾದ ಪಾತ್ರವನ್ನು ಸ್ಪಷ್ಟಪಡಿಸಲು ಇನ್ನೂ ಹೆಚ್ಚು ವ್ಯಾಪಕ ಅಧ್ಯಯನವು ಅಗತ್ಯವಾಗಿದೆ.[೬೦] ಇನ್ನೊಬ್ಬ ಅಮೆರಿಕನ್ ಭಾರತದ ಚರಿತ್ರೆ ಬರ್ಟನ್ ಸ್ಟೈನ್ ದಕ್ಷಿಣ ಭಾರತದ ಬ್ರಹ್ಮದೇಯಗಳನ್ನು ಕುರಿತು ಒರೆಯುವಾಗ ಅವು "ನಾಗರಿಕತೆಯ ಅಪೂರ್ವ ಕೇಂದ್ರಗಳಾಗಿದ್ದವು, ಕೃಷಿ ಚಟುವಟಿಕೆಗಳು ಅಲ್ಲಿ ಚೆನ್ನಾಗಿ ಪ್ರಗತಿ ಹೊಂದುತ್ತಿದ್ದವು" ಎಂಬುದಾಗಿ ಹೇಳುತ್ತಾರೆ.[೬೧] ಹಾಗೂ ಈ ಬರವಣಿಗೆಗಳ ಸಮೀಕ್ಷೆಯಿಂದ ಕೆಲವು ವಿದ್ವಾಂಸರು ಬ್ರಹ್ಮದೇಯ ದೇವದಾಯಗಳನ್ನು ರಾಜ್ಯನೀತಿಯ ಉಪಕರಣಗಳನ್ನಾಗಿ ಪರಿಗಣಿಸಿದ್ದಾರೆ. ನಾಯಕರ ರಾಜ್ಯದಲ್ಲಿದ್ದ ಬ್ರಹ್ಮದೇಯ-ದೇವದಾಯ ವ್ಯವಸ್ಥೆಯು ಹೊಸತನವನ್ನು ಹೊಂದಿದೆ. ಅನೇಕ ಕಾರಣಗಳಿಂದ ಈ ಪ್ರದೇಶದ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಇತಿಹಾಸದ ಸಂದರ್ಭದಲ್ಲಿ ವಸತಿನೆಲೆಗಳ ಅಧ್ಯಯನವು ಅತ್ಯಂತ ಮಹತ್ವಯುತವಾಗುತ್ತದೆ.[೬೨] ಮೊದಲನೆಯದಾಗಿ ವಿವಿಧ ಸಮುದಾಯಗಳ ನೆಲೆಗಳು ಮತ್ತು ಸಂಸ್ಕೃತಿಗಳು ಜೀವನ ರೀತಿಯ ವೈವಿಧ್ಯವನ್ನು ಅರ್ಥಮಾಡಿಕೊಳ್ಳಲು ನೆರವಾಗುತ್ತದೆ. ಎರಡನೆಯದಾಗಿ, ಈ ನೆಲೆಗಳು ಅನೇಕ ವೇಳೆ ಸಮಾಜದ ಅನುಕ್ರಮಿತ ವ್ಯವಸ್ಥೆಯ ಸ್ವರೂಪವನ್ನು ಪ್ರತಿಬಿಂಬಿಸುತ್ತವೆ. ಮೂರನೆಯದಾಗಿ, ಅವು ಸಮಾಜದಲ್ಲಿ ಅಧಿಕಾರದ ಮತ್ತು ಪ್ರಭಾವದ ಕೇಂದ್ರಗಳಾಗಿ ಕಾಣಿಸಿಕೊಳ್ಳುತ್ತವೆ.

ಚಿತ್ರದುರ್ಗ ನಾಯಕರ ಆಡಳಿತಾವಧಿಯಲ್ಲಿ ವ್ಯಕ್ತಿಯೊಬ್ಬನು ಭೂ ಹಿಡುವಳಿಯನ್ನು ಆದಾಯ ರೂಪದಲ್ಲಿ ಹೊಂದಿರಬಹುದೆಂಬ ತತ್ವಕ್ಕೆ ರಾಜನ ಮತ್ತು ಸಮಾಜದ ಮನ್ನಣೆ ಇತ್ತು. ಆ ಕಾಲದಲ್ಲಿ ಭೂ ಮಾಲೀಕರು ರೈತರಾಗಿದ್ದರು. ಈ ಅರಸರೂ ಭೂ ಕಂದಾಯದ ವ್ಯವಹಾರಗಳನ್ನು ಗ್ರಾಮ ಮಟ್ಟದ ಅಧಿಕಾರಿಗಳಾದ ಗೌಡ, ಶಾನಬೋಗ, ತಳವಾರ ಮುಂತಾದವರ ಮೂಲಕ ವಸೂಲಿ ಮಾಡುತ್ತಿದ್ದರು. ಜೊತೆಗೆ ವಾರಸುದಾರರಿಲ್ಲದ ಭೂಮಿಯನ್ನು ತಮಗಿಷ್ಟ ಬಂದವರಿಗೆ ಹಂಚುವ, ದಾನ ನೀಡುವ ಅಧಿಕಾರವನ್ನು ಈ ನಾಯಕ ಅರಸರು ಇಟ್ಟುಕೊಂಡಿದ್ದರು.

ಚಿತ್ರದುರ್ಗ ನಾಯಕ ಅರಸರ ಕಾಲದ ಭೂ ಹಿಡುವಳಿಗಳನ್ನು ಸಾಗುವಳಿ ಮತ್ತು ಸಾಗುವಳಿಯಾಗದ ಬೀಳುಭೂಮಿ ಎಂಬುದಾಗಿ ಗುರುತಿಸಬಹುದು. ಬೀಳು ಭೂಮಿಯಲ್ಲಿ ಅರಣ್ಯ ಪ್ರದೇಶ, ಬಂಜರು ಭೂಮಿ, ಗುಡ್ಡ, ಬೆಟ್ಟಗಳು ಸೇರುತ್ತವೆ. ಸಾಗುವಳಿಯಾದ ಭೂಮಿಯನ್ನು ಚಿತ್ರದುರ್ಗ ನಾಯಕ ಅರಸರು ಬ್ರಾಹ್ಮಣರಿಗೆ ದೇವಾಲಯಗಳಿಗೆ ದಾನ ನೀಡಿದ್ದಾರೆ.[೬೩]

ಇವರು ಆರಂಭದಿಂದಲೂ ಬ್ರಾಹ್ಮಣರಿಗೆ ದಾನದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ. ಕ್ರಿ.ಶ.೧೫೮೦ರಲ್ಲಿ ಕಾಮಗೇತಿ ಕಸ್ತೂರಿ ಮದಕರಿನಾಯಕನು ಅಪಸ್ತಂಬ ಸೂತ್ರದ ಕೌಂಡಿನ್ಯ ಗೋತ್ರದ ಉಚ್ಚಂಗಿ ದುರ್ಗದ ಭಟ್ಟನಿಗೆ ಭೂದಾನ ಮಾಡಿದನು.[೬೪]

ವಿಜಯನಗರದ ತಿರುಮಲರಾಯನು ಹೊಳಲ್ಕೆರೆ ಸೀಮೆಯನ್ನು ತಿಮ್ಮಣ್ಣನಾಯಕನಿಗೆ ಅಮರ ಮಾಗಣಿಯಾಗಿ ಕೊಟ್ಟಾಗ ನಾಯಕನು ಅಲ್ಲಿಯ ವೇಣುಗೋಪಾಲ ದೇವಾಲಯಕ್ಕೆ ದಾನ ಕೊಟ್ಟನು. ಭಕ್ತಪಾಲ ವೇಣುಗೋಪಾಲ ಕೃಷ್ಣನ ಪ್ರತಿಷ್ಠಾಪನೆ ಮಾಡಿ ದೇವಾಲಯದ ಜೀರ್ಣೋದ್ಧಾರ ಮಡಿದುದಲ್ಲದೆ ಅರ್ಚಕ ವೆಂಕಟಾಚಾರ್ಯ ದೀಕ್ಷಿತರಿಗೆ ಗ್ರಾಮವನ್ನು ದಾನವಾಗಿ ಕೊಟ್ಟನು.[೬೫] ಇದೇ ಹೊಳಲ್ಕೆರೆ ಸೀಮೆಯನ್ನು ತಿಮ್ಮಣ್ಣನಾಯಕನು ತನ್ನ ಭಾವಮೈದುನ ಗುಳಿಯಪ್ಪನಾಯಕನಿಗೆ ಉಂಬಳಿಯಾಗಿ ಕೊಡುವನು. ಅಲ್ಲಿಯ ಬ್ರಾಹ್ಮಣರು ಮದನ ಗೋಪಾಲಕೃಷ್ಣನ ಮೂರ್ತಿಯನ್ನು ಮತ್ತೆ ಪ್ರತಿಷ್ಠಾಪಿಸಲು ಗುಳಿಯಪ್ಪನಾಯಕನು ದಾನವನ್ನು ಕೊಟ್ಟನು.[೬೬]

ಕ್ರಿ.ಶ. ೧೬೭೮ರಲ್ಲಿ ಇಮ್ಮಡಿ ಮದಕರಿನಾಯಕನು ಜೋಯಿಸ ವಿರುಪಾಕ್ಷಯ್ಯನಿಗೆ ಹೊಲವನ್ನು ದಾನ ನೀಡಿದನು. ಹಿರೇಮದಕರಿನಾಯಕನು ಭರಮಸಾಗರ ಸೀಮೆಯ ಕಸವನಹಳ್ಳಿಯನ್ನು ಮಹಾದೇವ ಶಾಸ್ತ್ರಿ ಎಂಬ ಬ್ರಾಹ್ಮಣನಿಗೆ ದಾನ ಕೊಟ್ಟನು. ಚಿತ್ರದುರ್ಗದ ಬಖೈರಿನಲ್ಲಿ ಕೊನೆಯ ಮದಕರಿ ನಾಯಕರು ಬ್ರಾಹ್ಮಣರಿಗೆ ಹತ್ತು ಸಾವಿರ ರೂಪಾಯಿ ದಾನ ನೀಡಿದನೆಂದು ತಿಳಿಸುತ್ತದೆ. ಇದರಿಂದ ಚಿತ್ರದುರ್ಗ ನಾಯಕ ಅರಸರು ಬ್ರಾಹ್ಮಣರಿಗೆ ಭೂಮಿ ಮತ್ತು ಹಣವನ್ನು ದಾನವಾಗಿ ನೀಡುತ್ತಿದ್ದರೆಂದು ತಿಳಿಯುತ್ತದೆ.

ಬ್ರಾಹ್ಮಣರಿಗೆ ಭೂಮಿಗಳನ್ನಲ್ಲದೆ ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ರೂಪಿಸಿ ನೀಡಲಾಗುತ್ತಿತ್ತು. ಕ್ರಿ.ಶ.೧೭೦೮ರಲ್ಲಿ ಬಿಚ್ಚುಗತ್ತಿ ಭರಮಣ್ಣನಾಯಕರು ಹೊನ್ನಾಳಿ ಸಿಂಗಣ್ಣ ಜೋಯಿಸರ ಪುತ್ರರಾದ ಕಾಶೀವಾಸಿ ನಾರಾಯಣಭಟ್ಟ, ಶಂಕರಭಟ್ಟ, ಶಿವಭಟ್ಟರಿಗೆ ಕೊಡಗನೂರು ಸೀಮೆಯ ಕೊಲುಕುಂಟೆ ಗ್ರಾಮವನ್ನು ನೀಡಿದರು. ಇದೇ ನಾಯಕನು ಅಶ್ವಲಾಯನ ಸೂತ್ರದ ಭಾರದ್ವಜ ಗೋತ್ರದ ಬೊಕ್ಕಸದ ನಾರಾಯಣಪ್ಪನಿಗೆ ಗಂಡ ಮುಕ್ತೇನಹಳ್ಳಿಯನ್ನು ನೀಡಿದನು. ಕ್ರಿ.ಶ.೧೭೧೫ರಲ್ಲಿ ಅಪಸ್ಥಂಬ ಸೂತ್ರದ ಭಾರದ್ವಜ ಗೋತ್ರದ ವೇಂಗ ಭಟ್ಟರ ಪುತ್ರ ಶೀಮಭಟ್ಟರಿಗೆ ಸಂತೆಬೆನ್ನೂರು ಸೀಮೆಯೊಳಗಣ ದೇಮಚರ್ಯದುರ್ಗವೆಂಬ ಗ್ರಾಮವನ್ನು ನೀಡಿದನು. ಕ್ರಿ.ಶ.೧೭೧೫ರಲ್ಲಿ ಭರಮಣ್ಣನಾಯಕರು ವಿಶ್ವಮಿತ್ರಗೋತ್ರದ ಉಗ್ರಾಣದ ರಂಗಪ್ಪನಿಗೆ ಬಿಳಿಚೋಡು ಸೀಮೆಯ ಕಲ್ಲೇನಹಳ್ಳಿಯನ್ನು ನೀಡಿದನು. ಕ್ರಿ.ಶ.೧೭೨೮ರಲ್ಲಿ ಹಿರೇಮದಕರಿನಾಯಕನು ವಿಶಿಷ್ಠ ಗೋತ್ರದ ಅಶ್ವಲಾಯದ ಸೂತ್ರದ ಬಲದೇವಗಳ ಶಾಮಚಾರ್ಯರಿಗೆ ಕೊಡಗನೂರು ಸೀಮೆಯ ಮಲ್ಲೇನಹಳ್ಳಿಯನ್ನು ಮದಕರಿ ಪುರವೆಂದು ನಾಮನಿರ್ದೇಶನ ಮಾಡಿಕೊಟ್ಟನು ಕ್ರಿ.ಶ.೧೭೩೩ರಲ್ಲಿ ಹಿರೇಮದಕರಿನಾಯಕನು ಶಿಂಜನಿ ಗೋತ್ರದ ಭಟ್ಟರ ಬಾಗೂರಿನ ವಾರಿಜ ನಾಭಯ್ಯ, ಸೀನಯ್ಯ ಭರಮಯ್ಯ ಎಂಬುವವರಿಗೆ ಜಗಳೂರು ಸೀಮೆಯೊಳಗಿನ ಕಸವನಹಳ್ಳಿ

ಗ್ರಾಮವನ್ನು ಅಗ್ರಹಾರ ಮಾಡಿಕೊಟ್ಟನು.[೧೭] ಕಾಮಗೇತಿ ಹನುಮಿನಾಯಕರ ಪುತ್ರನಾದ ತಿಮ್ಮಣ್ಣನಾಯಕರು ತುಂಗಭದ್ರ ತೀರದಲ್ಲಿ ತಮ್ಮ ತಂದೆಯಾದ ಹನುಮಿನಾಯಕರಿಗೆ ಪುಣ್ಯವಾಗಲೆಂದು ಅರಕೆರೆಯ ಗ್ರಾಮವನ್ನು ವೇದಾಂತಾಚಾರ್ಯ ಶ್ರೀ ಮೌಲ್ಯವಂತ ರಾಮಾನುಜಜೀಯ್ಯರಿಗೆ ದಾನವಾಗಿ ಕೊಟ್ಟ ವಿವರಗಳು ದಾಖಲು ಆಗಿದೆ.[೧೮] ಓಬಣ್ಣನಾಯಕರು ಹನುಮಂತ ದೇವರ ಗುಡಿಯನ್ನು ಕಟ್ಟಲು ವೊಡವಿನ ಬೊಪಗೊಂಡ, ಕೆಂಚಗೊಂಡ ಹಾಗೂ ಸೊಂಡೇಕೆರೆಯ ಬಡಗಿ ಪುರುವೋಜನ ಮಗ ಗೌರಯ್ಯರಿಗೆ ಭೂಮಿಯನ್ನು ದಾನ ಕೊಟ್ಟ ವಿವರಗಳು ಜಂಪಳನಾಯ್ಕನ ಕೋಟೆಯ ಶಾಸನದಲ್ಲಿ ದಾಖಲಾಗಿವೆ.[೧೯]

ನಾಯಕ ಅರಸರು ಆರಂಭದಿಂದಲೂ ದೈವಭಕ್ತರಾಗಿದ್ದು ಹೊಸ ದೇವಾಲಯಗಳ ನಿರ್ಮಾಣ, ಹಳೆಯ ದೇವಾಲಯಗಳ ಜೀರ್ಣೋದ್ಧಾರಗಳನ್ನು ಮಾಡಿದ್ದಾರೆ. ಅಲ್ಲದೆ ದಿನ ನಿತ್ಯದ ಪೂಜೆ, ಅಭಿಷೇಕಗಳೊಂದಿಗೆ ವಿವಿಧ ರೀತಿಯ ದಾನಗಳನ್ನು ನೀಡಿದ್ದಾರೆ. ಚಿತ್ರದುರ್ಗದ ಪ್ರಥಮ ಪಾಳೆಯಗಾರನಾದ ತಿಮ್ಮಣ್ಣನಾಯಕನು ಚಿತ್ರದುರ್ಗದಲ್ಲಿ ಹನುಮಂತದೇವರಗುಡಿ, ಏಕನಾಥಮ್ಮನ ಗುಡಿಯನ್ನು ಕಟ್ಟಿಸಿದನು.[೨೦] ಚಿಕ್ಕಣ್ಣನಾಯಕನ ಅಧಿಕಾರಿಯಾದ ಜಗಳೂರು ನಾಡ ಕುಲಕರಣಿ ಪುಟ್ಟಯಪ್ಪನು ಜೋಗಿ ದೇವಾಲಯವನ್ನು ಕಟ್ಟಿಸಿದನು.[೨೧] ಚಿಕ್ಕಣ್ಣನಾಯಕರ ಪಾರುಪತ್ಯಗಾರ ವೀರಣ್ಣನೆಂಬುವನು ಸಿದ್ದವ್ವನ ಹೆಸರಿನಲ್ಲಿ ಅಣಬೂರಿನಲ್ಲಿ ದೇವಾಲಯವನ್ನು ಕಟ್ಟಿಸಿದನು. ಈ ದೇವಾಲಯ ಕಟ್ಟಿಸಿದ ಮಂಚಾಲ ಬಸವಯ್ಯನಿಗೆ ಹೊಲ, ಮನೆ ದಾನ ನೀಡಿದನು.[೨೨] ಮಾಯಕೊಂಡದಲ್ಲಿ ಹದಿನಾಲ್ಕು ಹದಿನೈದನೇ ಶತಮಾನದಲ್ಲಿ ಇದೇ ನಾಯಕರು ನರಸಿಂಹ ದೇವಾಲಯವನ್ನು ನಿರ್ಮಿಸಿದರು.[೨೩] ಶಂಕರನಹಳ್ಳಿಯಲ್ಲಿ ತಿರುವೆಂಗಳ ನಾಥನೆಂದು ಕರೆಯುವ ರಂಗನಾಥಸ್ವಾಮಿ ದೇವಾಲಯವನ್ನು ಶಂಕರನಹಳ್ಳಿ,[೨೪] ಲೋಕಿಕೆರೆ, ಹಂಪನೂರು[೨೫]ಗಳಲ್ಲಿ ನಿರ್ಮಿಸಿದರು. ಕ್ರಿ.ಶ.೧೬೯೮ರಲ್ಲಿ ಬಿಚ್ಚುಗತ್ತಿ ಭರಮಣ್ಣನಾಯಕನು ಶ್ರೀರಂಗನಾಥಸ್ವಾಮಿಯ ದೇವಾಲಯವನ್ನು ಜೀರ್ಣೋದ್ಧಾರ ಮಾಡಿ ಪುನಃ ವಿಗ್ರಹ ಪ್ರತಿಷ್ಠಾಪನೆ ಮಾಡಿಸಿ 'ಎಮ್ಮೆಹಳ್ಳ' ಗ್ರಾಮವನ್ನು ಉಂಬಳಿ ನೀಡಿದ ಬಗ್ಗೆ ವಿವರವಿದೆ.[೨೬]

ಮಠಗಳು ನೀಡುವ ಶಿಕ್ಷಣ, ಸಾಮಾಜಿಕ ಸೇವೆಯನ್ನು ಗಮನಿಸಿ ಭೂಮಿ ರೂಪದ ದಾನವನ್ನು ನೀಡಲಾಗುತ್ತಿತ್ತು. ಇವುಗಳ ಒಡೆತನದಲ್ಲಿರುವ ಭೂ ಹಿಡುವಳಿಗಳನ್ನು ಮಠಪುರ ಭೂಮಿ ಎಂದು ಕರೆಯುತ್ತಿದ್ದರು. ಉದಾಹರಣೆಗೆ ಕ್ರಿ.ಶ.೧೬೭೮ರಲ್ಲಿ ಚಿಕ್ಕಣನಾಯಕನು ಬಾಗೂರು ಸೀಮೆಯೊಳಗಿನ 'ಮಾರಬಗಟ್ಟೆ' ಎಂಬ ಗ್ರಾಮವನ್ನು ಕೃಷ್ಣಾರ್ಪಣವಾಗಿ ಧಾರೆಯೆರೆದು ಕೊಡುವುದರ ಮೂಲಕ ತನ್ನ ನಿಷ್ಠೆಯನ್ನು ಕೂಡ್ಲಿಶೃಂಗೇರಿ ಮಠಕ್ಕೆ ತೋರಿಸಿದನು. ಕ್ರಿ.ಶ.೧೭೧೬ರಲ್ಲಿ ಚಿತ್ರದುರ್ಗದ ಪಾಳೆಯಗಾರ ಬಿಚ್ಚುಗತ್ತಿ ಭರಮಣ್ಣನಾಯಕರು ವ್ಯಾಸರಾಯ ಮಠದ ಶ್ರೀ ರಘುನಾಥ ತೀರ್ಥಸ್ವಾಮಿಗಳಿಗೆ 'ದ್ಯಾಮೆನ' ಹಳ್ಳಿಯನ್ನು ಭೂಮಾನ್ಯವಾಗಿ ನೀಡಿದರೆಂದು ಶಾಸನದಿಂದ ತಿಳಿಯುತ್ತದೆ. ಅದೇ ರೀತಿಯಾಗಿ ಮತ್ತೋಡಿನ ಸಂಗಪ್ಪನಾಯಕನ ಮಗ ಹಾಲಪ್ಪನಾಯಕನು 'ಗಂಜಗೆರೆ'ಯನ್ನು ಜೀರ್ಣೋದ್ದಾರ ಮಾಡಿ ಕ್ರಿ.ಶ.೧೭೩೬ರಲ್ಲಿ ನರಸಾಪುರ ಎಂದು ಹೆಸರಿಟ್ಟು ತನ್ನ ತಂದೆ ತಾಯಿಗಳಿಗೆ ಒಳಿತಾಗಲೆಂದು ಮುರುಘಮಠ ಕಟ್ಟಿಸಿ 'ಅರಳಹಳ್ಳಿ'ಯನ್ನು ದಾನ ನೀಡಿದ ಬಗ್ಗೆ ಶಾಸನದ ವಿವರವಿದೆ.

ವಿಜಯನಗರ ಕಾಲದಲ್ಲಿ ಈ ಪ್ರದೇಶದಲ್ಲಿ ಸ್ಥಳೀಯ ಸಂಸ್ಥೆಗಳಾದ ಅಗ್ರಹಾರ ಮತ್ತು ಮಹಾನಾಡು ಎಂಬ ಸ್ಥಳೀಯ ಸಂಸ್ಥೆಗಳಿದ್ದವು. ಅಗ್ರಹಾರಗಳು ಸಹ ಭೂ ಹಿಡುವಳಿಗಳನ್ನು ಹೊಂದಿರುವುದರ

ಜೊತೆಗೆ ಅವುಗಳ ಅಭಿವೃದ್ಧಿಗೆ ಗಮನ ಹರಿಸಿದ್ದವು. ಅವುಗಳೇ ಕೃಷಿ ಉತ್ಪನ್ನದ ಪಾಲಿನ ಭಾಗವನ್ನು ನಿರ್ಧರಿಸುತ್ತಿದ್ದವು. ಮಹಾನಾಡು ಅನೇಕ ಗ್ರಾಮಗಳನ್ನೊಳಗೊಂಡ ಸ್ಥಳೀಯ ಸಂಸ್ಥೆಯಾಗಿತ್ತು.

ಕೃಷಿ ವಿಸ್ತರಣೆಯ ಹೆಚ್ಚಳವನ್ನು ಪುರೋಹಿತಶಾಹಿ ಸಂಸ್ಥೆಗಳಾದ ಅಗ್ರಹಾರ, ಮಠ, ದೇವಸ್ಥಾನಗಳಿಗಾಗಿ ಭೂಮಿಯನ್ನು ತೆರಿಗೆರಹಿತವಾಗಿ ಬಿಟ್ಟಿರುವುದು ಮೇಲಿನ ಉದಾಹರಣೆಗಳಿಂದ ಸ್ಪಷ್ಟಪಡಿಸಬಹುದು. ೧೬ನೇ ಶತಮಾನದ ಸಮಾಜದಲ್ಲಿ ದೇವಾಲಯಗಳು ರಾಜಕೀಯ ಶಕ್ತಿಯನ್ನು ನ್ಯಾಯಬದ್ಧಗೊಳಿಸುವ ಹಾಗೂ ರೈತರ ಅಧೀನತೆಯನ್ನು ಬಲವಾಗಿ ನೆಲೆಗೊಳಿಸುವ ಸಾಧನವಾಗಿದ್ದವು. ಹೀಗೆ ಮಠಗಳು, ದೇವಾಲಯಗಳು, ಬ್ರಾಹ್ಮಣರು, ಭೂಮಾಲಿಕರಾಗಿ ಉತ್ಪಾದನಾ ಸಾಧನದ ಒಡೆಯರಾದುದರಿಂದ ಯುದ್ಧ ಹಾಗೂ ಬೇರೆ ಕೆಲವು ಪ್ರಕ್ಷೋಭೆಗಳಿಂದ ಪಾರಾಗುವುದು ಅವರಿಗೆ ಸಾಧ್ಯವಿತ್ತು. ದೇವಾಲಯದ ವ್ಯವಸ್ಥೆಯ ವಿಸ್ತರಣೆಯ ವೃತ್ತಿ ಜೀವಿಗಳು ಮತ್ತು ಕುಶಲಕರ್ಮಿಗಳನ್ನು ಗುಲಾಮರನ್ನಾಗಿ ಮಾಡುವ ಪ್ರಕ್ರಿಯೆಪೂರಕವಾಗಿ ನಡೆದಿತ್ತೆಂಬುದು ತಿಳಿಯುತ್ತದೆ. ಇಲ್ಲಿ ಕಾರ್ಯನಿರ್ವಹಿಸುವ ಕೆಳಹಂತದ ಜನರ ಪರಿಸ್ಥಿತಿ ಜೀತದಾಳುಗಳಿಗಿಂತ ಬೇರೆಯಾಗಿರಲಿಲ್ಲ. ಇಂತಹ ಭೂ ಹಿಡುವಳಿಗಳು ರಾಜ್ಯಕ್ಕೆ ಯಾವ ರೀತಿಯ ತೆರಿಗೆಯನ್ನು ನೀಡದೆ ಅನುಭವಿಸುತ್ತಿದ್ದರು. ಈ ವ್ಯವಸ್ಥೆಯನ್ನು ಕುರಿತು ಸಿದ್ಧಲಿಂಗಸ್ವಾಮಿಯವರು ಅಭಿಪ್ರಾಯಪಡುವಂತೆ "ಬ್ರಾಹ್ಮಣರು ಈ ಜಮೀನುಗಳ ನೆರೆಹೊರೆಯ ಕಾಡುಗಳನ್ನು ಹಾಗೂ ಫಲವತ್ತಾದ ಜಮೀನುಗಳನ್ನು ಒತ್ತುವರಿ ಮಾಡಿಕೊಂಡು ಬಂದರು. ಇದು ಬ್ರಾಹ್ಮಣಶಾಹಿ ಸಿದ್ಧಾಂತದ ಪ್ರಭಾವ ಹಾಗೂ ಸಾಮಾಜಿಕ ಅಸಮಾನತೆಯನ್ನು ಒಪ್ಪುವ ಮನೋಭಾವದಿಂದಾಗಿ ರೈತ ಹೊರಬಂದು ವ್ಯವಸ್ಥೆಯನ್ನು ವಿರೋಧಿಸಲಿಲ್ಲ. ಹೀಗಾಗಿ ಭಯ ಮತ್ತು ಮೋಸದ ನೆರಳಿನಲ್ಲಿ ಈ ಊಳಿಗಮಾನ್ಯ ಧಾರ್ಮಿಕ ಸಿದ್ಧಾಂತ"[೭೭] ಬೆಳೆಯಲು ಅವಕಾಶವಾಯಿತು ಎಂದಿದ್ದಾರೆ.

ಭೂ ಒಡೆತನವು ಒಬ್ಬ ವ್ಯಕ್ತಿಯ ಅಂತಸ್ತನ್ನು ನಿರ್ಧರಿಸುತ್ತಿತ್ತು. ಹಾಗೆಯೇ ಭೂಮಿಯನ್ನು ಒಬ್ಬ ರಾಜನಿಂದ ದಾನವಾಗಿ, ಕಾಣಿಕೆಯಾಗಿ, ಬಳುವಳಿಯಾಗಿ, ಜಹಗೀರಾಯಾಗಿ ವಿವಿಧ ಒಪ್ಪಂದಗಳ ಮೂಲಕ ಪಡೆಯುವುದು ಮತ್ತು ಪಡೆದ ಭೂಮಿಗಾಗಿ ವಿವಿಧ ಸೇವೆ ಕಪ್ಪಕಾಣಿಕೆ ಸೇವಾ ಸಹಾಯ ಸಲ್ಲಿಸುವುದಾಗಿತ್ತು. ಈ ಲಕ್ಷಣಗಳು ಸೇವಾ ಭೂ ಹಿಡುವಳಿಯಲ್ಲಿ ಚಿತ್ರದುರ್ಗ ನಾಯಕ ಅರಸರ ಕಾಲದಲ್ಲಿಯೂ ಇರುವುದು ಸ್ಪಷ್ಟವಾಗಿ ತಿಳಿಯುತ್ತದೆ.

ವಿಜಯನಗರ ಅರಸರ ಕಾಲದಲ್ಲಿ ಸಾಗುವಳಿಯಾದ ಭೂಹಿಡುವಳಿಗಳನ್ನು ಗದ್ದೆ, ಬೆದ್ದಲು, ಮತ್ತು ತೋಟ ಎಂಬುದಾಗಿ ವರ್ಗೀಕರಿಸಲಾಗಿತ್ತು. ತೋಟವನ್ನು ಮಾವಿನ ತೋಟ, ಹೂವಿನ ತೋಟ, ಅಡಿಕೆ ತೋಟ, ತೆಂಗಿನ ತೋಟ ಮುಂತಾಗಿ ಕರೆಯುತ್ತಿದ್ದರು.[೭೮]

ಬಿತ್ತನೆಯ ಪ್ರಮಾಣದ ಮೇಲೆ ಖಂಡುಗ, ಕೊಳಗ, ಸಲಿಗೆ ಮತ್ತು ಮತ್ತರು ಇತ್ಯಾದಿ ಅಳತೆಗಳ ಆಧಾರದಲ್ಲಿ ಭೂ ಹಿಡುವಳಿಗಳ ಉತ್ಪಾದಕತೆಯನ್ನು ನಿರ್ಧರಿಸಲಾಗುತ್ತಿತ್ತು. ಚಿತ್ರದುರ್ಗ ನಾಯಕ ಅರಸರ ಆಡಳಿತಾವಧಿಯಲ್ಲಿ ವ್ಯಕ್ತಿಯೊಬ್ಬನು ಭೂಮಿ ರೂಪದ ಆಸ್ತಿಯ ಭೂ ಒಡೆತನ ಹೊಂದಿದ್ದು, ಈ ವೇಳೆಯಲ್ಲಿ ಖುಷ್ಕಿ, ತರಿ, ಭಾಗಾಯ್ತು ಭೂ ಹಿಡುವಳಿಗಳಿದ್ದವು. ನಾಯಕ ಅರಸರ ಕಾಲದಲ್ಲಿ ಕಂದಾಯ ಪಡೆಯುವ ಭೂ ಹಿಡುವಳಿಗಳನ್ನು ಗದ್ದೆ, ಹೊಲ, ಬೆದ್ದಲು, ತೋಟ ತುಡಿಕೆ ಎಂದು ಕರೆಯುತ್ತಿದ್ದರು. ಈ ಪ್ರದೇಶದ ಕೆರೆಗಳ ಆಶ್ರಯದಲ್ಲಿ ಗದ್ದೆಗಳು ಇದ್ದವು. ಕೆರೆಗಳು ಇಲ್ಲದೆ ಮಳೆಯನ್ನೇ ಅವಲಂಬಿಸಿ ವ್ಯವಸಾಯ ಮಾಡಬೇಕಿದ್ದ ಜಮೀನುಗಳನ್ನು ಹೊಲ ಮತ್ತು ಬೆದ್ದಲು ಎಂದು ಕರೆಯುತ್ತಿದ್ದರು.

ಮಳೆಯನ್ನೇ ಅವಲಂಬಿಸಿದ ವ್ಯವಸಾಯದ ಪದ್ಧತಿಯನ್ನು 'ಕಾಡಾರಂಭ'ವೆಂದೂ, ಕೆರೆ, ಬಾವಿ, ಮೊದಲಾದ ಜಲಾಶಯಗಳನ್ನು ಆಧರಿಸಿ ನಡೆಸುತ್ತಿದ್ದ ವ್ಯವಸಾಯ ಪದ್ಧತಿಗೆ 'ನೀರಾರಂಭ' ಎಂದು ಕರೆಯುತ್ತಿದ್ದರು. ಸಾಮಾನ್ಯವಾಗಿ ಶಾಸನಗಳಲ್ಲಿ ಕಂಡುಬರುವಂತೆ ಕೆರೆಯ ಕೆಳಗೆ ಗದ್ದೆಕಂಬ ೧೬, ತೆಂಕಲು ಕೆಂಗಾಡು ಮತ್ತರು[೭೯] ಎಂದು ಶಾಸನದಲ್ಲಿ ಬರುವ 'ಕಂಬ', 'ಮತ್ತರು' ಎಂಬ ಶಬ್ದಗಳು ಸ್ಪಷ್ಟವಾಗಿ ಭೂ ಹಿಡುವಳಿಯ ವಿಸ್ತಾರವನ್ನು ಸೂಚಿಸುತ್ತದೆ. ಹಾಗೆಯೇ ಶಾಸನದಲ್ಲಿ ಬರುವಂತೆ ಸೀಮೆ ಒಳಗಾದ ಗದ್ದೆ, ಬೆದ್ದಲು, ಕಾಡುರಂಭ, ನೀರಾರಂಭ[೮೦] ಹತ್ತು ಕೊಳಗಗದ್ದೆ,[೮೧] ಖಂಡುಗದ ಭೂಮಿ[೮೨] ಬಿಟ್ಟಗದ್ದೆ, ಖಂಡುಗ ವೆರಡು ಅಥವಾ ಬಿಟ್ಟುಗದ್ದೆ ಖಂಡುಗವೆರಡು[೮೩] ಕೊಳಗಗದ್ದೆ,[೮೪] ಹಿರಿಯಕೆರೆಯ ಕೆಳಗೆ ಗದ್ದೆ,[೮೫] ನೈವೇದ್ಯಕ್ಕೆ ಬಿಟ್ಟಗದ್ದೆ, ಕುಂದೂರು ಪಡುವಣ ತುಂಬಿನಗದ್ದೆ[೮೬] ಎಂಬುದಾಗಿ ಕರೆಯುತ್ತಿದ್ದರು.

ಗದ್ದೆ ಎನ್ನುವುದು ಭತ್ತವನ್ನು ಬೆಳೆಯುವ ನೀರಾವರಿಗೆ ಒಳಪಟ್ಟ ಪ್ರದೇಶವಾದರೆ, ಬೆದ್ದಲು ಎನ್ನುವುದು ಒಣ ಬೇಸಾಯ ಕ್ಷೇತ್ರವನ್ನು ಸೂಚಿಸುತ್ತದೆ. ಬೆದ್ದಲು ಎಂಬುವುದು ಮಳೆಯಲ್ಲಿ ಒಂದು ಬೆಳೆಯನ್ನು ತೆಗೆಯಲು ಮಾತ್ರ ಪ್ರಶಸ್ತವಾದ ಸ್ಥಳವನ್ನು ಸೂಚಿಸುತ್ತದೆ. ವಿಜಯನಗರ ಕಾಲದ ಒಣಭೂಮಿ ಬೇಸಾಯ ಪ್ರಕಾರಗಳಲ್ಲಿ ಕಾಡಾರಂಬ ಎಂಬುವುದು ಮುಖ್ಯವಾದುದು ಎಂದು ತಿಳಿದುಬರುತ್ತದೆ.

ಚಿತ್ರದುರ್ಗ ಪ್ರದೇಶದಲ್ಲಿ ಭೂಮಿಹಿಡುವಳಿಗಳನ್ನು ಸಾಮಾನ್ಯವಾಗಿ ಬಿತ್ತುವ ಬೀಜಪದ್ಧತಿಯಲ್ಲಿ ಅಳತೆ ಮಾಡುವ ಕ್ರಮವಿದ್ದಿತು. ಉದಾಹರಣೆಗೆ ಶಾಸನಗಳಲ್ಲಿ ಒಂದು ಖಂಡುಗ ಭೂಮಿ ಎಂಬಂತಹ ಮಾತುಗಳು ಬರುತ್ತವೆ.[೮೭] ಒಂದು ಖಂಡುಗ ಭೂಮಿ ಎಂದರೆ ೧೬ ಸೇರು ಬೀಜವನ್ನು ಬಿತ್ತುವ ಭೂಮಿ ಎಂದರ್ಥ. ಈ ಪ್ರದೇಶದಲ್ಲಿ ಕೆರೆಗಳಿಂದ, ಬಾವಿಗಳಿಂದಲೂ ವ್ಯವಸಾಯ ಮಾಡುತ್ತಿದ್ದರು. ಶಾಸನಗಳಲ್ಲಿ ಕಪಿಲೆ ಬಾವಿಯ ನೀರಾವರಿ ಮತ್ತು ಏತ ನೀರಾವರಿಯ ಪ್ರಸ್ತಾಪ ಬರುತ್ತದೆ.[೮೮] ಕಪಿಲೆ ಅಥವಾ ಬಕೀಟಿನ ಸಾಧನದಿಂದ ಮೇಲಕ್ಕೆ ಎತ್ತುಗಳ ಸಹಾಯದಿಂದ ನೀರನ್ನು ಎಳೆಯಲಾಗುತ್ತಿತ್ತು. ಒಬ್ಬ ವ್ಯಕ್ತಿ, ಮತ್ತು ಒಂದು ಜೊತೆ ಎತ್ತುಗಳ ಸಹಾಯದಿಂದ ನೀರನ್ನು ಎಳೆಯಬಹುದಾಗಿತ್ತೆಂದು ಬುಕಾನನ್ ಹೇಳಿದ್ದಾನೆ.[೮೯] ಏತ ಬಾವಿಯಿಂದ ನೀರನ್ನು ಮನುಷ್ಯರು ಸೂಕ್ತವಾದ ಉಪಕರಣಗಳನ್ನು ಬಳಸಿ ಮೇಲಕ್ಕೆ ಎತ್ತುತ್ತಿದ್ದರು. ಹೀಗೆ ಈ ಪ್ರದೇಶದ ನೀರಾವರಿ ವ್ಯವಸ್ಥೆಯಲ್ಲಿ ಕೆರೆಗಳು ಮತ್ತು ಬಾವಿಗಳು ಪ್ರಧಾನ ಪಾತ್ರ ವಹಿಸಿದ್ದವು.

ಇಲ್ಲಿನ ಕೃಷಿ ವ್ಯವಸ್ಥೆಯಲ್ಲಿ ಭೂ ಒಡೆಯ ಮತ್ತು ಗೇಣಿದಾರ ಎಂಬ ಎರಡು ವರ್ಗಗಳು ಇದ್ದುದನ್ನು ಗುರುತಿಸಬಹುದು. ಭೂ ಒಡೆಯರು ಬರುವ ಜಾತಿ ಅಥವಾ ಗುಂಪುಗಳು ಯಾವುವು ಎಂಬ ಪ್ರಶ್ನೆ ಸಹಜವಾಗಿ ನಮ್ಮ ಮುಂದೆ ಬರುತ್ತದೆ. ಈ ಪ್ರದೇಶದ ಸಮಾಜದಲ್ಲಿ ಸಮಸ್ತ ಭೂಮಿಯ ಅಂತಿಮ ಒಡೆತನ ನಾಯಕರಿಗೆ ಸೇರಿದ್ದಿತು. ಆದರೂ ಭೂ ಹಿಡುವಳಿಯ ಖಾಸಗಿ ಒಡೆತನವನ್ನು ನಾಯಕರು ರಕ್ಷಿಸುತ್ತಿದ್ದರು. ಅದಕ್ಕೆ ಮನ್ನಣೆ ಕೊಟ್ಟಿದ್ದರು. ಚಿತ್ರದುರ್ಗ ನಾಯಕರು ಭೂ ಹಿಡುವಳಿಯನ್ನು ಬೇರೆಯವರ ಒಡೆತನಕ್ಕೆ ನೀಡುವಾಗ ಅದು ಕ್ರಯ, ಭೋಗ್ಯ ಮತ್ತು ದಾನ ಇವೇ ಮೊದಲಾದ ವಿಧಾನಗಳನ್ನು ಶಾಸನಗಳ ಮೂಲಕ ಸ್ಪಷ್ಟಪಡಿಸಿದ್ದಾರೆ.[೯೦] ಕೃಷಿ ಪ್ರಧಾನವಾದ ಸಮಾಜದಲ್ಲಿ ಭೂ ಒಡೆತನ ಭೂ ಮಾಲೀಕರಿಗೆ ಪ್ರತಿಷ್ಠೆಯ ಸಂಕೇತದ ಜೊತೆಗೆ ಆರ್ಥಿಕ ಸುಭದ್ರತೆಯ ಕುರುಹು

ಆಗಿದ್ದಿತು. ಬಹುತೇಕ ಸಮುದಾಯದವರು ಭೂ ಒಡೆಯರಾಗಿದ್ದರು ಆದರೆ ಕೆಲವರು ಸ್ವತಃ ಕೃಷಿ ಮಾಡುತ್ತಿರಲಿಲ್ಲ. ಪ್ರಸ್ತುತ ಹಿಡುವಳಿ ವ್ಯವಸ್ಥೆಯೇ ಮುಂದುವರೆದಿತ್ತು. ಲಿಂಗಾಯಿತ, ರೆಡ್ಡಿಗಳು, ಒಕ್ಕಲಿಗರು ಪ್ರಧಾನವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಭೂ ಒಡೆಯರಾಗಿದ್ದರು. ಇದೇ ವರ್ಗದಲ್ಲಿ ಸಣ್ಣ ಭೂ ಹಿಡುವಳಿದಾರರು ಗೇಣಿದಾರರಾಗಿ ಅಥವಾ ಕೂಲಿಗಾಗಿ ದುಡಿಯುತ್ತಿದ್ದರು. ಇವರ ಜೊತೆಗೆ ಇತರ ಜಾತಿಗಳು ಸೇರಿದ್ದವು. ಗೇಣಿದಾರರ ವರ್ಗವಲ್ಲದೆ ಅಸ್ಪೃಶ್ಯ ಜಾತಿಗಳ ಜೀತದಾಳುಗಳು ಇದ್ದರು. ಗೇಣಿದಾರರಿಗಿಂತ ಜೀತದಾಳುಗಳ ಸ್ಥಿತಿ ಶೋಚನೀಯವಾಗಿತ್ತು.

ಒಂದು ಗ್ರಾಮದ ಭೂ ಹಿಡುವಳಿಯನ್ನು ಲಿಂಗ ಮುದ್ರೆಕಲ್ಲುಗಳ ಮೂಲಕ ಗುರುತಿಸಿ, ಒಂದು ಗ್ರಾಮದಿಂದ ಮತ್ತೊಂದು ಗ್ರಾಮವನ್ನು ಪ್ರತ್ಯೇಕಿಸುವ ಕ್ರಮವು ಜಾರಿಯಲ್ಲಿತ್ತು. ಉದಾಹರಣೆಗೆ ಭೂ ಹಿಡುವಳಿಗಳನ್ನು ಕೆತ್ತಿದ ಕಲ್ಲುಗಳ ಮೂಲಕ ಹಾಗೂ ಶಾಸನಗಳ ಮೂಲಕವು ಗುರುತಿಸುತ್ತಿದ್ದರು. ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆಯ ಶಕವರ್ಷ ೧೦೭೬ರ ಶಾಸನವೊಂದು ತಿಳಿಸಿರುವಂತೆ ದಾನ ಕೊಟ್ಟಿರುವ ತೋಟದ ಗಡಿ ಈ ರೀತಿ ಇದೆ: ತೋಟಕ್ಕೆ ಮೂಡಲು ಹಿರೇಕೆರೆ, ತೆಂಕಲು ಹೆದ್ದಾರಿ, ಪಡುವಲು ನೆಟ್ಟಗಲ್ಲು, ಬಡಗಲು ಹುಟ್ಟರೆ ಗದ್ದೆಗಳು ಇದರ ಮಧ್ಯ ಇರುವ ಪ್ರದೇಶವೆಂದು ಗುರುತಿಸಿದ್ದಾರೆ. ಹೀಗೆ ಭೂ ಹಿಡುವಳಿಗಳ ವಿಸ್ತೀರ್ಣತೆಯನ್ನು ನಿಯಮಬದ್ಧವಾಗಿ ವಿಭಾಗಿಸಿರುವುದು ಶಾಸನಗಳಿಂದ ತಿಳಿಯುತ್ತದೆ. ಅದೇ ರೀತಿ ಶಕವರುಷ ೧೪೪೮ರ ಶಾಸನದಲ್ಲಿ ದಾನ ನೀಡಿದ ನಿಬಗೂರು ಗ್ರಾಮದ ನಾಲ್ಕು ಗಡಿಗಳ ವಿವರವಿದೆ. ಮೂಡಲು ಕಟ್ಟಿಗೆ ಹಳ್ಳಿಯ ಹೊಲದ ಮೇರೆ, ತೆಂಕಲು ಬಿದರಕೆರೆಯ ಹೊಲದ ಗಡಿ, ಪಡುವಲು ಅದೇ ಬಿದರಕೆರೆಯ ಹೊಲದ ಮೇರೆ, ಮೂಡಲು ವಾಯುವ್ಯಕ್ಕೆ ಹುಲುಕುಂಟೆಯ ಹೊಲದ ಮೇರೆ, ಆಗ್ನೇಯ ಬಡಗಲು ಈಶಾನ್ಯ ಕೋಡಿಹಳ್ಳಿಯ ಹೊಲ ಮೇರೆ, ಹೀಗೆ ಒಂದು ಗ್ರಾಮದ ಎಲ್ಲ ದಿಕ್ಕುಗಳನ್ನು ಸ್ಪಷ್ಟವಾಗಿ ಸೂಚಿಸುವ ಲಿಂಗಮುದ್ರೆ ಕಲ್ಲುಗಳನ್ನು ನೆಟ್ಟು ಗುರುತಿಸುವ ಕ್ರಮ ಜಾರಿಯಲ್ಲಿತ್ತು.[೯೧] ಕೆಲವು ಬಾರಿ ಭೂಮಿಯ ವಿಸ್ತೀರ್ಣವನ್ನು ಬಿತ್ತುವ ಬೀಜದ ಪ್ರಮಾಣದಿಂದ ನಿರ್ಧರಿಸಲಾಗುತ್ತಿತ್ತು. ಒಂದು ಕೊಳಗ ಬೀಜವನ್ನು ಬಿತ್ತಿದ ಭೂಮಿಯೂ ಒಂದು ಘಟಕವೆನಿಸುತ್ತಿತ್ತು.

ಚಿತ್ರದುರ್ಗ ಪ್ರದೇಶದ ಭೂಮಿಯ ಫಲವತ್ತತೆಯನ್ನು ಗಮನಿಸಿ ಎರೆಭೂಮಿ, ಕೆಂಪುಭೂಮಿ, ಮರಳು ಭೂಮಿ, ಕಲ್ಲಚ್ಚು ಭೂಮಿ ಮುಂತಾಗಿ ಕರೆಯುವ ಕ್ರಮ ರೂಢಿಯಲ್ಲಿತ್ತು. ಈ ನಾಯಕ ಅರಸರು ಕೃಷಿಯ ಅಭಿವೃದ್ಧಿಗೋಸ್ಕರ ಹಲವಾರು ಬಾವಿ, ಕೆರೆಗಳನ್ನು ನಿರ್ಮಿಸಿದ್ದರು. ಅವುಗಳಲ್ಲಿ ಭರಮಪ್ಪನಾಯಕನ ಕಾಲದಲ್ಲಿ ನಿರ್ಮಾಣಗೊಂಡ ಕೆರೆಗಳು ಸಾವಿರಾರು ಎಕರೆ ಭೂಮಿಗೆ ನೀರುಣಿಸುತ್ತಿದ್ದವು. ಚಿತ್ರದುರ್ಗದ ನಾಯಕರ ಕಾಲದಲ್ಲಿ ಹಲವು ಪ್ರದೇಶಗಳಲ್ಲಿ ಹೊಸದಾಗಿ ಭೂಮಿಯನ್ನು ಕೃಷಿಗೊಳಪಡಿಸಿ ಅಥವಾ ಜೀರ್ಣೋದ್ಧಾರ ಮಾಡಿ ಇಂತಹ ಗ್ರಾಮಗಳಿಗೆ ರಾಜಮನೆತನದ ರಾಣಿಯರ ಹೆಸರಿಟ್ಟರು. ಅವುಗಳಲ್ಲಿ ಸಿದ್ಧವ್ವನಹಳ್ಳಿ, ಸಿದ್ದವ್ವನದುರ್ಗ, ರಂಗವ್ವನಹಳ್ಳಿ, ವೀರವ್ವನಾಗತಿಹಳ್ಳಿ, ಓಬವ್ವನಾಗತಿಹಳ್ಳಿ, ಭಗ್ಗಲು ರಂಗವ್ವನಹಳ್ಳಿ[೯೨] ಮುಂತಾದ ಗ್ರಾಮಗಳಿದ್ದವು. ಈ ನಾಯಕ ಅರಸರ ರಾಣಿಯರಿಗೆ 'ನಾಯಕಿ' ಅಥವಾ 'ನಾಗತಿ' ಎಂದು ಸಹ ಕರೆಯಲಾಗುತ್ತಿತ್ತು.

ಒಟ್ಟಾರೆಯಾಗಿ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಸಮಸ್ತ ಭೂಮಿಯ ಒಡೆತನ ನಾಯಕ ಅರಸರಿಗೆ ಸೇರಿದ್ದಿತು. ಆದರೂ ಭೂ ಹಿಡುವಳಿಯ ಖಾಸಗಿ ಒಡೆತನವನ್ನು ನಾಯಕರು ರಕ್ಷಿಸುತ್ತಿದ್ದರು.

ಅಲ್ಲದೆ ಅದಕ್ಕೆ ಮನ್ನಣೆ ಕೊಟ್ಟಿದ್ದರು. ಚಿತ್ರದುರ್ಗ ನಾಯಕರು ಭೂ ಹಿಡುವಳಿಯನ್ನು ಬೇರೆಯವರ ಒಡೆತನಕ್ಕೆ ನೀಡುವಾಗ ಅದು ಕ್ರಯ ಭೋಗ್ಯ[೩] ಮತ್ತು ದಾನ್[೪] ಮೊದಲಾದ ವಿಧಾನಗಳನ್ನು ಸೂರ್ಯ ಚಂದ್ರರು ಇರುವ ತನಕ ಪುತ್ರ ಪವ್ರತ್ರ ವಂಶ ಪಾರಂಪರ್ಯವಾಗಿ ಅನುಭವಿಸುವಂತೆ ಶಾಸನಗಳು ಸ್ಪಷ್ಟಪಡಿಸುತ್ತವೆ. ಕೃಷಿ ಪ್ರಧಾನವಾದ ಸಮಾಜದಲ್ಲಿ ಭೂ ಒಡೆತನವು ಭೂ ಮಾಲೀಕರಿಗೆ ಪ್ರತಿಷ್ಠೆಯ ಸಂಕೇತದ ಜೊತೆಗೆ ಆರ್ಥಿಕ ಸುಭದ್ರತೆಯನ್ನು ಒದಗಿಸಿದ್ದುದು ಸ್ಪಷ್ಟವಾಗುತ್ತದೆ.

### ೫.೩. ಭೂ ಮಾಲೀಕರು ಮತ್ತು ಅಧಿಕಾರ ರಚನೆ

ನಾಯಕರ ಕಾಲದಲ್ಲಿ ಭೂ ಆಧಾರಿತ ಅರ್ಥವ್ಯವಸ್ಥೆ ಜಾರಿಯಲ್ಲಿತ್ತು ಎನ್ನುವುದು ತಿಳಿದುಬರುತ್ತದೆ. ಇದು ಸಾಮಾಜಿಕ ಮತ್ತು ಆರ್ಥಿಕ ಪರಿವರ್ತನೆಯನ್ನು ಸೂಚಿಸುತ್ತದೆ. ಬುಡಕಟ್ಟಿನ ಸಮಾಜ ಕೃಷಿ ವ್ಯವಸ್ಥೆಗೆ ಹಲವಾರು ಬದಲಾವಣೆಗಳೊಂದಿಗೆ ಪರಿವರ್ತನೆಗೊಂಡಿರುವುದು ರಾಜ್ಯವ್ಯವಸ್ಥೆಯ ಮೇಲೆ ಮಹತ್ತರ ಪರಿಣಾಮಗಳನ್ನು ಬೀರಿತು. ನಾಯಕರು ಒಂದು ರೀತಿಯ ಭೂ ಹಿಡುವಳಿದಾರರು ಆಗಿ ತಮ್ಮ ಅಧಿಕಾರ ರಚನೆಯನ್ನು ಮಾಡಿಕೊಂಡವರು. ನಂತರ ವಿಜಯನಗರದ ನಂತರ ಸ್ವತಂತ್ರರು ಆದ ಮೇಲೆ ಖಾಸಗಿಯವರಿಗೆ ಭೂ ದಾನಗಳನ್ನು ಮಾಡಲು ಆರಂಭಿಸಿದರು. ಸ್ವಂತ ಭೂಮಿಯನ್ನು ಹೊಂದುವ ಪ್ರಕ್ರಿಯೆಗಳು ಕಾಣಿಸಿಕೊಳ್ಳಲಾರಂಭಿಸಿದ್ದವು. ಭೂಮಿಯನ್ನು ಹೊಂದುವುದು ಸಮಾಜದಲ್ಲಿ ಗೌರವದ ಪ್ರಶ್ನೆಯೂ ಆಗಿತ್ತು.[೫] ಪ್ರತಿಯೊಬ್ಬ ವ್ಯಕ್ತಿಯೂ ತನ್ನದೇ ಆದ ಸ್ವಂತ ಭೂಮಿಯನ್ನು ಹೊಂದಲು ಆಸೆಪಡುತ್ತಿದ್ದುದು ಅಂದಿನ ಸಹಜ ಬೆಳವಣಿಗೆಯಾಗಿತ್ತು. ಅಂದಿನ ಸಂದರ್ಭದಲ್ಲಿ ಯಾವ ರೀತಿಯ ಭೂಮಾಲೀಕತ್ವ ಅಸ್ತಿತ್ವದಲ್ಲಿತ್ತು. ಎನ್ನುವುದನ್ನು ಅರ್ಥೈಸಿಕೊಳ್ಳುವುದು ಕಷ್ಟದ ವಿಚಾರವೇ ಆಗಿದೆ. ಆದರೂ ಲಭ್ಯವಿರುವ ಶಾಸನಗಳು ಮತ್ತು ಸಾಹಿತ್ಯ ಕೃತಿಗಳು ಹಾಗೂ ಆಧುನಿಕ ಬರವಣಿಗೆಗಳ ಸಹಾಯದಿಂದ ಕೆಲವೊಂದು ತೀರ್ಮಾನಗಳನ್ನು ತೆಗೆದುಕೊಳ್ಳಬಹುದಾಗಿದೆ. ಭೂಮಿಯ ಒಡೆತನ ಏಕರೂಪದ್ದಾಗಿರಲಿಲ್ಲ. ಹಲವಾರು ಮಾದರಿಯ ಭೂ ಮಾಲೀಕತ್ವಗಳು ಕಂಡುಬರುತ್ತವೆ. ಓರಿಯಂಟಾಲಿಸ್ಟ್, ರಾಷ್ಟ್ರೀಯವಾದಿ, ಮಾರ್ಕ್ಸ್‌ವಾದಿ, ಸಬಾಲ್ಟರ್ನ್ ಮುಂತಾದ ಪಂಥಗಳು ನಾನಾ ಮಾದರಿಯ ಭೂ ಮಾಲೀಕತ್ವದ ಕುರಿತಾಗಿ ಚರ್ಚೆ ನಡೆಸಿವೆ. ಈ ಎಲ್ಲ ಚರ್ಚೆಗಳಲ್ಲಿ ಕಂಡುಬರುವ ಭೂಮಾಲೀಕತ್ವದ ಪ್ರಮುಖ ಮಾದರಿಗಳೆಂದರೆ, ರಾಜನಿಗೆ ಸೇರಿದ ಭೂಮಿ, ಖಾಸಗಿ ಭೂಮಿ, ಸಾಮುದಾಯಕ ಅಥವಾ ಜಂಟಿ ಒಡೆತನದ ಭೂಮಿ ಹಾಗೂ ದಾನದ ರೂಪದಲ್ಲಿ ಪಡೆದ ಭೂಮಿ. ಇವುಗಳ ಅಧ್ಯಯನವು ಭೂಮಿಯ ಒಡೆತನ ಯಾರ ಅಧೀನದಲ್ಲಿತ್ತು ಹಾಗೂ ಅದರ ಸ್ವರೂಪವೇನು ಎನ್ನುವ ಪ್ರಶ್ನೆಗೆ ಉತ್ತರಿಸುತ್ತದೆ.

ರಾಜ್ಯದ ಭೂಮಿಯ ಸಂಪೂರ್ಣ ಒಡೆತನ ಅರಸನಿಗೆ ಸೇರಿತ್ತು ಎನ್ನುವ ವಾದವಿದ್ದರೂ ಅದನ್ನು ಒಪ್ಪಲು ಸಾಧ್ಯವಾಗುವುದಿಲ್ಲ. ರಾಜ ಸರ್ವೋಚ್ಚ ಭೂಮಾಲೀಕನಾಗಲು ಸಾಧ್ಯವೇ ಇಲ್ಲ. ರಾಜ್ಯದ ಭೂ ಸಂಪತ್ತಿನಲ್ಲಿ ಒಂದು ಭಾಗವು ರಾಜ್ಯ ಭೂಮಿಯನ್ನೂ, ರಾಜನ ವೈಯಕ್ತಿಕ ಆಸ್ತಿಪಾಸ್ತಿಗಳನ್ನು ಒಳಗೊಂಡಿರುತ್ತಿತ್ತು. ರಾಜನ ಭೂಮಿಯನ್ನು ವಿಶೇಷ ಅಧಿಕಾರಿಗಳು ನೋಡಿಕೊಳ್ಳುತ್ತಿದ್ದರು. ಭೂಮಿಯ ಎಲ್ಲ ಕೆಲಸಗಳನ್ನು ಕೂಲಿಯಾಳುಗಳು, ಗೇಣಿ ರೈತರು ಮಾಡುತ್ತಿದ್ದರು. ವಸಾಹತುಶಾಹಿ ಚರಿತ್ರೆಕಾರ ವಿನ್ಸೆಂಟ್ ಸ್ಮಿತ್ ಅವರ ಪ್ರಕಾರ ಭೂಮಿಯ ಸಂಪೂರ್ಣ ಒಡೆತನ ರಾಜ್ಯದ್ದಾಗಿತ್ತು.[೬] ರಾಜ್ಯದ ಒಡೆತನವನ್ನು ಹೇಳುವ ಇಂಥ ಅನೇಕ ಉಲ್ಲೇಖಗಳು ಸಿಗುತ್ತವೆ. ಆದರೆ ಈ ಹೇಳಿಕೆಗಳು ವಾಸ್ತವ

ಸ್ಥಿತಿಗೆ ದೂರವಾಗಿದ್ದು ಚರಿತ್ರೆಯನ್ನು ತಪ್ಪಾಗಿ ಅರ್ಥೈಸಿಕೊಂಡಿದ್ದರ ಪರಿಣಾಮಗಳಾಗಿವೆ. ರಾಜ್ಯದ ಎಲ್ಲ ಸಂಪತ್ತು ಮೇಲ್ನೋಟಕ್ಕೆ ರಾಜನ ಅಧೀನದಲ್ಲಿದ್ದಂತೆ ಕಂಡುಬರುವುದು ಸಹಜ. ಆದರೆ ಅದು ವಾಸ್ತವ ಸ್ಥಿತಿಯಲ್ಲ. ಏಕೆಂದರೆ ಅನೇಕ ಖಾಸಗಿ ವ್ಯಕ್ತಿಗಳು ಹಾಗೂ ಸಾಮಂತ ಅರಸರು ಸ್ವಂತ ಆಸ್ತಿಯನ್ನು ಹೊಂದಿರುತ್ತಿದ್ದರು. ಅವರು ಅರಸನಿಗೆ ಗೌರವದ ಸಂಕೇತವಾಗಿ ಕಪ್ಪ ಕಾಣಿಕೆಗಳನ್ನು ಸಲ್ಲಿಸುತ್ತಿದ್ದರು. ಇದೇ ಮಾದರಿಯಲ್ಲಿ ಪಾಳೆಯಗಾರರು ಕಂಡುಬಂದದ್ದು. ಅರಸರು ತಮ್ಮ ಅಧೀನಕ್ಕೆ ಒಳಪಡದ ಭೂಮಿಯನ್ನು ದಾನ ಕೊಡಬೇಕಾಗಿ ಬಂದರೆ ಸಂಬಂಧಪಟ್ಟ ಭೂ ಮಾಲೀಕನ ಅನುಮತಿಯನ್ನು ಪಡೆದುಕೊಳ್ಳಬೇಕಾಗಿತ್ತು.

ಪ್ರಸ್ತುತ ಪ್ರಜಾಪ್ರಭುತ್ವ ವ್ಯವಸ್ಥೆಯ ಕಾಲದಲ್ಲಿ ಇದೇ ಮಾದರಿಯನ್ನು ಅನುಸರಿಸುವುದು ಕಾಣಬಹುದು. ಉದಾಹರಣೆಗೆ ಸರ್ಕಾರದ ಅನೇಕ ಲೋಕೋಪಯೋಗಿ ಕಾಮಗಾರಿಗಳು ನಡೆಯುವಂತಹ ಸಂದರ್ಭದಲ್ಲಿ ಭೂ ಮಾಲೀಕನ ಅನುಮತಿ ಪಡೆದು ಅದಕ್ಕೆ ಸಂದುವ ಪರಿಹಾರಗಳನ್ನು ನೀಡಿ ನಂತರ ತಮ್ಮ ಕಾಮಗಾರಿಯನ್ನು ಮುಂದುವರಿಸುತ್ತಾರೆ. ಈ ಎಲ್ಲ ವಿವರಣೆಗಳಿಂದಾಗಿ ರಾಜ್ಯದ ಭೂಮಿಯ ಒಂದು ಭಾಗ ಮಾತ್ರ ಅರಸರ ಅಧೀನದಲ್ಲಿತ್ತು ಅಥವಾ ರಾಜ್ಯದ ಅಧೀನದಲ್ಲಿತ್ತು ಎನ್ನುವುದು ಸ್ಪಷ್ಟವಾಗುತ್ತದೆ.

ಅರಸರಂತೆ ಖಾಸಗಿ ವ್ಯಕ್ತಿಗಳು ಸ್ವಂತ ಭೂಮಿಯನ್ನು ಹೊಂದಿರುತ್ತಿದ್ದರು. ಖಾಸಗಿ ಭೂಮಾಲೀಕರಲ್ಲೂ ಅನೇಕ ವರ್ಗಗಳಿದ್ದವು. ಅವುಗಳೆಂದರೆ ಶ್ರೀಮಂತ ಭೂಮಾಲೀಕರು, ಮಧ್ಯಮ ಭೂಮಾಲೀಕರು ಹಾಗೂ ಬಡ ಭೂಮಾಲೀಕರು ಈ ಭೂ ಮಾಲೀಕರು ತಮ್ಮ ಭೂಮಿಗೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ಸ್ವತಂತ್ರವಾಗಿಯೇ ಮಾಡಬಹುದಾಗಿತ್ತು. ರಾಜಪ್ರಭುತ್ವಕ್ಕೆ ಖಾಸಗಿ ಭೂಮಾಲೀಕರ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲು ಅವಕಾಶವಿರಲಿಲ್ಲ. ಆದರೆ ಖಾಸಗಿ ಒಡೆಯರ ಭೂಮಿಯ ಮೇಲೆ ತೆರಿಗೆ ವಿಧಿಸುವ ಹಾಗೂ ಅವರ ಹಕ್ಕುಗಳನ್ನು ಮಿತಿಗೊಳಿಸುವ ಅಧಿಕಾರವಿತ್ತು. ಭೂಮಿಯ ಮೇಲೆ ಖಾಸಗಿ ಒಡೆತನವನ್ನು ಸ್ಥಾಪಿಸಬೇಕಾದರೆ ಹಲವಾರು ಬೇಡಿಕೆಗಳನ್ನು ಪೂರೈಸಬೇಕಾಗುತ್ತಿತ್ತು. ಬೇಡಿಕೆಗಳು ಪ್ರಭುತ್ವದ ಹಾಗೂ ಮಧ್ಯಮವರ್ಗದ ರೂಪುಗೊಳ್ಳುವಿಕೆಯ ಸ್ವರೂಪದಿಂದ ಕೂಡಿರುತ್ತಿದ್ದವು. ಭೂಮಿಯನ್ನು ಮಾರಾಟ ಮಾಡುವ, ದಾನ ನೀಡುವ ಹಾಗೂ ಕಾಣಿಕೆ ರೂಪದಲ್ಲಿ ಕೊಡುವ ಹಕ್ಕು ಪ್ರಾಪ್ತವಾಗುವುದು ಒಡೆತನ ಸ್ಥಾಪಿಸಿದಾಗ ಮಾತ್ರ.[೯೭] ಭೂಮಿಯ ಮೇಲೆ ಒಡೆತನವಿಲ್ಲದೆ ಮಾರಾಟ ಮಾಡುವುದು ಅಪರಾದ ಹಾಗೂ ಅದು ಸಾಧ್ಯವಿರಲಿಲ್ಲ. ಸ್ವಂತ ಭೂಮಿಯ ಮೇಲಿನ ಹಕ್ಕು ತಂದೆಯಿಂದ ಮಕ್ಕಳಿಗೆ ಮುಂದುವರಿಯುತ್ತಿತ್ತು. ಭೂಮಿಯನ್ನು ಮಾರಾಟ ಮಾಡಬೇಕಾದರೆ ಕುಟುಂಬದ ಎಲ್ಲ ಸದಸ್ಯರ ಒಪ್ಪಿಗೆಯೂ ಬೇಕಾಗಿರುತ್ತಿತ್ತು.[೯೮] ಅದೇ ರೀತಿ ಅರಸರು ಖಾಸಗಿ ವ್ಯಕ್ತಿಗಳಿಂದ ಭೂಮಿಯನ್ನು ಖರೀದಿಸುತ್ತಿದ್ದರ ಬಗೆಗೂ ಮಾಹಿತಿ ಸಿಗುತ್ತದೆ. ರಾಷ್ಟ್ರೀಯವಾದಿ ಚರಿತ್ರೆಕಾರ ಕೆ.ಪಿ.ಜಯಸ್ವಾಲ್ ಅವರು ಭೂಮಿಯ ಒಡೆತನ ಖಾಸಗಿಯವರದ್ದಾಗಿತ್ತು ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದರು. ಬರ್ಟನ್ ಸ್ಟೈನ್ ಭೂಮಿಯ ಒಡೆತನವನ್ನು ಕುರಿತು ಚರ್ಚಿಸುವಾಗ ಖಾಸಗಿ ಒಡೆತನ ಇತ್ತು ಎನ್ನುವ ತೀರ್ಮಾನಕ್ಕೆ ಬರುತ್ತಾರೆ. ಸ್ಟೈನ್ ಅವರು ನೀಲಕಂಠಶಾಸ್ತ್ರೀಯವರ ಕೇಂದ್ರೀಕೃತ ಸರಕಾರ ಕಲ್ಪನೆಗೆ ವಿರುದ್ದವಾಗಿ ತಮ್ಮ ವಾದವನ್ನು ಮಂಡಿಸುತ್ತಾರೆ.[೯೯]

ಭೂಮಾಲೀಕತ್ವದ ಇನ್ನೊಂದು ಮಾದರಿ ಸಮುದಾಯದ ಒಡೆತನ ಅಥವಾ ಸಂಯುಕ್ತ ಒಡೆತನ. ಇಂಥ ಮಾದರಿಯಲ್ಲಿ ಭೂಮಿಯ ಒಡೆತನ ಸಮುದಾಯದ್ದಾಗಿರುತ್ತದೆ. ಮಧ್ಯಕಾಲೀನ ಸಂದರ್ಭದಲ್ಲಿ ಈ ರೀತಿಯ ಭೂಮಾಲೀಕತ್ವವೂ ಇತ್ತು ಎನ್ನವುದಕ್ಕೆ ಸಾಕಷ್ಟು ಆಧಾರಗಳಿವೆ.[೧೦೦] ಭೂಮಿಯನ್ನು ಒಂದು ಸಮುದಾಯದ ಜನರು ಪರಸ್ಪರ ಹಂಚಿಕೊಳ್ಳುತ್ತಿದ್ದರು. ಸಮುದಾಯವು ತನ್ನ ಸದಸ್ಯರ ನಡುವೆಯೇ ಇದ್ದ ಭೂಮಾಲೀಕರ ಹಕ್ಕುಗಳನ್ನು ರಕ್ಷಿಸುತ್ತಿತ್ತು. ಇವರೆಲ್ಲರೂ ರಾಜನಿಗೆ ತೆರಿಗೆ ನೀಡುವುದರ ಜೊತೆಗೆ ಸಂಯುಕ್ತ ತೆರಿಗೆಯೊಂದನ್ನೂ ಕೊಡಬೇಕಾಗಿತ್ತು. ಸಮುದಾಯಗಳಲ್ಲೂ ಶ್ರೇಣೀಕೃತ ವ್ಯವಸ್ಥೆಯಿದ್ದು, ಕೂಲಿಯಾಳು, ಗುಲಾಮರು, ಗೇಣಿ ರೈತರು, ಸ್ವತಂತ್ರ ಸದಸ್ಯರು ಮುಂತಾದವರಿರುತ್ತಿದ್ದರು. ಸಮುದಾಯದ ಕೆಳಸ್ತರದಲ್ಲಿರುವ ಶೋಷಿತ ಜನರು ಯಾವುದೇ ಉತ್ಪಾದನಾ ಸಾಧನಗಳನ್ನು ಹೊಂದಿರಲಿಲ್ಲ. ಇದು ಸಮುದಾಯದ ಒಡೆತನದಲ್ಲಷ್ಟೇ ಅಲ್ಲದೇ ಭೂಮಾಲೀಕತ್ವದ ಇತರ ಮಾದರಿಗಳಲ್ಲೂ ಕಂಡುಬರುತ್ತದೆ. ಸಾಮುದಾಯಿಕ ಭೂ ಒಡೆತನವು ಖಾಸಗಿ ಒಡೆತನವಾಗಿದ್ದರೂ ಕೆಲವೊಂದು ವೈಶಿಷ್ಟ್ಯತೆಗಳಿಂದ ಕೂಡಿದ್ದಾಗಿದೆ.[೧೦೧] ಜಂಟಿ ಒಡೆತನದಲ್ಲಿದ್ದ ಭೂಮಿಯ ಮಾರಾಟ ಮಾಡಬೇಕಿದ್ದರೆ, ಇಲ್ಲವೆ ದಾನ ನೀಡಬೇಕಿದ್ದರೆ ಎಲ್ಲರೂ ಒಟ್ಟಾಗಿ ತೀರ್ಮಾನ ತೆಗೆದುಕೊಳ್ಳುತ್ತಿದ್ದರು. ಇದಕ್ಕೆ ಅನೇಕ ಉದಾಹರಣೆಗಳು ಶಾಸನಗಳಲ್ಲಿ ಸಿಗುತ್ತವೆ. ಅಂಥ ಒಂದು ಉದಾಹರಣೆಯನ್ನು ಇಲ್ಲಿ ಕೊಡಲಾಗಿದೆ: ಎರಡುನೂರು ಮಹಾಜನರು ಆರನೆಯ ವಿಕ್ರಮಾದಿತ್ಯನ ಸೇವಕ ಮಹಾದೇವ ನಾಯಕ ಎನ್ನುವವನಿಂದ ಹಣ ಪಡೆದು ಭೂಮಿಯನ್ನು ನೀಡಿದನು.[೧೦೨] ಈ ಮಾಹಿತಿಯು ಮಹಾಜನರೆನ್ನುವ ಹಳ್ಳಿಯ ಮುಖಂಡರು ಭೂಮಿಯ ಒಡೆತನವನ್ನು ಜಂಟಿಯಾಗಿ ಹೊಂದಿದ್ದರೆಂಬುದಾಗಿ ತಿಳಿಸುತ್ತದೆ. ಜಂಟಿಯಾಗಿ ಹೊಂದಿರುವ ಭೂಮಿಯನ್ನು ಪರಸ್ಪರ ಹಂಚಿಕೊಳ್ಳುವಾಗ ಮನಸ್ತಾಪಗಳು ಉಂಟಾಗುತ್ತಿದ್ದರಿಂದ ಎಲ್ಲರಿಗೂ ಸಮಾನವಾಗಿ ಭೂಮಿ ಸಿಗುವಂತೆ ನೋಡಿಕೊಳ್ಳಲು ಎಲ್ಲರೂ ಒಟ್ಟಿಗೆ ಸೇರಿ ಶಾಶ್ವತವಾಗಿ ಗಡಿಗಳನ್ನು ನಿರ್ಧರಿಸುತ್ತಿದ್ದರು.[೧೦೩]

ಧಾರ್ಮಿಕ ಹಾಗೂ ಸಾರ್ವಜನಿಕ ಸೇವೆಗೆಂದು ದಾನದ ರೂಪದಲ್ಲಿ ಪಡೆದ ಭೂಮಿ ಭೂಮಾಲೀಕತ್ವವನ್ನು ಪಡೆಯುವುದಕ್ಕೆ ಕಾರಣವಾಗಿರುವುದು ಕ್ರಿ.ಶ.೧೪ ರಿಂದ ೧೮ನೆಯ ಶತಮಾನದ ಚರಿತ್ರೆಯಿಂದ ತಿಳಿದುಬರುತ್ತದೆ. ದಾನದ ರೂಪದಲ್ಲಿ ಭೂಮಿಯನ್ನು ಪಡೆದ ವ್ಯಕ್ತಿ ಅಥವಾ ಸಂಸ್ಥೆಯೇ ಆ ಭೂಮಿಯ ಮೇಲಿನ ಒಡೆತನವನ್ನು ಹೊಂದಿರುತ್ತಿದ್ದರು. ಬ್ರಾಹ್ಮಣರಿಗೆ ನೀಡುತ್ತಿದ್ದ ದಾನ ಬ್ರಹ್ಮದೇಯವಾಗಿದ್ದು ಅದು ಹೊಸ ಬ್ರಾಹ್ಮಣ ಭೂಮಾಲೀಕ ವರ್ಗವನ್ನು ಸೃಷ್ಟಿಸಿತು.[೧೦೪] ಅದೇ ರೀತಿ ದೇವಾಲಯಗಳಿಗೆ ನೀಡುತ್ತಿದ್ದ ದಾನ ದೇವದಾನವಾಗಿದ್ದು, ಅದು ದೇವಾಲಯಗಳು ಭೂಮಾಲೀಕರಂತೆ ವರ್ತಿಸುವಂತೆ ಮಾಡಿತು. ಅರಸರಿಗಾಗಿ, ದೇವಾಲಯಗಳಿಗಾಗಿ, ಕೆರೆ–ಕಾಲುವೆಗಳ ನಿರ್ಮಾಣಕ್ಕಾಗಿ, ಹಳ್ಳಿಯ ಮುಖಂಡರಿಗಾಗಿ ದುಡಿದ ಜನರಿಗೆ ಅವರ ಸೇವೆಗಾಗಿ ಭೂಮಿಯನ್ನು ದಾನ ನೀಡಲಾಗುತ್ತಿತ್ತು.[೧೦೫] ಈ ಪ್ರಕ್ರಿಯೆಗಳು ರಾಜ್ಯದೊಳಗೆ ಹೊಸ ಭೂಮಾಲೀಕ ವರ್ಗಗಳು ಹುಟ್ಟಿಕೊಳ್ಳುವುದಕ್ಕೆ ಕಾರಣವಾದವು. ಹೆಚ್ಚೆಚ್ಚು ಭೂಮಿಯನ್ನು ದಾನ ನೀಡುವುದರ ಮೂಲಕ ಒಟ್ಟಾರೆಯಾಗಿ ರಾಜ್ಯದ ಮೇಲೆ ಹತೋಟಿಯನ್ನು ಸಾಧಿಸುವುದು ಸಾಧ್ಯವಿರಲಿಲ್ಲ. ಆ ಕಾರಣಕ್ಕಾಗಿಯೇ ಧರ್ಮದ ಮೊರೆಹೋಗುವುದು ಅನಿವಾರ್ಯವಾಯಿತು. ಒಟ್ಟು ಅರ್ಥವ್ಯವಸ್ಥೆ ಭೂ ಆಧಾರಿತವಾಗಿರುವುದರಿಂದ ಭೂಮಿಯ ಖಾಸಗಿ ಒಡೆತನ ಹೆಚ್ಚು ಪ್ರಾಮುಖ್ಯತೆಯನ್ನು ಗಳಿಸಿಕೊಂಡಿತು. ಇದು ಭೂ ಮಾಲೀಕ ಮಧ್ಯವರ್ತಿಗಳ ಹುಟ್ಟಿಗೂ ಕಾರಣವಾಯಿತು.[೧೦೬]

ಪ್ರಸ್ತುತ ಅಧ್ಯಯನದಲ್ಲಿ ಭೂ ಮಾಲೀಕತ್ವದ ಜೊತೆಗೆ ರಾಜರು ತಮ್ಮ ಆಡಳಿತದ ಅನುಕೂಲಕ್ಕಾಗಿ ತಮ್ಮ ವ್ಯಾಪ್ತಿಯ ಭೂಮಿಯನ್ನು ವಿಭಾಗಿಸಿದ ಬಗೆಯ ಕುರಿತು ಅಧ್ಯಯನ ನಡೆಸಲಾಗಿದೆ. ಈ ಪ್ರದೇಶಗಳಲ್ಲಿ ಕಂಡುಬರುವ ಶಾಸನಗಳ ದಾಖಲೆಯ ಪ್ರಕಾರ ರಾಜ್ಯ, ನಾಡು, ಸೀಮೆ, ಸ್ಥಳ ಎಂಬ ಉಲ್ಲೇಖಗಳು ಕಂಡುಬರುತ್ತವೆ. ಅಂಕಸಮುದ್ರ ನಾಡು, ಅಣಜಿ ಸ್ಥಳ, ಅಣಬೂರು ಸ್ಥಳ, ಹರಳಿಹಾಳ ಸ್ಥಳ,[೧೦೭] ಉಚ್ಚಂಗಿ ವೇಂಠೆ, ಉಕ್ಕಟೇಯ ವಳಿತ ಎಂಬ ಉಲ್ಲೇಖಗಳಿವೆ. ವೇಂಠೆ, ವಳಿತ ಇವು ವಿಜಯನಗರ ಕಾಲದಲ್ಲಿಯೇ ಬಳಕೆಯಲ್ಲಿದ್ದವು. ನಾಯಕರ ಆಡಳಿತ ಅವಧಿಯಲ್ಲಿ ಅನೇಕ ಆಡಳಿತ ವರ್ಗಗಳನ್ನು ಈ ಕೇಂದ್ರಗಳಲ್ಲಿ ನೇಮಿಸಲಾಗುತ್ತಿತ್ತು.

ಚಿತ್ರದುರ್ಗದ ರಾಜ್ಯದ ಬೊಕ್ಕಸದ ಆದಾಯದ ಮೂಲಗಳೆಂದರೆ ಗದ್ದೆ, ಬೆದ್ದಲು, ಕಾಡಾರಂಬ, ಮಾರ್ಗಸುಂಕ, ಸ್ಥಳಸುಂಕ, ಹುಲ್ಲುಬನ್ನಿ, ಷಾರಾಬು, ಉಪ್ಪಿನ ಮೊಳೆ, ಆಚಾರಗಾಣಿಕೆ, ಯುದ್ಧದಲ್ಲಿ ಶಸ್ತ್ರಾಸ್ತ್ರ ಇತ್ಯಾದಿ.

ಮುಖ್ಯವಾಗಿ ನಾಯಕರು ಗ್ರಾಮಗಳ ಆಳ್ವಿಕೆಗಾಗಿ ಬಾರಾಬಲೂತಿಯನ್ನು ಏರ್ಪಡಿಸಿದ್ದರು. ಇದರಲ್ಲೇ ನಿಜ ಆಯಗಾರರು ಮತ್ತು ಅರೆ ಆಯಗಾರರು ನೇಮಕವಾಗಿದ್ದರು. ನಿಜ ಆಯಗಾರರು ಎಂದರೆ ಗೌಡ, ಶಾನುಭೋಗ, ಬಡಗಿ, ಕಮ್ಮಾರ, ತಳವಾರ, ಬೇಗಾರರು. ಅರೆ ಆಯಾಗಾರರು ಎಂದರೆ ಜೋಯಿಸ, ಕುಲಾಲ(ಕುಂಬಾರ), ನಾಪಿತ, ರಜಕ (ಅಗಸ), ಬಾರಿಕ (ನೀರಗಂಟಿ), ಅಕ್ಕಸಾಲಿ ಮುಂತಾದವರು.[೧೦೮] ಅನೇಕ ವೇಳೆ ಬಾರಾಬಲೂತಿಯ ವೃತ್ತಿಗಾರರನ್ನು ಸಂತೈಸಲೂ ದುರ್ಗದ ನಾಯಕರು ಕೆಲವು ಸವಲತ್ತುಗಳನ್ನು ನೀಡುತ್ತಿದ್ದ ಅಂಶವು ಶಾಸನಗಳಿಂದ ತಿಳಿದುಬರುತ್ತದೆ. ಬೂದಿಹಾಳು ಗ್ರಾಮದಲ್ಲಿ ಕಂಡುಬರುವ ೧೨ ಜನ ಆಯಗಾರರಲ್ಲಿ ನಾಯಂದಿರ ಕುರಿತ ಶಾಸನದ ಪಾಠ ಈ ರೀತಿ ಇದೆ. "ಬೂದಿಹಾಳು ಸೀಮೆಗೆ ಸಲ್ಲುವ ಹಳ್ಳ ಹಿರಿಯೂರೊಳುಳ್ಳ ನಾಯಂದಿರರು ಕೆರೆಯ ಕೆಳಗಿನ ಸ್ವಾಮ್ಯವನ್ನು ಅನುಭವಿಸಿಕೊಂಡು ಬರತಕ್ಕದ್ದು"[೧೦೯] ಎಂಬ ನಿರೂಪದಿಂದ ನಾಯಂದರಲ್ಲಿ ಆಡಳಿತದಿಂದ ಸಿಗುವ ಭೂಮಿಯ ಅಸಮಧಾನವನ್ನು ತೊಲಗಿಸಲು ಸಾಧ್ಯವಾಯಿತು.

ಆಡಳಿತದ ಸುಗಮಕ್ಕಾಗಿ ನಾಯಕರು ಸಂಸ್ಥಾನವನ್ನು ಹಲವಾರು ವಿಭಾಗಗಳಾಗಿ ವಿಂಗಡಿಸಿಕೊಂಡಿದ್ದು, ಗ್ರಾಮ, ಸೀಮೆ, ಮಾಗಣಿ, ಸ್ಥಳ, ಸಮ್ಮತು, ನಾಡು, ಪಟ್ಟಡಿ ಇತ್ಯಾದಿ ಇವುಗಳನ್ನು ತೆರಿಗೆ ಉತ್ಪನ್ನದ ಆಧಾರದ ಮೇಲೆ ವಿಂಗಡಿಸಲಾಗಿತ್ತು.[೧೧೦] ಉದಾಹರಣೆಗೆ ಇಮ್ಮಡಿ ಮದಕರಿನಾಯಕನು ಮರಣ ಹೊಂದಿದಾಗ ಅವನ ಒಟ್ಟು ಆಳ್ವಿಕೆಯಲ್ಲಿ ೧೦,೦೦೩೦ ವರಹ ತೆರಿಗೆಯ ಸೀಮೆಯಿತ್ತು. ಈ ಸೀಮೆಯನ್ನು ಭಾಗಗಳಾಗಿ ವಿಂಗಡಿಸಿ ಗುರುಕರಣ, ಕರಣಿಕ ಬೋನಪ್ಪ, ಬೋನಪ್ಪ ಅಬಿಗೆರೆ ಮಲ್ಲಣ್ಣ, ಕರಣಿಕ ಅಪ್ಪಣ್ಣ ಮುಂತಾದವರನ್ನು ನೇಮಿಸಲಾಯಿತು. ರಾಜ್ಯದಲ್ಲಿ ಆಡಳಿತದ ನೆರವಿಗೆ ದಳವಾಯಿಗಳನ್ನು ನೇಮಿಸಲಾಗಿತ್ತು. ನಾಯಕರಿಗೆ ಅಂಗರಕ್ಷಕರು ಇದ್ದರು. ಉದಾಹರಣೆಗೆ ಇಮ್ಮಡಿ ಮದಕರಿ ನಾಯಕನಿಗೆ ಬಿಳಿಚೋಡು ಹನುಮಯ್ಯ, ಬಾಣದ ನಿಂಗಯ್ಯ, ಹಿರೀಸೇರುವೆಗಾರ ಕೆಂಚಯ್ಯ, ಸರಳೆಮ್ಮ ಕಾಟಯ್ಯ, ಅಪ್ಪರಸಯ್ಯ, ನರಸಿಂಹಬನಿಟ್ಟಾ ಅಕ್ಕಸಾಲೆ, ಕಂಠಮಾಲೆ ಮುಂತಾದವರು ಇದ್ದರು.[೧೧೧]

ಮೇಲೆ ವಿವರಿಸಿದಂತೆ ಅನೇಕ ಶಾಸನಗಳು ನಾಯಕರು ಅಧಿಕಾರಿಗಳಿಗೆ, ಅಗ್ರಹಾರಗಳಿಗೆ, ದೇವಾಲಯಗಳಿಗೆ ದಾನ ನೀಡಿದ ಅಂಶಗಳು ಪುಷ್ಠಿಕರಿಸುತ್ತವೆ. ಭೂದಾನ ಪಡೆದಿರುವ ಎಲ್ಲ ವರ್ಗವು ಹೆಚ್ಚಾಗಿ ಭೂಮಾಲೀಕತ್ವವನ್ನು ಪಡೆದವರೇ ಆಗಿರಬೇಕು. ಭೂದಾನ ನೀಡುವ ಸಂದರ್ಭದಲ್ಲಿ

ಸೀಮೆ(ಗಡಿ)ಯ ನಿರ್ದೇಶನ ಹಾಗೂ ಭೂಮಿಯ ಒಡೆತನ ಹೆಸರನ್ನು ಶಾಸನದಲ್ಲಿ ಇರುವುದನ್ನು ನೋಡಿದರೆ ಅಂದಿನ ಸರಕಾರ ಭೂ ಒಡೆತನದ ವಿಷಯವಾಗಿ ಹೆಚ್ಚು ಕಾಳಜಿವಹಿಸಿದಂತೆ ಕಾಣುತ್ತದೆ.

ನಾಯಕರು ಅಷ್ಟೆ ಅಲ್ಲದೆ ಅನೇಕ ಜನರು ಭೂ ದಾನ ನೀಡಿದ ಅಂಶಗಳಿವೆ. ಹೊಲವನಹಳ್ಳಿಯ ಇಮ್ಮಡಿ ರಣಭೈರೇಗೌಡನು ಬಾಬುರಾಯನಿಗೆ ಭೂದಾನ ನೀಡಿರುವನು.[೧೧೨] ಎಣ್ಣೆಗೆರೆಯ ಲಿಂಗಯ್ಯ ಗೌಡನು ಪಲ್ಲಕ್ಕಿ ತಿಮ್ಮ ವೀರಗಾರು ಎಂಬುವನಿಗೆ ಭೂದಾನ ಮಾಡಿದನು. ಮಾರ್ಗ ಸಹಯ್ಯ ನಾಯಕನು ಗಂಗನರಸಿ ಗ್ರಾಮವನ್ನು ತನ್ನ ಒಡೆಯನಿಗೆ ಒಳ್ಳೆಯದಾಗಲೆಂದು ದಾನ ನೀಡಿದನು.[೧೧೩] ಮಾಯಕೊಂಡದ ನಾಯಕನು ಬಳ್ಳಾಪುರ ಗ್ರಾಮವನ್ನು ದಾನವಾಗಿಕೊಟ್ಟನು.[೧೧೪] ಹಿರೇ ಮದಕರಿನಾಯಕನು ಚತುರ್‌ಸೀಮೆಯ ಗ್ರಾಮಗಳ ಮುಖ್ಯಸ್ಥರ ಮುಂದೆ ಆನೆಸಿದ್ರಿಯ ಹೊಲಕ್ಕೆ ಸೀಮಾ ಕಲ್ಲುಗಳನ್ನು ನೆಡಿಸಿ ಕವಿ ಕೋನಪ್ಪನಿಗೆ ಅಗ್ರಹಾರ ದಾನ ಮಾಡಿದನು.[೧೧೫] ಈ ಎಲ್ಲ ಸಂಗತಿಗಳು ಅಧಿಕಾರಿವರ್ಗ ಹಾಗೂ ಪ್ರಭುತ್ವ ಭೂದಾನ ಮಾಡುವುದರ ಮೂಲಕ ತಮ್ಮ ಗೌರವ, ಕೀರ್ತಿಯನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ದಾನವನ್ನು ನೀಡಿ ತಮ್ಮ ಅಧಿಕಾರದ ನೆಲೆಗಳನ್ನು ಗುರುತಿಸಿಕೊಂಡಿರುವುದನ್ನು ಸೂಚಿಸುತ್ತವೆ.

**೫.೪. ಕೃಷಿ ಭೂಮಿಯ ವರ್ಗೀಕರಣ**

ಪ್ರಾಚೀನ ಕಾಲದಿಂದಲೂ ಭೂಮಿಯನ್ನು ಅದರ ಫಲವತ್ತತೆಗೆ ಅನುಗುಣವಾಗಿ ವರ್ಗೀಕರಿಸುತ್ತಾ ಬಂದಿದ್ದು ಸಾಮಾನ್ಯವಾಗಿ ನೀರಾವರಿ ಭೂಮಿ, ಒಣಭೂಮಿ, ತೋಟ, ಅರಣ್ಯ ಭೂಮಿ, ಗೋಮಾಳ, ಹುಲ್ಲುಗಾವಲು ಪ್ರದೇಶ ಮತ್ತು ಬಂಜರು ಭೂಮಿ ಎಂದು ವಿವಿಧ ಬಗೆಯಲ್ಲಿ ವಿಂಗಡಿಸಿರುವುದನ್ನು ಕಾಣುತ್ತೇವೆ. ಈ ವರ್ಗೀಕರಣವನ್ನು ನೀರು ಮತ್ತು ಮಳೆಯನ್ನು ಆಶ್ರಯಿಸಿ ಮಾಡಲಾಗಿದೆ.[೧೧೬]

ನಾಯಕರ ಕಾಲದ ಕೃಷಿಕರು ವಿವಿಧ ಬಗೆಯ ಭೂಮಿಯಲ್ಲಿ ಬೇಸಾಯ ಮಾಡುತ್ತಿದ್ದರು. ಮಣ್ಣು, ನೀರು, ಸ್ವಾಭಾವಿಕ ಸಸ್ಯವರ್ಗಗಳನ್ನು ಉಪಯೋಗಿಸಿಕೊಳ್ಳುವ ಜಾಣ್ಮೆ ಹಿಂದಿನ ತಲೆಮಾರಿನವರೆಗೆ ಕರಗತವಾಗಿತ್ತು. ಇತರೆ ಪ್ರಾಂತೀಯ ಬೇಸಾಯ ಪದ್ಧತಿಗಳನ್ನೇ ಈ ಪ್ರದೇಶದ ಜನರು ರೂಢಿಸಿಕೊಂಡಿದ್ದರು. ಕೃಷಿ ಭೂಮಿ ಅನೇಕ ವಿಧದಲ್ಲಿ ಚಾಲ್ತಿಯಲ್ಲಿತ್ತು ಎಂದು ಶಾಸನ ಮತ್ತು ಸಾಹಿತ್ಯಿಕ ಗ್ರಂಥಗಳಲ್ಲಿ ಉಲ್ಲೇಖಿಸಲಾಗಿದೆ. ಇವುಗಳಿಂದ ಕೃಷಿ ಭೂಮಿಯನ್ನು ಎರಡು ಭಾಗವಾಗಿ ವಿಂಗಡಿಸಲಾಗಿದೆ.

ಅ. ಸಾಗುವಳಿಯಲ್ಲದ ಬೀಳು ಭೂಮಿ

ಆ. ಸಾಗುವಳಿ ಭೂಮಿ

**ಅ. ಸಾಗುವಳಿಯಲ್ಲದ ಬೀಳು ಭೂಮಿ**

ಬೀಳು ಭೂಮಿಯೆಂದರೆ ಕೃಷಿಗೆ ಯೋಗ್ಯವಲ್ಲದ ಭೂಮಿ. ಹೊಸ ಊರುಗಳ ಸೃಷ್ಟಿಯೊಂದಿಗೆ ಅದರ ಸುತ್ತಮುತ್ತಲೂ ಕೃಷಿಗೆ ಯೋಗ್ಯವಾಗುವಂತೆ ಭೂಮಿಯನ್ನು ಮಾರ್ಪಡಿಸುತ್ತಿದ್ದರು. ಬೀಳು ಭೂಮಿಯನ್ನು ಪಶುಪಾಲನೆಗಾಗಿ ಹುಲ್ಲುಗಾವಲೆಂದು ಉಪಯೋಗಿಸುತ್ತಿದ್ದರು. ಒಂದು ವೇಳೆ ನಾಡಿನಲ್ಲಿ ಬೀಳು ಭೂಮಿ ಇರದಿದ್ದರೆ, ನೂರು ಬಿಲ್ಲಳತೆಯ ಭೂಮಿಯನ್ನು ಹುಲ್ಲುಗಾವಲಿಗೆ ಕಾಯ್ದಿಡಬೇಕೆಂದು ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಹೇಳಿದೆ. ಇದರಿಂದ ಹುಲ್ಲುಗಾವಲಿಗೆ ಮತ್ತು ಪಶುಪಾಲನೆಗೆ ಆ ಜನ ಎಷ್ಟು ಮಹತ್ವಕೊಡುತ್ತಿದ್ದರೆಂಬುದು ಗೊತ್ತಾಗುತ್ತದೆ. ಹೀಗಾಗಿ ಊರಿಗೊಂದು ಗೋಮಾಳ[೧೧೭] ಇದ್ದೇ ಇರುತ್ತಿತ್ತು. ಗೋಮಾಳ ಎಂದರೆ ಗೋವು(ಪಶುಪಾಲನೆಗೆ)ಗಳಿಗೆ ಹುಲ್ಲಿಗಾಗಿ ಮೀಸಲಿರಿಸಿದ ಸ್ಥಳ. ಭೌಗೋಳಿಕವಾಗಿ ಚಿತ್ರದುರ್ಗ ಪ್ರದೇಶ ಕರ್ನಾಟಕ ರಾಜ್ಯದ ಮಧ್ಯರಂಗವನ್ನು ಆಕ್ರಮಿಸಿಕೊಂಡಿರುವ ಕೇಂದ್ರವೆನಿಸುತ್ತದೆ.

ಇಲ್ಲಿ ಐದು ಸಮಾಂತರ ಸಾಲಿನ ಬೆಟ್ಟಗಳು ಹಾದು ಹೋಗುವುದರಿಂದ ಹೆಚ್ಚಿನ ಬೆಟ್ಟಪಂಕ್ತಿಯು ಸುತ್ತುವರೆದಿದ್ದರಿಂದ ಬೀಳು ಭೂಮಿ ಹೆಚ್ಚಾಗಿ ಕಂಡುಬರುತ್ತದೆ. ಇಲ್ಲಿ ರೈತಾಪಿ ಜನರ ಆರ್ಥಿಕ ಮಟ್ಟವನ್ನು ಹೆಚ್ಚಿಸಿಕೊಳ್ಳಲು ಅಲ್ಲಿನ ಭೌಗೋಳಿಕತೆಗೆ ಅನುಗುಣವಾಗಿ ಬುಡಕಟ್ಟು ಜನರು ವಾಸವಾಗಿದ್ದು, ಇಲ್ಲಿನ ಬೆಟ್ಟಗುಡ್ಡಗಳಲ್ಲಿ ತಮ್ಮ ಪಶು ಸಂಪತ್ತನ್ನು ಸಲಹುತ್ತಿದ್ದರು. ಚಳ್ಳಕೆರೆ ತಾಲ್ಲೂಕಿನ ಶಾಸನವೊಂದರಲ್ಲಿ 'ಹುಲುಮನಿ ಕಾವಲನು ಬಿಟ್ಟು ಗೋ ದನಗಳು ಕೆರೆ ಒಳಗೆ ಮೆಯಿದು ನೀರು ಕುಡಿದು' ಇರಲೆಂದು ಹೇಳಿದೆ.[೧೧೮]

ಬೀಳು ಭೂಮಿ ಅಥವಾ ಬಂಜರು ಭೂಮಿ ಎಂದು ಕರೆಯಲ್ಪಡುವ ಭೂಮಿ ಶಾಸನಗಳಿಂದ ಗುರುತಿಸುವುದು ಸ್ವಲ್ಪ ಕಷ್ಟ. ಕೆಲವು ಪ್ರಸಂಗಗಳಲ್ಲಿ ಬರುವ ಬೆಟ್ಟ, ಗುಡ್ಡ, ಮಟ್ಟಿ ಎಂಬ ಉಲ್ಲೇಖಗಳಿಂದ ಈ ಭೂಮಿಯನ್ನು ಗುರುತಿಸಬಹುದಾಗಿದೆ. ಟಿ.ಕೆ.ಇಂದುಬಾಯಿ ಸಂಪಾದಕತ್ವದಲ್ಲಿ ಸಂಗ್ರಹಿಸಿದ 'ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು' ಎಂಬ ಗ್ರಂಥದಲ್ಲಿ ಸಂತಳಾಗಿದ್ದ ಗಿರಿಯಮ್ಮಳು ಭಕ್ತಿಯಿಂದ ಕೆಲವೊಂದು ನೀತಿ ಕಥೆಗಳ ಹಾಡುಗಳನ್ನು ಹಾಡಿದ್ದಾಳೆ. ಇದರಲ್ಲಿ ಉದ್ದಾಳಿಕನ ಕಥೆಯಲ್ಲಿ ಕೌಸಲ್ಯ ದೇಶದ ಅಯೋಧ್ಯ ಪಟ್ಟಣದಲ್ಲಿ ಆಳುತ್ತಿದ್ದ ರಘುರಾಯನಿಗೆ ಚಂದ್ರಾವತಿ ಎಂಬ ಹೆಣ್ಣು ಮಗಳು ಜನಿಸುತ್ತಾಳೆ. ದೊಡ್ಡವಳಾದ ಚಂದ್ರಾವತಿಯು ನೀರಾಟಕ್ಕೆಂದು ಸಖಿಯರೊಡನೆ ಹೊಳೆಗೆ ಹೋದಾಗ ಉದ್ದಾಳಕ ಮುನಿ ತೇಲಿಬಿಟ್ಟ ಕಮಲದ ಹೂವನ್ನು ವಿಧಿವಶದಿಂದ ಅಘ್ರಾಣಿಸಿದ್ದರಿಂದ ಆಕೆ ತಿಳಿಯದೆ ಗರ್ಭಧರಿಸುತ್ತಾಳೆ. ಅರಸನು ಮರ್ಯಾದೆಗೆ ಅಂಜಿ ತನ್ನ ಉಳಿಗದವರನ್ನು ಕರೆಸಿ ಮಗಳನ್ನು ಕರೆದೊಯ್ದು ಅರಣ್ಯದಲ್ಲಿ ಶಿರವರಿದು ಬರಬೇಕೆಂದು ಆದೇಶಿಸುತ್ತಾನೆ.[೧೧೯]

ರಾತ್ರಿ ಮಲಗಿದ ಚಂದ್ರಾವತಿಯನ್ನು ಉಳಿಗದವರು ಬಾರವನ್ನೊತ್ತು ಬಳಲಿ ಬಾಯಾರುತ್ತ ಏರುತ್ತ ಘಟ್ಟ ಬೆಟ್ಟಗಳ ಹಾದಿ ತಪ್ಪಿ ಹಳ್ಳ–ಕೊಳ್ಳ ಕಾನನದೊಳು ಬಾಲೆಯ ತಂದಿಳುಹಿದರು.[೧೨೦] ಪಂಡಿತ ಎಸ್.ಬಸಪ್ಪ ಸಂಪಾದಿಸಿರುವ 'ದೇವಕವಿ ಕೃತ ಮರುಳಸಿದ್ದ' ಕಾವ್ಯದಲ್ಲಿ ದಟ್ಟಡವಿ, ವನವೃಕ್ಷಗಳ ಉಲ್ಲೇಖಗಳಿವೆ. ವಿದೇಶಿ ಪ್ರವಾಸಿ ಬುಕಾನನ್ ಶಿವಮೊಗ್ಗದಿಂದ ಸಾಸ್ವೆಹಳ್ಳಿಯ ಗುಡ್ಡ ಬೆಟ್ಟಗಳ ಶ್ರೇಣಿಯನ್ನು ದಾಟಿ ಬಸವಾಪಟ್ಟಣಕ್ಕೆ ಬರುತ್ತಾನೆ. ಹಾಗೆಯೇ ಸಿದ್ದವ್ವನಹಳ್ಳಿ ಪ್ರದೇಶದ ಗುಡ್ಡಗಳನ್ನು ವಿವರಿಸುತ್ತಾನೆ.[೧೨೧]

ದಾನ ಪ್ರಸಂಗದಲ್ಲಿ ಬಂಜರು ಭೂಮಿಯನ್ನು 'ಕೆಯ್' ಎಂಬ ಸಾಧನವನ್ನು ಇಟ್ಟುಕೊಂಡು ದಾನವನ್ನು ಬಿಡುವುದು ಬೀಳು ಭೂಮಿಯಾದ ಇದನ್ನು ಒಳ್ಳೆಯ ಫಲವತ್ತಾದ ಭೂಮಿಯನ್ನಾಗಿ ಮಾಡಿ ಸಾಗುವಳಿ ಮಾಡುವುದು ನಂತರ ಬಂದ ಬೆಳೆಯ ಮೇಲೆ ಕರ ವಿನಾಯಿತಿ ಕೇಳುವುದು ಅಂದಿನ ಆರ್ಥಿಕ ಸ್ಥಿತಿಯಾಗಿತ್ತು. ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನು ಮುಂದೆ 'ಕೆಯ್ ಅಥವಾ ಕೆಯಿ' ಎಂದು ಕರೆಯಲಾಗುತ್ತಿತ್ತು.

**ಆ. ಸಾಗುವಳಿ ಭೂಮಿ**

ನಾಯಕರ ಕಾಲದ ಶಾಸನಗಳು, ಸಾಹಿತ್ಯಿಕ ಗ್ರಂಥಗಳು ಹಾಗೂ ವಿದೇಶಿ ಪ್ರವಾಸಿಗರ ಬರವಣಿಗೆಗಳಿಂದ ಮಣ್ಣಿನ ಫಲವತ್ತತೆ, ನೀರಾವರಿ ಸೌಕರ್ಯ, ಮಳೆಯ ಪ್ರಮಾಣ, ಉತ್ಪಾದನೆಯ ಮಟ್ಟ, ತೆರಿಗೆ ಮುಂತಾದವುಗಳ ಆಧಾರದ ಮೇಲೆ ಕೃಷಿ ಅಥವಾ ಸಾಗುವಳಿ ಭೂಮಿಯನ್ನು ನಿರ್ಧರಿಸಬಹುದಾಗಿದೆ.

ಕೃಷಿಯ ವಿಸ್ತರಣೆ ಅಷ್ಟೊಂದು ಸುಲಭದ ಕೆಲಸವಾಗಿರಲಿಲ್ಲ. ಕಾಡುಗಳನ್ನು ಕಡಿದು, ಭೂಮಿಯನ್ನು ಸಮತಟ್ಟುಗೊಳಿಸಿ ಕೃಷಿ ಯೋಗ್ಯ ಭೂಮಿಯನ್ನಾಗಿ ಮಾಡಬೇಕಾಗಿತ್ತು. ಈ ಪ್ರಕ್ರಿಯೆ ಹೆಚ್ಚಾಗಿ ಚುರುಕುಗೊಂಡಿದ್ದು ನಾಯಕರ ಕಾಲದಲ್ಲಿಯೇ. ಈ ಕಾರಣಕ್ಕಾಗಿಯೇ ಕೃಷಿ ಭೂಮಿಯನ್ನು ವಿಸ್ತರಿಸುವ ಜನರಿಗೆ ರಾಜ್ಯವು ಸಹಾಯ ಸಹಕಾರಗಳನ್ನು ನೀಡುತ್ತಿತ್ತು. ಅಂಥ ವ್ಯಕ್ತಿಗಳಿಗೆ ಅಥವಾ ಸಮುದಾಯಗಳಿಗೆ ಭೂಮಿಯನ್ನು ದಾನ ನೀಡಲಾಗುತ್ತಿತ್ತು. ತೆರಿಗೆ ವಿನಾಯಿತಿಯನ್ನೂ ನೀಡಲಾಗುತ್ತಿತ್ತು.[೨೨] ಹೊಸದಾಗಿ ನಿರ್ಮಾಣಗೊಳ್ಳುವ ಹಳ್ಳಿಗಳು ರೈತರ ಅಧೀನಕ್ಕೆ ಒಳಪಟ್ಟಿರಲಿಲ್ಲ. ಅವು ಮಹಾಜನರ ಇಲ್ಲವೇ ಗ್ರಾಮಗಳ ಅಧಿಕಾರಗಳ ಅಧೀನದಲ್ಲಿರುತ್ತಿದ್ದವು. ಅದೇ ರೀತಿ ಭೂಮಾಲೀಕರು ಹಳ್ಳಿಗಳ ಮೇಲೆ ಹಿಡಿತವನ್ನು ಹೊಂದಿದ್ದರು. ಈ ಕಾರಣದಿಂದಾಗಿ ಕೃಷಿಯ ವಿಸ್ತರಣೆ ಅರಸರಿಗೆ ಮತ್ತು ಭೂಮಾಲೀಕರಿಗೆ ಹೆಚ್ಚು ಲಾಭದಾಯಕವಾಗಿರುತ್ತಿತ್ತು. ರೈತರು ಹೆಚ್ಚು ಕಡಿಮೆ ಕೂಲಿಯಾಳುಗಳಾಗಿ ಕೆಲಸ ಮಾಡಬೇಕಾಗುತ್ತಿತ್ತು. ಈ ಬೆಳವಣಿಗೆಗಳು ಕ್ರಿ.ಶ.೧೫ರಿಂದ ೧೮ನೇ ಶತಮಾನಗಳ ಅವಧಿಯಲ್ಲಿ ಹೆಚ್ಚಾಗಿ ಕಂಡುಬಂತು.[೨೩] ಅಂದಿನ ಕಾಲದ ತೆರಿಗೆಗಳ ಉಲ್ಲೇಖ ಶಾಸನಗಳಲ್ಲಿ ಕಂಡು ಬರುವುದರಿಂದ ಸಾಗುವಳಿ ಭೂಮಿಯನ್ನು ಗುರುತಿಸಬಹುದಾಗಿದೆ. ನಾಯಕರ ಕಾಲದ ಕಂದಾಯ ವ್ಯವಸ್ಥೆಯಲ್ಲಿ ಕೆಳದಿ ಶಿವಪ್ಪನಾಯಕ ಶಿಸ್ತು ಪದ್ಧತಿಯ ಅನ್ವಯ ಭೂಮಿಯನ್ನು ಫಲವತ್ತತೆಗೆ ಅನುಗುಣವಾಗಿ ಐದು ಭಾಗಗಳಾಗಿ ವಿಂಗಡಿಸಲಾಗಿತ್ತು.

೧. ಉತ್ತಮ : ಮರಳು ಮಿಶ್ರಿತ ಎರೆಮಣ್ಣು.

೨. ಮಧ್ಯಮ : ಬೆಟ್ಟದ ಅಥವಾ ಎತ್ತರವಾಗಿ ಬಯಲಾಗಿರುವ ಕೆಂಪು ಮಿಶ್ರಿತ ಮಣ್ಣು.

೩. ಕನಿಷ್ಠ : ಕಪ್ಪು ಅಥವಾ ಶಾಮಲ ವರ್ಣದ ಮರಳು ಮಿಶ್ರಿತ ಮಣ್ಣು.

೪. ಅಧಮ : ಗಟ್ಟಿಯಾದ ಭೂಮಿ.

೫. ಅಧಮಾಧಮಾ : ಒಣಕಲು ಭೂಮಿ (ಬಂಜರು)[೨೪]

ಶಿವಪ್ಪನಾಯಕನು ಫಲವತ್ತತೆಯ ಆಧಾರದಲ್ಲಿ ವಿಭಾಗಿಸಿದ ಮಾದರಿಯ ಭೂಮಿಯು ಚಿತ್ರದುರ್ಗ ಪ್ರದೇಶದಲ್ಲಿಯೂ ಕಾಣಸಿಗುತ್ತದೆ.

ಕ್ರಿ.ಶ.೧೬೫೩ರಲ್ಲಿ ಓಬಣ್ಣ ನಾಯಕನು ಪುಟ್ಟಣ್ಣನ ಮಗನಾದ ತಿಮ್ಮಪ್ಪನಿಗೆ ಹಿರೇಗುಂಟನೂರು ಮಾಗಣಿಯ ಚಿತ್ರಳ್ಳಿ ಸೀಮೆಗೆ ಸೇರಿದ ಕಡಲೆಗುದ್ದು ಗ್ರಾಮದಲ್ಲಿ ಒಣ ಹಾಗೂ ಗದ್ದೆ ಭೂಮಿಯನ್ನು ದಾನ ನೀಡುವ ಅಂಶವಿದೆ.[೨೫] ಚಿತ್ರದುರ್ಗದ ಬಳಿಯ ಚಂದ್ರವಳ್ಳಿ ಕೆರೆ ಪ್ರದೇಶ ಪ್ರಾಚೀನವಾದುದು. ಚಿತ್ರದುರ್ಗ ಸಮೀಪದ ಗಾರೆ ಹಟ್ಟಿಯಲ್ಲಿನ ಚೋಳೇಶ್ವರ ದೇವಸ್ಥಾನದ ಶಾಸನ(ಸಂಖ್ಯೆ ೩೪) ಮತ್ತು ವಿಜಯನಗರ ಕಾಲದ ಹಿರೇಗುಂಟನೂರು ಶಾಸನದಲ್ಲಿ ಜಮೀನುಗಳ ವರ್ಗೀಕರಣ ಎರೆ, ಬೆದ್ದು, ಗದ್ದೆ, ಕೆನ್ನೆಲ ಮತ್ತು ತೋಟ ಇತ್ಯಾದಿ ದಾಖಲಿಸಲ್ಪಟ್ಟಿವೆ.[೨೬]

ಮಳೆಯನ್ನೇ ಅವಲಂಬಿಸಿ ವ್ಯವಸಾಯ ಮಾಡಬೇಕಾಗಿದ್ದ ಜಮೀನನ್ನು ಹೊಲ ಮತ್ತು ಬೆದ್ದಲು ಎಂದು ಕರೆಯುತ್ತಿದ್ದರು. ಮಳೆಯನ್ನೇ ಅವಲಂಬಿಸಿದ ವ್ಯವಸಾಯ ಪದ್ಧತಿಗೆ 'ಕಾಡಾರಂಬ' ಹೊಲಗಾಡು ಅಥವಾ ಮಳೆಗಾಡು ಎಂದು ಕರೆಯುತ್ತಿದ್ದರು.[೨೭] ಶಾಸನಗಳಲ್ಲಿ ಇವುಗಳನ್ನೇ ಬೆದ್ದಲು, ಹೊಲ, ಭೂಮಿ, ಕಾಡಾರಂಬವೆಂದು ಕರೆಯುತ್ತಿದ್ದರು.

ಚಿತ್ರದುರ್ಗದ ನಾಯಕರ ಅನೇಕ ಶಾಸನಗಳಲ್ಲಿ ಈ ಕಾಡರಂಬ ಉಲ್ಲೇಖವಿದೆ. ಉದಾಹರಣೆ ಚಿನ್ನನಗಿರಿದುರ್ಗದ ವೆಂಕಟರಮಣ ಸ್ವಾಮಿಗೆ ಅಮ್ರುತ ಪಡಿ, ನಂದಾದೀಪ, ಮಂತ್ರ, ಪುಷ್ಪ ಮುಂತಾದ ಸೇವೆಗಾಗಿ ಪಿಳ್ಳೆಕೆರೇನಹಳ್ಳಿ ಗ್ರಾಮವನ್ನು ದಾನ ನೀಡಿದ ಶಾಸನದ ಪಾಠ ಈ ಕೆಳಗಿನಂತಿದೆ:

ವಾಲ್ಮೀಕಿಗೋತ್ರದ ಕಾಮಗೇತಿ

ಕಸ್ತೂರಿ ಮದಕರಿ ನಯಕರು ಬ

ರಮಂಣನಾಯಕರು/ ಪಿಳ್ಳೇಕೆ

ರೇನಹಳಿ ಗ್ರಾಮವಂನೂಹಿ

ರಂಣ್ಯೋದಕದಾನಧಾರಾ

ಪೂರ್ವಕವಾಗಿ/ತ್ರಿಕರ್ಣ

ದವಾಚಸಮರ್ಪಣ ಮಾಡಿ

ಯದೋನೆ/ಯಿಗ್ರಾಮಕೆಕಾಡಾ

ರಂಭನೀರಾರಂಭನಿಧಿನಿಕ್ಷೇ

ಯಿಗ್ರಾಮದ

ಅಷ್ವ ಬೋಗತೇಜಸ್ವಾಮ್ಯಸರ್ವ[೨೮]

ಕೃಷಿಕನು ಸರಕಾರಕ್ಕೆ ಕೊಡಬೇಕಾಗಿದ್ದ ತೆರಿಗೆಯನ್ನು ಮುಖ್ಯವಾಗಿ ಮಣ್ಣಿನ ವರ್ಗ ಮತ್ತು ಬೇಸಾಯ ಪದ್ಧತಿಗಳನ್ನು ಆಧಾರವಾಗಿಟ್ಟುಕೊಂಡು ಸಾಗುವಳಿ ಭೂಮಿಯನ್ನು ನಾಲ್ಕು ಭಾಗಗಳಾಗಿ ವಿಂಗಡಿಸಲಾಗಿದೆ:

ಅ. ಕಾಡಾರಂಬ (ಒಣಬೇಸಾಯ)

ಆ. ನೀರಾರಂಬ (ಗದ್ದೆ ಬೇಸಾಯ)

ಇ. ತೋಟಾರಂಬ (ತೋಟದ ಬೇಸಾಯ)

ಈ. ಕುಮರಿ (ಸ್ಥಳವನ್ನು ವರ್ಗಾಯಿಸುವ ಬೇಸಾಯ)

ಶಾಸನಗಳಲ್ಲಿ ಇವುಗಳನ್ನು ಪ್ರತ್ಯೇಕವಾಗಿ ಉಲ್ಲೇಖಿಸಿರುವುದರಿಂದ ಈ ಭೂಮಿಗಳಿಗೆ ಆಧ್ಯತೆಯ ಮೇರೆಗೆ ಕಂದಾಯ ನಿಗದಿ ಮಾಡಲಾಗುತ್ತಿದ್ದಿತೆಂದು ಕಂಡುಬರುತ್ತದೆ.

ನೀರಾರಂಬ ನೀರಾವರಿ ಪ್ರದೇಶವಾಗಿದ್ದು, ಇದು ಬಾವಿ, ಕಾಲುವೆ, ನೀರನ್ನು ಬಳಸಿ ವರ್ಷಕ್ಕೆ ಎರಡು ಬೆಳೆಗಳನ್ನು ಬೆಳೆಯುವ ಭೂಮಿಯಾಗಿದ್ದು ಇದು ಫಲವತ್ತತೆಯಿಂದ ಕೂಡಿರುತ್ತದೆ.

ಕಾಡಾರಂಭ ಮತ್ತು ನೀರಾರಂಭ ಉಲ್ಲೇಖವಿರುವ ಶಾಸನವು ಶೃಂಗೇರಿ ಶ್ರೀ ಶಂಕರಭಾರತೀ ಸ್ವಾಮಿಗಳವರ ಮಠಕ್ಕೆ ವಾಲ್ಮೀಕಿ ಗೋತ್ರದ ಮೆದಕೇರಿ ನಾಯಕರ ಪುತ್ರನಾದ ಭರಮಣ್ಣನಾಯಕರು ತಮ್ಮ ಹಿರಿಯರುಗಳಿಗೆ ಪುಣ್ಯ ಪ್ರಾಪ್ತವಾಗಬೇಕೆಂದು ದುರ್ಗದ ಶೀಮೆಯ ಜಾಜೂರು ಹೋಬಳಿಯ ಹನುಮನಹಳ್ಳಿ ಎಂಬ ಗ್ರಾಮವನ್ನು ದಾನವಾಗಿ ಕೊಟ್ಟ ವಿವರಗಳು ದಾಖಲಾಗಿವೆ.

ಶೃಂಗೇರಿ ಶ್ರೀ ವಿದ್ಯಾಶಂಕರದೇವರ ದಿವ್ಯ ಶ್ರೀ ಪಾದಪದ್ಮಾರಾಧಕರಾದ ಶೃಂಗೇರಿ ಶ್ರೀ ಅಭಿನವ ವಿದ್ಯಾರಣ್ಯಭಾರತೀ ಸ್ವಾಮಿಗಳೈಯ್ಯನವರ ಕರಮಕಲ ಸಂಜಾತರಾದ ಶ್ರೀ ನರಸಿಂಹಭಾರತೀ ಸ್ವಾಮಿಗಳೈಯ್ಯನವರ ಕುಮಾರಕರಾದ ಶ್ರೀ ಶಂಕರಭಾರತೀ ಸ್ವಾಮಿಗಳೈಯ್ಯನವರ ಮಠಕ್ಕೆ ವಾಲ್ಮೀಕಿ

ಗೋತ್ರದ ಶ್ರೀಮನ್ಮಹಾನಾಯಕಾಚಾರ್ಯ ಕಾಮಗೇತೀ ಕಸ್ತೂರಿ ರಂಗಪ್ಪನಾಯಕ ಪೌತ್ರರಾದ ಮದಕರಿ ನಾಯಕರ ಪುತ್ರರಾದ ಭರಮಣ್ಣನಾಯಕರು ತಮ್ಮ ಹಿರಿಯರುಗಳಿಗೆ ಪುಣ್ಯಸುಕೃತವಾಗಬೇಕೆಂದು ನಾವು ಆಳುವಂಥಾ ರಾಜ್ಯ ಭರಮಣ್ಣನಾಯಕರ ದುರ್ಗದಶೀಮೆ ಜಾಜೂರು ಹೋಬಳಿ ವಳಗಣ/ ಹನುಮನಹಳ್ಳಿ ಎಂಬ ಗ್ರಾಮವನ್ನು ಈ ಪುಣ್ಯದಿವಸಲ್ಲೂ ಸಹಿರಣ್ಯೋದಕ ದಾನಧಾರಾ ಪೂರಕವಾಗಿ ತ್ರಿವಾಚ ತ್ರಿಕರಣಯುಕ್ತವಾಗಿ ಶಿವಾರ್ಪಿತವಾಗಿ ಕೊಟ್ಟು ಇದ್ದೇವೆ. ಈ ಗ್ರಾಮಕ್ಕೆ ಸಲ್ಲುವ ಕಾಡರಂಭ, ನೀರಾರಂಭ/ನಿಧಿ ನಿಕ್ಷೇಪ ಜಲ ಪಾಷಣ/ಅಕ್ಷಿಣಿ ಆಗಾಮ/ಸಿದ್ದಸಾಧ್ಯಂಗಳೆಂಬ/ಅಷ್ಟಭೋಗತೇಜೋಪಾ ರ್ಜನೆಯನ್ನೂ, ಸ್ವಾಮಿಗಳವರ ಶಿಷ್ಯಪಾರಂಪರ್ಯೆದೂ/ಅನುಭವಿಸಿಕೊಂಡು/ಆಚಂದ್ರಾರ್ಕಸ್ಥಾಯಿಗಳಾಗಿ ಸುಖದಲ್ಲಿ ಇಹುದು ಎಂದು ಬರಸಿಕೊಟ್ಟದಾನಪತ್ರ॥[೧೨೯] ಎಂದು ಕಾಡಾರಂಭ, ನೀರಾರಂಭ ಉಲ್ಲೇಖವು ಶಾಸನಗಳಿಂದ ತಿಳಿದು ಬಂದಿದ್ದು, ದುರ್ಗದ ಪ್ರದೇಶದಲ್ಲಿ ಮಳೆ ಆಧಾರಿತ ಸಾಗುವಳಿ ಭೂಮಿಯು ಬೀಜಾವರಿ ವಿಧಾನದಲ್ಲಿ ಬೆದ್ದಲು ಹೊಲಗಳ ಉಲ್ಲೇಖಗಳು ಕಂಡುಬರುತ್ತವೆ. ಶಾಸನಗಳಲ್ಲಿ ಒಂದು ಖಂಡುಗ ಭೂಮಿ ಎಂದು ಉಲ್ಲೇಖವಿದೆ. ಒಂದು ಖಂಡುಗ ಭೂಮಿ ಎಂದರೆ ಆ ಪ್ರಮಾಣದ ಬೀಜವನ್ನು ಬಿತ್ತುವ ಭೂಮಿ ಅಥವಾ ಅಷ್ಟು ಪ್ರಮಾಣದ ಧಾನ್ಯವನ್ನು ಬೆಳೆಯುವ ಭೂಮಿಯಾಗಿರಬಹುದಾಗಿದೆ. ಕ್ರಿ.ಶ.೧೪೧೦ರಲ್ಲಿ ಹರಿದ್ರಾನದಿಗೆ ಕಟ್ಟೆಯನ್ನು ಕಟ್ಟಿದ ಬುಳ್ಳಪ್ಪನಿಗೆ ಅಗ್ರಹಾರದ ಜನರು ಜಲಾಶಯದ ವಾರ್ಷಿಕ ನಿರ್ವಹಣೆಯ ಜವಾಬ್ದಾರಿ ವಹಿಸಿ ತಮ್ಮ ಪಾಲಿನ ಒಂದು ಖಂಡುಗ ಭೂಮಿಯನ್ನು ನೀಡಿದರು.[೧೩೦] ಈ ಮೇಲೆ ತಿಳಿಸಿದ ಅಳತೆ ಮಾಪನದಲ್ಲಿಯೂ ಕೃಷಿ ಭೂಮಿಯನ್ನು ವಿವಿಧ ಹೆಸರುಗಳಿಂದ ಕರೆಯಲಾಗುತ್ತಿತ್ತು.




**ಚಿತ್ರದುರ್ಗ ಪ್ರದೇಶದ ಒಟ್ಟು ಭೂಮಿಯ ವರ್ಗೀಕರಣ ನಕ್ಷೆ**

ತೋಟದ ಉಲ್ಲೇಖವಿರುವ ಶಾಸನವು ನೀರ್ಥಡಿಯ ನರಸಿಂಹಸ್ವಾಮಿಯ ದೇವಾಲಯವನ್ನು ದಿಲ್ಲಿಯ ಅರಸರು ಭಗ್ನಗೊಳಿಸಿದಾಗ ಚಿತ್ರದುರ್ಗದ ಅರಸ ಭರಮಣ್ಣನಾಯಕರು ಕ್ರಿ.ಶ.೧೬೯೮ರಲ್ಲಿ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿಸಿ ಭರಮಸಾಗರ ಸೀಮೆಯ ಎಮ್ಮೆಹಟ್ಟಿಗೆ ಎರಡು ಮವಂಸ್ತ ತೋಟವನ್ನು ದೇವರಿಗೆ ದತ್ತಿ ನೀಡಿದನು.[೧೩೧] ಬಸವಾಪಟ್ಟಣ ನಾಡಿಗರು ಸೆಟ್ಟರುಗಳ ಕೋರಿಕೆಯಂತೆ

ಅಲ್ಲಿನ ಅಧಿಕಾರಿ ಮೊಲ್ಲಿಪುರವೆಂಬ ಗ್ರಾಮವನ್ನು ನಿರ್ಮಿಸಿ ಅಲ್ಲಿ ಸರೋವರವೆನಿಸುವಂತ ಕೆರೆಯನ್ನು ನಿರ್ಮಿಸಿದರು. ಅಲ್ಲಿ ತೆಂಗು, ರಸಬಾಳೆ ಮೊದಲಾದವುಗಳು ಬೆಳೆದು ಸಂತಸದಿಂದ ಇರುವಂತಾಯಿತು.[೧೫೨]

ಒಟ್ಟಾರೆಯಾಗಿ ನಾಯಕರ ಕಾಲದಲ್ಲಿ ಕೃಷಿ ಭೂಮಿಯನ್ನು ಭೂಮಿಯ ಫಲವತ್ತತೆಯ ಅನುಗುಣವಾಗಿ ವರ್ಗೀಕರಿಸಿ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಕಾಡರಂಭ, ನಿರಾರಂಭ, ತೋಟ ಈ ರೀತಿಯ ಪದಗಳ ಉಲ್ಲೇಖ ಶಾಸನಗಳಿಂದ ಬರುವುದರಿಂದ ನಾಯಕರ ಆಳ್ವಿಕೆ ಕಾಲದಲ್ಲಿ ಕರೆ, ಯರೆ, ಮರಳು, ಕಲ್ಲು, ಗಡ್ಡೆ, ಮಟ್ಟಿ ಎಂಬ ಭೂಮಿಯ ವರ್ಗೀಕರಣವನ್ನು ಗುರುತಿಸಬಹುದಾಗಿದೆ.

**೫.೫. ನೀರಾವರಿ ವ್ಯವಸ್ಥೆ**

ಪ್ರಪಂಚದ ನಾಗರಿಕತೆಗಳೆಲ್ಲಾ ವಿಫುಲವಾಗಿ ನೀರನ್ನೊದಗಿಸುವ ನದಿಗಳ ದಡಗಳಲ್ಲಿಯೇ ಬೆಳೆದು ಬಂದಿವೆ. ಆದ್ದರಿಂದ ಅವನ ನಾಗರೀಕತೆಯ ಜೀವನ, ನೀರು ಮತ್ತು ವ್ಯವಸಾಯದಿಂದಲೇ ಆರಂಭವಾಯಿತೆಂದು ಹೇಳಬಹುದು. ಕಾಲಾನಂತರ ಹೆಚ್ಚು ಮಳೆಯಾಗುವ ಪ್ರದೇಶಗಳಿಗೂ ತನ್ನ ವಾಸಸ್ಥಾನವನ್ನು ವ್ಯಾಪಿಸಿಕೊಂಡನು. ಆದರೆ ಅವನ ಸಂಖ್ಯೆ ಹೆಚ್ಚಿದಂತೆ ಮೂಲ ಸ್ಥಳಕ್ಕಿಂತ ಕಡಿಮೆ ಮಳೆ-ಆಗುವ ಸ್ಥಳಗಳಿಗೂ ವಲಸೆ ಹೋಗಬೇಕಾಯಿತು. ಆಗ ಆತ ಮಳೆ ಕಡಿಮೆ ಬೀಳುವ ಅಥವಾ ಮಳೆಯೇ ಬಾರದಂತಹ ಕಾಲದಲ್ಲಿ ತನ್ನ ಅಗತ್ಯಗಳನ್ನು ಪೂರೈಸಿಕೊಳ್ಳಲು ಸಣ್ಣ ಸಣ್ಣ ಹಳ್ಳ, ಕೊಳ್ಳಗಳಿಗೆ ಅಡ್ಡಲಾಗಿ ರೆಂಬೆ, ಎಲೆ, ಮಣ್ಣು, ಕಲ್ಲು ಬಳಸಿ ಸಣ್ಣ ಸಣ್ಣ ಒಡ್ಡುಗಳನ್ನು ಕಟ್ಟುತ್ತಿದ್ದರು.[೧೩೩] ಜೋರಾಗಿ ಮಳೆ ಬಿದ್ದಾಗ, ಆ ಒಡ್ಡುಗಳು ಕೊಚ್ಚಿ ಹೋಗುತ್ತಿದ್ದವು. ಅವನ್ನು ಹೀಗೆ ಒಡ್ಡುಗಳಿಂದ ಸಂಗ್ರಹಿಸಿದ ನೀರನ್ನು ಸಣ್ಣ ಸಣ್ಣ ಕಾಲುವೆಗಳನ್ನು ತೋಡಿ ತನ್ನ ಹೊಲಗಳಿಗೆ ಹಾಯಿಸುತ್ತಿದ್ದ. ಇದೇ ರೀತಿ ನೈಸರ್ಗಿಕ ತಗ್ಗುಗಳಲ್ಲಿ ನಿಂತ ನೀರನ್ನೂ ತನ್ನ ಹೊಲಗಳಿಗೆ ಹಾಯಿಸುತ್ತ ಆ ತಗ್ಗುಗಳನ್ನು ಸುಧಾರಿಸಿದ ರೀತಿಯಲ್ಲಿ ಕಟ್ಟಲು ಆರಂಭಿಸಿದ. ಇದರಿಂದ ಮಳೆಯ ನೀರಿನಿಂದ ಬೆಳೆಯುತ್ತಿದ್ದ ಬೆಳೆಗಿಂತಲೂ ಹೆಚ್ಚಿನ ಬೆಳೆಗಳನ್ನು ಬೆಳೆಯುವಂತಾಯಿತು. ಅಲ್ಲದೇ ಕೇವಲ ಮಳೆಯನ್ನೇ ಅವಲಂಬಿಸಿ ತನ್ನ ವ್ಯವಸಾಯ ನಡೆಸುವುದು ತಪ್ಪಿ ಹೋಯಿತು. ಒಟ್ಟಿನಲ್ಲಿ ನವಶಿಲಾಯುಗದ ಮಾನವನ ನೀರಿನ ಸಂಗ್ರಹ ಕಲೆಯನ್ನು ಅರಿತು ಬಯಲು ಪ್ರದೇಶದಲ್ಲಿಯೂ ತನ್ನ ವ್ಯವಸಾಯ ಮುಂದುವರೆಸಿದನು. ಅವನು ವ್ಯವಸಾಯಕ್ಕೆ ನೀರಾವರಿಯನ್ನು ಅಳವಡಿಸಿಕೊಂಡಿದ್ದು ಒಂದು ಮಹಾ ಆವಿಷ್ಕಾರವೆಂದೇ ಗುರುತಿಸಬಹುದು. ಕ್ರಮೇಣ ವ್ಯವಸಾಯದಲ್ಲಿ ನೀರಾವರಿಯ ತಂತ್ರಜ್ಞಾನವೇ ಬೆಳೆದು ಬಂದಿತು.

ಆರಂಭದಲ್ಲಿ ಮಾನವನು ಆಹಾರಕ್ಕಾಗಿ ಅಲೆದಾಡುವ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದರೆ, ನವಶಿಲಾಯುಗದ ವೇಳೆಗಾಗಲೇ ವ್ಯವಸಾಯ ಕಲೆಯನ್ನು ಆವಿಷ್ಕರಿಸಿಕೊಂಡು ಒಂದೆಡೆ ಸ್ಥಿರವಾಗಿ ನೆಲೆಯೂರಲಾರಂಭಿಸಿದನು. ಈ ಹಿನ್ನೆಲೆಯಲ್ಲಿಯೇ ನವಶಿಲಾಯುಗದ ಮಾನವನನ್ನು "ಆಹಾರದ ಉತ್ಪಾದಕ" ಎಂದು ಕರೆಯಲಾಗಿದೆ.[೧೩೪] ನಂತರ ಹೆಚ್ಚಿದ ಉತ್ಪಾದನೆಯು ಮಾರಾಟದ ಸ್ವರೂಪವನ್ನು ಪಡೆದುಕೊಂಡಿತು. ಕೃಷಿಯಲ್ಲಿನ ತಂತ್ರಜ್ಞಾನ ಹೆಚ್ಚುತ್ತಾ ಹೋದಂತೆ, ರಾಜಪ್ರಭುತ್ವಗಳು ಅಸ್ಥಿತ್ವಕ್ಕೆ ಬರತೊಡಗಿದಂತೆ ಉತ್ಪಾನೆಯನ್ನು, ಅದರ ಮೂಲಕ ಬರುವ ಆದಾಯವನ್ನು ತೀವ್ರವಾಗಿ ಹೆಚ್ಚಿಸುವ ಪ್ರಯತ್ನಗಳು ನಡೆಯುತ್ತಲೇ ಸಾಗಿದವು. ಅಂತಹ ಪ್ರಕ್ರಿಯೆ ಇಂದಿಗೂ ಮುಂದುವರಿದಿದೆ. ಈ ಹಿನ್ನೆಲೆಯಲ್ಲಿ ನೀರಿನ ಮೂಲಗಳಾದ ಕೆರೆ, ಕಾಲುವೆ, ಒಡ್ಡುಗಳನ್ನು ನಿರ್ಮಿಸುವ, ಜೀರ್ಣೋದ್ಧಾರಗೊಳಿಸುವ ಪ್ರಕ್ರಿಯೆಗಳು ತೀವ್ರವಾಗಿಯೇ ನಡೆದವು. ಇದಕ್ಕೆ ನಾಯಕರ ಕಾಲಾವಧಿಯು ಹೊರತಾಗಿಲ್ಲ.

ನಾಯಕರ ಕಾಲದಲ್ಲಿ ಭೂಮಿಯನ್ನು ಅಧಿಕ ಪ್ರಮಾಣದಲ್ಲಿ ಹೊಂದಿರುವುದಕ್ಕಿಂತಲೂ ನೀರಾವರಿ ಹಾಗೂ ಮೂಲ ಉತ್ಪಾದಕರ ಮೇಲಿನ ನಿಯಂತ್ರಣ ಅತ್ಯಂತ ಮುಖ್ಯವಾದುದಾಗಿತ್ತು. ಏಕೆಂದರೆ ಜಮೀನು ಧಾರಾಳವಾಗಿ ಲಭ್ಯವಿತ್ತು.

ಅರಣ್ಯವನ್ನು ಕಡಿದು ಕೆರೆಯನ್ನು ನಿರ್ಮಿಸಿದಾಗ ಗ್ರಾಮೀಣ ಅರ್ಥವ್ಯವಸ್ಥೆಯು ನೂತನವಾಗಿ ರೂಪುಗೊಂಡಿತು.[೧೩೫] ಅತೀ ಹೆಚ್ಚಿನ ಗ್ರಾಮಗಳು ರಚನೆಯಾಗಿದ್ದೇ ನಾಯಕರ ಕಾಲದಲ್ಲಿ ಎಂಬುವುದು ಮರೆಯುವಂತಿಲ್ಲ. ಇದರಿಂದಾಗಿ ಸಹಜವಾಗಿಯೆ ನೀರಾವರಿ ಸೌಲಭ್ಯಗಳು ಉತ್ಸಾಹಿ ರೈತರನ್ನೂ, ಕಸಬುದಾರರನ್ನೂ ಆ ಹೊಸ ನೆಲೆಗಳಿಗೆ ಆಕರ್ಷಿಸಿದವು.

೧೫-೧೬ನೇ ಶತಮಾನದ ಆರಂಭದಲ್ಲಿ ಕೃಷಿ ವ್ಯವಸ್ಥೆ ತನ್ನ ಸ್ವರೂಪವನ್ನೇ ಬದಲಾಯಿಸಿಕೊಂಡಿತು. ಇದಕ್ಕೆ ಪೂರಕವಾಗಿ ನೀರಾವರಿ ವ್ಯವಸ್ಥೆ ಚುರುಕುಗೊಂಡಿರುವ ಅಂಶ ೧೪ನೇ ಶತಮಾನದಲ್ಲಿ ಕೃಷಿಕರಿಗೆಂದೇ ರಚಿತವಾದ 'ರಟ್ಟಮತಂ' ಎಂಬ ಕೃತಿಯಲ್ಲಿದೆ. ಕೆರೆ, ತೊರೆ (ಹೊಳೆ), ಬಾವಿ ಮತ್ತು ಕೊಳ ಇವು ನೀರಾವರಿಯ ಮೂಲಗಳಾಗಿದ್ದವು.[೧೩೬] ಮತ್ತೆ ಈ ಜಲ ಮೂಲಗಳ ಬಗ್ಗೆ ಪೂರ್ವಜರು ಹೊಂದಿರುವ ಮನೋಭಾವನೆಗೆ ಸಂಬಂಧಿಸಿದಂತೆ ಶಿವಮೊಗ್ಗ ಜಿಲ್ಲೆಯ ಒಂದು ಶಾಸನದಲ್ಲಿ ಮುರಿದು ಹೋದ ಸಂಸಾರ, ಬಿರುಕು ಬಿಟ್ಟ ಕೆರೆ ಅಥವಾ ಕೊಳ, ಪತನ ಹೊಂದಿದ ರಾಜ್ಯ, ಶಿಥಿಲವಾದ ದೇವಾಲಯ ಇವುಗಳನ್ನು ಜೀರ್ಣೋದ್ಧಾರ ಮಾಡುವವನು ಅಥವಾ ದುರಸ್ತಿ ಪಡಿಸುವವನು ಪುಣ್ಯವನ್ನು ಸಂಪಾದಿಸುತ್ತಾನೆ ಎಂದು ಹೇಳಿದೆ.[೧೩೭]

ಕೆರೆ ಮತ್ತು ಕಟ್ಟೆ ಎಂಬ ಎರಡು ಬಗೆಯ ಜಲಾಶಯಗಳಿದ್ದುವು. ಇವು ಶಾಸನಗಳಲ್ಲಿ ಪ್ರತ್ಯೇಕವಾಗಿಯೆ ಉಲ್ಲೇಖಗೊಳ್ಳುತ್ತವೆ.[೧೩೮] ಎರಡರ ನಡುವೆ ವ್ಯತ್ಯಾಸವಿತ್ತೆಂಬುದನ್ನು ಇದು ಸೂಚಿಸುತ್ತದೆ. ಸಣ್ಣ ಜಲಾಶಯವು ಕಟ್ಟೆ. ದೊಡ್ಡ ಕೆರೆ, ಹಳ್ಳವಾಗಿರುವ ನೆಲದಲ್ಲಿ ಅಡ್ಡಲಾಗಿ ಮಣ್ಣಿನ ದಿಣ್ಣೆಯನ್ನು ಅಥವಾ ಅಣೆಯನ್ನು ಕಟ್ಟಿ ಈ ಎರಡನ್ನೂ ನಿರ್ಮಿಸಲಾಗುತ್ತಿತ್ತು.[೧೩೯] ಮಾನವ ಶಕ್ತಿ ಮತ್ತು ಪ್ರಾಣಿಶಕ್ತಿ[೧೪೦]ಗಳನ್ನು, ಅದರಲ್ಲೂ ಆನೆಗಳನ್ನು ಈ ಕೆಲಸಗಳಲ್ಲಿ ಉಪಯೋಗಿಸಿಕೊಳ್ಳಲಾಗುತ್ತಿತ್ತು.[೧೪೧]

ಮಧ್ಯಕಾಲೀನ ಮತ್ತು ಪ್ರಸ್ತುತ ದಿನಗಳಲ್ಲಿ ಸಾಮಾಜಿಕ ವೃತ್ತಿಯ ಅನೇಕ ಸಮುದಾಯಗಳು ತಮ್ಮ ವೃತ್ತಿಯ ಮೂಲಕ ತಮ್ಮ ಜಾತಿಗಳನ್ನು ರೂಪಿಸಿಕೊಂಡಿವೆ. ಉದಾಹರಣೆಗೆ ನೇಕಾರರು, ಬಡಗಿಗಳು, ಕಮ್ಮಾರರು, ಕುಂಬಾರರು, ಮೇದಾರರು, ಚರ್ಮಕಾರರು, ವಡ್ಡರು (ಬೋವಿ) ಕೆರೆ ಅಥವಾ ಕಟ್ಟೆ ಕಟ್ಟುವಲ್ಲಿ ಶ್ರಮವನ್ನು ಹಾಕುವ ಸಮುದಾಯಗಳಾಗಿವೆ. ಬಲಾತ್ಕಾರದ ದುಡಿಮೆಗೆ ಸಂಬಂಧಿಸಿದ ನಿಯಮಗಳನ್ನು ಶಾಸನಗಳು ಕಡ್ಡಾಯ ಮತ್ತು ಬಿಟ್ಟಿ ಎಂದು ಕರೆಯುತ್ತವೆ. ಕೆರೆ, ಕಾಲುವೆ ಮೊದಲಾದವನ್ನು ಸುಸ್ಥಿತಿಯಲ್ಲಿರುವಂತೆ ನೋಡಿಕೊಳ್ಳುತ್ತಿದ್ದ ಅಥವಾ ಹೊಸ ಕೆರೆಗಳನ್ನು ಕಟ್ಟಿಸಿದ ವ್ಯಕ್ತಿಗಳಿಗೆ ರಾಜರು ಮತ್ತು ಗ್ರಾಮಸಭೆಗಳು ಮಾನ್ಯ ಅಥವಾ ತೆರಿಗೆ ರಹಿತ ಭೂಮಿಯನ್ನು ನೀಡುತ್ತಿದ್ದವು. ಈ ರೂಢಿಯು ರಾಜಪ್ರಭುತ್ವದಲ್ಲಿ ಬಹುಕಾಲದಿಂದ ಉಳಿದುಕೊಂಡುಬಂದಿತ್ತು. ಕೆರೆಗಳ ಕೆಳಗಿನ ಜಮೀನುಗಳನ್ನು ಹಾಗೆ ಕೊಡುಗೆಯಾಗಿ ನೀಡಿದಾಗ ಅದಕ್ಕೆ ಕಟ್ಟು-ಕೊಡಿಗೆ, ಕೆರೆ-ಕಟ್ಟುಕೊಡುಗೆ, ಕೆರೆ-ಕೊಡಿಗೆ, ಮತ್ತು ದಸವಂದ ಎಂಬ ಹೆಸರುಗಳಿದ್ದವು.[೧೪೨] ಈ ರೀತಿ ಸಾಮಾಜಿಕ ಸೇವೆ ಸಲ್ಲಿಸಿದ ಸಮುದಾಯಗಳಿಗೆ ಕೆರೆ ಹಿಂದಿನ ಭೂಮಿಯನ್ನು ನೀಡುತ್ತಿದ್ದ ಅಂಶ ನಮಗೆ ತಿಳಿದು ಬಂದಿದ್ದರೂ ಅಲ್ಲಿ ಪುನಃ ಸಾಮಾಜಿಕ ವ್ಯವಸ್ಥೆಯಲ್ಲಿ ವರ್ಗ ವ್ಯವಸ್ಥೆ ಹೇಗೆ ಕೆಲಸ ಮಾಡುತ್ತದೆ ಎಂಬ ಅಂಶವನ್ನು

ಪ್ರೋ.ಎನ್.ಚಿನ್ನಸ್ವಾಮಿ ಸೋಸಲೆಯವರ ಮಾತಿನಂತೆ ಹೇಳುವುದಾದರೆ, ಕೆರೆ ಹಿಂದೆ ದಾನ ನೀಡುವ ಭೂಮಿ ಕಾಲುವೆಯ ನೀರು ಸರಾಗವಾಗಿ ಸೇರಬಹುದಾದ ಭೂಮಿ ಬ್ರಾಹ್ಮಣರಿಗೆ ಅಥವಾ ಉನ್ನತ ವರ್ಗಕ್ಕೆ ನೀಡುತ್ತಿದ್ದರು. ಉಳಿದ ತೂಬಿನ ನೀರನ್ನು ಕಷ್ಟ ಪಟ್ಟು ಕಾಲುವೆ ಮಾಡಿಕೊಂಡು ನೀರಾಯಿಸಿಕೊಳ್ಳುವ ಬಂಜರು ಭೂಮಿ ಅಥವಾ ಕೃಷಿ ಯೋಗ್ಯವಲ್ಲದ ಭೂಮಿಯನ್ನು ಸಾಮಾಜಿಕ ವ್ಯವಸ್ಥೆಯಲ್ಲಿ ಕೆಳಸ್ಥರದ ಸಮುದಾಯಗಳಿಗೆ ನೀಡುತ್ತಿದ್ದರು ಎಂಬ ಅಂಶ ಶಾಸನಗಳಲ್ಲಿ ತಿಳಿಯುತ್ತದೆ. ಸಾಮಾನ್ಯ ವರ್ಗದ ಜನರಿಂದ ಕೆರೆಯನ್ನು ಕಟ್ಟಲು ಆಗುತ್ತಿರಲಿಲ್ಲ. ಹಾಗಾಗಿ ಕೆರೆಯನ್ನು ಕಟ್ಟಿಸಿದ ಕಟ್ಟು-ಕೊಡುಗೆಯನ್ನು ಪಡೆಯುತ್ತಿದ್ದ ವ್ಯಕ್ತಿಗೆ ಆ ಕೆರೆಯ ಅಚ್ಚುಕಟ್ಟು ಪ್ರದೇಶದಲ್ಲಿ ನೀಡಿದ ನಿರ್ಧಿಷ್ಟ ಭೂಮಿ ಎಂಬ ಅರ್ಥವನ್ನು ಮೇಲ್ವರ್ಗದ ವ್ಯಕ್ತಿ ಪಡೆದುಕೊಳ್ಳುತ್ತಿದ್ದ.

ಸಾಮಾನ್ಯವಾಗಿ ದಸವಂದ ಎಂದರೆ ಬಿರುಕು ಬಂದಾಗ ರಿಪೇರಿ ಮಾಡಿಸಿದ, ವಿಸ್ತರಿಸಿದ, ಉಸ್ತುವಾರಿ ನೋಡಿಕೊಂಡ ಅಥವಾ ನಿರ್ಮಿಸಿದ ವ್ಯಕ್ತಿಗೆ ಆ ಕೆರೆಯ ಕೆಳಗೆ ಬೇಸಾಯವಾಗುತ್ತಿದ್ದ ಭೂಮಿಯಲ್ಲಿ ಹತ್ತನೇ ಒಂದು ಪಾಲು ಭೂಮಿಯನ್ನು ನೀಡುವುದು.[೧೪೩] ದಸವಂದ ನೀಡುವ ಪದ್ದತಿಯು ೧೮ನೇ ಶತಮಾನದವರೆಗೂ ರೂಡಿಯಲ್ಲಿತ್ತು. ಇದನ್ನು ಕ್ರಿ.ಶ.೧೭೩೦ರ ಒಂದು ಶಾಸನವು ಸಮರ್ಥಿಸುತ್ತದೆ. ಹಾಗೆಯೇ ೧೮ನೇ ಶತಮಾನದಲ್ಲಿ ಕೊನೆಗೆ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಪ್ರವಾಸ ಮಾಡಿದ ಬುಕಾನನ್ ಬರೆದ ವರದಿಗಳಿಂದಲೂ ತಿಳಿಯುತ್ತದೆ.[೧೪೪]

ಕೆರೆಗಳ ದುರಸ್ತಿಯೆಂದರೆ ಅದರಲ್ಲಿ ಸಾಮಾನ್ಯವಾಗಿ ಹೂಳು ತೆಗೆಯುವುದು, ಏರಿಗಳಲ್ಲಿ ಬಿರುಕು ಉಂಟಾಗದಂತೆ ನೋಡಿಕೊಳ್ಳುತ್ತಿರುವುದು. ಕೊಳದ ನೀರಾವರಿಯಲ್ಲಿದ್ದ ಒಂದು ದೋಷವೆಂದರೆ ಕ್ರಮೇಣ ಹೂಳು ತುಂಬಿ ನೀರನ್ನು ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯ ಕಡಿಮೆಯಾಗುವುದು. ಆದ್ದರಿಂದ ಆ ಕಾಲದ ಜಮೀನುದಾರರು ಅಥವಾ ಗ್ರಾಮ ಆಡಳಿತ ಕೆರೆಗಳ ಹೂಳು ತೆಗೆಯುವುದಕ್ಕೆಂದೇ ವಿಶೇಷವಾಗಿ ಹಣವನ್ನು ದಾನಮಾಡಿದ್ದಾರೆ. ಪ್ರತಿವರ್ಷವೂ ಕೆರೆಯಿಂದ ಹೂಳನ್ನು ತೆಗೆದು ಸ್ವಚ್ಛಗೊಳಿಸುವ ವ್ಯಕ್ತಿಗಳಿಗೆ ಭೂಮಿಯನ್ನು ಕೊಡುಗೆಯಾಗಿ ನೀಡಲಾಗುತ್ತಿತ್ತು. ಪ್ರಸ್ತುತ ಸಂಶೋಧನೆಯ ಕ್ಷೇತ್ರಕಾರ್ಯದ ಸಮಯದಲ್ಲಿ ಓರ್ವ ವೃದ್ಧನಿಂದ ತಿಳಿದ ಮಾಹಿತಿಯಂತೆ ಕೆರೆಯ ಹೂಳು ತೆಗೆಯುವಾಗ ಇಡೀ ಗ್ರಾಮದ ಮನೆಗೆ ಒಬ್ಬರಂತೆ ಸೇರಿ ಭಾಗವಹಿಸಿ ಹೂಳು ತೆಗೆಯುತ್ತಿದ್ದರಂತೆ. ಅಂದಿನ ಕಾಲದ ಜಲ ಸಂಪತ್ತು ಹೇರಳವಾಗಿ ಇತ್ತು ಎನ್ನುವುದಕ್ಕೆ ಸಾಕ್ಷಿ ಎಂಬಂತೆ ಭಾಗವಹಿಸಿದ ಜನರು ಕೆಲಸ ಮಾಡುತ್ತಿರುವಾಗ ಆ ಊರಿನ ಕುರಿ ಕಾಯುವರು ಕೆರೆಯ ನೀರಿಗೆ ಬಂದಾಗ ಒಂದು ಹಿಂಡು ಕುರಿಗೆ ಒಂದು ಕುರಿಯನ್ನು ನೀಡಬೇಕಿತ್ತು. ಅದು ಕೆಲಸ ಮಾಡುವ ಕಾರ್ಮಿಕರೇ ಆ ಕುರಿಯನ್ನು ಆಯ್ಕೆ ಮಡಿಕೊಂಡು ಹಿಡಿದಿಟ್ಟುಕೊಳ್ಳುತ್ತಿದ್ದರಂತೆ[೧೪೫] ಇದು ಅಂದಿನ ಕಾಲದ ಶ್ರಮಕ್ಕೆ ಸಾಮಾನ್ಯ ಜನ ಹೇಗೆ ಸ್ಪಂದಿಸುತ್ತಿದರು ಎಂಬ ಭಾವ ತಿಳಿಸುತ್ತದೆ.

ಕೆಲವೊಮ್ಮೆ ಈ ಹೂಳು ತೆಗೆಯುವ ಕಾರ್ಯಕ್ಕಾಗಿ ಬಂಡಿಗಳನ್ನು ಸಿದ್ದಮಾಡುವುದಕ್ಕಾಗಿಯೇ ಭೂಮಿಯನ್ನು ನೀಡಲಾಗುತ್ತಿತ್ತು.[೧೪೬] ಕೆರೆ ಬಂಡಿಯ ಎಮ್ಮೆಗಳನ್ನು ಕಾಪಾಡುವವನಿಗೆ, ಎಣ್ಣೆಗೆ, ಚಕ್ರಕ್ಕೆ ಹಾಕುವ ಕೀಲೆಣ್ಣೆಗೆ, ಹಾರೆ, ಗುದ್ದಲಿ, ಪಿಕಾಸಿಗಳಿಗೆ ಇತರ ಅಗತ್ಯವಸ್ತುಗಳಿಗೆ ಬೇಕಾಗಲೆಂದು, ವಸ್ತುಗಳ ಮೇಲಿನ ಸುಂಕದಲ್ಲಿ ಒಂದು ಪಾಲನ್ನು ಬಿಡಲಾಗುತ್ತಿತ್ತು.[೧೪೭]

ನೀರಾವರಿ ಕಾರ್ಯಗಳ ದುರಸ್ತಿ ಮತ್ತು ಪಾಲನೆಯನ್ನು ಹಲವರು ಸೇರಿ ನಿರ್ವಹಿಸಿದ್ದಾಗ ಆ ನೀರಿನ ಸೂಕ್ತ ರೂಪದ ಹಂಚಿಕೆಗಾಗಿ ಕೂಡ ನಿಯಮಾವಳಿಯನ್ನು ನಿಗದಿಪಡಿಸಲಾಗಿತ್ತು. ಅವರು ವಹಿಸಿಕೊಂಡ ವೆಚ್ಚಕ್ಕೆ ತಕ್ಕ ಪರಿಣಾಮದಲ್ಲಿ ಅವರಿಗೆ ನೀರು ದೊರಕುತ್ತಿದ್ದಿತು. ಕ್ರಿ.ಶ. ೧೪೦೧ರ ದಾವಣಗೆರೆಯ ಒಂದು ಶಾಸನವು ನಾಲೆಯ ಕೆಳಗೆ ತೋಡಿಸಿದ ಬಾವಿಗಳು ಮತ್ತು ಕೆರೆಗಳ ವೆಚ್ಚ ಹಾಗೂ ವಾರ್ಷಿಕ ರಿಪೇರಿಗಳ ವೆಚ್ಚವನ್ನು ಮೂರನೇ ಎರಡು ಪಾಲು ದೇವಾಲಯದ ದೇವರೂ, ಮೂರನೇ ಒಂದು ಪಾಲು ಬ್ರಾಹ್ಮಣರೂ ವಹಿಸತಕ್ಕದ್ದು. ಆದ್ದರಿಂದ ಆ ನಾಲೆಯ ನೀರಿನಲ್ಲಿ ಅದೇ ಪ್ರಮಾಣದಲ್ಲಿ ನೀರನ್ನು ಅವರಿಗೆ ಹಂಚತಕ್ಕದ್ದು ಎಂದು ಹೇಳುತ್ತದೆ.[೧೪೮]

ನೀರಾವರಿಯ ಹಕ್ಕುಗಳನ್ನು ಕುರಿತು ಹಳ್ಳಿಗಳ ನಡುವೆ ವಿರಸವುಂಟಾದರೆ ಗ್ರಾಮ ಆಡಳಿತದ ಮೂಲಕ ಅದನ್ನು ಪರಿಹರಿಸಲಾಗುತ್ತಿತ್ತು. ನಿರ್ಣಯವನ್ನು ಜಾಗರೂಕತೆಯಿಂದ ದಾಖಲು ಮಾಡಲಾಗುತ್ತಿತ್ತು. ಒಂದು ಕೆರೆಯ ಮೇಲೆ ಹಕ್ಕು ತಮ್ಮದೆಂದು ಎರಡು ಹಳ್ಳಿಗಳಿಗೆ ಜಗಳವಿದ್ದಾಗ, ಒಂದು ಹಳ್ಳಿಯು ಇನ್ನೊಂದಕ್ಕೆ ಹಣವನ್ನು ಕೊಟ್ಟು ಹಕ್ಕನ್ನು ಕೊಂಡುಕೊಳ್ಳಲು ನಿರ್ಧರಿಸಿತು. ಆ ಹಣವು ಈ ಸಂದರ್ಭದಲ್ಲಾದಂತೆ ಒಂದೇ ಸಾರಿ ಕೊಟ್ಟ ಒಟ್ಟು ಮೊತ್ತವಾಗಬಹುದು ಅಥವಾ ವಾರ್ಷಿಕ ಕೊಡುಗೆಯಾಗಿರಬಹುದಾಗಿತ್ತು.[೧೪೯]

ಬೇರೆ ಬೇರೆ ಗಾತ್ರದ ಕೆರೆಗಳ ನಿರ್ಮಾಣಕ್ಕೆ ಸಹಜವಾಗಿಯೇ ಹಳ್ಳಿಗಳ ಜನರ ಸಹಕಾರಯುತ ಪ್ರಯತ್ನ ಅಗತ್ಯವಾಗಿತ್ತು. ಜನತೆಗೆ ಸರಕಾರವು ಒದಗಿಸುತ್ತಿದ್ದ ನೀರಾವರಿ ಸೌಲಭ್ಯಗಳನ್ನು ಕುರಿತ ಉಲ್ಲೇಖಗಳು ಶಾಸನಗಳಲ್ಲಿ ಬೇಕಾದಷ್ಟಿವೆ. ಎಲ್ಲ ಸಂದರ್ಭಗಳಲ್ಲೂ ಸರಕಾರವು ಸ್ಥಳೀಯ ಜನರೊಂದಿಗೆ ಅವರ ಕಲ್ಯಾಣಕ್ಕಾಗಿ ನಿಕಟವಾದ ಸಾಮರಸ್ಯದಿಂದ ನಡೆದುಕೊಳ್ಳುತ್ತಿದ್ದುದು ವ್ಯಕ್ತವಾಗುತ್ತದೆ. ರಾಜರಿಗೆ ಅಥವಾ ಭೂಮಿಯನ್ನು ವಶಪಡಿಸಿಕೊಂಡವರಿಗೆ ಮೊದಲ ಹಂತದಲ್ಲೇ ಜಲಾಶಯಗಳ ನಿರ್ಮಾಣದ ವಿಚಾರ ಮನವರಿಕೆಯಾಗಿರಬಹುದು.

ಚಿತ್ರದುರ್ಗ ಪ್ರದೇಶದಲ್ಲಿ ಪ್ರಾಚೀನ ಕೆರೆಗಳಿರುವುದು ಇಲ್ಲಿನ ಅರಸರು ಈ ಬಗೆಯ ನಿರ್ಮಾಣಕ್ಕೆ ಪ್ರೋತ್ಸಾಹ ನೀಡುತ್ತಿದ್ದರೆಂಬುದಕ್ಕೆ ಸಾಕ್ಷಿಯಾಗಿ ನಿಂತಿದೆ.[೧೫೦] ಸರಕಾರದ ಸಂಪನ್ಮೂಲದ ಜೊತೆಗೆ ಈ ಕಾರ್ಯಗಳಿಗಾಗಿ ಖಾಸಗಿ ಹಣವೂ ಧಾರಾಳವಾಗಿ ದೊರಕುತ್ತಿದ್ದಿತು. ಕೆರೆಗಳನ್ನು ಬಹುತೇಕ ಖಾಸಗಿ ಗಣ್ಯರು ಕಟ್ಟಿಸಿ ಸಮುದಾಯಗಳು ಜೋಪಾನಗೊಳಿಸಿವೆ. ದೇವಾಲಯಗಳು ಕೂಡ ಹಳ್ಳಿಯ ಕೆರೆಗಳ ದುರಸ್ತಿ ಮತ್ತು ಪಾಲನೆಯನ್ನು ಕೈಗೆತ್ತಿಕೊಂಡಿದ್ದಿದೆ.

ನಾಯಕರ ಆಡಳಿತ ಅವಧಿಯಲ್ಲಿ ನೀರಾವರಿಯು ನದಿ, ಬಾವಿ, ಕೆರೆಗಳನ್ನು ಅವಲಂಬಿಸಿತ್ತು. ರಾಜರು, ಅಧಿಕಾರಿಗಳು, ಗ್ರಾಮಸ್ಥರು ಕೆರೆ, ಬಾವಿಗಳನ್ನು ಕಟ್ಟಿಸುವುದು ಪುಣ್ಯದ ಕೆಲಸವೆಂದು ನಂಬಿದ್ದರು. ಇಲ್ಲಿ ತುಂಗಭದ್ರಾ ನದಿಯು, ಬಳ್ಳಾರಿ, ರಾಯಚೂರು ಜಿಲ್ಲೆಗಳನ್ನು ಹಾಗೂ ಧಾರವಾಡ ಚಿತ್ರದುರ್ಗ ಜಿಲ್ಲೆಗಳನ್ನು ವಿಭಾಗಿಸುತ್ತದೆ. ಆದರೆ ಈ ಜಿಲ್ಲೆಗಳ ಕೆಲವು ಪ್ರದೇಶಗಳು ಮಾತ್ರ ನಾಯಕರ ಆಡಳಿತ ಮಿತಿಗೆ ಒಳಪಟ್ಟಿದ್ದವು.

ಹಗರಿಹಳ್ಳ, ನಾರಿಹಳ್ಳ, ಚಿನ್ನಹಗರಿ ಹಳ್ಳಗಳು ಚಿತ್ರದುರ್ಗ ಪರಿಸರದಲ್ಲಿ ಉಗಮವಾಗಿ ಬೊಮ್ಮಕೊಂಡನ ಕೆರೆಯನ್ನು ದಾಟಿ ಬಳ್ಳಾರಿ ಜಿಲ್ಲೆಯನ್ನು ಸೇರುತ್ತವೆ. ಮುಂದೆ ಈ ೩ ಹಳ್ಳಗಳು ಸೇರಿ ಜನಗಿಹಳ್ಳವೆಂಬ ಹೆಸರು ಪಡೆದು ಹರಿಯುತ್ತವೆ. ವೇದಾವತಿ, ಸುವರ್ಣಮುಖಿ, ಗರಣಿಹಳ್ಳ, ಸ್ಯಾಗಲಹಳ್ಳ ಎಂಬ

ನದಿಗಳು ಚಿತ್ರದುರ್ಗ ಪರಿಸರದಲ್ಲಿಯೂ, ಜಯಮಂಗಲಿ, ಕುಮುದ್ವತಿ, ಶಿಂಷಾ, ಗರಣಿಹಳ್ಳ, ನಳಿನಿ, ನಾಗಿನಿ, ಹೇಮಾವತಿ, ಕಮಲ, ಉತ್ತರ ಪಿನಾಕಿನಿ ನದಿಗಳು ತುಮಕೂರು ಪರಿಸರದಲ್ಲಿಯೂ ಹರಿಯುತ್ತವೆ. ನಾಗಿನಿಹಳ್ಳ ಶಿಂಷಾ ನದಿಯನ್ನು ಸೇರಿದರೆ, ಗರಣಿಹಳ್ಳ ಮತ್ತು ಸುವರ್ಣಮುಖಿ ನದಿಗಳು ಚಿತ್ರದುರ್ಗ ಪರಿಸರವನ್ನು ದಾಟಿ ಮುಂದೆ ತುಮಕೂರು ಪರಿಸರದಲ್ಲಿಯೂ ಹರಿಯುತ್ತವೆ.[೧೫೧] ತುಂಗಭದ್ರಾನದಿಯೊಂದನ್ನು ಬಿಟ್ಟರೆ ಉಳಿದ ನದಿಗಳೆಲ್ಲಾ ಒಂದಕ್ಕೊಂದು ಉಪನದಿಗಳಾಗಿವೆ. ಬಳ್ಳಾರಿ ಪ್ರದೇಶದಲ್ಲಿ ನದಿಗಳು ದಕ್ಷಿಣದಿಂದ ಉತ್ತರಕ್ಕೆ ಹರಿಯುತ್ತವೆ. ಚಿತ್ರದುರ್ಗ ಮತ್ತು ತುಮಕೂರು ಪ್ರದೇಶಗಳಲ್ಲಿ ನದಿಗಳು ಜಿಲ್ಲಾ ಗಡಿಯಂಚಿನಲ್ಲಿ ಹರಿಯುತ್ತವೆ. ಜಿಲ್ಲೆಗಳ ಮಧ್ಯದ ಪ್ರದೇಶಗಳಲ್ಲಿ ಯಾವ ನದಿಗಳೂ ಹರಿಯದೇ ಇರುವುದರಿಂದ ಅನೇಕ ಕಾಲುವೆಗಳನ್ನು ಕಟ್ಟಿಸಿದ್ದಾರೆ. ಶಾಸನಗಳಲ್ಲಿ ಈ ನದಿಗಳ ಉಲ್ಲೇಖವಿದೆಯಾದರೂ, ಹೇಗೆ ಉಪಯೋಗಿಸಿಕೊಳ್ಳುತ್ತಿದ್ದರು ಎಂಬುದಕ್ಕೆ ಆಧಾರಗಳು ದೊರೆಯುವುದಿಲ್ಲ.

ನದಿಯ ಮೂಲಗಳು ಇಲ್ಲದೇ ಇರುವ ಪ್ರದೇಶಗಳಲ್ಲಿ ಕೆರೆ-ಬಾವಿಯನ್ನು ನಿರ್ಮಿಸುತ್ತಿದ್ದರು. ಮೇಲೆ ಹೇಳಿದಂತೆ ಅನೇಕ ಅಧಿಕಾರಿ, ಮಂತ್ರಿ, ವರ್ತಕರು ಶಾಸನಗಳಲ್ಲಿ ಕೆರೆಯನ್ನು ಕಟ್ಟಿಸಿದ ಅಂಶಗಳು ಆದಿ ಕದಂಬರ ಪೂರ್ವದಿಂದಲೂ ನಡೆದು ಬಂದಿರುವುದನ್ನು ನಾವು ಶಾಸನಗಳಿಂದ ತಿಳಿಯಬಹುದು. ಕೆರೆ ನಿರ್ಮಾಣ ಪ್ರಕ್ರಿಯೆಯಲ್ಲಿ ಇದರ ರಕ್ಷಣೆಗೆ ನೀರುಗಂಟಿಯನ್ನು ನೇಮಿಸುತ್ತಿದ್ದರು. ಗ್ರಾಮಗಳಲ್ಲಿ ಅವನಿಗೂ ಪ್ರಮುಖ ಸ್ಥಾನವಿದ್ದು ಆಯಗಾರರಲ್ಲಿ ಒಬ್ಬನಾಗಿದ್ದ. ಕೆರೆಗಳಿಗೆ ಕಾಲುವೆಗಳನ್ನು ನಿರ್ಮಿಸಿ ನೀರನ್ನು ದೂರದ ಜಮೀನುಗಳಿಗೆ ಕೊಂಡೊಯ್ಯುತ್ತಿದ್ದರು ಎಂಬುದನ್ನು ಶಾಸನಗಳಿಂದ ತಿಳಿಯಬಹುದು.[೧೫೨]

ಚಿತ್ರದುರ್ಗ ನಾಯಕರ ರಾಜಧಾನಿಯಾದ ಚಿತ್ರದುರ್ಗ ಬೆಟ್ಟದ ದಕ್ಷಿಣ-ಪೂರ್ವ ಪ್ರದೇಶದ ತಿಮ್ಮಣ್ಣ ನಾಯಕನ ಕೆರೆಯು ಈ ಪ್ರದೇಶದ ಪ್ರಾಚೀನ ಕೆರೆಗಳಲ್ಲಿ ಒಂದು. ಈ ಕೆರೆಯೊಳಗಿನ ಒಂದು ಬಂಡೆಯ ಮೇಲೆ ಕ್ರಿ.ಶ.೧೪ನೇ ಶತಮಾನಕ್ಕೆ ಸೇರಿದ ಒಂದು ಶಾಸನವಿದ್ದು, ಅದು ಚಿತ್ರದುರ್ಗ ಅರಸರ ಪೂರ್ವದ ಕೆರೆ ಎಂಬುದಾಗಿ ಅದಕ್ಕೆ ಅರಕೆರೆ ಎಂಬ ಹೆಸರಿತ್ತೆಂದು ತಿಳಿಯುತ್ತದೆ.

ಮದಕರಿ ನಾಯಕನು ಚಿತ್ರದುರ್ಗ ನಗರದ ಜನತೆಗೆ ಕುಡಿಯುವ ನೀರಿನ ವ್ಯವಸ್ಥೆಯನ್ನು ಅಚ್ಚು ಕಟ್ಟಾಗಿ ಮಾಡಿಸಿರುವುದನ್ನು ಕಾಣಬಹುದು. ಕೋಟೆಯ ಮೇಲ್ಭಾಗದಲ್ಲಿ ಬಿದ್ದ ನೀರನ್ನು ಒಂದರ ಕೆಳಗೆ ಒಂದು ಹೊಂಡಕ್ಕೆ ಬರುವಂತೆ, ಕೊನೆಗೆ ಊರಿನಲ್ಲಿ ಕೊಳವೆಗಳ ಮೂಲಕ ನೀರನ್ನು ಸಾಗಿಸಿ ಸಂತೆ ಹೊಂಡಕ್ಕೆ ತಲುಪಿಸುತ್ತಿದ್ದರು. ಇತ್ತೀಚಿನವರೆಗೂ ಸಂತೆ ಹೊಂಡಕ್ಕೆ ನೀರು ಬರುತ್ತಿತ್ತು.

ಕ್ರಿ.ಶ.೧೬೮೯-೧೭೨೧ರಲ್ಲಿ ಬಿಚ್ಚುಗತ್ತಿ ಭರಮಣ್ಣ ನಾಯಕನು ನೀರಾವರಿಗೆ ಹೆಚ್ಚಿನ ಆದ್ಯತೆ ನೀಡಿ ತನ್ನ ಆಡಳಿತ ಅವಧಿಯಲ್ಲಿ ಸುಮಾರು ಇಪ್ಪತ್ತಕ್ಕೂ ಹೆಚ್ಚಿನ ಕೆರೆಗಳನ್ನು ಕಟ್ಟಿಸಿದನು. ಇವನು ಮುರುಘಮಠದ ಎರಡು ಕೆರೆಗಳು, ಭೀಮಸಮುದ್ರ ಕೆರೆಯ ಜೀರ್ಣೋದ್ಧಾರ, ಇವುಗಳ ಜೊತೆಗೆ ಇಟ್ಟಿಗೆಹಳ್ಳಿ ಕೆರೆ, ಲಿಂಗವ್ವನಾಗತಿಹಳ್ಳಿ ಕೆರೆ, ಚಿತ್ರಹಳ್ಳಿ ಸೀಮೆಯ ಹಂಗನಾರದಕೆರೆ, ಕೆಸರಳ್ಳಿ ಬಳಿ ಕಣಿವೆಗೆ ಹಾಕಿಸಿದ ಮದಕರಿ ನಾಯಕನ ಕೆರೆ, ಕಸ್ತೂರಿ ರಂಗಪ್ಪ ನಾಯಕನ ಕೆರೆ, ಅಣಜಿಕೆರೆ, ಜಂಪಳ ನಾಯಕನ ಕೋಟೆಕೆರೆ, ಮದಕೇರಿ ನಾಯಕನ ಕೋಟೆಕೆರೆ, ಚಿಕ್ಕಸಿದ್ದವ್ವನಾಗತಿ ಹಳ್ಳಿಕೆರೆ, ಹಣ್ಣೆಹಾಳು (ಅನ್ನೆಹಾಳು) ಗ್ರಾಮದ ಚಿಕ್ಕ ಸಿದ್ದವ್ವನಾಗತಿ ಕೆರೆ, ಆಲಘಟ್ಟದ ಒಳ ಹುಚ್ಚವ್ವನಾಗತಿ ಕೆರೆ, ಹುಚ್ಚವ್ವನಹಳ್ಳಿ

ಕೆರೆ, ಜಗಳೂರು ಸೀಮೆಯ ಭರಮಸಮುದ್ರ ಕೆರೆ, ಮಾಯಕೊಂಡ ಸೀಮೆಯ ಭರಮಸಾಗರ ಕೆರೆ, ಕುರುಬರ ಮರಡಿಕೆರೆ, ಕುರುಬರಹಳ್ಳಿ ಗ್ರಾಮದ ಬಳಿಯ ಚಿಕ್ಕಪಾಲವ್ವನ ಕೆರೆ, ದ್ಯಾಮವ್ವನಕೆರೆ ಇವುಗಳಲ್ಲದೆ ಅನೇಕ ಹೊಂಡ, ಕಟ್ಟೆಗಳನ್ನು, ಬಾವಿಗಳನ್ನು ನಿರ್ಮಾಣ ಮಾಡಿದನು.

ತಿಮ್ಮಣ್ಣ ನಾಯಕನ ಸೇವೆಯಲ್ಲಿ ಇದ್ದ ಶೆಟ್ಟರ ಅಯ್ಯಣ್ಣನೆಂಬುವನು ಚಿತ್ರದುರ್ಗದಲ್ಲಿ ತನ್ನ ಹೆಸರಿನಲ್ಲಿ ಅಯ್ಯಣ್ಣನ ಬಾವಿ ಕಟ್ಟಿಸಿದನು.[೧೫೩] ಇವುಗಳಲ್ಲಿ ಅಣಜಿ, ಹುಚ್ಚವನಹಳ್ಳಿ, ಭೀಮಸಮುದ್ರ ದೊಡ್ಡಕೆರೆ, ಇನ್ನಿತರೆ ಕೆರೆಗಳು ನಾಲೆಗಳನ್ನು ಹೊಂದಿದ್ದು, ನೀರಾವರಿ ವ್ಯವಸ್ಥೆಗೆ ಯೋಗ್ಯವಾದವುಗಳಾಗಿದ್ದು ಆದಾಯ ತರುವಂತಹ ಕೃಷಿ ಬೆಳೆಗಳನ್ನು ಬೆಳೆಯಲು ಸಹಕಾರಿಯಾಗಿದ್ದವು.

ಮತ್ತಿ ತಿಮ್ಮಣ್ಣನಾಯಕನ ಸೂಳೆ ಕಟ್ಟಿಸಿದ ಕೆರೆಗೆ ಗಾಣಗಿತ್ತಿ ಕಟ್ಟೆ ಎಂದು ಹೆಸರು. ಈಗ ಕೆರೆ ಇಲ್ಲ, ಸಾಗುವಳಿ ಜಮೀನು ಆಗಿದೆ.[೧೫೪] ಮತ್ತೆ ತಿಮ್ಮಣ್ಣನಾಯಕನು ಕಟ್ಟಿದ್ದೆನ್ನುವ ತಿಮ್ಮಣ್ಣನಾಯಕನ ಕೆರೆಯನ್ನು ಮೊದಲ ಮದಕರಿನಾಯಕನು ಜೀರ್ಣೋದ್ಧಾರ ಮಾಡಿದನು. ಎರಡನೇ ಮದಕರಿನಾಯಕನು ತನ್ನ ತಾಯಿಯ ಹೆಸರಿನಲ್ಲಿ ಓದೋ ತಿಮ್ಮವ್ವನ ಕೆರೆಯನ್ನು ನಿರ್ಮಿಸಿದ್ದಲ್ಲದೆ ಮಗಳು ಕೆಂಚವ್ವನ ಹೆಸರಿನಲ್ಲಿಯೂ ಒಂದು ಕೆರೆಯನ್ನು ನಿರ್ಮಿಸಿದನು. ಅದನ್ನು ಸಣ್ಣ ಕೆರೆ ಎಂದು ಕರೆಯುತ್ತಾರೆ. ಕ್ರಿ.ಶ.೧೭೫೪-೭೯ರಲ್ಲಿ ಆಡಳಿತ ಮಾಡಿದ ಕೊನೆಯ ಮದಕರಿ ನಾಯಕನು ಸಿದ್ದಾಪುರ ಕೆರೆ, ಲಿಂಗದಳ್ಳಿ ಕೆರೆಗಳನ್ನು ನಿರ್ಮಿಸಿದನು. ದಳವಾಯಿ ಮುದ್ದಣ್ಣ ಎಂಬುವನು ಸಂತೆ ಮುದ್ದಾಪುರ ಗ್ರಾಮದ ಕೆರೆಯನ್ನು ನಿರ್ಮಿಸಿದನು. ಸಾಮಾನ್ಯವಾಗಿ ಕೆರೆಗೆ ಅದನ್ನು ಕಟ್ಟಿಸಿದವನ ಹೆಸರಿನಿಂದಲೇ ಗುರುತಿಸುವುದು ಕಂಡುಬರುತ್ತದೆ.

ಮದಕರಿನಾಯಕನು ತನ್ನ ಹೆಂಡತಿಯಾದ ಚಿಕ್ಕಮ್ಮ ನಾಗತಿಯ ಹೆಸರಿನಲ್ಲಿ ನೆಲ್ಲಿಕಟ್ಟೆಯಲ್ಲಿ ಒಂದು ಕೆರೆಯನ್ನು ಕಟ್ಟಿಸಿದನು.[೧೫೫] ಯಸಗೂರು ಕೆರೆಯನ್ನು ಹೊಟ್ಟೆ ಒಡೆಯರ ಕಾಲದಲ್ಲಿ ಬಾವಿಗೊಂಡನು ಕಟ್ಟಿಸಿದನು. ನಾಯಕರ ಸಾಮಂತರಾಗಿದ್ದ ಹಟ್ಟಿ ಕಸ್ತೂರಿ ರಂಗಪ್ಪನಾಯಕನು ತನ್ನ ತಾಯಿ ಲಕ್ಷ್ಮಮ್ಮ ನಾಗತಿಯ ಹೆಸರಿನಲ್ಲಿ ಮೊಳಕಾಲ್ಮೂರಿನ ಬೆಟ್ಟದ ಮೇಲೆ ಕೆರೆಯನ್ನು ಕಟ್ಟಿಸಿದನು.[೧೫೬] ಹಟ್ಟಿ ನಾಯಕನ (ಹೆಸರು ಅಳಿಸಿದೆ) ಕಾಲದಲ್ಲಿ ಯಲ್ಲಪ್ಪನಾಯಕನೆಂಬುವವನು ದೊಡ್ಡೇರಿಯಲ್ಲಿ ಕೆರೆ ಕಟ್ಟಿಸಿದನು.[೧೫೭] ಹಟ್ಟಿ ನಾಯಕನೊಬ್ಬನು ಒಟ್ಟು ಏಳು ಕೆರೆಗಳನ್ನು ಕಟ್ಟಿಸಿದನು. ಹರತಿ ಚಿಕ್ಕಪ್ಪನಾಯಕನು ಯಲ್ಲಪ್ಪ ನಾಯಕನಿಗೆ ಹೇಳಿ ಹಗರಿ ನದಿಯಿಂದ ಮೈಲೇನಹಳ್ಳಿಗೆ ಒಂದು ಕಾಲುವೆ ತೆಗೆಯಿಸಿದನು.[೧೫೮] ಹರತಿ ನಿಡುಗಲ್ಲು ಹೊಟ್ಟಣ್ಣ ನಾಯಕನು ಕೆರೆ, ಬಾವಿ, ಕೊಳಗಳನ್ನು ಕಟ್ಟಿಸಿ ದಾನ ಕೊಡುವನು.[೧೫೯] ಕಂಚಿಕೆರೆ,[೧೬೦] ಕಾಮಸಮುದ್ರ[೧೬೧] ಹರತಿಯ ಪದ್ದಣ್ಣನಾಯಕನು ಸಿದ್ದಯ್ಯನ ಕೋಟೆಯ ಪಶ್ಚಿಮದಲ್ಲಿದ್ದ ಕೆರೆಯ ಬಿರುಕನ್ನು ದುರಸ್ತಿ ಮಾಡಿಸಿದನು.[೧೬೨] ಗುಡ್ಡಗಿರಿಯಗೊಂಡನು ಗೂಳೇಯ ಕೆರೆಯನ್ನು ಬಿರುಕು ಬಿಟ್ಟುದುದರಿಂದ ಮತ್ತೆ ಕಟ್ಟಿಸಿದನು,[೧೬೩] ವೀರಣ್ಣಗೌಡ, ರಾಮಯ್ಯ ಮತ್ತು ಮಹಂತಯ್ಯ ಎಂಬ ಮೂವರು ಬಿರುಕು ಬಿಟ್ಟ ಒಂದು ಕೆರೆಗೆ ಒಡ್ಡು ಕಟ್ಟಿಸಿದರು.[೧೬೪] ನಾಯಕರ ಕಾಲದಲ್ಲಿ ಅಧಿಕಾರಿಗಳು, ಅರಸರು ಅಷ್ಟೇ ಅಲ್ಲದೆ ಕೃಷಿಗೆ ಉತ್ತೇಜನ ನೀಡುವ ಒಕ್ಕಲು ವರ್ತಕ ಸಂಘಗಳು ಸಹ ಅನೇಕ ಜನೋಪಯೋಗಿ ಕಾರ್ಯಗಳನ್ನು ಕೈಗೊಂಡಿರುವುದನ್ನು ಕಾಣಬಹುದು. ಗ್ರಾಮೀಣ ಪ್ರದೇಶದಲ್ಲಿ ಕೃಷಿ ಕಾರ್ಯ ಮಾಡುವ ರೈತರು ವೃತ್ತಿಗೌರವ, ಸಮುದಾಯ ಜೀವನ ಹಾಗೂ ಸಹಕಾರ ತತ್ತ್ವಗಳ ಮೇಲೆ ರಚಿಸಿಕೊಂಡ ಸಂಘವೇ "ಅರುವತ್ತೊಕ್ಕಲು" ಶಾಸನೋಕ್ತ ಸಂಘಗಳ ಪೂರ್ವದ ವೃತ್ತಿಯಾಗಿರುತ್ತದೆ.

ಉದಾಹರಣೆಗೆ ತೆಲ್ಲಿಗರೈವತ್ತೂಕ್ಕಲು, ತಂಬುಲಿಗ ಸಾಸಿರ್ವರು ಈ ರೈತ ಸಂಘದ ಪೂರ್ವದಲ್ಲಿ ವೃತ್ತಿ ಸೂಚಿಪದವಿರುವುದಿಲ್ಲ. ಆದರೆ ಮುತ್ತಗಿ ಶಾಸನದ ಬೇಸಾಯ ಮಾಡುವಂಥಾ ವೊಕ್ಕಲು, ಪ್ರಾಚೀನ ಕರ್ನಾಟಕದ ಪ್ರತಿಯೊಂದು ಗ್ರಾಮದಲ್ಲಿಯೂ ಈ ರೈತ ಸಂಘಗಳಿದ್ದವು. ಈ ಸಂಘದ ಸದಸ್ಯರ ಸಂಖ್ಯೆ ಸಾಂಪ್ರದಾಯಿಕವಾಗಿ ಅರುವತ್ತೊಂದು ಪರಿಗಣಿತವಾಗಿದೆ.[೧೬೫] ಕೆಲವು ಸಲ ಈ ಸಂಖ್ಯೆ ಪ್ರದೇಶದಿಂದ ಪ್ರದೇಶಕ್ಕೆ ಕಾಲದಿಂದ ಕಾಲಕ್ಕೆ ಭಿನ್ನವಾಗಿದ್ದುದು ಕಂಡುಬರುತ್ತವೆ.

ಶಿವಮೊಗ್ಗ ತಾಲ್ಲೂಕಿನ ಕೂಡ್ಲಿ ಮತ್ತು ಕುಸ್ಕೂರು ಗ್ರಾಮದ ಶಾಸನಗಳು ಉಲ್ಲೇಖಿಸುವ 'ಅರವತ್ತು ಗೌಂಡು', 'ಅರವತ್ತು ಗವುಡು', ಪದಗಳು 'ಅರುವತ್ತೊಕ್ಕಲು' ಸಂಘಕ್ಕೆ ಸಮಾನಾರ್ಥವಾದವುಗಳೆಂದು ಹೇಳಬಹುದಾಗಿದೆ. ಆದರೆ ಶಾಸನನೋಕ್ತ 'ಅಲ್ಲಿಯ ಪನ್ನಿರ್ವ್ವಗ್ಗಾವುಣ್ಢಗಳುಂ ಅರುವತ್ತೊಕ್ಕಲಂ'[೧೬೬] ಹರತಿಯ ಹನ್ನಿರ್ಬ್ಬಗ್ಗಾವುಂಡಗಳುಂ ಅರುವತ್ತೊಕ್ಕಲುಂ[೧೬೭] ಎಂಟು ಗಾವುಂಡರುಂ ಅರುವತ್ತೊಕ್ಕಲು[೧೬೮] ನಾಗವಿಯ ನಾಲ್ಕು ಗೌಡುಗಳು ಎಂಟುಹಿಟ್ಟು ಅರುವತೊಕ್ಕಲು[೧೬೯] ಮಲವುರದಯಂಟ್ಟು ಗಾವುಂಙ್ಣುಗಳು ಅರುವತ್ತೊಕ್ಕಲು[೧೭೦] ಎಂಬ ಉಲ್ಲೇಖಗಳಿಂದ 'ಅರುವತ್ತು ಗೌಂಡ' ಹಾಗೂ 'ಅರವತ್ತೊಕ್ಕಲು'ಗಳು ಬೇರೆ ಬೇರೆಯೆಂಬುದು ಗೊತ್ತಾಗುತ್ತದೆ. ಇವುಗಳಲ್ಲಿ ಒಂದು ಗ್ರಾಮದ ಗೌಡರ ಸಂಖ್ಯೆಯನ್ನು ಹೇಳಿದರೆ, ಇನ್ನೊಂದು ರೈತ ಕುಟುಂಬಗಳ ಸಂಖ್ಯೆಯನ್ನು ಸೂಚಿಸುತ್ತದೆ.[೧೭೧] ಗ್ರಾಮಗಳಲ್ಲಿ ರಚನೆಯಾಗುವ ಸಂಘಗಳು ತಮ್ಮ ಗ್ರಾಮದ ಕುಟುಂಬಗಳು ಸೇರಿ ಸಂಘ ರಚಿಸಿಕೊಂಡು ಕೆರೆ, ಬಾವಿ, ಕಾಲುವೆ ಹಾಗೂ ಕೆರೆಗಳ ಜೀರ್ಣೋದ್ಧಾರಗಳನ್ನು ಮಾಡಿಕೊಂಡು ನೀರಾವರಿ ವ್ಯವಸ್ಥೆಯ ಅಭಿವೃದ್ಧಿಗೆ ಹಾಗೂ ಪ್ರಭುತ್ವದ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಈ ವರ್ತಕ ಸಮುದಾಯಗಳು ಸಹಕಾರಿಯಾಗುತ್ತಿದ್ದವು. ನಾಯಕರ ಕಾಲದಲ್ಲಿ ನದಿಯ ನೀರಿನ ಜೊತೆಗೆ ಬಾವಿಗಳ ಮೂಲಕ ನೀರಾವರಿ ವ್ಯವಸ್ಥೆಯನ್ನು ಹೊಂದಿದ್ದರು. ಇದುವರೆಗೂ ಕೆರೆ ನೀರಾವರಿ ಕುರಿತು ನೋಡಿದೆವು. ಬಾವಿಗಳೂ ಇದೇ ಉದ್ದೇಶಕ್ಕಾಗಿ ಬಳಕೆಯಾಗುತ್ತಿದ್ದುದನ್ನು ಅಸಂಖ್ಯಾತ ಶಾಸನಗಳು ಹೇಳುತ್ತವೆ. ಸಾಮಾನ್ಯವಾಗಿ ಬಾವಿಗಳನ್ನು ಖಾಸಗಿಯಾಗಿ ಜನರು ಕಟ್ಟಿಸುತ್ತಿದ್ದರು ಹಾಗೂ ಪಾಲಿಸುತ್ತಿದ್ದರು, ಏತ-ನೀರಾವರಿಯಲ್ಲಿ ಕೆಳಗಿನ ಮಟ್ಟದಿಂದ, ಬೇಸಾಯವಾಗಬೇಕಾದ ಜಮೀನಿನ ಮಟ್ಟಕ್ಕೆ ಎತ್ತಲಾಗುತ್ತಿತ್ತು. ಸ್ವತಃ ಕೈಯ್ಯಾರ ನೀರೆತ್ತಿ ಅಥವಾ ಪ್ರಾಣಿಗಳ ಸಹಾಯದಿಂದ ಎಳೆಸಿ ನೀರನ್ನು ಹರಿಸಿಕೊಳ್ಳಲಾಗುತ್ತಿತ್ತು.

ಜಮೀನಿಗೆ ನೀರು ಹಾಯಿಸುವ ಉದ್ದೇಶಕ್ಕಾಗಿ ಕಪಿಲೆ ಎಂಬ ಹೆಸರಿನ ಶಾಸನಗಳು ಇದನ್ನು ಸ್ಥಿರಪಡಿಸುತ್ತವೆ. ಈ ಬಾವಿಗಳಿಂದ ಚರ್ಮದ ಚೀಲದ ಮೂಲಕ ನೀರನ್ನು ಎತ್ತಿ ಸುರಿದುಕೊಳ್ಳಲಾಗುತ್ತಿತ್ತು. ಎರಡು ಎತ್ತುಗಳು ಇಳುಕಲಾದ ನೆಲದ ಮೇಲೆ ಎಳೆದು ನೀರನ್ನು ಎತ್ತುತ್ತಿದ್ದವು. ಬಳ್ಳಾರಿ ಜಿಲ್ಲೆ ಹಡಗಲಿ ತಾಲ್ಲೂಕಿನ ೧೪೮೧ರ ಶಾಸನವೊಂದು ನೀರನ್ನು ಎತ್ತಲು ಕಬ್ಬಿಣದ ಬಕೆಟ್‌ನ್ನು ಉಪಯೋಗಿಸಲಾಗುತ್ತಿತ್ತು. ಬುಕಾನನ್ ಹೇಳುತ್ತಾನೆ.[೧೭೨] ಸಾಮಾನ್ಯವಾಗಿ ಒಂದು ಬಾವಿಯ ಅಳತೆಯನ್ನು ಕುರಿತು ಮಾಹಿತಿ ನಮ್ಮ ಬಳಿ ಇಲ್ಲ ಮತ್ತು ಇಂತಹ ಬಾವಿಯಿಂದ ಎಷ್ಟು ಜಮೀನು ಸಾಗುವಳಿಯಾಗಬಹುದಿತ್ತು ಎಂದು ತಿಳಿಸುವ ಯಾವ ಶಾಸನಗಳು ಇಲ್ಲ. ಆದರೆ ಜನಪದ ಸಾಹಿತ್ಯದಲ್ಲಿ ಉಲ್ಲೇಖವಾಗಿದೆ. ಕೆರೆ ಹೊನ್ನಮ್ಮ ಅವರ ಜಾನಪದದ ಹಾಡಿನಲ್ಲಿ ವಡ್ಡಗೌಡ ನಗರ ಪ್ರದೇಶದಿಂದ ಬರುವಾಗ ಹಸಿರುಗಟ್ಟಿದ ಹೊಲಗಳಿದ್ದವು, ಅಲ್ಲಿ ಏತ ನೀರಾವರಿ ಮೂಲಕ ಕಪಿಲೆ ಹೊಡೆಯುತ್ತಿದ್ದರು ಎಂದು ಉಲ್ಲೇಖವಿದೆ. ಇನ್ನೂ ಪೂರಕವಾಗಿ ಬಿಜಾಪುರ ಜಿಲ್ಲೆ ಹುನುಗುಂದ ತಾಲ್ಲೂಕಿನ ಶಕ

೧೫೨೬ರ ಶಾಸನವು ನಿರ್ಮಾಣಕ್ಕೆ ಒಂದು ವರ್ಷ, ಏಳು ತಿಂಗಳು ಮತ್ತು ಹತ್ತೊಂಬತ್ತು ದಿನ ತೆಗೆದುಕೊಂಡ ಬಾವಿಯೊಂದನ್ನು ಉಲ್ಲೇಖಿಸುತ್ತದೆ.[೧೭೩] ಅದು ಬಹಳ ದೊಡ್ಡ ಬಾವಿಯೇ ಆಗಿರಬೇಕು. ಇಂದಿನ ಪರಿಸ್ಥಿತಿಯ ಹೋಲಿಕೆಯಿಂದ ಎತ್ತು ನೀರಾವರಿ ಬಾವಿಯು ಒಂದು ಎಕರೆಯಿಂದ ಇಪ್ಪತ್ತಕ್ಕೆ ಮೀರದಷ್ಟು ವಿಸ್ತಾರದ ಜಮೀನಿಗೆ ಸಾಕಾಗುವಷ್ಟು ನೀರು ಪೂರೈಕೆಯಾಗುತ್ತಿತ್ತು ಎಂದು ಊಹಿಸಬಹುದು. ಚಿತ್ರದುರ್ಗ, ತುಮಕೂರು, ಕೋಲಾರ, ಬೆಂಗಳೂರು, ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿನ ಬಾವಿಗಳ ಬಗೆಗೆ ವ್ಯಾಪಕವಾದ ಉಲ್ಲೇಖಗಳು ದೊರಕುತ್ತವೆ. ಇದರಿಂದ ಕೆರೆಗಳ ಜೊತೆಗೆ ಬಾವಿಗಳ ಮೂಲಕ ನೀರಾವರಿ ಬೇಸಾಯ ನಡೆಯುತ್ತಿತ್ತು ಎಂದು ತಿಳಿಯುತ್ತದೆ.

ನೀರಾವರಿಯಿಂದ ಹೊಲಗಳು ಗದ್ದೆಯಾಗಿ ಪರಿವರ್ತಿತವಾಗುತ್ತಿದ್ದರೆ, ಬಂಜರು ಭೂಮಿಯನ್ನು ಸಾಗುವಳಿಗೊಳಪಡಿಸುವುದರ ಮೂಲಕ ಕೃಷಿ ಪ್ರದೇಶವನ್ನು ವಿಸ್ತರಿಸಲಾಗುತ್ತಿತ್ತು. ಜನಸಂಖ್ಯೆಯಲ್ಲಿ ನಿಧಾನವಾಗಿ ಆಗುತ್ತಿದ್ದ ಹೆಚ್ಚಳ ಮತ್ತು ಕೃಷಿ ಉತ್ಪನ್ನಗಳ ಬೇಡಿಕೆಯಲ್ಲಿ ಅಧಿಕ ಹೆಚ್ಚಳ ಇವುಗಳಿಂದ ಕೃಷಿಭೂಮಿಯ ವಿಸ್ತರಣೆಗೆ ಇಂಬು ದೊರಕಿತ್ತು. ರಾಜರು, ರಾಜ್ಯದ ಅಧಿಕಾರಿಗಳು, ಅಗ್ರಹಾರಗಳು, ಗ್ರಾಮ ಪಂಚಾಯತಿಗಳು, ದೇವಾಲಯಗಳು, ಮಠಗಳು, ಖಾಸಗಿ ವ್ಯಕ್ತಿಗಳು ನೆಲವನ್ನು ಹೆಚ್ಚು ಹೆಚ್ಚಾಗಿ ಸಾಗುವಳಿಗೊಳಪಡಿಸುವುದರಲ್ಲಿ ತೀವ್ರವಾದ ಆಸಕ್ತಿಯನ್ನು ತೋರುತ್ತಿದ್ದರು. ನೆಲವು ಸಾಕಷ್ಟು ಪ್ರಮಾಣದಲ್ಲಿ ದೊರಕುತ್ತಿದ್ದುದರಿಂದ ಅಂದಿನ ಸಮಸ್ಯೆ ಅದನ್ನು ಹೆಚ್ಚು ಹೆಚ್ಚಾಗಿ ಸಾಗುವಳಿಗೊಳಪಡಿಸುವುದಾಗಿತ್ತು. ಈ ಕೆಲಸದಲ್ಲಿ ಸರಕಾರವು ಮುಂದೆ ಬಂದು ನಿರ್ದಿಷ್ಟ ವರ್ಷಗಳ ಕಾಲ ತೆರಿಗೆಗಳ ವಿನಾಯಿತು ಮತ್ತಿತರ ರಿಯಾಯಿತಿಗಳನ್ನು ಹೊಸ ನೆಲವನ್ನು ಉಳುಮೆಗೊಳಪಡಿಸಿದವರಿಗೆ ನೀಡುತ್ತಿತ್ತು. ಸಾಗುವಳಿ ಮಾಡಬಹುದಾದ ನೆಲವು ಅಗ್ಗವಾಗಿ ದೊರಕುತ್ತಿದ್ದುದರಿಂದಲೂ, ಅದಕ್ಕೆ ಸುಲಭವಾಗಿ ರಿಯಾಯಿತಿಗಳು ದೊರಕುತ್ತಿದ್ದುದರಿಂದಲೂ ಜನರು ಸರಕಾರಕ್ಕೆ ಅಂತಹ ನೆಲವನ್ನು ಮಂಜೂರು ಮಾಡಬೇಕೆಂದು ಅರ್ಜಿ ಹಾಕಿಕೊಳ್ಳುತ್ತಿದ್ದರು. ಅಂತಹ ಪರಿಸ್ಥಿತಿಯಲ್ಲಿ ಬಂಜರು ನೆಲವನ್ನು ಎತ್ತು ಬೇಸಾಯ ಮಾಡಿದವರು ತಮ್ಮ ವೆಚ್ಚಗಳನ್ನು ಕಳೆದು ಲಾಭವನ್ನು ಪಡೆಯುವಂತಾಗುವವರೆಗೂ ಸರಕಾರವು ತನ್ನ ಪಾಲನ್ನು ಕೇಳುತ್ತಿರಲಿಲ್ಲ. ಬಹು ಕಾಲದಿಂದ ಬೀಳು ಬಿದ್ದಿದ್ದ ನೆಲವನ್ನು ಬೇಸಾಯಕ್ಕೆ ತಂದ ವ್ಯಕ್ತಿಗಳಿಗೆ ಶಿಲಾ ಸನ್ನದುಗಳನ್ನು ಕೊಡಲಾಗುತ್ತಿದ್ದಿತು. ಆ ಸನ್ನದುಗಳು ರೈತರ ಬಳಿ ಇರುತ್ತಿದ್ದವು. ಅನೇಕ ವೇಳೆ ಬ್ರಾಹ್ಮಣರು ಕಾಡನ್ನು ಕಡಿದು ಸಾಗುವಳಿ ಮಾಡಿಸಿ ಒಂದು ಕೆರೆಯನ್ನು ಕಟ್ಟಿಸಿ ನೂತನ ಗ್ರಾಮಗಳನ್ನು ಸ್ಥಾಪಿಸುತ್ತಿದ್ದುದುಂಟು.[೧೭೪]

ಒಟ್ಟಾರೆಯಾಗಿ ನಾಯಕರು ತಮ್ಮ ಸುಮಾರು ೩೦೦ ವರ್ಷಗಳ ಸುದೀರ್ಘ ಆಡಳಿತಾವಧಿಯಲ್ಲಿ ಅಸಂಖ್ಯೆಯ ಕೆರೆಗಳನ್ನು ಕಟ್ಟಿಸಿ, ನೀರಾವರಿಗೆ ಹೆಚ್ಚಿನ ಅವಕಾಶಗಳನ್ನು ಒದಗಿಸಿಕೊಟ್ಟರೆಂದು ಹೇಳಬಹುದು.

ಹೀಗೆ ಈ ನೀರಾವರಿ ಪದ್ಧತಿಯು ಇತಿಹಾಸ ಪೂರ್ವಯುಗದಿಂದಲೂ ನಿರಂತರವಾಗಿ ಮುಂದುವರೆದುಕೊಂಡು ಬಂದಿದೆ. ತಮ್ಮ ಪ್ರಜೆಗಳ ಹಿತರಕ್ಷಣೆಗಾಗಿ ಹಾಗೂ ಸಾಮ್ರಾಜ್ಯದ ಆರ್ಥಿಕ ಪ್ರಗತಿಗಾಗಿ ಕೆರೆ ಸರೋವರಗಳನ್ನು ಅರಸರು ನಿರ್ಮಿಸುತ್ತಿದ್ದರು. ಕಾಲಾನಂತರ ಇವುಗಳ ನಿರ್ಮಾಣವೆಂದರೆ ಪವಿತ್ರ ಕಾರ್ಯವೆಂಬ ಭಾವನೆ ಜನರಲ್ಲಿ ಮೂಡಿದ್ದರಿಂದ ಪ್ರತಿಯೊಬ್ಬರೂ ಅವುಗಳ ನಿರ್ಮಾಣ ಕಾರ್ಯಗಳಲ್ಲಿ ಭೇದ ಭಾವವಿಲ್ಲದೆ ಪಾಲ್ಗೊಳ್ಳುತ್ತಿದ್ದರು. ಹೀಗಾಗಿ ಅವುಗಳ ಸಂಖ್ಯೆ ಹೆಚ್ಚುತ್ತ ನೀರಾವರಿ ವ್ಯವಸಾಯವೂ ಅಭಿವೃದ್ಧಿ ಹೊಂದಿತು.

### ೫.೬. ಕೃಷಿ ಉತ್ಪನ್ನಗಳು

ಪ್ರಾಚೀನ ಕಾಲದಿಂದ ಹಿಡಿದು ಇಂದಿನವರೆಗೆ ಕೃಷಿಕರು ಆಯಾ ಪ್ರದೇಶದ ಮಣ್ಣಿನ ಗುಣ ಮತ್ತು ಫಲವತ್ತತೆಗೆ ಅನುಗುಣವಾಗಿ ಋತುಮಾನಕ್ಕನುಸಾರ ವಿವಿಧ ಬಗೆಯ ಬೆಳೆಗಳನ್ನು ಬೆಳೆಯುತ್ತಾ ಬಂದಿರುವುದನ್ನು ಕಾಣುತ್ತೇವೆ. ನಮಗೆ ಚಿತ್ರದುರ್ಗ ಪ್ರದೇಶದಲ್ಲಿ ದೊರೆತ ಸಾಹಿತ್ಯಿಕ ಮತ್ತು ಶಾಸನಾಧಾರಗಳು, ಸಮಕಾಲೀನ ರಾಜಮನೆತನಗಳಲ್ಲಿ ರಚಿತವಾದ ಆಧಾರಗಳು ಕ್ರಿ.ಶ.೧೫೦೦–೧೮೦೦ರ ಅವಧಿಯಲ್ಲಿ ಬೆಳೆದ ಕೃಷಿ ಉತ್ಪನ್ನಗಳನ್ನು ಹಾಗೂ ಅಂದಿನ ಕಾಲದ ಅರ್ಥವ್ಯವಸ್ಥೆಯ ಮೂಲ ಲಕ್ಷಣಗಳನ್ನು ತಿಳಿಯಲು ಸಹಕಾರಿಯಾಗಿದೆ. ಇವುಗಳನ್ನು ಆಹಾರದ ಬೆಳೆಗಳು, ವಾಣಿಜ್ಯದ ಬೆಳೆಗಳು ಮತ್ತು ತೋಟಗಾರಿಕೆ ಬೆಳೆಗಳೆಂದು ವಿಂಗಡಿಸಬಹುದು.

ಕೆರೆ, ಕಟ್ಟೆ, ಕಾಲುವೆ, ಹೊಳೆ ಮುಂತಾದ ನೀರಿನ ಸೌಲಭ್ಯ ಹೊಂದಿದ್ದ ಕೃಷಿ ಭೂಮಿಗಳಲ್ಲಿ (ಗದ್ದೆಗಳು) ಭತ್ತ ಮತ್ತು ಕಬ್ಬನ್ನು ಹೇರಳವಾಗಿ ಬೆಳೆಯುತ್ತಿದ್ದರು. ಕಬ್ಬು ಬೆಳೆಯುತ್ತಿದ್ದ ಗದ್ದೆಗಳಿಗೆ ಆಲೆಮನೆಗದ್ದೆ ಎಂಬುದಾಗಿ ಶಾಸನಗಳಲ್ಲಿ ಉಲ್ಲೇಖವಿದೆ. ಬಹುಶಃ ಕಬ್ಬಿನ ಗದ್ದೆಗಳಲ್ಲಿ ಬೆಲ್ಲ ತಯಾರಿಸುವ ಆಲೆಮನೆಯನ್ನು ಹೊಂದಿರುತ್ತಿದ್ದರೆಂದು ತೋರುತ್ತದೆ. ಕೃಷಿಕನು ಬಿತ್ತನೆ ಬಿತ್ತಲು ಜೋತಿಷ್ಯ, ಖಗೋಳಶಾಸ್ತ್ರ, ಅದರಲ್ಲೂ ಮುಖ್ಯವಾಗಿ ಕೆಲವು ನಕ್ಷತ್ರಗಳ ಸ್ಥಾನ ಬಹಳ ಮುಖ್ಯವಾಗಿರುತ್ತಿತ್ತು. ರಟ್ಟಮತದ ಕರ್ತೃವು ಬಿತ್ತನೆಯ ವಿಧಾನವನ್ನು ವರ್ಣಿಸುವುದಕ್ಕಾಗಿ ಒಂದು ಅಧ್ಯಾಯವನ್ನೇ ಮೀಸಲಾಗಿಟ್ಟಿದ್ದಾನೆ. ನಕ್ಷತ್ರಗಳು ಬಹುಮಹತ್ವದವೆಂದು ಭಾವಿಸಲಾಗುತ್ತಿತ್ತು. ಆರಿದ್ರಾ (ಜೂನ್–೨೨, ಜುಲೈ) ಮಖಾ (ಆಗಸ್ಟ ೧೬ರಿಂದ ಆಗಸ್ಟ ೩೦), ಪುಬ್ಬಾ ಮತ್ತು ಉತ್ತರಾ ಇವು ಯಾವುದೇ ಬೀಜಗಳ ಬಿತ್ತನೆಗೆ ಅತ್ಯಂತ ಪ್ರಶಸ್ತವಾದ ಕಾಲವೆಂದು ಪರಿಗಣಿಸಲಾಗಿತ್ತು.[೧೭೫] ಬಿತ್ತುವುದಕ್ಕೆ ಮೊದಲು ಕೂರಿಗೆಯನ್ನು ಪೂಜಿಸಲಾಗುತ್ತಿತ್ತು.[೧೭೬]

ಸಹಜವಾಗಿಯೇ ರೈತನು ಚೈತ್ರ ಮಾಸ ಆರಂಭವಾಗಿ ಯುಗಾದಿಯ ನಂತರ ಅಮಾವಾಸ್ಯೆಯಿಂದ ಹುಣ್ಣುಮೆಯವರೆಗೆ ಮತ್ತು ಹುಣ್ಣಿಮೆಯಿಂದ ಅಮಾವಾಸ್ಯೆಯವರೆಗೆ ೧೪ ದಿವಸಕ್ಕೊಂದರಂತೆ ಒಟ್ಟು ೨೭ ನಕ್ಷತ್ರಗಳು ಬರುತ್ತವೆ. ಅಶ್ವಿನಿ, ಭರಣಿ, ಕೃತಿಕೆ, ರೋಹಿಣಿ, ಮೃಗಶಿರ, ಆರಿದ್ರ್ಯ, ಪುನರ್ವಸು, ಪುಷ್ಯ, ಆಶ್ಲೇಷ, ಮಘ, ಹುಬ್ಬ, ಉತ್ತರಾ, ಹಸ್ತ, ಚಿತ್ತ, ಸ್ವಾತಿ, ವಿಶಾಖ, ಅನುರಾಧ, ಜ್ಯೇಷ್ಠ, ಮೂಲ, ಪೂರ್ವಾಷಾಡ, ಉತ್ತರಾಷಾಢ, ಶ್ರಾವಣ, ಧನಿಷ್ಠ, ಶತಭಿಷ, ಪೂರ್ವಭಾದ್ರ, ಉತ್ತರಭಾದ್ರ ಮತ್ತು ರೇವತಿ ಇವನ್ನೇ ರೈತರು ಮಳೆಗಳು ಅಥವಾ ನಕ್ಷತ್ರಗಳು ಎಂದು ಕರೆದುಕೊಳ್ಳುತ್ತಾರೆ. ಇವು ಮೂರು ದಿವಸಕ್ಕೆ ಅಥವಾ ನಾಲ್ಕು ದಿವಸಕ್ಕೆ ಒಂದು ಪಾದದಂತೆ ಪ್ರತಿ ಮಳೆಗೂ ನಾಲ್ಕು ನಾಲ್ಕು ಪಾದಗಳಾಗಿ ವಿಂಗಡವಾಗಿವೆ. ಈ ಇಪ್ಪತ್ತೇಳರಲ್ಲಿ ಮೊದಲ ಹದಿನೇಳು ವ್ಯವಸಾಯದ ಕ್ಷೇತ್ರದಲ್ಲಿ ಪ್ರಧಾನ ಪಾತ್ರ ವಹಿಸಿವೆ. ಬೇರೆಯವು ಬಾರದ ಮಳೆಗಳು, ಬಂದರೂ ಅತಿ ಕಡಿಮೆ ಮತ್ತು ವ್ಯವಸಾಯದ ದೃಷ್ಟಿಯಿಂದ ಅನುಪಯುಕ್ತವಾದವುಗಳು.

ಅಶ್ವಿನಿಯಿಂದ ತೊಡಗಿ ಹುಬ್ಬ ಮಳೆಯವರೆಗೆ 'ಮುಂಗಾರು'. ಆದರೆ ಉತ್ತರೆಯಿಂದ ಅನುರಾಧ ಮಳೆಯವರೆಗೆ 'ಹಿಂಗಾರು'. ಈ ಕ್ರಮಕ್ಕೆ ಅನುಗುಣವಾಗಿಯೇ ಭೂಮಿಯ ಉಳುಮೆ, ಬಿತ್ತನೆ, ಆರೈಕೆ, ಕಟಾವು, ಒಕ್ಕಣೆ ಮುಂತಾದವುಗಳನ್ನು ಕ್ರಮಗೊಳಿಸಿಕೊಂಡಿದ್ದಾರೆ.[೧೭೭]

ಈ ಭಾಗದ ಮನೋಮಿ ಪದ ಉಲ್ಲೇಖದಂತೆ 'ಮಳೆ ಬಂದು ಬೆಳೆ ಬೆಳೆದು ಇಳೆ ತಣಿಯತಿಂದು ಲೇಸಾಗಿ ಹರಿಸಿದೆವು ಬಾಲಕರು ಒಂದು'

ರೈತಾಪಿ ಜನಕ್ಕೆ ಸಕಾಲದಲ್ಲಿ ಮಳೆಬಿದ್ದರೆ ಅದಕ್ಕಿಂತ ಭಾಗ್ಯ ಬೇರೆ ಬೇಕಿಲ್ಲ. ಇದು ಜನಪದ ಚರಿತ್ರೆಯಾಗಿದೆ ಕೃಷಿ ಬದುಕು ಶಾಸನಗಳಲ್ಲಿ ದಾಖಲಾಗಿರುವುದು ಕಡಿಮೆಯೆಂದೇ ಹೇಳಬೇಕು. ಸರ್ವಜ್ಞನ ತ್ರಿಪದಿಗಳಲ್ಲಿ, ಜನಪದ ನುಡಿಗಳಲ್ಲಿ ದಾಖಲಾಗಿರವುದು ಮಳೆ–ಬೆಳೆಗಳ ವಿಷಯವೇ

ಉತ್ತರೆಯು ಬತ್ತಿದರೆ ಹೆತ್ತಮ್ಮ ತೊರೆದಿರೆ
ಸತ್ಯರು ತಪ್ಪಿ ನಡೆದರು ಲೋಕವಿ
ನ್ನೆತ್ತ ಸೇರುವುದು ಸರ್ವಜ್ಞ

ಎಂಬ ಮಾತನ್ನು ಕಟು ಸತ್ಯವಾಗಿ ನುಡಿದಿದ್ದಾನೆ.

ಕೃಷಿಕರು ಅನುಭವಿಸಿದ ಜೀವನ ವೃತ್ತಾಂತಗಳನ್ನು ಅನುಸರಿಸಿ ಗಾದೆಮಾತುಗಳನ್ನು ರೂಡಿಗೆ ತಂದಿದ್ದಾರೆ. ಅವುಗಳಲ್ಲಿ 'ಅಶ್ವಿನಿ ಮಳೆ ಬಿದ್ರೆ ಆ ಶಿಶುವಿಗೆ ಹಾಲಿಲ್ಲ,' ಭರಣಿ ಮಳೆ ಬಂದ್ರೆ ಧರಣೆಲ್ಲಾ ಜೋಳ', 'ರೋಹಿಣಿ ಮಳೆ ಬಿದ್ರೆ ಓಣೆಲ್ಲಾ ಜೋಳ', ಮಿಕ್ಸಿರಾ (ಮೃಗಶಿರ) ಮಳೆ ಮಿಂಚಿದರೆ ಮೂರು ಮಳೆ ಕೊಂಚ್ಮೆ,' ಆದ್ರಿ (ಆರಿದ್ರಾ) ಮಳೆ ಗುಡುಗಿದರೆ, ಆರು ಮಳೆ ಗರ್ಭ ಅದುರುತ್ತೆ', ಪುಷ್ಯ ಮಿಂಚಿದರೆ ಜೀವಕ್ಕೆ ಸಂಚಕಾರ' ಮುಂತಾಗಿ ತಲೆ ತಲಾಂತರಗಳಿಂದ ನಂಬಿದ್ದಾರೆ.

ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಅಂದರೆ ನಾಯಕರ ಕಾಲದಲ್ಲಿ ಗ್ರಾಮಗಳು ಹೆಚ್ಚು ರಚನೆಗೊಂಡಿರುವುದರಿಂದ ಕಾಡಿನ ತೆರೆದ ಭಾಗಗಳಲ್ಲಿ ಕುಮರಿ ಅಥವಾ ಸ್ಥಳ ಬದಲಾಯಿಸುವ ಬೇಸಾಯವನ್ನು ನಡೆಸಲಾಗುತ್ತಿತ್ತು. ಕಾಡನ್ನು ಸುಟ್ಟ ಮೇಲೆ, ಅಲ್ಲಿ ರಾಗಿ, ಬೇಳೆಕಾಳುಗಳು ಮತ್ತು ಎಣ್ಣೆಬೀಜಗಳನ್ನು ಬಿತ್ತುತ್ತಿದ್ದರು.[೧೭೮] ವಿಸ್ತಾರವಾದ ಅರಣ್ಯ ಪ್ರದೇಶಗಳಿರುವವರೆಗೆ ಈ ಬಗೆಯ ಕುಮ್ರಿ (ಕುಮರಿ) ಬೇಸಾಯ ಹಾನಿಕರವಾಗಿರಲಿಲ್ಲ. ಮುಖ್ಯವಾಗಿ ಇದು ಕರ್ನಾಟಕದ ಮಲೆನಾಡು, ಅರೆ ಮಲೆನಾಡು ಭಾಗಗಳಲ್ಲಿ ಈ ಕುಮ್ರಿ ಬೇಸಾಯ ಪದ್ಧತಿ ಇತ್ತು.

ರೈತರು ತಮ್ಮ ಕೃಷಿಭೂಮಿಗಳಲ್ಲಿ ಸಾಮಾನ್ಯವಾಗಿ ವರ್ಷದಲ್ಲಿ ಎರಡು ಬೆಳೆಗಳನ್ನು ತೆಗೆಯುತ್ತಿದ್ದರು. ಅವುಗಳೆಂದರೆ ಕಾರು ಬೆಳೆ ಮತ್ತು ಹೈನುಬೆಳೆ.[೧೭೯] ಇದನ್ನೇ ಹಿಂಗಾರು ಬೆಳೆ ಮತ್ತು ಮುಂಗಾರು ಬೆಳೆ ಎಂಬುದಾಗಿಯೂ ಕರೆಯಲಾಗುತ್ತಿತ್ತು.[೧೮೦] ಮಳೆಗಾಲದಲ್ಲಿ ಬೆಳೆಯುತ್ತಿದ್ದ ಬೆಳೆಗೆ ಹೈನುಬೆಳೆ ಎಂದೂ, ಬೇಸಿಗೆಯಲ್ಲಿ ಬೆಳೆಯುತ್ತಿದ್ದ ಬೆಳೆಗೆ ಕಾರು ಬೆಳೆ ಎಂಬುದಾಗಿ ಕರೆಯಲಾಗಿದೆ. ಚಿತ್ರದುರ್ಗದಲ್ಲಿ ಮಳೆಗಾಲದಲ್ಲಿ ಕೆರೆಕಟ್ಟೆಗಳು ತುಂಬಿರುತ್ತಿದ್ದವು. ಈ ನೀರನ್ನು ಬೇಸಿಗೆ ಕಾಲಕ್ಕಾಗಿ ಶೇಖರಿಸಿಟ್ಟು ಅದರಿಂದ ಕಾರು ಬೆಳೆ ಬೆಳೆಯುತ್ತಿದ್ದರೆಂದು ಬುಕಾನಾನ್ ತಿಳಿಸಿದ್ದಾನೆ.[೧೮೧] ಕಾರು ಬೆಳೆಯಲ್ಲಿ ದ್ವಿದಳ ಧಾನ್ಯಗಳೆನಿಸಿದ ಉದ್ದು, ಹೆಸರು, ಹುರುಳಿ, ಅವರೆ ಮುಂತಾದ ಕಾಳುಗಳು ಮತ್ತು ಎಳ್ಳು ಹರಳು, ಹುಚ್ಚೆಳ್ಳು ನೆಲಗಡಲೆ (ಶೇಂಗಾ) ಮುಂತಾದ ಎಣ್ಣೆಕಾಳುಗಳನ್ನು ಹೆಚ್ಚಾಗಿ ಬೆಳೆಯುತ್ತಿದ್ದರು.[೧೮೨] ಈ ಬೆಳೆಗಳಿಗೆ ಹೆಚ್ಚು ನೀರಿನ ಅಗತ್ಯ ಇರಲಿಲ್ಲವೆಂಬ ಕಾರಣದಿಂದ ಅವುಗಳನ್ನು ಬೇಸಿಗೆಯಲ್ಲಿ ಬೆಳೆಯುತ್ತಿದ್ದರೆಂದು ತೋರುತ್ತದೆ.

ನಾಯಕರ ಕಾಲದಲ್ಲಿ ಭತ್ತವನ್ನು ಯಥೇಚ್ಚವಾಗಿ ಬೆಳೆಯುತ್ತಿದ್ದರು. ಅಕ್ಕಿಯಲ್ಲಿ ನೆಲ್ಲಕ್ಕಿ, ಸಣ್ಣಕ್ಕಿ, ಕಳವೆ ಎಂಬ ವಿಧಗಳ ಜೊತೆಗೆ 'ರಾಜಾನ್ನದಕ್ಕಿ' ಎಂಬ ಒಂದು ಶ್ರೇಷ್ಠ ಜಾತಿಯ (ಭತ್ತದ) ಅಕ್ಕಿಯೂ ಚಿತ್ರದುರ್ಗದಲ್ಲಿತ್ತು. ಅಕ್ಕಿಯನ್ನು ಸಂಗ್ರಹಿಸಲು 'ಅಕ್ಕಿ ಪಳತ'ಗಳೂ ಇರುತ್ತಿದ್ದವೂ. ಅಕ್ಕಿಯನ್ನು ಬೇರೆ

ಬೇರೆ ಅಡುಗೆಗಳಿಗಾಗಿ 'ಉಕ್ಕರಿಸಿದ ಅಕ್ಕಿ (ಕುದಿಸಿದ ಭತ್ತದಿಂದ ತೆಗೆದ ಅಕ್ಕಿ ಬಹುಶಃ ಈಗಿನ ಕುಚ್ಚಲಕ್ಕಿ ಅಥವಾ ಕುಚ್ಚಿಗೆ ಅಕ್ಕಿ), ಸದರೆದ ಅಕ್ಕಿ (ಕುಟ್ಟಿ ಸಂಸ್ಕರಿಸಿದ ಅಕ್ಕಿ) ಮುಂತಾದ ಅಕ್ಕಿಗಳನ್ನು ಸಿದ್ಧಪಡಿಸಿ ಇಡುತ್ತಿದ್ದರು.[೧೮೩] ಅನ್ನವನ್ನು ಪ್ರತಿದಿನ ಮಾಡುತ್ತಿರಲಿಲ್ಲ. ವಿಶೇಷ ದಿನಗಳಲ್ಲಿ ಮಾತ್ರ ಮಾಡುವ ರೂಢಿಯಿದ್ದಿತು. ಈ ರೀತಿಯ ಬೆಳೆಯ ಉಲ್ಲೇಖಗಳು ಸಿಗುವುದು ನಾಯಕರ ಕಾಲದ ಊಟದ ಉಲ್ಲೇಖಗಳಲ್ಲಿ.

ಭತ್ತದ ಅಕ್ಕಿಯಿಂದ ವಿಭಿನ್ನ ತಳಿಯ ಭತ್ತ ಬೆಳೆಯುತ್ತಿದ್ದರು ಎಂಬುವುದಕ್ಕೆ ಅಕ್ಕಿಯಿಂದ ಮಾಡುತ್ತಿದ್ದ ಅನ್ನದ ವಿಧಗಳು ಆಶ್ಚರ್ಯ ಹುಟ್ಟಿಸುವಂತಿವೆ. 'ಮಲ್ಲಿಗೆಯರಳಂತೆ' (ಮಲ್ಲಿಗೆ ಹೂವಂತೆ) ಬೆಳ್ಳಗೆ ಉದುರುದುರಾದ 'ಉದುರೋಗದ', ಬಹುಶಃ ದಪ್ಪ ಅಕ್ಕಿಯಿಂದ ಮಾಡಿದ 'ತೋರನ್ನ' ಅಥವಾ 'ಡೊಡ್ಡಕ್ಕಿ ಬೋನ', ಸಣ್ಣಕ್ಕಿಯಿಂದ 'ಸಣ್ಣಯೋಗರ' ಅಥವಾ 'ಸಣ್ಣಕ್ಕಿಯಶನ,' ಮುಂತಾದುದಲ್ಲದೆ ಸಾಧಾರಣ ಭತ್ತದ 'ನೆಲ್ಲಕ್ಕಿಯ ಅನ್ನ' ಮಳೆಯಿಂದ ಬೆಳೆಯುವ 'ಕಾರುಬತ್ತ'ದಿಂದಾದ 'ಕಾರನ್ನ', ಶ್ರೇಷ್ಠಜಾತಿಯ ಒಂದು ಭತ್ತದ 'ರಾಜಾನ್ನ' ಅಥವಾ 'ಸಿತ ರಾಜಾನ್ನ' (ಬೆಳ್ಳಗಿನ ರಾಜಾನ್ನ) ಇತ್ಯಾದಿಗಳಿರುತ್ತಿದ್ದವು. ಬಹುಶಃ ಪಟ್ಟಣಕ್ಕೆ ಬಂದುಹೋಗುತ್ತಿದ್ದ ಹೊರಗಿನ ಜನರಿಗಾಗಿಯೇ 'ಮಧುರಾನ್ನ'ದ ಛತ್ರ ಚಾವಡಿಗಳಿದ್ದವು. ಸಾರು ಹುಳಿಗಳಿಲ್ಲದ ಅನ್ನದ ಊಟ ಅಂದರೆ 'ಹಾಲುಬಾನ', 'ಮೊಸರುಬಾನ', 'ಪುಳಿವಾಗರ' (ಪುಳಿಯೋಗರೆ), 'ಸುಧಾಸೂಪನ್ನ' (ಹಾಲಿನ ಸಾರಿನ ಅನ್ನ), 'ಹರಿದ್ರಾತ್ನ,' 'ಕಲಸನ್ನ' (ಉಪ್ಪು, ಖಾರ, ಹುಳಿ, ಸೇರಿಸಿ ಒಗ್ಗರಣೆ ಹಾಕಿ ಮಾಡುತ್ತಿದ್ದ ಅನ್ನ) 'ಕ್ಷೀರ ಶರ್ಕರಾನ್ನ' (ಹಾಲು ಸಕ್ಕರೆ ಕೂಡಿದ ಅನ್ನ) 'ಪರಮಾನ್ನ' (ಹಾಲು ಸಕ್ಕರೆ ಅಕ್ಕಿಯಿಂದ ಮಾಡುತ್ತಿದ್ದ ಒಂದು ಬಗೆಯ ಸಿಹಿಯು ಓಗರ 'ಷಡುರಸ ದಿವ್ಯಾನ್ನ', 'ದಧ್ಯನ್ನ' ದೇವರಿಗೆ ದಧ್ಯನ್ನವನ್ನು ನೈವೇದ್ಯ ನೀಡುತ್ತಿದ್ದರು.[೧೮೪] ದಧ್ಯನ್ನಕ್ಕೆ 'ದಧ್ಯೋದನ' ಎಂದು ಕರೆಯುತ್ತಿದ್ದರು. ಹೀಗೆಂದರೆ ಮೊಸರನ್ನ ಎಂದರ್ಥ[೧೮೫] ಚಿತ್ರದುರ್ಗದ ಪಾಳೆಯಗಾರರಲ್ಲಿ 'ಧಧ್ಯನ್ನದ ಓಬಣ್ಣನಾಯಕ' ಎಂಬ ವಿಶೇಷ ಹೆಸರಿನವನೇ ಒಬ್ಬನಿದ್ದಾನೆ.[೧೮೬]

ರಾಜಾನ್ನ ಎಂಬುದು ಇನ್ನೊಂದು ವಿಶೇಷ ಅಡುಗೆಯಾಗಿದೆ. ಕೋಲಾಟದ ಹಾಡೊಂದರಲ್ಲಿ ಮದಕರಿ ನಾಯಕನು ಸಣ್ಣಕ್ಕಿ ಬಾನವನ್ನು ಸೇವಿಸಿದ ವಿವರ ಇಂತಿದೆ.

"ಸಣ್ಣವಕ್ಕಿಬಾನ ಬಳ್ಳಿ ಸರಳ್ಹೆಮ್ಮೆ ನೊರೆಹಾಲು
ಉಣ್ಣೇಳೋ ಮದಕೇರಿ ಬುದಗಲೂಟ/ತಂದಾನಿತಾನ"[೧೮೭]

ಈ ಜಾನಪದರ ಹಾಡುಗಳಲ್ಲಿ ಅವರ ಊಟ–ಉಪಚಾರಗಳ ಉಲ್ಲೇಖಗಳು ಕಂಡುಬರುತ್ತವೆ. ಅವುಗಳಲ್ಲಿ ಬರುವ 'ರಾಜಾನ್ನ' ಎಂಬ ಉಲ್ಲೇಖವು ಅರಸರು ಊಟ ಮಾಡಲು ಬೆಳೆಯುವ ಉತ್ತಮ ತಳಿಯ ಭತ್ತ ದೇವದುರ್ಗದ ಅರಸರು ಜೋಳವನ್ನು ರಾತ್ರಿಯಿಡಿ ನೀರಿನಲ್ಲಿ ನೆನೆಸಿ ಬೆಳಗ್ಗೆ ಅದನ್ನು ನೆರಳಿನಲ್ಲಿ ಒಣಗಿಸಿ ಒರಳಿನಲ್ಲಿ ಕುಟ್ಟುತ್ತಿದ್ದರು. ನಂತರ ಇದನ್ನು ಹಾಲಿನಲ್ಲಿ ಬೇಯಿಸುತ್ತಿದ್ದರು. ಇದಕ್ಕೆ ಶುಂಠಿ, ಸೋಪು, ಗಸಗಸೆ, ಏಲಕ್ಕಿ ಪುಡಿ, ಬೆಲ್ಲ ಹಾಕಿದ ನಂತರ ತುಪ್ಪ ಹಾಲುಗಳ ಜೊತೆ ಸೇವಿಸುತ್ತಿದ್ದರು. ಈ ಪದ್ಧತಿ ಈಗಲೂ ಇದನ್ನು ಮಾಡುತ್ತಾರೆ.[೧೮೮] ಜೋಳದ ಬೆಳೆಯ ಮೂಲಕ ತಯಾರಿಸುತ್ತಿದ್ದ ವಿಶೇಷ ಆಹಾರವಾಗಿತ್ತು.

ಪ್ರಾಚೀನ ಕಾಲದಿಂದ ಹಿಡಿದು ಇಂದಿನವರೆಗೆ ಕೃಷಿಕರು ಆಯಾ ಪ್ರದೇಶದ ಮಣ್ಣಿನ ಗುಣ ಮತ್ತು ಫಲವತ್ತತೆಗೆ ಅನುಗುಣವಾಗಿ ಋತುಮಾನಕ್ಕನುಸಾರ ವಿವಿಧ ಬಗೆಯ ಬೆಳೆಗಳನ್ನು ಬೆಳೆಯುತ್ತಾ ಬಂದಿರುವುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ನದಿ ಬಯಲಿನ ಪ್ರದೇಶಗಳಲ್ಲಿ ಭತ್ತ, ಕಬ್ಬು, ತೆಂಗು, ತಾಳೆ, ತರಕಾರಿಗಳನ್ನು ಬೆಳೆಯುವಂತೆ ಒಣಭೂಮಿ, ಅರೆನೀರಾವರಿ ಭೂ ಪ್ರದೇಶಗಳಲ್ಲಿಯೂ ವಿವಿಧ ಬಗೆಯ ಬೆಳೆಗಳನ್ನು ಬೆಳೆಯುವುದನ್ನು ಕಾಣುತ್ತೇವೆ. ಅವುಗಳನ್ನು ಪ್ರಸ್ತುತ ಅಧ್ಯಯನದ ಅನುಕೂಲಕ್ಕಾಗಿ ಆಹಾರ ಧಾನ್ಯಗಳು, ಬೇಳೆಕಾಳುಗಳು, ತರಕಾರಿ, ಹಣ್ಣು-ಹಂಪಲುಗಳು, ವಾಣಿಜ್ಯ ಬೆಳೆಗಳು ಮತ್ತು ಸಾಂಬಾರು ಪದಾರ್ಥಗಳು ಮುಂತಾದವುಗಳನ್ನು ನಮಗೆ ದೊರಕುತಿರುವ ನಾಯಕರ ಕಾಲದ ಶಾಸನಗಳು, ಸಾಹಿತ್ಯ ಆಕರಗಳು, ಜನಪದರ ಕಥನಗಳು ಹಾಗೂ ಸಮಕಾಲೀನ ಆಕರಗಳ ಆಧಾರಗಳ ಮೇಲೆ ಈ ಕೆಳಗಿನಂತೆ ಗುರುತಿಸಲಾಗಿದೆ.

**ಆಹಾರ ಧಾನ್ಯಗಳು**

ಭತ್ತವು ಆಹಾರ ಧಾನ್ಯಗಳಲ್ಲಿ ಪ್ರಮುಖ ಬೆಳೆಯಾಗಿದ್ದು, ಇದನ್ನು ನೀರಾವರಿ ಪ್ರದೇಶಗಳಲ್ಲಿ ಬೆಳೆಯಲಾಗುತ್ತಿದ್ದು, ಭತ್ತದಲ್ಲಿ ಎಂಟು ಬಗೆಯ ವಿಭಿನ್ನ ಅಸ್ಥಿತ್ವದಲ್ಲಿದ್ದವೆಂದು 'ಮಾನಸೋಲ್ಲಾಸದಲ್ಲಿ' ಮೂರನೇ ಸೋಮೇಶ್ವರನು ಉಲ್ಲೇಖಿಸಿದ್ದಾನೆ. ಅವುಗಳೆಂದರೆ ರಕ್ತಸಾಲಿ, ಮಹಾಸಾಲಿ, ಗಂಧಸಾಲಿ, ಸೂಕ್ಷ್ಮಸಾಲಿ, ಕಲಿಂಗಕ, ಮುಂಡಶಾಲಿ, ಸ್ಥೂಲಶಾಲಿ ಸಶಿಷ್ಟವಾಲಿ[೧೮೯] ಈ ವರ್ಗೀಕರಣವನ್ನು ಅವುಗಳ ಬಣ್ಣ ಆಕಾರ, ಗಾತ್ರ ಮತ್ತು ಗುಣಗಳನ್ನು ಆಧರಿಸಿ ಮಾಡಲಾಗಿದೆ ಎಂದು ಕಂಡುಬರುತ್ತದೆ.

ಬುಕಾನನ್ ತನ್ನ ವರದಿಯಲ್ಲಿ ಭತ್ತದ ಬೆಳೆಯಲ್ಲಿ ಚಿತ್ರದುರ್ಗ ಪ್ರದೇಶದಲ್ಲಿ 'ಸೋಜಿಗೆ ಭತ್ತ', 'ಮಠಭತ್ತ' ಮುಂತಾದ ತಳಿಗಳು ಬಳಕೆಯಲ್ಲಿದ್ದವು ಎಂದಿದ್ದಾನೆ. ಕಣದ ಕೆಲಸ ಮಾಡುವವರಿಗೆ ಹೊರೆಹುಲ್ಲು ಮಾರಭತ್ತದ ಕೂಲಿ ಕೊಡುತ್ತಿದ್ದರು. ಗದ್ದೆಕೋರು, ಕೂರಿಗೆ ಹೊಲ ಮುಂತಾದ ಅಳತೆ ಮುಂತಾದವನ್ನು ತಿಳಿಸುವ ಪಾರಿಭಾಷಿಕ ಶಬ್ದಗಳು ಈ ಪ್ರದೇಶದಲ್ಲಿ ಬಳಕೆಯಲ್ಲಿದ್ದವು. ಒಂದು ದಿನದಲ್ಲಿ ಒಂದು ಕೂರಿಗೆಯಲ್ಲಿ ಬಿತ್ತಬಹುದಾದಷ್ಟು ಜಮೀನನ್ನು ಒಂದು ಕೂರಿಗೆ ಹೊಲ ಎಂದು ಈಗಲೂ ಕರೆಯಲಾಗುತ್ತಿರುವುದು ಪ್ರಾಚೀನ ಕಾಲದ ಪಳೆಯುಳಿಕೆಯೇ ಆಗಿದೆ. ಕಪಿಲೆ ನೀರಾವರಿಯಲ್ಲಿ ರಾಗಿ ಮುಂತಾದ ತರಿಫಸಲು ಬೆಳೆಯುತ್ತಿದ್ದರು. ಹೊಸದುರ್ಗ ತಾಲೂಕಿನ ಬಾಗೂರು ತನ್ನ ವಿಶಿಷ್ಟ ಭತ್ತದ ಬೆಳೆಯಿಂದಾಗಿ 'ಸಣ್ಣಕ್ಕಿ ಬಾಗೂರು' ಎಂಬ ಹೆಸರನ್ನು ಅನ್ವರ್ಥವಾಗಿಸಿಕೊಂಡಿದ್ದಿತು ಎಂದು ತಿಳಿಸಿದ್ದಾನೆ.[೧೯೦]

ಹಾಗೆಯೇ ನೆಲವನ್ನು ಫಲವತ್ತುಗೊಳಿಸಲು ಕುರಿ ಮಂದೆ ಬಿಡಿಸುವ ಸಂಪ್ರದಾಯ, ಹಾಗೂ ಗೊಬ್ಬರ ಸಂಗ್ರಹಿಸುವ ತಿಪ್ಪೆಗುಂಡಿ ಬಗೆಯೂ ತಿಳಿಸುತ್ತಾನೆ. ಹುರುಳಿ, ನವಣೆ, ಅರಕ, ಗೋಧಿ, ಎಳ್ಳು, ರಾಗಿ ಬೆಳೆಗಳನ್ನು ಬೆಳೆಯುವ ಬೆಳೆಗಳ ಮಧ್ಯೆ ಅಕ್ಕಡಿ ಬಿತ್ತುವ ವಿವರಗಳನ್ನು ನೀಡುತ್ತಾನೆ. ಹಿಂದೆ ಬೆಳೆಯುತ್ತಿದ್ದ ಅರಕ ಧಾನ್ಯ ಇಂದು ಮರೆಯಾಗಿರುವ ಧಾನ್ಯಗಳ ಪಟ್ಟಿಗೆ ಸೇರಿದೆ. ಸಜ್ಜೆಗೆ 'ಕಂಬು' ಎಂಬ ಇನ್ನೊಂದು ಹೆಸರಿರುವ ಬಗ್ಗೆಯೂ ಉಲ್ಲೇಖಿಸುತ್ತಾನೆ. ಭತ್ತದ ಕೃಷಿಕರ ಸಂಖ್ಯೆ ಬೆರಳೆಣಿಕೆಯಷ್ಟು ಎನ್ನುತ್ತಾನೆ.[೧೯೧]




ಭತ್ತದ ನಂತರ ಈ ಪ್ರದೇಶದಲ್ಲಿ ರಾಗಿ ಅತ್ಯಂತ ಪ್ರಮುಖವಾದ ಆಹಾರದ ಬೆಳೆ. ಇದನ್ನು ಮಳೆಯ ಆಶ್ರಯದಲ್ಲಿ ಬೆಳೆಯಲಾಗುತ್ತಿದ್ದಿತು. ಈಗಿನ ಚಿತ್ರದುರ್ಗ, ಚಳ್ಳಕೆರೆ, ಮೊಳಕಾಲ್ಮೂರು, ಜಗಳೂರು, ದಾವಣಗೆರೆ, ಹೊಸದುರ್ಗ ಪ್ರದೇಶಗಳಲ್ಲಿ ರಾಗಿಯ ಬಗ್ಗೆ ಕ್ರಿ.ಶ.೧೫-೧೭ನೇ ಶತಮಾನಕ್ಕೆ ಸಂಬಂಧಿಸಿದ ಶಾಸನಗಳಿದ್ದು, ಸಮಕಾಲೀನ ಕನಕದಾಸರ 'ರಾಮದಾನ್ಯ ಚರಿತೆ' ಕೀರ್ತನೆಯು ರಾಗಿಯ ಶ್ರೇಷ್ಠತೆಯನ್ನು ಸಾರುವ ಪ್ರಮುಖ ಆಕರವಾಗಿದೆ. ಬುಕಾನನ್ ತನ್ನ ಪ್ರವಾಸದ ವರದಿಯಲ್ಲಿ ದಾವಣಗೆರೆ, ಹರಿಹರ, ಜಗಳೂರು, ಬಿಳಿಚೋಡು, ಭರಮಸಾಗರ, ಚಿತ್ರದುರ್ಗ, ತುಮಕೂರು, ಶಿರಾ, ಮೊಳಕಾಲ್ಮೂರು, ಹೊಸದುರ್ಗ, ಹೊಳಲ್ಕೆರೆ, ಈಗೆ ಸಂಚಾರದ ಉದ್ದಕ್ಕೂ ರಾಗಿ ಬೆಳೆಗಳು ಕಂಡು ಬರುವ ಪ್ರದೇಶಗಳ ಬಗ್ಗೆ ಬರೆದಿದ್ದಾನೆ.[೧೯೨]

ರಾಗಿಯು ಹೆಚ್ಚಾಗಿ ಬೆಳೆಯುತ್ತಿದ್ದ ಈ ಪ್ರದೇಶಗಳಲ್ಲಿ ರಾಗಿ ಸಂಗ್ರಹಣೆಗೆ, ಅಗೇವು, ಗರಿಸಿ, 'ರಾಗಿ ಪಳತ' ಎಂಬ ಉಗ್ರಾಣಗಳನ್ನು ಸಂಗ್ರಹಿಸುತ್ತಿದ್ದರು. ಮುಖ್ಯ ಊಟ ರಾಗಿ ಮುದ್ದೆ ಹಾಗೂ ರಾಗಿಯ ರೊಟ್ಟಿಯನ್ನು ಇವರು ತಯಾರಿಸುತ್ತಿದ್ದರು. ಹಾಗಾಗಿ ಚಿತ್ರದುರ್ಗದ ಆನೆ ಬಾಗಿಲಿನಲ್ಲಿ ನಡೆಯುವಂತಹ ಸಂತೆ ಮಾರುಕಟ್ಟೆಗೆ ನಾಯಕರ ಕಾಲದಲ್ಲಿ 'ರಾಗಿ ಪೇಟೆ'[೧೯೩] ಎಂಬ ಹೆಸರಿನ ಪೇಟೆಯೇ ಇತ್ತು. ಈಗ ಈ ಹೆಸರಿನ ಪೇಟೆ ಇಲ್ಲ. ರಾಗಿಯನ್ನು ಆಹಾರ ಬೆಳೆಯಾಗಿ ಈ ಪ್ರದೇಶದಲ್ಲಿ ಬೆಳೆಯುತ್ತಿದ್ದ ಅಂಶ ತಿಳಿದು ಬರುತ್ತದೆ.

ಜೋಳ ಬೆಳೆಯನ್ನು ಬೆಳೆಯುತ್ತಿದ್ದು, ಈ ಬೆಳೆಯನ್ನು ಎರೇ ಹೊಲಗಳಲ್ಲಿ ಮುಂಗಾರಿನ ಕಾಲದಲ್ಲಿ ಬಿತ್ತುವ ಕ್ರಿಯೆ ನಡೆಯುತ್ತಿತ್ತು. ಈ ಬೆಳೆಯು ತಂಪಾದ ಕಪ್ಪು ಭೂಮಿಯಲ್ಲಿ ಗೊಬ್ಬರ ಹಾಕಿ ಬೆಳೆಯುವಂತ ಬೆಳೆಯಾಗಿದ್ದು, ಇದನ್ನು, ಜೋಳದ ಅನ್ನ, ರೊಟ್ಟಿ, ಮುದ್ದೆ ಮುಂತಾದ ಊಟ ಉಪಚಾರಗಳಲ್ಲಿ ಬಳಸುವ ಧಾನ್ಯವಾಗಿದೆ. ನವಣಿಯು ಮುಂಗಾರು ಧಾನ್ಯವಾಗಿದೆ. ನವಣೆಯನ್ನು ಕೆಲವು ದೇಶಗಳಲ್ಲಿ ವಿಶೇಷವಾಗಿ ಬೆಳೆಯುತ್ತಾರೆ. ನವಣೆ ಬೆಳೆಯು ಕೇಸರಿ ಭೂಮಿಗಳಲ್ಲಿ ಕಪ್ಪು ಭೂಮಿಗಳಲ್ಲಿ ವಂಡು ಮಣ್ಣು ಇರುವ ಭೂಮಿಯಲ್ಲಿ ಹೇರಳವಾಗಿ ಬೆಳೆಯುತ್ತದೆ. ನವಣೆಯಲ್ಲಿ ಬೂದರನವಣೆ, ಹಾಲುನವಣೆ ಎಂಬ ತಳಿಗಳು ಇವೆ. ನವಣೆ ಒಂದು ಸತ್ವಯುತ ಕಿರುಧಾನ್ಯ. ಇದು ಅಲ್ಪಾವಧಿ ಬೆಳೆ. ಮಳೆಯಾಶ್ರಿತ ಪ್ರದೇಶಗಳಲ್ಲಿ ಕಡಿಮೆ ಆಳದ ಹೆಚ್ಚು ಫಲವತ್ತತೆಯಿಲ್ಲದ ಮಣ್ಣಿನಲ್ಲಿ

ಮತ್ತು ಗುಡ್ಡ-ಗಾಡು ಪ್ರದೇಶಗಳಲ್ಲಿ ಸಹ ಅತ್ಯಂತ ಸುಲಭವಾಗಿ ಬೆಳೆಯಬಹುದಾದ ಧಾನ್ಯ. 'ಉತ್ತಮ ಪೌಷ್ಟಿಕ ಮೌಲ್ಯ'ವನ್ನು ಹೊಂದಿದ್ದರೂ ಈ ಧಾನ್ಯದ ಬಳಕೆ ಕಡಿಮೆ. 'ಕಿರುಧಾನ್ಯಗಳಿಗೆ ಉತ್ತಮ ಮಾರುಕಟ್ಟೆ ಮತ್ತು ಬೆಂಬಲ ಬೆಲೆ ಇಲ್ಲದಿರುವುದು ಮತ್ತು ಬಡವರ ಆಹಾರ ಎಂಬ ಭಾವನೆ ಇರುವುದರಿಂದ ಕ್ರಮೇಣವಾಗಿ ನವಣೆಯಂತಹ ಕಿರುಧಾನ್ಯಗಳು ಅವಸಾನದ ಅಂಚನ್ನು ಮುಟ್ಟುತ್ತಿವೆ.[೧೯೫] ನವಣೆ ಕೀಟ ಮತ್ತು ರೋಗ ನಿರೋಧಕ ಶಕ್ತಿ ಹೊಂದಿದ್ದು, ಕಡಿಮೆ ಫಲವತ್ತಾದ ಹೊಲಗಳಲ್ಲೂ ಸುಲಭವಾಗಿ ಬೆಳೆಯಲಾಗುತ್ತಿತ್ತು.

ನಾಯಕರ ಕಾಲದಲ್ಲಿ ಕಂಡುಬರುವ ಸಾಂಪ್ರದಾಯದ ಬೆಳೆಗಳ ಉಲ್ಲೇಖ ಹಲವು ಬಾರಿ ಕಂಡುಬಂದರೂ ಪ್ರಸ್ತುತ ದಿನಗಳಲ್ಲಿ ಅದೇ ಬೆಳೆಗಳು ಮುಂದುವರಿಯುತ್ತಿರುವುದನ್ನು ಕಾಣಬಹುದು. ಜೋಳ, ರಾಗಿ, ನವಣೆ, ಸಜ್ಜೆ, ಗೋಧಿ, ಭತ್ತ, ಹುರುಳಿ, ತೊಗರಿ, ಬೇಳೆ ಕಾಳುಗಳು, ಹಲಸಂಧಿ, ಹೆಸರು, ಸಣ್ಣ ಹೆಸರು ಇತ್ಯಾದಿ ಬೆಳೆಗಳಾಗಿವೆ.

**ವಾಣಿಜ್ಯ ಬೆಳೆಗಳು**

ವಾಣಿಜ್ಯ ಬೆಳೆಗಳಲ್ಲಿ ಜನರು ಅಪಾರ ಅನುಭವ ಹೊಂದಿದ್ದರು. ಕಾರಣ ಪ್ರಾಚೀನ ಕಾಲದಿಂದಲೂ ಬೃಹತ್ ಪ್ರಮಾಣದ ಕೆರೆ-ಕಾಲುವೆ, ಬಾವಿಗಳ ಸ್ಥಾಪನೆಯ ಉದ್ದೇಶ ವಾರ್ಷಿಕವಾಗಿ ಎರಡು ಬೆಳೆಗಳನ್ನು ತೆರೆಯುವುದೇ ಆಗಿತ್ತು. ಅಂದರೆ ಒಂದು ಆಹಾರ ಬೆಳೆಯನ್ನು ಪಡೆದರೆ ಮತ್ತೊಂದು ವಾಣಿಜ್ಯ ಬೆಳೆ ಆಗಿರುತ್ತಿತ್ತು. ಈ ಎಲ್ಲ ಅಂಶಗಳಿಂದ ಈ ಪ್ರದೇಶದಲ್ಲಿ ಒಣಬೇಸಾಯ ಮತ್ತು ನೀರಾವರಿಗಳಿಗೆ ಸಮಾನವಾಗಿ ಆದ್ಯತೆ ನೀಡಿದ್ದರು. ನೀರಾವರಿ ಮೂಲಗಳಿಂದ ಹೆಚ್ಚು ಆದಾಯ ತರುವ ಬೆಳೆಗಳಾದ ತೆಂಗು, ಅಡಿಕೆ, ಕಬ್ಬು, ಬಾಳೆ, ತಂಬಾಂಕು, ಬೆಳೆಗಳನ್ನು ಬೆಳೆಯುತ್ತಿದ್ದರು. ಉಳಿದಂತೆ ಮಳೆಯಾಶ್ರಿತ ಪ್ರದೇಶಗಳಲ್ಲಿ ಹತ್ತಿ, ಮೆಕ್ಕೆಜೋಳ, ಶೇಂಗಾ, ಇನ್ನಿತರೆ ಬೆಳೆಗಳನ್ನು ಬೆಳೆಯುತ್ತಿದ್ದೂ ಉಂಟು.

ನಾಯಕರ ಹಾಗೂ ಸಮಕಾಲೀನ ದಾಖಲೆಗಳ ಪ್ರಕಾರ ಕಬ್ಬನ್ನು ಇಕ್ಷುದಂಡ[೧೯೬] ಎಂತಲೂ ಕರೆಯುತ್ತಿದ್ದರು. ಈ ಕಬ್ಬನ್ನು ಹೆಚ್ಚಿನ ನೀರು ಪೂರೈಕೆ ಮತ್ತು ಅದಕ್ಕೆ ಹೊಂದಿಕೊಳ್ಳುವ ಭೂಮಿಯು ಇರುವ ಕಡೆ ಹೆಚ್ಚಾಗಿ ಬೆಳೆಯುತ್ತಿದ್ದರು.[೧೯೭] ಚಿತ್ರದುರ್ಗ ಪ್ರದೇಶದ ಹೊಸದುರ್ಗ, ಹೊಳಲ್ಕೆರೆ, ಜಗಳೂರು, ಹರಿಹರ, ದಾವಣಗೆರೆ ಪ್ರದೇಶಗಳಲ್ಲಿ ಕಬ್ಬು ಬೆಳೆಯನ್ನು ಬೆಳೆಯುತ್ತಿದ್ದರು. ಭೌಗೋಳಿಕ ಹವಾಮಾನ ಈ ಪ್ರದೇಶಗಳಲ್ಲಿ ಉತ್ತಮವಾಗಿರುವುದರಿಂದ ಬೆಳೆಯುತ್ತಿದ್ದರು. ಕಾರಣ ಭತ್ತದ ಗದ್ದೆಯ ಭೂಮಿಯನ್ನು ಎರಡು ವರ್ಷದ ನಂತರ ಕಬ್ಬು ಹಚ್ಚುತ್ತಿದ್ದರು. ಇದರಲ್ಲಿ ಬಿಳಿಕಬ್ಬು, ಕರೆಕಬ್ಬು, ಹಾಲುಗಬ್ಬು ಅಥವಾ ಹುಲ್ಲು ಕಬ್ಬು, ಈ ಮೂರು ಕಬ್ಬುಗಳನ್ನು ಬೆಳೆಯುತ್ತಿದ್ದರು. ಮೊದಲ ಎರಡು ಜಾತಿಯ ಕಬ್ಬಿನಲ್ಲಿ ಬೆಲ್ಲ ಮಾಡುತ್ತಿದ್ದರು. ಅದಕ್ಕಾಗಿಯೇ ಅಂದಿನ ಕಾಲದಲ್ಲಿ ಕಬ್ಬಿನ ಗಾಣಗಳು ಅಪಾರವಾಗಿ ಇದ್ದವು ಎಂಬುದಕ್ಕೆ ಶಾಸನಗಳು ಇವೆ. ಕ್ರಿ.ಶ.೧೫೨೮ರ ಶಾಸನದಲ್ಲಿ ಅಪ್ಪನಾಯಕನು ಮಲೆಬೆನ್ನೂರಿನ ಸೆಟ್ಟಿ, ಪಟ್ಟಣಸ್ವಾಮಿ, ಗೌಡರಿಗೆ ಅವರು ಒಳ್ಳೆಯ ಕೆಲಸಗಳಿಗಾಗಿ ಮಲೆಬೆನ್ನೂರ ಸೀಮೆಯ ಕಬ್ಬಿನ ಸುಂಕವನ್ನು ರದ್ದು ಮಾಡಿದರೆಂದು ತಿಳಿಯುತ್ತದೆ. ಹಾಗೆಯೇ ಗಾಣದೆರೆಯನ್ನು ವಿನಾಯಿತಿ ನೀಡಿದ ಅಂಶವಿದೆ.[೧೯೮] ಹುಲ್ಲು ಕಬ್ಬು ಬಹಳ ಸಿಹಿ, ಮಿದು. ಇರುವುದರಿಂದ ಅದನ್ನು ಹೆಚ್ಚಾಗಿ ತಿನ್ನಲು ಬೆಳೆಯುವರು. ಹೆಚ್ಚಾಗಿ ಕಬ್ಬಿನ ಉತ್ಪನ್ನದಿಂದ ಸಕ್ಕರೆ, ಬೆಲ್ಲ, ಪಾನಕಗಳಿಗೆ ಮಾರಾಟವಾಗುವ ಉತ್ಪನ್ನಗಳನ್ನು ಮಾಡಿ ಮಾರುತ್ತಿದ್ದರು.




ಹತ್ತಿ ಬೆಳೆಯು ಚಿತ್ರದುರ್ಗ ಪ್ರದೇಶದ ಪ್ರಮುಖ ಆರ್ಥಿಕ ಬೆಳೆಯಾಗಿತ್ತು. ಈ ಬೆಳೆಯನ್ನು ಒಣಭೂಮಿ ಹಾಗೂ ನೀರಾವರಿ ಭೂಮಿಯಲ್ಲಿ ಹೆಚ್ಚಾಗಿ ಬೆಳೆಯುತ್ತಿದ್ದರು. ದಾವಣಗೆರೆ, ಚಳ್ಳಕೆರೆ, ಹಿರಿಯೂರು, ಹೊಸದುರ್ಗ, ಚಿತ್ರದುರ್ಗ ಹಾಗೂ ಜಗಳೂರು ತಾಲೂಕುಗಳಲ್ಲಿ ಪ್ರಸ್ತುತ ದಿನಗಳಲ್ಲಿ ಹೆಚ್ಚಾಗಿ ಬೆಳೆಯುತ್ತಿರುವ ಅಂಶ ಕಂಡುಬರುತ್ತದೆ. ಹತ್ತಿಯಲ್ಲಿ ಮುಂಗಾರಿಯ ಹತ್ತಿ ಬೇರೆ, ಅದಕ್ಕೆ ಗಂಗಿ ಹತ್ತಿ ಎನ್ನುತ್ತಾರೆ. ಮತ್ತು ಜವಾರಿಹತ್ತಿ, ವಿಲಾಯತಿಹತ್ತಿ ಎಂದೂ ಎರಡು ತರಹದ ಹತ್ತಿಗಳನ್ನು ಈ ಪ್ರದೇಶದಲ್ಲಿ ಬೆಳೆಯುತ್ತಾರೆ. ಹಲವು ತರದ ಹತ್ತಿಗಳೂ ಇವೆ. ಅವುಗಳಲ್ಲಿ ಮುಂಗಾರಿಯ ಹತ್ತಿಯ ಅರಳಿಯು ಬಹಳ ಬಿಳುಪು ಆಗಿ, ಗಿಡಗಳಿಗೆ ಕಾಯಿಗಳು ಬಹಳ ಮತ್ತು ಅದರ ಬೆಳೆಯು ವಿಶೇಷವು ಆಗಿರುತ್ತದೆ. ಈ ಬೆಳೆಯು ಕಾರ್ತಿಕ ಮಾರ್ಗಶಿರ ಮಾಸಕ್ಕೆ ಕೈಗೆ ಬರುವುದು. ಮುಂಗಾರಿ ಹತ್ತಿಯಲ್ಲಿ ಕೆಂಪುಹತ್ತಿ, ಗಂಗಿಹತ್ತಿ ಎಂದು ಎರಡು ವಿಧಗಳಿದ್ದರೂ ಅವುಗಳನ್ನು ಮೃಗಶಿರ, ಆರದ್ರಿ, ಪುಷ್ಯ ಪುನರ್ವಸು ಮಳೆಗಳವರೆಗೂ ಮುಂಗಾರಿಯ ಕಾಲಗಳಲ್ಲಿ ಬಿತ್ತುತ್ತಾರೆ. ಈ ಬೆಳೆಯು ಕಾರ್ತಿಕ ಮಾರ್ಗಶಿರ ಮಾಸಕ್ಕೆ ಕೈಗೆ ಬರುವುದು ಮತ್ತು ಇದರಲ್ಲಿ ಮತ್ತೊಂದು ಪ್ರಕಾರದ ಮರಹತ್ತಿ ಎಂದು, ಕರಿಹತ್ತಿ ಎಂದು ಎರಡು ವಿಧಗಳುಂಟು. ಅವುಗಳನ್ನು ಹೊಲಗಳಲ್ಲಿ ಬಿತ್ತುವದಿಲ್ಲ. ತೋಟಗಳಲ್ಲಿ ಮತ್ತು ಜನರು ತಮ್ಮ ತಮ್ಮ ಮನೆಗಳ ಹಿತ್ತಲುಗಳಲ್ಲಿ ಹಾಕುತ್ತಾರೆ. ಅವುಗಳು ದೊಡ್ಡ ಮರಗಳಾಗಿ ನಾಲ್ಕೆಂಟು ವರುಷ ಹಾಗೇ ಇದ್ದು ಆ ಮೇಲೆ ಕಾಯಿಗಳನ್ನು ಬಿಡಲು ಆರಂಭಿಸಿದರೆ ನೀರಿನ ತಂಪು ಇದ್ದ ಹಾಗೆಲ್ಲ ಸದಾ ಕಾಲದಲ್ಲಿ ಕಾಯಿಗಳಾಗಿ ಒಡೆಯುತ್ತಾ ಇರುವವು. ಅದರ ಕಾಯಿಗಳು ದೊಡ್ಡವಾಗಿ ವಿಲಾಯತೀ ಹತ್ತಿಯ ಕಾಯಿಗಳ ಹಾಗೆ ಕಾಯಿಗಳಾಗುವವು. ಇವುಗಳ ಅರಳಿಯು ಬಹಳ ಬಿಳುಪು ಮತ್ತು ಬಹು ಮೃದುವಾಗಿರುವುದು. ಈ ಜಾತಿಯ ಮರಹತ್ತಿಗಳಲ್ಲಿ ಸೀಮೆಯ ಹತ್ತಿ ಎಂದು ಮತ್ತೊಂದು ಕರಿಹತ್ತಿಯ ಗಿಡಗಳಂತೆ ಸರ್ವದಾ ಕಾಯಿಗಳಾಗುತ್ತಾ ಇರುವವು. ಈ ಹತ್ತಿಯ ಗಿಡಗಳನ್ನು ತೋಟಗಳಲ್ಲಿ ನೀರಿನ ತಂಪಿಗೆ ಬೆಳೆಸುತ್ತಾರೆ. ಈ ಹತ್ತಿಯಿಂದ ಅನೇಕ ಪೂಜಾ ವಿಧಾನಗಳಿಗೆ ಈ ಹತ್ತಿಯನ್ನು ಬಳಸುತ್ತಿದ್ದರು. ಇದರ ನೂಲು ತೆಳುವಾಗಿರುತ್ತಿತ್ತು.

ಹೊಲಗಳಲ್ಲಿ ಬಿತ್ತುವ ಮುಂಗಾರಿಯ ಹತ್ತಿ ಕೆಂಪು ಹತ್ತಿ, ಜವಾರಿಹತ್ತಿ ಹಾಗೂ ವಿಲಾಯತಿಹತ್ತಿ ಈ ನಾಲ್ಕು ಪ್ರಕಾರದ ಹತ್ತಿಯಿಂದ ವರ್ತಕ ಜನರಿಗೂ, ಕೃಷಿಕರಿಗೂ ಕೂಡಾ ಹಿತವಾಗಿ ಬೆಳೆಯುವ

ಬೆಳೆಯಾಗಿದ್ದು, ಇದನ್ನು ಕುರಿತು ಮುಸ್ಲಿಂರಲ್ಲಿ ಪ್ರಸಿದ್ಧ ಸಂತನಾದ ಕಬೀರ ಮತ್ತು ಅವನ ಮಗನಾದ ಕಮಾಲ ನೀಡುವ ವಿವರಣೆ ಸ್ವಾರಸ್ಯಕರವಾಗಿದೆ.

ಕಬೀರ ಈ ರೀತಿ ಹೇಳುತ್ತಾನೆ,

ಅಂಬೇಕಫಲಂ/ ಒಂಧೂಕಬಲಂ॥

ನದೀಕಜಲಂ/ ಸೂರ್ಯೇಕತೇಜಂ॥

ಇದರ ಅರ್ಥ ಕಮಾಲನು ಕೇಳಿದನು. ಅದಕ್ಕೆ ಈ ಭೂಲೋಕದ ಹಣ್ಣಿನಲ್ಲಿ ಉತ್ತಮ ಫಲವು ಯಾವುದೆಂದರೆ, ಮಾವಿನ ಫಲವು ಶ್ರೇಷ್ಠವಾದದ್ದು ಮತ್ತು ಸಕಲ ಬಲದಲ್ಲಿ ಅಣ್ಣತಮ್ಮಂದಿರ ಒಲವೇ ಶ್ರೇಷ್ಠವು, ಸಕಲ ಜಲದಲ್ಲಿ ನದಿಯ ಜಲವೇ ಶ್ರೇಷ್ಠವು ಎಂದು ಕಬೀರನು ಹೇಳುತ್ತಿದ್ದದ್ದನ್ನು ಧಿಕ್ಕರಿಸಿ ಕಮಾಲನು ಹೀಗೆ ಹೇಳುತ್ತಾನೆ.

ಕಾವೇಕಕ ಪಲಂ/ ಭುಜೇಕಬಲಂ॥

ನಯನೇಕ ತೇಜಂ/ ಮೇಘೇಕಜಲಂ॥

ಇದರ ಅರ್ಥ ಫಲಗಳಲ್ಲಿ ಹತ್ತಿಯ ಫಲವೇ ಶ್ರೇಷ್ಠವು, ಬಲದಲ್ಲಿ ತನ್ನ ಭುಜಬಲವೇ ಶ್ರೇಷ್ಠವು ಉಳಿದ ಬಲವೆಲ್ಲ ನಿಷ್ಪ್ರಯೋಜಕ. ಸರ್ವ ತೇಜದಲ್ಲಿ ನೇತ್ರದ ತೇಜವೇ ಶ್ರೇಷ್ಠವು. ನೇತ್ರದಲ್ಲಿ ತೇಜವಿಲ್ಲದವನಿಗೆ ಸೂರ್ಯನ ತೇಜವೇತಕ್ಕೆ? ಸರ್ವಜಲಗಳಲ್ಲಿ ಮೇಘಜಲವೇ ಶ್ರೇಷ್ಠವು. ಮೇಘ ಜಲವು ಸಕಲ ಪ್ರಾಣಿಗಳಿಗೆ ಜೀವನಾಧಾರವಾದ ಹಾಗೆ ನದಿಯ ಜಲವು ಜೀವನಾಧಾರವಾಗಬಹುದೇ? ಮೇಘ ಜಲವಿಲ್ಲದಿದ್ದರೆ ನದಿಯ ಜಲವೆಲ್ಲರುವದು? ಈ ಹೇಳಿಕೆಯನ್ನು ಕಬೀರನು ಸಮ್ಮತಿಸಿದನು.[೧೯೯] ಈಗೆ ಹತ್ತಿ ಬೆಳೆಯ ಕುರಿತು ಅನೇಕ ವಚನ ಸಾಹಿತ್ಯದಲ್ಲಿ ಉಲ್ಲೇಖಗಳು ಇವೆ. ಬುಕಾನನ್ ಈ ಪ್ರದೇಶದಲ್ಲಿ ಹೆಚ್ಚಾಗಿ ಹತ್ತಿ ಬೆಳೆಯುತ್ತಿದ್ದರು ಎಂದು ತಿಳಿಸಿದ್ದಾನೆ. ಹಾಗೆಯೇ ವರ್ತಕರು ಕಚ್ಚಾ ಹತ್ತಿಯನ್ನು ಖರೀದಿಸಿ ಸ್ಥಳೀಯ, ಕೃಷಿಕರಿಗೆ ನೂಲು ತಯಾರಿಸಲು ನೀಡುತ್ತಿದ್ದರು, ಹತ್ತಿಯನ್ನು ಸಂತೆಯಲ್ಲಿ ಎಲ್ಲ ಜಾತಿಯ ಹೆಂಗಸರೂ ಖರೀದಿ ಮಾಡಿ ನೂಲು ತಯಾರಿಸಿ ಮಾರಿ ತಮ್ಮ ಮನೆಗೆ ಬೇಕಾದ ಸಾಮಾನು ಖರೀದಿಸುತ್ತಾರೆ, ಈ ನೂಲು ತಮ್ಮ ಬಟ್ಟೆಗಳಿಗೆ ಬೇಕಾದುದಕ್ಕಿಂತ ಹೆಚ್ಚಿನದು ಎಂದು ಹತ್ತಿ ನೂಲು ಬಗ್ಗೆ ಹಾಗೂ ರೇಷ್ಮೆ ಗುಡಿ ಕೈಗಾರಿಕೆಗಳ ಬಗ್ಗೆ ತಿಳಿಸಿದ್ದಾನೆ.[೨೦೦]

ಹತ್ತಿ ಬೆಳೆಗೆ ಯೋಗ್ಯವಾದ ಭೂಮಿ, ಭೂಮಿಯ ಒಡೆತನ, ಭೂ ಹಿಡುವಳಿ ವ್ಯವಸ್ಥೆ, ಈ ಎಲ್ಲ ಅಂಶಗಳು ಚಿತ್ರದುರ್ಗದಲ್ಲಿದ್ದು, ಒಟ್ಟು ಭೂಮಿಯಲ್ಲಿ ೧.೧೧,೮೭೬[೨೦೧] ಎಕರೆ ಭೂಮಿಯಲ್ಲಿ ಹತ್ತಿ ಬೆಳೆಯುತ್ತಿದ್ದರು. ೧೭-೧೮ನೇ ಶತಮಾನದಲ್ಲಿ ಕಚ್ಚಾ ಹತ್ತಿ ಬೆಳೆಯ ಉತ್ಪಾದನ ವಲಯ ಇದಾಗಿರುವುದರಿಂದ ಬ್ರಿಟಿಶ್ ಈಸ್ಟ್ ಇಂಡಿಯಾ ಕಂಪನಿಯು ಸ್ಥಳೀಯ ಜಮೀನುದಾರರ ಜೊತೆ ವ್ಯಾಪಾರ ಸಂಬಂಧವನ್ನು ಹೊಂದಿತ್ತು. ಈ ವಿಚಾರಗಳು ಬ್ರಿಟಿಶರ ಹತ್ತಿ ರಾಜಕೀಯದ ಸ್ವರೂಪವನ್ನು ಅರ್ಥೈಸಿಕೊಳ್ಳುವುದಕ್ಕೆ ಅವಶ್ಯಕವಾಗಿವೆ. ಆರಂಭದಲ್ಲಿಯೇ ಪೋರ್ಚುಗಿಸರು ಭಾರತಕ್ಕೆ ಬಂದಾಗ ಹೊಸ ತಳಿಯ ಹತ್ತಿಗಳನ್ನು ಪರಿಚಯಿಸಿದರು ಮತ್ತು ಸಾಂಪ್ರದಾಯಿಕ ತಳಿಗಳಿಗೆ ಬದಲಾಗಿ ಸಣ್ಣ ಹತ್ತಿ, ದೊಡ್ಡಹತ್ತಿ, ಹೈಬ್ರೀಡ್ ತಳಿಗಳನ್ನು ಪರಿಚಯಿಸಿದರು. ಹೆಚ್ಚು ಕೃಷಿಯ ಉತ್ಪನ್ನಗಳು ಈ ಪ್ರದೇಶದಲ್ಲಿ ಕಂಡುಬರುವುದರಿಂದ ಬ್ರಿಟಿಶ್ ವರ್ತಕರು ಸ್ಥಳೀಯ ಭೂಮಾಲೀಕರು ಹಾಗೂ

ಮಧ್ಯವರ್ತಿಗಳೊಂದಿಗೆ ನೇರ ಸಂಪರ್ಕ ಹೊಂದಿದ್ದರು. ಸ್ಥಳೀಯ ಅರಸು ಮನೆತನಗಳ ಹಿಡಿತದಿಂದ ಹೊರಬಂದು ಬ್ರಿಟಿಶ್ ಆಳ್ವಿಕೆಯಲ್ಲಿ ಗಟ್ಟಿ ಅಸ್ತಿತ್ವವನ್ನು ಕಂಡುಕೊಂಡ ಸ್ಥಳೀಯ ವರ್ತಕರು ಮಧ್ಯಮ ವರ್ಗವಾಗಿ ರೂಪಗೊಂಡು ಹೊಸ ಅಸ್ತಿತ್ವವನ್ನು ಪಡೆದುಕೊಂಡರು.[೨೦೨] ಈ ಎಲ್ಲ ಅಂಶಗಳ ಜೊತೆಗೆ ದಾವಣಗೆರೆಯಲ್ಲಿ ಬೃಹತ್ ಪ್ರಮಾಣದ ಹತ್ತಿ ಬಟ್ಟೆ ಕೈಗಾರಿಕೆಗಳು ಬೆಳೆಯಲು ಬ್ರಿಟಿಶರ ಕೊಡುಗೆ ಅಪಾರವಾಗಿದೆ. ಹಾಗೆಯೇ ಇದನ್ನು ಕರ್ನಾಟಕದ 'ಮ್ಯಾಂಚೆಸ್ಟಾರ್' ಎಂದು ಕರೆಯುತ್ತಾರೆ. ಇದು ಇಂಗ್ಲೆಂಡಿನ ಮ್ಯಾಂಚೆಸ್ಟಾರ್ ನಗರಕ್ಕೆ ಹೋಲಿಸಿ ಭಾತದಲ್ಲಿ ಕಚ್ಚಾ ಹತ್ತಿ ಉತ್ಪಾದನಾ ಕೈಗಾರಿಕೆಗಳನ್ನು ಇಲ್ಲಿ ಸ್ಥಾಪಿಸಲಾಗಿದೆ. ಮುಖ್ಯವಾಗಿ ಈ ಪ್ರದೇಶದಲ್ಲಿ ಹತ್ತಿ ಬೆಳೆಯು ಹೆಚ್ಚಾಗಿ ಬೆಳೆಯುವುದರಿಂದ ಕೈಗಾರಿಕೆಗಳು ಇಲ್ಲಿ ಬೆಳೆಯಲು ಸಾಧ್ಯವಾಯಿತು.

ಹತ್ತಿ ಬೆಳೆಯಂತೆ ಶೇಂಗಾ ಬೆಳೆಯು ಈ ಪ್ರದೇಶದ ಪ್ರಮುಖ ಆರ್ಥಿಕ ಬೆಳೆಗಳಲ್ಲಿ ಒಂದಾಗಿದೆ. ಮೇಲೆ ಹೇಳಿದಂತೆ ಪೋರ್ಚುಗೀಸರು ನಾಯಕರ ಕಾಲದಲ್ಲಿ ಈ ಶೇಂಗಾ ಬೆಳೆಯನ್ನು ಪರಿಚಯಿಸಿದರು.[೨೦೩] ಒಣ ಹವೆಯ ಪ್ರದೇಶವಾಗಿರುವ ಚಳ್ಳಕೆರೆ, ಮೊಳಕಾಲ್ಮೂರು, ಹಿರಿಯೂರು, ಪಾವಗಡ, ಜಗಳೂರು, ಹೊಸದುರ್ಗ ತಾಲೂಕುಗಳಲ್ಲಿ ಸುಮಾರು ೧.೭೨.೬೩೨[೨೦೪] ಎಕರೆ ಭೂಮಿಯಲ್ಲಿ ಈ ಶೇಂಗಾ ಬೆಳೆಯನ್ನು ಬೆಳೆಯುತ್ತಾರೆ. ಪ್ರಸ್ತುತ ದಿನಗಳಲ್ಲಿ ಚಳ್ಳಕೆರೆಯು ತೈಲ ನಗರ ಎಂದು ಕರೆಸಿಕೊಂಡಿದ್ದು, ಈ ಶೇಂಗಾ ಬೆಳೆಯಿಂದ ಕರ್ನಾಟಕದಲ್ಲಿ ಅತೀ ಹೆಚ್ಚು ಶೇಂಗಾ ಬೆಳೆಯುವ ಪ್ರದೇಶ ಇದಾಗಿದೆ. ನಾಯಕರ ಕಾಲದಲ್ಲಿ ಗಾಣಗಳ ಉಲ್ಲೇಖಗಳಿವೆ. ಗಾಣಗಳಲ್ಲಿ ಉತ್ಪಾದಿಸಿದ ಎಣ್ಣೆಯನ್ನು ಕೂಡ ಚರ್ಮದ ಚೀಲಗಳಲ್ಲಿ ತುಂಬಿ ಪ್ರಾಣಿ (ಎತ್ತು, ಕತ್ತೆ, ಕೋಣ) ತಲೆ, ಹೆಗಲ ಮೇಲಿಟ್ಟುಕೊಂಡು ಅಥವಾ ಬಂಡಿಗಳ ಮೂಲಕವು ಸಂತೆದಿನ ಹಾಗೂ ಬಿಡುವಿನ ದಿನಗಳಲ್ಲಿ ಮಾರುತ್ತಿದ್ದರು.[೨೦೫] ಶೇಂಗಾ ಬೆಳೆಯ ಜೊತೆಗೆ ಕುಸುಬೆ, ಎಳ್ಳು, ಕುರುಸಾನಿ, ಸೂರ್ಯಕಾಂತಿ ಇನ್ನಿತರೆ ಎಣ್ಣೆ ಬೀಜ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈ ಪ್ರದೇಶದ ಪ್ರಮುಖ ಆರ್ಥಿಕ ಬೆಳೆಯಾಗಿ ಶೇಂಗಾ ಬೆಳೆಯನ್ನು ಬೆಳೆಯುತ್ತಿದ್ದರು. ಈ ಬೆಳೆಯನ್ನು ಮಳೆಯಾಶ್ರಿತವಾಗಿ ಮತ್ತು ನೀರಾವರಿ ಭೂಮಿಯಲ್ಲಿ ಬೆಳೆಯುತ್ತಿದ್ದರು. ಮೃಗಾಶಿರಕಾಲದಲ್ಲಿ ಬಿತ್ತುತಿದ್ದರು. ಈ ಬೆಳೆಯು ಕಾರ್ತಿಕ ಮಾರ್ಗಶಿರ ಮಾಸಕ್ಕೆ ಕಟಾವಿಗೆ ಬರುತ್ತಿತ್ತು.

ಅದೇ ರೀತಿಯಾಗಿ ತೆಂಗು, ಅಡಿಕೆ, ಬಾಳೆ, ರೇಷ್ಮೆ ಮತ್ತು ತಂಬಾಕು ಪ್ರಮುಖ ಆರ್ಥಿಕ ಬೆಳೆಗಳಾಗಿ ಬೆಳೆಯುತ್ತಿದ್ದರು ಎಂದು ತಿಳಿದುಬರುತ್ತದೆ. ತೋಟದ ಬೆಳೆಗಳನ್ನು ಬೆಳೆಯುತ್ತಿದ್ದರು ಎಂಬುದಕ್ಕೆ ಕ್ರಿ.ಶ.೧೬೭೮ರಲ್ಲಿ ಬಿಚ್ಚುಗತ್ತಿ ಭರಮಣ್ಣ ನಾಯಕನು ನೀರ್ಥಡಿಯ ಶ್ರೀರಂಗನಾಥ ಸ್ವಾಮಿಯ ದೇವಾಲಯ ಜೀರ್ಣೋದ್ಧಾರ ಮಾಡಿ ಆ ದೇವರಿಗೆ ಎರಡು ಸಮಸ್ತ ತೋಟವನ್ನು ದತ್ತಿ ನೀಡಿದನು.[೨೦೬] ಹಾಗೆಯೇ ಹರಿಹರ ಸೀಮೆಯಲ್ಲಿ ಹೆಚ್ಚಾಗಿ ವೀಳ್ಯೆದೆಲೆಯನ್ನು ಬೆಳೆಯುತ್ತಿದ್ದರು. ಹಾಗಾಗಿ ಅದಕ್ಕೆ ಒಂದು ವರ್ತಕ ಸಂಘ ಇತ್ತು ಎಂಬುದಕ್ಕೆ ಹರಿಹರ ಮತ್ತು ಬಾಗೂರಿನಲ್ಲಿ ದೊರೆತಿರುವ ಶಾಸನಗಳಲ್ಲಿ ಆಧಾರಗಳಿವೆ. ಚಿತ್ರದುರ್ಗ ಪ್ರದೇಶದಲ್ಲಿ ಅನೇಕ ಬಗೆಯ ತರಕಾರಿ ಹಾಗೂ ಹೂವಿನ ಬೆಳೆಗಳನ್ನು ಬೆಳೆಯುತ್ತಿದ್ದರು.

ಒಟ್ಟಾರೆಯಾಗಿ ನಾಯಕರ ಕಾಲದಲ್ಲಿ ಕೃಷಿಯು ಉತ್ಪನ್ನಗಳು ಅಪಾರ ತೆರಿಗೆ ಸಂಗ್ರಹ ಮಾಡಲು ಅನುಕೂಲ ಆಗಿರುವುದರಿಂದ ಹೆಚ್ಚು ಜನಪರ ಕಾರ್ಯಗಳನ್ನು ಮಾಡಿರುವುದು ಕಾಣಬಹುದು. ಪ್ರಾಚೀನ ಕಾಲದಿಂದಲೂ ಈ ಪ್ರದೇಶ ಜನ ವಸತಿ ನೆಲೆಯಾಗಿದ್ದು, ಪಾರಂಪರಿಕ ಬೆಳೆಗಳನ್ನು ಬೆಳೆಯುವ ತಿಳುವಳಿಕೆ ಇತ್ತು. ಆದರೆ ಭಾರತಕ್ಕೆ ಆಗಮಿಸಿದ ಯುರೋಪಿಯನ್ನರಿಂದ ಈ ಪ್ರದೇಶದಲ್ಲಿ ಹೊಸ ತಳಿಗಳಾದ ಹತ್ತಿ, ಭತ್ತ ಬೆಳೆಗಳು ಪರಿಚಯವಾಗಿ, ಹೊಸ ಪ್ರಯೋಗ ಬೆಳೆಗಳಾದ ಪಪ್ಪಾಯಿ, ತಂಬಾಕು, ಶೇಂಗಾ, ಹತ್ತಿ ಅಲೂಗಡ್ಡೆ ಈ ಬೆಳೆಗಳು ವಿಶೇಷವಾಗಿ ಪರಿಚಯವಾದ ಬೆಳೆಗಳು ಎಂಬುವುದನ್ನು ಗುರುತಿಸಬಹುದು. ಈ ಬೆಳೆಗಳು ಈ ಪ್ರದೇಶದಲ್ಲಿ ಪ್ರಮುಖ ಆರ್ಥಿಕ ಬೆಳೆಗಳಾಗಿ ಇಂದಿಗೂ ಬೆಳೆಯುತ್ತಿರುವುದನ್ನು ಕಾಣಬಹುದು.

**೫.೭ ಭೂ ಕಂದಾಯ ವ್ಯವಸ್ಥೆ**

ನಮ್ಮ ಪ್ರಾಚೀನ ಇತಿಹಾಸವನ್ನು ಅಭ್ಯಾಸಿಸಿದಾಗ, ಇತಿಹಾಸದ ಒಂದು ಭಾಗವಾಗಿ ಪ್ರಾಚೀನ ಕಾಲದ ಅರ್ಥವ್ಯವಸ್ಥೆ ಒಂದು ಪ್ರಮುಖವಾದ ಸ್ಥಾನವನ್ನು ಪಡೆದುದನ್ನು ಕಾಣುತ್ತೇವೆ. ನಮ್ಮ ಪ್ರಾಚೀನರಿಗೂ ಒಂದು ಸುವ್ಯವಸ್ಥಿತವಾದ ರಾಜ್ಯ ರಾಷ್ಟ್ರದ ಕಲ್ಪನೆಯಿತ್ತು. ಒಂದು ರಾಜ್ಯದ ಚಿತ್ರ ನಮ್ಮ ಮುಂದೆ ಮೂಡಿದಾಗ ಅದು ವ್ಯವಸ್ಥಿತವಾಗಿ ನಡೆಯಲು ಬೇಕಾಗುವ ಅವಶ್ಯಕತೆಗಳ ವಿಚಾರ ಮಾಡುವುದು ಸಹಜ. ಈ ಅವಶ್ಯಕತೆಗಳ ವಿಚಾರವೇ ಮೌರ್ಯರ ಕಾಲದಲ್ಲಿ 'ಸಪ್ತಾಂಗಂ ರಾಜ್ಯಂ' ಎನ್ನುವ ಕೌಟಿಲ್ಯನ ತತ್ವಕ್ಕೆ ಹುಟ್ಟು ಹಾಕಿತು. ರಾಜ, ಮಂತ್ರಿಗಳು ರಾಜ್ಯದ ಒಂದು ಪ್ರಮುಖ ಅಂಗವಾಗಿರುವ ಹಾಗೆ ಕೋಶವೂ ಕೂಡ ಸಪ್ತಾಂಗಗಳಲ್ಲಿ ಒಂದು ಸ್ಥಾನ ಪಡೆದಿದೆ. ಈ ರಾಜ ಕೋಶವು ಯಾವಾಗಲೂ ಸಮೃದ್ಧ, ಸುವ್ಯವಸ್ಥಿತವಾಗಿ ಇರಲು ಅಧಿಕಾರಿಗಳ ಗುಂಪು ಹುಟ್ಟಿಕೊಂಡ ಹಾಗೆಯೇ ಈ ಕೋಶಕ್ಕೆ ನಿಯಮಿತವಾಗಿ ಆದಾಯ ಬರುವಂತೆ ಮಾಡಿಕೊಂಡ ವ್ಯವಸ್ಥೆಯೇ 'ತೆರಿಗೆ ಸಂಗ್ರಹಣೆ' ಅಥವಾ 'ಕರಸಂಗ್ರಹಣೆ'.

ನಮ್ಮ ದೇಶದಲ್ಲಿ ಈ 'ತೆರಿಗೆ ವ್ಯವಸ್ಥೆ' ವೇದ ಕಾಲದಿಂದಲೂ ಜಾರಿಯಲ್ಲಿದ್ದುದು ಕಂಡು ಬರುತ್ತದೆ. ಆದರೆ ಆ ಕಾಲದಲ್ಲಿ ಶುಲ್ಕ ಮುಂತಾದ ತೆರಿಗೆಗೆ ಸಂಬಂಧಿಸಿದ ಪದಗಳ ಬಳಕೆ ಕಂಡು ಬಂದರೂ ತೆರಿಗೆ ವೈವಿಧ್ಯತೆ ಇದ್ದ ಬಗ್ಗೆ ಉಲ್ಲೇಖಗಳು ದೊರೆಯುವುದಿಲ್ಲ. ಈ ಅರ್ಥವ್ಯವಸ್ಥೆ ಅಥವಾ ರಾಜ್ಯದ ಅರ್ಥವ್ಯವಸ್ಥೆಗೆ (ಸಾರ್ವಜನಿಕ ಆರ್ಥಿಕತೆ) ಒಂದು ನಿರ್ದಿಷ್ಟವಾದ ರೂಪ ದೊರೆತದ್ದು ಮೌರ್ಯರ ಕಾಲದಲ್ಲಿಯೇ. ಕೌಟಿಲ್ಯನ 'ಅರ್ಥಶಾಸ್ತ್ರದಂತಹ ಗ್ರಂಥಗಳು ಅರ್ಥ ವ್ಯವಸ್ಥೆಯ ಸ್ವರೂಪ ಮತ್ತು ಅದರ ಎರಡು ಅಂಗಗಳಾದ ತೆರಿಗೆ ಸಂಗ್ರಹಣೆ ಮತ್ತು ಸಾರ್ವಜನಿಕ ವೆಚ್ಚ ಬಗ್ಗೆ ವಿವರವಾದ ವಿವರಣೆ ನೀಡುತ್ತವೆ. ಹೀಗಾಗಿ ಮೌರ್ಯರ ಅರ್ಥವ್ಯವಸ್ಥೆ ಮುಂದೆ ಆಳಿದ ಎಲ್ಲ ಸಾಮ್ರಾಜ್ಯಗಳಿಗೂ ಒಂದು ಮಾದರಿಯಾಯಿತು. ಈ ರಾಜ ವಂಶಗಳು ಮೌರ್ಯರ ಅರ್ಥ ವ್ಯವಸ್ಥೆಯನ್ನೂ ತಮಗೆ ಅನುಕೂಲವಾಗುವಂತೆ ಅಲ್ಪ ಸ್ವಲ್ಪ ಮಾರ್ಪಾಡುಗಳೊಂದಿಗೆ ಬದಲಾಯಿಸಿಕೊಂಡರೂ ಹೆಚ್ಚಿನ ಅಂಶಗಳು ಹಾಗೆಯೇ ಮುಂದುವರೆದವು. ಮುಂದೆ ಕರ್ನಾಟಕದಲ್ಲಿ ಆಳಿದ ಕದಂಬರಿಂದ ಹಿಡಿದು ವಿಜಯನಗರದವರೆಗಿನ ರಾಜ ವಂಶಗಳು ಕೂಡ ತಮ್ಮ ಅರ್ಥವ್ಯವಸ್ಥೆಯಲ್ಲಿ ಈ ಅಂಶಗಳನ್ನು

ಅಳವಡಿಸಿಕೊಂಡುದನ್ನು ಕಾಣಬಹುದು.[೨೦೬] ವಿಜಯನಗರ ಕಾಲದಲ್ಲಿ ಸಾಮಂತರಾಗಿದ್ದು ನಂತರ ಸ್ವಾತಂತ್ರ ಆಡಳಿತವನ್ನು ಕಂಡುಕೊಂಡ ಪಾಳೆಯಗಾರರು ಅಥವಾ ನಾಯಕರು ಇದೇ ಮಾದರಿಯನ್ನು ಮುಂದುವರಿಸಿದ್ದನ್ನು ಕಾಣಬಹುದಾಗಿದೆ.

ನಾಯಕರ ಕಾಲದಲ್ಲಿ ಜನತೆ ತಮ್ಮ ಜೀವನ ನಿರ್ವಹಣೆ ಮತ್ತು ಆರ್ಥಿಕ ಭದ್ರತೆಗೆ ಅಲ್ಲಿನ ನಿಸರ್ಗ ಸಂಪತ್ತಾದ ಭೂಮಿಯನ್ನು ಆಶ್ರಯಿಸುವುದು ಸ್ವಾಭಾವಿಕವಾದುದು. ಹೀಗಾಗಿಯೇ ದಾನ ವಸ್ತುಗಳಲ್ಲಿಯೂ ಕೂಡ ವ್ಯವಸಾಯ ಯೋಗ್ಯ ಭೂಮಿಗೆ ಪ್ರಥಮ ಪ್ರಾಶಸ್ತ್ಯ ಸಂದಿದ್ದು, ಕರ್ನಾಟಕದ ಮುಕ್ಕಾಲು ಪಾಲು ಶಾಸನಗಳು ಭೂದಾನಕ್ಕೆ ಸಂಬಂಧಿಸಿವೆ ಎನ್ನಬಹುದು.[೨೦೭] ಭೂಮಿಯು ಸಂಪತ್ತಿನ ಮೂಲವಾದುದರಿಂದ ಮಾನವನ ಬಹುಪಾಲು ಆರ್ಥಿಕ ಜೀವನ ಅದನ್ನು ಅವಲಂಬಿಸಿದೆ. ಹೀಗಾಗಿ ಮಾನವ ಸಮಸ್ತ ದುಡಿಮೆ, ಉತ್ಪಾದನೆ, ಅಭಿವೃದ್ಧಿಗಳು ಆತ ಸ್ವತಂತ್ರವಾಗಿ ಹೊಂದಿರುವ ಭೂ ಸ್ವಾಮ್ಯವನ್ನು ಅವಲಂಬಿಸಿದೆ. ಮಧ್ಯಕಾಲೀನ ಕುಟುಂಬಗಳ ಎಲ್ಲ ಬೇಡಿಕೆಗಳು ಪ್ರತ್ಯಕ್ಷವಾಗಿ ಮಾಲೀಕತ್ವವನ್ನು ಅವಲಂಬಿಸಿವೆ. ಈ ಕಾಲದ ಎಲ್ಲ ಅಂಶಗಳು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪೂರೈಸುತ್ತಿದ್ದ ಭೂಮಿಯು ತನ್ನ ಸ್ಥಾನವನ್ನು ಭದ್ರಪಡಿಸುವುದರಿಂದ ಅದರ ಒಡೆತನದ ಅಂಶವು ಬಹಳಷ್ಟು ಗೌರವದ ಮಾತಾಗಿತ್ತೆಂಬುದನ್ನು ಅಲ್ಲಗಳೆಯುವಂತಿಲ್ಲ.

ಚಿತ್ರದುರ್ಗ ನಾಯಕರ ಕಾಲದಲ್ಲಿ ತಮ್ಮ ಆಡಳಿತ ಕೇಂದ್ರವನ್ನು ರಾಜ್ಯವೆಂದು ಕರೆದುಕೊಂಡಿದ್ದು ರಾಜ್ಯವನ್ನು ಅನೇಕ ಸೀಮೆಗಳನ್ನಾಗಿ ವಿಭಜಿಸಿದ್ದರು. ಅವುಗಳೆಂದರೆ ಬಿಳಿಜೋಡು, ಸೀಮೆ, ಚಿತ್ರಹಳ್ಳಿ ಸೀಮಿ, ಜಗಳೂರು ಸೀಮೆ, ಕೊಡಗನೂರು ಸೀಮೆ, ಜಾಜೂರು ಸೀಮೆ, ಹೊಳಲ್ಕೆರೆ ಸೀಮೆ,[೨೦೮] ಭರಮಸಾಗರ ಸೀಮೆ, ದುರ್ಗದ ಸೀಮೆ, ಹೊರಕೆರಿ ವಲಯದ ಸೀಮೆ[೨೦೯] ಹಿರಿಯೂರು ಸೀಮೆ,[೨೧೦] ಗುಂಟನೂರು ಸೀಮೆ,[೨೧೧] ಗುಡ್ಡದ ಸೀಮೆ/ಗುಡ್ಡದ ನಾಡದ ನಾಡು[೨೧೨] ದುಂಮಿಯ ಸೀಮೆ[೨೧೩] ದೊಡ್ಡೇರಿ ಸೀಮೆ[೨೧೪] ನವಬಕುವಾದ ಸೀಮೆ[೨೧೫] ನುಲಿಯನೂರು ಸ್ಥಳ[೨೧೬] ಬಂನ್ನಿಕೋಡಸೀಮೆ[೨೧೭] ಬಗ್ಗನಡುವಿನ ಸ್ಥಳ[೨೧೬] ಬಂನ್ನಿಕೋಡಸೀಮೆ[೨೧೭] ಬಗ್ಗನಕುವಿನ ಸ್ಥಳ[೨೧೮] ಬಸ್ವಾಪಟ್ಟಣದ ಸೀಮೆ/ಸ್ಥಳ[೨೧೯] ಬಾಗೂರು ವಳಿತ/ಸೀಮೆ[೨೨೦] ಬುಕ್ಕಾಪಟ್ಟಣ ಸ್ಥಳ[೨೨೧] ಬೂದಿಹಾಳು ಸೀಮೆ[೨೨೨] ಬೇತೂರು ಸೀಮೆ[೨೨೩] ಹೀಗೆ ಸೀಮೆ, ವೇಂಠ, ಸ್ಥಳ, ಜಾವದಿ, ಮಾಗಣಿ, ನಾಡು ಎಂಬ ಉಲ್ಲೇಖಗಳು ಇರುವ ಅನೇಕ ಶಾಸನಗಳು ಚಿತ್ರದುರ್ಗ ಪ್ರದೇಶದಲ್ಲಿ ಕಂಡುಬರುವುದರಿಂದ ಇವುಗಳು ಆಡಳಿತ ಅನುಕೂಲಕ್ಕಾಗಿ ಚಿಕ್ಕ ಚಿಕ್ಕ ಅಧಿಕಾರಿಗಳನ್ನು ನೇಮಿಸಿಕೊಂಡು ಅಧಿಕಾರವನ್ನು ನಡೆಸುತ್ತಿದ್ದರು ಎಂಬ ಅಂಶ ತಿಳಿದು ಬರುತ್ತದೆ.

ಆಡಳಿತ ಘಟಕವು ಸುಗಮವಾಗಿ ನಡೆಯಲು ಕೆಲವು ಹಳ್ಳಿಗಳನ್ನು ಸೇರಿಸಿ ನಾಡು, ಸ್ಥಳ ಸೀಮೆಗಳನ್ನು ವಿಭಾಗ ಮಾಡಿದ್ದು ನಾಯಕರ ಕಾಲದಲ್ಲಿ ಕಂಡುಬಂದಿದ್ದು ಚಿತ್ರದುರ್ಗ ನಾಡು/ಸೀಮೆ ಪ್ರದೇಶದಲ್ಲಿ ಕಂಡುಬರುವ ಗ್ರಾಮಗಳ ಪಟ್ಟಿ:

| ಹೋಬಳಿಗಳು/ನಾಡು | ಗ್ರಾಮಗಳು | ಕೊಂಪೆಗಳು | ಒಟ್ಟು |
|---|---|---|---|
| ೧. ಚಿತ್ರದುರ್ಗ | ೨ | ೮ | ೧೦ |
| ೨. ಕೆಳಕಟ್ಟೆ | ೧೨ | ೪ | ೧೬ |
| ೩. ದ್ಯಾಮವ್ವನಹಳ್ಳಿ | ೧ | ೪ | ೩ |
| ೪. ಸಿದ್ದವ್ವನಹಳ್ಳಿ | ೩ | ೪ | ೭ |
| ೫. ಜಂಪನಾಯ್ಕನಹಳ್ಳಿ | ೩ | ೪ | ೭ |
| ೬. ಬೆಳಗಟ್ಟ | ೯ | ೧ | ೧೦ |
| ೭. ನನ್ನಿವಾಳ | ೭ | ೩ | ೧೦ |
| ೮. ತುರುವನೂರು | ೯ | ೪ | ೧೩ |
| ೯. ಭೀಮಸಮುದ್ರ | ೧೩ | ೨ | ೧೫ |
| ೧೦. ಚಿತ್ರವಳ್ಳಿ | ೨೩ | ೨ | ೨೫[೨೨೪] |

ಈ ರೀತಿಯಾಗಿ ವಿಭಾಗಿಸುತ್ತಿದ್ದರು. ಗ್ರಾಮೀಣ ಅರ್ಥವ್ಯವಸ್ಥೆಯನ್ನು ನಿರ್ವಹಿಸಲು ೧೮ನೇ ಶತಮಾನದ ಪೂರ್ವಾರ್ಧದಲ್ಲಿ ಬಾರಾಬಲೂತಿ[೨೨೫] ಪದ್ಧತಿ ರೂಢಿಯಲ್ಲಿ ಇತ್ತು. ಈ ವಿಷಯ ಕುರಿತು ಚಿತ್ರದುರ್ಗ ಆಯಗಾರರ ನಿರ್ಣಯ ಗ್ರಂಥದಲ್ಲಿ ಮಾಹಿತಿ ಇದೆ.[೨೨೬] ಇದರಂತೆ ಆ ಹನ್ನೆರಡು ಮಂದಿ ಅಧಿಕಾರಿಗಳು ಯಾರು ಎಂಬುದು ಇಲ್ಲಿ ತಿಳಿಯಬಹುದು.

* ಗೌಡ ಅಥವಾ ಗ್ರಾಮದ ಯಜಮಾನ
* ಶ್ಯಾನಬೋಗ ಅಥವಾ ಕರಣಿಕ
* ಪಂಚಾಂಗ ಬ್ರಾಹ್ಮಣ ಅಥವಾ ಜ್ಯೋತಿಷಿ
* ಕಬ್ಬಿಣದವನು
* ಅಕ್ಕಸಾಲಿಗ
* ಅಗಸ
* ನಾಯಿಂದ ಅಥವಾ ಕೆಲಸಿ (ಕ್ಷೌರಿಕ)
* ತೋಟಿ
* ತಳವಾರ
* ಕೆರೆನೀರಗುಂಟಿ(ಗಂಟಿ)
* ಬಡಗಿ
* ಅಳತೆಗಾರ[೨೨೭]

ಇವರನ್ನು ಕೈವಾಡದವರು ಅಥವಾ ಅಡದೆಯವರು ಎಂಬುದಾಗಿಯೂ ಕರೆಯಲಾಗುತ್ತಿತ್ತು.[೨೨೮] ಆಯಗಾರ ಪದ್ಧತಿಯ ಉದ್ದೇಶ ಗ್ರಾಮಗಳ ಸ್ವಾವಲಂಬನೆ ಹಾಗೂ ಗ್ರಾಮದ ಎಲ್ಲ ವರ್ಗಗಳ ವೃತ್ತಿಯನ್ನು ಒದಗಿಸುವುದಾಗಿತ್ತು. ಸ್ಥಳೀಯ ಪರಿಸ್ಥಿತಿಗೆ ಅನುಗುಣವಾಗಿ ಆಯಗಾರರ ಸಂಖ್ಯೆಯಲ್ಲಿ ವ್ಯತ್ಯಾಸಗಳು ಆಗುತ್ತಿದ್ದವು. ಅವರ ಸಂಖ್ಯೆ ಸಾಮಾನ್ಯವಾಗಿ ಹನ್ನೆರಡು ಇದ್ದುದಾಗಿ ಕಂಡುಬರುತ್ತದೆ. ಚಿತ್ರದುರ್ಗ ನಾಯಕ ಕಾಲದಲ್ಲಿಯೂ ಆಯಗಾರರ ಸಂಖ್ಯೆ ಹನ್ನೆರಡು ಇತ್ತೆಂದು ಸಮಕಾಲೀನ ಆಧಾರಗಳಿಂದ ತಿಳಿಯುತ್ತದೆ.

ಆಯಗಾರರಲ್ಲಿ ಗೌಡ, ಶ್ಯಾನುಭೋಗ, ನೀರಗಂಟಿ, ತೋಟಿ, ತಳವಾರ ಈ ಐವರು ಅಧಿಕಾರಿಗಳು ಸರಕಾರದಿಂದ ತಮ್ಮ ಸೇವೆಗೆ ಪ್ರತಿಫಲವಾಗಿ ಭೂಮಿಯನ್ನು, ರೈತನಿಂದ ನಿಗದಿತ ಪ್ರಮಾಣದ ಧಾನ್ಯಗಳನ್ನು ಪಡೆಯುತ್ತಿದ್ದರು.[೨೮] ಈ ವ್ಯವಸ್ಥೆಯಲ್ಲಿದ್ದ ಪ್ರತಿಯೊಬ್ಬ ಅಧಿಕಾರಿಯ ಸೇವೆಯನ್ನೂ ಪರಿಗಣಿಸಿ ಗ್ರಾಮದ ರೈತರು ತಮ್ಮ ಬೆಳೆಯ ಪ್ರಮಾಣಕ್ಕೆ ಅನುಗುಣವಾಗಿ ರಾಶಿ ಹಾಕಿದ ಧಾನ್ಯದಲ್ಲಿ ಕೆಲಭಾಗವನ್ನು ಆಯಗಾರರಿಗೆ ಸಂಭಾವನೆಯಾಗಿ ನೀಡಬೇಕಾಗಿತ್ತು. ಉದಾಹರಣೆಗೆ:

| **ಪ್ರತಿ ೧೦ ಖಂಡುಗಕ್ಕೆ** | **ಸೇರುಗಳಲ್ಲಿ** |
|---|---|
| ದೇವರಿಗೆ | ೧೦ ಸೇರು |
| ಬಿಕ್ಷಾರ್ಥಿ ಬ್ರಾಹ್ಮಣನಿಗೆ | ೨೦ ಸೇರು |
| ಜ್ಯೋತಿಷಿಗೆ | ೧೦ ಸೇರು |
| ಶ್ಯಾನುಬೋಗನಿಗೆ | ೨೦ ಸೇರು |
| ತಳವಾರನಿಗೆ | ೧೦ ಸೇರು |
| ನಾಯಿಂದನಿಗೆ | ೨ ಸೇರು |
| ಕುಂಬಾರನಿಗೆ | ೨ ಸೇರು |
| ಆಚಾರಿಗೆ | ೨ ಸೇರು |
| ಕಬ್ಬಿಣದವನಿಗೆ | ೨ ಸೇರು |
| ಅಗಸ | ೪ ಸೇರು |
| ಅಳತೆಗಾರ | ೮ ಸೇರು |
| ಗೌಡ | ೧೫ ಸೇರು[೨೩೦] |

ಹೀಗೆ ಬಾರಾಬಲೂತಿ ಪದ್ಧತಿಯಲ್ಲಿ ಸೇರಿದ್ದ ಎಲ್ಲ ಅಧಿಕಾರಿಗಳಿಗೆ ಸ್ಥಾನಗಳು ಸಾಮಾನ್ಯವಾಗಿ ವಂಶಪಾರಂಪರ್ಯವಾಗಿದ್ದವು. ಈ ವ್ಯವಸ್ಥೆಯಲ್ಲಿ ಗ್ರಾಮದ ಜನರ ಹಾಗೂ ರೈತರ ಪರಸ್ಪರ ಸಹಕಾರಗಳಿಂದ ಪರಸ್ಪರರ ಆರ್ಥಿಕ ಜೀವನ ಸುಗಮವಾಗಿ ನಡೆಯುವಂತಾಗಿತ್ತು. ಸರಕಾರದ ಈ ಎಲ್ಲ ಅಧಿಕಾರಿಗಳನ್ನು ಹೊಂದಿರುವ ಉದ್ದೇಶವು ತೆರಿಗೆಯನ್ನು ಸಂಗ್ರಹಿಸಲು ಎಂದು ಹೇಳಬಹುದು. ರಾಜ್ಯದ ಆದಾಯಗಳಲ್ಲಿ ತೆರಿಗೆಯು ಮೂಲಸ್ಥಾನ. ತೆರಿಗೆಯನ್ನು ಅನೇಕ ಮೂಲಗಳಿಂದ ಸಂಗ್ರಹಿಸಲಾಗುತ್ತಿತ್ತು. ಅವುಗಳೆಂದರೆ ಭೂಮಿಯ ಮೇಲಿನ ತೆರಿಗೆ, ಮನೆ ಮತ್ತು ಇತರ ವಸ್ತುಗಳ ಮೇಲಿನ ತೆರಿಗೆ, ಉದ್ಯೋಗ ತೆರಿಗೆ, ವಾಣಿಜ್ಯ ತೆರಿಗೆ, ಉದ್ದಿಮೆಗಳ ಮೇಲಿನ ತೆರಿಗೆ, ಆದಾಯ ತೆರಿಗೆ, ವ್ಯಾಪಾರಿಗಳ ಲಾಭದ ತೆರಿಗೆ, ಕಾರ್ಮಿಕರ ತೆರಿಗೆ ಮುಂತಾದವು. ಇದಲ್ಲದೆ ರಾಜ್ಯಕ್ಕೆ ಹಣ ಸಂದಾಯವಾಗುತ್ತಿದ್ದ ಇತರ ಮೂಲಗಳೆಂದರೆ ಕಾಣಿಕೆಗಳು, ತಪ್ಪಿತಸ್ಥರ ಮೇಲಿನ ಶುಲ್ಕಗಳು ಇತ್ಯಾದಿ.[೨೩೧] ಈ ಎಲ್ಲ ಆದಾಯಗಳಲ್ಲಿ ಅತಿ ಹೆಚ್ಚು ಆದಾಯ ತರುವುದು ಭೂ ಕಂದಾಯದ ಮೂಲಕ ಎಂಬುದು ತಿಳಿದು ಬರುತ್ತದೆ. ಚಿತ್ರದುರ್ಗದ ನಾಯಕರು ವಿಜಯನಗರ ಸಾಮ್ರಾಜ್ಯದ ಸಾಮಂತರಾಗಿದ್ದರು. ಅನಂತರ ಅವರು ಸ್ವತಂತ್ರರಾದರು. ಆದುದರಿಂದ ಚಿತ್ರದುರ್ಗ ನಾಯಕರು ವಿಜಯನಗರ ಸಾಮ್ರಾಜ್ಯದ ಭೂ ಕಂದಾಯ ವ್ಯವಸ್ಥೆಯನ್ನು ತಮ್ಮ ಪ್ರದೇಶದಲ್ಲಿ ಅನುಷ್ಠಾನಕ್ಕೆ ತಂದಿದ್ದರು.

ಶಾಸನಗಳಲ್ಲಿ ಹೇಳಿರುವಂತೆ ವಿಜಯನಗರ ಹಾಗೂ ನಂತರದ ಅರಸರು ಅವರು ಹಿಂದಿನವರ ಸಂಪ್ರದಾಯಗಳನ್ನು ಪಾಲಿಸುತ್ತಿದ್ದುದು ಅಲ್ಲದೆ ಹೊಸ ತತ್ವಗಳನ್ನು ಅನುಸರಿಸಿ ಸಮರ್ಪಕ ಆಡಳಿತವನ್ನು ನಡೆಸುತ್ತಿದ್ದರು. ಭೂ ಕಂದಾಯವನ್ನು ವಿಧಿಸುವಾಗ ಯಾವುದೇ ವ್ಯವಸ್ಥೆಯಲ್ಲಿ ಎರಡು ವಿಧಗಳನ್ನು ಕಾಣುತ್ತೇವೆ. ಕಂದಾಯ ನಿಗದಿ ಹಾಗೂ ಕಂದಾಯ ವಸೂಲಿಯೇ ಆ ಎರಡು ವಿಧಗಳು ವಿಜಯನಗರ ಕಾಲದ ಭೂಕಂದಾಯ ಪದ್ಧತಿಯು ನಾಯಕರ ಮೇಲೆ ವಿಶೇಷ ಪ್ರಭಾವ ಬೀರುವುದನ್ನು ಕಾಣಬಹುದು. ಮಣ್ಣಿನ ವರ್ಗ ಹಾಗೂ ಬೇಸಾಯದ ಪರಿಸ್ಥಿತಿಯನ್ನು ಆಧರಿಸಿ, ಕೃಷಿಕನು ಕೊಡಬೇಕಾದ ತೆರಿಗೆಯನ್ನು ನಿರ್ಣಯಿಸಬೇಕು ಎಂಬುದನ್ನು ವಿಜಯನಗರ ಕಾಲದಲ್ಲಿಯೂ ಅನುಸರಿಸುತ್ತಿದ್ದರು. ಈ ಕಾಲದಲ್ಲಿ ನಾಲ್ಕು ಬಗೆಯ ಬೇಸಾಯ ಪದ್ದತಿಗಳು ಇದ್ದವು. ಅವುಗಳೆಂದರೆ ಕಾಡಾರಂಭ (ಒಣಬೇಸಾಯ) ನೀರಾರಂಬ (ಗದ್ದೆ ಬೇಸಾಯ) ತೋಟಾರಂಬ (ಬಗಾಯ್ತು) ಮತ್ತು ಕುಮರಿ (ಸ್ಥಳ ವರ್ಗಾಯಿಸುವ ಬೇಸಾಯ) ಶಾಸನಗಳಲ್ಲಿ ಇವುಗಳನ್ನು ಬೇರೆ ಬೇರೆ ರೀತಿ ಉಲ್ಲೇಖಿಸಲಾಗಿದೆ. ಇದರಿಂದಾಗಿ ವಿಭಿನ್ನ ದರಗಳಲ್ಲಿ ಕಂದಾಯವನ್ನು ನಿಗದಿಪಡಿಸುತ್ತಿದ್ದರೆಂದು ತಿಳಿಯಬಹುದು.[೨೩೨] ಗದ್ದೆಯನ್ನು ಉತ್ತಮ, ಮಧ್ಯಮ, ಕನಿಷ್ಟ ಎಂಬುದಾಗಿ ವಿಭಾಗಿಸಲಾಗಿತ್ತು.[೨೩೩] ಅಂದರೆ ಭೂಮಿ ಯಾವ ರೀತಿಯದು ಎಂಬುದರ ಮೇಲೆ ಕಂದಾಯ ನಿರ್ಧರಿಸಲಾಗುತ್ತಿತ್ತು. ಗದ್ದೆಯಲ್ಲಿ ಬೆಳೆಗಳಿಗನುಗುಣವಾಗಿ ಪ್ರತ್ಯೇಕ ತೆರಿಗೆ ಇರುತ್ತಿತ್ತು.[೨೩೪] ತೋಟದ ಭೂಮಿಯಲ್ಲಿ ಉತ್ಪತ್ತಿಯನ್ನು ಗಣನೆಗೆ ತೆಗೆದುಕೊಂಡು ಕಂದಾಯ ನಿರ್ಧರಿಸಲಾಗುತ್ತಿತ್ತು.

ನಾಯಕರ ಕಾಲದಲ್ಲಿ ಮೂರು ಬಗೆಯ ತೆರಿಗೆ ನಿಗದಿ ನಡೆಯುತ್ತಿದ್ದಿತು. ೧. ರೇಖಾ ನಿಗದಿ[೨೩೫] ೨. ಬೀಜಾವರಿ[೨೩೬] ಅಥವಾ ಬಿತ್ತನೆಯ ಆಧಾರದ ನಿಗದಿ ಮತ್ತು ೩. ಕೆಳದಿ ಶಿವಪ್ಪ ನಾಯಕನ ಶಿಸ್ತು ಮಾದರಿ ನಿಗದಿ.[೨೩೭] ಕೆಳದಿ ರಾಜವಂಶದ ಅತ್ಯಂತ ಶ್ರೇಷ್ಠ ರಾಜನೆನಿಸಿದ ಇವನನ್ನು ಇಂದಿಗೂ ಭೂ ಕಂದಾಯ ನಿಗದಿಯನ್ನು ವ್ಯವಸ್ಥೆಗೊಳಿಸಿದವನು ಎಂದು ಹೆಸರಿಸಲಾಗುತ್ತದೆ. ಅವನ ಶಿಸ್ತು ನಿಗದಿ ಪದ್ಧತಿಯು ೧೬೬೦ರಿಂದ ಮೂವತ್ತೊಂಬತ್ತು ವರ್ಷ ಕಾಲ ಮುಂದುವರಿಯಿತು ಸಮಕಾಲೀನ ಅರಸರು ಆದ ನಾಯಕರು ಇಂತಹ ಪ್ರಯೋಗ ಮಾಡಿರುವುದು ಎಲ್ಲಿಯೂ ಕಂಡುಬಂದಿಲ್ಲ. ಆದರೆ ಇಳುವರಿಗೆ ತಕ್ಕಂತೆ ೧/೩ ಭಾಗದಷ್ಟು ತೆರಿಗೆ ಇತ್ತು. ಹಾಗೆಯೇ ಒಂದು ನೇಗಿಲಿಗೆ ೧೨/೧ ದುರ್ಗಿ ವರಹ ವಿದಿಸುತ್ತಿದ್ದರು.[೨೩೮] ಭೂಮಿಯನ್ನು ಅಳತೆ ಮಾಡಿ ತೆರಿಗೆಯನ್ನು ವಿಧಿಸುವ ಅಧಿಕಾರಿಗೆ 'ಅಥವಾಣಿ ಪಾರುಪತ್ಯಗಾರ' ಎಂದು ಕರೆಯುತ್ತಿದ್ದರು.[೨೩೯] ಇಲ್ಲಿ ಕಂದಾಯವನ್ನು ನಗದು ಮತ್ತು ಬೆಳೆಗಳನ್ನು ಸಂಗ್ರಹಿಸುವ ಪದ್ದತಿ ಇತ್ತು.[೨೪೦] ಹೋಬಳಿ ಮಟ್ಟದಲ್ಲಿ ನಾಡಿಗ ಎಂಬ ಕಂದಾಯ ಅಧಿಕಾರಿ ಇದ್ದು, ಸಂಗ್ರಹಿಸಿದ ಧಾನ್ಯ ರೂಪದ ಕಂದಾಯವನ್ನು ಚಾವಡಿಗೆ ತಂದು ಒಪ್ಪಿಸುವ ಪದ್ಧತಿಗಳು ಇದ್ದವು.[೨೪೧]

ರಾಯ-ರೇಖಾ ಪದ್ದತಿಯೇ ಪ್ರಮುಖ ಭೂ ಅಳತೆ ಪದ್ಧತಿಯನ್ನು ವಿಜಯನಗರದ ಅರಸರು ಹಿಡಿದ ದಾರಿಯನ್ನೇ ಅನುಸರಿಸಿದರು ಎಂದು ಹೇಳಬಹುದು. ಕೊನೆಯವರೆಗೂ ಈ ಪದ್ದತಿಯನ್ನು ಅವರು ಮುಂದುವರಿಸಿದರು. ಆದರೆ ವಿಜಯನಗರದ ಅರಸರು ವಿಧಿಸಿದ್ದ ದರವನ್ನು ಸಾರಾಸಗಟಾಗಿ ಅವರು ಇಟ್ಟುಕೊಳ್ಳಲಿಲ್ಲ. ಅನೇಕ ಅಂಶಗಳನ್ನು ಅದಕ್ಕೆ ಕೂಡಿಸಿ ರೇಖಾ ನಿಗದಿಯನ್ನು ಹೆಚ್ಚಿಸಿದರು. ಅನೇಕ ಶಾಸನಗಳು ಇದನ್ನು ಸಮರ್ಥಿಸುತ್ತವೆ. ಇದರ ಹಿಂದಿನ ತೆರಿಗೆ ದರವನ್ನು ಶಾಸನಗಳಲ್ಲಿ ಪುರು ರೇಖಾ ಎಂದು ಕರೆದಿದೆ. ರೇಖಾ ನಿಗದಿಯಂತೆ ೬೭೫ ಗದ್ಯಾಣಗಳನ್ನು ಮೂಲ ಕಂದಾಯವಾಗಿ

ಪಾವತಿ ಮಾಡಬೇಕಾಗಿದ್ದು ಒಂದು ಹಳ್ಳಿಯ ಬಗೆಗೆ ಒಂದು ಶಾಸನವು ಹೇಳಿದೆ. ಈ ಮೂಲ ರೇಖಾ- ನಿಗದಿಗೆ ಬೀರದ (ಶಾಸನಗಳಲ್ಲಿ ಸಾಮಾನ್ಯವಾಗಿ ಉಕ್ತವಾಗಿದೆ), ದುರ್ಗದ ಭತ್ತ ಮೊದಲಾದ ಹೆಚ್ಚುವರಿಗಳು ಸೇರುತ್ತಿದ್ದವು.[೨೪೨] ಇದರಿಂದ ಹೊರಬರುವ ವಿಷಯವೇನೆಂದರೆ, ಅಲ್ಲಿ ರಾಯ ರೇಖಾ ಪದ್ಧತಿಯ ತೆರಿಗೆ ನಿಗದಿಯು ಜಾರಿಯಲ್ಲಿದ್ದಿತೋ ಅಲ್ಲೆಲ್ಲ ಅದನ್ನು ಹಾಗೆಯೇ ಒಪ್ಪಿಕೊಂಡರು. ವಿವರಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಲಿಲ್ಲ. ಹೆಚ್ಚಿನ ಮೇಲು ಸುಂಕಗಳನ್ನು ಹಾಕಿದರು.

ಕೆಳದಿ ನಾಯಕರಂತೆ ಚಿತ್ರದುರ್ಗದ ನಾಯಕರು ಬೀಜಾವರಿ ಪದ್ಧತಿಯ ನಿಗದಿಯನ್ನು ಅನುಸರಿಸಿದರು. ಒಂದು ಜಮೀನಿಗೆ ಎಷ್ಟು ಬಿತ್ತನೆ ಬೇಕು ಎನ್ನುವುದರ ಆಧಾರದ ಮೇಲೆ ಕಂದಾಯ ನಿಗದಿಯನ್ನು ನಿರ್ಧರಿಸಲಾಗುತ್ತಿತ್ತು. ಜಮೀನನ್ನು ಅಳತೆ ಮಾಡುತ್ತಿರಲಿಲ್ಲ, ಆದರೆ ಅದರ ಸಾಮರ್ಥ್ಯವನ್ನು ಅಂದಾಜು ಮಾಡಲಾಗುತ್ತಿತ್ತು. ಅನೇಕ ಶಾಸನಗಳಲ್ಲಿ, ಜಮೀನಿನ ಬಿತ್ತನೆಯ ಸಾಮರ್ಥ್ಯವನ್ನು ವಸ್ತುರೂಪದ ತೆರಿಗೆಯನ್ನು ಉಲ್ಲೇಖಿಸಲಾಗಿದೆ. ಆ ಮೇಲೆ ಅದನ್ನು ನಗದುರೂಪಕ್ಕೆ ಪರಿವರ್ತಿಸಲಾಗುತ್ತಿತ್ತು. ಒಂದು ಖಂಡುಗ ಧಾನ್ಯದ ಮಾರುಕಟ್ಟೆಯ ಬೆಲೆಯನ್ನು ಸೂಚಿಸುತ್ತಿದ್ದರು. ಒಂದು ಶಾಸನದಲ್ಲಿ ಉಕ್ತವಾಗಿರುವಂತೆ, ೨.೫ ಖಂಡುಗ ಭತ್ತದ ಬಿತ್ತನೆ ಸಾಮರ್ಥ್ಯವಿದ್ದ ಒಂದು ಗದ್ದೆಗೆ ೧೫ ಖಂಡುಗ ಭತ್ತವನ್ನು ಕಂದಾಯವಾಗಿ ಪಾವತಿ ಮಾಡಲಾಗುತ್ತಿತ್ತು. ಅದರ ಮೌಲ್ಯ ೧.೫ವರಹ ಆಗಿತ್ತು.[೨೪೩] ಇನ್ನೊಂದು ಶಾಸನವು ಹೀಗೆ ದಾಖಲಿಸುತ್ತದೆ. ೫ ಖಂಡುಗದ ಭತ್ತದ ಗದ್ದೆಗಳು ಕಂದಾಯವಾಗಿ ೯ ವರಹಗಳನ್ನು ಸಲ್ಲಿಸುತ್ತಿತ್ತು. ಅಂದಿನ ಮಾರುಕಟ್ಟೆ ಬೆಲೆ ಖಂಡುಗಕ್ಕೆ ೨ ವರಹ ಮತ್ತು ೩ ಹಣದಂತೆ ೪ ವರಹ ಮತ್ತು ೪ ಹಣಗಳನ್ನು ಕಂದಾಯವಾಗಿ ಪಾವತಿ ಮಾಡುತ್ತಿದ್ದಿತೆಂದು ಅದೇ ಶಾಸನವು ಹೇಳುತ್ತದೆ.[೨೪೪] ಇದರಿಂದ ನಾವು ನಿರ್ಣಯಿಸಬಹುದಾದುದೇನೆಂದರೆ, ಚಿತ್ರದುರ್ಗದ ನಾಯಕರು ಮಾರುಕಟ್ಟೆಯ ಬೆಲೆಯ ಏರಿಳಿತಗಳನ್ನು ಗಮನದಲ್ಲಿ ಇಟ್ಟುಕೊಂಡು ಅದಕ್ಕೆ ಹೊಂದಿಕೆಯಾಗುವಂತೆ ತಮ್ಮ ಕಂದಾಯ ನೀತಿಯನ್ನು ನಿರ್ವಹಿಸುತ್ತಿದ್ದರು. ಹೀಗೆ ಅವರು ಯಾವಾಗಲೂ ನ್ಯಾಯಸಮ್ಮತವಾದ ರೀತಿಯಲ್ಲಿ ಕಂದಾಯವನ್ನು ವಸೂಲಿ ಮಾಡುತ್ತಿದ್ದರು.

ಆರಂಭದ ಕಾಲದಲ್ಲಿ ಮಾನವನು ತನ್ನ ಅವಶ್ಯಕತೆಗೆ ತಕ್ಕಂತೆ ತೂಕ ಅಳತೆಗಳನ್ನು ಪ್ರಕೃತಿಯಿಂದ ಪ್ರೇರಿತವಾದ ವಸ್ತುಗಳಿಂದ ಮತ್ತು ತನ್ನ ದೇಹದ ಭಾಗಗಳ ಆಧಾರದ ಮೇಲೆ ಗುರುತಿಸಿ ರೂಪಿಸಿಕೊಂಡಿದ್ದನು. ಅವು ಉದ್ದ ಅಳತೆಗಾಗಿ ಅಂಗುಲ (ಕೈ ಬೆರಳುಗಳ ನಡುವಿನ ಮಡಿಕೆಯ ಭಾಘ) ಗೇಣು, ಮೊಳ, ಮಾರು ಮತ್ತು ಅಳತೆಗಾಗಿ ಚಿಟಿಕೆ, ಹಿಡಿ(ಮುಷ್ಠಿ) ಬೊಗಸೆ ಮತ್ತು ಬೆರಳುಗಳ ನಡುವಿನ ಸ್ಥಳವನ್ನು (ನಾಬಿ) ಹಾಗೂ ಕೆಲವೊಂದು ನಿರ್ದಿಷ್ಟವಾದ ಸಂಖ್ಯೆಯಲ್ಲಿ ಜೋಡಿಸಿದ ಧಾನ್ಯಗಳ ಅಳತೆಯನ್ನು ಘಟಕವಾಗಿ ಉಪಯೋಗಿಸಿಕೊಂಡಿರುವುದನ್ನು ಕಾಣಬಹುದು. ಅದರ ಮೇಲೆ ಹೆಚ್ಚಿನ ಅಳತೆಗಾಗಿ ಮಕ್ಕರಿ ಬುಟ್ಟಿ ಹಾಗೂ ಜಲ್ಲೆ ಮುಂತಾದವುಗಳಾಗಿದ್ದವು.

ಭೂಮಿಯ ಅಳತೆಗಾಗಿ ತನ್ನ ದೇಹದ ಎತ್ತರವನ್ನು (ಕೋಲಿಗೆ ಗುರುತಿಸುವುದರ ಮೂಲಕ) ಕೈಗಳನ್ನು, ಧ್ವನಿಯನ್ನು (ಕೂಗಳತೆ), ಪಾದ(ಅಡಿ) ಮತ್ತು ಹೆಜ್ಜೆಗಳನ್ನು ಬಳಸುತ್ತಿದ್ದರು.[೨೪೫] ನಾಯಕರ ಕಾಲದಲ್ಲಿ ಉಲ್ಲೇಖವಿರುವ ಒಂದು ಅಳತೆ ಮಾಪನವು ಮಾನವ ಬಲಗಾಲಿನ ಆರಂಭದಿಂದ ಎಡಗಾಲಿನ ಅರ್ಧ ಪಾದದವರೆಗಿನ ಭೂಮಿಯನ್ನು ೧೮ ಬಾರಿ ಅಳೆದರೆ ಅದು 'ಮೆತ್ತರು' ಎಂದು ಕರೆಯುತ್ತಿದ್ದರು.[೨೪೬] ಜೊತೆಯಲ್ಲಿ ಕೃಷಿ ಭೂಮಿಯನ್ನು ಗುರುತಿಸಲು ಎತ್ತುಗಳು ಒಂದು ದಿನದಲ್ಲಿ ಬಿತ್ತಬಹುದಾದ ಭೂಮಿಯನ್ನು, ಒಂದು ಸೇರು/ಕೊಳಗ ಬೀಜವನ್ನು ಬಿತ್ತಬಹುದಾದ ಭೂಮಿಯನ್ನು

ಅಥವಾ ೧ ಬುಟ್ಟಿ ಬೀಜವನ್ನು ಬಿತ್ತಲು ಬೇಕಾದ ಭೂಮಿಯನ್ನು ಒಂದು ಅಳತೆಯ ಘಟಕವಾಗಿ ಬಳಸಿರುವುದನ್ನು ಕಾಣಬಹುದು.

ಇವುಗಳ ಜೊತೆಯಲ್ಲಿ ತೂಕ ಅಳತೆಗಳಾಗಿ ಅವಶ್ಯಕವಿದ್ದ ತಕ್ಕಡಿಗಳನ್ನು (ದಂಡಿಗೆಗಳನ್ನು) ಲಭ್ಯವಿದ್ದ ಮರದ ಕೋಲಿನಿಂದ ತಯಾರಿಸಿಕೊಂಡು ತೂಗಲು ಅವಶ್ಯಕವಿದ್ದ ತೂಕದ ಬೊಟ್ಟುಗಳಿಗಾಗಿ ನಿತ್ಯ ಉಪಯೋಗಿಸುತ್ತಿದ್ದ ಧಾನ್ಯಗಳಾದ ಅಕ್ಕಿ, ಉದ್ದು, ಸಾಸುವೆ, ಹೆಸರು, ಶೇಂಗಾ, ಗೋಧಿ, ಹತ್ತಿ, ಕಾಳುಗಳನ್ನು ಬಳಸಿಕೊಂಡರು. ಅಲ್ಲದೆ ಎಲ್ಲ ಭಾಗಗಳಲ್ಲಿ ದೊರೆಯುತ್ತಿದ್ದ ಗುಲಗಂಜಿ, ಕಳಂಜ, ವಾಲ್ ಮುಂತಾದ ಬೀಜಗಳನ್ನು ಅವಶ್ಯಕತೆಗೆ ತಕ್ಕಂತೆ ತೂಕದ ಮೂಲ ಮಾನವಾಗಿ (ಘಟಕ) ಬಳಸಿಕೊಂಡರು. ಹೆಚ್ಚಿನ ತೂಕಗಳಿಗಾಗಿ ನದಿ/ಹೊಳೆಯಲ್ಲಿನ ಕಲ್ಲುಗಳನ್ನು ಇನ್ನು ಹೆಚ್ಚಿನ ತೂಕಕ್ಕೆ ಬೆಟ್ಟಗಳಲ್ಲಿ ದೊರೆಯುತ್ತಿದ್ದ ದೊಡ್ಡ ಕಲ್ಲುಗಳನ್ನು ಉಪಯೋಗಿಸಿರುವುದು ಕೆಲವೊಂದು ವಿರಳ ಸಮಯಗಳಲ್ಲಿ ಲೋಹದ ಬೊಟ್ಟು ಮತ್ತು ತಕ್ಕಡಿಗಳನ್ನು ತಯಾರಿಸಿಕೊಂಡು ಬಳಸಿರುವುದು ಕಂಡುಬರುತ್ತದೆ.

ಈ ಬೆಳವಣಿಗೆಗೆ ಮಾನವನು ತೆಗೆದುಕೊಂಡ ಸಮಯ ಅತಿ ದೀರ್ಘವಾದರೂ ಅವನು ಇವುಗಳನ್ನು ಬೆಳೆಸಿದ ರೀತಿಯನ್ನು ನಾವು ಮೆಚ್ಚಲೇಬೇಕು. ಆಧುನಿಕತೆ ಬೆಳೆದಂತೆ ೧೮ನೇ ಶತಮಾನದಲ್ಲಿ ಆದ ಕೈಗಾರಿಕಾ ಕ್ರಾಂತಿಯ ನಂತರ ಅದುವರೆಗೂ ಸಂಪ್ರದಾಯಿಕವಾಗಿದ್ದ ತೂಕ, ಅಳತೆಗಳನ್ನು ವಿಜ್ಞಾನ ಮತ್ತು ತಂತ್ರಜ್ಞಾನದೊಂದಿಗೆ ಅವುಗಳ ಮೂಲಮಾನವನ್ನು ವೈಜ್ಞಾನಿಕವಾಗಿ ಗುರುತಿಸಿ, ತೂಕ ಅಳತೆ ಯಂತ್ರಗಳನ್ನು ತಯಾರಿಸಿಕೊಂಡು ಬಳಸುತ್ತಿರುವುದನ್ನು ನೋಡುತ್ತೇವೆ.[೨೪೭]

ಆಧುನಿಕ ಯುಗದಲ್ಲಿ ನಾಯಕರ ಆಡಳಿತ ಅವಧಿ ಇರುವುದರಿಂದ ಅವರು ಬಳಸುತ್ತಿದ್ದ ಅಳತೆಯ ಮಾನದಂಡಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

| | | |
|---|---|---|
| ೧ ಖಂಡುಗ | = | ೪ ಪಂಚಕ |
| ೧ ಪಂಚಕ | = | ೫ ಕೊಳಗ |
| ೧ ಕೊಳಗ | = | ೪ ಬಳ್ಳ |
| ೧ ಬಳ್ಳ | = | ೪ ಮಾನ |
| ೧ ಮಾನ | = | ೪ ಸೊಲಿಗೆ |
| ೧ ಸೊಲಿಗೆ | = | ೪ ಗಿದ್ದಿಗೆ |
| ೧ ಭಾರ | = | ೨೦ ತೊಲ |
| ೧ ತೊಲ | = | ೫ ಬೀಸಗೆ |
| ೧ ಬೀಸಗೆ | = | ೨೦ ಪಲ |
| ೧ ಪಲ | = | ೪ ಕರ್ಷ |
| ೧ ಕರ್ಷ | = | ೪ ಸುವರ್ಣ[೨೪೮] |

೧೮೦೦ರಲ್ಲಿ ಬ್ರಿಟಿಶ್ ಅಧಿಕಾರಿಯಾದ ಬುಕಾನನ್ ಅಳತೆಯ ಮಾನದದ ಬಗ್ಗೆ

| | | |
|---|---|---|
| ೧ ಸೇರು | = | ೦.೬೦೬೭ ಪೌಂಡ್ |
| ೫ ಸೇರು | = | ೧ ಪಂಚೇರು- ೩.೦೩೩೫ ಪೌಂಡ್ |
| ೪ ಪಂಚೇರು | = | ೧ ಮಣ- ೨೪.೨೬೮೦ ಪೌಂಡ್ |
| ೨೦ ಮಣ | = | ೧ ಖಂಡುಗ-೪೮೫.೩೬೦೦ ಪೌಂಡ್[೨೪೯] |

ಎಂಬುದಾಗಿ ತಿಳಿಸಿದ್ದಾನೆ. ನಾಯಕರ ಕಾಲದಲ್ಲಿ ಭೂಮಿಯ ಫಲವತ್ತತೆಗೆ ಅನುಗುಣವಾಗಿ ೧/೩, ೧/೫, ೧/೬, ೧/೮ ಮತ್ತು ೧/೧೨ ಮುಂತಾದ ವಿಧಗಳಲ್ಲಿ ತೆರಿಗೆಯನ್ನು ವಿಧಿಸುತ್ತಿದ್ದರು. ಬರಡು ಅಥವಾ ಬಂಜರು ಭೂಮಿಗಳನ್ನು ಹಾಗೂ ಗುಡ್ಡ ಗಾಡು, ಅರಣ್ಯ ಪ್ರದೇಶಗಳನ್ನು ಕೃಷಿ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿ ಕೃಷಿಕರಿಗೆ ಕೆಲವು ವರ್ಷಗಳವರಿಗೆ ತೆರಿಗೆ ವಿನಾಯಿತಿಯೊಂದಿಗೆ ನೀಡಲಾಗುತ್ತಿತ್ತು. ಈ ಕೃಷಿ ಭೂಮಿಗಳು ಹೆಚ್ಚು ಮಾನವನ ಶ್ರಮವನ್ನು ಅವಲಂಬಿಸುತ್ತಿದ್ದವು. ಕೃಷಿಕನಿಗೆ ಇಂಥ ಭೂಮಿಗಳಲ್ಲಿ ಲಾಭಕ್ಕಿಂತ ನಷ್ಟವೇ ಹೆಚ್ಚಿನದಾಗಿತ್ತು. ಆದರೆ ಬೊಕ್ಕಸಕ್ಕೆ ಇದು ಲಾಭದಾಯಕವಾಗಿತ್ತು.

ಭೂ ತೆರಿಗೆ ಅಷ್ಟೇ ಅಲ್ಲದೇ ಕುಶಲಕರ್ಮಿಗಳ ಮೇಲಿನ ತೆರಿಗೆಯೂ ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಆದಾಯವನ್ನು ತರುತ್ತಿತ್ತು. ಕುಶಲಕರ್ಮಿಗಳ ಮೇಲೆ ವಿಧಿಸುತ್ತಿದ್ದ ವಿವಿಧ ತೆರಿಗೆಗಳ ಕುರಿತು ಅನೇಕ ಶಾಸನಗಳಲ್ಲಿ ಉಲ್ಲೇಖಗಳು ಸಿಗುತ್ತವೆ. ಬಡಗಿ, ಕಮ್ಮಾರ, ಅಕ್ಕಸಾಲಿಗ, ಕಂಚುಕಾರ(ಗಾರ) ಮತ್ತು ಶಿಲ್ಪಿ ಎಂಬ ಐದು ವಿಧವಾದ ಕೆಲಸಗಾರರನ್ನು ಒಟ್ಟಿಗೆ ಸೇರಿಸಿ ಪಂಚಾಳರು, ಪಂಚಕಾರುಕರು, ವಿಶ್ವಕರ್ಮರು, ಓಜರು ಮುಂತಾಗಿ ಹೆಸರಿಸಲಾಗಿದೆ. ಇವರೆಲ್ಲರಿಗೂ ಸಮಾನವಾಗಿ ಸೇರಿಸಿ ವಿಧಿಸುತ್ತಿದ್ದ ವೃತ್ತಿ ತೆರಿಗೆಯನ್ನು ಪಂಚಾಳ ತೆರಿಗೆ, ಪಂಚಕಾರುಕದೆರೆ, ವೋಜದೆರೆ, ಪಂಚಕಾರುಕ ವೆಡಿಕೆ ಮುಂತಾದ ಹೆಸರಿನಿಂದ ಕರೆಯಲಾಗಿದೆ. ದೇವಸ್ಥಾನಗಳಲ್ಲಿ ಗುತ್ತಿಗೆ ಕೆಲಸಗಾರರಾಗಿ ಕೆಲಸ ಮಾಡುತ್ತಿದ್ದ ಪಂಚಕಾಯಕದವರಿಂದ ಗುತ್ತಿಗೆ ಹಣವನ್ನು ಮತ್ತು ಸಂಬಳವನ್ನು ಇಡಿಯಾಗಿ ದೇವರಿಗಾಗಿ ವಸೂಲಿ ಮಾಡಿಕೊಡಬೇಕು ಎನ್ನುವ ತೀರ್ಮಾನವು ಇತ್ತು. ಪಂಚಕಾರು ಮತ್ತು ಕಾರುಕದೆರೆ ಎಂಬ ತೆರಿಗೆಗಳನ್ನು ಬಡಗಿಗಳು ಮತ್ತು ಲೋಹಕಾರರುಗಳೇ ಮೊದಲಾದ ಕಿರು ಕಲಾಕಾರರ ಮೇಲೆ ಹಾಕಲಾಗುತ್ತಿತ್ತು. ಹಾಗೂ ಕಲಾಕಾರರ ಮೇಲೆ ವಿಧಿಸುತ್ತಿದದ ತೆರಿಗೆಯನ್ನು ಕಾರುಕದೆರೆ ಅಥವಾ ಕಾರುಕಸೇವೆ ಎಂಬುದಾಗಿ ಕರೆಯಲಾಗುತ್ತಿತ್ತು.[೨೫೦]

ಶಾಸನಗಳಲ್ಲಿ ಉಕ್ತವಾಗಿರುವ ಕೆಲವು ಮಾಪನಗಳು ಇದ್ದು ಅವುಗಳನ್ನು ಪ್ರಸ್ತುತ ಹೇಳಿಕೆಯೊಂದಿಗೆ ನೋಡಿದಾಗ, ಅರ್ಕಾಲು (ಬಂದು ಪಾವಿನ ಅರ್ಧಭಾಗ), ಅಗ್ರ(ದಾನ ಕೊಡುವಾಗ ನೀಡುವ ಆಹಾರದ ಒಂದು ಅಳತೆ), ಅಗ್ರ (ಒಂದು ಪಲ್ಲದ ತೂಕ), ಅಚ್ಚು (ಎಂಬತ್ತು ಗುಲಗುಂಜಿಯ ತೂಕ), ಅಟವಿ (ಅರ್ಧ ಸೇರಿನ ಅಳತೆ), ಅಡ್ಡಿ (ಧಾನ್ಯಗಳನ್ನು ಅಳೆಯುವ ಮಾಪನ), ಆಳ್ಮೊಟ್ಟೆ (ಒಬ್ಬ ವ್ಯಕ್ತಿಯು ಹೊರಬಹುದಾದಷ್ಟು ಅಳತೆಯ ಚೀಲ), ವಗಳ (ಕಾಳು ತುಂಬಿದ ಐದು ಕೊಳಗಗಳ ಮಾಪನ), ಕಂಡುಗ (ಇಪ್ಪತ್ತು ಕೊಳಗ ಧಾನ್ಯದ ಮಾಪನ), ಕಂಡಿ (ಹತ್ತು ಮಣದ ಅಳತೆ), ಕಮ್ಮಿ (ಭೂಮಿಯನ್ನು ಅಳತೆ ಮಾಡುವ ಒಂದು ಪ್ರಮಾಣ), ಕವಳಿಗೆ (ವೀಳೆದೆಲೆ ಲೆಕ್ಕ ಹಕಲು ಬಳಸುತ್ತಿದ್ದ ಮಾಪನ), ಕಳರುಗುಣಿಗೆ (ಭೂಮಿಯನ್ನು ಅಳೆಯಲು ಬಳಸುತ್ತಿದ್ದ ಒಂದು ಅಳತೆಯ ಕೋಲು) ಕಾಡಿ (ಭತ್ತದ ಅಳತೆಯ ಪ್ರಮಾಣ), ಕುಂಟೆ (ಒಂದು ಎಕರೆ ಜಮೀನಿನ ನಲವತ್ತನೇ ಒಂದು ಭಾಗ), ಕುಳ (ನಾಲ್ಕು ಬಳ್ಳಗಳ ಒಂದು ಅಳತೆ), ತೊಂಬ (ಸುಮಾರು ಇಪ್ಪತ್ತು ಚೀಲ ಕಾಳು ಹಿಡಿಯುವ ಬಿದಿರಿನಿಂದ ತಯಾರಿಸಿದ ಅಳತೆಯ ಪ್ರಮಾಣ), ಕೈ (ನೂರು ವೀಳೆದೆಲೆಗಳ ಕಟ್ಟು), ಕೊಟ್ಲ (ಇಪ್ಪತ್ತೊಂದು ಕೊಳಗ), ಕೊರೆ (ಅರ್ಧ ತುಂಬಿದ ದವಸದ ಚೀಲ ಅಥವಾ ಬಿದಿರಿನ ವಸ್ತುಗಳು), ಕೊಳಗ (ಧಾನ್ಯಗಳನ್ನು ಅಳೆಯುವ ಒಂದು ಪ್ರಮಾಣದ ಸಾಧನ), ಗಜ (ಭೂಮಿಯನ್ನು ಅಳೆಯುವಾಗ

ಬಳಸುವ ಅಳತೆ ಪದ್ಧತಿ), ಗಳಿಗಿ (ಧಾನ್ಯ ಸಂಗ್ರಹಿಸಲು ಈಚಲು ಬರಲಿನಿಂದ ತಯಾರಿಸಿದ್ದ ಒಂದು ಸಾಧನ), ಗಾತ್ರ (ಒಂದು ಸಾವಿರ ವೀಳೆದೆಲೆಯ ಕಟ್ಟು), ಗುಲಿಕಲ್ಲು (ಜಮೀನುಗಳನ್ನು ಅಳತೆ ಮಾಡಿ ಎಲ್ಲೆಯನ್ನು ಸೂಚಿಸಲು ನೆಡುತ್ತಿದ್ದ ಕಲ್ಲು), ಗುಮ್ಮಿ (ಏಳರಿಂದ ಎಂಟು ಚೀಲ ಧಾನ್ಯ ಸಂಗ್ರಹಿಸುತ್ತಿದ್ದ ಮರದ ಪಾತ್ರೆ), ಜಿಟ್ಟೆ (ಒಂದು ನೂರು ವೀಳ್ಯೆದೆಲೆಯ ಕಟ್ಟು), ಚಾರಿ (ಅಳತೆಯ ಗಡಿಗೆ), ಚಿಂತಾಲು (ವಸ್ತುಗಳನ್ನು ತೂಕ ಮಾಡಲು ಬಳಸುತ್ತಿದ್ದ ತಕ್ಕಡಿ), ಚೀರಿ (ನೀರಾವರಿ ಭೂಮಿಯನ್ನು ಅಳೆಯಲು ಬಳಸುತ್ತಿದ್ದ ತಕ್ಕಡಿ), ನಗ (ಹತ್ತಿಯ ಗಾತ್ರವನ್ನು ಅಳೆಯುವ ಒಂದು ಮಾನದಂಡ), ಪಡ್ಲ (ರಾಶಿಯ ಗಾತ್ರವನ್ನು ಹೇಳಲು ಬಳಸುವ ಮಾಪನ), ಪತ್ತುರಿ (ತೆರಿಗೆ ಹಣವನ್ನು ಪಡೆಯುವವನು ಹಾಗೂ ಸಾರ್ವಜನಿಕ ದವಸಗಳನ್ನು ಅಳತೆ ಮಾಡುವವನು), ಪಲ್ಲ (ನೂರು ಸೇರು ಅಳತೆಯ ಪ್ರಮಾಣ), ಪಾವು (ಅಳತೆಯ ಸೇರಿನ ನಾಲ್ಕನೆ ಒಂದು ಭಾಗ), ಅರೆಪಾವು (ಸೇರಿನ ಎಂಟನೆಯ ಒಂದು ಭಾಗ), ಬಕ್ಕ (ನಲವತ್ತೆಂಟು ಸೇರಿನ ಅಳತೆ ಪ್ರಮಾಣ), ಬಳ್ಳ (ಎರಡು ಸೇರು ಅಳತೆ) ಮಣ (ತೂಕದ ಒಂದು ಪ್ರಮಾಣ ಸಾಮಾನ್ಯವಾಗಿ ಕಟ್ಟಿಗೆ ತೂಗಲು ಈ ಪದ ಬಳಸುತ್ತಿದ್ದರು), ಮಕ್ಕರಿ (ಹತ್ತು-ಹನ್ನೆರಡು ಸೇರು ಹಿಡಿಸುವಷ್ಟು ದೊಡ್ಡದಾದ ಬಿದಿರಿನ ಪುಟ್ಟಿ), ಮಾನ (ಎಣ್ಣೆಯನ್ನು ಅಳೆಯುತ್ತಿದ್ದ ಅಳತೆಯ ಮಾಪನ), ಮಾರು (ಮನುಷ್ಯ ತನ್ನ ಎರಡು ಕೈಗಳನ್ನು ಚಾಚಿದಾಗ ಅವನ ಎರಡು ಕೈ ಬೆರಳುಗಳವರೆಗಿನ ಅಂತರ, ಇದನ್ನು ಹೂವು, ಹಗ್ಗ ಮಾರುವ ವ್ಯಾಪಾರಿಗಳು ಹೆಚ್ಚಾಗಿ ಬಳಸುತ್ತಾರೆ), ಮೊಳ (ಮೊಣಕೈ ಗಂಟಿನಿಂದ ನಡು ಬೆರಳಿನ ತುದಿಯವರೆಗೆ ಅಳತೆ), ಲಿಂಗಮುದ್ರೆ ಕಲ್ಲು (ಹೊಲದ ಸೀಮೆಯನ್ನು ಗುರುತಿಸಲು ನೆಡುತ್ತಿದ್ದ ಕಲ್ಲು), ಸೇರ (ಕೊಳಗದ ನಾಲ್ಕನೆ ಒಂದು ಭಾಗ), ಸೊಲ್ಗೆ (ಅರ್ಧಸೇರಿನ ಅಳತೆ), ಹೆಡಿಗೆ (ಬಿದಿರಿನಿಂದ ಹೆಣೆದ ಅಳತೆಯ ಸಾಧನ),[೨೫೧] ಈ ರೀತಿಯಾಗಿ ಕೃಷಿಕ ಮತ್ತು ಕುಶಲಕರ್ಮಿಗಳ ಉತ್ಪಾದನೆಯನ್ನು ಅಳೆಯುವ ಸಾಧನಗಳನ್ನು ಬಳಸುತ್ತಿದ್ದರು.

ಇಷ್ಟೇ ಅಲ್ಲದೇ ದೇವಾಲಯಗಳಲ್ಲಿ ಕೆಲಸ ಮಾಡುತ್ತಿದ್ದ ದೇವಸೇವಕಿಯರು (ಸೂಳೆ ಸಮುದಾಯ) ಸೂಳೆದೆರೆ ಎನ್ನುವ ತೆರಿಗೆಯನ್ನು ಕೊಡಬೇಕಾಗಿತ್ತು. ಈ ತೆರಿಗೆಯನ್ನು ದೇವಾಲಯಗಳಿಗೆ ಬಿಟ್ಟುಕೊಡಲಾಗುತ್ತಿತ್ತು. ಇದರಿಂದಾಗಿ ಇದೊಂದು ಆದಾಯವನ್ನು ತರುವ ವೃತ್ತಿಯಾಗಿತ್ತು ಎನ್ನುವುದು ತಿಳಿದುಬರುತ್ತದೆ. ದೇವಸೇವಕಿಯರಿಗೆ ಮನೆ, ದ್ರವ್ಯಗಳು ದಾನವಾಗಿ ನೀಡಲಾಗುತ್ತಿತ್ತು. ಅವುಗಳ ಮೇಲೆ ತೆರಿಗೆಯನ್ನು ವಿಧಿಸುತ್ತಿದ್ದರು. ಕ್ರಿ.ಶ.೧೫-೧೬ನೇ ಶತಮಾನದಲ್ಲಿ ಈ ರೀತಿಯಾದ ವಿವಿಧ ತೆರಿಗೆಗಳ ಉಲ್ಲೇಖಗಳು ಶಾಸನಗಳು ಮತ್ತು ಸಾಹಿತ್ಯ ಕೃತಿಗಳಲ್ಲಿ ಅಪಾರ ಸಂಖ್ಯೆಯಲ್ಲಿ ಸಿಗುತ್ತವೆ. ಈ ತೆರಿಗೆಗಳು ಸಮಾಜದ ಎಲ್ಲ ವರ್ಗಗಳ ಮೇಲೂ ಹೇರಲ್ಪಟ್ಟಿದ್ದವು. ಆದರೆ ತೆರಿಗೆಗಳ ಸ್ವರೂಪ ಮತ್ತು ಪ್ರಮಾಣದಲ್ಲಿ ವ್ಯತ್ಯಾಸಗಳಿರುತ್ತಿದ್ದವು. ಅಧ್ಯಯನದ ಅವಧಿಯಲ್ಲಿ ಪ್ರಚಲಿತವಿದ್ದ ಕೆಲವೊಂದು ತೆರಿಗೆಗಳು ಈ ಕೆಳಗಿನಂತಿವೆ.

ಸಿದ್ದಾಯ : ಫಲವತ್ತಾದ ಭೂಮಿಯ ಮೇಲೆ ಹಾಕುತ್ತಿದ್ದ ತೆರಿಗೆ

ಮನೆದೆರೆ : ಮನೆಯ ಮೇಲೆ ಹಾಕುತ್ತಿದ್ದ ತೆರಿಗೆ

ವಡ್ಡರಾವುಳ : ವ್ಯಾಪಾರ ಸಾಮಗ್ರಿಗಳ ಮೇಲಿನ ಸುಂಕ

ಒಳಸುಂಕ : ಆಮದು ವಸ್ತುಗಳ ಮೇಲಿನ ಸುಂಕ

ಹೊರಸುಂಕ : ರಫ್ತು ಮೇಲಿನ ಸುಂಕ

| | | |
|---|---|---|
| ತಳರಸುಂಕ | : | ವ್ಯಾಪಾರಿಗಳು ತಳವಾರನಿಗೆ ಕೊಡಬೇಕಾದ ಸುಂಕ |
| ಬಂಡಿದೆರೆ | : | ಎತ್ತಿನ ಬಂಡಿ, ಕುದುರೆ ಮುಂತಾದ ಬಂಡಿಗಳ ಮೇಲಿನ ಸುಂಕ ಪಂಚಾಳ ತೆರಿಗೆ, |
| ಪಂಚಕಾರುಕದೆರೆ | : | ಕುಶಲಕರ್ಮಿಗಳ ವೃತ್ತಿ ತೆರಿಗೆ |
| ಬಡಗಿ ದೆರೆ | : | ಬಡಗಿಗಳ ಮೇಲೆ ವಿಧಿಸುತ್ತಿದ್ದ ತೆರಿಗೆ |
| ಕಬ್ಬುಣದೆರೆ | : | ಕಮ್ಮಾರ ಸುಂಕ, ಕುಲುಮೆದೆರೆ, ಕಮ್ಮಾರರ ಮೇಲೆ ವಿಧಿಸುತ್ತಿದ್ದ ತೆರಿಗೆ ಅಕ್ಕಸಾಲಿಯಾಯ, |
| ಸುವರ್ಣಾಯ | : | ಅಕ್ಕಸಾಲಿಗರ ಮೇಲೆ ವಿಧಿಸುತ್ತಿದ್ದ ತೆರಿಗೆ ಅಡೆಕಲುವಣ, |
| ಅಚ್ಚಿನ ಕಮ್ಮಟದೆರೆ | : | ಅಕ್ಕಸಾಲಿಗರು ಮತ್ತು ಕಮ್ಮಾರರು ವಸ್ತುಗಳ ಉತ್ಪಾದನೆಗೆ ಬಳಸುತ್ತಿದ್ದ ಉಪಕರಣಗಳ ಮೇಲಿನ ತೆರಿಗೆ |
| ಗಾಣದೆರೆ | : | ಗಾಣದ ಮೇಲಿನ ತೆರಿಗೆ |
| ಮಗ್ಗದೆರೆ | : | ನೇಕಾರರ ಮೇಲಿನ ತೆರಿಗೆ |
| ಆಲೆದೆರೆ | : | ಬೆಲ್ಲದ ಮೇಲಿನ ತೆರಿಗೆ |
| ಲವಣಾಯ | : | ಉಪ್ಪು ತಯಾರಿಕೆಯ ಮೇಲಿನ ತೆರಿಗೆ |
| ಕರ್ಬುಣ ಸುಂಕ | : | ಕಬ್ಬಣದ ಮೇಲಿನ ಸುಂಕ |
| ಕಳ್ಳವಳ್ಳಿಗೆ | : | ಕಳ್ಳರ ಮೇಲೆ ಹಾಕುತ್ತಿದ್ದ ದಂಡ |
| ಸೂಳೆದೆರೆ | : | ವೇಶ್ಯೆಯರ ಮೇಲೆ ಹಾರುತ್ತಿದ್ದ ತೆರಿಗೆ |
| ಕುರುಂಬದೆರೆ | : | ಕುರುಬರ ಮೇಲೆ ಹಾಕುತ್ತಿದ್ದ ತೆರಿಗೆ |
| ಕತ್ತರಿ ವಣ | : | ಚಿಪ್ಪಿಗರ ಮೇಲೆ ಹಾಕುತ್ತಿದ್ದ ತೆರಿಗೆ |
| ಅಳಿವಸತಾಯ | : | ಸೈನಿಕರ ವಸತಿಗಳ ಮೇಲೆ ಹಾಕುತ್ತಿದ್ದ ತೆರಿಗೆ |
| ಊರುಟ್ಟಿಗೆ | : | ಸಾರ್ವಜನಿಕ ಕೆಲಸಗಳ ತೆರಿಗೆ |
| ಒಸಗೆ | : | ಹಬ್ಬಕ್ಕೆಂದು ವಿಧಿಸುತ್ತಿದ್ದ ತೆರಿಗೆ |
| ಅಟ್ಟದೆರೆ | : | ಅಟ್ಟ (ಮಹಡಿ)ವನ್ನು ಹೊಂದಿದ್ದಕ್ಕೆ ತೆರಿಗೆ |
| ಅರುವಣ | : | ಮಾನ್ಯ ಮಾಡಿದ ಭೂಮಿಗಳ ಮೇಲಿನ ತೆರಿಗೆ |
| ತುಪ್ಪದೆರೆ | : | ತುಪ್ಪದ ಮೇಲಿನ ತೆರಿಗೆ |
| ತಿಪ್ಪೆಸುಂಕ | : | ತಿಪ್ಪೆಗಳ ಮೇಲಿನ ಸುಂಕ |
| ಬಳಂಬೆಯ ತೆರೆ | : | ಒಣವೆಗಳ ಮೇಲಿನ ತೆರಿಗೆ |
| ಬಿಟ್ಟಿ ಬೆಸ | : | ದೈಹಿಕ ಶ್ರಮಕ್ಕೆ ವಿಧಿಸುತ್ತಿದ್ದ ತೆರಿಗೆ |
| ಬಿಲ್ಕೊಡೆ | : | ಪ್ರಾಣಿಗಳ ಮೇಲೆ ಸಾಮಾನು ಸಾಗಿಸುವುದರ ಮೇಲಿನ ತೆರಿಗೆ |
| ಮದುವೆದೆರೆ | : | ಮದುವೆಗಳ ಮೇಲಿನ ಸುಂಕ |
| ಹಾಲಾವು | : | ಹಾಲು ಕೊಡುತ್ತಿದ್ದ ಹಸುವಿನ ಮೇಲಿನ ಸುಂಕ |

ಹೊಲೆದೆರೆ : ಹೊಲೆಯರ ಮೇಲೆ ವಿಧಿಸುತ್ತಿದ್ದ ತೆರಿಗೆ

ದೇವಿದೆರೆ : ರಾಣಿ ಹಳ್ಳಿಗೆ ಬಂದಾಗ ಕೊಡಬೇಕಾದ ತೆರಿಗೆ

ಕುಮಾರಗದ್ಯಾಣ : ಯುವರಾಜನು ಊರಿಗೆ ಬಂದಾಗ ಕೊಡಬೇಕಾದ ತೆರಿಗೆ

ಕಾಣಿಕೆ : ಹಿರಿಯ ಅಧಿಕಾರಿಗಳು ಊರಿಗೆ ಬಂದಾಗ ಕೊಡುವ ತೆರಿಗೆ

ಭತ್ತಾಯ : ಭತ್ತದ ಮೇಲಿನ ತೆರಿಗೆ

ಪನ್ನೆಯ : ವಿಳ್ಯೆದೆಲೆ ಬಳ್ಳಿಗಳ ಮೇಲಿನ ತೆರಿಗೆ

ಆನೆ ಸೇಸ : ರಾಜರ ಆನೆಗಳ ಮೇಲಿನ ತೆರಿಗೆ

ಆಡುದೆರೆ : ಆಡುಗಳ ಮೇಲಿನ ತೆರಿಗೆ

ಕುರಿದೆರೆ : ಕುರಿಗಳ ಮೇಲಿನ ತೆರಿಗೆ

ಪೆರ್ಜುಂಕ : ಹೇರುಗಳ ಮೇಲೆ ಹಾಕುತ್ತಿದ್ದ ತೆರಿಗೆ

ಮನ್ನೇಯ : ಅಧೀನರಾಜನಿಗೆ ಪೋಷಕನಾದ ತೆರಿಗೆ

ಕೆರೆ : ನೀರಾವರಿ ಮೇಲಿನ ತೆರಿಗೆ ಅಂಗಡಿ ಆಯ,

ಅಂಗಡಿದೆರೆ : ಖಾಯಂ ಅಂಗಡಿಯ ಮೇಲಿನ ತೆರಿಗೆ ಸಂತೆ, ಸುಂಕ,

ಸಂತೆಯ ಆಯ : ಸಂತೆಗೆ ಬರುವ ವಸ್ತುಗಳ ಮೇಲಿನ ಸುಂಕ ಕೀಳ್ವಟ್ಟೆ ಸುಂಕ,

ಮೇಲ್ವಟ್ಟೆ ಸುಂಕ : ಸಾರಿಗೆ ತೆರಿಗೆ

ಸೆಟ್ಟಿದೆರೆ, ಸೆಟ್ಟಿವಣ : ವರ್ತಕರ ಮೇಲಿನ ತೆರಿಗೆ

ನೆಲಮೆಟ್ಟು : ಕುದುರೆ ಅಥವಾ ಬೇರೆ ಪ್ರಾಣಿ ಕಟ್ಟುವ ಸ್ಥಳದ ಮೇಲಿನ ಸುಂಕ.[೨೫೨]

ಅತಿಯಾದ ತೆರಿಗೆಯನ್ನು 'ಸಂಗ್ರಹಿಸುವಲ್ಲಿ' ಗ್ರಾಮೀಣ ಗಣ್ಯರು ಯಶಸ್ವಿಯಾದರು. ತೆರಿಗೆಯನ್ನು ವಿರೋಧಿಸಿ ಇಲ್ಲವೇ ನಿರಾಕರಿಸಿ ನಿಲ್ಲುವಷ್ಟು ಸಾಮರ್ಥ್ಯ ಹಳ್ಳಿಗರಿಗೆ ಇರಲಿಲ್ಲ. ಆ ಕುರಿತು ಹೆಚ್ಚಿನ ದಾಖಲೆಗಳೂ ಸಿಗುವುದಿಲ್ಲ. ಭೂಮಾಲೀಕರ ವಿರುದ್ಧ ರೈತರು ಅಸಮಾಧಾನ ಹೊಂದುವುದು ಸಹಜ. ಏಕೆಂದರೆ ತೆರಿಗೆಯನ್ನು ಪಾವತಿಸಿದರೂ ಭೂಮಿಯ ಮೇಲಿನ ಸಂಪೂರ್ಣ ಹಕ್ಕು ಅವರಿಗೆ ಲಭ್ಯವಾಗಿರಲಿಲ್ಲ. ಅಧಿಕಾರಿಗಳು ಹಳ್ಳಿಗರನ್ನು ಹಿಂಸಿಸುತ್ತಿದ್ದರು[೨೫೩] ಎನ್ನುವುದಕ್ಕೆ ನಾಯಕರ ಸಮಕಾಲೀನ ದಾಖಲೆಯೊಂದು ಸುರಪುರ ಸಂಸ್ಥಾನದಲ್ಲಿ ದೊರಕಿದೆ. ರಾಜಮಾನ್ ರಾಜಶ್ರೀ ರಂಗಣ್ಣ ತಂದೆ ರಾಮಣ್ಣ ಧರಿ ಜಾಲಹಳ್ಳಿ ಸಾ.ಶೋರಾಪುರ ಇವರ ಹತ್ತಿರ ಪೀರಸಾ ತಂದೆ ಖಡೇಸಾ ನದಾಫ್ ಸಾ ಅರಕೇರಿ ಜಹಗೀರ ಸಾ.ಶೋರಾಪುರ ಇವರು ತಮ್ಮ ಅವಸರ ನಿಮಿತ್ಯ ಪ್ರತಿ ರೂಪಾಯಿಗೆ ಹನ್ನೆರಡು ಸೇರು ಜೋಳದಂತೆ ಪ್ರಮಾಣ ಮಾಡಿ ಆರು ರೂಪಾಯಿ ನಾಲ್ಕಾಣೆಯನ್ನು ಸಾಲವಾಗಿ ಪಡೆಯುತ್ತಾನೆ. ಈ ಪತ್ರದಲ್ಲಿ ಮಾಡಿಕೊಂಡಿರುವ ಕರಾರಿನಂತೆ ಸನ್ ಫಸಲಿ ೧೩೩೨ ಚೈತ್ರಶುದ್ಧ ೧೫ರ ನಂತರ ಪೀರಸಾ ಅವರು ಸ್ವಂತ ಊರಾದ ಅರಕೇರಿಯಲ್ಲಿ ಎಪ್ಪತ್ತೈದು ಸೇರು ಜೋಳವನ್ನು ತಾವು ನೀಡಿದ ಕಾಗದ ಪತ್ರವನ್ನು ವಾಪಸ್ಸು ಪಡೆಯಬಹುದಾಗಿದೆ ಎಂದು ಬರೆಯಲಾಗಿದೆ. ಒಂದು ವೇಳೆ ಒಪ್ಪಂದ ಮಾಡಿಕೊಂಡಿರುವಂತೆ ಎಪ್ಪತ್ತೈದು ಸೇರು ಜೋಳವನ್ನು ಕೊಡಲು ಆಗದೇ ಹೋದರೆ ಆರು ರೂಪಾಯಿ ನಾಲ್ಕಾಣೆ ಬದಲಾಗಿ ಹನ್ನೆರಡು ರೂಪಾಯಿ ಎಂಟಾಣೆ ಕೊಡಬೇಕಾಗುತ್ತದೆ ಎಂದೂ ಬರೆಯಲಾಗಿದೆ. ಶಕ ೧೮೪೪ ದುಂದುಬಿ ನಾಮ ಸಂವತ್ಸರ ಮಿತಿ ಪುಷ್ಯವದ್ಯ ೧೩೩೨ ಸನ್‌ಫಸಲಿಯಂದು

ಶಾಂತಪ್ಪ ಸಾ.ಅರಕೇರಿ ಜಹಾಗೀರ ಇವರು ಪ್ರಸ್ತುತ ಸ್ಟ್ಯಾಂಪ್ ಬರೆದಿರುವರು. ಭೀಮಪ್ಪ ತಂದೆ ವೀರಪ್ಪ ನಾಯಕೋಡಿ ಸಾ ಮಜಕೂರ ಇವರು ಈ ಸಾಲ ಪತ್ರಕ್ಕೆ ಸಾಕ್ಷಿಯಾಗಿದ್ದಾರೆ.[೨೫೪]

ಒಟ್ಟಾರೆಯಾಗಿ ಮೇಲಿನ ಚರ್ಚೆಯಿಂದ ನಾವು ಈ ಕೆಳಗಿನ ನಿರ್ಣಯಗಳಿಗೆ ಬರಬಹುದು. ಮೊದಲನೆಯದಾಗಿ, ಪ್ರಸ್ತುತ ಅಧ್ಯಯನದ ಅವಧಿಯಲ್ಲಿ ಕರ್ನಾಟಕದಲ್ಲಿ ಆಳಿದ ಚಿತ್ರದುರ್ಗದ ನಾಯಕರು ರೈತರಿಂದ ೧/೬ ಪಾಲನ್ನು ಪಡೆಯಬೇಕು ಎಂಬ ಪ್ರಾಚೀನ ಸಂಪ್ರದಾಯವನ್ನು ಕೈಬಿಟ್ಟಿದ್ದರು. ಆದರೆ ಸುದೀರ್ಘ ಆಡಳಿತಾವಧಿಯಲ್ಲಿ ಅವರು ರೈತರ ಮೇಲೆ ದಮನಕಾರಿ ತೆರಿಗೆ ಪದ್ಧತಿಯನ್ನು ಹೇರಲು ಸಾಧ್ಯವಿರಲಿಲ್ಲ. ಏಕೆಂದರೆ ಅಂತಹ ನೀತಿಯಿಂದ ರೈತರು ಬೇರೆ ಕಡೆಗೆ ಓಡಿಹೋಗಿಬಿಡುತ್ತಿದ್ದರು. ಅದು ಅರಸರಿಗೆ ಅಪೇಕ್ಷಣೀಯವಾಗಿರಲಿಲ್ಲ. ಅಲ್ಲದೆ ಎಲ್ಲ ಕಡೆಯೂ ಧಾರಾಳವಾಗಿ ನೆಲವು ದೊರಕುತ್ತಿದ್ದುದರಿಂದ ನೆಲದ ಮೇಲೆ ಜನರ ಒತ್ತಡ ಇರಲಿಲ್ಲವಾದ್ದರಿಂದ, ಅತಿರೇಕದ ತೆರಿಗೆ ವಿಧಿಸಿದರೆ ರೈತರು ಬೇಸತ್ತು ಬೇರೆ ಕಡೆಗೆ ಹೋಗಿಬಿಡಬಹುದು ಎಂದು ಭೀತಿ ರಾಜರಲ್ಲಿ ಇರುತ್ತಿತ್ತು. ಆದ್ದರಿಂದ ರೈತರು ಅಲ್ಲೇ ಉಳಿಯುವಂತೆ ಮಾಡಿ ಕೃಷಿಯನ್ನು ವಿಸ್ತರಿಸಿ ತಮ್ಮ ಉದ್ದೇಶವನ್ನು ಅವರು ಪೂರೈಸಿಕೊಳ್ಳುತ್ತಿದ್ದರು.

ಎರಡನೆಯದಾಗಿ, ಈ ಕಾಲಾವಧಿಯ ರಾಜರು ಒಂದಲ್ಲೊಂದು ಬಗೆಯಾಗಿ ನೆಲ ಅಳತೆ ಮಾಡುವ ವಿಧಾನವನ್ನು ರೂಪಿಸಿಕೊಂಡಿದ್ದರು. ಹಲವು ಅಳತೆಗೋಲುಗಳು ಉಪಕರಣಗಳು ದೊರಕಿವೆ. ಮೇಲಿನ ಮಾತನ್ನು ಸಮರ್ಥಿಸಿವೆ. ಚಿತ್ರದುರ್ಗದಲ್ಲಿ ಆಗಲೆ ಇದ್ದ ಅಳತೆಗಳನ್ನು ಬಳಸುವುದು ಮಾತ್ರವಲ್ಲದೆ ಹೊಸ ಅಳತೆಗಳನ್ನು ಪರಿಚಯಗೊಳಿಸಲಾಗಿತ್ತು.

ಮೂರನೆಯದಾಗಿ, ಈ ಅವಧಿಯಲ್ಲಿ ಅರಸರು ಬೇಧಾತ್ಮಕ ತೆರಿಗೆ ಪದ್ದತಿಯನ್ನು ಅನುಸರಿಸಿದರು. ಅಂದರೆ ಗದ್ದೆಗಳು ಹೊಲಗಳಿಗಿಂತ ಹೆಚ್ಚಿನ ಆದಾಯ ಕೊಡಬೇಕಾಗಿತ್ತು. ಗದ್ದೆಗಳನ್ನು ವಿವಿಧ ವರ್ಗಗಳನ್ನಾಗಿ ವಿಭಜಿಸಲಾಗಿತ್ತು. ಚಿತ್ರದುರ್ಗ ಪ್ರದೇಶದಲ್ಲಿ ಮಣ್ಣಿನ ಲಕ್ಷಣ, ಫಲವಂತಿಕೆ ಮತ್ತು ಪರಿಸ್ಥಿತಿಗಳ ಆಧಾರದಿಂದ ಕೃಷಿ ಭೂಮಿಯನ್ನು ವಿಭಜಿಸುವ ಪದ್ಧತಿಯಿತ್ತು. ಅಂದರೆ ಅವರು ಎಲ್ಲ ಜಮೀನುಗಳಿಗೂ ಒಂದೇ ಬಗೆಯಾಗಿ ಕಂದಾಯ ನಿಗದಿ ಮಾಡುತ್ತಿರಲಿಲ್ಲ ಎಂಬುದು ಇದರಿಂದ ಸೂಚಿತವಾಗುತ್ತದೆ.

ಕೊನೆಯದಾಗಿ ವಿವಿಧ ರಾಜವಂಶಗಳು ತಮ್ಮದೇ ತೆರಿಗೆ ದರವನ್ನು ನಿಗದಿಪಡಿಸಿಕೊಂಡಿದ್ದರು. ಉದಾ: ಚಿತ್ರದುರ್ಗ ನಾಯಕರು ವಿಜಯನಗರದ ಅರಸ ರೇಖಾ ಪದ್ಧತಿಯನ್ನು ರೂಪಿಸಿಕೊಂಡರೆ, ಕೆಳದಿಯ ಅರಸರು ಶಿಸ್ತು ಪದ್ದತಿಯನ್ನು ವಿಕಾಸಪಡಿಸಿದರು. ಸರಕಾರದ ಅಗತ್ಯಗಳು, ಕೃಷಿಯೇತರ ವರ್ಗಗಳು ಮತ್ತು ಮೂಲ ಬೆಳೆಗಾರರು ಇವರುಗಳ ಅಗತ್ಯಗಳನ್ನು ಪೂರೈಸಿದ ಮೇಲೂ ಚಿತ್ರದುರ್ಗ ನಾಯಕರ ಕಾಲದಲ್ಲಿ ಕೃಷಿ ಉತ್ಪನ್ನಗಳನ್ನು ಹೆಚ್ಚುವರಿಯಾಗಿಯೇ ಉತ್ಪಾದಿಸಲಾಗುತ್ತಿತ್ತು. ಅದನ್ನು ವ್ಯಾಪಾರದ ಮೂಲಕ ವಿನಿಯೋಗ ಮಾಡಲಾಗುತ್ತಿತ್ತು.

**೫.೮. ಬಿಟ್ಟಿ ಸೇವೆ**

ಪ್ರಾಚೀನ ಮತ್ತು ಮಧ್ಯಕಾಲೀನ ಚರಿತ್ರೆಯಲ್ಲಿ 'ಬಿಟ್ಟಿ' ದುಡಿಮೆಯು ಜನಸಾಮಾನ್ಯರಿಗೆ ಕಡ್ಡಾಯವಾಗಿತ್ತು. ಮನು ಮತ್ತು ಸ್ಮೃತಿಕಾರರು ಹೇಳಿರುವಂತೆ ಕುಶಲಕರ್ಮಿಗಳು ಮತ್ತು ಶೂದ್ರರು ರಾಜ್ಯಕ್ಕೆ ತಿಂಗಳಲ್ಲಿ ಎರಡು ದಿನ ಪುಗಸಟ್ಟೆ ದುಡಿಯಬೇಕಾಗಿತ್ತು. ಯಾವುದೇ ಪ್ರತಿಫಲವನ್ನು ಅಪೇಕ್ಷಿಸುವಂತಿರಲಿಲ್ಲ.

ಕ್ರಿ.ಶ.೧೨೧೩ರ ಧಾರವಾಡದ ಶಾಸನವು ಸೇವೆಯಿಂದಲೇ ಕುಶಲಕರ್ಮಿಗಳು ಮತ್ತು ಶೂದ್ರರು 'ಬಿಟ್ಟಿ'ಯಾಗಿ ದುಡಿಯುತ್ತಿದ್ದದನ್ನು ತಿಳಿಸುತ್ತದೆ. ರಾಧಾಕಮಲ್ ಮುಖರ್ಜಿಯವರು 'ಬಿಟ್ಟಿ' ಕ್ರಮವು ನೀರಾವರಿ ಕಾರ್ಯಗಳನ್ನು ಕೈಗೊಳ್ಳುವಾಗ ಒತ್ತಾಯಪೂರ್ವಕವಾಗಿ ಮಾಡಬೇಕಾಗಿತ್ತು ಎಂದು ಅಭಿಪ್ರಾಯ ಪಡುತ್ತಾರೆ. ಬಿಟ್ಟಿ ಸೇವೆಯಿಂದ ತಂಜಾವೂರಿನ ಬೃಹದೇಶ್ವರ ದೇವಾಲಯವು ನಿರ್ಮಾಣವಾಗಿರುವುದು ಎಂದು ಅಭಿಪ್ರಾಯಪಡಲಾಗಿದೆ. ಕರ್ನಾಟಕದಲ್ಲೂ 'ಬಹುತೇಕ ನೀರಾವರಿ ಕೆರೆಗಳು ಮತ್ತು ದೇವಾಲಯಗಳು 'ಬಿಟ್ಟಿ' ಕ್ರಮಗಳಿಂದ ನಿರ್ಮಾಣಗೊಂಡಿದ್ದೇ ಆಗಿವೆ ಎಂದರೆ ಆಶ್ಚರ್ಯಪಡಬೇಕಾಗಿಲ್ಲ.[೨೫೪]

ಬಿಟ್ಟಿ ಸೇವೆಯನ್ನು ಮಾಡಿಸಿಕೊಳ್ಳುವಲ್ಲಿ ಸಮಾಜದ ಉನ್ನತ ವರ್ಗದ ಜೊತೆ ಪ್ರಭುತ್ವವು ಕೈಜೋಡಿಸಿತ್ತು ಎನ್ನುವಂತೆ, ನಾಯಕರ ಕಾಲದಲ್ಲಿ ಬ್ರಾಹ್ಮಣರಿಗೆ ದತ್ತಿ ಜಮೀನುಗಳನ್ನು ಕೊಟ್ಟಿದ್ದರಿಂದ ಗ್ರಾಮೀಣ ನೆಲೆಗಳು ಖಾಸಗಿ ಪ್ರಯತ್ನದಿಂದ ಬೆಳೆದವು ಎಂದು ಕೋಸಾಂಬಿ ಸೂಚಿಸಿದ್ದಾರೆ. ಮಧ್ಯ ಹಾಗೂ ದಕ್ಷಿಣ ಭಾರತದ ಹಿಂದುಳಿದ ಪ್ರದೇಶಗಳಲ್ಲಿ ಇಂತಹ ನೆಲೆಗಳು ಅಸ್ತಿತ್ವಕ್ಕೆ ಬಂದವೆಂದು ತೋರುತ್ತದೆ. ಅಭಿವೃದ್ಧಿಪಡಿಸಿದ, ಪಾಳುಬಿದ್ದ ಹೆಚ್ಚುವರಿ ಭೂಮಿಯನ್ನು ಸಮಾಜದ ತಳಸಮುದಾಯದ ಜನರಿಗೆ ಬಿಟ್ಟುಕೊಟ್ಟಿರುವ ಸಾಧ್ಯತೆಯಿದೆ. ಮೂಲನಿವಾಸಿ ಕೃಷಿಕಾರರನ್ನೂ ಬ್ರಾಹ್ಮಣವಾದಿ ಸಾಮಾಜಿಕ ವ್ಯವಸ್ಥೆಯ ಶೂದ್ರಶ್ರೇಣಿಯಲ್ಲಿ ಸೇರಿಸಿಕೊಳ್ಳಲಾಯಿತು. ಹಿಂದಿನ ಸಾಂಪ್ರದಾಯಿಕ ಶ್ರೇಣಿ ವ್ಯವಸ್ಥೆಯಲ್ಲಿ ಶೂದ್ರರು ಗುಲಾಮರಾಗಿಯೂ, ಕೂಲಿಕಾರರಾಗಿಯೂ ದುಡಿದವರಾಗಿದದರು. ಆದರೆ ಈ ಕಾಲದಲ್ಲಿ ನಾಯಕರ ಹಾಗೂ ಸಮಕಾಲೀನ ಪಠ್ಯಗಳಲ್ಲಿ ಸಮಾಜದ ಕೆಳವರ್ಗಗಳ ಜನರನ್ನು ಕೃಷಿಕರೆಂದೇ ಕರೆಯಬೇಕಾಯಿತು.[೨೫೫]

ಕೆಳ ಸಮುದಾಯಗಳು ಭೂ ಮಾಲೀಕರಾಗಿದ್ದರು ಎಂಬುದಕ್ಕೆ ಶಾಸನದಲ್ಲಾಗಲಿ, ಸಾಹಿತ್ಯ ಕೃತಿಯಲ್ಲಾಗಲಿ ಯಾವುದೇ ಸೂಚನೆಯೂ ಇಲ್ಲ. ಒಂದು ವೇಳೆ ಕೃಷಿ ಯೋಗ್ಯವಲ್ಲದ ಭೂಮಿ ಹೊಂದಿದ್ದರೂ ಅದರ ಮೇಲೆ ವಿಪರೀತ ತೆರಿಗೆ ವಿಧಿಸುತ್ತಿದ್ದು ಅದನ್ನು ಪ್ರತಿಭಟಿಸುವ, ನಿರಾಕರಿಸುವ ಯಾವ ಘಟನೆಗಳೂ ದಾಖಲೆಯಾಗಿಲ್ಲ. ಅಧಿಕಾರಿಗಳ ದಬ್ಬಾಳಿಕೆಯ ದರ್ಪದಲ್ಲಿ ಅವರ ಬದುಕು ಮರೆಯಾಗಿದೆ. ಹಾಗಾಗಿ ವೃತ್ತಿಯಾಗಿ ವ್ಯವಸಾಯ ಅವರಿಗೆ ನಿಷಿದ್ಧ. ಈ ಕಾರಣದಿಂದಲೇ ಅವರು ಹಸು, ಎತ್ತುಗಳನ್ನು ಸಾಕುತ್ತಿದ್ದರೆಂಬುದಕ್ಕೂ ಸೂಚನೆಗಳೂ ಇಲ್ಲ. ಅವರು ಎಂದಿನಿಂದಲೂ ಹೊಲಗಳಲ್ಲಿ ಕೆಲಸ ಮಾಡುವ ಜೀತದಾಳುಗಳು. ಗೌಡರ ಅಥವಾ ಹಳ್ಳಿಯ ಪ್ರಬಲ ರೈತಾಪಿ ಮನೆಗಳಿಗೆ ಒಂದೊಂದು ಹೊಲೆಯರ ಕುಟುಂಬ ಸೇವಕರಾಗಿದ್ದು, ರೈತನ ಯಾವುದೇ ಕೆಲಸವನ್ನು ಅವರು ಮಾಡಿಕೊಡಬೇಕು. ಅವನನ್ನು 'ಆಳ್ಮಗ' ಎಂದೂ ಕೆಲವೆಡೆ ಕರೆಯುವುದುಂಟು. ಸಕಲೇಶಪುರ ಪ್ರದೇಶದಲ್ಲಿರುವ 'ಗಡ್ಡ ಮಂಡೆ ಪದ್ಧತಿ'ಯ ಇಲ್ಲಿ ತಿಳಿಯುವುದು ಪ್ರಸ್ತುತವಾಗುತ್ತದೆ. ಊರಿನ ಗೌಡನ ಕೆಲಸಕ್ಕೆ ಮೀಸಲಾದ 'ಹುಟ್ಟಾಳು ಹೊಲೆಯರು' ಇರುತ್ತಾರೆ. "ಹುಟ್ಟಿನಿಂದಲೇ ಅವರು ಗೌಡನ ಮನೆಯ ಆಳಾಗುತ್ತಾರೆ."[೨೫೬] ಮದುವೆ, ಸಾವು, ಗೃಹಪ್ರವೇಶ, ಜಾತ್ರೆ-ಉತ್ಸವ ಇತ್ಯಾದಿಗಳಲ್ಲಿ ಹುಟ್ಟಾಳುವಿನ ಪಾತ್ರ ಗಣನೀಯವಾದುದು. ಗೃಹಪ್ರವೇಶದ ದಿನ ಬಲಿ ತೆಗೆಯಲು ಹಾಕಿದ ಅನ್ನವನ್ನು ಹುಟ್ಟಾಳು ಹೊಲೆಯನು ಗೌಡನ ಯಾವ ಗದ್ದೆಗೆ ಹಾಕುತ್ತಾನೋ ಅದು ಹುಟ್ಟಾಳು ಹೊಲೆಯನ ಸಂತತಿಯ ಆಸ್ತಿಯಾಗುತ್ತದೆ. ಗೌಡ ಸತ್ತಾಗ ಅವನ ಸ್ವಂತ ಮಗನಿಗಿಂತ ಮಿಗಲಾದ ಪಾತ್ರ ಹುಟ್ಟಾಳಿನದು. ಆ

ದಿನ ಅವನು ಗಡ್ಡ ಮಂಡೆಗಳನ್ನು ನುಣ್ಣಗೆ ಬೋಳಿಸಿಕೊಳ್ಳುತ್ತಾನೆ. (ಆ ಕಾರಣ ಅವರನ್ನು 'ಗಡ್ಡೆ ಮಂಡೆ ಒಕ್ಕಲಿನವರು ಅನ್ನುತ್ತಾರೆ) ಹೀಗೆ ಗಡ್ಡ ಮಂಡೆ ತೆಗೆಸಿಕೊಂಡಾದ ಮೇಲೆ ಸ್ನಾನ ಮಾಡಿ ತಲೆಗೆ ಎಣ್ಣೆ ಹಚ್ಚಿಕೊಂಡು ಗೌಡರ ಮನೆಯವರು ಕೊಟ್ಟ ಹೊಸ ಬಟ್ಟೆ ಉಟ್ಟು ಶವದ ಹತ್ತಿರ ಕುಳಿತಿರುತ್ತಾನೆ. ಶವದ ಬಾಯಿಗೆ ಇಟ್ಟ ತಾಂಬೂಲವನ್ನು ಗಡ್ಡ ಮಂಡೆ ಹೊಲೆಯನಿಗೆ ಕೊಟ್ಟಾಗ ಅವನು ಅಗಿದು ಅದನ್ನು ಗೌಡನ ಯಾವ ಗದ್ದೆಗೆ ಉಗಿಯುತ್ತಾನೋ ಅದು ಅವನಿಗೆ ಸೇರುತ್ತದೆ. ಹನ್ನೊಂದನೆಯ ದಿನದ ತಿಥಿಗೆ ಬಂದಾಗ ಅವನಿಗೆ ಗೌಡ ಬಳಸುತ್ತಿದ್ದ ಹಾಸಿಗೆ, ಹೊದಿಕೆ, ತಟ್ಟೆ, ಲೋಟ, ಬಟ್ಟೆ ಕೊಟ್ಟು ಕಳಿಸುತ್ತಾರೆ.

ಈ ಸಂಪ್ರದಾಯವನ್ನು ಸರಿಯಾದ ವಿವರಗಳೊಡನೆ ದಾಖಲು ಮಾಡಿ ಎಚ್ಚರಿಕೆಯಿಂದ ವ್ಯಾಖ್ಯಾನಿಸಬೇಕಾಗಿದೆ. ಹೊಲೆಯ ಸಮುದಾಯದವನು ಹುಟ್ಟಿನಿಂದ ತನ್ನ ಗೌಡನ ಮನೆಯಲ್ಲಿ ಮಾಡುತ್ತಿದ್ದ ಕೆಲಸಕ್ಕೆ ಯಾವುದೇ ವೇತನವಿಲ್ಲದೇ ಬಿಟ್ಟಿ ಸೇವೆಯನ್ನು ಮಾಡುವುದರ ಜೊತೆಗೆ ಅವನು ಯಾವುದೇ ವಿವಾಹಿತ ಬದುಕನ್ನು ಮಾಡುವಂತಿಲ್ಲ. ಒಂದು ವೇಳೆ ಗೌಡ ಸಾಯದೇ ಹೋದರೆ ಅವನಿಗೆ ಯಾವುದೇ ಆಸ್ತಿಯ ದೊರಕದೇ ಇವನೇ ಬೇಗ ಸತ್ತರೆ ಅವನ ಜೀವನದ ಮೌಲ್ಯ ಅಳೆಯಬೇಕಾಗುತ್ತದೆ.[೨೫೭]

ಈ ರೀತಿಯಾದ ಸಾಮಾಜಿಕ ಚೌಕಟ್ಟಿನಲ್ಲಿ ವರ್ಗ ವ್ಯವಸ್ಥೆಯು ವಿಭಿನ್ನ ನೆಲೆಗಳಲ್ಲಿ ಈ ಕಾರ್ಯವನ್ನು ಮುಂದುವರಿಸಿತು. ಜನಸಾಮಾನ್ಯರು ರಾಜ್ಯಕ್ಕೆ ಸಲ್ಲಿಸಬೇಕಾದ ತೆರಿಗೆಗಳಲ್ಲಿ 'ಬಿಟ್ಟಿ'ಯು ಒಂದು. ರಾಜನು ತನಗೆ ಇಷ್ಟ ಬಂದಾಗ ತನ್ನ ಅಧೀನದಲ್ಲಿರುವ ಯಾರನ್ನೇ ಆಗಲಿ ಪ್ರತಿಫಲವಿಲ್ಲದೆ ಕೆಲಸ ಮಾಡುವಂತೆ ಆಜ್ಞೆ ಮಾಡಬಹುದಾಗಿತ್ತು. ರಾಜನು ದೇಶದಲ್ಲಿ ಸಂಚರಿಸುತ್ತಿರುವಾಗ ಅವನ ಆನೆ, ಕುದುರೆಗಳಿಗೆ ಹುಲ್ಲನ್ನು ಕೊಯ್ದು ಹಾಕುವುದು, ಆಯುಧಾದಿಗಳನ್ನು ಹೊರುವುದು, ಗಾಯಗೊಂಡವರನ್ನು ಹೊತ್ತು ತರುವುದು ಇವೆಲ್ಲವು ಬಿಟ್ಟಿ ಕೆಲಸಗಳೇ. ಇವು ನಾಯಕರ ಕಾಲದಲ್ಲಿ ನಡೆಯುತ್ತಿದ್ದ ಬಿಟ್ಟಿ ಕಾರ್ಯಗಳು.[೨೫೮] ಕೆಲವೊಮ್ಮೆ ಬಿಟ್ಟಿಯು 'ದಾಸ್ಯ'ಕ್ಕೆ ಇರುವ ಇನ್ನೊಂದು ಹೆಸರು. ಯುದ್ಧದಲ್ಲಿ ಸೋತವರನ್ನು ಆಳುಗಳಾಗಿ ನೇಮಿಸಿಕೊಳ್ಳುತ್ತಿದ್ದರು. ಸಂತೆಯಲ್ಲಿ ಎತ್ತು, ಕುದುರೆಗಳ ಮಾರಾಟದ ಜೊತೆಗೆ 'ತೊತ್ತುಗಳ'ಗಳ ಮಾರಾಟವೂ ನಡೆಯುತ್ತಿದ್ದಿತೆಂದು ಹೇಳಲಾಗಿದೆ.[೨೫೯] ನಾಯಕರ ಒಂದು ಶಾಸನದಲ್ಲಿ ಇರುವಂತೆ ಅಧಿಕಾರಿಯು ಪಡೆಯುತ್ತಿದ್ದ ಬಿಟ್ಟಿ ಸೇವೆಗಳ ಬಗ್ಗೆ ಈ ಕೆಳಗಿನಂತೆ ವಿವರಗಳು ಇವೆ:

ವಿರೂಪಾಕ್ಷ ಜೋಯಿಸರ ಮಗ ಪರಶುರಾಮಪ್ಪನಿಗೆ ಸರ್ವಾಧಿಕಾರವಿತ್ತು. ಇವನು ನಾಗತಿಯರಲ್ಲಿ ತಿಮ್ಮಣ್ಣ ನಾಯಕರಲ್ಲಿ ಅಪಾರ ನಂಬಿಕೆ ಇರುವ ವ್ಯಕ್ತಿಯಾಗಿದ್ದನು. ಇವನನ್ನು ನಾಯಕರು ಲಿಂಗದಹಳ್ಳಿ ಪಟ್ಟಡಿ ೧ಕ್ಕೆ ೧೬ ಗ್ರಾಮದ ಶ್ಯಾನಭೋಗತನಕ್ಕೆ ನೇಮಿಸಿದ್ದರು. ಇದಕ್ಕೆ ಸಂಬಂಧಿಸಿದಂತೆ ಆಯಾ ಗ್ರಾಮದ ಗೌಡ, ತಳವಾರ ಮುಂತಾದ ಆಯಗಾರರು ಕರೆಸಿ ಪರಶುರಾಮಪ್ಪನ ಮಕ್ಕಳಾದ ಯಲ್ಲಪ್ಪ, ಭೂನಪ್ಪ ಇವರಿಗೆ ಶಾನುಭೋಗ ವೃತ್ತಿಯನ್ನು ಮಾಡುವಾಗ ಅರಮನೆ ಕೆಲಸ, ಸ್ಥಳ ಮನೇಸಾಗು, ಸಂತು, ಎತ್ತುವಳಿ, ಮೊದಲಾದ ಕೆಲಸಗಳನ್ನು ಮಾಡುತ್ತಿರುವಾಗ ಅವರಿಗೆ ಅವರು ಬಂದ ಸ್ಥಳದಲ್ಲಿ ನಡೆಯಬೇಕಾದ ಮರ್ಯಾದೆಯನ್ನು ನಿಗದಿ ಮಾಡಿಸಿದ್ದು ಈ ಕೆಳಗಿನಂತಿದೆ:

ಗ್ರಾಮ ಒಂದಕ್ಕೆ

೧ ಹೊಲ

೧ ಕೆರೆ ಹಿಂದೆ ಗದ್ದೆ

೧ ತೋಟ

೧ ಮಳಲು ಗ್ರಾಮದಲ್ಲಿ ಎರಡು ಎತ್ತಿನ ಗಳೆ ೧ಕ್ಕೆ ಅಳವತ್ತ (ಅಳೆಯುವ ಭತ್ತ), ೧ ಐದು ಕೊಳಗ

೧ ಎರೆ ಗ್ರಾಮದಲ್ಲಿ ಎಂಟೆತ್ತಿನ ಗಳ ೧ಕ್ಕೆ ಆಳೆವತ್ತ ೧೧, ಹತ್ತು ಕೊಳಗ, ಹೊರೆಹುಲ್ಲು, ಮೊರಭತ್ತ, ಬೊಗೆವತ್ತ (ಬೊಗಸೆ ಭತ್ತ) ಸೊಲಗೆ ೩

೧ ರೈತರು ತರುವ ಕಂದಾಯಕ್ಕೆ ದುರ್ಗಿ ೧, ವರಹ ೧ಕ್ಕೆ ರುಸುಮು ೧, ಹಾಗದ ಕಾಸು,

೧ ಅಂಗಡಿ ೧ಕ್ಕೆ ದಿನ ೧ಕ್ಕೆ ದುಗ್ಗಾಣಿ ತೂಕ ಅಡಕೆ ೧೦ ವೀಳಯದೆಲೆ

೧ ಜಾಡರ ಮಗ್ಗ ೧ಕ್ಕೆ, ಕಾಗದ ಕಾಸು

೧ ಗೊಲ್ಲರ ಹಟ್ಟಿ ೧ಕ್ಕೆ ವರುಷ ೧ಕ್ಕೆ ೧ ಕುರಿ ಮತ್ತು ಅಗಸರು ಹಡದಿ ಸೀರೆ ಮುಂತಾಗಿ ನಡೆಸಿಕೊಡಬೇಕೆಂದು ದೊರೆಯು ತಾನೇ ಅಪ್ಪಣೆ ಮಾಡಿದನು[೬೦] ಎಂದು ಹೇಳಿದೆ.

ಈ ರೀತಿಯ ಕಾರ್ಯಗಳನ್ನು ಪ್ರಾಚೀನ ಕಾಲದಿಂದಲೇ ಮುಂದುವರೆದುಕೊಂಡು ಬಂದಿತ್ತು. ಅರ್ಥಶಾಸ್ತ್ರವು ವ್ಯವಸಾಯವನ್ನು ದಂಡ, ವಿಷರ, ತೆರಿಗೆಗಳಿಂದ ರಕ್ಷಿಸಬೇಕೆಂದು ಹೇಳಿದ್ದಿತು. ಪ್ರಾಚೀನ ಕರ್ನಾಟಕದಲ್ಲಿ ೧ ವಿಷ್ಟಿ ಬಡಜನರಿಗೆ ಬಹು ಭಯಂಕರವಾಗಿ ಕಾಣುತ್ತಿದ್ದಿರಬೇಕು. ಕುಶಲಕರ್ಮಿಗಳು ಒಂದು ದಿನ ರಾಜನಿಗಾಗಿ ಪುಗಸಟ್ಟೆ ದುಡಿಯಬೇಕು ಎಂಬ ಕಟ್ಟಳೆ ಮುಂದುವರಿಯಿತು. ವಿಷ್ಟಿ ಅಥವಾ ಬಲಾತ್ಕಾರ ಶ್ರಮವನ್ನು ಕಮ್ಮಾರ, ರಥಕಾರ, ಕ್ಷೌರಿಕ, ಕುಂಬಾರ ಇವರ ಮೇಲೆ ಹೇರಬೇಕೆಂದು ಶಾಸನಗಳು ತಿಳಿಸುತ್ತವೆ.[೬೧] ದಕ್ಷಿಣ ಭಾರತದಲ್ಲಿ ದಲಿತರು ರಾಜನಿಗೆ ತೆರಿಗೆ ಮತ್ತು ಬಿಟ್ಟಿಯಾಗಿ ದುಡಿಯುವ ಪದ್ದತಿ ಆರಂಭದಲ್ಲೇ ಇತ್ತು ಎಂದು ಹೇಳಬಹುದು. ಭರಮಪ್ಪ ನಾಯಕನ ಕಾಲದಲ್ಲಿ ಕಂದಾಯ ವಸೂಲಿಯಲ್ಲಿ ಹೊಸ ವಿಧಾನವನ್ನು ಅನುಸರಿಸಲಾಯಿತು. ಪ್ರತಿವರ್ಷವೂ ರಾಜಕುಟುಂಬದವರು ಕಾಳಮ್ಮ, ಉಚ್ಚಂಗಮ್ಮ ಹಾಗೂ ಇತರೆ ದೇವತೆಗಳ ಪೂಜೆಗಾಗಿ ಯಾತ್ರೆಗೆ ಹೊರಡುತ್ತಿದ್ದರು. ಬೇಟಿ ನೀಡಿದ ಸ್ಥಳಗಳಲ್ಲಿ ಪ್ರತಿ ಹಳ್ಳಿಯ ತಳವಾರನೂ ಆಡಳಿತಗಾರರಿಗೆ ಒಂದು ತುಪ್ಪದ ಕೊಡ ಮತ್ತು ಒಂದು ಆಡನ್ನು ನೀಡುತ್ತಿದ್ದನು. ವಿನಾಯಕ ಚತುರ್ದಶಿಯಂದು ತಿರುಕನ ವೇಷ ಧರಿಸಿದ ರಾಜನು ಪ್ರತಿ ಗ್ರಾಮದ ಗೌಡನಿಂದ ಒಂದು ವರಹ ಕಾಣಿಕೆಯನ್ನು ನೀಡುತ್ತಿದ್ದನು. ಪ್ರತಿ ಧಾರ್ಮಿಕ ಮತದ ಮುಖ್ಯಸ್ಥರೂ ಅರಮನೆಗೆ ಕೊಬ್ಬರಿಯಲ್ಲಿ ಮಾಡಿದ ವಿಶೇಷ ಭಕ್ಷವನ್ನು ನೀಡಬೇಕಾಗಿತ್ತು. ಪ್ರತಿಯೊಬ್ಬ ನೇಯ್ಗೆಯವನೂ ಮಗ್ಗವೊಂದಕ್ಕೆ ವರ್ಷಂಪ್ರತಿ ನೂಲೊಂದನ್ನು ಅರಮನೆಗೆ ಕಾಣಿಕೆ ನೀಡಬೇಕಾಗಿತ್ತು. ಗ್ರಾಮಸ್ಥರು ಚಿತ್ರದುರ್ಗಕ್ಕೆ ಹೋಗಿ ಅರಮನೆಯ ಕುದುರೆಲಾಯಗಳನ್ನು ಶುಚಿಗೊಳಿಸಬೇಕಾಗಿತ್ತು. ಪ್ರತಿ ಹಳ್ಳಿಯಿಂದ ಇಬ್ಬರು ದೃಢಕಾಯರು ಚಿತ್ರದುರ್ಗದ ಎಲ್ಲೆಕಟ್ಟಿನಲ್ಲಿ ಕೆಲವು ನಿರ್ದಿಷ್ಟ ಕೆಲಸ ಮಾಡಬೇಕಾಗಿತ್ತು. ಧಾರ್ಮಿಕ ಸಮಾರಂಭ ಹಾಗೂ ಹಬ್ಬ ಹರಿದಿನಗಳಂತಹ ಸಂದರ್ಭಗಳಿಗಾಗಿ ಧನ ಹಾಗೂ ವಸ್ತು ರೂಪದ ಅನೇಕ ಬಿಟ್ಟಿ ಕಾಣಿಕೆ ನೀಡಬೇಕಾಗಿತ್ತು.[೬೨]

ಚಿತ್ರದುರ್ಗ ನಾಯಕರ ಕಾಲದಲ್ಲಿ ಗರಾಮದ ಮಾದಿಗರು ಕುದುರೆಗಳಿಗೆ ಪ್ರತಿ ದಿನ ಒಂದಕ್ಕೆ ಹಸಿ ಹುಲ್ಲು ಹೊರೆಯನ್ನು ಸರದಿ ಮೇರೆಗೆ ತರಬೇಕಿತ್ತು. ಹಜಾಮರು ತಿಂಗಳಿಗೆ ಒಂದು ಬಾರಿ

ಸರದಿ ಮೇರೆಗೆ ದುರ್ಗಕ್ಕೆ ಬಂದು ಕುದುರೆಗಳ ಮೈಕೂದಲನ್ನು ಕತ್ತರಿಸಬೇಕು. ಗ್ರಾಮ ಒಂದಕ್ಕೆ ಎರಡು ಆಳುಗಳು ಗ್ರಾಮಗಳಿಂದ ತಿಂಗಳಿಗೆ ಒಂದು ಸಾರಿ ದುರ್ಗಕ್ಕೆ ಬಂದು ಹುಲ್ಲನ್ನು ಕೊಯಿದು ಬಣವೆ ಹಾಕಲಾಗುತ್ತಿತ್ತು.[೨೬೩] ಅಲ್ಲದೆ ಪ್ರವಾಸದಲ್ಲಿರುವ ಅಧಿಕಾರಿಗಳ ಸೇವೆ, ರಸ್ತೆ ಮತ್ತು ಕೆರೆ, ಕಟ್ಟಡಗಳ ನಿರ್ಮಾಣ ರಿಪೇರಿಯಂತಹ ಶ್ರಮದಾಯಕ ಕೆಲಸಗಳಲ್ಲಿ ಜನರಿಂದ ಬಿಟ್ಟಿ ಸೇವೆ ಪಡೆಯುತ್ತಿದ್ದರೆಂದು ಅಲ್ತೇಕರ್‌ರವರು ಅಭಿಪ್ರಾಯಪಟ್ಟಿದ್ದಾರೆ.[೨೬೪] ಕೆಲವೊಮ್ಮೆ ಬಿಟ್ಟಿ ಸೇವೆಯಲ್ಲಿ ರಿಯಾಯಿತಿಯನ್ನು ನೀಡುತ್ತಿದ್ದರು. ಚಿತ್ರದುರ್ಗ ನಾಯಕರ ಕಾಲದಲ್ಲಿ ಗ್ರಾಮದ ಆಡಳಿತ ನೋಡಿಕೊಳ್ಳಲು, 'ಬರಬಲೂತಿ ವ್ಯವಸ್ಥೆ' ಜಾರಿಯಲ್ಲಿತ್ತು. ಇವರು ಗ್ರಾಮದ ಅಭಿವೃದ್ಧಿಗಾಗಿ ಅಥವಾ ನಿರ್ಧಿಷ್ಟವಾದ ದಿನದಂದು ಬಿಟ್ಟಿ ದುಡಿಯಬೇಕಾಗಿತ್ತು. ಉಳಿದ ದಿನ ಸಲ್ಲಿಸುವ ಸೇವೆಗೆ ರೈತರಿಂದ ಆಯ ಪಡೆಯುತ್ತಿದ್ದರು.[೨೬೫] ಇವರನ್ನು ಕೈವಾಡ[೨೬೬]ದವರು ಎಂದು ಕರೆಯುತ್ತಿದ್ದರು. ಅಂದರೆ ಗ್ರಾಮದಲ್ಲಿ ವಾಸಿಸುವ ಗೌಡ, ಜೋಯಿಸ, ಬಡಗಿ, ಕಮ್ಮಾರ, ಕುಂಬಾರ, ಅಕ್ಕಸಾಲಿ, ತೋಟಿ, ತಳವಾರ, ಪೂಜಾರಿ, ಕ್ಷೌರಿಕ, ನೇಕಾರರಾಗಿದ್ದರು[೨೬೭] ಎಂದು ಅನೇಕ ಚಾರಿತ್ರಿಕ ದಾಖಲೆಗಳು ತಿಳಿಸುತ್ತವೆ.

ನಾಯಕರ ಕಾಲದ ಅಧಿಕಾರ ರಚನೆಯಲ್ಲಿ ಮಹಾಜನರು, ಪೆರ್ಗಡೆಗಳು, ಗವುಂಡರು, ಪ್ರಭುಗಾವುಂಡರು ಮುಂತಾದ ಅಧಿಕಾರ ವರ್ಗ ಇತ್ತು. ಹೊಯ್ಸಳರ ಕಾಲದಿಂದಲೂ ನಾಯಕರ ಕಾಲದವರೆಗೂ ಈ ಭೂ ಮಾಲೀಕ ವರ್ಗಗಳು ಅರಸ ಮತ್ತು ರೈತನ ನಡುವೆ ಮಧ್ಯವರ್ತಿಗಳಾಗಿ ಕೆಲಸ ಮಾಡಲು ಆರಂಭಿಸಿದ್ದೇ ಕೃಷಿಕರ ವ್ಯವಸ್ಥಿತ ಶೋಷಣೆಗೆ ಮೂಲ ಕಾರಣ. ಅರ್ಥ ವ್ಯವಸ್ಥೆ ಭೂ ಆಧಾರಿತವಾದ್ದರಿಂದಾಗಿ ಅರಸರು ಭೂ ಮಾಲೀಕರೊಂದಿಗೆ ನಿಕಟವಾದ ಸಂಬಂಧವನ್ನು ಹೊಂದುವುದು ಅನಿವಾರ್ಯವಾಗಿತ್ತು. ಇದು ಭೂಮಾಲೀಕ ವ್ಯವಸ್ಥೆಯನ್ನು ಇನ್ನಷ್ಟು ಗಟ್ಟಿಗೊಳಿಸಿತು. ದಾನದ ರೂಪದಲ್ಲಿ ಭೂಮಿಯನ್ನು ಪಡೆಯುವಾಗಲೇ ರಾಜನಿಗೆ ಕೊಡಬೇಕಾದ ಪಾಲು, ತೆರಿಗೆ ಸಂಗ್ರಹಣೆ, ನೀರಾವರಿ ವಿಚಾರಗಳು, ಕಾನೂನು, ಬಲತ್ಕಾರದ ದುಡಿಮೆ ಮುಂತಾದವುಗಳ ಮೇಲಿನ ನಿರ್ಣಯಗಳ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆದುಕೊಳ್ಳಲಾಗುತ್ತಿತ್ತು.[೨೬೮] ಇದರಿಂದಾಗಿ ಕೃಷಿಕರು ಭೂಮಾಲೀಕರನ್ನು ಪ್ರಶ್ನಿಸುವಂತಿರಲಿಲ್ಲ. ಕೃಷಿ ಮತ್ತು ಕೃಷಿ ಭೂಮಿಗೆ ಸಿಕ್ಕಿದಷ್ಟು ಪ್ರಾಮುಖ್ಯತೆ ಕೃಷಿಕನಿಗೆ ಸಿಗಲಿಲ್ಲ. ಕೃಷಿಕ ಕೃಷಿ ಉತ್ಪಾದನೆಯಲ್ಲಿ ತೊಡಗಿ ಹೆಚ್ಚುವರಿ ಉತ್ಪಾದನೆ ಪಡೆದರೂ ಅದರ ಲಾಭ ರಾಜ್ಯಕ್ಕೆ ಹೋಗುತ್ತಿತ್ತು. ಆದರೆ ಹೊರಲಾರದಷ್ಟು ತೆರಿಗೆಗಳನ್ನು ಅವನ ಮೇಲೆ ಹೇರಲಾಗುತ್ತಿತ್ತು. ಕೃಷಿ ಉತ್ಪಾದನೆಯಲ್ಲಿ ತೊಡಗುತ್ತಿದ್ದ ಕೃಷಿಕರನ್ನು ಭೂಮಿಕಾರ, ಒಕ್ಕಲು, ಬೆಸವೊಕ್ಕಲು ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿತ್ತು.[೨೬೯] ಇವರು ಗ್ರಾಮದ ಅಧಿಕಾರಿಗಳು ಮತ್ತು ಗ್ರಾಮೀಣ ಗಣ್ಯರ ಅಧೀನದಲ್ಲಿರುತ್ತಿದ್ದರು. ಹೊಲೆಯ ಮತ್ತು ತೊಟ್ಟು ಎನ್ನುವ ಕೃಷಿ ಜೀತದಾಳುಗಳು ಇದ್ದರು ಎನ್ನುವ ಮಾಹಿತಿ ಶಾಸನಗಳಿಂದ ತಿಳಿಯುತ್ತದೆ.[೨೭೦] ಜೀತದಾಳು ಎಂದರೆ ಗುಲಾಮರು ಎಂದರ್ಥ. ಇವರು ಭೂಮಿಯನ್ನು ಎತ್ತು, ಬಿತ್ತು ವ್ಯವಸಾಯ ಮಾಡುತ್ತಾ ಅಲ್ಲೇ ವಾಸವಾಗಿರುತ್ತಿದ್ದ ಮತ್ತು ಯಾವುದೇ ಸ್ವಾತಂತ್ರ್ಯವನ್ನು ಅನುಭವಿಸದ ಕೆಳವರ್ಗದ ಜನರು ಭೂಮಾಲೀಕನ ಜಮೀನಿನಲ್ಲಿ ದುಡಿಯುವುದು ಇವರ ಕೆಲಸ. ಭೂಮಾಲೀಕನ ಅನುಮತಿ ಇಲ್ಲದೆ ಇವರು ಕೆಲಸವನ್ನು ಬಿಡುವಂತಿರಲಿಲ್ಲ.[೨೭೧]

ಸಾಮಾಜಿಕ ವರ್ಗ ವ್ಯವಸ್ಥೆಯಲ್ಲಿ ಸಮಾಜದ ಉನ್ನತ ವರ್ಗಗಳೇ ಉನ್ನತ ಅಧಿಕಾರಗಳನ್ನು ಪಡೆದಿದ್ದು, ರೈತ ಹಾಗೂ ಇನ್ನಿತರೆ ತಳ ಸಮುದಾಯಗಳು, ಜನಪದರ ಮನೋಭಾವಗಳೂ ಕೂಡಾ

ಸ್ಥಾಪಿತ ಮೌಲ್ಯಗಳನ್ನು ಮೀರುವಂತಿರಲಿಲ್ಲ. ಒಂದು ಕಾಲಘಟ್ಟದ ಜನಪದರು ಆ ಕಾಲದ ಧಾರ್ಮಿಕ ಕಟ್ಟಳೆಗಳಿಗೆ ಬದ್ಧರಾಗಿಯೇ ಇರುತ್ತಿದ್ದರು. ವೈಚಾರಿಕ-ವೈಜ್ಞಾನಿಕ-ಸಮತಾ ಮನೋಭಾವ ಮೊದಲಾದಂತಹ ಆಧುನಿಕ ವಿಚಾರಗಳನ್ನು ಒಪ್ಪಿಕೊಂಡದ್ದೇನೂ ಕಂಡುಬರುವುದಿಲ್ಲ. ಹೀಗಾಗಿ ಮೇಲುಜಾತಿಯ ಜನಪದರು ಜಾತೀಯತೆಯ ಮನೋಭಾವಗಳಿಂದ ದೂರವಾಗಿದ್ದರು ಎನ್ನುವಂತೆಯೂ ಇಲ್ಲ. ಸಮಕಾಲೀನ ಮನೋಭಾವವೇ ಜಾನಪದದ ನಿಲುವು. ಹೀಗಾಗಿ ಜಾನಪದ ಸಂಸ್ಕೃತಿಗೂ ನಿಕಟವಾದ ನಂಟು. ಆದರೂ ಮೇಲು ಜಾತಿಯ ಜಾನಪದದ ಸ್ವರೂಪವೇ ಬೇರೆ, ಬದುಕಿಗೆ ಹತ್ತಿರವಾದ ಅಸ್ಪೃಶ್ಯರ ಜಾನಪದ ಸೊಗಡೇ ಬೇರೆ. ಹೀಗಾಗಿ ನ್ಯಾಯ ಮತ್ತು ಶಿಕ್ಷೆಗಳ ವಿಷಯದಲ್ಲಿ ಜಾನಪದವು ಅಸ್ಪೃಶ್ಯನಿಗೇನೂ ಹೊಸ ರಿಯಾಯಿತಿಯನ್ನು ಘೋಷಿಸಿಲ್ಲ.[೨೭]

ಒಟ್ಟಾರೆಯಾಗಿ ಪ್ರಾಚೀನ ಕಾಲದಿಂದ ನಾಯಕರ ಕಾಲದವರೆಗೂ ಈ ಬಿಟ್ಟಿ ಸೇವೆ ಹೆಚ್ಚು ಪ್ರಚಲಿತವಿದ್ದ ಸಾಮಾಜಿಕ ಪಿಡುಗು ಆಗಿ ಕಂಡು ಬರುತ್ತಿದ್ದು, ಅಲ್ಲಿ ಶೂದ್ರರನ್ನು, ಪಂಚವೃತ್ತಿಕಾರರನ್ನು ಬಿಟ್ಟಿ ಕೆಲಸ ಮಾಡಬೇಕೆಂದು ಒತ್ತಾಯಿಸಲಾಗುತ್ತಿತ್ತು. ಸಾಮಾನ್ಯ ಜನರು ಎರಡು ವಿಚಾರಗಳಿಗೆ ಹೆದರುತ್ತಿದ್ದರು. ಒಂದು ಸೈನಿಕರು ಹಾಗೂ ಬಿಟ್ಟಿ ಕೆಲಸಗಳಿಗೆ. ಎರಡನೆಯದಾಗಿ, ತೆರಿಗೆಗಳಿಗೆ. ತೆರಿಗೆಯನ್ನು ಕಟ್ಟುವ ಬದಲು ಶೂದ್ರರು ಮತ್ತು ಕುಶಲಕರ್ಮಿಗಳು ಈ ರೀತಿಯ ಬಿಟ್ಟಿ ಶ್ರಮವನ್ನು ಮಾಡಬೇಕಾಗಿದ್ದಿತು ಎಂದು ಗುರುರಾಜಾಚಾರ್ಯರವರು ಅಭಿಪ್ರಾಯ ಪಡುತ್ತಾರೆ. ಬಿಟ್ಟಿಯು ತೆರಿಗೆಯ ಒಂದು ಭಾಗವಾಗಿದ್ದು, ಉಚಿತ ಸೇವೆಯನ್ನು ಪ್ರತಿನಿಧಿಸುತ್ತದೆ. ಪ್ರಭುತ್ವ ಮತ್ತು ಬಲಾಢ್ಯ ಸಮುದಾಯಗಳು ಸಂದರ್ಭಾನುಸಾರವಾಗಿ ಸಾಮಾನ್ಯ ಜನರಿಂದ ತುರ್ತು ಸಂದರ್ಭಗಳಲ್ಲಿ ಉಚಿತವಾಗಿ ಮತ್ತು ಬಲವಂತವಾಗಿ ಸೇವೆಯನ್ನು ಪಡೆಯುತ್ತಿತ್ತು. ಕರಕುಶಲಕರ್ಮಿಗಳು, ಕೃಷಿಯಲ್ಲಿನ ಜಾತಿಗಳು, ದಲಿತರು, ಬುಡಕಟ್ಟು ಜನರು ಈ ಬಗೆಯ ಪ್ರಕ್ರಿಯೆಗೆ ಒಳಪಡುತ್ತಿದ್ದರು. ಒಂದು ವೇಳೆ ಇಂತಹ ವ್ಯವಸ್ಥೆಯನ್ನು ವಿರೋಧಿಸಿದರೆ ಹಳ್ಳಿಗಳಲ್ಲಿ ರಚನೆಯಾಗುವ ನ್ಯಾಯ ತೀರ್ಮಾನದ ಅದೇ ಗೌಡ, ಅದೇ ಶಾನುಬೋಗ, ಅದೇ ಸಾಹುಕಾರ ಅದೇ ವಯೋವೃದ್ಧ ಯಜಮಾನರು ಇದ್ದು ಅವರು ತಮ್ಮ ಸಮುದಾಯಗಳ ಪರವಾಗಿಯೇ ನ್ಯಾಯ ತೀರ್ಮಾನವನ್ನು ನೀಡುತ್ತಿದ್ದರು. ಮೇಲಾಗಿ ಸಾಮಾಜಿಕ ರಚನೆಯಲ್ಲಿ 'ಬಿಟ್ಟಿ ಸೇವೆ,' ಅದು ತಮ್ಮ ಜಾತಿ ಅಥವಾ ವೃತ್ತಿಯನ್ನು ಪ್ರತಿನಿಧಿಸುವ ಪ್ರಮುಖ ಕಾರ್ಯ ಎಂಬ ಭಾವನೆಯನ್ನು ಜನರಲ್ಲಿ ಮೂಡಿಸಿ ಈ ಕಾರ್ಯವನ್ನು ಸುಲಭವಾಗಿ ರೂಪಿಸಿಕೊಂಡ ವ್ಯವಸ್ಥೆ ನಾಯಕರ ಕಾಲದಲ್ಲಿ ಇತ್ತು ಎಂದು ಹೇಳಬಹುದಾಗಿದೆ.

**ಕೊನೆಟಿಪ್ಪಣಿಗಳು**

೧. ಫಣಿಕ್ಕರ್ ಕೆ.ಎಂ., ಮಲಬಾರ್ ಆ್ಯಂಡ್ ದಿ ಪೋರ್ಚುಗೀಸ್, ಡಿ.ಬಿ.ತಾರಾಪೋರೇವಾಲಾ ಸನ್ಸ್ ಆ್ಯಂಡ್ ಕಂಪನಿ, ಮುಂಬೈ, ೧೯೨೯, ಪು.ಸಂ.೩೩

೨. ಶ್ರೀ ಕಂಠ ಕೆ.ಎಸ್., ಹಿಸ್ಟರಿ ಆಫ್ ಇಂಡಿಯಾ, ಗವರ್ನಮೆಂಟ್ ಪ್ರೆಸ್, ಮದ್ರಾಸ್, ೧೯೦೫, ಪು.ಸಂ.೨೬೬

೩. ಅದೇ, ಪು.ಸಂ.೨೬೬

೪. ಕಾನ್‌ಸ್ಟಂಟ್‌ನೋಪಾಲ್‌ನ್ನು ೧೪೫೩ರಲ್ಲಿ ಟರ್ಕರು ವಶಪಡಿಸಿಕೊಳ್ಳುತ್ತಾರೆ. ಇದು ಬೈಜಾಂಟಿಕ್ ಸಾಮ್ರಾಜ್ಯದ ಪ್ರಮುಖ ವ್ಯಾಪಾರಿ ಕೇಂದ್ರವಾಗಿದ್ದು, ಇದನ್ನು ಹನ್ನೊಂದನೆಯ

ಕಾನ್‌ಸ್ಟಂಟ್‌ಪೇಲಿಯೋಗಸ್ ಅನ್ನು ಆಳುತ್ತಿದ್ದ. ಟರ್ಕನ ಯುವ ಸುಲ್ತಾನ ೨೧ ವರ್ಷ ಪ್ರಾಯದ ಮಹಮ್ಮದ್‌ನು ೩೩ ದಿನಗಳ ಕಾಲ ಮುತ್ತಿಗೆ ಹಾಕಿ ವಶಪಡಿಸಿಕೊಳ್ಳುತ್ತಾನೆ. ಈ ಘಟನೆಯು ಮಧ್ಯಯುಗದ ಯುರೋಪಿನ ಚರಿತ್ರೆಯಲ್ಲಿ ಗಮನಾರ್ಹ ಪರಿಣಾಮಗಳನ್ನು ಬೀರಿದೆ.

೫. ವೈಟ್ ವೇ ಆರ್.ಎಸ್., ದಿ ರೈಸ್ ಆಫ್ ಪೋರ್ಚುಗೀಸ್ ಪವರ್ ಇನ್ ಇಂಡಿಯಾ, ಆರ್ಚಿ ಬಾಲ್ಡ್ ಕಾನ್‌ಸ್ಟೇಬಲ್ ಆ್ಯಂಡ್ ಕಂಪನಿ, ಲಂಡನ್, ೧೮೯೯, ಪು.ಸಂ.೭

೬. ಕೇಪ್ ಆಫ್ ಗುಡ್ ಹೋಪ್ ಇದು ದಕ್ಷಿಣ ಆಫ್ರಿಕಾದಲ್ಲಿ ಅಟ್ಲಾಂಟಿಕ್ ತೀರದಲ್ಲಿರುವ ಭೂಶಿರವಾಗಿದೆ. ಇದನ್ನು ೧೪೮೮ರಲ್ಲಿ ಪೋರ್ಚುಗೀಸ್ ನಾವಿಕ ಬಾರ್ಥಲೋಮಿಯಾ ಡಯಾಸ್‌ನು ಕೇಪ್ ಆಫ್ ಸ್ಟೋಮ್ಸ್ (ಬಿರುಗಾಳಿಗಳ ಭೂಶಿರ) ಎಂದು ಹೆಸರಿಸುತ್ತಾನೆ. ಆದರೆ ಪೋರ್ಚುಗೀಸ್ ದೊರೆ ಎರಡನೇ ಜಾನ್‌ನು ಭಾರತಕ್ಕೆ ಈ ಭೂಶಿರದ ಮುಖಾಂತರ ನೇರ ಸಮುದ್ರ ಮಾರ್ಗವನ್ನು ಕಂಡು ಹಿಡಿದ ಹಿನ್ನೆಲೆಯಲ್ಲಿ ಕೇಪ್ ಆಫ್ ಗುಡ್ ಹೋಪ್ (ಉಜ್ವಲ ಆಶೆಗಳ ಭೂಶಿರ) ಎಂದು ಮರುನಾಮಕರಣ ಮಾಡುತ್ತಾನೆ.

೭. ಫ್ರಾನ್ಸಿಯನ್‌ಗಳು ಕ್ಯಾಥೋಲಿಕ್ ಧರ್ಮ ಪಂಥದ ಒಂದು ಧಾರ್ಮಿಕ ವಿಭಾಗ ಆಗಿದ್ದು, ೧೨೮೦ರಲ್ಲಿ ಫ್ರಾನ್ಸಿಸ್ ಆಫ್ ಅಸಿಸೀಯವರಿಂದ ಆರಂಭವಾಗಿರುತ್ತದೆ. ಈ ಪಂಥವು ಕ್ರೈಸ್ತ ಮತದ ಧರ್ಮಗುರುಗಳನ್ನು ತರಬೇತುಗೊಳಿಸುವ ಜಾಗತಿಕ ಮಟ್ಟದ ಪ್ರಮುಖ ವ್ಯವಸ್ಥೆಯಾಗಿದೆ.

೮. ವಿಕಾರ್ ಎಂಬುದು ಲ್ಯಾಟಿನ್ ಪದ ವಿಕಾರಿಯಸನ್‌ನ ಧಾತು ಆಗಿದೆ. ಇದರರ್ಥ ಚರ್ಚ್‌ನ ಧಾರ್ಮಿಕ ಪ್ರತಿನಿಧಿಕತ್ವ ಆಗಿದೆ. ಇವರು ಚರ್ಚ್‌ನಲ್ಲಿ ಉಪ ಅಥವಾ ಪರ್ಯಾಯ ಧಾರ್ಮಿಕ ವಿಧಿ ವಿಧಾನಗಳ ನಿರ್ವಹಣೆ ಮತ್ತು ಜವಾಬ್ದಾರಿಯನ್ನು ವಹಿಸುತ್ತಾರೆ. ಚರ್ಚ್ ವ್ಯವಸ್ಥೆಯಲ್ಲಿ ವಿಕಾರ್‌ರವರಿಗೆ ಸಮಕಾಲೀನ ಸಂದರ್ಭದಲ್ಲೂ ಅತ್ಯಂತ ಮಹತ್ವದ ಧಾರ್ಮಿಕ ಸ್ಥಾನಮಾನವಿದೆ.

೯. ಶಾಸ್ತ್ರಿ ಬಿ.ಎಸ್., ಕೆನರಾ-ಗೋವಾ ಪೋರ್ಚುಗೀಸ್ ರಿಲೇಷನ್ಸ್, ೧೪೯೮-೧೭೬೩, ಕಾನ್ಸೆಪ್ಟ್ ಪಬ್ಲಿಷಿಂಗ್ ಕಂಪನಿ, ನವದೆಹಲಿ, ಪು.ಸಂ.೩

೧೦. ಡಿನ್ನಿ ಎ.ಆರ್., ಟ್ವಿ ಲೈಟ್ ಆಫ್ ದ ಪೆಪ್ಪರ್ ಎಂಪೈರ್-ಪೋರ್ಚುಗೀಸ್ ಟ್ರೇಡ್ ಇನ್ ಸೌತ್ ಇಂಡಿಯಾ ಇನ್ ದಿ ಅರ್ಲಿ ಸೆವೆಂಟೀನ್ ಸೆಂಚುರಿ, ನವದೆಹಲಿ, ೨೦೧೦

೧೧. ವಿಲಿಯಂ ವಿಲ್ಸನ್ ಹಂಟರ್ ಸರ್, ಎ ಹಿಸ್ಟರಿ ಆಫ್ ಬ್ರಿಟಿಶ್ ಇಂಡಿಯ, ವ್ಯಾಲ್ಯೂಂ-೧, ಲಂಡನ್, ೧೯೧೨, ಪು.ಸಂ.೫

೧೨. ಪುರುಷೋತ್ತಮ ಎಸ್., ಪೋರ್ಚುಗೀಸರು ಮತ್ತು ಕರ್ನಾಟಕದ ವ್ಯಾಪಾರ ವಾಣಿಜ್ಯ ವಲಯಗಳ ಸ್ಥಿತ್ಯಂತರಗಳು, ಪು.ಸಂ.೮೪-೮೫

೧೩. ಸಂಜಯ್ ಸುಬ್ರಹ್ಮಣ್ಯಂ., ದಿ ಪೊಲಿಟಿಕಲ್ ಎಕಾನಮಿ ಆಫ್ ಕಾಮರ್ಸ್ : ಸದರ್ನ್ ಇಂಡಿಯಾ, ೧೫೦೦-೧೬೫೦, ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್ ಆಕ್ಸ್‌ಫರ್ಡ್-೨೦೦೪, ಪು.ಸಂ.೪೮

೧೪. ಅಸೆಂಟೋಸ್ ಐ.ಪಿ.೫೧೩

೧೫. ವಸಂತಮಾಧವ ಕೆ.ಜಿ., ಗಂಗೊಳ್ಳಿಯ ಕೋಟೆ, ಅಮೃತ, ಬೆಂಗಳೂರು, ೧೯೭೧, ಪು.ಸಂ.೪೧

೧೬. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.ಸಂ.೧೪

೧೭. ಶರ್ಮ ಆರ್.ಎಸ್., ಇಂಡಿಯನ್ ಫ್ಯೂಡಲಿಸಂ, ಮ್ಯಾಕ್‌ಮಿಲನ್, ಮದರಾಸು, ೧೯೯೦, ಪು.೯

೧೮. ದೀಕ್ಷಿತ್ ಜಿ.ಎಸ್., ಲೋಕಲ್ ಸೆಲ್ಫ್ ಗವರ್ನಮೆಂಟ್ ಇನ್ ಮೆಡೀವಲ್ ಕರ್ನಾಟಕ, ಧಾರವಾಡ, ೧೯೬೪, ಪು.ಟ.೫೯

೧೯. ಅಪ್ಪಾದೊರೈ ಎ., ಎಕಾನಮಿಕ್ ಕಂಡೀಷನ್ಸ್ ಇನ್ ಸದರ್ನ್ ಇಂಡಿಯಾ, ಮದರಾಸು, ೧೯೩೬, ಸಂ-೧, ಪು.೧ ಮತ್ತು ೨೫೭-೫೮

೨೦. ಕರ್ನಾಟಕ ಕೈಪಿಡಿ, ಕರ್ನಾಟಕ ಗೆಸೆಟಿಯರ್ ಇಲಾಖೆ, ಬೆಂಗಳೂರು, ೧೯೯೬, ಪು.ಸಂ.೮೫-೮೬

೨೧. ಬಿಪನ್ ಚಂದ್ರ, ನ್ಯಾಶನಾಲಿಸಂ ಆ್ಯಂಡ್ ಕಲೋನ್ಯಾಲಿಸಂ ಇನ್ ಮಾಡರ್ನ್ ಇಂಡಿಯ, ನ್ಯೂಡೆಲ್ಲಿ, ೧೯೮೧, ಪು.ಸಂ.೧-೨೮

೨೨. ಅದೇ, ಪು.ಸಂ.೨೩

೨೩. ಮೋಹನ್‌ಕೃಷ್ಣ ರೈ ಕೆ., ಕೆನರಾದ ವಿಭಜನೆ ಹತ್ತಿ ರಾಜಕೀಯದ ವಿಶ್ಲೇಷಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೨೦೧೦, ಪು.ಸ. ೬೨-೬೭

೨೪. ದತ್ತ್ ಆರ್.ಸಿ., ದಿ ಎಕನಾಮಿಕ್ ಹಿಸ್ಟರಿ ಆಫ್ ಇಂಡಿಯಾ, ಸಂಪುಟ-೧, ೧೯೬೦, ದೆಹಲಿ, ಪು.ಸಂ.೨೧೫-೧೬

೨೫. ಮೋರ್‌ಲ್ಯಾಂಡ್ ಡಬ್ಲ್ಯೂ.ಎಚ್., ಇಂಡಿಯ ಅಟ್ ದಿ ಡೆತ್ ಆಫ್ ಅಕ್ಬರ್, ೧೯೨೦, ಲಂಡನ್, ಪು.ಸಂ.೬೯-೭೩

೨೬. ಧರ್ಮಕುಮಾರ್ (ಸಂ)., ದಿ ಇಕಾನಮಿಕ್ ಹಿಸ್ಟರಿ ಆಫ್ ಇಂಡಿಯ, ಸಂಪುಟ-೨, ದೆಹಲಿ, ೨೦೧೫, ಪು.ಸಂ.೨೦೭-೨೪೨

೨೭. ಚನ್ನಪ್ಪ ಎಸ್. ಉತ್ತಂಗಿ (ಸಂ)., ಸರ್ವಜ್ಞನ ವಚನಗಳು, ಪದ್ಯ ೧೨೨೯, ಪು.ಸಂ.೧೬೨

೨೮. ಕರ್ನಾಟಕ ಕೈಪಿಡಿ, ಪೂರ್ವೋಕ್ತ, ಪು.ಸಂ.೮೭

೨೯. ಶ್ಯಾಮಲ ಸಿ.ಆರ್., ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ, ಬೆಂಗಳೂರು, ೨೦೧೭, ಪು.ಸಂ.೪೫೪

೩೦. ಎ.ಕ.XI, ೬೪, ದಾವಣಗೆರೆ-೩, ಪು.ಸಂ.೫೯

೩೧. ರೈಸ್ ಬಿ.ಎಲ್., ಎ.ಕ.XII, ಎಸ್.ಬಿ.೩೪

೩೨. ಬಿ.ಎನ್.ಸತ್ಯನ್., ಮೈಸೂರು ಗೆಜೆಟಿಯರ್, ಚಿತ್ರದುರ್ಗ, ೧೯೬೭, ಪು.ಸಂ.೬೩

೩೩. ಗೋಪಾಲ್ ಆರ್.(ಸಂ)., ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಹೊಸಪೇಟೆ, ೨೦೦೪, ಪು.ಸಂ.೨೫೫

೩೪. ಎ.ಕ.XI, ಚಿತ್ರದುರ್ಗ ೭೩

೩೫. ಅದೇ, ಚಿತ್ರದುರ್ಗ ೩೯

೩೬. ಅದೇ, ಮೊಳಕಾಲ್ಮೂರು ೩೭

೩೭. ಅದೇ, ಚಳ್ಳಕೆರೆ ೩

೩೮. ಅದೇ, ಚಳ್ಳಕೆರೆ ೧೩

೩೯. ಅದೇ, ಚಳ್ಳಕೆರೆ ೩೧

೪೦. ಅದೇ, ಚಳ್ಳಕೆರೆ ೪೫

೪೧. ಅದೇ, ಚಳ್ಳಕೆರೆ ೪೭

೪೨. ಅದೇ, ಚಳ್ಳಕೆರೆ ೨೫

೪೩. ಅದೇ, ಚಳ್ಳಕೆರೆ ೩೫

೪೪. ಅದೇ, ಹೊಳಲ್ಕೆರೆ ೧೨೬

೪೫. ಲಕ್ಷ್ಮಣ್ ತೆಲಗಾವಿ, ಚಿತ್ರದುರ್ಗದ ರಾಜಾ ಬಿಚ್ಚುಗತ್ತಿ ಭರಮಣ್ಣನಾಯಕ, ಹರ್ತಿಕೋಟೆ, ೨೦೧೫, ಪು.ಸಂ.೧೫-೧೬

೪೬. ಶ್ಯಾಮಲ ಪೂರ್ವೋಕ್ತ, ಪು.ಸಂ.೪೬೧

೪೭. ಸೆಲ್ವರಾಜು ಡಿ., ಸದರ್ನ್ ಕೊಂಗು ರೀಜನ್ ಅಂಡರ್ ಟಿಪ್ಪು ಸುಲ್ತಾನ್, ಮೈಸೂರು, ೧೯೯೦, ಪು.ಸಂ.೧೬೭

೪೮. ಅದೇ, ಪು.ಸಂ.೧೬೮

೪೯. ಅದೇ, ಪು.ಸಂ.೧೭೧

೫೦. ವಸಂತ ಮಾಧವ ಕೆ.ಜಿ., ವೆಸ್ಟರ್ನ್ ಕರ್ನಾಟಕ-ಇಟ್ಸ್ ಅಗ್ರೇರಿಯನ್ ರಿಲೇಷನ್, ೧೫೦೦-೧೮೦೦, ನ್ಯೂಡೆಲ್ಲಿ, ೧೯೯೧, ಪು.ಸಂ.೪೬-೫೨

೫೧. ಸರ್ಕಾರ್ ಡಿ.ಸಿ.(ಸಂ)., ಲ್ಯಾಂಡ್ ಸಿಸ್ಟಂ ಆಂಡ್ ಫ್ಯೂಡಲಿಸಂ ಇನ್ ಏನ್ಸಿಯಂಟ್ ಇಂಡಿಯಾ, ಕಲ್ಕತ್ತಾ, ೧೯೬೬, ಪು.ಸಂ.೧೨೬

೫೨. ಅದೇ, ಪು.ಸಂ.೧೨೮

೫೩. ಶರ್ಮಾ ಆರ್.ಎಸ್., ಭಾರತೀಯ ಊಳಿಗಮಾನ್ಯ (ಸರಂಜಾಮಿ) ಪದ್ಧತಿ, ಬೆಂಗಳೂರು, ೨೦೦೭, ಪು.ಸಂ.೭

೫೪. ಅದೇ, ಪು.ಸಂ.೩

೫೫. ಶ್ಯಾಮಲ, ಪೂರ್ವೋಕ್ತ, ಪು.ಸಂ.೪೪೦

೫೬. ದೀಕ್ಷಿತ್ ಜಿ.ಎಸ್., ಲೋಕಲ್ ಸೆಲ್ಫ್ ಗವರ್ನ್‌ಮೆಂಟ್ ಇನ್ ಮಿಡಿವಲ್ ಕರ್ನಾಟಕ, ಧಾರವಾಡ, ೧೯೬೪, ಪು.ಸಂ.೩೨

೫೭. ವೆಂಕಟರತ್ನಂ ಎ.ವಿ., ಲೋಕಲ್ ಗವರ್ನ್‌ಮೆಂಟ್ ಇನ್ ವಿಜಯನಗರ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೭೨, ಪು.ಸಂ.೮೩

೫೮. ಲೀಲಾ ಶಾಂತಕುಮಾರಿ, ಹಿಸ್ಟರಿ ಆಫ್ ಅಗ್ರಹಾರಾಸ್ ಇನ್ ಕರ್ನಾಟಕ, ೪೦೦-೧೩೦೦, ಕ್ರಿ.ಶ., ಮದ್ರಾಸ್, ೧೯೮೬, ಪು.ಸಂ.೭೩

೫೯. ಶಿವಣ್ಣ ಕೆ.ಎಸ್., ದಿ ಅಗ್ರೇರಿಯನ್ ಸಿಸ್ಟಂ ಆಫ್ ಕರ್ನಾಟಕ ೧೩೩೬-೧೭೬೧, ಕ್ರಿ.ಶ., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೩, ಪು.ಸಂ.೨೮

೬೦. ಕರಾಶಿಮಾ ನೋಬೂರು, ಸೌತ್ ಇಂಡಿಯನ್ ಹಿಸ್ಟರಿ ಆ್ಯಂಡ್ ಸೊಸೈಟಿ ಸ್ಟಡೀಸ್, ಫ್ರಮ್ ಇನ್‌ಸ್ಕ್ರೀಪ್ಸ್‌ಷನ್ಸ್ ಕ್ರಿ.ಶ.೮೫೦-೧೮೦೦, ಆಕ್ಸ್‌ಫಡ್ ಯುನಿವರ್ಸಿಟಿ ಪ್ರೆಸ್ ಡೆಲ್ಲಿ, ೧೯೮೪, ಪು.ಸಂ.೮೧೬-೧೦೦

೬೧. ಬರ್ಟನ್ ಸ್ಟೈನ್ ಪೆಸೆಂಟ್ ಸ್ಟೇಟ್ ಆ್ಯಂಡ್ ಸೊಸೈಟಿ ಇನ್ ಮೆಡಿವಲ್ ಸೌತ್ ಇಂಡಿಯಾ ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ನ್ಯೂಯಾರ್ಕ್ ೧೯೮೦, ಪು.ಸಂ.೧೦೨

೬೨. ಪ್ರಸನ್ನಕುಮಾರ ಎಂ., ಮೈಸೂರು ಇತಿಹಾಸದಲ್ಲಿ ದಾನ, ಕ್ರಿ.ಶ.೧೬೦೦-೧೮೮೧, ಮಂಗಳೂರು, ೨೦೦೧, ಪು.ಸಂ.೧೦

೬೩. ಸಂತೋಷ್ ಎನ್.ಜಿ., ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ನಾಯಕರ ಕಾಲದ ಕೃಷಿ ವ್ಯವಸ್ಥೆ (ಕ್ರಿ.ಶ.೧೩೩೬-೧೮೦೦), ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೨೦೦೯, ಪು.ಸಂ.೧೯೦

೬೪. ಎಂ.ಎ.ಆರ್., ೧೯೦೮, ಕ್ರಿ.ಶ.೧೫೮೦, ಪು.ಸಂ.೬೬

೬೫. ಎ.ಕ. ಸಂ-XI, ಹೊಳಲ್ಕೆರೆ-೭

೬೬. ಅದೇ, ಹೊಳಲ್ಕೆರೆ ೬

೬೭. ಸಂತೋಷ್ ಎನ್.ಜಿ., ಪೂರ್ವೋಕ್ತ, ಪು.ಸಂ.೧೯೧

೬೮. ಎ.ಕ.XI, ಹಿರಿಯೂರು ೭೬

೬೯. ಎ.ಕ.XI, ಚಿತ್ರದುರ್ಗ ೪೧

೭೦. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳೆಯಗಾರರು, ಮೈಸೂರು, ೧೯೯೭, ಪು.ಸಂ.೪

೭೧. ಬಸವರಾಜಪ್ಪ ಎಚ್.ಈ., ಚಿತ್ರದುರ್ಗ ಜಿಲ್ಲೆಯ ಭೂ ಹಿಡುವಳಿಗಳ ಚಾರಿತ್ರಿಕ ಅಧ್ಯಯನ, ಅಪ್ರಕಟಿತ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.ಸಂ.೪೪

೭೨. ಎ.ಕ.XI, ಜಗಳೂರು-೩೭

೭೩. ಎಂ.ಎ.ಆರ್., ೧೯೩೯, ಪು.ಸಂ.೮೩-೮೪

೭೪. ಅದೇ, ಪು.ಸಂ.೮೬

೭೫. ಅದೇ, ಪು.ಸಂ.೯೨-೯೪

೭೬. ಬಸವರಾಜಪ್ಪ ಎಚ್.ಈ, ಪೂರ್ವೋಕ್ತ, ಪು.ಸಂ.೪೪

೭೭. ಅದೇ, ಪು.ಸಂ.೪೬

೭೮. ರಾಬರ್ಟ್ ಸಿವೆಲ್, ಎ ಫರ್‌ಗಾಟನ್ ಎಂಪೈರ್ (ವಿಜಯನಗರ) ದೆಹಲಿ, ೧೯೯೧, ಪು.ಸಂ.೨೪೬

೭೯. ಎ.ಕ.XI, ಹೊಳಲ್ಕೆರೆ, ೯೬

೮೦. ಅದೇ, ಹಿರಿಯೂರು-೪೦

೮೧. ಅದೇ, ಹರಿಹರ-೧೬

೮೨. ಅದೇ, ಚಿತ್ರದುರ್ಗ-೪೫

೮೩. ಅದೇ, ಹರಿಹರ-೨೩

೮೪. ಅದೇ, ಮೊಳಕಾಲ್ಮೂರು-೧೦

೮೫. ಅದೇ, ಚಳ್ಳಕೆರೆ-೨೩

೮೬. ಅದೇ, ಹಿರಿಯೂರು-೩೫

೮೭. ಅದೇ, ಹೊಳಲ್ಕೆರೆ-೧೪

೮೮. ಅದೇ, ಹೊಳಲ್ಕೆರೆ-೧೧೩

೮೯. ಫ್ರಾನ್ಸಿಸ್ ಬುಕಾನನ್, ಎಜರ್ನಿ ಫ್ರಂ ಮದ್ರಾಸ್, ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆಂಡ್ ಮಲಬಾರ್, ಸಂಪುಟ-೧, ದೆಹಲಿ, ೧೯೯೮, ಪು.೩೮೭

೯೦. ಎ.ಕ. XI, ಮೊಳಕಾಲ್ಮೂರು, ೨೫, ಹೊಳಲ್ಕೆರೆ-೮೧

೯೧. ಎ.ಕ. XI, ಹೊಳಲ್ಕೆರೆ-೧, ಜಗಳೂರು-೪೧

೯೨. ಬಸವರಾಜಪ್ಪ ಎಚ್.ಈ., ಪೂರ್ವೋಕ್ತ, ಪು.ಸಂ.೫೦

೯೩. ಎ.ಕ. XI, ದಾವಣಗೆರೆ ೩೦, ಕ್ರಿ.ಶ.೧೭೭೧

೯೪. ಅದೇ ದಾವಣಗೆರೆ, ೧೪೭, ಕ್ರಿ.ಶ.೧೭೭೧೬

೯೫. ಅಪ್ಪಾದೊರೈ ಎ., ಇಕನಾಮಿಕ್ ಕಂಡೀಷನ್ಸ್ ಇನ್ ಸದರ್ನ್ ಇಂಡಿಯಾ ಕ್ರಿ.ಶ.೧೦೦೦, ೧೫೦೦, ಸಂಪುಟ-೧, ಮದರಾಸು, ೧೯೩೬, ಪು.ಸಂ.೨೫

೯೬. ನೀಲಕಂಠಶಾಸ್ತ್ರಿ ಕೆ.ಎ., ಎ ಹಿಸ್ಟರಿ ಆಫ್ ಸೌತ್ ಇಂಡಿಯಾ, ಮದರಾಸು, ೧೯೬೬, ಪು.ಸಂ.೩೧೭

೯೭. ವಿನ್‌ಸೆಂಟ್ ಸ್ಮಿತ್, ಅರ್ಲಿ ಹಿಸ್ಟರಿ ಆಫ್ ಇಂಡಿಯಾ, ೧೯೨೫, ಪು.ಸಂ.೧೩೭-೧೩೮

೯೮. ಘೋಷಾಲ್ ಯು.ಎನ್., ದಿ ಅಗ್ರೇರಿಯನ್ ಸಿಸ್ಟಮ್ ಇನ್ ಏನ್ಸಿಯಂಟ್ ಇಂಡಿಯಾ, ಕಲ್ಕತ್ತಾ, ೧೯೩೦, ಪು.ಸಂ.೮೯

೯೯. ವಿಜ್ಞಾನೇಶ್ವರ, ದಿ ಮಿತಾಕ್ಷರ (ಅನು), ಪು.ಸಂ.೯೮೩, ೯೭೯, ೯೯೪, ೯೭೯, ೮೦

೧೦೦. ಬರ್ಟನ್ ಸ್ಟೈನ್, ದಿ ಸೆಗ್ಮೆಂಟರಿ ಸ್ಟೇಟ್ ಇನ್ ಟೈಮ್ ರಿಫ್ಲೇಕ್ಷನ್ಸ್, ದಿ ಸ್ಟೇಟ್ ಇನ್ ಇಂಡಿಯಾ (ಸಂ), ಹರ್ಮನ್ ಕುಲ್ಕೆ, ದೆಹಲಿ, ೧೯೯೫, ಪು.ಸಂ. ೧೩೪-೧೬೧

೧೦೧. ಅಪ್ಪಾದೊರೈ ಎ., ಪೂರ್ವೋಕ್ತ, ಪು.ಸಂ.೧೨೩-೧೨೪

೧೦೨. ಅದೇ, ಪು.ಸಂ.೧೨೩-೧೨೪

೧೦೩. ಬಿ.ಕೆ.ಐ, ೧-೨, ೧೩೬, ಕ್ರಿ.ಶ.೧೯೯೧

೧೦೪. ಗುರುರಾಜಾಚಾರ್ ಎಸ್., ಸಮ್ ಆಸ್ಪೆಕ್ಟ್ಸ್ ಆಫ್ ಎಕನಾಮಿಕ್ ಆ್ಯಂಡ್ ಸೋಶ್ಯಲ್ ಲೈಫ್ ಇನ್ ಕರ್ನಾಟಕ, ಮೈಸೂರು, ೧೯೭೪, ಪು.ಸಂ.೧೮೯

೧೦೫. ಅದೇ, ಪು.ಸಂ.೨೯-೩೧

೧೦೬. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.ಸಂ.೪೪-೪೭

೧೦೭. ಲಕ್ಷ್ಮಣ್ ತೆಲಗಾವಿ (ಸಂ)., ಹರತಿಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭, ಪು.ಸಂ. ೩೮೦-೧೮೩

೧೦೮. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳೆಯಗಾರರು, ಮದಕರಿ ಪ್ರಕಾಶನ, ಚಿತ್ರದುರ್ಗ, ೧೯೨೪, ಪು.ಸಂ.೮

೧೦೯. ಎಂ.ಎ.ಆರ್., ೧೯೪೬, ಪು.ಸಂ.೩-೩೬

೧೧೦. ಗಿರಿಜ ಟಿ., ಚಿತ್ರದುರ್ಗ ಜಿಲ್ಲಾ ದರ್ಶನಿ, ರೇಖಾ ಪ್ರಕಾಶನ, ದಾವಣಗೆರೆ, ೧೯೯೧, ಪು.ಸಂ.೮೩

೧೧೧. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು.ಸಂ.೧-೧೭

೧೧೨. ಶ್ಯಾಮಲ ಸಿ.ಆರ್., ಪೂರ್ವೋಕ್ತ, ಪು.ಸಂ.೪೬೨

೧೧೩. ಎ.ಕ. XI, ಚಿತ್ರದುರ್ಗ, ೯

೧೧೪. ಅದೇ, ದಾವಣಗೆರೆ, ೩೦

೧೧೫. ಅದೇ, ದಾವಣಗೆರೆ, ೧೪೪

೧೧೬. ಬಸಯ್ಯಾ ಮಠಪತಿ, ಕಲ್ಯಾಣ ಚಾಲುಕ್ಯರ ಕಾಲದ ವ್ಯಾಪಾರ ಮತ್ತು ವಾಣಿಜ್ಯ ವ್ಯವಸ್ಥೆ ಪಿಎಚ್.ಡಿ ಮಹಾಪ್ರಬಂಧ, ಕರ್ನಾಟಕ, ವಿಶ್ವವಿದ್ಯಾಲಯ, ಧಾರವಾಡ, ೨೦೧೭, ಪು.ಸಂ.೧೭

೧೧೭. ಶ್ಯಾಮಲ ಸಿ.ಆರ್., ಪೂರ್ವೋಕ್ತ, ಪು.ಸಂ.೪೩೯

೧೧೮. ಎ.ಕ. XI, ಚಳ್ಳಕೆರೆ, ೩೫

೧೧೯. ಇಂದು ಬಾಯಿ ಟಿ.ಕೆ.(ಸಂ)., ಉದ್ದಾಳಿಕನ ಕಥೆ, ಪದ್ಯ ೧೭೬, ಪು.ಸಂ.೪೯

೧೨೦. ಅದೇ, ಪದ್ಯ ೧೮೨, ಪು.ಸಂ.೫೦

೧೨೧. ಸಂತೋಷ ಎನ್.ಜಿ., ಪೂರ್ವೋಕ್ತ, ಪು.ಸಂ.೬೩

೧೨೨. ಎ.ಕ.V, ಬೇಲೂರು, ೧೭೫

೧೨೩. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪೂರ್ವೋಕ್ತ, ಪು.ಸಂ.೧೮-೧೯

೧೨೪. ಅರುಣ್ ಹೆಚ್.ಟಿ., ಕೆಳದಿ ನಾಯಕರ ಕಾಲದ ತೆರಿಗೆ ಪದ್ಧತಿ, (೧೫೦೦-೧೭೬೩), ಪಿಎಚ್.ಡಿ ಮಹಾಪ್ರಬಂಧ ಅಪ್ರಕಟಿತ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೨೦೦೦, ಪು.ಸಂ.೪೧

೧೨೫. ದೇಶಪಾಂಡೆ ಎಚ್.ಟಿ., ದಿ ಚಿತ್ರದುರ್ಗ ಸ್ಟೇಟ್, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಪುಣೆ ಯೂನಿವರ್ಸಿಟಿ, ಪುಣೆ, ೧೯೭೯, ಪು.ಸಂ.೧೦೫

೧೨೬. ಗೋಪಾಲ್ ಬಿ.ಆರ್.(ಸಂ), ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೦೫, ಪು.ಸಂ.೨೫೪

೧೨೭. ಚಿನ್ನಸ್ವಾಮಿ ಸೋಸಲೆ ಎನ್., ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.ಸಂ.೧೧೨

೧೨೮. ಗಂಗಾನಾಯಕ್ ಕೆ.ಎನ್.(ಪ್ರ.ಸಂ), ಪಾಳೆಯಗಾರರ ಶಾಸನಗಳು, ಸಂಪುಟ-೧, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮತ್ತು ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೧೨, ಪು.ಸಂ.೫೦

೧೨೯. ಅದೇ, ಪು.ಸಂ.೫೧

೧೩೦. ಎ.ಕ. XI, ದಾವಣಗೆರೆ, ೨೩

೧೩೧. ಅದೇ, ದಾವಣಗೆರೆ, ೧೬೪

೧೩೨. ಅದೇ, ಚನ್ನಗಿರಿ, ೪೩

೧೩೩. ವಿಠ್ಠಲ ಎಸ್.ಬಡಿಗೇರ, ಹೊಯ್ಸಳರ ಕಾಲದ ನೀರಾವರಿ ಪದ್ಧತಿ, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ(ರಿ)., ಧಾರವಾಡ, ೨೦೧೭, ಪು.ಸಂ.೩೮

೧೩೪. ನೀಲತ್ತಹಳ್ಳಿ ಕಸ್ತೂರಿ, ಕರ್ನಾಟಕದಲ್ಲಿ ಕೆರೆ ನೀರಾವರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.ಸಂ.೨೬

೧೩೫. ಸೌ.ಇ.ಇ.೯-೨, ನಂ-೪೪೦

೧೩೬. ರಟ್ಟಕವಿ, ರಟ್ಟಮತಂ, ಶೇಷ್ಯಂಗಾರ್ (ಸಂ), ಮದರಾಸು, ೧೯೨೯, ಪು.ಸಂ.೭

೧೩೭. ಎ.ಕ.VIII, ಎಸ್.ಎಚ್.೩೦

೧೩೮. ಎ.ಕ.XII, ಗುಬ್ಬಿ, ೨೮

೧೩೯. ಬುಕಾನನ್, ಪೂರ್ವೋಕ್ತ, ಸಂ-೧, ಪು.ಸಂ.೨೩

೧೪೦. ಎ.ಕ.XII, ಟಿ.ಎಂ.೨೪

೧೪೧. ಸಿವೆಲ್, ಪೂರ್ವೋಕ್ತ, ಪು.ಸಂ.೩೦೧-೩೦೨

೧೪೨. ಎ.ಕ.XI, ಮೊಳಕಾಲ್ಮೂರು ೬

೧೪೩. ಎ.ಕ.X, ಎಂ.ಬಿ.೧೩೧

೧೪೪. ಎ.ಕ.X, ಬಿ.ಜಿ.೭೧

೧೪೫. ಉಪ್ಪಾರಹಟ್ಟಿ, ಮೊಬ್ಲು ಓಬಜ್ಜ, ವಕ್ತರು

೧೪೬. ಎ.ಕ.IX, ಬಿ.ಎನ್.೮೦

೧೪೭. ಎ.ಕ.V, ಎ.ಕೆ.೧೧೫

೧೪೮. ಎ.ಕ.XI, ದಾವಣಗೆರೆ ೨೩

೧೪೯. ಎ.ಕ.IV, ಎನ್.ಜಿ. ೪೯

೧೫೦. ಎ.ಕ.XI, ದಾವಣಗೆರೆ ೧-೩೪

೧೫೧. ಶ್ಯಾಮಲ ಸಿ.ಆರ್., ಪೂರ್ವೋಕ್ತ, ಪು.ಸಂ.೪೫೬-೫೭

೧೫೨. ಎ.ಕ.XIV, ಚಿಕ್ಕ-೩೫

೧೫೩. ಸಂತೋಷ್ ಎನ್.ಜಿ., ಪೂರ್ವೋಕ್ತ, ಪು.ಸಂ.೧೧೭

೧೫೪. ಗಿರಿಜ ಟಿ., ಪೂರ್ವೋಕ್ತ, ಪು.ಸಂ.೩೬೭

೧೫೫. ಎ.ಕ.XI, ಚಿತ್ರದುರ್ಗ ೭೩

೧೫೬. ಅದೇ, ಮೊಳಕಾಲ್ಮೂರು ೩೭

೧೫೭. ಅದೇ, ಚಳ್ಳಕೆರೆ ೩

೧೫೮. ಅದೇ, ಚಳ್ಳಕೆರೆ ೧೩

೧೫೯. ಅದೇ, ಚಳ್ಳಕೆರೆ ೩೧

೧೬೦. ಅದೇ, ಚಳ್ಳಕೆರೆ ೪೫

೧೬೧. ಅದೇ, ಚಳ್ಳಕೆರೆ ೪೭

೧೬೨. ಅದೇ, ಹಿರಿಯೂರು ೨೫

೧೬೩. ಅದೇ, ಹಿರಿಯೂರು ೩೫

೧೬೪. ಅದೇ, ಹೊಳಲ್ಕೆರೆ ೧೨೬

೧೬೫. ಬೇಸಾಯ ಮಾಡುತ್ತ ಗ್ರಾಮದಲ್ಲಿ ವಾಸಿಸುವ ಅರುವತ್ತು ರೈತ ಕುಟುಂಬಗಳನ್ನೂ ಇದು ಸೂಚಿಸುವಂತಿದೆ.

೧೬೬. ಹೈದರಬಾದ್ ಆರ್ಕಿಯಾಲಾಜಿಕಲ್ ಸರ್ವೇ, ನಂ-೩, ಪುಟಸಚೇರು (ತಾ), ಹೈದ್ರಾಬಾದ್

೧೬೭. ಕರ್ನಾಟಕ ಇನ್‌ಸ್ಕ್ರಿಫಷನ್, ೨೧ ತೇರಬಾಳ (ತಾ) ಜಮಖಂಡಿ

೧೬೮. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಸಶನ್, ೧೫೮, ಎಲಿಶಿರೂರ (ತಾ) ಗದಗ

೧೬೯. ಅದೇ, ೧೮೯, ನಾಗಾವಿ (ತಾ) ಗದಗ

೧೭೦. ಅದೇ, ೯೮, ಮಲ್ಲೂರ (ತಾ) ಹಾವೇರಿ

೧೭೧. ಮಲ್ಲಿಕಾರ್ಜುನ ಕೆ ಮತ್ತು ಇತರರು (ಸಂ)., ಡಾ.ಬಿ.ಆರ್.ಹಿರೇಮಠರ ಶಾಸನ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೨, ಪು.ಸಂ.೧೯೨-೯೩

೧೭೨. ಬುಕಾನನ್, ಪೂರ್ವೋಕ್ತ, ಸಂ-೧, ಪು.ಸಂ-೧೩೨

೧೭೩. ಎ.ಆರ್.ಎಸ್.ಐ (೧೯೨೯) ನಂ.೭೦, ಪು.ಸಂ.೪೬

೧೭೪. ಷೇಕ್ ಅಲಿ ಬಿ. (ಪ್ರ.ಸಂ), ಕರ್ನಾಟಕ ಚರಿತ್ರೆ, ಸಂ-೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೮, ಪು.ಸಂ.೨೧೭-೧೮

೧೭೫. ರಟ್ಟಮತಂ ಪೂರ್ವೋಕ್ತ, ಪದ್ಯ-೮, ೯, ೧೦, ೧೧, ೪೫

೧೭೬. ಅದೇ ಸರ್ವಜ್ಞ, ಪು.ಸಂ.೧೮೯, ೧೯೦, ೧೯೧, ೧೯೨

೧೭೭. ಈಶ್ವರಪ್ಪ ಎಂ.ಜಿ., ಕೃಷಿ ಜಾನಪದ ಕನ್ನಡ ಭಾರತಿ ಕುವೆಂಪು ವಿಶ್ವವಿದ್ಯಾನಿಲಯ, ಶಂಕರ ಘಟ್ಟ, ೨೦೦೪, ಪು.ಸಂ.೨೧-೨೨

೧೭೮. ಷೇಕ್ ಅಲಿ ಬಿ., ಪೂರ್ವೋಕ್ತ, ಸಂ-೩, ಪು.ಸಂ.೨೦೫

೧೭೯. ರೈಸ್ ಬಿ.ಎಲ್., ಗೆಜೆಟಿಯರ್ ಸಂ-೧, ಪು.ಸಂ.೧೦೧

೧೮೦. ಕುಪ್ಪಸ್ವಾಮಿ ಜಿ.ಆರ್., ಎಕಾನಾಮಿಕ್ ಕಂಡೀಷನ್ಸ್ ಇನ್ ಸೌತ್ ಇಂಡಿಯಾ, (೧೦೦೦-೧೫೦೦ ಎ.ಡಿ) ಸಂ.೧, ಪು.ಸಂ.೨೫೪

೧೮೧. ಬುಕಾನನ್, ಪೂರ್ವೋಕ್ತ, ಪು.ಸಂ.೮೪, ೮೫

೧೮೨. ಅದೇ, ಪು.ಸಂ-೮೫

೧೮೩. ಮಂಜುನಾಥ ಟಿ., ಚಿತ್ರದುರ್ಗ ಹಾಗೂ ಸುತ್ತಮುತ್ತಲಿನ ಪಾಳೆಯಗಾರರ ಸಾಂಸ್ಕೃತಿಕ ಇತಿಹಾಸ, ಕುವೆಂಪು ವಿಶ್ವವಿದ್ಯಾನಿಲಯ, ಜ್ಞಾನ ಸಹ್ಯಾದ್ರಿ, ಶಂಕರಘಟ್ಟ, ಶಿವಮೊಗ್ಗಕ್ಕೆ ಸಾದರಪಡಿಸಿದ ಪಿಎಚ್.ಡಿ ಪ್ರಬಂಧ, ೨೦೦೬, ಪು.ಸಂ.೧೭೩

೧೮೪. ಎ.ಕ.XI, ಚಳ್ಳಕೆರೆ, ೪೨

೧೮೫. ಹುಲ್ಲೂರು ಶ್ರೀನಿವಾಸ ಜೋಯಿಸರು (ಸಂ) ಪೆದ್ದಕೋನೇಟಿ ನಾಯಕ ಹು.ಶ್ರೀ.ಜೋ. ಐತಿಹಾಸಿಕ ಲೇಖನಗಳು, ೧೯೭೬, ಪು.ಸಂ.೩೦೧-೩೦೨

೧೮೬. ಕೃಷ್ಣಮಾಚಾರ್ಯ ಬಿ., ಮರೆಯಲಾಗದ ಸುರಪುರ ರಾಜರ ಚರಿತ್ರೆ, ೨೦೦೩, ಪು.ಸಂ.೬೮

೧೮೭. ಕಪಟರಾಳ ಕೃಷ್ಣರಾವ್, ಸುರಪುರ ಸಂಸ್ಥಾನ ಇತಿಹಾಸ, ೧೯೭೭, ಪು.ಸಂ.೧೩೦-೧೩೧

೧೮೮. ಅಮರೇಶ ಯತಗಲ್, ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು, ಪಲ್ಲವಿ ಪ್ರಕಾಶನ, ಲಿಂಗಸೂರು, ೨೦೧೮, ಪು.ಸಂ.೩೦೯

೧೮೯. ಬಸಯ್ಯಾ ಮಠಪತಿ, ಕಲ್ಯಾಣ ಚಾಲುಕ್ಯರ ಕಾಲದ ವ್ಯಾಪಾರ ಮತ್ತು ವಾಣಿಜ್ಯ ವ್ಯವಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೧೭, ಪಿಎಚ್.ಡಿ ಅಪ್ರಕಟಿತ ಮಹಾಪ್ರಬಂಧ, ಪು.ಸಂ.೩೫

೧೯೦. ಬುಕಾನನ್, ಪೂರ್ವೋಕ್ತ, ಪು.ಸಂ.೮೨-೮೬

೧೯೧. ಗೋಪಾಲ್ ಆರ್.(ಸಂ)., ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೦೫, ಪು.ಸಂ.೧೦೯

೧೯೨. ಬುಕಾನನ್, ಪೂರ್ವೋಕ್ತ, ಪು.ಸಂ.೮೬

೧೯೩. ಅಮರೇಶ ಯತಗಲ್, ಪೂರ್ವೋಕ್ತ, ಪು.ಸಂ.೩೧೦

೧೯೪. ರಾವ ಸಾಹೇಬ ಫಕೀರಪ್ಪಾ ಗುರುಬಸಪ್ಪಾ ಹಳಕಟ್ಟಿ, (ಸಂ), ಕೃಷಿ ಜ್ಞಾನ ಪ್ರದೀಪಿಕೆ, ಹಿತಚಿಂತಕ ಪ್ರಿಂಟಿಂಗ್, ಬಿಜಾಪುರ, ೧೯೩೬, ಪು.ಸಂ.೭೧

೧೯೫. ಅದೇ, ಪು.ಸಂ.೭೩

೧೯೬. ಸಂತೋಷ್ ಎನ್.ಜಿ., ಪೂರ್ವೋಕ್ತ, ಪು.ಸಂ.೭೩

೧೯೭. ಕಬ್ಬಿನ ಜಲ್ಲೆ, ಇಂದೂಬಾಯಿ ಟಿ.ಕೆ.(ಸಂ), ಚಂದ್ರಹಾಸನ ಕಥೆ, ೨ನೇ ಸಂಧಿ, ಪದ್ಯ-೪೫, ಪು.ಸಂ.೧೦೭

೧೯೮. ಎ.ಕ.XI, ದಾವಣಗೆರೆ, ೧೦೬

೧೯೯. ರಾವ ಸಾಹೇಬ ಫಕೀರಪ್ಪಾ ಗುರುಬಸಪ್ಪ ಹಳಕಟ್ಟಿ, ಪೂರ್ವೋಕ್ತ, ಪು.ಸಂ.೭೪-೭೫

೨೦೦. ಸೂರ್ಯನಾಥ ಕಾಮತ್, ಕರ್ನಾಟಕದ ಇತಿಹಾಸ ಹಲವು ಮುಖಗಳು, ಸುಮುಖ ಪ್ರಕಾಶನ, ಬೆಂಗಳೂರು, ೨೦೦೬, ಪು.ಸಂ.೧೩೭

೨೦೧. ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್, ಗೆಜೆಟಿಯರ್ ಡಿಪಾರ್ಟ್‌ಮೆಂಟ್, ಬೆಂಗಳೂರು, ೧೯೬೭, ಪು.ಸಂ.೧೩೨

೨೦೨. ಮೋಹನ್‌ಕೃಷ್ಣ ರೈ ಕೆ., ಕೆನರಾದ ವಿಭಜನೆ ಹತ್ತಿ ರಾಜಕೀಯದ ವಿಶ್ಲೇಷಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.ಸಂ.೭೪

೨೦೩. ಕರ್ನಾಟಕ ಕೈಪಿಡಿ, ಪೂರ್ವೋಕ್ತ, ಪು.ಸಂ.೮೫

೨೦೪. ಎ.ಕ.XI, ಚಿತ್ರದುರ್ಗ, ೩೪

೨೦೫. ಅದೇ, ದಾವಣಗೆರೆ, ೬೪

೨೦೬. ವಿಠ್ಠಲ ಡಿ.ಪೋತದಾರ, ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತವಿದ್ದ ಕೆಲವು ತೆರಿಗೆಗಳು ಒಂದು ಅಧ್ಯಯನ, ಇತಿಹಾಸ ದರ್ಶನ ಸಂಪುಟ-೮, (೧೯೯೩), ಪು.ಸಂ.೧೧೪

೨೦೭. ಕೊಪ್ಪಾ ಎಸ್.ಕೆ., ತರ್ದವಾಡಿ ನಾಡು ಒಂದು ಅಧ್ಯಯನ, ಶಾಸನಗಳನ್ನಾಧರಿಸಿ (ಕ್ರಿ.ಶ.೮೫೦-೧೩೦೦), ಪ್ರತಿಭಾ ಪ್ರಕಾಶನ, ೧೯೯೦, ಪು.ಸಂ.೨೦೩

೨೦೮. ರಾಜಶೇಖರಪ್ಪ ಬಿ., ದುರ್ಗ ಶೋಧನ, ಪು.ಸಂ.೧೧೫

೨೦೯. ಎ.ಕ.XI, ದಾವಣಗೆರೆ-೧೬೪

೨೧೦. ಲಕ್ಷ್ಮಣ್ ತೆಲಗಾವಿ, ಚಂದ್ರವಳ್ಳಿ, ಪೂರ್ವೋಕ್ತ, ಪು.ಸಂ.೮೦

೨೧೧. ಎ.ಕ.XI, ಚಿತ್ರದುರ್ಗ-೪೫

೨೧೨. ಅದೇ, ಹಿರಿಯೂರು, ೩೯

೨೧೩. ಅದೇ, ಹೊಳಲ್ಕೆರೆ, ೧೫

೨೧೪. ಅದೇ, ಚಳ್ಳಕೆರೆ, ೫೪

೨೧೫. ಅದೇ, ಹೊಳಲ್ಕೆರೆ, ೭೬

೨೧೬. ಅದೇ, ಹೊಳಲ್ಕೆರೆ, ೨೪

೨೧೭. ಅದೇ, ದಾವಣಗೆರೆ, ೨೩

೨೧೮. ಅದೇ, ಹಿರಿಯೂರು, ೮೮

೨೧೯. ಅದೇ, ಹೊಳಲ್ಕೆರೆ, ೧೯

೨೨೦. ಅದೇ, ಹೊಳಲ್ಕೆರೆ, ೧೧೩

೨೨೧. ಅದೇ, ಹಿರಿಯೂರು, ೮೮

೨೨೨. ಅದೇ, ಹೊಳಲ್ಕೆರೆ, ೧೨೫

೨೨೩. ಅದೇ, ದಾವಣಗೆರೆ, ಬೇತೂರು, ೩, ೧೩

೨೨೪. ಫೇಡ್ರಿಕ್ ಚಾಲ್ಮರ್ಸ್, ಎರಿಪೋರ್ಟ್ ಆನ್ ದಿ ಚಿತ್ರದುರ್ಗ ಡಿವಿಜನ್ ಆಫ್ ಮೈಸೂರು, ಪು.ಸಂ.೫

೨೨೫. ಗ್ರಾಮೀಣ ಅರ್ಥ ವ್ಯವಸ್ಥೆಯಲ್ಲಿ ೧೨ ಜನ ಆಯಗಾರರು ಇದ್ದರು. ಇದನ್ನು 'ಬಲವತ್' ಇದು ಕೃಷಿಯ ತೆರಿಗೆಯನ್ನು ಸಂಗ್ರಹಿಸುವ ವೃತ್ತಿ ವ್ಯವಸ್ಥೆಯನ್ನು ಸೂಚಿಸುತ್ತದೆ ಎಂದು ಇರ್ಫಾನ್ ಹಬೀಬ್ ಅವರ ಅಗ್ರೇರಿಯನ್ ರಿಲೇಷನ್ಸ್ ಆ್ಯಂಡ್ ಎಕಾನಮಿ ಇನ್ ಎ ರೀಜನ್ ಆಫ್ ಮಧ್ಯಪ್ರದೇಶ, ಇಂಡಿಯನ್ ಹಿಸ್ಟ್ರೀ ಕಾಂಗ್ರೆಸ್ ಪ್ರೊಸ್ಸೀಡಿಂಗ್ಸ್, ಸಂಪುಟ, ನಂ-೩, ಸೆಪ್ಟೆಂಬರ್ ೧೯೬೭

೨೨೬. ದೇಶಪಾಂಡೆ ಹೆಚ್.ಟಿ., ಪೂರ್ವೋಕ್ತ, ಪು.ಸಂ.೨೪೬

೨೨೭. ಮೆಕೆಂಜಿ ಮ್ಯಾನ್ಯುಸ್ಕ್ರಿಪಟ್ಸ್, ನಂ-೩೫೪, ಟಿ.ಎನ್.ಎ., ೧೮೪೩, ಬುಕಾನನ್ ಪೂರ್ವೋಕ್ತ, ಪು.ಸಂ.೨೬೮, ೨೭೦

೨೨೮. ಸೂರ್ಯನಾಥ ಯು.ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಸಂ-೧, ಬೆಂಗಳೂರು, ೧೯೮೪, ಪು.ಸಂ.೫೯೧-೯೨

೨೨೯. ಅದೇ, ಪು.ಸಂ.೯೪

೨೩೦. ಬುಕಾನನ್, ಪೂರ್ವೋಕ್ತ, ಪು.ಸಂ.೨೬೫-೨೬೮

೨೩೧. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ ಪೂರ್ವೋಕ್ತ, ಪು.ಸಂ.೨೩-೨೪

೨೩೨. ಸೌ.ಇ.ಇ-೨, ನಂ-೪೪೦, ಎ.ಕ.೧೨, ಟಿ.ಎಂ.೫೯, ಎ.ಕ.೮, ಎಸ್.ಜಿ.೧೬೩

೨೩೩. ಎ.ಕ.XI, ಎಂ.ಬಿ.೧೭೨

೨೩೪. ಸೌ.ಇ.ಇ.IX-II, ೪೪೦, ಎ.ಆರ್.ನಂ-೨೮೩, ೧೯೧೮, ಹರಪನಹಳ್ಳಿ

೨೩೫. ಎ.ಕ.VIII, ಎಸ್.ಬಿ., ೩೫೪, ಮತ್ತು ೪೫೧

೨೩೬. ಎಂ.ಎ.ಆರ್., ೧೯೩೩, ನಂ.೩೦, ಪು.ಸಂ.೧೯೬

೨೩೭. ಹೊಳೆ ಹೊನ್ನೂರು ಕೈಫಿಯತ್ (ಕನ್ನಡ ಹಸ್ತಪ್ರತಿ) ಪು.ಸಂ.೯-೧೦ ಕೆಳದಿ ನೃಪತುಂಗ ವಿಜಯಂ, ಪು.ಸಂ.೧೧೩

೨೩೮. ದೇಶಪಾಂಡೆ ಹೆಚ್.ಟಿ., ಪೂರ್ವೋಕ್ತ, ಪು.ಸಂ.೧೦೮

೨೩೯. ಅದೇ, ಪು.ಸಂ.೧೦೯

೨೪೦. ಅದೇ, ಪು.ಸಂ.೧೦೯

೨೪೧. ಅದೇ, ಪು.ಸಂ.೧೦೯

೨೪೨. ಎಂ.ಎ.ಆರ್., ೧೯೨೩, ನಂ,೧೧೦, ಪು.ಸಂ.೧೦೯

೨೪೩. ಎಂ.ಎ.ಆರ್, ೧೯೩೩, ನಂ.೩೦, ಪು.ಸಂ.೧೯೬

೨೪೪. ಅದೇ, ೧೯೩೬, ನಂ.೬೦, ಪು.ಸಂ.೧೫೨

೨೪೫. ಬಸವರಾಜ್ ಯಳಮಲ್ಲಿ, (ಸಂ), ತೂಕ ಮತ್ತು ಅಳತೆ ಸಾಧನಗಳ ಇತಿಹಾಸ ಮತ್ತು ಪರಂಪರೆ, ತುಲಾಭವನ ಟ್ರಸ್ಟ್, ದಾವಣಗೆರೆ, ೨೦೧೦, ಪು.ಸಂ. ೨೬

೨೪೬. ದೇಶಪಾಂಡೆ ಹೆಚ್.ಟಿ., ಪೂರ್ವೋಕ್ತ, ಪು.ಸಂ.೧೦೬

೨೪೭. ಬಸವರಾಜ್ ಯಳಮಲ್ಲಿ, ಪೂರ್ವೋಕ್ತ, ಪು.ಸಂ. ೨೮

೨೪೮. ಸದಾಶಿವಪ್ಪ ಕುಂ.ಬಾ., ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ದರ್ಶನ, ಮಾಲತೇಶ ಪ್ರಕಾಶನ, ಕುಂಚೂರು, ೧೯೯೦, ಪು.ಸಂ.೫೨

೨೪೯. ಬುಕಾನನ್, ಪೂರ್ವೋಕ್ತ, ಸಂಪುಟ-೧, ಪು.ಸಂ.೮೯

೨೫೦. ಮೋಹನ್‌ಕೃಷ್ಣ ರೈ ಕೆ., ಪೂರ್ವೋಕ್ತ, ಪು.ಸಂ.೨೪

೨೫೧. ಮಹೇಶ್ ಜಿ., ವಿಜಯನಗರ ಕಾಲದಲ್ಲಿ ವೃತ್ತಿ ಆಧಾರಿತ ಜಾತಿಗಳು ಒಂದು ಅಧ್ಯಯನ (ಕ್ರಿ.ಶ.೧೩೩೬-೧೫೬೫) ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೧೩, ಅಪ್ರಕಟಿತ ಪಿಎಚ್.ಡಿ, ಮಹಾಪ್ರಬಂಧ, ಪು.ಸಂ.೧೩೩-೩೪

೨೫೨. ಮೋಹನ್‌ಕೃಷ್ಣ ರೈ ಕೆ., ಪೂರ್ವೋಕ್ತ, ಪು.ಸಂ.೨೫-೨೭

೨೫೩. ಮಲ್ಲಿಕಾರ್ಜುನ ಸಿ. ಬಾಗೋಡಿ, ಸುರಪುರ ಪ್ರದೇಶದ ಕಂದಾಯ ಪತ್ರಗಳು, ಇತಿಹಾಸದ ಕಂದಾಯ ಪತ್ರಗಳು, ಇತಿಹಾಸ ದರ್ಶನ ಸಂ-೨೫, ಪು.ಸಂ.೪೦೩

೨೫೪. ದೇವರಾಜ ಓ., ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಲಿತರು, ಪಲ್ಲವ ಪ್ರಕಾಶನ, ಚನ್ನಪಟ್ಟಣ, ೨೦೧೩, ಪು.ಸಂ.೧೭೯

೨೫೫. ಶರ್ಮ ಆರ್.ಎಸ್., ಪ್ರಾಚೀನ ಭಾರತದಲ್ಲಿ ಶೂದ್ರರು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೨, ಪು.ಸಂ.೧೪೧

೨೫೬. ಇವರು 'ತರಗು ಗುಡ್ಸಿ ಮನೆ ಕಟ್ಟಿದವರು' ಎಂದು ಜನ ಹೇಳುತ್ತಾರೆ ಎಂದರೆ ಅವರೇ ಆ ಊರಿನ ಮೊದಲಿಗರು.

೨೫೭. ಚಿದಾನಂದಮೂರ್ತಿ ಎಂ., ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೪, ಪು.ಸಂ.೫೭

೨೫೮. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ.೪೨೦

೨೫೯. ದೇವರಾಜ ಓ., ಪೂರ್ವೋಕ್ತ, ಪು.ಸಂ.೧೭೯, ೧೮೦

೨೬೦. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗ ಪಾಳೆಯಗಾರರು, ಪೂರ್ವೋಕ್ತ, ಪು.ಸಂ.೧೯

೨೬೧. ದೇವರಾಜ ಓ., ಪೂರ್ವೋಕ್ತ, ಪು.ಸಂ.೧೮೧

೨೬೨. ಶ್ರೀನಿವಾಸ್ ಎಂ.ವಿ., ಚಂದ್ರವಳ್ಳಿ, ಪೂರ್ವೋಕ್ತ, ಪು.ಸಂ.೪೧, ೪೨

೨೬೩. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು.ಸಂ.೬೦, ೭೦

೨೬೪. ಅಲ್ಟೇಕರ್ ಎ.ಎಸ್., ಸ್ಟೇಟ್ ಆ್ಯಂಡ್ ಗವರ್ನಮೆಂಟ್ ಇನ್ ಏನ್ಷಿಯಂಟ್ ಇಂಡಿಯಾ, ಬನಾರೆಸ್, ೧೯೫೫, ಪು.ಸಂ.೨೮

೨೬೫. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು.ಸಂ.೧೯

೨೬೬. ಎ.ಕ.VII., ಚನ್ನಗಿರಿ, ೪೩

೨೬೭. ಶಿವಣ್ಣ ಕೆ.ಎಸ್.(ಸಂ)., ಕರ್ನಾಟಕ ಚರಿತ್ರೆ ಸಂಪುಟ–೩, ೧೯೯೭, ಪು.ಸಂ.೩೨೫

೨೬೮. ಎಲಿಜಬೆತ್ ವಿ.ಎಸ್., ರಾಷ್ಟ್ರಕೂಟ ಪ್ರಾಬಲ್ಯದ ಸಮಯದಲ್ಲಿದ್ದ ಕರ್ನಾಟಕದ ರಾಜಕೀಯ ಸ್ವರೂಪ, ಸುರೇಂದ್ರರಾವ್ ಬಿ.(ಸಂ)., ಕರ್ನಾಟಕ ಚರಿತ್ರೆ, ಸಂಪುಟ–೩, ೧೯೯೭, ಪು.ಸಂ.೧೭, ೧೮

೨೬೯. ಎ.ಕ.IV., ಚಾಮರಾಜನಗರ–೧೬

೨೭೦. ಶಿವಣ್ಣ ಕೆ.ಎಸ್., ಪೂರ್ವೋಕ್ತ, ಪು.ಸಂ.೧೫೩

೨೭೧. ಮೋಹನ್‌ಕೃಷ್ಣ ರೈ ಕೆ., ಪೂರ್ವೋಕ್ತ, ಪು.ಸಂ.೩೧

೨೭೨. ಲಕ್ಷ್ಮಣ್ ತೆಲಗಾವಿ (ಸಂ)., ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೨೦೦೮, ಪು.ಸಂ.೭೩

ಅಧ್ಯಾಯ - ಆರು

# ನಾಯಕರ ಕಾಲದ ವ್ಯಾಪಾರ ಸಂಬಂಧಗಳು

೬.೧. ನಾಯಕರ ವ್ಯಾಪಾರ ನೀತಿ

೬.೨. ವರ್ತಕ ಸಮುದಾಯಗಳು

೬.೩. ವ್ಯಾಪಾರ ಮತ್ತು ವಾಣಿಜ್ಯ

೬.೪. ಉದ್ದಿಮೆಗಳು ಮತ್ತು ಉದ್ದಿಮೆದಾರರು

೬.೫. ಸಾರಿಗೆ ಸಂಪರ್ಕ

೬.೬. ಯುರೋಪಿನ ಕಂಪನಿಗಳೊಂದಿಗೆ ಸಂಬಂಧಗಳು

೬.೭. ಚಿತ್ರದುರ್ಗದ ನಗರೀಕರಣ ಮತ್ತು ಪೇಟೆ-ಪಟ್ಟಣಗಳ ಬೆಳವಣಿಗೆ

## ಅಧ್ಯಾಯ – ಆರು

# ನಾಯಕರ ಕಾಲದ ವ್ಯಾಪಾರ ಸಂಬಂಧ

### ೬.೧. ನಾಯಕರ ವ್ಯಾಪಾರ ನೀತಿ

ಮಾನವನು ಆರಂಭದಿಂದಲೂ ಸಮಾಜ ಜೀವಿಯಾಗಿದ್ದು, ಆತ ಏಕಾಂಗಿಯಾಗಿ ಬದುಕಲಾರ ಎಂಬ ಅರಿಸ್ಟಾಟಲರ ವಿಚಾರದಂತೆ ಅವನು ಸದಾಕಾಲ ಮತ್ತೊಬ್ಬರೊಂದಿಗೆ ಪರಸ್ಪರ ಒಡನಾಟ ಹೊಂದಿರುವ ಜೀವಿಯಾಗಿದ್ದಾನೆ. ಆತ ತನ್ನ ದೈನಂದಿನ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳಲು ಅವನು ಇತರರೊಂದಿಗೆ ಪರಸ್ಪರ ಸಹಾಯ, ಸಹಕಾರಗಳೊಂದಿಗೆ ಬದುಕುವುದು ಅನಿವಾರ್ಯವಾಗಿದೆ. ಇಂತಹ ಬದುಕನ್ನು ನಿರ್ಮಿಸಿಕೊಳ್ಳಲು ತನ್ನಲ್ಲಿ ಲಭ್ಯವಿಲ್ಲದೆ ಇರುವ ವಸ್ತುಗಳನ್ನು ಲಭ್ಯವಿರುವವರಿಂದ ಪಡೆದುಕೊಂಡು ತನ್ನ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳುತ್ತಿರುವುದನ್ನು ಪ್ರಾಚೀನ ಕಾಲದಿಂದಲೂ ಕಾಣುತ್ತೇವೆ. ಇಂತಹ ಕೊಡುವ ಕೊಳ್ಳುವ ಪ್ರಕ್ರಿಯೆಯನ್ನು ವ್ಯವಹಾರ ಅಥವಾ ವ್ಯಾಪಾರವೆಂದು ಕರೆಯುತ್ತೇವೆ. ಪಾಣಿನಿಯು ತನ್ನ ಅಷ್ಟಾಧ್ಯಾಯ ಕೃತಿಯಲ್ಲಿ ವ್ಯವಹಾರ ಎಂಬ ಪದಕ್ಕೆ ಸಮನಾರ್ಥಕವಾಗಿ ಕ್ರಯ–ವಿಕ್ರಯ ಎಂಬ ಪದವನ್ನು ಬಳಕೆ ಮಾಡಿರುವುದನ್ನು ಕಾಣುತ್ತೇವೆ.[೧] ಕ್ರಯ ಎಂದರೆ ಕೊಳ್ಳುವುದು ಮತ್ತು ವಿಕ್ರಯ ಎಂದರೆ ಮಾರುವುದು ಎಂಬ ಅರ್ಥವನ್ನು ಈ ಪದಗಳು ಸೂಚಿಸುತ್ತವೆ. ಇದನ್ನ ವಿಸ್ತೃತವಾಗಿ ಅಧ್ಯೆಸಲು ಯತ್ನಿಸಿದಾಗ ಅಂಗಡಿ, ಸಂತೆ, ಮಾರುಕಟ್ಟೆಗಳಲ್ಲಿ, ವಸ್ತುಗಳನ್ನು ಮಾರಾಟ ಮಾಡುವುದು ಇಲ್ಲವೆ ಕೊಳ್ಳುವುದು (ವ್ಯಾಪಾರ ಮತ್ತು ವಾಣಿಜ್ಯ) ಎಂದು ತಿಳಿದುಬರುತ್ತದೆ.

ಯಾವುದೇ ಒಂದು ಪ್ರದೇಶದ ಆರ್ಥಿಕ ಸ್ಥಿತಿಯು ಪ್ರಬಲಗೊಳ್ಳಬೇಕಾದರೆ ಕೃಷಿ ಮತ್ತು ಕೈಗಾರಿಕಾ ವ್ಯವಸ್ಥೆಗಳು ಪ್ರಮುಖವಾದವು ಎಂಬುದು ನಮಗೆ ತಿಳಿದ ವಿಷಯವಾಗಿದೆ. ಆದರೆ ಕೃಷಿ ಮತ್ತು ಕೈಗಾರಿಕೆಗಳಿಂದ ಉತ್ಪಾದಿಸಲ್ಪಟ್ಟ ವಸ್ತುಗಳು ಗ್ರಾಹಕರನ್ನು ತಲುಪುವುದು ಅಷ್ಟೇ ಅಗತ್ಯವಾಗಿದೆ. ಈ ಪ್ರಕ್ರಿಯೆಯು ಸರಾಗವಾಗಿ ಸಾಗಬೇಕಾದರೆ ವ್ಯಾಪಾರ ಮತ್ತು ವಾಣಿಜ್ಯ ವ್ಯವಸ್ಥೆಯ ಪರಿಕಲ್ಪನೆಯು ಗತಕಾಲದ ಮಾನವನೊಂದಿಗೆ ಬೆಳೆದುಕೊಂಡು ಬಂದಿದೆ ಎಂದರೆ ತಪ್ಪಾಗದು. ಚರಿತ್ರೆಯ ಪೂರ್ವ ಕಾಲದಿಂದಲೂ ವಸ್ತುಗಳನ್ನು ಅದಲು ಬದಲು ಮಾಡಿಕೊಳ್ಳುವುದರ ಮೂಲಕ ನಿಗದಿತ ಮೌಲ್ಯಾಂಕನ ಪದ್ಧತಿಯು ಪ್ರಾಯಶಃ ಆರಂಭವಾಗಿರುವ ಈ ಪದ್ಧತಿಯನ್ನು ವಸ್ತು ವಿನಿಮಯ ಇಲ್ಲವೆ ಸಾಟಿ

ಪದ್ಧತಿ ಎಂದು ಕರೆಯಲಾಗಿದೆ.[3] ಸಾಮಾನ್ಯವಾಗಿ ಈ ಪದ್ಧತಿಯು ಚರಿತ್ರೆ ಆರಂಭಕಾಲದಿಂದಲೂ ಬೆಳೆದು ಬಂದಿದ್ದು ನಂತರದಲ್ಲಿ ಸಂಭವಿಸಿದ ರಾಜಕೀಯ ಮತ್ತು ಆರ್ಥಿಕ ಬೆಳವಣಿಗೆಗಳ ಪರಿಣಾಮವಾಗಿ ಇದು ವಿಭಿನ್ನ ಸ್ವರೂಪವನ್ನು ಪಡೆದು ಕೊಂಡು ವಸ್ತು ವಿನಿಮಯ ಪದ್ಧತಿಯ ಬದಲಾಗಿ ವಿನಿಮಯ ಮಾಧ್ಯಮವಾಗಿ ನಾಣ್ಯಗಳ ಬಳಕೆ ಆರಂಭವಾದಿನಿಂದ ವ್ಯಾಪಾರ ಮತ್ತು ವಾಣಿಜ್ಯ ವ್ಯವಸ್ಥೆಯಲ್ಲಿ ಸಾಕಷ್ಟು ಬದಲಾವಣೆಯನ್ನು ಕಾಣಬಹುದು. ಪ್ರಸ್ತುತ ಅಧ್ಯಾಯದಲ್ಲಿ ಚಿತ್ರದುರ್ಗ ನಾಯಕರ ಕಾಲದ ವ್ಯಾಪಾರ–ವಾಣಿಜ್ಯದಲ್ಲಿ ನಾಯಕರ ನೀತಿಯನ್ನು ಕುರಿತು ಅಧ್ಯಯನ ಮಾಡಲಾಗುವುದು.

ಚಿತ್ರದುರ್ಗ ನಾಯಕರ ವ್ಯಾಪಾರ ನೀತಿಯನ್ನು ಪರಿಶೀಲಿಸಿದಾಗ ನಾಯಕರು ಆಳಿದ ಚಿತ್ರದುರ್ಗ ಜಿಲ್ಲೆಯ ಹೆಚ್ಚಿನ ಪ್ರದೇಶ ಭೌಗೋಳಿಕವಾಗಿ ಬಯಲು ಸೀಮೆಯಾಗಿದ್ದು, ಅದು ಸಮತೋಲನವನ್ನು ಪಡೆದುಕೊಂಡಿತ್ತು. ಪ್ರಾಕೃತಿಕ ಸಂಪನ್ಮೂಲಗಳಾದ ಹವಾಗುಣ, ಖನಿಜ, ಜಲ ಸಂಪತ್ತು, ಕಾಡು ಹೊರಗಿನಿಂದ ಜನರನ್ನು ವಲಸೆ ಬರುವಂತೆ ಆಹ್ವಾನಿಸುವಷ್ಟು ಸಮೃದ್ಧವಾಗಿತ್ತು. ಮಿಶ್ರ ಬೇಸಾಯ ವಾಣಿಜ್ಯ ಬೆಳೆಗಳು, ಖುಷ್ಕಿ ಬೆಳೆಗಳು, ಕೃಷಿ ವ್ಯವಸ್ಥೆಯನ್ನು ವೈವಿಧ್ಯಮಯಗೊಳಿಸಿದ್ದರೆ ಬುಡಕಟ್ಟು ವೃತ್ತಿಗಳಾದ ಪಶುಪಾಲನೆ, ಕುರಿ ಸಾಕಣೆ, ಹೈನುಗಾರಿಕೆ, ಆರ್ಥಿಕ ವ್ಯವಸ್ಥೆಯನ್ನು ಸಮೃದ್ಧಗೊಳಿಸಿದ್ದವು. ಇಂತಹ ಆರ್ಥಿಕ ಸಮತೋಲನದ ಪರಿಣಾಮವಾಗಿ ಸಂಸ್ಥಾನ ಆರ್ಥಿಕವಾಗಿ ಅಭಿವೃದ್ಧಿ ಹೊಂದಿತ್ತು. ಚಿತ್ರದುರ್ಗದ ನಾಯಕರು ವಿಜಯನಗರ ಅರಸರ ಮಾರ್ಗದಲ್ಲಿಯೇ ಮುನ್ನಡೆದು ಸ್ಥಳೀಯ ಬುಡಕಟ್ಟು ಸಂಸ್ಕೃತಿಯ ಆರ್ಥಿಕ ವ್ಯವಸ್ಥೆಯ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದರು.

ಜೀವ ನದಿಗಳಿಲ್ಲದ ಈ ಪ್ರದೇಶದಲ್ಲಿ ಕೆರೆಗಳು ನೀರಿನ ಮೂಲಗಳಾಗಿದ್ದವು. ಚಂದ್ರವಳ್ಳಿ ಕೆರೆ ಮಹತ್ವದ್ದಾಗಿದ್ದು ಮೌರ್ಯರ, ಕದಂಬರ ಕಾಲದಿಂದಲೂ ಅಸ್ಥಿತ್ವದಲ್ಲಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಚಿತ್ರದುರ್ಗ ನಾಯಕರು ಸ್ಥಳೀಯ ಪ್ರದೇಶದ ಕೃಷಿ ಚಟುವಟಿಕೆ ಹಾಗೂ ನೀರಾವರಿಗೆ ಪ್ರೇರಣೆ ನೀಡಲು ಅನೇಕ ಲೋಕೋಪಯೋಗಿ ಕಾರ್ಯಗಳಿಗೆ ಗಮನಕೊಟ್ಟಿದ್ದರು. ಚಿತ್ರದುರ್ಗ ತಾಲ್ಲೂಕಿನಲ್ಲಿರುವ ಭೀಮಸಮುದ್ರ ಕೆರೆ, ಅಬ್ಬನಾಯಕನಹಳ್ಳಿ ಕೆರೆ, ಭರಮಸಾಗರದ ಕೆರೆ, ಮೊದಲಾದ ಸುಮಾರು ೨೮ ಕೆರೆಗಳ ನಿರ್ಮಾಣ ಮತ್ತು ಜೀರ್ಣೋದ್ಧಾರ ಕಾರ್ಯಗಳು ಚಿತ್ರದುರ್ಗದ ಪಾಳೇಗಾರ ಬಿಚ್ಚುಗತ್ತಿ ಭರಮಪ್ಪ ನಾಯಕನ ಕಾಲದಲ್ಲಿ ನಡೆದಿವೆ.[3] ಕಾರಣ ಕೆರೆಯ ಕಾಲುವೆ ನೀರಾವರಿ ಮೂಲಕ ಕೃಷಿ ಉತ್ಪಾದನೆಯನ್ನು ಹೆಚ್ಚಳ ಮಾಡಿ ಮಾರುಕಟ್ಟೆಯಲ್ಲಿ ಲಾಭ ಪಡೆಯುವುದು ಹಾಗೂ ಕಂದಾಯದ ಮೂಲಕ ತಮ್ಮ ಆಡಳಿತ ಪ್ರದೇಶದ ಅಭಿವೃದ್ಧಿ ಮಾಡುವುದಾಗಿತ್ತು. ಬಹು ಮುಖ್ಯವಾಗಿ ಚಿತ್ರದುರ್ಗ ಪ್ರದೇಶ ನಾಯಕರ ಕಾಲದ ಮುಖ್ಯ ವ್ಯಾಪಾರ ಕೇಂದ್ರವಾಗಿದ್ದ ಕಾರಣ ವ್ಯಾಪಾರಸ್ಥರನ್ನು ತನ್ನತ ಸೆಳೆಯುವ ಉದ್ದೇಶವನ್ನು ಹೊಂದಿದ್ದರು.

ಮೊಳಕಾಲ್ಮೂರು ತಾಲೂಕು ಮರಡಿ[4] ಮತ್ತು ಕರಡಿ ಹಳ್ಳಿ[5] ಅಕ್ಕಪಕ್ಕದಲ್ಲಿರುವ ಎರಡು ಶಾಸನಗಳು ಸ್ಥಳೀಯ ಜನ ತಮ್ಮ ಅಧಿಕಾರಿಗಳು ಮಾಡುತ್ತಿದ್ದ ಅನ್ಯಾಯದ ಹಣ ವಸೂಲು ಬಗ್ಗೆ ಮಾಡಿಕೊಂಡ ಮನವಿಯನ್ನು ಒಳಗೊಂಡಿದೆ. ಆ ಗ್ರಾಮಗಳ ನಿವಾಸಿಗಳಿಗೆ ಅನ್ಯಾಯದ ತೆರಿಗೆಗಳಿಂದ ವಿನಾಯಿತಿ ನೀಡುವಂತೆಯೂ ಆ ಮೊದಲೇ ವಸೂಲಿ ಮಾಡಿದ್ದ ಅನ್ಯಾಯದ ತೆರಿಗೆ ಹಣವನ್ನು ಕೆರೆ, ದೇವಾಲಯ ಮುಂತಾದ ಸಾರ್ವಜನಿಕ ಕಾರ್ಯಗಳ ದುರಸ್ತಿಗಾಗಿ ಬಳಸಿಕೊಳ್ಳುವಂತೆಯೂ ರಾಜ ಆದೇಶ ಹೊರಡಿಸಿರುವುದರಲ್ಲಿ ಗಮನಿಸಬೇಕಾದ ಅಂಶವಾಗಿದೆ. ಆ ವ್ಯವಹಾರಗಳನ್ನು ಸರಿಪಡಿಸಿ, ಅಕ್ರಮಗಳಿಂದ

ಬಂದ ಆದಾಯದಿಂದ ರಚನಾತ್ಮಕ ಸಾರ್ವಜನಿಕ ಕಾರ್ಯಗಳು ಅನುಷ್ಠಾಗೊಳಿಸಿದ್ದ ನಾಯಕರ ಜನಪರ ಆದೇಶವನ್ನು ಸ್ಮರಿಸಬಹುದು.

ಕ್ರಿ.ಶ.೧೫೭೩ರ ಶಾಸನ[೫] ಸಿದ್ದಯ್ಯನ ಕೋಟೆ ಪಶ್ಚಿಮಕ್ಕೆ ಇರುವ ಕೆರೆಯು ಬಹಳ ಕಾಲದಿಂದಲೂ ಒಡೆದು ಹೋಗಿದ್ದು ದುರಸ್ತಿಯಾಗದಿರುವ ಕಾರಣ ಆ ಗ್ರಾಮದ ಗೌಡ, ಶಾನುಭೋಗ ಮತ್ತು ಇತರೆ ಗ್ರಾಮಸ್ಥರು ಮಹಾನಾಯಕಾಚಾರ್ಯ ಪದ್ದಣ್ಣ ನಾಯಕನಿಗೆ ಆ ಕೆರೆಯ ತೂಬಿನ ಕೆಳಗಿನ ಜಮೀನುಗಳನ್ನು ನೀಡುವುದಾದಲ್ಲಿ ನಾವು ಕೆರೆಯನ್ನು ದುರಸ್ತಿಗೊಳಿಸುತ್ತೇವೆ ಎಂದು ಮನವಿ ಸಲ್ಲಿಸುತ್ತಾರೆ. ಇದರಿಂದಾಗಿ ಸ್ಥಳೀಯ ಜನರಿಗೆ ಸೂಕ್ತ ರಿಯಾಯಿತಿ, ಪ್ರೋತ್ಸಾಹ ಮತ್ತು ಉತ್ತೇಜನಕಾರಿ ಕಾರ್ಯಗಳನ್ನು ವಿಸ್ತರಿಸಿದಲ್ಲಿ ಅವರ ದುರಸ್ತಿ ಮತ್ತು ನಿರ್ವಹಣೆ ಕಾಮಗಾರಿಗಳನ್ನು ನಿರ್ವಹಿಸಿಕೊಳ್ಳುವರಾಗಿದ್ದರು ಎಂಬುದು ಸ್ಪಷ್ಟಗೊಂಡಿದೆ.

ಕ್ರಿ.ಶ.೧೮೯೨ರ ಬಲ್ಲಾಳ ಸಮುದ್ರದ ಶಾಸನ[೬] ಕೆರೆಯ ಕೋಡಿಯ ದುರಸ್ತಿಗಾಗಿ ಕೊಡುಗೆಯನ್ನು ವೀರಣ್ಣಗೌಡ, ರಾಮಯ್ಯ ಮತ್ತು ಮಹಾಂತಯ್ಯನಿಗೆ, ಬೆಜವಲಾರಿ-೪, ಖಾ-೪೧/೨ ಮತ್ತು ತರಿ-೧/೨ ಭಾಗದ ಕೊಡುಗೆಯನ್ನು ಜಹಗೀರ್‌ದಾರ್ ಅಬ್ದುಲ್ ಸಾಹೇಬ್, ಮುಜುಂದಾರ್ ವೆಂಕಟರಾಯ, ಹಮಲ್ದಾರ್ ಮಿರ್ಜಾಖಾನ್ ಹಾಗೂ ಬಡವ ಮಾದಿಗ ವೆಂಕಟಗಿರಿಯಪ್ಪನವರ ಪರವಾಗಿ ಕೆರೆಯ ಕೋಡಿಯನ್ನು ದುರಸ್ತಿಪಡಿಸಿದುದಕ್ಕಾಗಿ ನೀಡಿರುವುದನ್ನು ಉಲ್ಲೇಖಿಸಿದೆ. ಮುಖ್ಯವಾಗಿ ಕೆರೆಯ ಹಿಂದಿನ ಫಲವತ್ತಾದ ಭೂಮಿ ಮೇಲ್ವರ್ಗದ ಜನರ ಆಸ್ತಿಯಾಗಿರುತ್ತದೆ ಎಂಬುವುದು ಈಗಾಗಲೇ ಚರಿತ್ರೆಯಲ್ಲಿ ನೋಡಿದ್ದೇವೆ. ಆದರೆ ಮಾದಿಗ ಸಮುದಾಯದ ವೆಂಕಟಗಿರಿಯಪ್ಪ ಎಂಬುವವರ ಹೆಸರು ಶಾಸನದಲ್ಲಿ ಉಲ್ಲೇಖವಿದ್ದು ಇವರು ಸಹ ಕೆರೆ ಹಿಂದೆ ಫಲವತ್ತಾದ ಭೂಮಿಯನ್ನು ಹೊಂದಿದ್ದರು ಅವರಿಗೆ ಸಮಾಜದಲ್ಲಿ ಸ್ಥಾನಮಾನ ಕಲ್ಪಿಸುವ ಕಾರ್ಯ ನಾಯಕರ ಅವಧಿಯಲ್ಲಿತ್ತು ಎನ್ನಬಹುದು.

ಚಳ್ಳಕೆರೆ ತಾಲೂಕಿನ ನಾಯಕನಹಟ್ಟಿಯ ದೊಡ್ಡ ಕೆರೆಯೂ ಸೇರಿದಂತೆ ಈ ಪ್ರದೇಶದಲ್ಲಿ ೫೯ ದೊಡ್ಡಕೆರೆಗಳು, ೧೦೨ ಸಣ್ಣ ಕೆರೆಗಳು ಈಗಲೂ ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ಇವುಗಳ ನಿರ್ಮಾಣ ಕೃಷಿ ಮತ್ತು ನೀರಾವರಿ ಚಟುವಟಿಕೆಗಳ ಹೆಚ್ಚಳಕ್ಕೆ ಆ ಮುಖಾಂತರ ಪ್ರಾದೇಶಿಕ ಸಂವೃದ್ಧಿಗೆ ಕಾರಣರಾದರು.

ಕೃಷಿಯ ಜೊತೆಗೆ ಕೃಷಿಯ ಉಪಕಸುಬುಗಳಿಗೆ ಅನುಗುಣವಾಗಿ ಪರಿಸರ ಹಾಗೂ ಕಚ್ಚಾ ವಸ್ತುಗಳು ಲಭ್ಯವಿದ್ದವು. ಇಂತಹ ಕಸುಬುಗಳಲ್ಲಿ ಪ್ರಮುಖವಾಗಿ ಹತ್ತಿಬಟ್ಟೆ ಮತ್ತು ಉಣ್ಣೆಬಟ್ಟೆಗಳ ತಯಾರಿಕೆ ಹಾಗೂ ಬಿಳಿ ಮತ್ತು ವಿವಿಧ ಬಣ್ಣಗಳುಳ್ಳ ಒರಟಾದ ಹತ್ತಿ ಬಟ್ಟೆಯನ್ನು ದೇವಾಂಗ ಮತ್ತು ಹೊಲೆಯರು ಎಂಬ ಜಾತಿಯ ಜನರು ಈ ಪ್ರದೇಶದಲ್ಲಿ ತಯಾರಿಸುತ್ತಿದ್ದರು.[೭]

ಬುಡಕಟ್ಟು ಜನಾಂಗವಾಗಿ ಗೊಲ್ಲ, ನಾಯಕರು ಪಶುಪಾಲನೆ, ಕುರಿ ಸಾಕಣಿಕೆಯಿಂದ ಹೈನುಗಾರಿಕೆಗೆ ಉತ್ತೇಜನ ನೀಡುತ್ತಿದ್ದರು. ಇಲ್ಲಿಯ ಭೂಮಿ ಕುರಿ ಸಾಕಣಿಕೆಗೆ ತುಂಬ ಅನುಕೂಲವಾಗಿತ್ತು. ಈ ಕುರಿಯ ಉಣ್ಣೆಯಿಂದ ಕಂಬಳಿ ತಯಾರಿಸುತ್ತಿದ್ದರು. ಬಹುತೇಕ ಮನೆಯ ಹೆಣ್ಣು ಮಕ್ಕಳು ಕಂಬಳಿಯನ್ನು ನೇಯ್ದು ಕುಟುಂಬದ ಜವಾಬ್ದಾರಿ ನಡೆಸುತ್ತಿದ್ದರು. ಹೊಸದುರ್ಗ ಸೀಮೆ ಹಾಗೂ ಮೊಳಕಾಲ್ಮೂರು ಸೀಮೆ ಕಂಬಳಿ ನೇಯ್ಗೆಯಲ್ಲಿ ತುಂಬಾ ಹೆಸರು ಮಾಡಿದ ಪ್ರದೇಶಗಳು ಆಗಿದ್ದು, ಇಲ್ಲಿ ನೇಯ್ದ ಕಂಬಳಿಗಳು ಮದ್ರಾಸ್ ಮತ್ತು ಮುಂಬೈ ಭಾಗಗಳಿಗೆ ಸರಬರಾಜು ಆಗುತ್ತಿದ್ದವು.

ಕೃಷಿ ಮೂಲಕ ಎಣ್ಣೆ ತಯಾರಿಸುವ ಗಾಣಗಳು ಹೆಚ್ಚು ಪ್ರಸಿದ್ಧಿ ಪಡೆದಿದ್ದವು. ಇಲ್ಲಿ ಶೇಂಗಾ, ಸೂರ್ಯಕಾಂತಿ, ಕುರಸಾನಿ, ಹರಳು ಎಳ್ಳು ಬೆಳೆಯುತ್ತಿದ್ದರು. ಎಣ್ಣೆ ತೆಗೆಯುವುದನ್ನು ಕುಲಕಸುಬಾಗಿಸಿಕೊಂಡಿದ್ದ ಗಾಣಿಗರು ಚಿತ್ರದುರ್ಗ, ಹಿರಿಯೂರು, ಚಳ್ಳಕೆರೆ, ನೀರ್ಥಡಿ, ಪ್ರದೇಶಗಳಲ್ಲಿ ನೆಲೆಸಿದ್ದರು. ಈಗಲೂ ಚಳ್ಳಕೆರೆ ಕೈಗಾರಿಕೆಯಿಂದ ಮನ್ನಣೆ ಪಡೆದಿದೆ. ಕುಂಬಾರಿಕೆ ಮತ್ತು ಕಮ್ಮಾರಿಕೆ ಸಹ ವ್ಯಾಪಕವಾಗಿದ್ದವು. ಇವರು ಗ್ರಾಮದ ಹನ್ನೆರಡು ಜನ ಆಯಗಾರರಲ್ಲಿ ಒಬ್ಬರಾಗಿದ್ದರು. ಕುಂಬಾರರು ಮತ್ತು ಬಡಿಗೆ ವೃತ್ತಿಸಂಘ ಅಸ್ತಿತ್ವದಲ್ಲಿದ್ದ ಬಗ್ಗೆ ದಾಖಲೆಗಳಲ್ಲಿ ಉಲ್ಲೇಖಿಸಲಾಗಿದೆ. ಚಿತ್ರದುರ್ಗ ಪ್ರದೇಶವು ವೈವಿಧ್ಯಮಯವಾದ ಖನಿಜಗಳ ಕಣಜವಾಗಿತ್ತು. ಸುಮಾರು ೨೦೦ ವರ್ಷಗಳಷ್ಟು ಹಳೆಯದಾದ ಚಿನ್ನದ ಗಣಿಗಳು ಬೆಟ್ಟದ ಹತ್ತಿರ ಇದ್ದವು.[೮] ಕಬ್ಬಿಣದ ಅದಿರು ಮತ್ತು ತಾಮ್ರದ ಅದಿರು ದೊರಕುತ್ತಿದ್ದವು. ಕಬ್ಬಿಣವನ್ನು ತಯಾರಿಸುವ ಕುಲುಮೆಗಳ ಬಗ್ಗೆ ಬುಕಾನನ್ ದಾಖಲಿಸಿದ್ದಾನೆ.[೯] ಈ ಪ್ರದೇಶಗಳಲ್ಲಿ ಅಗ್ನಿಶಿಲೆಯಾದ ಗ್ರಾನೈಟ್ ಹೇರಳವಾಗಿ ದೊರೆಯುತ್ತಿತ್ತು. ಕೋಟೆ ಮತ್ತು ವಸತಿ ನಿರ್ಮಾಣದಲ್ಲಿ ಇದನ್ನು ಹೆಚ್ಚಾಗಿ ಬಳಸಿದ್ದಾರೆ. ಚಿತ್ರದುರ್ಗದ ಏಳುಸುತ್ತಿನ ಕೋಟೆ ಈ ಶಿಲೆಯಿಂದ ನಿರ್ಮಾಣವಾಗಿದ್ದು ಇಂದು ಸುಭದ್ರ ಸ್ಥಿತಿಯಲ್ಲಿದೆ. ಕೋಟೆಯ ನಿರ್ಮಾಣ ಕಾರ್ಯದಲ್ಲಿ ತನ್ನದೇ ಆದ ಆರ್ಥಿಕ ನೀತಿಯನ್ನು ನಾಯಕರು ಹೊಂದಿದ್ದರು. ಕೆಲವು ಸಮುದಾಯಗಳು ಇಡೀ ನಾಯಕರ ಜೀವಿತಾವಧಿಯವರೆಗೆ ಕೋಟೆ ನಿರ್ಮಾಣ ಹಾಗೂ ಅವರ ಶೈಲಿ ಮತ್ತು ಅವರಿಗೆ ಸಂದಬೇಕಾದ ಕೂಲಿ ಇವಿಷ್ಟೂ ಆರ್ಥಿಕತೆಯ ಮೂಲವೇ ಆಗಿವೆ.

ಈ ಪ್ರದೇಶದಲ್ಲಿ ಸ್ಥಳೀಯವಾಗಿ ಉತ್ಪಾದಿಸುವ ವಸ್ತುಗಳು ಸ್ಥಳೀಯ ಮಾರುಕಟ್ಟೆಯಲ್ಲಿ ಪ್ರಸಿದ್ಧಿ ಪಡೆದಿದ್ದವು. ಅವುಗಳೆಂದರೆ ಹತ್ತಿ ಮತ್ತು ಉಣ್ಣೆಯ ಉತ್ಪನ್ನಗಳು, ಧಾನ್ಯಗಳು, ಎಣ್ಣೆಕಾಳುಗಳು, ಅಡಿಕೆ, ಬಂಗಾರ, ತಾಮ್ರ, ಕಬ್ಬಿಣ, ಬಳೆ ಇನ್ನೂ ಮುಂತಾದವು.

ಈ ಪ್ರದೇಶದಲ್ಲಿ ತಯಾರಾಗುತ್ತಿದ್ದ ಸರಳವಾದ ಮತ್ತು ಕಪ್ಪು ಬಣ್ಣದ ಕಂಬಳಿ, ಎಣ್ಣೆ, ಒರಟಾದ ಹತ್ತಿ ಬಟ್ಟೆಗಳು, ಬಳೆಗಳು, ಕಬ್ಬಿಣ, ತಾಮ್ರ ಅತ್ಯಂತ ಉತ್ತಮ ಮಟ್ಟದ್ದಾಗಿತ್ತು. ಗ್ರಾಮಾಂತರ ಪ್ರದೇಶದಲ್ಲಿ ವಸ್ತ್ರ ವಿನಿಮಯ ಪದ್ಧತಿ ಪ್ರಚಲಿತದಲ್ಲಿತ್ತು. ಗಂಧ, ಕರ್ಪೂರ, ಕುಂಕುಮ, ಕಸ್ತೂರಿ, ವಜ್ರ, ಕುದುರೆ, ಈ ಪ್ರದೇಶಕ್ಕೆ ಆಮದು ಮಾಡಿಕೊಳ್ಳುತ್ತಿದ್ದರು. ವರಹಗಳು ನಾಡಿನ ಎಲ್ಲ ಭಾಗದಲ್ಲಿ ಚಲಾವಣೆಯಲ್ಲಿದ್ದವು.[೧೦]

ಮದಕರಿ ನಾಯಕನು ಪ್ರತ್ಯೇಕವಾದ ಟಂಕಸಾಲೆಯನ್ನು ಚಿತ್ರದುರ್ಗ ಕೋಟೆಯಲ್ಲಿ ಹೊಂದಿದ್ದನು. ಖಂಡುಗ, ಕೊಳಗ, ಬಳ್ಳ, ಸೊಲಗೆ, ಮಣ, ಮಾನ, ಅಳತೆ, ಸೇರು ಬಟ್ಟುಗಳಾದ ತೂಕ ಅಳತೆಯ ಮಾಪನಗಳ ಪ್ರಸ್ತಾಪ ಶಾಸನಗಳಲ್ಲಿ ಬರುತ್ತವೆ. ಈ ಅಳತೆಯಲ್ಲಿ ಏಕರೂಪತೆ ಇರದೆ ಪ್ರಾದೇಶಿಕ ಭಿನ್ನತೆಯಿಂದ ಕೂಡಿದ್ದವು. ಇವುಗಳ ಮೇಲೆ ಪಾಳೆಯಗಾರರ ನಿಯಂತ್ರಣವಿತ್ತು.[೧೧] ಚಿತ್ರದುರ್ಗದ ಪ್ರದೇಶವು ಹೆಚ್ಚಾಗಿ ಬಯಲು ಸೀಮೆಯ ಪ್ರದೇಶವಾಗಿದ್ದರಿಂದ ಸಾರಿಗೆ ಸಂಪರ್ಕ ಸುಗಮವಾಗಿತೆಂದು ಹೇಳಬಹುದು. ಈ ಪ್ರದೇಶದ ವರ್ತಕರು ಬಸವಾಪಟ್ಟಣ, ಸಾಗರ, ಸಂತೇಬೆನ್ನೂರು, ತರೀಕೆರೆ, ಐಮಂಗಳ, ನಿಡುಗಲ್ಲು, ಮಧುಗಿರಿ, ಶಿರಾ, ಹರಪನಹಳ್ಳಿ ಇನ್ನು ಮುಂತಾದ ವ್ಯಾಪಾರ ಕೇಂದ್ರಗಳೊಂದಿಗೆ ಸಂಪರ್ಕದ ಜೊತೆಗೆ ವ್ಯಾಪಾರ ಚಟುವಟಿಕೆ ನಡೆಸುತ್ತಿದ್ದರು. ಈ ಸಂಸ್ಥಾನದ ಒಳಗೆ ೧೨ ದೊಡ್ಡ ನಗರಗಳನ್ನು ೫೬ ಚಿಕ್ಕ ವ್ಯಾಪಾರ ಕೇಂದ್ರಗಳನ್ನು ಗುರುತಿಸಬಹುದು. ಪದಾರ್ಥಗಳನ್ನು ಸಾಗಿಸಲು ಗಾಡಿಗಳು, ಮತ್ತು ಪ್ರಾಣಿಗಳನ್ನು ಬಳಸುತ್ತಿದ್ದರು ಎಂದು ಬುಕಾನನ್ ದಾಖಲಿಸಿದ್ದಾನೆ.[೧೨]

ಚಿತ್ರದುರ್ಗ ನಾಯಕರ ಕೇಂದ್ರಸ್ಥಾನವಾಗಿದ್ದ ಚಿತ್ರದುರ್ಗದಲ್ಲಿ ಎರಡು ಬಹುಮುಖ್ಯವಾದ ಬಜಾರುಗಳಿದ್ದವು. ಈ ಬಜಾರುಗಳ ರಕ್ಷಣೆಗಾಗಿ ರಂಗಯ್ಯನ ಬಾಗಿಲು, ಆನೆ ಬಾಗಿಲು ಎಂಬ ಕೋಟೆಯ ದ್ವಾರಗಳಿವೆ. ಈ ದ್ವಾರದ ಇಕ್ಕೆಲಗಳಲ್ಲಿ ವ್ಯಾಪಾರ ಮಳಿಗೆಯ ಕಲ್ಲಿನ ಕಟ್ಟಡಗಳು ಈಗಲೂ ಕಾಣಬಹುದು. ಈ ಎರಡು ಬಜಾರುಗಳಿಗೆ ದೊಡ್ಡಪೇಟೆ ಮತ್ತು ಚಿಕ್ಕಪೇಟೆ ಎಂದು ಕರೆಯುತ್ತಾರೆ.

ದೊಡ್ಡಪೇಟೆ ಇದು ಪ್ರತಿ ಸೋಮವಾರದಂತು ನಡೆಯುವ ದೇಶ-ವಿದೇಶದಿಂದ ಬರುವ ವಾರದ ಸಂತೆ ನಡೆಯುವ ಸ್ಥಳವಾಗಿದೆ. ಚಿಕ್ಕಪೇಟೆಗೆ ರಾಗಿಪೇಟೆ[೧೩] ಎಂದು ಕರೆಯುತ್ತಿದ್ದರು ಎಂದು ವೆಂಕಣ್ಣಚಾರ್ ತಿಳಿಸಿದ್ದಾರೆ. ಇದು ಪ್ರತಿ ದಿನ ನಡೆಯುವ ಸಂತೆಯಾಗಿದ್ದು ಹೆಚ್ಚಿನ ವ್ಯಾಪಾರ ಮಳಿಗೆಯನ್ನು ಆನೆ ಬಾಗಿಲು ಬಳಿ ಕಾಣಬಹುದಾಗಿದೆ. ಪ್ರಸ್ತುತ ನಗರ ಪ್ರದೇಶ ಅಭಿವೃದ್ಧಿ ಹಾಗೂ ಜನಸಂಖ್ಯಾ ಹೆಚ್ಚಳದಿಂದಾಗಿ ಸಂತೆ ಮಾರುಕಟ್ಟೆ ಸ್ಥಳಗಳು ಹಸ್ತಾಂತರಗೊಂಡಿವೆ.

ಗ್ರಾಮದಲ್ಲಿ ಸೇವೆ ಸಲ್ಲಿಸುತ್ತಿದ್ದ ವ್ಯಕ್ತಿಗಳಿಗೂ ಭೂಮಿಯನ್ನು ನೀಡುತ್ತಿದ್ದರು. ಗ್ರಾಮದಲ್ಲಿ ವಾಸಿಸುವ ಜೋಯಿಸ, ಬಡಗಿ, ಕಮ್ಮಾರ, ಕುಂಬಾರ, ಅಕ್ಕಸಾಲಿ, ತೋಟಿ, ತಳವಾರ, ಓಲೆಗಾರ, ಪೂಜಾರಿ, ಮಾಲೆಗಾರ, ಕ್ಷೌರಿಕ ಇವರೇ ಮೊದಲಾದ ಆಯಗಾರರು ತಾವು ಸಲ್ಲಿಸುತ್ತಿದ್ದ ಸೇವೆಗೆ ಭೂಮಿ ಪಡೆಯುತ್ತಿದ್ದರು. ಇದು ಪೂರ್ಣವಾಗಿ ತೆರಿಗೆ ರಹಿತವಾಗಿರುತ್ತಿತ್ತು.[೧೪] ಉದಾಹರಣೆಗೆ ಚಿತ್ರದುರ್ಗ ನಾಯಕರು ಹನುಮನಗುಡಿ ಕಟ್ಟಿಸಿದ್ದಕ್ಕಾಗಿ ಮತ್ತು ದೇವಾಲಯಕ್ಕೆ ಸೇವೆ ಸಲ್ಲಿಸಿದ ಜನತೆಗೆ ಕೊಡಬೇಕಾಗಿತ್ತು.[೧೫] ಈ ಮೇಲಿನ ಅಂಶಗಳು ಸಮಾಜದಲ್ಲಿ ಸಾಮಾನ್ಯವಾಗಿ ಕೆಳವರ್ಗದಿಂದ ಬಂದ ಎಲ್ಲ ಸಮುದಾಯಗಳು ಅರಸರಿಗೆ ಹಾಗೂ ಭೂ ಮಾಲೀಕರಿಗೆ ಉಚಿತ ದುಡಿಯುತ್ತಿದ್ದರೆಂಬ ವಿಚಾರವನ್ನು ಸಮರ್ಥಿಸುತ್ತವೆ. ಕೆಳವರ್ಗದ ಸಮುದಾಯವು ಚಿತ್ರದುರ್ಗ ಪ್ರದೇಶದಲ್ಲಿ ಸ್ಪಷ್ಟವಾಗಿ ಮೇಲ್ವರ್ಗದ ಸಮುದಾಯವನ್ನು ಅವಲಂಬಿಸಿ ಜೀವನ ಸಾಗಿಸಿರುವುದನ್ನು ಲಾವಣಿಗಳಲ್ಲಿ, ಜನಪದ ಕಥೆಗಳಲ್ಲಿ ಮತ್ತು ತ.ರಾ.ಸುಬ್ಬರಾವ್‌ರವರ ಕಾದಂಬರಿಗಳಲ್ಲಿ ಅಲ್ಲಲ್ಲಿ ಕಂಡುಬರುತ್ತದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಸಮಸ್ತ ಭೂಮಿಯ ಒಡೆತನ ನಾಯಕ ಅರಸರಿಗೆ ಸೇರಿದ್ದಿತು. ಆದರೂ ಭೂ ಹಿಡುವಳಿಯ ಖಾಸಗಿ ಒಡೆತನವನ್ನು ನಾಯಕರು ರಕ್ಷಿಸುತ್ತಿದ್ದರು. ಅಲ್ಲದೆ ಅದಕ್ಕೆ ಮನ್ನಣೆ ಕೊಟ್ಟಿದ್ದರು. ಚಿತ್ರದುರ್ಗ ನಾಯಕರು ಭೂ ಹಿಡುವಳಿಯನ್ನು ಬೇರೆಯವರ ಒಡೆತನಕ್ಕೆ ನೀಡುವಾಗ ಅದು ಕ್ರಯ, ಭೋಗ್ಯ ಮತ್ತು ದಾನ ಮೊದಲಾದ ವಿಧಾನಗಳನ್ನು ಸೂರ್ಯ-ಚಂದ್ರರಿರುವತನಕ ಪುತ್ರ ಪವುತ್ರ ವಂಶಪಾರಂಪರ್ಯವಾಗಿ ಅನುಭವಿಸುವಂತೆ ಶಾಸನಗಳು ಸ್ಪಷ್ಟಪಡಿಸುತ್ತವೆ. ಕೃಷಿ ಪ್ರಧಾನವಾದ ಸಮಾಜದಲ್ಲಿ ಭೂ ಒಡೆತನವು ಭೂ ಮಾಲೀಕರಿಗೆ ಪ್ರತಿಷ್ಠೆಯ ಸಂಕೇತದ ಜೊತೆಗೆ ಆರ್ಥಿಕ ಸುಭದ್ರತೆಯನ್ನು ಒದಗಿಸಿದ್ದುದು ಸ್ಪಷ್ಟವಾಗುತ್ತದೆ.

ಒಟ್ಟಾರೆಯಾಗಿ ಚಿತ್ರದುರ್ಗವು ಒಂದು ಆಕರ್ಷಕವಾದ ಗಿರಿದುರ್ಗವಾಗಿದ್ದು ಏಳು ಸುತ್ತುಗಳ ಕೋಟೆ ಪ್ರಕಾರವನ್ನು ಹೊಂದಿದೆ. ಇದು ಮಧ್ಯಕಾಲದ ಒಂದು ಆಡಳಿತ ಕೇಂದ್ರ ಹಾಗೂ ವ್ಯಾಪಾರ ಕೇಂದ್ರವಾಗಿದೆ. ಇದರ ಒಳಗಿನ ಬೆಟ್ಟಗುಡ್ಡಗಳ ನಿವೇಶನದಲ್ಲಿ ಹಲವು ದೇವಾಲಯಗಳು, ಕೆರೆಗಳು ಇವೆ. ನಾಯಕರು ಕಟ್ಟಿಸಿದ ಹಲವಾರು ದೇವಾಲಯಗಳಲ್ಲಿ ನೀರ್ಥಡಿ ರಂಗನಾಥ ಮತ್ತು ಹಂಪನೂರು ಹನುಮಾನ್ ಮಂದಿರ ಉಲ್ಲೇಖನೀಯವಾಗಿವೆ. ಬಂಡೆಗಳಿಂದ ತುಂಬಿದ ಈ ರಾಜ್ಯವು ಕಟ್ಟಣೆ

ಕಲ್ಲುಗಳ ಗಣಿಗಾರಿಕೆ ಮತ್ತು ಕಂಬಳಿಗಳ ಉತ್ಪಾದನೆಗಳಿಗೆ ಪ್ರಸಿದ್ಧವಾಗಿತ್ತು. ಇಂಗಳದಾಳುವಿನಲ್ಲಿ ತಾಮ್ರದ ಗಣಿಗಳಿದ್ದವು. ಸೀರೆಗಳ ನೇಯ್ಗೆ ಹಾಗೂ ಕಬ್ಬಿಣದ ಗಣಿಗಾರಿಕೆಯೂ ರಾಜ್ಯದಲ್ಲಿ ನಡೆಯುತ್ತಿತ್ತು.

ಗಾಜನ್ನು ಉತ್ಪಾದಿಸುವವರೂ ರಾಜ್ಯದಲ್ಲಿ ಇದ್ದು ಬಳೆಯ ಉತ್ಪಾದನೆಗೆ ಮತ್ತೊಡು ಖ್ಯಾತಿಯನ್ನು ಪಡೆದಿತ್ತು. ಚಿತ್ರದುರ್ಗದ ನಾಯಕರು ಚಿತ್ರಗಾರರಿಗೂ ಪ್ರೋತ್ಸಾಹವಿತ್ತಿದ್ದರು. ಆದರೆ ಮಳೆಯ ನೆರಳಿನ ಈ ಒಣಪ್ರದೇಶದಲ್ಲಿ ಯುದ್ಧವೊಂದೇ ಪ್ರಮುಖ 'ಕೈಗಾರಿಕೆ'ಯಾಗಿ ತಮ್ಮ ಶೂರತನಕ್ಕೆ ಚಿತ್ರದುರ್ಗದ ನಾಯಕರು ಇಂದಿಗೂ ಖ್ಯಾತರಾಗಿದ್ದಾರೆ. ಈ ಮನೆತನದ ಬಗ್ಗೆ ಯುದ್ಧಕ್ಕೆ ಸಂಬಂಧಿಸಿದಂತೆ ಸಮೃದ್ಧವಾದ ಜಾನಪದ ಸಾಹಿತ್ಯವಿದೆ.

**೬.೨. ವರ್ತಕ ಸಮುದಾಯಗಳು**

ಮಾನವ ಜನಾಂಗದ ಆರ್ಥಿಕ ಬದುಕನ್ನು ರೂಪಿಸುವಲ್ಲಿ ವರ್ತಕರು ಮತ್ತು ವರ್ತಕ ಸಂಘಗಳು ತಮ್ಮದೇ ಆದ ಪಾತ್ರ ವಹಿಸಿವೆ. ವೈಯಕ್ತಿಕವಾಗಿ, ಸಾಂಘಿಕವಾಗಿ ಈ ವರ್ತಕರು ಕೈಗೊಂಡ ವ್ಯಾಪಾರ ವೃತ್ತಿಯಿಂದ ಸಮಾಜದ ಜೀವನ ಸ್ಥಿತಿಗತಿಗಳು ಒಂದು ಆಕಾರ ಪಡೆಯುತ್ತವೆ. ಇವು ರಾಜರು ಮತ್ತು ಪಾಳೆಯಗಾರರ ಕಾಲದಲ್ಲಿ ಬಹಳ ಪ್ರಾಮುಖ್ಯತೆ ಪಡೆದವುಗಳಾಗಿದ್ದವು. ಭಾರತೀಯ ಚರಿತ್ರೆಯಲ್ಲಿ ಹೇಳುವುದಾದರೆ, ವರ್ತಕರ ಪ್ರಥಮ ಉಲ್ಲೇಖ ವೈದಿಕ ಸಾಹಿತ್ಯದಷ್ಟು ಪೂರ್ವದಲ್ಲಿಯೇ ಲಭಿಸುವುದು. ಮಹಾಭಾರತದಲ್ಲಿ ಸರಕು ಮೊದಲಾದ ವ್ಯಾಪಾರದ ವಿಷಯವಿದೆ. ಆದರೆ ಬೌದ್ಧ ಸಾಹಿತ್ಯದಲ್ಲಿ ವರ್ತಕರು ಹಾಗೂ ವರ್ತಕರ ಸಂಘಗಳನ್ನು ಕುರಿತು ಸವಿವರವಾದ ಸಾಮಗ್ರಿ ಇದೆ.[೧೬]

ವ್ಯಾಪಾರ ಪರಂಪರೆಯನ್ನು ತೋರಿಸುವ ಪ್ರಧಾನ ಆಕರಗಳೆಂದರೆ ಕಾವ್ಯಗಳು. ಆದರೆ ಸಾಂಪ್ರದಾಯಿಕತೆ, ಉತ್ಪ್ರೇಕ್ಷೆಗಳಿಂದ ಕೂಡಿದ ವಸ್ತುನಿಷ್ಠತೆಯನ್ನು ಹೊತ್ತು ನಿಂತಿರುವ ಶಾಸನಗಳು ಕಾವ್ಯಗಳಿಗಿಂತ ಹೆಚ್ಚು ಪ್ರಯೋಜನಕಾರಿ ಎನಿಸಿವೆ. ಇವು ನಾಡಿನ ಆರ್ಥಿಕ ವ್ಯವಸ್ಥೆಯ ಮೂಲಭೂತ ಘಟಕಗಳಾದ ವರ್ತಕರ ಮತ್ತು ಸಂಘಗಳ ಚರಿತ್ರೆಯನ್ನು ಪ್ರಕಟಿಸುತ್ತವೆ.

ಚಿತ್ರದುರ್ಗ ನಾಯಕರ ಕಾಲದ ರಾಜಕೀಯ, ಸಾಂಸ್ಕೃತಿಕ ಚರಿತ್ರೆಯು ಈಗಾಗಲೆ ತಿಳಿದ ವಿಷಯವಾಗಿದ್ದು, ಆ ಪ್ರದೇಶದ ಅಂದಿನ ಅರ್ಥವ್ಯವಸ್ಥೆಗೆ ಅಲ್ಲಿನ ವರ್ತಕರು ನೀಡಿದ ಕೊಡುಗೆಯನ್ನು ಅದೇ ಕಾಲದ ಶಾಸನಗಳು ಮೌನವಾಗಿ ಧ್ವನಿಸುವುದನ್ನು ಗುರುತಿಸಬಹುದು. ಇಲ್ಲಿನ ವರ್ತಕ ಸಂಘಗಳಲ್ಲಿ ಅಯ್ಯಾವೊಳೆ ಐನೂರ್ವರು, ತಂಬುಲಿಗ ಸಾಸಿರ್ವರು, ಹಂಜಮಾನಗಳು, ತೆಲ್ಲಿಗರೈವತ್ತೊಕ್ಕಲು, ಮಾಲೆಗಾರ ನಾಲ್ವತ್ತೊಕ್ಕಲು, ತೋಟಿಗರೈನೂರ್ವರು, ಸಾಲೆ ಸಾಸಿರ್ವರು ಅಥವಾ ಸಮಯ ಸಾಸಿರ್ವರು, ಜಪ್ಪಿಗೆ ಹೊತ್ತಳಿ, ಕುರುಬಸೇಣಿ[೧೭] ಮುಂತಾದ ಸಂಘಗಳು ಶಾಸನಗಳಲ್ಲಿ ಕಂಡು ಬರುತ್ತವೆ. ಇದರಲ್ಲಿ ವೈಷ್ಣವ, ಜೈನ, ಶೈವ, ಮುಸ್ಲಿಂ, ಕ್ರೈಸ್ತಮತದ ವ್ಯಾಪಾರ (ವರ್ತಕ) ಸಂಘದವರೂ ನಂತರದ ದಾಖಲೆಗಳಲ್ಲಿ ಇರುತ್ತಾರೆ. ಇವರಲ್ಲಿ ದೇವಾಲಯ ಕಟ್ಟಿಸುವುದು, ಜೀರ್ಣೋದ್ದಾರ ಮಾಡಿಸುವುದು, ಕೆರೆಗಳ ನಿರ್ಮಾಣ, ವಿಗ್ರಹ, ಲಿಂಗ ಪ್ರತಿಷ್ಠಾಪನೆ, ದೇವಾಲಯಗಳ ಚೈತ್ರ ಪವಿತ್ರಪರ್ವ, ಖಂಡಸ್ಫುಟಿತ, ಅಂಗಬೋಗ ರಂಗಬೋಗ ಮುಂತಾದ ಕಾರ್ಯಗಳಿಗೆ ವೈಯಕ್ತಿಕವಾಗಿಯೂ, ಸಾಂಘಿಕವಾಗಿ ದಾನಮಾಡಿರುವುದು ಕಂಡುಬರುತ್ತದೆ. ಇದಕ್ಕೆ ಪೂರಕವಾಗಿ ಕೆಳದಿ ಗುಂಡಾಜೋಯಿಸರ ಒಂದು ಲೇಖನದಲ್ಲಿ ಆನಂದಪುರ ದೇಶಮುಖ ಮಹತ್ತದೇವರಿಗೆ ಸೆಟ್ಟಿಗಳು ನೀಡಿದ ತಾಮ್ರ ಶಾಸನದ ಪಾಠ ಈ ರೀತಿ ಇದೆ:

ಶಾಸನ ಪಾಠ

೧. ೦ ಃ ಶ್ರೀ ಗಣಾಧಿಪತಯೆನಮಃ ನಿರ್ವಿಘ್ನ ಮಸ್ತು ! ಶುಭವಸ್ತು.
೨. ೦ ನಮಸ್ತುಂಗ ಶಿರಶ್ಚುಂಬಿ । ಚಂದ್ರಚಾಮರ ಚಾರವೇ ತ್ರೈಲೋಕ್ಯನಗರಾರಂ
೩. ೦ ಭ ಮೂಲಸ್ತಂಭಾಯ ಶಂಭವೆ । ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾ
೪. ೦ ಹನ ಶಖ ವರ್ಶ ೧೫೪೬ ಸಾವಿರದ ಐನೂರ ನಾಲ್ವತ್ತಾರನೆಯ ವ
೫. ೦ ರ್ತಮಾನಕ್ಕೆ ಸಲುವ । ರುಧಿರೊದ್ಗಾರಿ ಸಂವತ್ಸರದ ಮಾಘ ಬ ೧೪ ಯು
೬. ೦ ಸೊಮವಾರದ ಶಿವರಾತ್ರೆ ಪುಂಣ್ಯಕಾಲದಲೂ ಶ್ರೀ ಮದನೆಕ ಬ್ರಂಹ್ಮ
೭. ೦ ಡ ಭಾಂಡ ಗರ್ಭಗರ್ಭಿಕೃತ ವಿವಿದ ಮಧುಸೂಧನ ತ್ರಿದಶಾಧಿಶ್ವ
೮. ೦ ರದೆವತಾಮಗುಟ ಮಣಿಗಣಕಿರಣ ದಿಪ್ತ ದಿಪ್ತ । ಪಾದ ಪಯೊಜ
೯. ೦ ಪರಶಿವಲಿಲಾಕೃತ । ಕಲೆವರಮಪ್ಪ । ಶ್ರೀನಂದಿನಾಥ । ಶ್ರಿಭೃಂಗಿನಾಥ ಶ್ರೀ
೧೦. ೦ ವಿರಭದ್ರದೇವರು ಮುಖ್ಯರಾದ । ಶ್ರಿರೀಮತ್ಸಜ್ಜನಶುದ್ದ ಶಿವಾಚಾರ
೧೧. ೦ ಸಂಪಂನರಾದ । ದೆವಾಪೃಥ್ವಿ ಮಹಾಮಹತ್ತಿನ ಒಳಗಾದ ಆನಂದ
೧೨. ೦ ಪುರದ । ದೆಶೆಮುಖದ ಮಹತ್ತದೆವರಿಗೆ । ಚತುರ್ದಿಕ್ಕು ಪೂರ್ವದಕ್ಷಿ
೧೩. ೦ ಣ ಪಶ್ಚಿಮ ಉತ್ತರದ ವಳಗಾದ ಚಪಂನ ಅ್ಕವತ್ತಾರು ದೆಶವಳನಾ
೧೪. ೦ ಡುಸ್ತಳ ಪರಸ್ತಳ ಮುಂತಾದ ಉಭಯ ನಾನಾದೆಶದ ಮಹಾನಾಡ
೧೫. ೦ ಸೆಟ್ಟಿ ಸಮಸ್ತರೂ ಕೊಟ್ಟ ಮೂಲವಿಸದ ಧರ್ಮಶಾಶನದ ಕ್ರಮವೆಂತ್ತೆಂ
೧೬. ೦ ದರೆ । ಶ್ರೀಮಸ್ವಸ್ತಿ ಸಮಸ್ತ ನಿಜನಾಮಾಲಿಕ ಪ್ರ(ಶ)ಸ್ತಿ ಸಾಹಿತ್ಯರಾದ
೧೭. ೦ ಲೊಕ ವಿಚಾರವಬಲ್ಲಂಥ ಸಾಲುಮೂಲೆ ಸೆಟ್ಟಿ ಮಂತ್ರಿ ಭಾಸ್ಕರ ಮುಂತಾ
೧೮. ೦ ದ । ಶ್ರೀ ಮತ್ಸಜ್ಜನ ಶುದ್ದ ಶಿವಾಚಾರ್ಯ ಸಂಪಂನ್ನರಾದ ಹ(x)ರ ಗುರು ಭ
೧೯. ೦ ಕ್ತಿ ಪರಾಯಣರಾದ ವಿಭೂತಿ ರುದ್ರಾಕ್ಷ ಮಾಲಿಕಾಧಾರಣ ಸಕಲಪ
೨೦. ೦ ವಿತ್ರರಾದ ನಿತ್ಯಪಂಚಾಕ್ಷರಿ ಜಪ ಪರಾಯಣರಾದ ಶಿವಪೂಜಾ
೨೧. ೦ ಧುರಂಧರರಾದ ಸಕಲ ಸದ್ಗುಣಾಲಂಕುಶ ನಯ ವಿನಯದಯದಾ
೨೨. ೦ ಕ್ಷಂಣ್ಯ ಪರೊಪಕಾರ ಶಿದ್ದಿಗಳಾದ ಅನಿತುಜನ ಆಗ್ನಾಪಾಲಕಗಾದ(?)
೨೩. ೦ ಶಿಕಾರ್ಯದುರಂಧರರಾದಾ ನಿಗರ್ವಿ ಶಿರೋಮಣಿಗಳಾದ ಪದವಾ
೨೪. ೦ ಕ್ಯಪ್ರಮಾಣಗ್ಯರಾದ । ವಜ್ರಮಾಣಿಕ್ಯಮರಕತ ಗೊಮಿಯಾದಿಕ ಪುಶ್ಯರಾ
೨೫. ೦ ಗಯಂದನಿಲ ಪ್ರವಾಳ ಮೌಕ್ತಿಕ ಮೊದಲಾದ ನವರತ್ನಾಭರಣಭೂಶಿತ
೨೬. ೦ ರಾದ ಶ್ರೀಗಂಧ ಮೊದಲಾದ ಅಷ್ಟಗಂಧಾನುಲೆಪಿತರಾದ । ಮರುಗ ಮಲ್ಲಿಗೆ
೨೭. ೦ ಜಾಜಿ ಮೊದಲಾದ ಸಕಲ । ಮಾಲ್ಯಾನುದಾರಕರಾದ ಮಧುರಾಹಾರನಿರ
೨೮. ೦ ತರಾದ । ಶಡುರಸಾಂಗ ಭೊಜನಪ್ರಿಯರಾದ ಪೂಗೀಫಲನಾಗವಾಲ್ಯೊ ಚೂ
೨೯. ೦ ರ್ನ ಕರ್ಪೂರಾದಿ ವಿಟಿಕಾ ಪ್ರವಿಣರಾದ । ತ್ಯಾಗ್ದಲ್ಲಿಕ ಗಂಗೆ ಸಮಾನರಾದ ಭೊಗ
೩೦. ೦ ದಲ್ಲಿ ದೆವೆಂದ್ರಗೆ ಸಮಾನರಾದ । ವಿರತ್ವದಲ್ಲಿ ವಿಕ್ರಮಾರ್ಕಗೆ ಸಮಾನರಾದ । ರ
೩೧. ೦ ಉದ್ರದಲ್ಲಿ ವಿರಭದ್ರಗೆ ಸಮಾನರಾದ । ಕ್ಷಮೆಯಲ್ಲಿ ಧರಿತ್ರಿಗೆ ಸಮಾನರಾದ ಶಾ

೩೨. ೦ ಂತರದಲ್ಲಿ ಪೂರ್ಣಚಂದ್ರಗೆ ಸಮಾನರಾದ ಸತ್ಯದಲ್ಲಿ ಹರಿಶ್ಚಂದ್ರಗೆ ಸಮಾನ
೩೩. ೦ ರಾದ ಶಕ್ತಿಯಲ್ಲಿ ಹನುಮಂತಗೆ ಸಮಾನರಾದ ಜಂಗಮಭಕ್ತಿಯಲ್ಲಿ
೩೪. ೦ ಬಸವೇಶ್ವರನಂದದವರಾದ । ಏಕೈಕ ಧಿರರಾದ ಲೋಕೈಕಮಾನ್ಯರಾ
೩೫. ೦ ದ । ಶೊಡ್ರಶದಾನ ಚಿಂತಾಮಣಿಗಳಾದ । ಆಶ್ರಿತ ಜನಕಲ್ಪವೃಷ್ಪಿರಾ
೩೬. ೦ ದ । ಬಂಧುಜನ ಚಿಂತಾಮಣಿಗಳಾದ । ಅನೆಕ ಧರ್ಮ ಪ್ರತಿಷ್ಟಾಪಾಲಕ
೩೭. ೦ ರಾದ । ಅಂಗ ವಂಗ ಕಳಿಂಗ ಕಾಸ್ಮಿರ ಮಘದ ಮಲೆಯಾಳ । ಮತ್ಸ್ಯಮಹಾರಾ
೩೮. ೦ ಷ್ಟ್ರ ಕೊಂಕಣ ತೆಂಕಣ ಯಿಂಗೆಂದ್ರ ಸರೆಶಣ ಬರ್ಬಂ ಹಂಮಿರಜಿನತು
೩೯. ೦ ಳುವ ಸೌರಾಷ್ಟ್ರ । ಕುರುಮ ಕುಂಕನ ಪುಳಿಂದ್ರ ದ್ರಾವಿಡ ಪಾಂಡ್ಯಾ । ವ
೪೦. ೦ ರ್‍ರಪಿತ ವೈಧರ್ಮ । ಸಿಂಧು ಗುಜ್ಜರ ಆವಂತಿಕಾ । ಧರ್ಮ ಕರ್ನಾಟಕಕ್ಕೆ
೪೧. ೦ ಮುಖ್ಯವಾದ ಚಪ್ಪಂನ ಆೃವತ್ತಾರು ದೆಶಾಧಿಶ್ವರರಾದ ಪರಸಮ
೪೨. ೦ ಯ ಕುದರ ಕುಲ ಸಹಾಯುದ । ಜಿನಸಮಯ ಪಾರಾವಾರ ಸುಧಾಕರ
೪೩. ೦ ರಾದ । ಚಂದ ಚಂದ ಗೊಕುಂದ ಮಂದಾರ ನಿಹಾರ ಸಾರಸಂಗ್ರಹಾರಾದ

೨ನೇ ಹಲಗೆಯ ಮುಂಭಾಗ

೧. ೦ ಆನೆವೆಂನಾಗಂಣ । ಅಂದಣಸೆಟ್ಟಿ ಹುಚ್ಚೈಯ । ಮುಗದದ ಜೆಡೆಯ
೨. ೦ ಯಪ್ಪ । ಕೆಂಚಪ್ಪ । ಮೂಡಲ ಹಿರಿಯೂರ ದಾಸಪ್ಪ । ಗೂಳೂರ ಚೆಂನಪ್ಪ
೩. ೦ ರಘುನಾಥಸೆಟ್ಟಿ । ಸಿದ್ದಪ್ಪಸೆಟ್ಟಿ । ಮಲ್ಲಿಸೆಟ್ಟಿ । ತುಮುಕೂರದಾಸಂಣಗೌಡ ।
೪. ೦ ಸಿದಂಣ । ಹೆಬ್ಬೂರ ವಿರಸೆಟ್ಟಿ । ನರಸಪ್ಪ । ನxxಡಸೆಟ್ಟಿ । ಲಚಂಮ
೫. ೦ ನ ತಿಂಮೈಯ । ತಿಪ್ಪಂಣನ ಚೆಂನಪ್ಪ । ಸೂರಂಣನ ಸಂಗೈಯ । ಮೂರ್ತಿಸೆ
೬. ೦ ಟ್ಟಿ । ಯರವಾಡಸೆಟ್ಟಿ ಶಿಂಮಯ್ಯು । ಕೈದಾಳ ತಿಪ್ಪಸೆಟ್ಟಿ । ಬಳ್ಳಾಪುರದ
೭. ೦ ಅನಂತೈಯಾ । ಮಾಗಡಿ ದಾಸಪ್ಪ । ಶಿನಿವಾಗಿಲದ ಯಲ್ಲಿಸೆಟ್ಟಿ । ಶಿವರ
೮. ೦ ದಳಆವರೆ ವಿರಂಣ । ಚಿಟ್ಟನಹಳ್ಳಿ ಕೊಂಡಲೈಯ ಕುದೂರ ಬಾಲಸೆಟ್ಟಿ
೯. ೦ ಹುಲಿಕಲ್ಲ ಪೆದ್ದಿ ತಿರುಮಲ್ಯಯ । ಯಿಡಲ ಕೊಂಡೈಯ । ಗುತ್ತಲೂರ ನರ
೧೦. ೦ ಸೈಯ । ಕೈದಾಳ ತಿಂಮಿಸೆಟ್ಟಿ । ಅಪ್ಪಂಮನ ತಿಂಮರಾಯ । ಬೆಂಗಳೂರ ಬಾಲಕೃಷ್ಣ
೧೧. ೦ ಯ್ಯ । ತೂಗೂರ ಕೃಷ್ಣಯ್ಯ । ಅನಂತೈಯ । ಯಲ್ಲೂರ ಸಿದ್ದಪ್ಪ । ಅಳುಗುಂಟೆ
೧೨. ೦ ದೊಡ್ಡ ಕೊಂಡಲೈಯ । ದೊಡವೆಂಕಟಗಿರಿಸೆಟ್ಟಿ । ದಾಸಂಣ । ಅಪ್ಪಂಣ
೧೩. ೦ ತಿರಕಪ್ಪ । ನಲ್ಲು ಕೊನೆರಿಸೆಟ್ಟಿ । ತೊಪಿಸೆಟ್ಟಿ । ಮುಳವಾಗಿಲ ಪಾತಾಳ ಬಸೆಟ್ಟಿ । ಬಡ
೧೪. ೦ ಗಲ ದಂಡಪ್ಪ । ಕಡಲೆ ಬಸೆಟ್ಟಿ । ಕಣತೂರ ಬಸೆಟ್ಟಿ । ರಾಚಪ್ಪ । ನಾಗಮಂಗಲ
೧೫. ೦ ದ ಜೆಡೆಯಪ್ಪ । ಕೊನೆರಿಸೆಟಿ ತಿಂಮಪ್ಪ । ರಬ್ಬಳಿಗೆ ಚೆಂನಪ್ಪ । ನಾಲ್ವತ್ತ
೧೬. ೦ ಬಾಡ ಚೆಂನಪ್ಪ । ಧರ್ಮಾವರದ ಕಳಸೈಯ । ಪೆನುಗುಂಡೆ ಯಿಶ್ವರ
೧೭. ೦ ಪೆನುಗಂಡಿ ಯಿಶ್ವರ ಸೆಟ್ಟಿ । ಅಂಗಡಿ ಚೆಂನಪ್ಪ । ದುಂಮಿಮರುಳೈಯ್ಯ ರಾ
೧೮. ೦ ಣೆಬೆಂನೂರ ರಿತ್ತಿ ಚೆಂನಮಲ್ಲಪ್ಪ । ಚಿಲದ ಮಲುಕಪ್ಪ । ಕಾಮಂಣನ
೧೯. ೦ ಚೆಂನಯ್ಯ । ಪೆನುಗುಂಡಿ ಗಂಗಸೆಟ್ಟಿ । ಗೂಳೂರ ದಾಸಸೆಟ್ಟಿ । ಮುಂತಾದ ಚತುರ್ದಿಕ್ಕು

೨೦. ೦ ಅ್ಯವತ್ತಾರು ದೆಶ ವಳನಾಡು ಸ್ಥಳ ಪರಸ್ಥಳ ಮುಂತಾದ ಉಭಯ ನಾನಾ ದೆಶದ ಸೆ
೨೧. ೦ ಟ್ಟಿಗಳು ಮುಂತಾದ ಸಮಸ್ತ ದೆಶದ ಮಹಾನಾಡವರೂ ಕೊಟ್ಟ ಮೂ(ಲು)
೨೨. ೦ ವಿಸದ ಧರ್ಮಶಾಶನ । ಯಿಂತೊಪ್ಪಿದಕ್ಕೆ ದೆವಸಾಕ್ಷಿ ಆದಿತ್ಯ ಚಂ
೨೩. ೦ ದ್ರವನಿಲೊನಲಶ್ಚ । ದೆ ಉರ್ಭುಮಿರಾಪೊಹ್ರುದಯಂ ಯಮಶ್ಚ । ಅಾ
೨೪. ೦ ಹರ್ಶಚರಾತ್ರೌ ಉಭೆಚ ಸಂಧ್ಯಾ । ಧರ್ಮಸ್ಯ ಜಾನಾತಿ ವರಾಸ್ಯ ಉ್ರಕ್ತಂ
೨೫. ೦ ಕರ್ತುಗಳ ವಪ್ಪಿತ ಶ್ರೀ ಸಂಗಮೆಶ್ವರ
೨೬. ೦ ಯಿಂತಿವರ ಉಭಯಾನುಮತದಿಂದ ಯಿಶಾಶನವ ಬರದಾತ
೨೭. ೦ ದಾನಪಾಲಿನಯೊರ್ಮಧ್ಯೆ ದಾನಾತ್ಶೈಯೊನುಪಾಲನಂ । ದಾನಾಕ್ಸ್ತೆಲ್
೨೮. ೦ ಅಪಮಾಪ್ನೊತಿ ಪಾಲನಾದಿಶ್ವರಂ ಪದಂ ಸ್ವದತ್ತಾದ್ವಿ ಗುಣಂ ಪೂ
೨೯. ೦ ಣ್ಯಂ ಪರದತ್ತಾನು ಪಾಲನಂ । ಪರದತ್ತಾಪಹಾರೆಣ ಸ್ವೆದತ್ತಂ ನಿಶ್ಫಲಂ
೩೦. ೦ ಭವೆತು । ಸ್ವದತ್ತಾ ಪುತ್ರಿಕಾಧಾತ್ರಿಪಿತ್ರು ದತ್ತಾಸಹೊದರಿ । ಅಂನ್ಯದತ್ತಾನ್ವಯಂ ।
೩೧. ೦ ಮಾತಾದತ್ತಾ ಧರ್ಮಂ ಪರಿತ್ಯಜೆತ್ । ಸ್ವದತ್ತಾ ಪರದತ್ತೊ ವಾಯೊಹ
೩೨. ೦ ರೆತಿ ವಸುಂಧರಾ ಶಷ್ಟಿರ್ವರುಶ ಸಹಸ್ರಾಣಿ ವಿಷ್ಟಾಯಾಜಾಯತೆ ಕ್ರಿ
೩೩. ೦ ಮಿ
೩೪. ೦ ದೆಷಮುದ್ರೆ ಯಂಗಟಪತಿಯ ವಪಿತದ
೩೫. ೦ ಬರಹ ವಿರೆಲಿಂಗೈನ ವೊಪಿತದ ಬರಹ[೮೮]

ಈ ರೀತಿ ಶಾಸನವಿದ್ದು ಇಲ್ಲಿ ಸೆಟ್ಟಿ ಸಮುದಾಯ ದೇವಾಲಯಕ್ಕೆ ದಾನ ನೀಡಿದ ಅಂಶವಿದೆ. ವಿಶೇಷವಾಗಿ ದುರ್ಗ ಪರಿಸರದ ಸೆಟ್ಟಿಗಳ ಹೆಸರು ಉಲ್ಲೇಖವಿರುವುದು ಗಮನಾರ್ಹವಾಗಿದೆ. ಇದರಿಂದ ವ್ಯಕ್ತವಾಗುವ ವರ್ತಕರ ಧರ್ಮಬುದ್ಧಿ ಭಕ್ತಿಭಾವ, ತ್ಯಾಗ, ಮೌಲ್ಯಗಳ ಪ್ರತಿಪಾದನೆಯು ಒಂದು ಮುಖ್ಯವಾದ ಅಂಶವಾಗಿದೆ.

ವರ್ತಕರು ತಮ್ಮ ಸರಕು, ಹಣ, ಪ್ರಾಣಿ, ಪ್ರಾಣ ಸಂರಕ್ಷಣೆಗಾಗಿ ಇಟ್ಟಿಕೊಂಡಿರಬಹುದಾದ ಯೋದಪಡೆ, ಯೋಧರ ವಿವೇಚನೆಯೂ ಪೆಣ್ಬುಯಲ್, ಊರಳಿವು, ವೀರ ಮರಣ ಮುಂತಾದ ಪ್ರಸಂಗಗಳಲ್ಲಿ ವರ್ತಕರು ಹೋರಾಡಿ ವೀರಮರಣ ಹೊಂದಿದ ಸಂಗತಿಗಳೂ ಸಹ ತಿಳಿದು ಬರುತ್ತವೆ. ಇದಕ್ಕೆ ಪೂರಕವಾದ ನಿಡುಗಲ್ಲಿನ ಹಂಟಾದ ಸೆಟ್ಟಿಯ ಮಗ. ಕಟ್ಟಿ ಅಪ್ಪ[೮೯] ಮತ್ತು ವೈಸರ ರಾಮಿಸೆಟ್ಟಿಯ ಮಗ ಭೀಮಸೆಟ್ಟಿಯ[೯೦] ವೀರಗಲ್ಲುಗಳು ಇದೇ ತೆರನಾದವು.

ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಮಧ್ಯಕಾಲೀನ ಚರಿತ್ರೆಯ ಆರ್ಥಿಕ ವ್ಯವಸ್ಥೆಯಲ್ಲಿ ವರ್ತಕ ಶ್ರೇಣಿಗಳ ಪಾತ್ರ ಬಹಳ ಪ್ರಮುಖವಾದುದು. ನಾಯಕರ ಕಾಲದ ಆರ್ಥಿಕ ವ್ಯವಸ್ಥೆಯೂ ಇದಕ್ಕೆ ಹೊರತಾಗಿರಲಿಲ್ಲ. ಒಂದೇ ವೃತ್ತಿಯನ್ನು ಇಲ್ಲವೇ ಜೀವನೋಪಾಯಕ್ಕೆ ಸಮಾನ ಮಾರ್ಗವನ್ನು ಅವಲಂಬಿಸಿರುವ ವ್ಯಕ್ತಿಗಳು ಹಾಗೂ ಸ್ವಯಂ ಸೇವಾಸಂಸ್ಥೆಗಳು ಸರಕಾರ ಇಲ್ಲವೆ ಅದರಿಂದ ಅಧಿಕಾರ ಪಡೆದವರ ಕಪಿಮುಷ್ಠಿಯಿಂದ ತಪ್ಪಿಸಿಕೊಂಡು ತಮ್ಮ ಹಿತರಕ್ಷಣೆಗಾಗಿ ವರ್ತಕ ಶ್ರೇಣಿ ಅಥವಾ ಕುಶಲವೃತ್ತಿಯ ಶ್ರೇಣಿಗಳನ್ನು ರಚಿಸಿಕೊಂಡರು. ಒಂದು ಉದ್ಯೋಗದ ಅಥವಾ ವೃತ್ತಿಯ ಶ್ರೇಣಿಯು ಸಾಮಾನ್ಯವಾಗಿ ಒಂದೇ ಜಾತಿ ಅಥವಾ ಜನಾಂಗಕ್ಕೆ ಸೇರಿದವರಾಗಿರುತ್ತಿದ್ದರು. ಅದರ ಸದಸ್ಯರೆಲ್ಲರೂ

ಬಹುಮಟ್ಟಿಗೆ ಆಯಾ ಕಸುಬಿನಲ್ಲಿ ಪ್ರಾವೀಣ್ಯತೆಯನ್ನು ಪಡೆದವರಾಗಿರುತ್ತಿದ್ದರು. ಅದು ಒಂದು ಜಾತಿ ಶ್ರೇಣಿಯೇ ಆಗಿರುತ್ತಿದ್ದಿತು.[೨೧]

ಶಾಸನಗಳು ಇಂತಹ ಕುಶಲ ವೃತ್ತಿಯ ಶ್ರೇಣಿಗಳ ಬಗೆಗೆ ಹೆಚ್ಚು ಬೆಳಕು ಚೆಲ್ಲುತ್ತವೆ. ಬಹುಮುಖ್ಯವಾಗಿ ಚರಿತ್ರಾಕಾರರು ಸಾಮಾನ್ಯವಾಗಿ ಶ್ರೇಣಿಗಳನ್ನು 'ಗಿಲ್ಡ್' ಎಂದು ಕರೆದಿದ್ದಾರೆ. ಭಾರತದ ಸಂದರ್ಭದಲ್ಲಿ ಈ ಪದವನ್ನು ಬಳಸುವುದು ಅಷ್ಟು ಸೂಕ್ತವಲ್ಲ. ಏಕೆಂದರೆ ಯುರೋಪಿನ ವ್ಯವಸ್ಥೆಯಲ್ಲಿ ಗಿಲ್ಡ್ ಎಂದರೆ ಓರ್ವ ಕುಶಲಗಾರರ ಗುರು. ವೇತನ ಪಡೆಯುವರು ಮತ್ತು ತರಬೇತಿಯನ್ನು ಪಡೆಯುವವರು ಇದ್ದರು. ಅವರು ಯಾವುದೇ ಒಂದು ಸಮುದಾಯ ಅಥವಾ ಜಾತಿಗೆ ಸೇರಿದವರಲ್ಲ. ಯಾರಿಗೆ ಒಂದು ವೃತ್ತಿಯಲ್ಲಿ ಆಸಕ್ತಿಯಿತ್ತೋ ಅಂತಹವರು ಒಂದು ಕಡೆ ಸೇರಿ ಕೆಲಸ ಮಾಡುತ್ತಿದ್ದರು.[೨೨] ಈ ವ್ಯವಸ್ಥೆಯು ಯುರೋಪಿನಲ್ಲಿ ಆರಂಭವಾಗಿತ್ತು. ೧೧-೧೬ನೇ ಶತಮಾನದಲ್ಲಿ ಇದು ಯುರೋಪಿನ ಚರಿತ್ರೆಯನ್ನು ಮತ್ತೊಂದು ನೋಟದಲ್ಲಿ ನೋಡುವಂತೆ ಮಾಡಿದ್ದು ಈ ಗಿಲ್ಡ್‌ಗಳು ಇವು ಕೆಲವು ಚರಿತ್ರಾಕಾರರ ಪ್ರಕಾರ ಮಧ್ಯಕಾಲೀನ ಯುರೋಪಿನ ವರ್ತಕ ಸಂಘಗಳು ಬೈಜಾಂಟೈನ್ ಸಾಮ್ರಾಜ್ಯದ ಕೊಳ್ಳೆಯಾದಿಂದ ಹುಟ್ಟಿಕೊಂಡಿವೆ ಎಂದು ವಾದಿಸಿದ್ದಾರೆ. ಆದರೆ ಭಾರತದ ಸಂದರ್ಭದಲ್ಲಿ ವೃತ್ತಿಗಳು ಜಾತಿ ಆಧಾರಿತವಾಗಿದ್ದರಿಂದ ಮನೆಯಲ್ಲಿಯೇ ಆ ವೃತ್ತಿಯ ತರಬೇತಿಯನ್ನು ಚಿಕ್ಕಂದಿನಿಂದಲೇ ನೀಡಲಾಗುತ್ತಿತ್ತು. ಆದ್ದರಿಂದ ಕರ್ನಾಟಕ/ಭಾರತದ ಮಟ್ಟಿಗೆ ಗಿಲ್ಡ್ ಎನ್ನುವುದಕ್ಕಿಂತ ಶ್ರೇಣಿ ಅಥವಾ ಸಂಘಗಳು ಎನ್ನುವುದು ಹೆಚ್ಚು ಸೂಕ್ತವಾಗುತ್ತದೆ.[೨೩]

ನಾಯಕರ ಕಾಲದಲ್ಲಿ ಈ ವೃತ್ತಿ ಸಂಘಗಳನ್ನು ೧೮ ಪಣಗಳು ಅಥವಾ ವಿಭಾಗಗಳಾಗಿ ಗುರುತಿಸಬಹುದು. ಪಾಂಚಾಲರು ಎಂದರೆ ಐದು ಬಗೆಯ ಕುಶಲಕರ್ಮಿಗಳು. (ಕಮ್ಮಾರ, ಸ್ವರ್ಣಕಾರ, ಕಂಚುಗಾರ, ಬಡಗಿ ಹಾಗೂ ಶಿಲ್ಪಿ), ಅವರನ್ನು ವೀರಪಾಂಚಾಲರು ಎಂದು ಗುರುತಿಸಲಾಗಿದೆ. ಅವರು ಅತ್ಯಂತ ವ್ಯವಸ್ಥಿತ ರೀತಿಯಲ್ಲಿ ತಮ್ಮ ವೃತ್ತಿಗಳನ್ನು ನಡೆಸುತ್ತಿದ್ದರು. ವ್ಯಾರ ಹಾರಿಕರು, ಪಾಂಚಾಲರು, ಕುಂಭಾಲಿಕರು (ಕುಂಬಾರರು) ತಂತುವಾಯಿನರು (ನೇಕಾರರು), ವಸ್ತ್ರಬೇಧಿಕರು (ಬಟ್ಟೆಗೆ ಬಣ್ಣ ಹಾಕುವವರು) ತಿಲಘಟಕರು (ಗಾಣದವರು), ಕುರಂತಕರು (ಚಮ್ಮಾರರು), ದೇವಾಂಗದವರು, ಪರೀಕೇಲಿತಿ (ಗೂಳಿ ಸಾಕುವವರು), ಗೋರಕ್ಷಕರು, ಕಿರಾತರು (ಬೇಕರು), ರಜಕರು (ಅಗಸರು) ಹಾಗೂ ಕ್ಷೌರಿಕರು.[೨೪] ರೇಷ್ಮೆ ನೇಕಾರರು, ಹತ್ತಿ ಬಟ್ಟೆ ನೇಕಾರರು, ಸ್ವರ್ಣಕಾರರು ಗೋಣಿಚೀಲ ತಯಾರಿಸುವವರು ಹಾಗೂ ಬುಟ್ಟಿ ಹೆಣೆಯುವವರು, ಅಮುಕ್ತಮಾಲ್ಯದ ತೆಲುಗು ಗ್ರಂಥದಲ್ಲಿ ಇಂತಹ ಕುಶಲಕರ್ಮಿಗಳು, ಶ್ರೇಣಿಗಳನ್ನು ಕುರಿತು ಹೇಳಲಾಗಿದೆ.[೨೫]

ಕುಶಲಕರ್ಮಿಗಳ ಶ್ರೇಣಿಗಳ ಜೊತೆಗೆ ಇತರ ವರ್ತಕರು ತಮಗೆ ಸಂಬಂಧಿಸಿದಂತೆ ತಮ್ಮದೇ ಆದ ಸಂಸ್ಥೆಗಳನ್ನು ರಚಿಸಿಕೊಂಡು ತಮ್ಮ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುತ್ತಿದ್ದರು. ವರ್ತಕರ ಇಲ್ಲವೆ ಕುಶಲಕರ್ಮಿಗಳ ಅಂಗಡಿಗಳು ಪರಸ್ಪರ ಹತ್ತಿರದಲ್ಲಿಯೇ ಇರುತ್ತಿದ್ದವೆಂದು ಪ್ರವಾಸಿ ಅಬ್ದುಲ್ ರಜಾಕ್ ಹೇಳಿದ್ದಾನೆ.[೨೬] ಮತ್ತೊಬ್ಬ ಪ್ರವಾಸಿ ಪಯಾಸ್ ಸಹ ಇಂತಹದೇ ಅಭಿಪ್ರಾಯವನ್ನು ಕೊಡುತ್ತಾನೆ.[೨೭] ಬಣಜಿಗ, ನಾನಾದೇಶಿ, ಉಭಯ ನಾನಾದೇಶಿ, ನಗರ, ನಕರ, ವೈಶ್ಯ, ಶೆಟ್ಟಿ, ಶೆಟ್ಟಿಗುತ್ತ, ವೀರಬಣಜಿಗ, ಅಯ್ಯಾವೊಳೆ, ಮಣಿಗ್ರಾಮಂ, ಎಲಮೆ, ಹಂಜಮಾನ, ಶಾಲೀಕಯ ಬಲ್ಲಾಳುಗಳು, ಶೆಟ್ಟಿಕಾರ, ವೀರಪಾಂಚಾಲರು, ಕೈಕ್ಕೋಲರು ಇತ್ಯಾದಿ ವರ್ತಕ ಶ್ರೇಣಿಗಳನ್ನು ನಾವು ಕಾಣುತ್ತೇವೆ. ಅಲ್ಲದೆ ಗಾಣಿಗರು, ಉಪ್ಪಾರರು ಹಾಗೂ ಕುಂಬಾರರು[೨೮] ಇದ್ದರು.

ಸಾಮಾನ್ಯವಾಗಿ ಮಧ್ಯಕಾಲೀನ ಜನತೆಯು ವ್ಯವಸಾಯ ವೃತ್ತಿಯ ಜೊತೆಗೆ ಮತ್ತೊಂದು ವೃತ್ತಿಯನ್ನು ಅನುಸರಿಸುತ್ತಾ ಜೀವನ ನಡೆಸುತ್ತಿದ್ದರು ಎಂಬುದಕ್ಕೆ ಪ್ರಸ್ತುತ ಅಧ್ಯಯನವೇ ಸಾಕ್ಷಿಯಾಗಿದೆ. ವರ್ತಕ ಸಂಘಗಳ ಬಗ್ಗೆ ಇಂಥ ಶ್ರೇಣಿ ಅಥವಾ ಸಂಘಗಳ ರಚನಾ ಸ್ವರೂಪ, ಕಾರ್ಯ ನಿರ್ವಹಣೆ, ವಾಣಿಜ್ಯ ಲಾಭ, ಸಾಮಾಜಿಕ ಗೌರವ ಇತ್ಯಾದಿಗಳ ಬಗೆಗೆ ಸಾಹಿತ್ಯ, ಶಾಸನಗಳು ಯಾವುದೇ ವಿವರ ನೀಡುವುದಿಲ್ಲ. ವಿಶೇಷವಾಗಿ ನಾಯಕರ ಕಾಲದಲ್ಲಿ ಬರವಣಿಗೆಯ ಮಾಧ್ಯಮ ಬದಲಾವಣೆಯನ್ನು ಕಂಡುಕೊಳ್ಳುವ ಕಾಲ ಅದಾಗಿರುವುದರಿಂದ ಶಾಸನಗಳ ಸಂಖ್ಯೆ ಅತೀ ವಿರಳ, ಆದರೆ ಸಾಮಾನ್ಯವಾಗಿ ಜಾತಿ, ಧರ್ಮ, ಸಮಾನವೃತ್ತಿ, ಸಮುದಾಯಪ್ರಜ್ಞೆ, ಸ್ಥಳೀಯತೆ, ಸಮಾನಾವಕಾಶ ಮೊದಲಾದ ಅಂಶಗಳು ಕರ್ನಾಟಕದ ಸಂಘಗಳ ರಚನೆ ಅಥವಾ ಸಂಘಟನೆಗೆ ಕಾರಣವಾಗಿರಬೇಕು. ಈ ಉಪಕ್ರಮ ಎಂದಿನಿಂದ? ಯಾರಿಂದ? ಯಾವ ಊರಲ್ಲಿ? ಪ್ರಾರಂಭವಾಯಿತೆಂದು ಗೆರೆ ಕೊರೆದು ಹೇಳಲು ಆಧಾರ ಸಾಮಗ್ರಿಗಳ ಕೊರತೆಯಿಂದಾಗಿ ಸಧ್ಯ ಸಾಧ್ಯವಾಗುವುದಿಲ್ಲ. ಆದರೆ ಸಮುದಾಯ ಜೀವನ, ಸಹಕಾರ ತತ್ವಗಳು ಸಮಾಜ ವ್ಯವಸ್ಥೆಯಲ್ಲಿ ಸೇರಿದಂದಿನಿಂದ ಈ 'ಸಂಘ' ಅಥವಾ 'ಶ್ರೇಣಿ'ಗಳು ರಚನೆಗೊಳ್ಳತೊಡಗಿರಬಹುದು. ಕಾಲ ಕ್ರಮೇಣ ವಿಕಾಸಗೊಂಡು ವೈವಿಧ್ಯಪೂರ್ಣವಾಗಿ ಬೆಳೆದಿರಬಹುದು.[೨೯]

ವರ್ತಕ ಸಮುದಾಯಗಳು ಮತ್ತು ಉತ್ಪಾದನಾವರ್ಗ ಗ್ರಾಹಕರಿಬ್ಬರ ಭದ್ರತೆಗಾಗಿ ಶ್ರೇಣಿಗಳು ಕೆಲಸದ ಬಗ್ಗೆ ನಿರ್ದಿಷ್ಟ ನಿಯಮಗಳನ್ನು ಹೊಂದಿದ್ದವಲ್ಲದೇ, ಉತ್ಪಾದಿತ ಪದಾರ್ಥದ ಗುಣಮಟ್ಟ ಮತ್ತು ಅದರ ಬೆಲೆಯ ಬಗ್ಗೆಯೂ ನಿರ್ದಿಷ್ಟ ಮಾನ್ಯತೆಗಳನ್ನು ಹೊಂದಿದ್ದವು. ಉತ್ಪಾದಿತ ಪದಾರ್ಥಗಳ ಬೆಲೆಗಳು ಅವುಗಳ ಗುಣಮಟ್ಟವನ್ನು ಆಧರಿಸಿದ್ದವು ಅಥವಾ ಒಂದು ನಿರ್ದಿಷ್ಟ ಮಾನದ ಪ್ರಕಾರ ಅಂದಾಜಿತವಾಗುತ್ತಿದ್ದವು. ಸದಸ್ಯರ ನಡತೆಯನ್ನು ಅಳೆಯಲು ಶ್ರೇಣಿ–ಧರ್ಮ ಎಂಬ ನ್ಯಾಯಾಲಯವು ನಿಯುಕ್ತವಾಗಿತ್ತು. ಇವುಗಳು ಜಾತಿ ಧರ್ಮವನ್ನು ಆಧರಿಸಿದ ಕಾನೂನುಗಳಿಗನುಗುಣವಾಗಿದ್ದು ಕುಲಕಸುಬುಗಳ ಸ್ವರೂಪದಲ್ಲಿದ್ದು, ರಾಜನಿಂದ ಮಾನ್ಯತೆ ಪಡೆದಿರಬೇಕಾಗಿತ್ತು. ಅವರ ಸ್ವಂತದ್ದಾದ ಗುಂಪುಗಳಿಗೆ ಮಾತ್ರ ಸೀಮಿತವಾಗಿದ್ದರೂ, ಶ್ರೇಣಿಯಂತಹ ಸಂಸ್ಥೆಗಳು ಮತ್ತು ಜಾತಿ ಪದ್ಧತಿಯು ಪ್ರಾತಿನಿಧಿಕ ಕಾರ್ಯದ ಅಂಶಗಳನ್ನು ಹೊಂದಿದ್ದವು. ಕೆಲವೊಮ್ಮೆ ಇವೆರಡೂ ಮಿಳಿತವಾಗ ಶ್ರೇಣಿಯು ಜಾತಿಯ ಪಾತ್ರವಹಿಸುತ್ತಿತ್ತು. ಇವುಗಳು ವಿವಾಹ ಸಂಬಂಧಗಳನ್ನು ಬೆಸೆಯಲು ಮಾಧ್ಯಮವಾಗಿದ್ದವು. ಶ್ರೇಣಿಯ ಮುಖ್ಯಸ್ಥನಾದ ಜ್ಯೇಷ್ಠನು ಶ್ರೇಣಿಯ ಮುಂದಾಳತ್ವವನ್ನು ವಹಿಸಿದ್ದು, ಇವನು ಅವಶ್ಯಕತೆ ಇದ್ದಾಗ ಇತರ ಸಂಸ್ಥೆಗಳೊಂದಿಗೆ ಸಮಾಲೋಚನೆ ನಡೆಸುತ್ತಿದ್ದನು. ಕೆಲವೊಂದು ಮಟ್ಟದಲ್ಲಿ ಶ್ರೇಣಿಯು ಗಣ–ಸಂಘದ ಪಾತ್ರವನ್ನು ವಹಿಸುತ್ತಿತ್ತು ಎಂದು ಹೇಳಬಹುದು.[೩೦]

ಪಟ್ಟಣಸ್ವಾಮಿ, ಶೆಟ್ಟಿಪಟ್ಟಣಸ್ವಾಮಿ, ಮಹಾವಡ್ಡ ವ್ಯವಹಾರಿ, ವಡ್ಡವ್ಯವಹಾರಿ, ಶೆಟ್ಟಿ, ಪೃಥ್ವೀ ಶೆಟ್ಟಿ, ಶೆಟ್ಟಿತನ, ನಗರೇಶ್ವರ, ಪಟ್ಟಣಾಧೀಶ್ವರ, ಮಹಾಪ್ರಭು ಮುಂತಾದವರು ಈ ಶ್ರೇಣಿಗಳ ಮುಖ್ಯಸ್ಥರಾಗಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಈ ನಾಯಕರು ತಮ್ಮ ಶ್ರೇಣಿಗಳಲ್ಲೂ ಆಯಾ ಪ್ರದೇಶಗಳಲ್ಲೂ ಹೆಚ್ಚಿನ ಪ್ರಭಾವಶಾಲಿಗಳಾಗಿರುತ್ತಿದ್ದರು.[೩೧] ವರ್ತಕ ಸಂಘಗಳೂ ಸಹ ತಮ್ಮ ಸದಸ್ಯರ ಖಾಸಗಿ ಜೀವನಗಳನ್ನು ನಿಯಂತ್ರಿಸುತ್ತಿತ್ತು ಎಂಬ ಅಂಶವು ನೇಮಕಾತಿಯು ಜಾತಿಯ ಸಂಪರ್ಕವನ್ನು ಆಧರಿಸಿತ್ತು. ಒಂದು ನಿರ್ದಿಷ್ಟ ಜಾತಿಯಲ್ಲಿ ಜನಿಸಿದ ಮಕ್ಕಳು ತಮ್ಮ ತಂದೆಯ ಕಸುಬನ್ನೇ ಮುಂದುವರಿಸುತ್ತಿದ್ದುದು ಸಹಜವಾಗಿತ್ತು. ಕರಕುಶಲ ಕಲೆಗಾರರು ವಂಶಪಾರಂಪರ್ಯವಾದ ಕಸುಬುಗಳಲ್ಲಿ ತೊಡಗಲು ತರಬೇತಿ

ಪಡೆಯುತ್ತಿದ್ದರು. ಜಾತಿಗೆ ಸಂಬಂಧಪಟ್ಟ ಕಸುಬುಗಳು ಆರ್ಥಿಕ ಬದಲಾವಣೆಗಳನ್ನು ಕಂಡಾಗ ಅಥವಾ ಒಂದು ನಿರ್ದಿಷ್ಟ ಉತ್ಪಾದನೆಯ ಬೇಡಿಕೆಯು ಕಡಿಮೆಯಾದಾಗ ವರ್ತಕ ಸಂಘಗಳು ಸಮಸ್ಯೆಗಳನ್ನು ಎದುರಿಸುತ್ತಿದ್ದುದು ಸಾಮಾನ್ಯವಾಗಿತ್ತು.

ಬಹುಮುಖ್ಯವಾಗಿ ವರ್ತಕ ಸಮುದಾಯಗಳಲ್ಲಿ ಎರಡು ಬಗೆಗಳನ್ನು ಗುರುತಿಸಲಾಗಿದೆ. ೧. ಉತ್ಪಾದಕ ವಿನಿಮಯ ವರ್ತಕರು, ೨. ವಿನಿಮಯ ವರ್ತಕರು

ಕೃಷಿ ಮತ್ತು ಗೃಹಕೈಗಾರಿಕೆಗಳ ಮೂಲಕ ವಸ್ತುಗಳ ಉತ್ಪಾದನೆಯ ಜೊತೆಗೆ ಮಾರಾಟ ಮಾಡುವ ಪ್ರಕ್ರಿಯೆಯಲ್ಲಿ ನಿರತರಾದವರನ್ನು ಉತ್ಪಾದಕ ವಿನಿಮಯ ವರ್ತಕರೆಂದು ಕರೆಯಲಾಗುತ್ತದೆ. 'ಮನುಸ್ಮೃತಿ'ಯಲ್ಲಿ ಹೆಸರಿಸಲಾದ ಹದಿನಾರು ಬಗೆಯ ಉದ್ಯೋಗಗಳು ಬೌದ್ಧ ಸಾಹಿತ್ಯದ ಕೃತಿಗಳಾದ 'ಮಹಾವಸ್ತು'ವಿನಲ್ಲಿ ಮೂವತ್ತಾರು, 'ಮಿಲಿಂದಪನ್ಹೋ'ದಲ್ಲಿ ಎಪ್ಪತ್ತೈದು ಬಗೆಯ ಉದ್ಯೋಗಗಳು ಗೃಹ ಕೈಗಾರಿಕೆಗಳನ್ನು ಪರಿಚಯಿಸುತ್ತವೆ.[೩೨] ಅದೇ ರೀತಿ ಶಾಸನಗಳಲ್ಲಿಯೂ ಅನೇಕ ಗೃಹ ಕೈಗಾರಿಕೆಗಳ ಉಲ್ಲೇಖ ಕಂಡುಬಂದಿದ್ದು ಅವುಗಳಲ್ಲಿ ಕುಂಬಾರಿಕೆ, ಕಮ್ಮಾರ, ಬಡಗಿ, ಅಕ್ಕಸಾಲಿಗ,[೩೩] ಚಮ್ಮಾರ,[೩೪] ಮೇದರಾ, ಶಿಲ್ಪಿಗಳು (ಕಲ್ಕುಟಿಗ), ಸಿಂಪಿಗ ಮೊದಲಾದ ಉತ್ಪಾದಕ ವರ್ಗಗಳ ಬಗೆಗೆ ತಿಳಿದು ಬರುತ್ತದೆ. ಇವರು ಸ್ಥಳೀಯವಾಗಿ ಲಭ್ಯವಿರುವ ಸಂಪನ್ಮೂಲಗಳನ್ನು ಬಳಸಿಕೊಂಡು ವಸ್ತುಗಳನ್ನು ಉತ್ಪಾದಿಸಿ ಅವುಗಳನ್ನು ಸ್ಥಳೀಯವಾಗಿ ಇಲ್ಲವೆ ಸಂತೆ, ಪೇಟೆ, ಪಟ್ಟಣಗಳಿಗೆ ಹೋಗಿ ಮಾರಾಟ ಮಾಡುತ್ತಿದ್ದರೆಂಬ ಅಂಶವು ಶಾಸನಗಳಲ್ಲಿ ವ್ಯಕ್ತವಾಗಿರುವುದರಿಂದ ಇವರನ್ನು ಉತ್ಪಾದಕ ವಿನಿಮಯ ವರ್ತಕರೆಂದು ಗುರುತಿಸಬಹುದಾಗಿದೆ. ನಾಯಕರ ಕಾಲದಲ್ಲಿ ಶಾಸನಗಳ ಸಂಖ್ಯೆ ಕಡಿಮೆ ಇದ್ದರೂ ವೃತ್ತಿಗಳೂ ಇಂದಿಗೂ ಜೀವಂತವಾಗಿದ್ದು ಕೆಲವು ಶಾಸನಗಳಲ್ಲಿ ವ್ಯಕ್ತವಾಗಿರುವಂತೆ ಸಹಕಾರ ಮತ್ತು ಸಹಬಾಳ್ವೆಯ ತತ್ವದ ಆಧಾರದ ಮೇಲೆ ತಮ್ಮ ಸ್ವಂತ ಸ್ಥಳದಲ್ಲಿ ಉತ್ಪಾದಿಸಿದ ವಸ್ತುಗಳನ್ನು ಸಂತೆ, ಪೇಟೆ, ಪಟ್ಟಣಗಳಲ್ಲಿ ಮಾರುವಾಗ ಸಂಭವಿಸಬಹುದಾದ ತೊಂದರೆಗಳ ನಿವಾರಣೆ ಹಾಗೂ ತ್ವರಿತಗತಿಯ ಪ್ರಗತಿಗಾಗಿ ವರ್ತಕರು ತಮ್ಮನ್ನು ತಾವು ಸಾಂಘಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದು, ವೃತ್ತಿ ಸಂಘಗಳ ಬೆಳವಣಿಗೆಗೆ ಕಾರಣವಾಯಿತೆಂದು ಹೇಳಬಹುದು.[೩೫] ಉತ್ಪಾದಕ ವಿನಿಮಯ ವರ್ತಕ ಸಮುದಾಯಗಳಾದ ತೆಲ್ಲಿಗರೈವತ್ತೊಕ್ಕಲು, ಮಾಲೆಗಾರ ನಾಲ್ವತ್ತೊಕ್ಕಲು, ತೋಟಿಗರೈನೂರ್ವರು, ಸಾಲೆಸಾಸಿರ್ವರು, ಅಥವಾ ಸಮಯ ಸಾಸಿರ್ವರು, ಚಿಪ್ಪಿಗಗೊತ್ತಳಿ, ಕುರುಬಸೇಣಿ, ಕಂಚಗಾರಗೊತ್ತಳಿ, ಪಟ್ಟಣಗಾರಸೇಣ, ಜೋಡಿರೊಕ್ಕಲು, ಅರವತ್ತೊಕ್ಕಾಲು, ಮೇದಗೊತ್ತಳಿ, ಮಾದಿಗಗೊತ್ತಳಿ, ಸಮ

ಗಾರಸೇಣ, ಬೋಗಾರಗೊತ್ತಳಿ[೩೬] ಎಂಬುವವು ಉತ್ಪಾದಕ ವಿನಿಮಯ ವರ್ತಕ ಸಂಘಗಳಾಗಿದ್ದು ಅಂದಿನ ಆರ್ಥಿಕ ಚಟುವಟಿಕೆಗಳು, ಸಾಮಾಜಿಕ, ರಾಜಕೀಯ ಚಟುವಟಿಕೆಗಳಲ್ಲಿಯೂ ಪ್ರಮುಖ ಪಾತ್ರವಹಿಸಿರುವುದನ್ನು ಕಾಣುತ್ತೇವೆ. ಅಂದಿನ ಸಮಾಜದಲ್ಲಿ ಉತ್ಪಾದಕ ವಿನಿಮಯ ಸಂಘಗಳಲ್ಲಿ ಸೇವೆ ಸಲ್ಲಿಸುತ್ತಿದ್ದ ವರ್ತಕರ ದಾನದತ್ತಿಗಳು ಹಾಗೂ ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯ ವಿಧಾನಗಳಿಂದ ಇವರ ಪ್ರಾಮುಖ್ಯತೆಯ ಅರಿವು ನಮಗಾಗುತ್ತದೆ. ಇವುಗಳಲ್ಲಿ ಪ್ರಮುಖವಾದವುಗಳನ್ನು ಹೀಗೆ ವಿವರಿಸಬಹುದು:

* **ತೆಲ್ಲಿಗರೈವತ್ತೊಕ್ಕಲು**

ತೈಲ ತೀಲ್ ಎಂಬ ಸಂಸ್ಕೃತ ಪದದಿಂದ ಹುಟ್ಟಿದ ಪದದ ಅಪಭ್ರಂಶವೇ ತೆಲ್ಲಿ ಎಂಬುದಾಗಿದೆ. ಇದರಿಂದ ಎಣ್ಣೆ ತೆಗೆಯುವವನಿಗೆ ಮೂಲಪದವಾಗಿ ತೆಲ್ಲಿಗ ಉಪಯೋಗವಾಗುತ್ತದೆ. ಆದುದರಿಂದ ಎಣ್ಣೆಯನ್ನು ಉತ್ಪಾದನೆ ಮಾಡುವವರೇ ತೆಲ್ಲಿಗರು. ಇವರ ಇನ್ನೊಂದು ಹೆಸರು ಗಾಣಿಗರು[೩೭] ನಿತ್ಯೋಪಯೋಗಕ್ಕೆ ಅವಶ್ಯಕವಾಗಿ ಎಣ್ಣೆ ಬಹುಬೇಡಿಕೆಯ ವಸ್ತುವಾಗಿತ್ತು. ಈ ಬೇಡಿಕೆಯನ್ನು ಪೂರೈಸುವುದಕ್ಕೆ ಸಿದ್ದರಾಗಿ ತೆಲ್ಲಿಗರು ಅಂದಿನ ಸಮಾಜದಲ್ಲಿ ಪ್ರಧಾನ ಉತ್ಪಾದನಾ ಮತ್ತು ವಿನಿಮಯ ಸಂಘವಾಗಿ ಬೆಳೆದರು ಇವರು ಕಟ್ಟಿಕೊಂಡ ಸಂಘವೇ 'ತೆಲ್ಲಿಗರೈವತ್ತೊಕ್ಕಲು.'[೩೮] ಇದು ತೆಲ್ಲಿಗರ ಕೊತ್ತಳಿ, ತೆಲ್ಲಿಗಸೇಮಿ, ಐವತ್ತೊಕ್ಕಲು, ಗಾಣಿಗರೊಕ್ಕಲು, ಊರೈವತೊಕ್ಕಲು[೩೯] ಎಂಬ ಹೆಸರಿನಿಂದಲೂ ಕರೆಯಲ್ಪಡುತ್ತಿದ್ದಿತು. ಈ ರೀತಿಯ ಹೆಸರುಗಳು ಶಾಸನಗಳಲ್ಲಿ ಕಂಡುಬರುವುದರಿಂದ ತೆಲ್ಲಿಗರ ಮೂರೊಕ್ಕಲು, ತೆಲ್ಲಿಗನ್ನೂರರ್ಪದಿಂಬರು, ಗಾಣದವತ್ತೊಕ್ಕಲು ಎಂಬೆಲ್ಲ ಪದಸೂಚಿ ಉಪಯೋಗಗಳು ಗಾಣಿಗರ ಸಂಖ್ಯೆಯನ್ನು ಸೂಚಿಸುತ್ತವೆ. ಈ ಸಮುದಾಯದವರು ಆಂದ್ರಪ್ರದೇಶದ ಮೂಲದವರು ಎಂದು ಹೇಳಿದ್ದಾರೆ.[೪೦] ಅಲ್ಲದೇ ಪ್ರಾದೇಶಿಕವಾದ ಇವರ ವ್ಯತ್ಯಾಸವು ತಿಳಿದುಬರುತ್ತದೆ. ತೆಲ್ಲಿಗರೈವತ್ತೊಕ್ಕಲು ತೆಲ್ಲಿಗರ ಸಂಘದ ಸಾಂಪ್ರದಾಯಿಕ ಹೆಸರು ಆರಂಭದಲ್ಲಿ ಐವತ್ತು (ಬಕ್ಕಲು) ಜನ ತೆಲ್ಲಿಗರಿಂದ ರಚನೆಗೊಂಡು, ಆಮೇಲೆ ಸದಸ್ಯರ ಸಂಖ್ಯೆ ಎಷ್ಟೇ (ಹೆಚ್ಚು ಅಥವಾ ಕಡಿಮೆ) ಇದ್ದರೂ ತೆಲ್ಲಿಗರೈವತ್ತೊಕ್ಕಲು ನಾಮದಿಂದಲೇ ಕರೆಯಲ್ಪಡುತ್ತಿತ್ತು. ಬಹುತೇಕ ಪ್ರತಿಯೊಂದು ಗ್ರಾಮದಲ್ಲೂ ಎಣ್ಣೆಯ ಉತ್ಪಾದನೆ ಮಾರಾಟಗಳೆರಡೂ ತೆಲ್ಲಿಗರೇ ನೋಡಿಕೊಳ್ಳುತ್ತಿದ್ದರು.[೪೧] ಎಳ್ಳು, ಹರಳು, ಕಡಲೇ, ಕುರುಸಾಣಿ, ಸೂರ್ಯಕಾಂತಿ ಮೊದಲಾದ ಎಣ್ಣೆಕಾಳುಗಳನ್ನು ಎತ್ತಿನಗಾಣ.[೪೨] ಕೈಗಾಣ[೪೩] ಮೆಟ್ಟುಗಾಣ, ಹೊಯ್ದು ಗಾಣಗಳಲ್ಲಿ ಹಾಕಿ ಅರೆದು ಎಣ್ಣೆ ಉತ್ಪಾದಿಸುತ್ತಿದ್ದರು, ಒಂದೆತ್ತಿನ ಮೂಲಕ ಎತ್ತಿನಗಾಣ, ಕೈಯಿಂದ ಕೈಗಾಣ, ಕಾಲಿನಿಂದ ಮೆಟ್ಟುಗಾಣ ನಡೆಸುತ್ತಿದ್ದರು. ಸಾಮಾನ್ಯವಾಗಿ ಕಲ್ಲಿನಿಂದ ತಯಾರಿಸಿದ ಕಲ್ಲುಗಾಣಗಳನ್ನು ಬಳಸುತ್ತಿದ್ದರು. ಇಂತಹ ಸಾವಿರಾರು ಗಾಣದ ಕಲ್ಲುಗಳು ಇಂದಿಗೂ ಅನಾಥವಾಗಿ ಬಿದ್ದಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಕೊಳ್ಳಲಾಗಿದೆ. ವೈಯಕ್ತಿಕ ಗಾಣಗಳಂತೆ ದೇವಾಲಯದ ಹೆಸರಿನಲ್ಲಿಯೂ ದೇವಗಾಣಗಳಿದ್ದವು. ಇವುಗಳನ್ನು ದೇವಾಲಯದ ಆವರಣದಲ್ಲಿ ಅಥವಾ ಮುಂದೆ ಸ್ಥಾಪಿಸುವ ಪರಿಪಾಠವಿದ್ದಿತು. ನೀರ್ಥಡಿ ರಂಗನಾಥ ದೇವಾಲಯವನ್ನು ದಿಲ್ಲಿಯ ಅಲ್ಲವುದ್ದಿನ್ ಖಿಲ್ಜಿ ಸೈನ್ಯ ಬಂದು ದೇವಸ್ಥಾನ ಮತ್ತು ದೇವರ ವಿಗ್ರಹವನ್ನು ಹಾಳು ಮಾಡಿದ್ದರಿಂದ, ಆ ದೇವಾಲಯವನ್ನು ಜೀರ್ಣೋದ್ದಾರ ಮಾಡಿಸಿ ದೇವರನ್ನು ಪುನಃ ಪ್ರತಿಷ್ಠೆ ಮಾಡಿಸಿ ನೈವೇದ್ಯ ಮತ್ತು ನಂದಾ ದೀಪಕ್ಕೆ ಭರಮಸಾಗರ ಸೀಮೆಯ ಹೆಮ್ಮಹಟ್ಟಿ ಎಂಬ ಗ್ರಾಮವನ್ನು ದಾನಮಾಡಿ ದೇವಾಲಯದ ಮುಂದೆ ಕಸ್ತೂರಿ ಮದಕೇರಿನಾಯಕರ ಮಗ ಭರಮಣ್ಣನಾಯಕನು[೪೪] ದೇವಾಲಯದ ಮುಂದೆ ದೇವಗಾಣವನ್ನು ಸ್ಥಾಪನೆ ಮಾಡಿದ ಅಂಶ ನೀರ್ಥಡಿ ಶಾಸನವು ತಿಳಿಸುತ್ತದೆ. ಇವರು ಯಾವುದೇ ಧರ್ಮಕ್ಕೆ ಕಟ್ಟು ಬಿಳದೆ ತೆಲ್ಲಿಗರು ಎಲ್ಲ ಧರ್ಮದ ದೇವಾಲಯಗಳ ನಂದಾದೀಪಕ್ಕೆ ಎಣ್ಣೆಯನ್ನು ನೀಡುತ್ತಿದ್ದುದರಿಂದ ಅವರನ್ನು ಕುರಿತು ಬೆಣಚಮಟ್ಟಿಯ ಶಾಸನ ಹೇಗೆ ಹೇಳಿದೆ.

ಎಲ್ಲ ಧರ್ಮಗಳು ಮಂ
ತೆಲ್ಲಿಗರಾರಯ್ವರವರವೊಲು ಮತ್ತೋರ್ವರು
ಬಲ್ಲರೆ ಪುಣ್ಯಮನಾರ್ಜಿಪ
ಲೆಲ್ಲಾ ನಾಡೊಳಗೆ ಅವರ ಧರ್ಮಮ ಧರ್ಮಂ[೪೫]

ಹೀಗೆ ತೆಲ್ಲಿಗರು ಮಾಡುತ್ತಿದ್ದ ಕಾರ್ಯ ವ್ಯಾವಹಾರಿಕವಾಗಿ ವೃತ್ತಿಯಾದರೂ ಅವರ ಸಾಮಾಜಿಕ ಉಪಕಾರ ದೊಡ್ಡದೇ ಆಗಿದೆ. ಅದೇ ರೀತಿಯಾಗಿ ಬಿಟ್ಟೆಗೌಡ ಕೆಳಲ್ಲೂರ ಸೋಮದೇವರ ಮುಂದೆ ಗಾಣ ನಡೆಸಿದುದನ್ನು ಕಾರುಗಹಳ್ಳಿ ಶಾಸನ, ನಾಗಿದೇವ ನವಲೆನಾಡ ಮಣಗ ಹಳ್ಳಿಯ ರಾಮನಾಥದೇವರಿಗೆ ಗಾಣ ಮಾಡಿಸಿದ ವಿಷಯವನ್ನು ಕಟ್ಟೆಮನುಗನಹಳ್ಳಿ ಶಾಸನಗಳು ವ್ಯಕ್ತಪಡಿಸುತ್ತವೆ. ಇದು ತೆಲ್ಲಿಗರು ಹೊಂದಿದ್ದ ಧಾರ್ಮಿಕ ಶ್ರದ್ಧೆ ಮತ್ತು ತಮ್ಮ ವೃತ್ತಿಯ ಯಶಸ್ಸಿಗಾಗಿ ಕೈಗೊಳ್ಳುತ್ತಿದ್ದ ಧಾರ್ಮಿಕ ಸೇವೆಗಳ ಸಂಕೇತವಾಗಿದೆ.[೪೬] ತೆಲ್ಲಿಗರು ವಾಸಿಸುವ ಇಲ್ಲವೆ ಅವರ ವ್ಯಾಪಾರದ ಸ್ಥಳವನ್ನು ತೆಲ್ಲಿಗಗೇರಿ ಎಂದು ಕರೆಯುತ್ತಿದ್ದರು. ಇದೇ ರೀತಿಯ ಒಂದು ಬಡಾವಣೆಯನ್ನು ಚಿತ್ರದುರ್ಗ ನಗರ ಪ್ರದೇಶದಲ್ಲಿ ಗುರುತಿಸಬಹುದಾಗಿದೆ. ತೆಲ್ಲಿಗರೇಶ್ವರ ಅವರ ಮನೆ ದೇವರಾಗಿದ್ದು ಅವರು ಎಣ್ಣೆಯಲ್ಲಿ ಸುಗಂಧದ್ರವ್ಯ ಸೇರಿಸಿ, ಸುಗಂದದೆಣ್ಣೆ ತಯಾರಿಸುತ್ತಿದ್ದ ಮಾಹಿತಿ ದೊರಕುತ್ತದೆ.[೪೭] ಗಾಣಗಳಲ್ಲಿ ಉತ್ಪಾದಿಸಿದ ಎಣ್ಣೆಯನ್ನು ಕೊಡ, ಚರ್ಮದ ಚೀಲಗಳಲ್ಲಿ[೪೮] ತುಂಬಿಕೊಂಡು ತಲೆ, ಹೆಗಲ ಮೇಲಿಟ್ಟುಕೊಂಡೋ ಅಥವಾ ಬಂಡಿಗಳ ಮೂಲಕವೋ ಅಥವಾ ಪ್ರಾಣಿಗಳ (ಎತ್ತು, ಕತ್ತೆ, ಕೋಣ) ಮೇಲೆ ಹೇರಿಕೊಂಡು ಪ್ರತಿದಿನ ಹಾಗೂ ಸಂತೆದಿನ ಮಾರಾಟ ಮಾಡುತ್ತಿದ್ದ ಸಂಗತಿಯು ಶಾಸನಗಳಿಂದ ತಿಳಿದು ಬರುತ್ತದೆ.[೪೯] ಆದುದರಿಂದ ಶಾಸನಗಳಲ್ಲಿ ಇವರನ್ನು ತೆಲ್ಲಿಗಸೆಟ್ಟಿ ಹಾಗೂ ಅಯ್ವತ್ತೊಕ್ಕಲಸೆಟ್ಟಿಯರೆಂದು ಕರೆಯಲಾಗಿದೆ.[೫೦]ತೆಲ್ಲಿಗಳು ಉತ್ಪಾದನೆ ಮತ್ತು ಮಾರಾಟವನ್ನು ಸಮಾನವಾಗಿ ನಿರ್ವಹಿಸಿರುವುದು ಕಂಡುಬರುತ್ತದೆ. ಪ್ರಾಚೀನ ಮತ್ತು ಮಧ್ಯಕಾಲದಲ್ಲಿ ಗಾಣಗಳ ಮೇಲೆ ಗಾಣದೆರೆ, ಗಾಣಾಯ, ಗಾಣದ ಸುಂಕ, ಮೊದಲಾದ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು.[೫೧] ಅನೇಕ ಶಾಸನಗಳು ಗಾಣಿಗರ ಸತ್ಯ, ಸದಾಚಾರ, ಸಧರ್ಮ, ಸೌಜನ್ಯ, ಪರಾಕ್ರಮ ಮತ್ತು ಅವರ ದಾನಧರ್ಮ ಮೊದಲಾದವುಗಳನ್ನು ಪ್ರಕಟಪಡಿಸುತ್ತವೆ.[೫೨] ನಗರ, ಅನಂತಪುರ, ಇಕ್ಕೇರಿ, ಸೊರಬ, ಸಾಗರ, ಶಿಕಾರಿಪುರ, ಕುಮಸಿ, ಹಾರನಹಳ್ಳಿ, ಶಿವಮೊಗ್ಗ, ಗಾಜನೂರು, ಕೊಪ್ಪ, ಹೊನ್ನಾಳಿ, ಹೊಳೆ ಹೊನ್ನೂರು, ಹರಿಹರ, ಚನ್ನಗಿರಿ, ಬಸವಾಪಟ್ಟಣ, ಬೆಂಕಿಪುರ, ತರೀಕೆರೆ, ಅಜ್ಜಂಪುರ, ಅಸ್ತಾರೆ, ದಾನವಾಸ, ಬಾಳೆಹೊನ್ನೂರು, ಕವುಲೆದುರ್ಗ, ಹುಮಚ,[೫೩] ಜಗಳೂರು, ದಾವಣಗೆರೆ, ಚಳ್ಳಕೆರೆ, ದೊಡ್ಡೇರಿ, ಹಿರಿಯೂರು, ಹೊಸದುರ್ಗ, ಮೊಳಕಾಲ್ಮೂರು, ಚಿತ್ರದುರ್ಗ, ಸಂತೆಬೆನ್ನೂರು, ರಾಯದುರ್ಗ, ಹರ್ತಿಕೋಟೆ ಮುಂತಾದ ಶಾಸನಗಳು ಆಯಾಯ ಸ್ಥಳಗಳ ತೆಲ್ಲಿಗರನ್ನು ಸೂಚಿಸುತ್ತವೆ.

ಮುಖ್ಯವಾಗಿ ಈ ಉದ್ಯಮವು ಬೆಳೆಯುವುದಕ್ಕೆ ಅಂದಿನ ಜನರು ದೀಪಗಳಿಗೆ ಎಣ್ಣೆಯನ್ನು ಬಳಸುತ್ತಿದ್ದು ಕಾರಣವಾಗಿದೆ. ೧೯ನೇ ಶತಮಾನದವರೆಗೂ ಕರೆಂಟ್ ವ್ಯವಸ್ಥೆ ಇರಲಿಲ್ಲ. ಹಾಗಾಗಿ ದೀಪಗಳಿಗೆ ಮತ್ತು ಅಡುಗೆ ಮಾಡಲು ಅಂದಿನ ಸಮಾಜಕ್ಕೆ ಬೇಕಾದ ವಸ್ತು ಎಣ್ಣೆ ಆಗಿದ್ದರಿಂದ ಎಣ್ಣೆ ಉತ್ಪಾದನೆ ಮತ್ತು ಮಾರಾಟಗಳನ್ನು ವೈಯಕ್ತಿಕವಾಗಿ ಹಾಗೂ ಸಾಂಘಿಕವಾಗಿ ನಿರ್ವಹಿಸಿದವರು ಈ ತೆಲ್ಲಿಗರು ಮತ್ತು ತೆಲ್ಲಿಗರೈ ಮತ್ತೊಕ್ಕಲು ವರ್ತಕ ಸಂಘ.

* **ತೋಟಿಗರ್ಯೆನೂರ್ವರು**

ತೋಟ+ಇಗ=ತೋಟಿಗ ತದ್ದಿತ ನಾಮವಾಗಿದ್ದು,[೫೪] ಇದೊಂದು ತೋಟವನ್ನು ನಿರ್ವಹಿಸಿಕೊಂಡು ಹೋಗುವ ತೋಟಗಾರರ ಗುಂಪಾಗಿತ್ತು. ಇವರು ತಮ್ಮ ತೋಟಗಳಲ್ಲಿ ಅಡಿಕೆ, ತೆಂಗು, ಬಾಳೆ, ನಿಂಬೆ, ತಾಳೆ, ಅರಿಸಿಣ, ಮೆಣಸು, ಅಲ್ಲ(ಶುಂಠಿ), ಕಬ್ಬು, ಕಾಯಿಪಲ್ಲೆ, ವಿವಿಧ ರೀತಿಯ ಹೂಬಳ್ಳಿಗಳನ್ನು ನೆಟ್ಟು ಅವುಗಳಿಂದ ಉತ್ಪಾದಿಸಿದ ಬೆಳೆಗಳನ್ನು ಸಮೀಪದ ಸಂತೆ, ಪೇಟೆ, ಪಟ್ಟಣಗಳಿಗೆ ಹೋಗಿ ಮಾರಾಟ ಮಾಡುವ ವರ್ತಕರ ಗುಂಪನ್ನು ತೋಟಿಗರ್ಯೆನೂರ್ವ್ವರು ಎಂದು ಕರೆಯುತ್ತಾರೆ.[೫೫]

ಈ ತೋಟಿಗರು ತಮ್ಮ ವೃತ್ತಿ ವರ್ಧನೆ ಸಂರಕ್ಷಣೆಗಾಗಿ ಮಾಡಿಕೊಂಡ ಸಂಘದ ಹೆಸರು ತೋಂಟಗರ್ಯೆನೂರ್ವರು. ಆದರೆ ಈ ಸಂಘದ ಬಗೆಗೆ ಶಾಶನಗಳು ಹೆಚ್ಚಿನ ಸಂಗತಿಗಳನ್ನು ತಿಳಿಸುವುದಿಲ್ಲ. 'ಬಾಡಸರೊಕ್ಕಲು,' ತೋಂಟಿಗರ್ಯೆನೂರ್ವರು ಸಂಘದ ಪರ್ಯಾಯ ಪದವಾಗಿರಬಹುದೆ? ಒಟ್ಟಿನಲ್ಲಿ ಉತ್ಪಾದಕ–ವಿನಿಮಯ ಸಂಘವಾದ ಈ 'ತೋಂಟಿಗರ್ಯೆನೂರ್ವರು'[೫೬] ತನ್ನ ಕಾರ್ಯ ಚಟುವಟಿಕೆಗಳ ಮೂಲಕ ಗ್ರಾಮೀಣ ಜನರೊಂದಿಗೆ ಗಾಢವಾದ ಸಂಬಂಧವನ್ನು ಇಟ್ಟುಕೊಂಡಿದ್ದರು. ಈ ವೃತ್ತಿಯವರು ಸಂಘ ರಚಿಸಿಕೊಂಡು ಆ ಕಾಲದಲ್ಲಿ ಕ್ರಿಯಾಶೀಲರಾಗಿದ್ದರು. ಮುನವಳ್ಳಿಯ ತೋಂಟೆಗರನ್ನು ವಿಶೇಷವಾಗಿ ಹೊಗಳಿರುವುದನ್ನು ಒಂದು ಶಾಸನದಲ್ಲಿ ಕಾಣಬಹುದು.

"ತ್ಯಾಗದ ಪೆಂಪಿನ ನೆಲೆರ
ತ್ನಾಗರ ಮುನಿಪುರದ ತೋಂಟಿಗಪ್ಪೇಸರ್ವಡೆದ
ಬ್ಪೋಗದ ನಂನೀಯ ಛಲದು
ದ್ಯೋಗದ ಕಲಿತನದ ಬುಲುಪಿನಾರ್ವೆಂ
ಕೂರ್ಪಿಂ"[೫೭]

ಎಂದು ಈ ಸಂಘವನ್ನು ಉಲ್ಲೇಖಿಸಿದೆ.

ಚಿತ್ರದುರ್ಗ ಜಿಲ್ಲೆಯ ನೀರಗುಂದ ಗ್ರಾಮದ ಸಿದ್ದೇಶ್ವರ ದೇವಾಲಯದ ಮುಂದೆ ಇರುವ ಶಾಸನ[೫೮]ದಲ್ಲಿ ತೋಂಟಿಗರನ್ನು ವರ್ಣಿಸಿರುವ ಅಂಶ ತಿಳಿದುಬರುತ್ತದೆ.

* **ಮಾಲೆಗಾರ ನಾಲ್ವತ್ತೊಕ್ಕಲು**

ತೋಟಗಳಲ್ಲಿ ಹೂವುಗಳನ್ನು ಬೆಳೆದು ಜನರಿಗೆ ಮತ್ತು ದೇವಾಲಯಗಳಿಗೆ ಸರಬರಾಜು ಮಾಡುವವರನ್ನು ಮಾಲೆಗಾರರೆಂದು, ಅವರು ಕಟ್ಟಿಕೊಂಡ ಸಂಘವನ್ನು ಮಾಲೆಗಾರ ನಾಲ್ವತೊಕ್ಕಲು ಎಂದು ಶಾಸನಗಳು ಕರೆದಿವೆ. ಆರಂಭದಲ್ಲಿ ನಿಯತ ಸಂಖ್ಯೆಯಲ್ಲಿದ್ದ (ನಾಲ್ವತ್ತು) ಸಂಖ್ಯೆ ಕ್ರಮೇಣ ಬೇರೆಯಾಗಿದೆ. ದೇವಾಲಯಗಳಿಗೆ ಹೊಂದಿಕೊಂಡಂತೆ ಅಥವಾ ಸಮೀಪದಲ್ಲಿ ಹೂವಿನ ತೋಟಗಳು ಇರುತ್ತಿದ್ದವು. ನಿಯತವಾಗಿ ದೇವಾಲಯಕ್ಕೆ ಹೂವನ್ನು ನೀಡಲು ಹೂತೋಟಗಳ ದಾನವನ್ನು ಆ ಕಾಲದ ಶಾಸನಗಳಲ್ಲಿ ಕಾಣಬಹುದು.[೫೯] ಹೂವುಗಳನ್ನು ಆಯ್ದುತಂದು, ನಾನಾ ನಮೂನೆಯ ಮಾಲೆಗಳನ್ನು ಸಿದ್ದಪಡಿಸಿ ಮಾರುವ ವೃತ್ತಿಯೇ 'ಮಾಲೆಗಾರ ವೃತ್ತಿ.' ಹೂಗಾರಿಕೆ ಪೂಜಾದಿಗಳಿಗಾಗಿ ಹೂಗಳನ್ನು ತರುವ ವೃತ್ತಿಯವರು ಎಂಬರ್ಥದಿಂದ ಹೂಗಾರ, ಹೂವಿನ ಎಂಬ ಪದಗಳು ರೂಢಿಯಲ್ಲಿದ್ದರೆ 'ಮಾಲೆಯನ್ನು ಮಾಡುವವ' ಎಂಬರ್ಥದ ಮಾಲೆಗಾರ ಸರವಂದಿಗ, ಪೂವಡಿಗ ಎಂಬ ಪದಗಳು ಹಳೆಗನ್ನಡ ಕಾವ್ಯಗಳಲ್ಲಿ ಮತ್ತು ಪುರಾಣಗಳಲ್ಲಿ ಎಡೆಪಡೆದಿವೆ.[೬೦] ಶಾಸನಗಳು 'ಮಾಲೆಗಾಜಿ',[೬೧]

'ಮಾಲಗಾರ'[೬೨] ಎಂದೆಲ್ಲ ಉಲ್ಲೇಖಿಸಿವೆ. ಹೂವಿನಿಂದ ಮಾಲೆಗಳನ್ನು ಹೆಣೆಯುತ್ತಿದ್ದ ಮಾಲೆಗಾರನ ಉಲ್ಲೇಖ ವಚನವೊಂದರಲ್ಲಿದೆ.[೬೩]

ಸಂಸ್ಕೃತದ 'ಮಾಲಾಕಾರ' ಶಬ್ದದ ಕನ್ನಡ ರೂಪವೇ ಮಾಲೆಗಾರ ಶಿವನು ತಮ್ಮನ್ನು ಹೂ ಪತ್ರಿಗಳನ್ನು ಕೊಡುವ ಕಾಯಕ ಮಾಡಿಕೊಂಡಿರಲು ತಿಳಿಸಿ ಭೂಲೋಕಕ್ಕೆ ಕಳುಹಿಸಿರುವನು ಎಂಬ ನಂಬಿಕೆ ಹೂಗಾರರಿಗಿದೆ. ಇವರು ತಮ್ಮ ವಂಶದ ಮೂಲ ಪುರುಷ ಪುಷ್ಪದತ್ತ ಎಂದು ತಿಳಿದಿದ್ದಾರೆ. ನಂಬಿಯಣ್ಣನ ರಗಳೆಯಲ್ಲಿ ಇರುವ ಪುಷ್ಪದತ್ತನೇ ಇವನಾಗಿರಬೇಕು. ಸಮುದ್ರಮಂಥನ ಕಾಲದಲ್ಲಿ ಜನಿಸಿದ ಹಾಲಾಹಲವನ್ನು ಶಿವನು ಸ್ವೀಕರಿಸಬೇಕೆಂದು ಕೈಗೆತ್ತಿಕೊಂಡು ಅದರಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಅದಕ್ಕೆ ಪುಷ್ಪದತ್ತ ಎಂಬ ಹೆಸರನ್ನಿತ್ತನು. 'ಸಿರಿಮುಡಿಗೆ ಹೂವನಡಕುತ್ತ ಮಿರು' ಎಂದು ಅಜ್ಞಾಪಿಸಿದನು ಎಂಬ ಕಥಾಭಾಗ ಅಲ್ಲಿ ಬರುತ್ತದೆ.[೬೪]

ಚಿತ್ರದುರ್ಗ ಪ್ರದೇಶದಲ್ಲಿ ಅನೇಕ ದೇವಾಲಯಗಳು ಇದ್ದು ಇಲ್ಲಿ ದೇವಾಲಯಗಳ ಮುಂದೆ ಹೂವಿನ ಮಾಲೆ ಕಟ್ಟಿ ಮಾರಾಟ ಮಾಡುವ ಅನೇಕ ವರ್ತಕರ ಸಂಘಗಳನ್ನು ಗುರುತಿಸಬಹುದಾಗಿದೆ. ಹರಿಹರದ ಹರಿಹರೇಶ್ವರ ದೇವಾಲಯದಲ್ಲಿ ಇರುವ ಶಾಸನವೊಂದರಲ್ಲಿ, ಮಾಲೆಗಾರರಿಗೆ ವ್ಯಾಪಾರ ಮಾಡಲು ಜಾಗದ ಕೊರತೆ ಇತ್ತು. ಈ ಸಮಸ್ಯೆ ನಾಯಕರ ಮಟ್ಟಕ್ಕೆ ತಲುಪಿದ್ದು ಊರನ್ನು ಬಿಟ್ಟು ಹೋಗಿದ್ದ ಮಾಲೆಗಾರರಿಗೆ ಕರೆತಂದು, ದೇವಾಲಯದ ಎರಡು ಬೀದಿಯಲ್ಲಿ ಮಾಲೆಗಳನ್ನು, ಪತ್ರೆ, ಹಣ್ಣು, ಕಾಯಿಗಳನ್ನು ಮಾರಾಟ ಮಾಡಲು ಅವಕಾಶ ಕಲ್ಪಿಸಿ ಇವರಿಗೆ ಇಂತಿಷ್ಟು ಕಂದಾಯವನ್ನು ಪಾವತಿಸಬೇಕು ಎಂದು ತಿಳಿಸಿದ ವಿವರಣೆ ಇದೆ.[೬೫]

ಹಾಗೆಯೇ ಮಾಲೆಗಾರರಿಗೆ ಎಲ್ಲ ಪಾಳೆಯಗಾರರ ಹಾಗೂ ಮುಸ್ಲಿಂ ಆಡಳಿತದಲ್ಲಿಯೂ ವ್ಯಾಪಾರದಲ್ಲಿಯೂ ವಿಶೇಷ ಸ್ಥಾನಮಾನ ಹೊಂದಿದ ಸಂಘವಾಗಿತ್ತು ಎಂಬುವುದಕ್ಕೆ ಕಲ್ಯಾಣದ ಚಾಲುಕ್ಯರ ಕಾಲದ ಶಾಸನಗಳಲ್ಲಿ ಉಲ್ಲೇಖಗಳಿದ್ದು ಕ್ರಿ.ಶ.೧೧೯೭ರ ವಿಜಾಪುರ ಜಿಲ್ಲೆಯ ನಾದ ಶಾಸನದಲ್ಲಿ ಚಂಡೇಶ್ವರದೇವರ ಪೂಜೆ ಪುನಸ್ಕಾರ ನೈವೇದ್ಯಕ್ಕೆ ಮಾಲಗಾರರು ಬಿಟ್ಟುರು(ಬಿದಿರು) ಹೆಡಗೆಗೆ ನಾಲ್ಕು ಕಾಯಿ ಹೆಡಗೆಗೆ ಒಂದು ಹಿಡಿ ಬಾಡು ಎಂದು ಉಲ್ಲೇಖಿಸಿದೆ.[೬೬] ಗಬ್ಬೂರು ಶಾಸನದಲ್ಲಿ ಕನಕಗಿರಿಯ ಶ್ರೀ ನಾಗಭೂಷಣ ದೇವರ ಪೂಜೆ ಪುನಸ್ಕಾರಕ್ಕೆ ಗಬ್ಬೂರಿನ ಮಾಲೆಗಾರ ಅರವತ್ತೊಕ್ಕಲು ಮತ್ತು ಬಿಲ್ಲಿ ಮೂನ್ನೂರರು ಬಾಡುಕಾಯಿ ಮಾರಿದ ಹೆಡಗೆಯಲು ಅರವಾನ ಭತ್ತ ಹೊರಗೆ ಬಂದು ಮಾರುವ ಬಿಲ್ಲಕಾಯ ಹೆಡಗೆಗಂ ಉಪ್ಪಿನ ಹೆಡಗೆಯಲರುವಾನ ಭತ್ತ ಇಂತಿನಿತಾ ಬಿಟ್ಟರು ಇದ ಪ್ರತಿಪಾಳಿಸುವರು ಮಹಾಜನಂಗಳು[೬೭] ಎಂದು ಮಾಲೆಗಾರರನ್ನು ಕುರಿತಾದ ಅನೇಕ ಶಾಸನಗಳಿಂದ ಅವರ ಸಾಮಾಜಿಕ ಕಾರ್ಯ ವೈಖರಿಯನ್ನು ಗುರುತಿಸಬಹುದಾಗಿದೆ.

* **ಸಾಲೆ ಸಾಸಿರ್ವರು ಅಥವಾ ಸಮಯ ಸಾರ್ನೆವರು**

ಈ ಪದಗಳು ಸಾಮಾನ್ಯವಾಗಿ ಬಟ್ಟೆ ನೇಯುವ ವೃತ್ತಿಯ ನೇಕಾರರನ್ನು ಸೂಚಿಸುತ್ತವೆ.[೬೮] ಸಾಲ+ಇಗ=ಸಾಲಿಗ ಎಂದರೆ ಬಟ್ಟೆ ನೇಯುವವ ಎಂದಾಗುತ್ತದೆ.[೬೯] ಇವರ ಬಗೆಗೆ ವೇದಗಳ ಕಾಲದಿಂದಲೂ ಮಾಹಿತಿಗಳು ಲಭ್ಯವಾಗಿದ್ದು, ಗ್ರಹ್ಯ ಸೂತ್ರದಲ್ಲಿ ನೂಲುವ, ಹೆಣೆಯುವ ಮತ್ತು ಹೊಲೆಯುವ ಕಾರ್ಯಗಳಲ್ಲಿ ನಿರತರಾಗಿರುವವರನ್ನು ನೇಕಾರರು ಅಥವಾ ಸಾಲಿಗರು ಎಂದು ಉಲ್ಲೇಖಿಸಿದೆ. ಹನ್ನೆರಡನೇ ಶತಮಾನದ ವಚನಕಾರನಾದ ಜೇಡರ ದಾಸಿಮಯ್ಯನ ವಚನದಲ್ಲಿ ಹೀಗೆ ಉಲ್ಲೇಖಿಸಿದ್ದಾನೆ:

"ಉಂಕೆಯ ನಿಗುಚಿ ಸರಿಗೆಯ ಸಂಗಮಗೊಳಿಸಿ
ಸಮಗಾಲನಿಕ್ಕೆ ಅಣಿಯಳ ಮೆಟ್ಟಿದೆ
ಹಿಡಿದಲಾಳಯ ಮುಳ್ಳು ಕಂಡಿಕೆಯ ನುಂಗಿತ್ತು
ಈ ಸೀರೆಯ ನೇಯ್ದುವ ನಾನೋ ರಾಮನಾಥಾ

ಇಲ್ಲಿ ಉಂಡೆ, ಅಣಿ, ಲಾಳ, ಮುಳ್ಳು, ಕಂಡಿಕೆ ಇವು ನೇಯ್ಗೆಯ ಯಂತ್ರದ ವಿವಿಧ ಭಾಗಗಳಾಗಿವೆ.[೨೦] ಇಂತಹ ನೇಯ್ಗೆ ಯಂತ್ರಗಳ ಮೇಲೆ ಹಾಕಿದ ತೆರಿಗೆಯನ್ನು ಮಗ್ಗದೆರೆ[೨೧] ಎಂದು ಶಾಸನಗಳು ಹೆಸರಿಸಿವೆ.

ಈ ಸಾಲಿಗರು ಆಯಾ ಪ್ರದೇಶಗಳಲ್ಲಿ ದೊರೆಯುವ ಸಂಪನ್ಮೂಲಗಳನ್ನು ಬಳಸಿಕೊಂಡು ಉತ್ಪಾದಿಸಿದ ವಸ್ತುಗಳನ್ನು ಸಮೀಪದ ಸಂತೆ, ಪೇಟೆ, ಪಟ್ಟಣಗಳಲ್ಲಿ ಮಾರಾಟ ಮಾಡಲು ಅನುಕೂಲಕರವಾಗುವಂತೆ ತಮ್ಮದೆ ಆದ ಸಂಘಗಳನ್ನು ರಚಿಸಿಕೊಂಡಿದ್ದು ಇವುಗಳನ್ನು ಶಾಸನಗಳಲ್ಲಿ ಸಾಲೆಸಾಸಿರ್ವ್ವರು[೨೨] ಸಮಯ ಸಾಸಿವ್ವರು[೨೩] ಜೇಡಗೊತ್ತಳಿ,[೨೪] ಪಟ್ಟಗಾರ ಸೇಣಿ[೨೫] ಪಟ್ಟಗಾರ ಸಮಯ, ಪಟ್ಟಸಾಲಿಗ[೨೬] ಮೊದಲಾದ ಹೆಸರುಗಳಿಂದ ಗುರುತಿಸಲಾಗಿದೆ. ಸಾಮಾನ್ಯವಾಗಿ ಇವರು ಹತ್ತಿ, ಉಣ್ಣೆ, ಸೆಣಬು, ರೇಷ್ಮೆಗಳಿಂದ ಬಟ್ಟೆಗಳನ್ನು ನೇಯುತ್ತಿದ್ದರು. ನಯವಾದ ಬಟ್ಟೆಗಳನ್ನು ತಯಾರಿಸುವವರನ್ನು ಪಟ್ಟಗಾರರೆಂದು ಕರೆಯಲಾಗಿದೆ ಎಂಬ ಅಂಶವು ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ.

ಭಾರತದಲ್ಲಿನ ನೇಕಾರಿಕೆ ಸಿಂಧೂ ಸಂಸ್ಕೃತಿಯಷ್ಟೇ ಪುರಾತನವಾದದ್ದು. ಕ್ರಿ.ಶ.ಪೂರ್ವ ಒಂದನೇ ಶತಮಾನದಿಂದ ೧೮ನೇ ಶತಮಾನದವರೆಗೆ ಭಾರತದಲ್ಲಿ ಉತ್ಪಾದನೆಯಾಗುತ್ತಿದ್ದ ಹತ್ತಿ ಬಟ್ಟೆ ಪ್ರಪಂಚದಾದ್ಯಂತ ಪ್ರಮುಖ ಸ್ಥಾನವನ್ನು ಪಡೆದುಕೊಂಡಿತ್ತು. ಯುರೋಪ್, ಆಫ್ರಿಕಾ ಮತ್ತು ಕೊಲ್ಲಿ ದೇಶಗಳ ರಾಜ ಮಹಾರಾಜರು ಮತ್ತಿತರ ಶ್ರೀಮಂತ ವರ್ಗಕ್ಕೆ ಭಾರತೀಯ ಹತ್ತಿ ಉಡುಪುಗಳು ತುಂಬಾ ಅಚ್ಚುಮೆಚ್ಚಾಗಿದ್ದವು.

ಆ ಕಾಲದಲ್ಲಿಯೇ ಕರ್ನಾಟಕದಲ್ಲಿ ಉತ್ಪಾದನೆಯಾಗುತ್ತಿದ್ದ ಹತ್ತಿ ಬಟ್ಟೆಗಳು ಪ್ರಾಚೀನ ಗ್ರೀಕ್ ದೇಶಕ್ಕೆ ರಫ್ತಾಗುತ್ತಿತ್ತು. ಅನಂತರದ ದಿನಗಳಲ್ಲಿ ಹತ್ತಿ ಹಾಗೂ ರೇಷ್ಮೆ ವಸ್ತ್ರಗಳು ಜಗತ್ಪ್ರಸಿದ್ಧವಾಗಿ ಬ್ರಿಟಿಶರಿಂದಲೂ ಅತಿಯಾದ ಪ್ರಶಂಸೆಗೆ ಒಳಗಾಗಿದ್ದವು ಎಂಬುದನ್ನು ಯಾರೂ ಮರೆತಿಲ್ಲ. ಕರ್ನಾಟಕ ರಾಜ್ಯದಲ್ಲಿನ ನೇಕಾರಿಕೆಯ ಉದ್ಯಮದ ಉತ್ಪನ್ನಗಳು ಇಂದಿಗೂ ಸಹ ದೇಶ ವಿದೇಶಗಳಲ್ಲಿಯೂ ವ್ಯಾಪಾರದಲ್ಲಿ ಸ್ಥಾನಪಡೆದಿವೆ. ಅದು ಮೈಸೂರು ರೇಷ್ಮೆ ಸೀರೆ ಇರಬಹುದು, ಇಳಕಲ್ ಸೀರೆ ಇರಬಹುದು, ಮೊಳಕಾಲ್ಮೂರಿನ ಸೀರೆ ಇರಬಹುದು ಅಥವಾ ಬೆಂಗಳೂರಿನ ವಿವಿಧ ವಿನ್ಯಾಸದ ಸೀರೆಯೇ ಇರಬಹುದು. ಹೀಗೆ ಹೇಳುತ್ತಾ ಹೋದರೆ ಕರ್ನಾಟಕ ರಾಜ್ಯದಲ್ಲಿನ ವಿವಿಧ ಪ್ರಾಂತಗಳಲ್ಲಿನ ಜವಳಿ ಮತ್ತು ನೇಕಾರಿಕೆ ಉದ್ಯಮ ತನ್ನ ವಿಶಿಷ್ಟತೆಯ ಛಾಪನ್ನು ಮೂಡಿಸಿದೆ.[೨೭]

ನಾಯಕರ ಕಾಲದಿಂದಲೂ ಚಿತ್ರದುರ್ಗ ಪ್ರದೇಶವು ಕಂಬಳಿಗೆ ತುಂಬಾ ಹೆಸರು ಪಡೆದಿದೆ. ಹಾಗೆಯೇ ಮೇಲೆ ಹೇಳಿದಂತೆ ಮೊಳಕಾಲ್ಮೂರು ಸೀರೆ ಇಂದಿಗೂ ಮಾರುಕಟ್ಟೆಯಲ್ಲಿ ತನ್ನದೇ ಆದ ಹೆಸರನ್ನು ಗುರುತಿಸಿಕೊಂಡಿದೆ. ಹೊಸದುರ್ಗ ತಾಲ್ಲೂಕಿನ ಬೂದಿಹಾಳು ಕರಿ ಕಂಬಳಿಗೆ ತುಂಬಾ ಹೆಸರುವಾಸಿಯಾದ ಪ್ರದೇಶ. ಇಲ್ಲಿ ಉತ್ಪಾದಿಸಿದ ಕಂಬಳಿಗಳು ಮದ್ರಾಸ್ ಮತ್ತು ಮುಂಬೈ ಪ್ರಸಿಡೆನ್ಸಿಗೆ ಸರಬರಾಜು ಆಗುತ್ತಿತ್ತು[೨೮] ಎಂದು ತಿಳಿದು ಬರುತ್ತದೆ. ಹಾಗೆಯೇ ಮೊಳಕಾಲ್ಮೂರಿನಲ್ಲಿ ಇದ್ದ ನೇಕಾರರ

ಒಂದು ಸಂಘವನ್ನು ಬೆಂಗಳೂರಿಗೆ ಕರೆತಂದು ಮೊಳಕಾಲ್ಮೂರು ನೇಕಾರರ ಬೀದಿ ಎಂದು ಹೊಸ ಬೀದಿಯನ್ನು[79] ನಿರ್ಮಿಸಿದ ಕೀರ್ತಿ ಮೈಸೂರಿನ ಟಿಪ್ಪು ಸುಲ್ತಾನನಿಗೆ ಸಲ್ಲುತ್ತದೆ. ಹೀಗೆ ವಿನಿಮಯ ವರ್ತಕ ಸಂಘಗಳು ನೇಕಾರ ಸಮುದಾಯದಲ್ಲಿ ಇಂದಿಗೂ ಇರುವುದು ಕಾಣಬಹುದು. ಹಾಗೆಯೇ ಅನೇಕ ಶಾಸನಗಳು ಇವರನ್ನು ಕುರಿತ ಮಾಹಿತಿಯನ್ನು ನೀಡುತ್ತವೆ.

* **ಅರವತ್ತೊಕ್ಕಲು**

ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಸಹಕಾರ ತತ್ವದ ಮೇಲೆ ಬೆಳೆದು ಬಂದಿರುವ ಸಂಘಟನೆಗಳಲ್ಲಿ ಅರವತ್ತೊಕ್ಕಲು ಪ್ರಮುಖವಾದದ್ದು. ಇದು ಒಂದು ಕೃಷಿ ಸಂಘವಾಗಿದ್ದು ತನ್ನದೇ ಆದ ಪ್ರಾಮುಖ್ಯತೆಯನ್ನು ಉಳಿಸಿಕೊಂಡು ನಾಯಕರ ಕಾಲದಲ್ಲಿ ಪ್ರಬಲವಾಗಿ ಬೆಳೆದು ಬಂದಿರುವುದನ್ನು ಕಾಣುತ್ತೇವೆ. ಈ ಸಂಘಟನೆ ಹಾಗೂ ಅದರ ಸದಸ್ಯರ ಕಾರ್ಯ ಚಟುವಟಿಕೆಗಳ ಬಗ್ಗೆ ಕೆಳಕಂಡಂತೆ ನೋಡಬಹುದು:

ಅರವತ್ತೊಕ್ಕಲು ಎಂಬ ಪದವು ಎರಡು ಪದಗಳಿಂದ ಕೂಡಿದ್ದು ಅರವತ್ತು ಎಂಬುದು ಸಂಖ್ಯಾಸೂಚಕವಾದರೆ ಒಕ್ಕಲು ಎಂಬುದು ಕೃಷಿಕ, ರೈತ, ಯಜಮಾನ, ಮನೆತನ, ಕುಲ[80] ಎಂಬರ್ಥವನ್ನು ನೀಡುತ್ತದೆ. ಒಕ್ಕಲು ಪದಕ್ಕೆ ಕನ್ನಡದ ಸಮಾನ ಪದವು 'ಕುಟುಂಬಿಯನ್' ಸಂಸ್ಕೃತದಲ್ಲಿ 'ಗೃಹಪತಿ' ಎಂಬುದಾಗಿದೆ. ಅಲ್ಲದೆ ಒಕ್ಕಲು ಎಂದರೆ 'ಸಮಿತಿ' ಅಥವಾ ಅಧಿಕಾರಯುತ ಸಭೆಯೆಂತಲೂ ಅರ್ಥೈಸಲಾಗಿದೆ.[81] ಈ ಒಕ್ಕಲುಗಳಲ್ಲಿ ಸಾಮಾನ್ಯವಾಗಿ ಅರವತ್ತೊಕ್ಕಲು[82] ಎಂಬುವುದು ಕೃಷಿ ಸಂಘಟನೆಯಾಗಿದ್ದು ಅನಂತರದಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಮತ್ತು ಕಾಲದಿಂದ ಕಾಲಕ್ಕೆ ಈ ಸಂಖ್ಯೆಯಲ್ಲಿ ಭಿನ್ನತೆ ಕಂಡುಬಂದಿದ್ದು ನಾಲ್ವತ್ತೊಕ್ಕಲು[83] ಎಪ್ಪತ್ತೊಕ್ಕಲು[84] ಐವತ್ತೊಕ್ಕಲು, ನೂರೊಕ್ಕಲು, ನೂರಿಪ್ಪತ್ತೊಕ್ಕಲು[85] ಎಂದು ಉಲ್ಲೇಖವಾಗಿರುವುದನ್ನು ಕಾಣುತ್ತೇವೆ. ಇವುಗಳಲ್ಲಿ ಅರವತ್ತೊಕ್ಕಲು ಎಂಬುದು ಕೇವಲ ಕೌಟುಂಬಿಕ ನೆಲೆಯಾಗಿರದೆ ಎಷ್ಟೋ ರಾಜರುಗಳು ಆಜ್ಞೆಗಳನ್ನು ಹೊರಡಿಸುವಾಗ ಇವರನ್ನು ಸಂಬೋಧಿಸಿರುವುದು ತಿಳಿದುಬರುತ್ತದೆ. ಅಲ್ಲದೇ ದಾನಕ್ಕಾಗಿ ಭೂಮಿಯನ್ನು ಪಡೆಯುವಾಗ ಈ ಸಂಘದ ಅನುಮತಿಯನ್ನು ಪಡೆಯುವುದು ಕಂಡುಬರುವುದರಿಂದ ಉಳಿದ ಸ್ಥಳೀಯ ಸಂಘಗಳಂತೆ ಇದು ಒಂದು ಸಂಘವಾಗಿದ್ದಿತೆಂದು ಭಾವಿಸಬೇಕಾಗುತ್ತದೆ. ದಾವಣಗೆರೆ ಜಿಲ್ಲೆಯ ಕುಂದವಾಡ ಗ್ರಾಮದಲ್ಲಿ ಇರುವ ಶಾಸನದಲ್ಲಿ ಐಯ್ಯಾಹೊಳೆ ಐನೂರ್ವರು, ಉಭಯ ನಾನಾದೇಶಿ, ಮುಮ್ಮರಿದಂಡ, ಪಟ್ಟಣಸ್ವಾಮಿ, ಅರವತ್ತೊಕ್ಕಲು ಇವರು ಭೂಮಿಯನ್ನು ದೇವಾಲಯಕ್ಕೆ ದಾನ ನೀಡಿರುವ ಅಂಶ ತಿಳಿದುಬರುತ್ತದೆ.[86]

ಶಿವಮೊಗ್ಗ ಜಿಲ್ಲೆಯ ಕೂಡ್ಲಿ ಮತ್ತು ಕುನ್ನೂರು ಗ್ರಾಮದ ಶಾಸನಗಳು ಅರವತ್ತುಗೌಂಡು, ಅರವತ್ತುಗವುಡು ಪದಗಳನ್ನು ಉಲ್ಲೇಖಿಸಿದ್ದು ಅರವತ್ತೊಕ್ಕಲು ಸಂಘಕ್ಕೆ ಸಮಾನವೆಂದು ಹೇಳಬೇಕೆನ್ನುತ್ತಾರೆ.[87] ಒಕ್ಕಲುತನ ಮಾಡುವಲ್ಲಿ ಯಾವುದೇ ಒಂದು ಜಾತಿಗೆ ಸೀಮಿತವಾದ ಸಂಘವಾಗಿರದೇ ಇವರು ಹಲವು ಜಾತಿಯವರು ಸಂಘವನ್ನು ರಚಿಸಿಕೊಂಡ ಅಂಶವು ಈ ಅರವತ್ತೊಕ್ಕಲು ಸಂಘದಲ್ಲಿ ಗುರುತಿಸಬಹುದಾಗಿದೆ.

ಒಟ್ಟಾರೆ ಉತ್ಪಾದಕ ವಿನಿಮಯ ಸಂಘಗಳ ವರ್ತಕರು ವೈಯಕ್ತಿಕವಾಗಿ ಇಲ್ಲವೆ ಸಾಮೂಹಿಕವಾಗಿ ರಾಜ್ಯದ ಆರ್ಥಿಕ, ಧಾರ್ಮಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವುದರ ಮೂಲಕ ಸಮಾಜದ ಪ್ರಗತಿಗೆ

ಶ್ರಮಿಸಿರುವಂತೆಯೇ ಬಿಲ್ಲಮುನ್ನೂರ್ವ್ವರು,[೮೮] ಚಿಪ್ಪಿಗಗೊತ್ತಳಿ,[೮೯] ಕುರಬಸೇಣಿ,[೯೦] ಗಳೆಯ ಮೂನ್ನೂರ್ವ್ವರು,[೯೧] ಕಂಚುಗಾರ ಗೊತ್ತಳಿ,[೯೨] ಕಮ್ಮಾರ ಬಡಿಗ,[೯೩] ಲೆಂಕಸಾಸಿವ್ವರು,[೯೪] ಬಂಟ ಸಾರ್ಸಿವ್ವರು,[೯೫] ಕುಂಬಾರಗೊತ್ತಳಿ,[೯೬] ಸಮಗಾರ ಸೇಣ,[೯೭] ಮೊದಲಾದ ಉತ್ಪಾದಕ ವಿನಿಮಯ ವರ್ತಕ ಸಂಘಗಳ ಉಲ್ಲೇಖಗಳು ಶಾಸನ ಮತ್ತು ಕಾವ್ಯಗಳಲ್ಲಿ ಕಂಡುಬರುತ್ತವೆ. ಇವರ ಕಾರ್ಯ ವೈಖರಿ ಜೀವನಕ್ರಮ ಮೊದಲಾದವುಗಳ ಬಗೆಗೆ ಮಾಹಿತಿ ದೊರೆಯುವುದು ವಿರಳವಾಗಿದ್ದರೂ ಸಮಾಜದ ಪ್ರಗತಿಯಲ್ಲಿ ಇವರ ಕಾಣಿಕೆಯನ್ನು ಕಡೆಗಾಣಿಸಲಾಗದು.

**ಆ. ವಿನಿಮಯ ವರ್ತಕರು**

ವಿನಿಮಯ ವರ್ತಕರು ಮುಖ್ಯವಾಗಿ ವ್ಯಾಪಾರ ವೃತ್ತಿಯೊಂದನ್ನೇ ಅವಲಂಬಿಸಿರುವವರಾಗಿದ್ದಾರೆ. ಅಂದರೆ ಇವರು ನೇರ ಉತ್ಪಾದಕರಲ್ಲ. ವಿನಿಮಯ ವರ್ತಕರು, ಉತ್ಪಾದಕರಿಂದ ಖರೀದಿಸಿದ ವಸ್ತುಗಳನ್ನು ಗ್ರಾಹಕರಿಗೆ ಮಾರುವವರು, ಆದುದರಿಂದಲೇ ಇವರನ್ನು ವಿನಿಮಯ ವರ್ತಕರು ಎಂದು ಕರೆಯಲಾಗಿದೆ.[೯೮] ವಿನಿಮಯ ವರ್ತಕರಲ್ಲಿ ಪ್ರಾಯಶಃ ಯಾವುದೇ ನಿರ್ದಿಷ್ಟ ಗುಂಪುಗಳು, ಸಂಘಟನೆಗಳು ಇದ್ದಂತೆ ತೋರುವುದಿಲ್ಲ. ಆದರೆ ಇವರುಗಳಲ್ಲಿ ಹಲವಾರು ವೃತ್ತಿಪರ ಹೆಸರುಗಳು ಕಂಡುಬರುತ್ತವೆ. ಬಹುಶಃ ವಿನಿಮಯ ವರ್ತಕರು ಸಣ್ಣ ಸಣ್ಣ ಗುಂಪುಗಳಾಗಿ ಬೆಳವಣಿಗೆ ಹೊಂದಿದಂತೆ ತೋರುತ್ತದೆ. ಉದಾಹರಣೆಗೆ ಸೆಟ್ಟಿಗುತ್ತ, ಸೆಟ್ಟಿಬಣಂಜಿಗ(ಬಣಜಿಗ), ನಗರ, ಮುಮ್ಮರಿದಂಡ, ವಡ್ಡವ್ಯವಹಾರಿ, ಗವರೆ, ಗಾತ್ರಿಗ, ಸೆಟ್ಟಿಕಾರ, ಹಲರು, ಏಳಮೆ, ಬಲ್ಲಾಳು ಇತ್ಯಾದಿ. ಈ ಹೆಸರುಗಳು ಬೇರೆ ಬೇರೆಯಾದಂತೆ ವಿನಿಮಯ ವರ್ತಕರ ಹೆಸರುಗಳನ್ನು ಸೂಚಿಸುತ್ತವೆ. ಈ ಹೆಸರುಗಳು ಶಾಸನೋಕ್ತವಾಗಿಯೂ ಕಂಡುಬರುತ್ತವೆ.[೯೯] ಈ ಹೆಸರುಗಳನ್ನು ಗಮನಿಸಿದಾಗ, ಈ ಹೆಸರಿನ ಉಲ್ಲೇಖಗಳು ಅಂದು ಇದ್ದಿರಬಹುದಾದ ವ್ಯಾಪಾರದ ಒಳ ಮತ್ತು ಹೊರ ವಿವರವನ್ನು ನೀಡುತ್ತವೆ. ಅಂದರೆ ಈ ಹೆಸರುಗಳನ್ನು ವಿವರವಾಗಿ ಗಮನಿಸಿದಾಗ ಇವುಗಳ ಬೆಳವಣಿಗೆ ಹಾಗೂ ಅವುಗಳ ಕಾರ್ಯ ವ್ಯಾಪ್ತಿ ಇತ್ಯಾದಿ ವಿಷಯಗಳು ಬೆಳಕಿಗೆ ಬರುತ್ತವೆ. ಈ ಮೇಲೆ ಹೇಳಿದಂತೆ, ಈ ಹೆಸರುಗಳು ಪ್ರಾಯಶಃ ಗುಂಪುಗಳಂತೆ ಕೆಲಸ ನಿರ್ವಹಿಸುತ್ತಿರಲಿಲ್ಲ. ಏಕೆಂದರೆ ಸಾಮಾನ್ಯವಾಗಿ ಶ್ರೇಣಿ ಅಥವಾ ಗುಂಪನ್ನು ಸೂಚಿಸಲು ನಿರ್ದಿಷ್ಟವಾದ ಸಂಖ್ಯಾಸೂಚಕ ಪದಗಳು ಕಂಡುಬರುವುದಿಲ್ಲ. ಸಂಖ್ಯಾಸೂಚಕ ಪದಗಳು ವೃತ್ತಿಗಳ ಮುಂದೆ ಕಂಡುಬಂದಾಗ ಅವು ಸಾಮಾನ್ಯವಾಗಿ ಆ ವ್ಯಾಪಾರಿಗಳ ಸಂಘಟನೆಯನ್ನು ಸೂಚಿಸುತ್ತವೆ. ಈ ಮೇಲಿನ ಪದನಾಮಗಳಲ್ಲಿ ಸಂಖ್ಯೆಗಳು ಇಲ್ಲದೇ ಇರುವುದರಿಂದ ಇದೆಲ್ಲವು ಪ್ರತ್ಯೇಕವಾದ ವಿನಿಮಯ ವರ್ತಕ ಶ್ರೇಣಿಗಳಾಗಿದ್ದವು ಎಂದು ಹೇಳಬಹುದು.

* **ಸೆಟ್ಟಿಗುತ್ತ**

ಪ್ರಾಚೀನ ಮತ್ತು ಕರ್ನಾಟಕದ ವರ್ತಕ ಸಮುದಾಯಗಳಲ್ಲಿ ಸೆಟ್ಟಿಗುತ್ತ ಪಂಗಡವು ಒಂದಾಗಿದೆ. ಸೆಟ್ಟಿಗುತ್ತ ಪದದ ನಿಷ್ಪತ್ತಿ ತೊಡಕಿನದಾಗಿದೆ. ಚಿದಾನಂದ ಮೂರ್ತಿಯವರು ಸೆಟ್ಟಿ ಎಂಬುದು ಸಂಸ್ಕೃತದ ಶ್ರೇಷ್ಠಿಯ ತದ್ಭವವಾಗಿರುವುದನ್ನು ಹೇಳಿ, ಉತ್ತರ ಪದ ಕುತ್ತ=ಗುಂಪು ಎಂಬುದಾಗಿರಬಹುದೆಂದು (ಅಥವಾ ಸಂಸ್ಕೃತದ ಗುಪ್ತ? ಎಂದು) ಸೂಚಿಸುತ್ತಾರೆ.[೧೦೦] ಚಿನ್ನಕ ಎಲಿಗಾರ ಅವರು ಸೆಟ್ಟಿಗಳ ಕುತ್ಸ...ವೇ ಸೆಟ್ಟಿಗುತ್ತವಿರಬಹುದೆಂದು ಊಹಿಸಿದ್ದಾರೆ.[೧೦೧] ಬಿ.ಆರ್.ಹಿರೇಮಠ ಅವರು ಉತ್ತರ ಪದವನ್ನು ಗುತ್ತ ಕನ್ನಡ ನಾಮಪದವೆಂದು ಹೇಳಿ ಉನ್ನತವಾದ, ಶ್ರೇಷ್ಠವಾದ ಎಂಬ ಅರ್ಥಗ್ರಹಿಸಿ ಸೆಟ್ಟಿಗುತ್ತ

ಎಂದರೆ ಹಿರಿಯ ವರ್ತಕ ಅಥವಾ ವರ್ತಕರಲ್ಲಿ ಉನ್ನತ ಶ್ರೇಣಿಯವನೆಂದು ಅರ್ಥೈಸುತ್ತಾರೆ.[೧೦೦] ಊಹಾತ್ಮಕವಾಗಿದ್ದರಿಂದ ಈ ಅರ್ಥವನ್ನೂ ಒಪ್ಪುವಂತಿಲ್ಲ, ಅವರು ವ್ಯಾಪಾರಿಗಳು ಎಂಬುವುದಕ್ಕೆ ಅವರ ಕುರಿತಾದ ಅನೇಕ ಶಾಸನಗಳೂ ಇಂದಿಗೂ ಇವೆ.

ಮಧ್ಯಕಾಲೀನ ಚರಿತ್ರೆಯಲ್ಲಿ ವರ್ತಕರಿಗೆ ವಿಶೇಷವಾದ ಸ್ಥಾನಮಾನಗಳು ಇದ್ದವು ಎಂಬುದುಕ್ಕೆ ಈ ಸೆಟ್ಟಿ ಸಮುದಾಯವೇ ಉದಾಹರಣೆ. ಇವರು ಅರಸರಿಂದ ಛತ್ರಿ, ಚಾಮರ ಮತ್ತು ಸನ್ನದು ಪಡೆದು ಗಣ್ಯರಾಗಿದ್ದರು.[೧೦೧] ಆದ್ದರಿಂದಲೇ ಇವರನ್ನು ಶೆಟ್ಟಿ ಎಂಬ ಪದವು ಸಂಸ್ಕೃತ ಪದದ ಶ್ರೇಷ್ಟಿನ್ ಪದದ ತದ್ಭವವಾದ ಅರ್ಥವನ್ನು ನೀಡುತ್ತಾರೆ. ಇವರು ಎತ್ತುಗಳು, ಕತ್ತೆಗಳು, ಕೋಣಗಳ ಬಳಸಿ ಹಾಗೂ ತಲೆಯ ಮತ್ತು ಭುಜದ ಮೇಲೆ ಹೊತ್ತು ಪಟ್ಟಣಗಳಿಗೆ ಮತ್ತು ಸಂತೆಗಳಿಗೆ ಸಾಗಿಸುತ್ತಿದ್ದರು. ಇವರನ್ನು ನಖರ, ನಗರ, ಮಹಾನಖರ ಮತ್ತು ಮಹಾನಗರ ಎಂಬುದಾಗಿ ಶಾಸನಗಳಲ್ಲಿ ಕರೆಯಲಾಗಿದೆ. ಇವರು ಕ್ರಿ.ಶ.೧೨ನೇ ಶತಮಾನದಿಂದ ೧೮ನೇ ಶತಮಾನಗಳಲ್ಲಿ ದಕ್ಷಿಣ ಭಾರತದಲ್ಲಿ ಹೆಚ್ಚಾಗಿ ಕಾಣಿಸಿಕೊಂಡಿದ್ದಾರೆ.[೧೦೨] ಕೆ.ವಿ.ರಮೇಶ್ ಅವರ ಪ್ರಕಾರ ಶೆಟ್ಟಿಕಾರ ಮತ್ತು ಹಲರು ಸದಸ್ಯರು ನಗರದ ಅಥವಾ ಗ್ರಾಮದ ಸಂಘಗಳಾಗಿದ್ದವು.[೧೦೩] ಶೆಟ್ಟಿಗುತ್ತರು ಶೆಟ್ಟಿಗರ/ವೈಶ್ಯರ ಮುಖಂಡರಾಗಿದ್ದರು.[೧೦೪] ಶೆಟ್ಟಿಗುತ್ತರನ್ನು ಅರಬಲೆ-೭೦ರ ವೀರಬಣಂಜು ಧರ್ಮದ ಸಂರಕ್ಷಕರು ಮತ್ತು ಪ್ರೋತ್ಸಾಹಕರಾಗಿದ್ದರೆಂದು ಪ್ರಶಂಸಿಸಲಾಗಿದೆ.[೧೦೫]

ಚಿತ್ರದುರ್ಗ ಪ್ರದೇಶದಲ್ಲಿ ಕಂಡುಬರುವ ಬೇತೂರಿನ ಶಾಸನದಲ್ಲಿ ಸೆಟ್ಟಿಗುತ್ತರನ್ನು ಕುರಿತು ಈ ರೀತಿ ಹೇಳಿದೆ.

"ಕೊಂಡೆಯರಂ ದುರ್ಜನರಂ
ಗಂಡಿಗರಂ ತೆಗೆದು ತೆಗೆದು ಸಿಕ್ಷಿಪರಂ ತಾಂ
ಮಂಡಳದ ಸೆಟ್ಟಿಗುತ್ತ
ಮರ್ಂಡಿ ವಿಕ್ರಮಿಗಳೆಸೆವರವನೀತಳದೊಳ್"[೧೦೬]

ಸೆಟ್ಟಿಗರನ್ನು ಕುರಿತು ಚಿತ್ರದುರ್ಗ ಪ್ರದೇಶದಲ್ಲಿ ಅನೇಕ ಶಾಸನಗಳು ಇವೆ. ಅವರು ಒಂದೇ ವೃತ್ತಿಯನ್ನು ಮಾಡುತ್ತಿದ್ದರು ಎಂಬುದಕ್ಕೆ ಯಾವುದೇ ಮಾಹಿತಿಗಳು ಇಲ್ಲ. ಇವರು ಚಿನ್ನದ ಗಣಿಗಾರಿಕೆ ಸಂಬಂಧಿಸಿದಂತೆ ಒಂದು ಶಾಸನದಲ್ಲಿ ಚಿಮ್ಮತ್ತನಕಲ್ಲ ಪಟ್ಟಣಸ್ವಾಮಿ ಸೋಮಸೆಟ್ಟಿಯನ್ನು ಉಲ್ಲೇಖಿಸುವಾಗ ಚಿಂನದ ಗಣಿಕದ ಚವುಡಿ ಸೆಟ್ಟಿಯ ಉಲ್ಲೇಖವಿದೆ. ಚಿಂನ್ನದ ಗಣಿ ಈ ಪ್ರಾಂತ್ಯದಲ್ಲಿದ್ದುದರಿಂದ ಹಾಗೂ ಅದರ ಉಸ್ತುವಾರಿಯನ್ನು ಚವುಡಿ ಸೆಟ್ಟಿ ನಡೆಸುತ್ತಿದ್ದಿರಬಹುದು. ಬಾಗೂರಿನ ವ್ಯಾಪಾರ ಕೇಂದ್ರವಾದ ಹೊರಪೇಟೆಯನ್ನು ಕಟ್ಟಿಸುವಲ್ಲಿ ಸ್ಥಳೀಯ ನಾಯಕರಾದ ಲಿಂಗಣಗವುಡ, ಸೇನಭೋವ ತಿಂಮಪ್ಪ, ಹತ್ತಿಬಡಿಗೆಯ ಮಾದಪಸೆಟಿ, ಮಲ್ಲಪ್ಪಸೆಟ್ಟಿ... ಮುಂತಾದವರು ಕರೆಸಿಕೊಂಡು ಪೇಠೆಯನ್ನು ಕಟ್ಟಿಸಿದ ಶಾಸನದ ಉಲ್ಲೇಖವಿದೆ.[೧೦೭] ಒಟ್ಟಿನಲ್ಲಿ ಸೆಟ್ಟಿಗುತ್ತ ಅಥವಾ ಸೆಟ್ಟಿಗಳು ಈ ಪ್ರದೇಶದಲ್ಲಿ ಅತೀ ಹೆಚ್ಚಾಗಿ ಇರುವುದರಿಂದ ಇಂದಿಗೂ ಅಂದಿನ ದೊಡ್ಡಪೇಟೆಯಲ್ಲಿ ಅತೀ ಹೆಚ್ಚು ಅಂಗಡಿಗಳನ್ನು ಹೊಂದಿರುವ ಈ ಸಮುದಾಯದ ವ್ಯಾಪಾರಿಗಳನ್ನು ಗುರುತಿಸಬಹುದು.

* **ನಕರ**

ಶಾಸನಗಳಲ್ಲಿ ನಕರಂ, ನಗರಂ, ಸಮಸ್ತನಗರಂ, ಅಶೇಷ ನಕರಗಳು, ಪಂಚನಗಂ,[೧೦೮] ಎಂಬ ಪದಗಳು ಬಳಕೆಯಾಗಿರುವುದನ್ನು ಗಮನಿಸಿದಾಗ ನಕರಂ ಎಂಬುದು ಇನ್ನೊಂದು ಬಗೆಯ ವರ್ತಕ ಸೂಚಿ ಪದವಾಗಿದೆ. ನಕರಂಗಳು ಎಂದರೆ ಸಾಮಾನ್ಯವಾಗಿ ಗ್ರಾಮ ಪಟ್ಟಣಗಳಲ್ಲಿ ಸ್ಥಿರವಾಗಿ ಅಂಗಡಿಯನ್ನು ಇಟ್ಟುಕೊಂಡು ಇಲ್ಲವೆ ಬಯಲು ಅಂಗಡಿಗಳನ್ನು ಹಂಚಿಕೊಂಡು ಸಂತೆ, ಪೇಟೆ-ಪಟ್ಟಣಗಳಲ್ಲಿ ವ್ಯಾಪಾರ ಮಾಡುವ ಜನ ಸಮೂಹವಾಗಿದೆ.[೧೦೯] ಈ ವರ್ತಕರು ನಕರೇಶ್ವರ ಎಂಬ ದೇವರನ್ನು ಆರಾಧಿಸುತ್ತಿದ್ದರು. ಇಂದಿಗೂ ಚಿತ್ರದುರ್ಗ ನಗರದಲ್ಲಿ ನಕರೇಶ್ವರ ದೇವಾಲಯವಿದೆ. ಇವರು ಶೈವ ಮತ್ತು ಜೈನ ಮತಾವಲಂಬಿಗಳಾಗಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಶೈವ ನಕರರು ನಕರೇಶ್ವರ ದೇವರ ಆರಾಧಕರಾದರೆ (ಜಿನ) ಜೈನ ನಕರರ ಆರಾಧ್ಯ ದೈವ. ಇವರನ್ನು ಶಾಸನಗಳಲ್ಲಿ ಭವ್ಯನಕರ ಮಾಣಿಕ್ಯನಕರ ಎಂದು ಕರೆಯಲಾಗಿದೆ.[೧೧೦] ಈ ದೇವರ ಹೆಸರಿನಲ್ಲಿರುವುದು 'ನಕರ ಜಿನಾಲಯ'. ಶೈವ ನಕರರು ಕರ್ನಾಟಕದ ಪ್ರಮುಖ ಪಟ್ಟಣಗಳಲೆಲ್ಲ ಹರಡಿದ್ದರು. ಉದಯಪುರ, ಕೊಳಲ, ಆಳಂದ, ಅನ್ನಕೊಂಡ, ಪುಲಿಗೆರೆ, ಮುತ್ತಗೆ, ಶ್ರವಣಬೆಳಗೊಳ, ತಾತಂಗಿ ಪಟ್ಟಣ, ಮೊಸಳೆ, ಕಲ್ಲಬಾಳ, ಸಂತೆಯಕೆರೆ, ಹಾವೇರಿ, ನಿಡುಗಲ್ಲು, ಬೆಂಮತ್ತನೂರು, ಧರ್ಮಪಟ್ಟಣ ಮೊದಲಾದ ಕಡೆಗಳಲ್ಲಿ ವಾಸಿಸುತ್ತಿದ್ದ ಜೈನ, ಶೈವ ನಕರರು ಪ್ರಸಿದ್ಧರಾಗಿದ್ದಾರೆ.[೧೧೧] ಶಾಸನಗಳಲ್ಲಿ ನಕರರ ವಿವಿಧ ಗುಂಪುಗಳನ್ನು ಅವರು ಮಾರುವ ವಸ್ತುಗಳ ಹೆಸರಿನಲ್ಲಿ ಕರೆದಿರುವುದು ವಿಶಿಷ್ಟವಾಗಿದೆ. ನಕರರು ಕೈಗೊಳ್ಳುವ ಮಾರಾಟದ ವಸ್ತುವು ಅವರ ಹೆಸರಿಗೆ ಸೇರಿದಂತೆ ಉಪಯೋಗಿಸಿರುವುದು ಕಂಡುಬರುತ್ತದೆ. ಉದಾಹರಣೆಗೆ ಮಾಣಿಕ್ಯ ನಕರ[೧೧೨] (ಮಾಣಿಕ್ಯ ಮಾರುವವರು), ಚಿನ್ನಗೆಯಿಕದ ನಕರ,[೧೧೩] ತೆಲ್ಲಿಗೆನಕರ[೧೧೪] ಮುದ್ರಪಣದ ನಕರ[೧೧೫] ಗಂಧವಣದಂಗಡಿಯ ನಕರ[೧೧೬] ಬತ್ತವಸರದಂಗಡಿಯ[೧೧೭] ನಕರರೆಂದು ಶಾಸನೋಕ್ತ ದಾಖಲೆಗಳು ದೊರೆಯುತ್ತವೆ. ಕ್ರಿ.ಶ.೧೨ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಕರ್ನಾಟಕದ ನಕರ ವರ್ತಕ ಸಮುದಾಯದಲ್ಲಿ ಇವರು ಅಧಿಕ ಸಂಖ್ಯೆಯಲ್ಲಿದ್ದರೆಂಬುದನ್ನು ಶಾಸನಗಳ ಆಧಾರದಿಂದ ದೃಢಪಡಿಸಬಹುದು. ಚಿತ್ರದುರ್ಗ ಪ್ರದೇಶದ ಹಿಡಿಂಬೇಶ್ವರ ದೇವಾಲಯದ ಮುಂದೆ ಇರುವ ಶಾಸನದಲ್ಲಿ ಸಾಲು ೨೯ರಲ್ಲಿ ಈ ಧರ್ಮವನ್ನು ಬೆಂಮ್ಮತ್ತನೂರ ಪಟ್ಟಣದ ಚಟ್ಟಿಸೆಟ್ಟಿಯಂ ಬೊಂಮ್ಮಿ ಸೆಟ್ಟಿ ಭ್ರಾಂತಿಯಮಲ್ಲಿಸ್ಟೆ/ವೊಡೆಯಪಿಳ್ಳೆ ಸೆಟ್ಟಿಸಂಕೆಯನಾಯ್ಕನ ಬೊಂಮ್ಮಿಸೆಟ್ಟಿವೊಳಗಾದನಖರಂಗಳು ಆ ನಾಡಗರೇಜಿಆಬೆನಕಗ ಉಡ/ಸೀಗಲೆಯಕಲ್ಲ ಭಂಡಿಯ ಚಲುಡಗಲು.[೧೧೮] ಎಂದು ಇದೆ. ಇದೇ ಅಲ್ಲದೇ ಅನೇಕ ಶಾಸನಗಳು ಈ ಪ್ರದೇಶದಲ್ಲಿ ನಕರ ವರ್ತಕರನ್ನು ಉಲ್ಲೇಖಿಸಿರುವ ಶಾಸನದ ಪಠ್ಯಗಳನ್ನು ಗಮನಿಸಬಹುದು. ನಗರ ಪ್ರದೇಶಗಳಲ್ಲಿ ಈ ಸಮುದಾಯಗಳು ಹೆಚ್ಚಾಗಿ ಇರುವುದರಿಂದ "ನಗರ"[೧೧೯] ಎಂದು ಪಟ್ಟಗಳನ್ನು ಕರೆದಿರಬಹುದು. ಇವರು ಸತತ ಪರಿಶ್ರಮ, ಪ್ರಯತ್ನಗಳ ಮೂಲಕ ನಗರಗಳಲ್ಲಿ ವ್ಯಾಪಾರ ಚಟುವಟಿಕೆಗಳಿಗೆ ಜೀವ ತುಂಬಿದರು.

* **ವಡ್ಡ ವ್ಯವಹಾರಿ**

ವಡ್ಡ ವ್ಯವಹಾರಿ ವ್ಯಾಪಾರಿಗಳು ಕರ್ನಾಟಕದ ವ್ಯಾಪಾರ ವಾಣಿಜ್ಯ ಚರಿತ್ರೆಯಲ್ಲಿ ಅತ್ಯಂತ ಪ್ರಮುಖರೂ, ಅಧ್ಯಯನ ಯೋಗ್ಯರೂ ಆಗಿದ್ದಾರೆ. ವಡ್ಡ ವ್ಯವಹಾರಿ ಎಂಬ ಪದ ಹಿರಿಯ ವ್ಯಾಪಾರಿ ಎಂದು ಅರ್ಥ ಕೊಡುತ್ತದೆ. ತಮಿಳುನಾಡಿನಲ್ಲಿಯೂ ಇದ್ದ ಇವರನ್ನು 'ವಟ್ಟವಿಯಾರಿ' ಎಂದು

ಕರೆಯಲಾಗಿದೆ.[೧೨೦] ವಡ್ಡಬ್ಯೆವಹಾರಿ,[೧೨೧] ವೊಡ್ಡವ್ಯವಹಾರಿ,[೧೨೨] ವಹಬೆವಹಾರಿ,[೧೨೩] ಹೆಸರಿನ ಉಲ್ಲೇಖಗಳು ಶಾಸನೋಕ್ತವಾಗಿವೆ. ವಡ್ಡ ವ್ಯವಹಾರಿಗಳಲ್ಲದೆ ಮಹಾವಡ್ಡ ವ್ಯವಹಾರಿಗಳೂ ಇದ್ದರು. ಮಹಾವಡ್ಡಬ್ಯವಹಾರಿ,[೧೨೪] ಮಹಾವೊಡ್ಡಂ ಬೆವಹಾರಿ,[೧೨೫] ಮಹಾವಡ್ಡ ಬೆವಹಾರಿ,[೧೨೬] ಮಹಾವಡ್ಡ ಬ್ಯೆಹರಿ,[೧೨೭] ರೂಪಗಳೂ ಶಾಸನಗಳಲ್ಲಿ ತೋರಿಬರುತ್ತವೆ. ಮಹಾವಟ್ಟವಿಯಾಪಾರಿ ತಮಿಳಿನಲ್ಲಿರುವ ಹೆಸರು,[೧೨೮] ವಡ್ಡ ವ್ಯವಹಾರಿ ಮತ್ತು ಮಹಾವಡ್ಡ ವ್ಯವಹಾರಿಗಳಲ್ಲಿರುವ ಅಂತಸ್ತು ವ್ಯಾಪಾರ ವಾಣಿಜ್ಯಗಳಲ್ಲಿರುವ ಅಂತರವನ್ನು ಹೀಗೆ ಎಂದು ಎಳೆದು ಹೇಳಲು ಶಾಸನ ಸಾಹಿತ್ಯ ಆಧಾರಗಳಿಲ್ಲ. ಈ ಪದಗಳಲ್ಲಿ ಅಂತಹ ವಿಭಿನ್ನತೆ ಅಥವಾ ವ್ಯತ್ಯಾಸ ಕಂಡುಬರುವುದಿಲ್ಲ.[೧೨೯] ಮಹಾ ಎನ್ನುವುದು ಒಂದು ವಿಶೇಷವಾಗಿ ಅಥವಾ ಗೌರವ ವಾಚಿಯಾಗಿ ಬಳಕೆಯಾಗಿರಬಹುದು. ಕೆಳವು ಹೆಸರುಗಳ ಹಿಂದೆ 'ನಾಳ್ಪ್ರಭು ವಡ್ಡವ್ಯವಹಾರಿ',[೧೩೦] ಎಂಬಂತಹ ವಿಶೇಷಣಗಳು ಬರುವುದನ್ನು ನೋಡಿದರೆ ಅವರು ದೊಡ್ಡ ಜವಾಬ್ದಾರಿಯುತ ಅಧಿಕಾರವನ್ನೂ ನಿರ್ವಹಿಸುತ್ತಿದ್ದರೆಂದು ಭಾವಿಸಬಹುದು. ಅವರು ವ್ಯವಹಾರ ಮತ್ತು ಅಧಿಕಾರ ಎರಡನ್ನೂ ನಿರ್ವಹಿಸುತ್ತಿದ್ದರೆಂಬುದಕ್ಕೆ ಶಾಸನಗಳಲ್ಲಿ ಆಧಾರಗಳು ದೊರೆಯುತ್ತವೆ.[೧೩೧]

ವಡ್ಡ ವ್ಯವಹಾರಿಗಳನ್ನು ಕುರಿತಾದ ಶಾಸನಗಳನ್ನು ಅಧ್ಯಯನ ಮಾಡಿದಾಗ ವೈದಿಕ ವೈಶ್ಯಕುಲಕ್ಕೆ ಸೇರಿದವರಾಗಿದ್ದು, ರಾಜಶ್ರೇಷ್ಠಿ, ಮಹಾವಡ್ಡ ವ್ಯವಹಾರಿಗಳಾದ ಇವರ ಕಾರ್ಯ ವೈಖರಿಯ ಯಶಸ್ವಿಗಾಗಿ ಬ್ರಹ್ಮ, ಷಣ್ಮುಖ, ದುರ್ಗೆ, ಸರಸ್ವತಿ, ಮಹಾಲಕ್ಷ್ಮೀ, ಶಿವ, ಗಿರಿಜೆಯರಲ್ಲಿ ಮೊರೆಯಿಟ್ಟಿದ್ದು ಇತರ ವೈದಿಕ ಪರಂಪರೆಯಲ್ಲಿಟ್ಟಿರುವ ನಿಷ್ಠೆಯನ್ನು ಎತ್ತಿತೋರಿಸುತ್ತದೆ. ಅಲ್ಲದೆ ಈ ವಂಶದ ಮೂಲ ಪುರುಷರಾದ ಬಮ್ಮಿಸೆಟ್ಟಿ, ನಾಚಿಸೆಟ್ಟಿ, ಸೋವಿಸೆಟ್ಟಿಯ ನಂತರ ಬರುವ ಚೌಡಿ ಶೆಟ್ಟಿಯು ಕೇಶವ ದಂಡನಾಯಕನ ಆಸ್ಥಾನದಲ್ಲಿ ಸೇವೆಸಲ್ಲಿಸುತ್ತಿದ್ದು ಈತನ ಆಸ್ಥಾನವು ಸಂಪದ್ಭರಿತವಾಗಿರುವಂತೆ ನೋಡಿಕೊಂಡಿದ್ದ ಎಂಬುದನ್ನು ವಿವರಿಸಿರುವುದನ್ನು ಗಮನಿಸಿದಾಗ ಮುತ್ತುಗೆಯ ವಡ್ಡ ವ್ಯವಹಾರಿಗಳು ವೈದಿಕ ಪರಂಪರೆಯ ಮೂಲದವರಾಗಿದ್ದರೆಂದು ಸ್ಪಷ್ಟವಾಗುತ್ತಾರೆ.[೧೩೨]

ವಡ್ಡ ವ್ಯವಹಾರಿ ಶ್ರವಣಬೆಳಗೊಳ, ಚಿತ್ರದುರ್ಗ ಜಿಲ್ಲೆಯ ಕೋಗುಂಡಿ, ಹಾಸನ ಜಿಲ್ಲೆಯ ದೊಡ್ಡಗದ್ದವಳ್ಳಿ, ಅಂತರವಳ್ಳಿ, ಚಿಕ್ಕಮಗಳೂರು ಜಿಲ್ಲೆಯ ಹೆರಳಘಟ್ಟ ಹಾಸನ ಜಿಲ್ಲೆಯ ಬಸ್ತಿಹಳ್ಳಿ ಶಾಸನಗಳಲ್ಲಿ ಮಹಾವಡ್ಡ ವ್ಯವಹಾರಿಗಳು ದೇವಾಲಯಗಳನ್ನು, ಬಸದಿಗಳನ್ನು ನಿರ್ಮಿಸಿ, ಅವುಗಳ ನಿರ್ವಹಣೆಗಾಗಿ, ದುರಸ್ತಿಗಾಗಿ ಮತ್ತು ಪೂಜಾ ಸೇವೆಗಳಿಗಾಗಿ ದಾನ ನೀಡಿದ್ದನ್ನು ತಿಳಿಸುತ್ತವೆ. ಇಮ್ಮಡಿ ನರಸಿಂಹನ ಕಾಲದ ಕೆರೆಸಂತೆ ಶಾಸನವು ಮಹಾವಡ್ಡ ವ್ಯವಹಾರಿ ಸೋವಸಿ ಮಾಧವ ಭಟ್ಟಯ್ಯನ ಮಗ ಅಲ್ಲಾಳ ದೇವನು ಕೆರೆಯ ನಿರ್ವಹಣೆ ಮತ್ತು ಆ ಕೆರೆಗೆ ತೂಬನ್ನು ಅಳವಡಿಸುವುದಕ್ಕೆ ಹಣವನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.[೧೩೩]

ಚಿತ್ರದುರ್ಗ ಪ್ರದೇಶದಲ್ಲಿ ಕಂಡುಬರುವ ಕೋಗುಂಡಿ ಶಾಸನದಲ್ಲಿ ಕಂಮಟದ ಉಲ್ಲೇಖ ಬಂದಿದೆ. ಕಂಮಟದವರು ಎಂದರೆ ನಾಣ್ಯಗಳ ಅಚ್ಚು ಹಾಕುವವನು ಎಂದರ್ಥ, ಶ್ರೀ ಮನ್ಮಹಾವಡ್ಡ ವ್ಯವಹಾರಿ ರಾಜ ಶ್ರೇಷ್ಠಿ ಕೌಶ್ಯಪಗೋತ್ರದ ಕಂಮೆಕುಲದ ಕಂಮಟದ ಶ್ರೀ ಮಲ್ಲಿಯೋಗಪ್ಪ ಎಂಬುವವನ ಉಲ್ಲೇಖ ಬಂದಿದ್ದು ಇವನು ಈ ಪ್ರದೇಶದ ನಾಣ್ಯ ಚಲಾವಣಾಧಿಕಾರಿಯಾಗಿದ್ದಿರಬೇಕು.[೧೩೪]

ವಡ್ಡ ವ್ಯವಹಾರಿಗಳಲ್ಲಿ ಜೈನ ಮತೀಯರೂ ಇದ್ದಾರೆ. ಜೈನನಾದ ಸಿದ್ದಿಸೆಟ್ಟಿ ರಾಜ ಶ್ರೇಷ್ಠಿ ಮುಖ ತಿಳಿಕನು ಮಹಾವಡ್ಡ ವ್ಯವಹಾರಿಯೂ ಆಗಿದ್ದ. "ಸ್ವಸ್ತಿ ಸಮಸ್ತ ಗುಣ ಗಣಾಳಂಕಣ ಸತ್ಯ ಶೌಚಾಚಾರಾ

ಚಾರು ಚರಿತ್ರ ನಯವಿನಯ ಶೀಳ ಗುಣ ಸಂಪನ್ನ ಸುಜನ ಪ್ರಸಂನ ನಾಶ್ರೀತಜನ ಕಲ್ಪ ವೃಕ್ಷ ಸಕಳ ಕಳಾಸಿಕ್ಷನ ಖಿಳಾಸಾವಂತ್ತ ಸಸ್ತಾನ ಸಂದ್ಧಾರಣ ಜಿನ ಧರ್ಮ್ಮ ಹರ್ಮ್ಮರಮ್ಯ ರತ್ನ ತೋರಣ ನಿಜಕಲ ಕುವಳಯ ಸುಧಾಕರ ಸಮ್ಯಕ್ತ್ವ ರತ್ನಾಕರನಾಹಾರ ಭಯ ಭೈಷಜ್ಯ ಶಾಸ್ತ ರದಾನ ವಿನೋದ ಸಕಳಜನಾಗ್ಯಾವ" ಎಂಬ ಪ್ರಶಸ್ತಿ ಗದ್ಯದಲ್ಲಿ ಈತನ ಗುಣ ಸ್ವಭಾವ ಮನೋಧರ್ಮ್ಮಗಳನ್ನು ಗುರುತಿಸಬಹುದು. ಕೇತಿಸೆಟ್ಟಿ, ಸಾತಿಸೆಟ್ಟಿಯರು ಜೈನ ವಡ್ಡವ್ಯವಹಾರಿಗಳಾಗಿದ್ದನ್ನು ಗುತ್ತಲು ಶ್ರವಣಬೆಳಗೊಳ ಶಾಸನಗಳು ಉಲ್ಲೇಖಿಸುತ್ತವೆ.[೧೩೫]

ವಡ್ಡ ವ್ಯವಹಾರಿಗಳು ಮಧ್ಯಕಾಲೀನ ಚರಿತ್ರೆಯಲ್ಲಿ ಕೇವಲ ವ್ಯಾಪಾರಿಗಳು ಆಗಿರದೆ, ವ್ಯವಹಾರ ಮತ್ತು ಅಧಿಕಾರ ಎರಡನ್ನೂ ನಿರ್ವಹಿಸುತ್ತಿದ್ದರೆಂಬುದಕ್ಕೆ ಶಾಸನಗಳಲ್ಲಿ ಉಲ್ಲೇಖ ದೊರೆಯುತ್ತವೆ.

*** ಸೆಟ್ಟಿ ಬಣಜಿಗ ಮತ್ತು ಸೆಟ್ಟಿಗುತ್ತರು**

ವರ್ತಕರು ಪದದ ಸಮಾನಾರ್ಥಕ ಶಬ್ದವಾಗಿ ಸೆಟ್ಟಿ, ಬಣಜಿಗ ಪದಗಳು ಬಳಕೆಯಾಗಿವೆ. ಸೆಟ್ಟಿ ಎಂಬ ಪದವು ಸಂಸ್ಕೃತ ಪದವಾದ ಶ್ರೇಷ್ಠಿಯ ತದ್ಭವ ರೂಪವಾಗಿದೆ.[೧೩೬] ಮೂಲತಃ ವೃತ್ತಿ ವಾಚಿಯಾಗಿದ್ದ ಈ ಪದಗಳು ನಂತರದಲ್ಲಿ ಜಾತಿ ಸೂಚಕ ಪದಗಳಾಗಿ ಬೆಳೆದು ಬಂದಿವೆ. ಸಾಮಾನ್ಯವಾಗಿ ಬಣಂಜಿಗ ಸೆಟ್ಟಿಗಳನ್ನು ವೀರಬಣಂಜು,[೧೩೭] ವೀರವಣಿಗ,[೧೩೮] ಎಂದು ಕರೆಯಲಾಗಿದೆ. ಇವರು ವ್ಯಾಪಾರಕ್ಕಾಗಿ ಹೋಗುವ ವೇಳೆ ಸರಕುಗಳನ್ನು ಎತ್ತು, ಕೋಣ, ಕತ್ತೆ, ಮೊದಲಾದ ಪ್ರಾಣಿಗಳ ಮೇಲೆ ಹೇರಿಕೊಂಡು ಇಲ್ಲವೆ ತಲೆಯ ಮೇಲೆ ಹೊತ್ತುಕೊಂಡು ಹೋಗುತ್ತಿದ್ದುದರಿಂದ ಶಾಸನಗಳು ಇವರನ್ನು ಕತ್ತೆಶೆಟ್ಟಿ, ಕೋಣನಸೆಟ್ಟಿ, ಎತ್ತಿನ ವಣಿಜರು, ಹೇರುವ ಸೆಟ್ಟಿ, ಹೇರುವ ಬಣಜಿಗರು[೧೩೯] ಎಂದು ಹೆಸರಿಸಿರುವುದನ್ನು ಕಾಣುತ್ತೇವೆ. ಈ ಸೆಟ್ಟಿಯರಲ್ಲಿಯೇ ಉನ್ನತ ವರ್ಗಕ್ಕೆ ಸೇರಿದವರನ್ನು ಸೆಟ್ಟಿಗುತ್ತರೆಂದು ಕರೆಯಲಾಗಿದೆ.[೧೪೦]ಸೆಟ್ಟಿಗುತ್ತ ಎಂಬ ಪದದಲ್ಲಿನ ಗುತ್ತ ಎಂಬುವುದು ಗುಂಪು ಎಂಬ ಅರ್ಥವನ್ನು ಸೂಚಿಸುತ್ತದೆ. ಇದು ಸಂಸ್ಕೃತ ಪದವಾದ ಗುಪ್ತ ಎಂಬುವುದರ ರೂಪವಾಗಿದೆ.[೧೪೧] ಚನ್ನಕ್ಕ ಎಲಿಕಾರ ಅವರು ಸೆಟ್ಟಿಗಳ ಕುತ್ಸ....ವೇ ಸೆಟ್ಟಿಗುತ್ತ ಎಂದು ಕರೆದರೆ,[೧೪೨] ಬಿ.ಆರ್.ಹಿರೇಮಠರವರು ಗುತ್ತ ಎಂಬ ಉತ್ತರ ಪದವು ಕನ್ನಡ ನಾಮಪದವಾಗಿದ್ದು ಇದು ಹಿರಿಯ ಇಲ್ಲವೇ ಶ್ರೇಷ್ಠ ಎಂಬ ಅರ್ಥವನ್ನು ಸೂಚಿಸುವುದರಿಂದ ಸೆಟ್ಟಿಗುತ್ತ ಎಂಬುವುದು ಹಿರಿಯ ವರ್ತಕರು ಇಲ್ಲವೆ ಉನ್ನತ ವರ್ಗದ ವರ್ತಕರನ್ನು ಸೂಚಿಸುವ ಪದವಾಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.[೧೪೩] ಹೀಗೆ ಸೆಟ್ಟಿಗುತ್ತ,[೧೪೪] ತಳದ ಸೆಟ್ಟಿಗುತ್ತ,[೧೪೫] ಪಟ್ಟಣದ ಸೆಟ್ಟಿಗುಪ್ತ,[೧೪೬] ಮಂಡಳದ ಸೆಟ್ಟಿಗುತ್ತ,[೧೪೭] ನಾಡಸೆಟ್ಟಿಗುತ್ತ,[೧೪೮] ಎಂದು ಶಾಸನಗಳಲ್ಲಿ ಗುರುತಿಸಿರುವುದನ್ನು ಕಾಣುತ್ತೇವೆ. ಹೀಗೆ ವ್ಯಾಪಾರ ವೃತ್ತಿಯಲ್ಲಿ ನಿರತರಾಗಿರುವ ಸೆಟ್ಟಿ, ಬಣಂಜು, ಸೆಟ್ಟಿಗುತ್ತರ ಮೂಲ ಹಾಗೂ ಕಾರ್ಯ ವೈಖರಿಗಳನ್ನು ಹೀಗೆ ಗುರುತಿಸಬಹುದಾಗಿದೆ.

ಈ ಸಮುದಾಯದವರನ್ನು ಚಿತ್ರದುರ್ಗ ಪ್ರದೇಶದಲ್ಲಿ ೩ ಪಂಗಡಗಳಾಗಿ ಗುರುತಿಸಬಹುದು. ಅವುಗಳೆಂದರೆ ಪಂಚಮ ಬಣಜಿಗರು, ಜೈನ ಬಣಜಿಗರು ಮತ್ತು ತೆಲುಗು ಬಣಜಿಗರು, ಚಿತ್ರದುರ್ಗ ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ತೆಲುಗು ಮತ್ತು ಪಂಚಮ ಬಣಜಿಗರು ಕಂಡುಬರುವರು. ಇವರು ಹೆಚ್ಚು ಪ್ರಾಮುಖ್ಯತೆಯನ್ನು ಹೊಂದಿದ್ದ ವರ್ಗವಾಗಿದ್ದಾರೆ. ಅದರಲ್ಲಿಯೂ ತೆಲುಗು ಬಣಜಿಗರಲ್ಲೂ ಶೇಕಡ ೬೪ರಷ್ಟು ಭಾಗ ವ್ಯಾಪಾರ ವಾಣಿಜ್ಯದಲ್ಲಿ ತೊಡಗಿಸಿಕೊಂಡಿದ್ದಾರೆ.[೧೪೯] ಇವರು ಕನ್ನಡ ಮತ್ತು ತೆಲುಗು ಭಾಷೆಯನ್ನಾಡುವ ವರ್ತಕ ಸಮುದಾಯದವರು, ಬಹುಪಾಲು ಇವರಲ್ಲಿ ವರ್ತಕ ವೃತ್ತಿಯನ್ನು

ಪಾಲಿಸುವವರು. ಕೆಲವರು ಮಾತ್ರ ಕೃಷಿಕರಾಗಿದ್ದರು. ಅತೀ ಹೆಚ್ಚಿನ ವ್ಯಾಪಾರವನ್ನು ದುರ್ಗ ಪ್ರದೇಶದಲ್ಲಿ ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿರುವ ಈ ಸಮುದಾಯವು ಅನೇಕ ಉಪ ಪಂಗಡಗಳನ್ನು ಒಳಗೊಂಡಿದೆ. ತೆಲುಗು ಬಣಜಿಗರಲ್ಲಿ ಹಲವು ಉಪಪಂಗಡಗಳಿವೆ. ೧. ದಾಸ ಬಣಜಿಗರು, ೨. ಎಲೆ ಅಥವಾ ತೋಟ ಬಣಜಿಗರು, ೩. ದುಡಿ ಬಣಜಿಗರು (ಇವರು ಹತ್ತಿ ವ್ಯಾಪಾರ ಮಾಡುವವರು), ೪. ಗಾಜಿಲ ಬಣಜಿಗರು (ಬಳೆ ಮಾರಾಟಗಾರರು), ಇವರಲ್ಲಿ ಎಲೆ ಮತ್ತು ದಾಸ ಬಣಜಿಗರು ವೀಳ್ಯದೆಲೆಯ ಬೆಳೆಗಾರರು ಮತ್ತು ಮಾರಾಟಗಾರರಾಗಿದ್ದು, ಇದರ ಉಪಪಂಗಡದವರು ಹೆಚ್ಚಾಗಿ ಕನ್ನಡ ಮಾತನಾಡುತ್ತಾರೆ. ಬಣಜಿಗರು ಬಲಗೈ ವರ್ತಕ ಸಮುದಾಯಗಳಿಗೆ ಮುಖ್ಯಸ್ಥರಾಗಿದ್ದು, ಸಮಾಜದಲ್ಲಿ ಪ್ರಬಲ ವರ್ಗವಾಗಿತ್ತು, ಇವರನ್ನು ದೇಶದ ಸೆಟ್ಟಿ ಎಂದು ಕರೆಯಲಾಗುತ್ತಿತ್ತು.[೧೫೦] ಇವರು ಚಿತ್ರದುರ್ಗ ನಗರದ ಪ್ರಮುಖ ವ್ಯಾಪಾರ ಪೇಟೆ ಬೀದಿಗಳಲ್ಲಿಯ ನೆಲೆಗಳಾದ ನಗರ್ತ ಪೇಟೆ, ದೊಡ್ಡಪೇಟೆ, ಸಣ್ಣಪೇಟೆಗಳಲ್ಲಿ ನೆಲೆಸಿ ನಂತರ ಸುತ್ತಲೂ ಇರುವ ಸಣ್ಣ ಸಣ್ಣ ಪಟ್ಟಣಗಳಲ್ಲಿ ಕಚ್ಚಾ ಹತ್ತಿ, ರೇಷ್ಮೆ, ಬಳೆ, ದಿನಸಿ ಅಂಗಡಿ ಮುಂತಾದವುಗಳ ಆಮದು, ರಫ್ತು ಮತ್ತು ಸಾಗಣಿಕೆ ಮಾಡುವ ವ್ಯವಹಾರದಲ್ಲಿ ತೊಡಗಿಸಿಕೊಂಡಿದ್ದರು. ಇವರು ಸೆಟ್ಟಿಗಳೆಂಬ ಸರ್‌ನೇಮ್ ಹೊಂದಿದ್ದರು. ಬಟ್ಟೆ ವ್ಯಾಪಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ.[೧೫೧] ಚಿತ್ರದುರ್ಗ ಪ್ರದೇಶದಲ್ಲಿ ೧೬–೧೮ನೇ ಶತಮಾನದ ಆರಂಭದವರೆಗೂ ಬಣಜಿಗರ ಸಮುದಾಯವು ಪ್ರಮುಖವಾದ ವಿನಿಮಯ ವರ್ತಕ ಸಮುದಾಯವಾಗಿತ್ತು. ಅರ್ಥಶಾಸ್ತ್ರಜ್ಞರಾದ ನರೇಂದ್ರ ಪಾಣಿಯವರು ತಿಳಿಸುವಂತೆ ಜವಳಿ ಉದ್ಯಮದಲ್ಲಿ ಪ್ರಬಲ ವ್ಯವಹಾರಸ್ಥರೆಂದು ಕರೆಸಿಕೊಂಡವರು ಇವರು. ದಾವಣಗೆರೆ ಮತ್ತು ಚಿತ್ರದುರ್ಗ ಪ್ರದೇಶಗಳು ಅಪಾರ ಪ್ರಮಾಣದ ಹತ್ತಿ ಬೆಳೆಗೆ ಹೆಸರನ್ನು ಪಡೆದಿರುವ ಪ್ರದೇಶಗಳಾಗಿವೆ. ಅಲ್ಲಿ ನೆಯ್ಗೆಯ ಉದ್ಯಮ ಆರಂಭವಾಗಿ ಭಟ್ಟೆ ವ್ಯಾಪಾರ ಜಾಗತೀಕ ಮಟ್ಟದಲ್ಲಿ ನಡೆಯಲು ಈ ಸಮುದಾಯ ಮೂಲ ಕಾರಣ. ಬಣಜಿಗ ಸಮುದಾಯವು ಅಂದಿನ ಪ್ರಭುತ್ವದೊಡನೆ ಉತ್ತಮ ಸಂಬಂಧ ಹೊಂದಿತ್ತು ಎಂಬುದು ಸಹ ಈ ಪಲ್ಲಟಕ್ಕೆ ಕಾರಣವಾಗಿದೆ. ಹಾಗೆಯೇ ದೇವಾಂಗದವರ ಮುಖ್ಯ ಕಾರ್ಯ ಕಚ್ಚಾ ಹತ್ತಿ ಒದಗಿಸುವುದೇ ಹೊರತು ಹತ್ತಿ ಬಟ್ಟೆ ಉತ್ಪಾದನೆಯಾಗಿಲ್ಲ ಎಂಬುದು ಗಮನಾರ್ಹ.[೧೫೨]

ಬಣಜಿಗರು ಊರಿಂದ ಊರಿಗೆ ಸರಕುಗಳನ್ನು ತೆಗೆದುಕೊಂಡು ಹೋಗಿ ಮಾರುತ್ತಿದ್ದ ವೃತ್ತಿಯವರು. ಸ್ಥಳದಿಂದ ಸ್ಥಳಕ್ಕೆ ಪ್ರಯಾಣಿಸುತ್ತಿದ್ದ ಇವರು ಕಳ್ಳರ ಹಾವಳಿಯಿಂದ ರಕ್ಷಿಸಿಕೊಳ್ಳಲು ರಕ್ಷಣಾ ಪಡೆಯನ್ನು ನೇಮಿಸಿಕೊಂಡಿದ್ದರೇ ಎಂಬ ಪ್ರಶ್ನೆ ಎದುರಾಗುತ್ತದೆ. ರಕ್ಷಣೆಗಾಗಿ ಒಲ್ಲಿ ಮೂರ್ನೂರ್ವರನ್ನು ನೇಮಿಸಿಕೊಳ್ಳುತ್ತಿದ್ದರೆಂದು ಬಿ.ಆರ್.ಹಿರೇಮಠ ಅವರು ಅಭಿಪ್ರಾಯ ಪಡುತ್ತಾರೆ.[೧೫೩] ನಯಸೇನನ ಧರ್ಮಾಮೃತದಲ್ಲಿ ವಸುಭೂತಿಯು ವ್ಯಾಪಾರಿಯ ಜೊತೆ ಪ್ರಯಾಣಿಸುವಾಗ ನಂದ್ಯಾವಲಿಯೆಂಬ ಕಾಡಿನ ಮಧ್ಯೆ ಬೀಡು ಬಿಟ್ಟಿದ್ದಾಗ ಬೇಡರ ಆಕ್ರಮಣವಾದಾಗ ಸೆಟ್ಟಿ ತನ್ನ ಪಡೆಯೊಡನೆ ಹೋರಾಡಿದ ಸನ್ನಿವೇಶ ಬರುತ್ತದೆ.[೧೫೪] ದೊಡ್ಡ ದೊಡ್ಡ ವ್ಯಾಪಾರಿಗಳು ಅಗತ್ಯಕ್ಕೆ ತಕ್ಕ ರಕ್ಷಣಾ ಸೇನೆಯನ್ನು ನೇಮಿಸಿಕೊಂಡಿದ್ದರು. ಆದರೆ ಸಣ್ಣಪುಟ್ಟ ವ್ಯಾಪಾರಿಗಳಿಗೆ ಆಗಾಗ ಕಳ್ಳಕಾಕರಿಂದ ತೊಂದರೆಯಾಗುತ್ತಿತ್ತೆಂದು ತೋರುತ್ತದೆ. ತಮ್ಮ ಪ್ರವಾಸ ಕಾಲದಲ್ಲಿ ತಮಗೆ ಅನೇಕ ರೀತಿಯಲ್ಲಿ ನೆರವಿಗೆ ಬರುವ ನಂಬಿಕಸ್ಥರಾವ ವೀರರನ್ನು ನೇಮಿಸಿಕೊಳ್ಳುತ್ತಿದ್ದರೆಂದು ಹೇಳಬಹುದು.

### * ಗವರೆ–ಗಾತ್ರಿಗರು

ಗವರೆ–ಗಾತ್ರಿಗ ಎಂಬ ಪದಗಳು ಜೋಡಿ ಪದಗಳಂತೆ ಕಂಡುಬಂದರೂ ಇವು ಪ್ರತ್ಯೇಕ ವರ್ತಕ ಪ್ರಕಾರಗಳು ಎಂಬುವುದು ಶಾಸನಗಳಿಂದ ತಿಳಿದುಬರುತ್ತದೆ. ಗವರೆಎಂದರೆ ಬುಟ್ಟಿ ಗಾತ್ರಿಗ ಎಂದರೆ ವಿಳ್ಳೆ ದೆಲೆಗಳ ಕಟ್ಟು (ಗಾತ್ರ) ಎಂಬುವುದು ಶಬ್ದದ ಅರ್ಥವಾಗಿದೆ.[೧೫೫] ಗವರೆ ಎಂದರೆ ಕತ್ತೆ ಮೊದಲಾದ ಪ್ರಾಣಿಗಳ ಮೇಲೆ ವೀಳ್ಯದೆಲೆ ಹೇರಿಕೊಂಡು ಊರಿಂದೂರಿಗೆ ಅಲೆಯುತ್ತ ವ್ಯಾಪಾರ ಮಾಡುವ ವರ್ತಕರು ಗಾತ್ರಿಗರು ಎಂದರೆ ಒಂದು ಸಾವಿರ ವೀಳ್ಯದೆಲೆಗಳ ಕಟ್ಟುಳ್ಳುರು ಗಾತ್ರ ಇಂತಹ ಕಟ್ಟುಗಳನ್ನು ತಲೆ, ಹೆಗಲು ಮೇಲೆ ಹೊತ್ತು ಇಲ್ಲವೇ ಪ್ರಾಣಿಗಳ ಮೇಲೆ ಹೇರಿಕೊಂಡು ವ್ಯಾಪಾರ ಮಾಡುವವರು ಎಂದು ಬಿ.ಆರ್.ಹಿರೇಮಠರು ಅಭಿಪ್ರಾಯ ಪಟ್ಟಿದ್ದಾರೆ.[೧೫೬] ಬಳ್ಳಾರಿ ಶಾಸನವೊಂದರಲ್ಲಿ ಕೊಟ್ಟ ನಾಸನಮೆ...ಡೆಲೆಯ ಗಾತ್ರಕ್ಕೆ ಸಾಸಿರೆಲೆಯರ್ದ್ದ ಗಾತ್ರಕ್ಕಯ್ನೂರಲೆ[೧೫೭] ಎಂದು ಉಲ್ಲೇಖಿಸಿದ್ದು ಇದು ಗಾತ್ರಕ್ಕೆ ಸಾವಿರ ಎಲೆಗಳೆಂದು ಅರ್ಧಗಾತ್ರಕ್ಕೆ ಐದನೂರು ಎಲೆಗಳೆಂದು ಸ್ಪಷ್ಟವಾಗಿ ಹೇಳುತ್ತಾರೆ. ಆದ್ದರಿಂದ ಗಾತ್ರ ಎಂದರೆ ಸಾವಿರದು ಕಟ್ಟು ಎಂದು ಅರ್ಥವಾಗುತ್ತದೆ. ಆದರೆ ಚಿದಾನಂದಮೂರ್ತಿಯವರು ಗಾತ್ರಿಗ ಎನ್ನುವುದು ಹೆಗಲ ಮೇಲೆ ಇಲ್ಲವೆ ತಲೆಯ ಮೇಲೆ ವಸ್ತುಗಳನ್ನು ಹೊತ್ತು ಮಾರುವವನನ್ನು ಸೂಚಿಸಿ ಇಲ್ಲಿ ಗಾತ್ರ ದೇಹವೆಂದು ಅರ್ಥೈಸಿದ್ದಾರೆ.[೧೫೮] ಹೀಗೆ ವಿವಿಧ ವಿದ್ವಾಂಸರಿಂದ ಅರ್ಥೈಸಲ್ಪಟ್ಟಿರುವ ಗವರೆ ಗಾತ್ರಿಗರನ್ನು ಶಾಸನಗಳಲ್ಲಿ ಗವರೆಸೆಟ್ಟಿ,[೧೫೯] ದವರೆಗಂಡ,[೧೬೦] ಸ್ಥಳದ ಗವರೇ,[೧೬೧] ಸ್ಥಳದ ಗವರೆ ಗಂಡರು,[೧೬೨] ಗವರೆಗಳು,[೧೬೩] ಎಂಬೆಲ್ಲ ಪದಗಳಿಂದ ಗುರುತಿಸಿರುವುದನ್ನು ಕಾಣುತ್ತೇವೆ.

ಹರಿಹರ, ಹೊಳಲ್ಕೆರೆ, ಜಗಳೂರು, ಹೊಸದುರ್ಗ, ಚಿತ್ರದುರ್ಗ ಪ್ರದೇಶಗಳಲ್ಲಿ ವೀಳ್ಯದ ಎಲೆ, ತೋಟಗಳ ಉಲ್ಲೇಖ ಕುರಿತ ಅನೇಕ ಶಾಸನಗಳಿದ್ದು ಈ ಪ್ರದೇಶಗಳಲ್ಲಿ ಗವರೆ ಗಾತ್ರಿಗ ವರ್ತಕರು ಅತೀ ಹೆಚ್ಚಿನ ಸಂಖ್ಯೆಯಲ್ಲಿ ತಮ್ಮ ವೃತ್ತಿಯನ್ನು ಅನುಸರಿಸುತ್ತಿದ್ದರು. ಹಾಗೆಯೇ ಸಾಮಾಜಿಕ ಆಚರಣೆಗಳಲ್ಲಿ ಎಲೆಯು ತುಂಬಾ ಮಹತ್ವವನ್ನು ಪಡೆದುಕೊಂಡಿರುವ ವಸ್ತು ಆಗಿದ್ದರಿಂದ ಇದರ ವ್ಯಾಪಾರವು ಬಿರುಸಿನಿಂದ ನಡೆಯುತ್ತಿತ್ತು.

ಹಾಗೆಯೇ ಈ ವರ್ತಕ ಸಮುದಾಯವನ್ನು ಕುರಿತು ಮೀರಾ ಅಬ್ರಹಾಂ ಅವರು ಇವರು ವೀಳ್ಯೆದೆಲೆ ವ್ಯಾಪಾರಿಗಳಾಗಿದ್ದರು, ಇವರು ಪ್ರಭಾವಶಾಲಿ ವ್ಯಾಪಾರಿಗಳಾಗಿರಲಿಲ್ಲ, ಇವರು ದಾರಿ/ ಮಾರ್ಗದ ಬದಿಯಲ್ಲಿ ಸತತ ಬೇಡಿಕೆಯಿರುತ್ತಿದ್ದ ವಸ್ತುಗಳನ್ನು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಮಾರುತ್ತಿದ್ದರು ಎಂದಿದ್ದಾರೆ. ಇವರ ವ್ಯಾಪಾರದ ಬೆಳವಣಿಗೆಗೆ ಪ್ರಮುಖ ಕಾರಣವೆಂದರೆ ಮಧ್ಯಯುಗೀನ ಕಾಲದಲ್ಲಿ ಬೆಳೆದ ಅಡಿಕೆ ಮತ್ತು ವೀಳ್ಯೆದೆಲೆ ಬೆಳೆಗಳು. ಅಂದಿನ ಹೆಚ್ಚಿನ ಶಾಸನಗಳು ಅವರ ಸಂಘದ/ ಶ್ರೇಣಿಯ ಬಗ್ಗೆ ಹೆಚ್ಚು ಬೆಳಕು ಚೆಲ್ಲುತ್ತವೆ. ಏಕೆಂದರೆ ಇವರು ಸ್ಥಳೀಯ ಆರ್ಥಿಕತೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದರು.

### * ಮುಮ್ಮರಿದಂಡ

ವಿನಿಮಯ ವರ್ತಕರ ಸಾಲಿನಲ್ಲಿ ಮುಮ್ಮರಿದಂಡ ವ್ಯಾಪಾರಸ್ಥರು ಮುಖ್ಯ ಭಾಗವಾಗಿದ್ದಾರೆ. ಮುಮ್ಮರಿ ಎಂದರೆ ಕಾಯಿಸಿದ ಮರಳು ಎಂಬ ಅರ್ಥವನ್ನು ಕೇಶಿರಾಜನ ಶಬ್ದಮಣಿದರ್ಪಣದಿಂದ ತಿಳಿದುಬರುತ್ತದೆ ಎಂಬುದಾಗಿ ಚಿದಾನಂದಮೂರ್ತಿಯವರು ಉಲ್ಲೇಖಿಸಿದ್ದಾರೆ.[೧೬೪] ಮುಮ್ಮರಿದಂಡ ವ್ಯಾಪಾರಸ್ಥರು ಪ್ರಾಯಶಃ ಒಂದು ಸೈನ್ಯದ ರೀತಿಯಲ್ಲಿ ಇದ್ದಿರಬಹುದೆಂದು ತೋರುತ್ತದೆ.

ಬಿ.ಆರ್.ಹಿರೇಮಠ[೧೬೫] ಪ್ರಕಾರ ಮುಮ್ಮರಿ ದಂಡವೆಂದರೆ ಮೂರು ಮರಿಗೆಯದಂಡ (ಕೋಲು) ಎಂದು ಅದಕ್ಕಾಗಿ ಅವರು ಅಯ್ಯಾವೊಳೆ ಐನೂರ್ವರು "ಭಲ್ಲುಂಕಿದಂಡಹಸ್ತಾರ್" ಆಗಿದ್ದಾರೆಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹೀಗಾಗಿ ಮುಮ್ಮರಿದಂಡ ಸೈನ್ಯವಲ್ಲ; ಅದೊಂದು ವರ್ತಕ ಪ್ರಕಾರವಾಗಿದೆ. ಅದಕ್ಕಾಗಿ ಅವರು ಕಂದಗಲ್ಲ ೧೬೪ನೇ ಶಾಸನದಲ್ಲಿ ಕಂಡುಬರುವ "ಮುಮ್ಮರಿದಂಡಗಳು ಅಡಿಕೆಯರಿಸಿನ ಮೆಣಸು ಮೊದಲಾಗಿ ಸಕಳ ಧಾನ್ಯಕಂ ಕೊರಿಡಲ್ಲಿಯಂ ಕೊಟ್ಟಲ್ಲಿಯಂ", ಎಂದು ಹಾಗೂ ಕುರುಗೋಡು[೧೬೬] ೨೯೭ನೇ ಶಾಸನದಲ್ಲಿ ಕಂಡುಬರುವ "ಮುಮ್ಮರಿ ದಣ್ಣಗಳು ಭಣ್ಣವಂತೂಗಿಸಿಕೊಂಡಲ್ಲಿ" ಎಂಬ ಶಾಸನೋಕ್ತ ದಾಖಲೆಗಳ ವಿವರಗಳನ್ನು ಉಲ್ಲೇಖಿಸುತ್ತಾರೆ. ಇದರಿಂದ ಮುಮ್ಮರಿದಂಡಗಳು ಸರಕು ಹೇರಿಕೊಂಡು ಸಕರಂರೆ ಸಂತೆ ಪೇಟೆಗಳಿಗೆ ಹೋಗಿ ಮಾರಾಟ ಮಾಡುವ ವರ್ತಕರೆಂದು ಹೇಳಬಹುದು. ಕೆಲವು ಸಲ ಅಲ್ಲಿಯೇ ಸರಕು ಖರೀದಿಸಿ ಬೇರೆ ಸ್ಥಳಗಳಲ್ಲಿ ಮಾರುತ್ತಿದ್ದರು. ಇವರು ಅಡಿಕೆ, ಅರಿಸಿನ ಮೆಣಸು ಇವೇ ಮೊದಲಾದ ವಸ್ತುಗಳ ವ್ಯಾಪಾರ ಅಂದರೆ ಸಾಂಬಾರ ಪದಾರ್ಥಗಳ ವ್ಯಾಪಾರಸ್ಥರಿರಬೇಕೆಂದು ತೋರುತ್ತದೆ. ಇದರಿಂದ ಮುಮ್ಮರಿದಂಡರು ಸಂಚರಿಸುವ ವ್ಯಾಪಾರಸ್ಥರೆಂದು ಹೇಳಬಹುದು. "ಸಮಯಮುಮ್ಮರಿ ದಂಡಂ" ಎಂದು ಶಾಸನಗಳಲ್ಲಿ ಬಣ್ಣಿಸಲಾಗಿದೆ.[೧೬೭] ಏಕೆಂದರೆ ಇವರು ಸಮಯ ಪ್ರಜ್ಞಾವಂತರಾಗಿದ್ದರೆಂದು ತಿಳಿದುಬರುತ್ತದೆ. ಇವರೂ ಕೂಡಾ ತಮ್ಮನ್ನು ಅಯ್ಯಾವೊಳೆ ಐನೂರ್ವರ ವಂಶದವರೆಂದೂ ಹೇಳಿಕೊಂಡಿದ್ದಾರೆ.[೧೬೮] ಕುರುಗೋಡ ಶಾಸನದಲ್ಲಿ ಈ ವಿವರಗಳನ್ನು ನೋಡಬಹುದು. ಗ್ರಾಮ ಹಾಗೂ ಪಟ್ಟಣಗಳಲ್ಲಿ ವಾಸಿಸುತ್ತಿದ್ದ ಇವರು ಆಯಾ ಗ್ರಾಮ, ಪಟ್ಟಣಗಳಿಗೆ 'ಮೂಲಸ್ತಂಭ'ರೆನಿಸಿದ್ದರು. ಇವರಲ್ಲಿ ಕೆಲವರು 'ಪಟ್ಟಣ ಸ್ವಾಮಿ'ಗಳಾಗಿಯೂ ಕಾರ್ಯ ನಿರ್ವಹಿಸಿ ಪ್ರಖ್ಯಾತರಾಗಿದ್ದಾರೆ.[೧೬೯]

ಚಿತ್ರದುರ್ಗ ಪ್ರದೇಶದ ನೀರಗುಂದ ಶಾಸನದಲ್ಲಿ ನೆಲ್ಗೆ ಸೆಟ್ಟಿ ಹಾಗೂ ನಕರ ಮುಂಮುರಿದಂಡಂಗಳು ಸಾಕ್ಷಿಯಾಗಿ ಅಗ್ರಹಾರ ದಾನವಾಗಿ ಕೊಟ್ಟ ಶಾಸನದ ಪಾಠ ಈ ಕೆಳಗಿನಂತಿದೆ:

ವೀರಸೋಮೇಶ್ವರ ದೇವರ ನಿರುಗುಂದದ ಮೂಲ ಸ್ವಾಮಿಗಂಗೇಸ್ವರ ದೇವರಿಗೆವು ಸಿದ್ದನಾಥದೇವರಿಗೆ ಆಗ್ರಾಹಾರವ ಮಾಡುವಲ್ಲಿ ದಾರಾಪೂರ್ವ್ಯಕಂಮಾಡಿಬಿಟ್ಟ ವ್ರಿತ್ತಿ ಒಂದು ೧೧ ತೆಂಕಣ ಅವ್ಯಾವಳ ಎನಿಸಿದ ನಿರುಗುಂದದನಲ್ಲೆಸೆಟ್ಟಿ ಮುಖ್ಯವಾದ ಸಮಸ್ತ ನಖರ ಮುಂಮುರಿದಂಡಂಗಳು ಶ್ರೀ ಸಿದ್ದನಾಥದೇವರಿಗೆ ಉಗಂಗೇಶ್ವರ ದೇವರಿಗೆ ಉಕೊಟ್ಟ ಸಂಥೆಯ ಆಯರಾಸಿಗೆ ಬಬಳ ಭತ್ತ ಹೇ...[೧೭೦] ಎಂದಿದೆ. ಹಾಗೆಯೇ ಆನೆಕೊಂಡ ಗ್ರಾಮದಲ್ಲಿ ಇರುವ ಶಾಸನದ ಪಾಠದಲ್ಲಿ ಮುಮ್ಮರಿ ದಂಡಂನ ಮುಖ್ಯಸ್ಥನಾದ ದೇವಿಶೆಟ್ಟಿಯ ವರ್ಣನೆಯು ಈ ಕೆಳಗಿನಂತಿದೆ:

ಸ್ವಸ್ತಿಸಮಸ್ತ ಪ್ರಶಸ್ತಿ ಸಹಿತಂ ಸಕಲಗುಣಸಂ(ಪಂ) ನರಪ್ಪಕಂನಡನಾಲ್ಕು ಸಾಸಿರದ ಮುಂಮುಱಿ ದಂಡಂಗಳಿಗೆ ಮುಖ್ಯರಪ್ಪ ಶೈವರ ದೇವಿಸೆಟ್ಟಿಯರು॥ ಧಮ್ಮದ ಮೇರುಧರ್ಮ್ಮದ ತವಮ್ಮ ೯ನೇ ಧರ್ಮ್ಮದ ಜನ್ಮ ಭೂಮಿಸುಧರ್ಮ್ಮಗುಣ ಪ್ರಭಾವ ಮಹಿ ಮುಂಬುದಿ ನಿರ್ಮ್ಮಳಧರ್ಮ್ಮದಾಗರಂಧರ್ಮ್ಮದಬಿತ್ತು ಧರ್ಮ್ಮನಿಧಿ ಧರ್ಮ್ಮಪರಂಶಿವಧರ್ಮ್ಮದೀಪಕಂ ಧರ್ಮ್ಮಸ ಖಾಯನೆನ್ದು ಧರೆ ಕೀರ್ತ್ತಿ ಸುಗುಂಶೈವರ ದೇವಿಸೆಟ್ಟಿಯಂ(ನು)॥[೧೭೧]

ಕ್ರಿ.ಶ.೧೧೭೬ರ ಕುರುಗೋಡು ಶಾಸನದಲ್ಲಿ ಇವರನ್ನು ಧೈರ್ಯವಂತರಲ್ಲಿ ಧೈರ್ಯವಂತರು, ಶರಣಾಗಿ ಬಂದವರಿಗೆ ಆಶ್ರಯಧಾತರು, ಕೆಟ್ಟವರಿಗೆ ಕೆಟ್ಟವರು, ಒಳ್ಳೆಯವರಿಗೆ ಒಳ್ಳೆಯವರು, ಹಾಗೂ ಬಲಾಢ್ಯ ಶಕ್ತಿಗಳನ್ನು ಗೆಲ್ಲುವವರು ಎಂದು ಪ್ರಶಂಸಿಸಲಾಗಿದೆ.[೧೭೨] ಅಯ್ಯಾವೊಳೆ ಅಯ್ಯೂರ್ವರಂತೆ

ಇವರೂ ಸಹ ತಮ್ಮ ಆದಾಯದ ಸ್ವಲ್ಪಭಾಗವನ್ನು ಧಾರ್ಮಿಕ ಸಂಸ್ಥೆಗಳಿಗೆ ದಾನ ನೀಡಿದ್ದರು. ಉದಾ: ಆನೆಕೊಂಡ ಶಾಸನವು ಮುಮ್ಮರಿದಂಡ ೪೦೦೦ದ ಮುಖ್ಯಸ್ಥ ದೇವಿಶೆಟ್ಟಿಯು ಶ್ರೀ ಧರ್ಮೇಶ್ವರ ದೇವರಿಗೆ ಗದ್ದೆಯನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.[೧೭೩] ಅದೇ ರೀತಿಯಾಗಿ ಲೊಕ್ಕಿಕೆರೆ ಶಾಸನವು ಲೊಕ್ಕಿಕೆರೆಯ ಅಂಗಡಿಯ ಮುಮ್ಮರಿ ದಂಡಗಳು ಮೂಲಸ್ಥಾನ ಕಲಿದೇವರ ನಂದಾದೀವಿಗೆಗೆ ಹಣವನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.[೧೭೪] ಇದಲ್ಲದೇ ಇವರನ್ನು ಹಲವಾರು ದಾನ ಮಾಡಿದ ಸಂದರ್ಭದಲ್ಲಿ ಸಾಕ್ಷಿಗಳಾಗಿ ಉಲ್ಲೇಖಿಸಲಾಗಿದೆ. ಇವರು ಶೈವ ಆರಾಧಕರು ಆಗಿದ್ದು ಸರ್ವಧರ್ಮಗಳ ಪರಿಪಾಲಕರಾಗಿದ್ದಾರೆ. ಹಾಗೆಯೇ ಗವರೇಶ್ವರ ಇವರ ಆರಾಧ್ಯ ಮೂಲ ದೈವವಾಗಿತ್ತು.

*** ನಾನಾದೇಶಿ, ಉಭಯ ನಾನಾದೇಶಿ**

ದೇಸಿ ಎಂದರೆ ಒಳನಾಡಿನ ವ್ಯಾಪಾರಿಗಳು ಇಲ್ಲವೇ ಸ್ವಸ್ಥಳ ವ್ಯಾಪಾರಿಗಳು. ನಾನಾದೇಶಿ ಮತ್ತು ಉಭಯ ನಾನಾದೇಶಿ ಎಂದರೆ ವಿವಿಧ ನಾಡು ಮತ್ತು ದೇಶಗಳೊಂದಿಗೆ ವ್ಯಾಪಾರ ಕೈಗೊಳ್ಳುವ ವರ್ತಕರೆಂದು ಹೇಳಬಹುದು. ಈ ವ್ಯಾಪಾರಿಗಳು ಪಾದಮಾರ್ಗ ಇಲ್ಲವೇ ಜಲಮಾರ್ಗಗಳ ಮೂಲಕ ದೇಶ ವಿದೇಶಗಳಲ್ಲಿ ಸಂಚರಿಸಿ ವ್ಯಾಪಾರದಲ್ಲಿ ತೊಡಗುತ್ತಿದ್ದರೆಂದು ತಿಳಿದುಬರುತ್ತದೆ.[೧೭೫] ಪಿ.ಬಿ.ದೇಸಾಯಿ ಪ್ರಕಾರ "ಉಭಯನಾನಾದೇಶಿಗಳು ವರ್ತಕ ಶ್ರೇಣಿಯ ಎರಡನೆ ವರ್ಗದವರಾಗಿದ್ದು, ದೇಶದ ಹೊರಗೂ ಮತ್ತು ಒಳಗೂ ವ್ಯಾಪಾರ ಚಟುವಟಿಕೆಗಳಲ್ಲಿ ನಿರತರಾಗಿದ್ದರು. ಇವರು ಬಲಾಢ್ಯ ಸ್ವಾಯತ್ತ ಸಂಸ್ಥೆಯಾಗಿದ್ದು, ಕೇಂದ್ರ ಸರ್ಕಾರ ಹಾಗೂ ಸ್ಥಳೀಯ ಸಭೆಗಳಿಂದ ಮಾನ್ಯತೆ ಪಡೆದಿದ್ದರು.[೧೭೬] ಹೆಚ್ಚಿನ ಉಭಯನಾನಾದೇಶಿಗಳನ್ನು ವಡ್ಡವ್ಯವಹಾರಿ ಮತ್ತು ಮಹಾವಡ್ಡವ್ಯವಹಾರಿಯೆಂದು ಕರೆಯಲಾಗಿದೆ.

ಬಹುಮುಖ್ಯವಾಗಿ ಅಧ್ಯಯನ ಅವಧಿಯಲ್ಲಿ ಈ ನಾನಾದೇಶಿ ವರ್ತಕ ಸಂಘವು ಆರ್ಥಿಕ ವಲಯದಲ್ಲಿ ಬದಲಾವಣೆಯನ್ನು ರೂಪಿಸಿತು ಎಂದರೆ ತಪ್ಪಾಗಲಾರದು. ಭಾರತದೊಂದಿಗೆ ವ್ಯಾಪಾರವು ಐರೋಪ್ಯ ವರ್ತಕರಿಗೆ ಒಂದು ಮುಖ್ಯವಾದ, ಆದರೆ ಜಟಿಲವಾದ ಕಾರ್ಯವಾಗಿದ್ದಿತು. ಸಾಮಾನ್ಯವಾಗಿ ಈ ವ್ಯಾಪಾರಗಾರರು ಸ್ಥಾಪಿಸಿದ ಕಂಪನಿಗಳಿಗೆ ಅವರವರ ಸರಕಾರಗಳ ಬೆಂಬಲವಿದ್ದಿತು. ವ್ಯಾಪಾರದಲ್ಲಿ ಸ್ವಾರಸ್ಯಕರ ಪೈಪೋಟಿಯು ಈ ಬಿಡಿ ಕಂಪನಿಗಳ ನಡುವೆ, ಅವುಗಳ ಸರಕಾರಗಳ ನಡುವೆ ಇದ್ದಿತು. ಭಾರತಕ್ಕೆ ಬಂದ ಪೋರ್ಚುಗೀಸ್ ಸಾಹಸ ತಂಡಗಳಿಗೆ ಪೋರ್ಚುಗೀಸ್ ದೊರೆಯೇ ಸಾಧನ ಸಜ್ಜ ಒದಗಿಸಿದ್ದ, ಹಣಕಾಸು ನೀಡಿದ್ದ ಡಚ್ಚರು, ಬ್ರಿಟಿಶರು ಸ್ಥಾಪಿಸಿದ್ದ ಕಂಪನಿಗಳಿಗೆ ಅವುಗಳ ಸರಕಾರಗಳು ಸನ್ನದುಗಳನ್ನು ನೀಡಿದ್ದವು. ಉದಾಹರಣೆಗೆ ಹದಿನೇಳನೆಯ ಶತಮಾನದ ಆರಂಭಿಕ ಕಾಲದಲ್ಲಿ ಸ್ಥಾಪಿತವಾದ ಬ್ರಿಟಿಶ್ ಈಸ್ಟ್ ಇಂಡಿಯಾ ಕಂಪನಿಗೆ ಬ್ರಿಟಿಶ್ ಸರಕಾರವು ಕ್ರಮೇಣ ಹೆಚ್ಚು ಹೆಚ್ಚು ಹಕ್ಕುಗಳನ್ನು ನೀಡಿತು. ಬ್ರಿಟಿಶ್ ಸರಕಾರ ಅನುಮೋದಿಸಿದ ಅನೇಕ ಸನ್ನದುಗಳು ಬ್ರಿಟನ್ನಿನಲ್ಲಿ ಈ ಕಂಪನಿ ಸ್ಥಾನವನ್ನು ಭದ್ರಪಡಿಸುವುದರಲ್ಲಿ ಪ್ರಮುಖ ಘಟನೆಗಳಾಗಿದ್ದವು. ೧೬೫೭ರ ಕ್ರಾಮ್‌ವೆಲ್ ಸನ್ನದು, ಈಸ್ಟ್ ಇಂಡಿಯಾ ಕಂಪನಿಗೆ ಯುದ್ಧ ಘೋಷಿಸುವ ಹಾಗೂ ಶಾಂತಿ ಒಪ್ಪಂದ ಮಾಡಿಕೊಳ್ಳುವ ಹಕ್ಕು ನೀಡಿದ ೧೬೬೧ರ ಸನ್ನದು, ನಾಣ್ಯಗಳನ್ನು ಟಂಕಿಸುವ, ಕೋರ್ಟ್‌ಮಾರ್ಷಲ್ ನಡೆಸುವ, ತನ್ನ ಸ್ವಂತ ಸೈನ್ಯವನ್ನೂ ನೌಕಾದಳವನ್ನೂ ಇರಿಸಿಕೊಳ್ಳುವ ಹಕ್ಕನ್ನು ಕಂಪನಿಗೆ ನೀಡಿದ ೧೬೮೬ರ ಸನ್ನದು, ಇವುಗಳಲ್ಲಿ ಮುಖ್ಯವಾದವು. ೧೬೯೮ರಲ್ಲಿ ಖಾಸಗಿ ವರ್ತಕರ ವೃಂದವೊಂದು ಮತ್ತೊಂದು ಈಸ್ಟ್ ಇಂಡಿಯಾ ಕಂಪನಿಯನ್ನು ಸ್ಥಾಪಿಸಿತು. ಈ ಎರಡು ಕಂಪನಿಗಳು ೧೭೦೨ರಲ್ಲಿ ವಿಲೀನಗೊಂಡಾಗ

ಈ ಕ್ರಮಕ್ಕೆ ಪಾರ್ಲಿಮೆಂಟು ೧೭೦೮ರಲ್ಲಿ ಒಂದು ಶಾಸನದ ಮೂಲಕ ಅಧಿಕೃತ ಮನ್ನಣೆ ನೀಡಿತು. ಅಂದಿನಿಂದಾಚೆಗೆ ಭಾರತದಲ್ಲಿ ಈ ಕಂಪನಿಯ ಚಟುವಟಿಕೆಗಳು ಶೀಘ್ರಗತಿಯಲ್ಲಿ ಬೆಳೆದವು.[೧೭೭] ಈ ರೀತಿಯಾಗಿ ರಚನೆಗೊಂಡ ವರ್ತಕ ಸಮುದಾಯಗಳು ಉಭಯ ನಾನಾದೇಶಿ ಎಂದು ಭಾರತದಲ್ಲಿ ಗುರುತಿಸಿಕೊಂಡಿವೆ. ಅಷ್ಟೆ ಅಲ್ಲದೇ ಚಿತ್ರದುರ್ಗ ಪ್ರದೇಶದಲ್ಲಿ ಈ ವರ್ತಕ ಸಮುದಾಯ ಕುರಿತು ಶಾಸನಗಳಲ್ಲಿ ಸ್ವಲ್ಪ ಪ್ರಮಾಣದಲ್ಲಿ ಕಾಣಬರುತ್ತವೆ. ಉದಾ: ಕಾಟಿಹಳ್ಳಿ ಶಾಸನವು ಉಭಯ ನಾನಾದೇಶಿಗಳು ಹೆದ್ದಾರಿಯಲ್ಲಿ ಚಲಿಸುವ ಪ್ರವಾಸಿಗರು ಮತ್ತು ಸಾರ್ವಜನಿಕರಿಗೆ ಅರವಟ್ಟಿಗೆಯನ್ನು ಸ್ಥಾಪಿಸಿ ಅದರಲ್ಲಿ ಗಂಜಿಮಜ್ಜಿಗೆ ಮತ್ತು ಔಷಧಿಯನ್ನು ಒದಗಿಸುವುದಕ್ಕೆ ದಾನ ಮಾಡಿದ್ದನ್ನು ತಿಳಿಸುತ್ತದೆ.[೧೭೮] ಇಷ್ಟೇ ಅಲ್ಲದೇ ಕರ್ನಾಟಕದಲ್ಲಿ ಚಟಚಟಹಳ್ಳಿ ಶಾಸನವು ಪದುಮನಾಭನಾಯಕನನ್ನು ವಡ್ಡವ್ಯವಹಾರಿಯೆಂದು ಉಲ್ಲೇಖಿಸಲಾಗಿದೆ.[೧೭೯] ಕ್ರಿ.ಶ.೧೩೩೮ರ ತೆಂಕನಹಳ್ಳಿದೊಡ್ಡಿ ಶಾಸನವು ರಾಯಪ್ಪ ಶೆಟ್ಟಿಯನ್ನು ವಡ್ಡವ್ಯವಹಾರಿಯೆಂದು ಕರೆಯಲಾಗಿದೆ.[೧೮೦] ಕ್ರಿ.ಶ.೧೨೮೮ರ ನಿಟ್ಟೂರು ಶಾಸನವು ಮಲೆಯಾಳ 'ಉಭಯ ನಾನಾ ದೇಶಿಯ ಮುಖ್ಯಸ್ಥ ಗೋವಿಂದ ದೇವನನ್ನು ಮಹಾ ವಡ್ಡವ್ಯವಹಾರಿಯೆಂದು ಉಲ್ಲೇಖಿಸಿದೆ.[೧೮೧] ಇವರು ಎಣ್ಣೆ, ಅಡಕೆ, ವೀಳ್ಯದೆಲೆ, ಭತ್ತ, ತೆಂಗು, ಶೇಂಗಾ, ಸೀರೆ ಮತ್ತು ಬೆಲ್ಲ ಮುಂತಾದ ವಸ್ತುಗಳನ್ನು ಸಂತೆಗಳಲ್ಲಿ[೧೮೨] ಕೊಂಡು ವ್ಯಾಪಾರ ಮಾಡುತ್ತಿದ್ದರು.

ಕುಂದವಾಡ ಗ್ರಾಮದಲ್ಲಿ ಕಂಡುಬರುವ ಶಾಸನದಲ್ಲಿ ಅಯ್ಯವಳೆಯಯಿನೂರ್ಬ್ಬಸ್ವಾಮಿಗಳು ಮುಖ್ಯವಾದ ನೊಣಂಬವಾಡಿಮೂವತ್ತಿಂತ್ಸಾಯಿರದ ಶಿರೋಮಣಿ ಮಹಾರಾಜಧಾನಿಯಚ್ಚಂಗಿಯ ಸಮಸ್ತ ವಳಿನಖರ ಮುಂಮುರಿದಂಡ ಉಭಯ ನಾನಾ ದೇಸಿ ನಾಲ್ಕುನಾಡುಂ ಆಪಂಚಮಠದತ ಪೋಧನ ಮುಖ್ಯವಾದ ಎಕ್ಕೋಟಗಳುಂ[೧೮೩] ಎಂದು ಇದೆ.

ಮಗ್ಗೆ, ತಿರುಮಕೂಡಲು, ಸೂತ್ತೂರು, ಬಳ್ಳಿಗಾವೆ, ಐವೂರ, ಅಂಕಲಗಿ, ರಾಗಿಮಸಲವಾಡ, ನೀಲಗುಂದ, ಗಂಗಾಪುರಂ, ಹುಯಿಲಗೋಳ, ನಿಡೋಣಿ, ಬಾಪುರಂ, ಗೊಲಹಳ್ಳಿ, ಕುರುಗೋಡ, ಶ್ರವಣಬೆಳಗೊಳ, ಸಿರಸಂಗಿ, ಹಿರೇಬೇವಿನೂರ, ಕುರವತ್ತಿ, ದೇಗಾವಿ, ಪೆದ್ದಕೊತ್ತಳಿ, ಬಾಗಳಿ, ನಾಯಕನಹಳ್ಳಿ, ಮಳೂರ, ಮೋದಳ್ಳಿ, ಕಾಮಗೆರೆ, ಸೇಡಂ, ಎಕ್ಸಂಬಾ, ಅಡರೆ, ಮಾಡಗಿಹಾಳ, ವಿಜಯಪುರ, ಲಕ್ಕುಂಡಿ, ಹೊದಲ, ಕವಡಗೆರೆ, ಧಾರವಾಡ, ಕುಂದವಾಡ, ನೇಸರಗಿ, ವಡ್ಡರಹಳ್ಳಿ, ಮುನವಳ್ಳಿ, ಸಂಪಗೆ, ಸಾತೇನಹಳ್ಳಿ, ಮಮದಾಪುರ, ನಿಡುಗಲ್ಲ, ದೊಡ್ಡಬಳ್ಳಾಪುರ, ಗಡಿಹಳ್ಳಿ, ಹರಿಹರ, ನೆರದಿರೆ, ಹಾವೇರಿ, ಹರೂರ, ಅಳವಡಿ, ಹಿರಿಯಂಗಡಿ, ಸಿಂಗಲ್ಲೂರ, ಕೊತ್ತನೂರು, ಮಾಸ್ತೇನಹಳ್ಳಿ, ಇಡುವಣೆ, ಹೊಸಪೇಟೆ, ಗೊಕ್ರಿಪಲ್ಲಿ, ಬಾಗೂರ[೧೮೪] ಇವು ನಾನಾದೇಶಿ ಹಾಗೂ ಉಭಯನಾನಾದೇಶಿಯರನ್ನು ಬಲವಾಗಿ ಆಕರ್ಷಿಸಿದ ಗ್ರಾಮಪಟ್ಟಣಗಳು. ಅವರು ಸಂಚರಿಸಿದ ಪ್ರಾದೇಶಿಕ ಸೀಮೆಯನ್ನೂ ಇದರಿಂದ ಪತ್ತೆ ಹಚ್ಚಲು ಸಾಧ್ಯವಾಗುತ್ತದೆ. ಒಟ್ಟಾರೆಯಾಗಿ ನಾನಾ ದೇಶಿ ಮತ್ತು ಉಭಯ ನಾನಾ ದೇಶಿಯರು ವ್ಯಾಪಾರ ನಿಷ್ಠೆ ಹೊಂದಿದ್ದರು. ಅವರ ಸಂಚಾರ ಸಾಹಸಗಳು ಹಾಗೂ ನಾಡಿನಲ್ಲಿ ನೀಡಿರುವ ಅನೇಕ ದಾನ-ಧಾರ್ಮಿಕ ಕಾರ್ಯಗಳಲ್ಲಿ ಸಾಕ್ಷಿಯಾದವು. ಇವರು ನಾಡಿನ ವ್ಯಾಪಾರೋದ್ಯಮವನ್ನು ಶ್ರೀಮಂತಗೊಳಿಸಿದವರು. ಆರ್ಥಿಕಾಭಿವೃದ್ಧಿ, ಜೀವನಮಟ್ಟಗಳನ್ನು ಸುಧಾರಿಸುವಲ್ಲಿ ಮತ್ತು ಅಭಿವೃದ್ಧಿಗೊಳಿಸುವುದರಲ್ಲಿ ಹಲವು ಬಗೆಯಲ್ಲಿ ದುಡಿದ ಕೀರ್ತಿ ಇವರಿಗೆ ಸಲ್ಲುತ್ತದೆ.

ಒಟ್ಟಾರೆಯಾಗಿ ಚಿತ್ರದುರ್ಗ ನಾಯಕರ ಕಾಲದಲ್ಲಿ ಶಾಸನೋಕ್ತ ಈ ವರ್ತಕ ಸಮುದಾಯಗಳನ್ನು ಗುರುತಿಸಿದ್ದು, ಇವು ಅಷ್ಟೆ ಅಲ್ಲದೇ ಉತ್ಪಾದನೆ ಹಾಗೂ ವಿನಿಮಯ ವೃತ್ತಿಯನ್ನು ಅನುಸರಿಸಿ ಅನೇಕ ಸಮುದಾಯಗಳು ಇದ್ದವು. ಅವುಗಳೆಂದರೆ ೧. ಬಣಜಿಗರು, ೨. ಒಕ್ಕಲಿಗರು, ೩. ಜೋತಿಗಣ, ೪. ರಂಗಾರು, ೫. ಲಾಡರು, ೬. ಗುಜರಾತಿಗಳು, ೭. ಕೋಮಟಿಗರು, ೮. ಜೈನರು, ೯. ಕುರುಬರು, ೧೦. ಕುಂಬಾರರು, ೧೧. ಅಗಸರು, ೧೨. ಬೆಸ್ತರು, ೧೩. ಪದ್ಮಸಾಲಿಯರು, ೧೪. ನಾಯಿಂದರು, ೧೫. ಉಪ್ಪಾರರು, ೧೬. ಗೊಲ್ಲರು, ೧೭. ಚಿತ್ರಗಾರು, ೧೮. ಹೊಲೆಯರು, ೧೯. ಪಾಂಚಾಲರು, ೨೦. ಬೇರಿಶೆಟ್ಟಿ, ೨೧, ದೇವಾಂಗ, ೨೨. ಹೆಗ್ಗಾಣಿಗರು, ೨೩. ಫಲಿವನು, ೨೪. ಪಲವನ್ಲು, ೨೫. ಬೇಡರು, ೨೬. ಬೇಡರು.[೧೮೫] ಆದರೆ ಇವರು ವರ್ತಕ ಸಂಘವನ್ನು ಕಟ್ಟಿಕೊಂಡ ಉಲ್ಲೇಖಗಳು ಸಿಗುವುದು ಅತೀ ವಿರಳ. ಹಾಗಾಗಿ ಇವರು ಸ್ಥಳೀಯವಾಗಿ ರಚನೆಗೊಂಡ ಸಂತೆ, ಪಟ್ಟಣ, ನಗರ ಪ್ರದೇಶಗಳಿಗೆ ಹೋಗಿ ಭತ್ತ, ಜೋಳ, ರಾಗಿ, ಬಾರ್ಲಿ, ಬರಗು, ಸಾಸಿವೆ, ಗೋಧಿ, ಕಡಲೆ, ಎಳ್ಳು, ಕುಸುಬೆ, ಹೆಸರು, ಉದ್ದು, ತೊಗರಿ, ಹರುವಳ್ಳಿ, ಅಕ್ಕಿ, ಸಕ್ಕರೆ, ಎಣ್ಣೆ, ತುಪ್ಪ, ಉಪ್ಪು, ಕಬ್ಬು[೧೮೬] ಮೊದಲಾದ ಕೃಷಿ ಉತ್ಪನ್ನಗಳು, ಜೊತೆಗೆ ಗೃಹ ಉಪಯೋಗಿ ವಸ್ತುಗಳನ್ನು ಮಾರಾಟ ಮಾಡುವುದು ಕಂಡುಬರುತ್ತದೆ.

ಇಷ್ಟೇ ಅಲ್ಲದೆ ಈ ವರ್ತಕ ಸಂಘಗಳು ಮಧ್ಯಯುಗೀನ ಕಾಲದಲ್ಲಿ ಆಳುವ ವರ್ಗದವರು ದೇವಾಲಯಗಳಿಗೆ ಮತ್ತು ಬ್ರಾಹ್ಮಣರಿಗೆ ದಾನ ಮಾಡುವ ಸಂದರ್ಭದಲ್ಲಿ ಸಾಕ್ಷಿಗಳಾಗಿ ಹಾಗೂ ದಾನ ಮಾಡುವ ವಸ್ತುಗಳನ್ನು ಕಾಪಾಡುವ ಜವಾಬ್ದಾರಿಯನ್ನು ಹೊಂದಿದ್ದವು. ಆದರೆ ವರ್ತಕ ಸಂಘಗಳು ಈ ಸಮಯದಲ್ಲಿ ಎಲ್ಲಿಯೂ ಧಾರ್ಮಿಕ ಸಂಘ ಸಂಸ್ಥೆಗಳಿಗೆ ದಾನ ಮಾಡಿದ ಉಲ್ಲೇಖ ಕಂಡುಬರುವುದಿಲ್ಲ. ಆದರೆ ೧೨ನೇ ಶತಮಾನದಲ್ಲಿ ರಚನೆಗೊಂಡ ಮಠಮಾನ್ಯಗಳಿಗೆ ಹೆಚ್ಚಿನ ಪ್ರೋತ್ಸಾಹ ದೊರೆತದ್ದೇ ಈ ಸಮುದಾಯಗಳಿಂದ. ನಂತರದ ಕಾಲದಲ್ಲಿ ವರ್ತಕ ಸಂಘಗಳು ಬೇರೆಯವರು ನೀಡಿದ ದಾನವನ್ನು ಕಾಪಾಡುವುದರ ಜೊತೆಗೆ ತಮ್ಮ ವ್ಯಾಪಾರ ವಹಿವಾಟಿನಿಂದ ಬಂದ ಲಾಭದ ಸ್ವಲ್ಪ ಭಾಗವನ್ನು ಧಾರ್ಮಿಕ ಸಂಘ ಸಂಸ್ಥೆಗಳಿಗೆ ದಾನ ಮಾಡುವುದು ಮತ್ತು ಅವುಗಳ ಸಂರಕ್ಷಣೆಯ ಕಾರ್ಯವನ್ನು ಸಹ ಆಳುವ ವರ್ಗದವರ ರೀತಿಯಲ್ಲಿಯೇ ದೇವಾಲಯಗಳ ನಿರ್ಮಾಣ, ವಿಗ್ರಹಗಳ ಪ್ರತಿಷ್ಠಾಪನೆ, ಪೂಜಾ ಕೈಂಕರ್ಯಗಳಿಗೆ ಭೂಮಿ, ಹಾಗೂ ಕೆರೆಗಳನ್ನು ಕಟ್ಟಿಸುವುದು ಅವುಗಳಿಗೆ ತೂಬುಗಳನ್ನು ಅಳವಡಿಸುವುದು, ಕೆರೆಗಳ ನಿರ್ವಹಣೆಗಾಗಿ, ಭೂಮಿ, ಹಣ ಮತ್ತು ಎತ್ತಿನ ಬಂಡಿಗಳನ್ನು ದಾನ ಮಾಡುವುದರ ಮೂಲಕ ಸ್ಥಳೀಯ ಮಟ್ಟದಲ್ಲಿ ಬಹಳ ಪ್ರಬಲವಾದ ಸಾಮಾಜಿಕ ವರ್ಗವಾಗಿ ಹೊರಹೊಮ್ಮಿದರು. ಇಂತಹ ಬೆಳವಣಿಗೆಯಿಂದಾಗಿ ಇವರು ರಾಜ್ಯದ/ರಾಜರ ಗಮನ ಸೆಳೆದು ಆಳುವ ವರ್ಗಕ್ಕೆ ಕ್ರಮೇಣವಾಗಿ ಆಪ್ತರಾಗಿ, ಕೆಲವರು ರಾಜಶ್ರೇಷ್ಠಗಳೆಂಬ ಬಿರುದು ಪಡೆದರು. ಕೆಲವು ಸಮಯದಲ್ಲಿ ಇವರು ಸೈನ್ಯಕ್ಕಾಗಿ, ಆಡಳಿತಗಾರರಾಗಿ ಕಾರ್ಯನಿರ್ವಹಿಸಿದ್ದುದು ಪ್ರಮುಖ ಬೆಳವಣಿಗೆಯಾಗಿದ್ದು, ಮಧ್ಯಯುಗೀನ ಕಾಲದ ಗಮನಾರ್ಹ ಅಂಶವಾಗಿದೆ.

### ೬.೩. ವ್ಯಾಪಾರ ಮತ್ತು ವಾಣಿಜ್ಯ

ಆರ್ಥಿಕ ಚಟುವಟಿಕೆಗಳ ಒಂದು ಭಾಗವಾಗಿ ವ್ಯಾಪಾರ-ವಾಣಿಜ್ಯ ಪರಿಗಣಿಸಲ್ಪಡುತ್ತದೆ. ಕೃಷಿ, ಕೈಗಾರಿಕಾ ವಲಯ ಹಾಗೂ ಇವುಗಳ ಉಪ ಉತ್ಪನ್ನ ಘಟಕಗಳು ಉತ್ಪಾದಿಸುವ ವಸ್ತುಗಳ

ಮಾರಾಟಮಾಡುವ ಪ್ರಕ್ರಿಯೆ ಸಾಮಾನ್ಯವಾಗಿ ವ್ಯಾಪಾರ-ವಾಣಿಜ್ಯ ಚಟುವಟಿಕೆಗಳೆಂದೆನಿಸಿಕೊಂಡಿವೆ. ಇಂಥ ಕಾರ್ಯಗಳು ದೂರದೂರದ ಪ್ರದೇಶಗಳಿಗೆ ಸಂಬಂಧ ಕಲ್ಪಿಸುವ ಪರಿಣಾಮಕಾರಿ ಮಾರ್ಗಗಳಾಗಿ ನಿರೂಪಿತವಾಗಿದೆ. ನಾಗರಿಕ ವ್ಯವಸ್ಥೆಗಳು ಹುಟ್ಟಿಕೊಂಡಾಗಿನಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಇಂಥ ಚಟುವಟಿಕೆಗಳು ಮುಂದುವರೆದುಕೊಂಡು ಬಂದಿರುವುದು ಚರಿತ್ರೆಯಾಗಿದೆ.[೧೮೭] ಭಾರತದ ಚರಿತ್ರೆಯಲ್ಲಿ ಹರಪ್ಪ ಸಂಸ್ಕೃತಿಯ ನೆಲೆಗಳು ಬೇರೆ ಬೇರೆ ಪ್ರದೇಶಗಳ ಜೊತೆಗೆ ವ್ಯಾಪಾರ-ವಾಣಿಜ್ಯ ಸಂಬಂಧಗಳನ್ನು ಹೊಂದಿರುವ ಮೊದಲ ವಿವರಗಳಾಗಿವೆ. ಅಲ್ಲದೆ ಆ ಕಾಲದಲ್ಲಿ ಆಂತರಿಕ ಮತ್ತು ಬಾಹ್ಯ ವ್ಯಾಪಾರ ಚಟುವಟಿಕೆಗಳು ನಡೆಯುತ್ತಿದ್ದವು. ಕರ್ನಾಟಕದ ಹಟ್ಟಿ ಹಾಗೂ ಕೋಲಾರದ ನೆಲೆಗಳಿಂದ ಹರಪ್ಪ ಸಂಸ್ಕೃತಿಯ ನೆಲೆಗಳಿಗೆ ಚಿನ್ನವು ರಫ್ತಾಗುತ್ತಿದ್ದ ವಿಚಾರ ಬಹುಮುಖ್ಯವಾದುದು. ಬಾದಾಮಿ, ಚಂದ್ರವಳ್ಳಿ, ಬ್ರಹ್ಮಗಿರಿ, ಪಟ್ಟದಕಲ್ಲು, ಅಕ್ಕಿ ಆಲ ಊರು, ಹೊನ್ನಾವರ, ಭಟ್ಕಳ, ಹಾಗೂ ಚಿಕ್ಕಸಿಂದೋಗಿ ಮುಂತಾದ ಸ್ಥಳಗಳು ರೋಮ್ ಹಾಗೂ ಗ್ರೀಕ್ ದೇಶಗಳ ಜೊತೆಗೆ ಬಾಹ್ಯ ವ್ಯಾಪಾರ-ವಾಣಿಜ್ಯ ಚಟುವಟಿಕೆಗಳನ್ನು ಹೊಂದಿರುವ ಮಾಹಿತಿಗಳಿವೆ. ಇದಕ್ಕೆ ಸಾಕ್ಷಿಯಾಗಿ ಈ ನೆಲೆಗಳಲ್ಲಿ ಆ ಕಾಲದ ನಾಣ್ಯಗಳು ಸಹ ದೊರತಿವೆ. ಇಂಥ ಚಟುವಟಿಕೆಗಳು ಉದಾಹರಿಸುವ ದೇಶಿಯ ಆಕರಗಳು ಹಾಗೂ ಅನಾಮೇಧ ಗ್ರಂಥವಾದ 'ಪೆರಿಪ್ಲಸ್ ಆಫ್ ಎರಿತ್ರಿಯನ್ ಸೀ'ಯಲ್ಲಿ ಉಲ್ಲೇಖಗಳಿವೆ.[೧೮೮]

ಕ್ರಿ.ಶ.೧೬-೧೮ನೇ ಶತಮಾನದಲ್ಲಿ ಜನರು ಹೆಚ್ಚಿನ ಸಂಖ್ಯೆಯಲ್ಲಿ ಗ್ರಾಮಗಳಲ್ಲಿ ವಾಸಮಾಡುತ್ತಿದ್ದರು. ಹಳ್ಳಿಗಳು ಬಹುಮಟ್ಟಿಗೆ ಸ್ವಯಂ ಪೂರ್ಣವಾಗಿದ್ದವು. ಕೃಷಿ ಆಧಾರಿತ ಅರ್ಥವ್ಯವಸ್ಥೆ ಇದ್ದುದರಿಂದ ಉತ್ಪನ್ನಗಳಿಗೆ ವ್ಯಾಪಕವಾದ ಮಾರುಕಟ್ಟೆಯಿತ್ತು. ವಾಸ್ತವವಾಗಿ ಈಗ ಪರಿಶೀಲಿಸುತ್ತಿರುವ ಕಾಲಾವಧಿಯಲ್ಲಿ ಕೃಷಿ ಉತ್ಪನ್ನಗಳು ಹಾಗೂ ಗುಡಿ ಕೈಗಾರಿಕೆಗಳು ವ್ಯಾಪಾರ ಚಟುವಟಿಕೆಗಳಲ್ಲಿ ಗಮನಾರ್ಹ ಪರಿವರ್ತನೆಯನ್ನು ಕಂಡಿತು. ಇಂತಹ ಬದಲಾವಣೆಗೆ ಕಾರಣ, ಹಣದ ಪ್ರಸರಣದ ಹೆಚ್ಚಳ, ವಾಣಿಜ್ಯ, ಬೆಳೆಗಳ ಹೆಚ್ಚಿನ ಉತ್ಪಾದನೆಗಳಾಗಿದ್ದವು.[೧೮೯] ಇಲ್ಲಿನ ಮಾರುಕಟ್ಟೆಗಳಿಗೆ ವಿವಿಧ ಪ್ರದೇಶಗಳಿಂದ ವ್ಯಾಪಾರಿಗಳ ಬರುವಿಕೆಯಿಂದಾಗಿ ಸ್ಥಳೀಯ ಮಾರುಕಟ್ಟೆಗಳು ಬೆಳವಣಿಗೆಗಳಾದವು. ಇದರ ಜೊತೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ಸ್ಥಳೀಯ ಮಾರುಕಟ್ಟೆಗಳು ಪಟ್ಟಣಗಳು, ವ್ಯಾಪಾರಿ ವರ್ಗಗಳು ಕೃಷಿ ಆಧಾರಿತ ಕೈಗಾರಿಕೆಗಳಿದ್ದುದನ್ನು ಶಾಸನಗಳು ಮತ್ತು ಸಾಹಿತ್ಯಿಕ ಮೂಲಗಳು ಸ್ಥಿರಪಡಿಸುತ್ತವೆ. ಇವುಗಳಿಂದ ರೈತ ಹಾಗೂ ವರ್ತಕರ ನಡುವೆ ಕೃಷಿ ಉತ್ಪನ್ನಗಳ ವಿನಿಮಯಗೊಳ್ಳಲು ಅವಕಾಶವಾಯಿತು. ವ್ಯಾಪಾರ ಸಕ್ರಿಯವಾಗಿದ್ದರಿಂದ ಹಳ್ಳಿಗಳಿಗೆ ಹಣವು ನಗದು ರೂಪದಲ್ಲಿ ಹರಿದು ಬಂದಿತು. ಇದರಿಂದಾಗಿ ರೈತರು ವ್ಯಾಪಾರಿಗಳು ತೆರಿಗೆಯನ್ನು ಹಣದ ಮೂಲಕ ಪಾವತಿ ಮಾಡಲು ಸಾಧ್ಯವಾಯಿತು.[೧೯೦] ಹಳ್ಳಿಗಳಲ್ಲಿ ಉತ್ಪಾದಿಸಲು ಸಾಧ್ಯವಿದ್ದ ವಸ್ತುಗಳನ್ನು ಪಟ್ಟಣಗಳಲ್ಲಿನ ಕೈಗಾರಿಕೆಗಳು ವ್ಯಾಪಾರಿಗಳು ಮೂಲಕ ಒದಗಿಸುತ್ತಿದ್ದವು.[೧೯೧] ರಾಜ್ಯದ ಆರ್ಥಿಕತೆಯಲ್ಲಿ ಆಂತರಿಕ ವ್ಯಾಪಾರದ ಪಾತ್ರ ಮಹತ್ವದ್ದಾಗಿತ್ತು. ಆಂತರಿಕ ವ್ಯಾಪಾರದ ಪಾತ್ರ ಮಹತ್ವದ್ದಾಗಿತ್ತು. ಆಂತರಿಕ ವ್ಯಾಪಾರದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡೂ ಪರಸ್ಪರ ಒಂದು ಗೂಡಿಕೆಲಸ ನಿರ್ವಹಿಸುತ್ತಿದ್ದವು. ಆಂತರಿಕ ವ್ಯಾಪಾರದ ಕಾರಣದಿಂದಾಗಿಯೇ ಅನೇಕ ಗ್ರಾಮೀಣ ಪ್ರದೇಶಗಳು ಪೇಟೆ ಪಟ್ಟಣಗಳಾಗಿಯೂ ಪರಿವರ್ತನೆಗೊಂಡವು. ಅತೀ ಹೆಚ್ಚಿನ ಆಡಳಿತ ಪ್ರದೇಶಗಳು ಈ ನಾಯಕರ ಕಾಲದಲ್ಲಿ ರೂಪಗೊಂಡಿದ್ದರಿಂದ ಪೇಟೆ-

ಪಟ್ಟಣಗಳು ಬೆಳೆಯಲು ಸಾಧ್ಯವಾಯಿತು. ಈ ಕಾರಣದಿಂದಾಗಿ ಆಂತರಿಕ ವ್ಯಾಪಾರವು ಆರ್ಥಿಕ ಚಟುವಟಿಕೆಗಳನ್ನು ಚುರುಕುಗೊಳಿಸಿದ್ದೇ ಅಲ್ಲದೆ ಸಾಮಾಜಿಕ ಪರಿವರ್ತನೆಗೂ ಕಾರಣವಾಯಿತು.[೧೯೨] ಆಂತರಿಕ ವ್ಯಾಪಾರವು ಅನೇಕ ಪ್ರದೇಶಗಳಲ್ಲಿ ನಡೆಯುತ್ತಿತ್ತು. ಅಂಥ ವ್ಯಾಪಾರದ ಪ್ರದೇಶಗಳನ್ನು ಸಂತೆ, ಅಂಗಡಿ, ಪೇಟೆ, ಪಟ್ಟಣ ಎಂಬ ಹೆಸರುಗಳಿಂದ ಕರೆಯಲಾಗುತ್ತಿತ್ತು. ಮಧ್ಯಕಾಲೀನ ಕರ್ನಾಟಕದಲ್ಲಿ ಸಂತೆಯು ಪ್ರಮುಖ ವ್ಯಾಪಾರ ವೇದಿಕೆಯಾಗಿತ್ತು.[೧೯೩] ಬೃಹತ್ ಪ್ರಮಾಣದ ಮಾರುಕಟ್ಟೆ ಪ್ರದೇಶಗಳಾದ ವಿಜಯನಗರಿ, ಹತ್ತಿನಾವತಿ, ದೋರಸಮುದ್ರ, ಗುತ್ತಿ, ಪೆನುಗೊಂಡ, ಆದವಾನಿ, ಉದಯಗಿರಿ, ಚಂದ್ರಗಿರಿ, ಮುಳುವಾಯಿತು ಅಥವಾ ಮುಳಬಾಗಿಲು, ಕಂಚಿ, ಪಡೆವೀಡು, ಚದುರಂಗಪಟ್ಟಣ, ಮಂಗಳೂರು, ಬಾರಕೂರು, ಹೊನ್ನಾವರ, ಚಂದಾವರ, ಚಂದ್ರಗುತ್ತಿ, ಅಣ್ಣಿಗೇರಿ, ಹುಲಿಗೆರೆ, ನಿಡುಗಲ್ಲು, ಚಿಮತನಕಲ್ಲು(ಚಿತ್ರದುರ್ಗ), ತರಿಯಕಲ್ಲು, ಆನೆವಿಡ್ಡ, ಸರಿಕಲ್ಡೆಯ, ತೆಲಕಲಾಂಬಿ, ಅಥವಾ ತೆರಕಣಾಂಬಿ, ದಾವಣಗೆರೆ, ಹರಿಹರ, ಹೊಳಲ್ಕೆರೆ, ಹೊಸದುರ್ಗ, ಮೊಳಕಾಲ್ಮೂರು, ಚಳ್ಳಕೆರೆ, ಸಿಂಗಪಟ್ಟಣ, ಈ ಪಟ್ಟಿಯಿಂದ ನಾವು ಬಳ್ಳಾರಿ, ಹಾಸನ, ಕೋಲಾರ, ಹುಬ್ಬಳ್ಳಿ, ದಕ್ಷಿಣ ಕನ್ನಡ, ಉತ್ತರಕನ್ನಡ, ಶಿವಮೊಗ್ಗ, ಧಾರವಾಡ, ತುಮಕೂರು, ಚಿತ್ರದುರ್ಗ, ಮತ್ತು ಮೈಸೂರು, ಬೆಂಗಳೂರು ಇನ್ನಿತರೆ ಜಿಲ್ಲೆಗಳು ನಾಯಕರ ಕಾಲದ ಬಹುಮುಖ್ಯ ವ್ಯಾಪಾರ ಕೇಂದ್ರಗಳಾಗಿದ್ದವು ಎಂದು ಹೇಳಬಹುದು.[೧೯೪]

ಈ ರೀತಿಯಾಗಿ ರಚನೆಗೊಂಡ ಮಾರುಕಟ್ಟೆ ಸ್ಥಳಗಳಲ್ಲಿ ಕೃಷಿ ಉತ್ಪನ್ನಗಳಾದ ಭತ್ತ, ಜೋಳ, ರಾಗಿ, ಬಾರ್ಲಿ, ಬರಗು, ಸಾವೆ, ಗೋಧಿ, ಕಡಲೆ, ಎಳ್ಳು, ಅಗಸೆ, ಕುಸುಬೆ, ಹೆಸರು, ಉದ್ದು, ತೊಗರಿ, ಹುರುಳಿ, ಅಕ್ಕಿ, ಸಕ್ಕರೆ, ಎಣ್ಣೆ, ಉಪ್ಪು, ತುಪ್ಪ, ಬೆಲ್ಲ, ಅಡಕೆ, ವೀಳ್ಯದೆಲೆ, ಮೆಣಸು, ಅರಿಶಿನ, ಉತ್ಪನ್ನಗಳ ಹಂಚಿಕೆ ಮತ್ತು ಸಂಗ್ರಹಣೆಗಳ ಸಂದರ್ಭ ಮತ್ತು ವಿಧಾನಗಳಾಗಿದ್ದವು. ಈ ಸಂತೆಗಳಲ್ಲಿ ವಸ್ತುಗಳು ಭಾರೀ ಪ್ರಮಾಣದಲ್ಲಿ ವಿನಿಮಯವಾಗುತ್ತಿದ್ದವು. ಸುತ್ತಮುತ್ತಲ ಗ್ರಾಮಾಂತರ ಪ್ರದೇಶಗಳಿಂದ ಬಂದ ರೈತಾಪಿ ಜನರು ಅಂದಿನ ಕಾಲದ ಮಾರುಕಟೆ ಸ್ಥಳಗಳಿಂದ ಬಂದು, ವಿಧವಿಧವಾದ ಉಡುಗೆಗಳಿಂದ ಆಕರ್ಷಕರಾಗಿದ್ದ ಮಾರಾಟಗಾರರನ್ನು ನೋಡುತ್ತಿದ್ದರು. ಅವರು ಮಾರುತ್ತಿದ್ದ ಬಟ್ಟೆಗಳು, ಧಾನ್ಯಗಳು, ಸಂಬಾರ, ವಸ್ತುಗಳು ಮತ್ತು ಸುಗಂಧ ದ್ರವ್ಯಗಳು ಅವರ ಮನ ಸೆಳೆಯುತ್ತಿದ್ದುವು.[೧೯೫] ಕೃಷಿ ಉತ್ಪನ್ನಗಳು ಅಷ್ಟೇ ಅಲ್ಲದೆ ಚಿತ್ರದುರ್ಗ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ಗೃಹಕೈಗಾರಿಕೆಗಳ ತವರೂರು. ರಾಜ್ಯದ ಆರ್ಥಿಕ ವ್ಯವಸ್ಥೆಯಲ್ಲಿ ಸಮತೋಲನವನ್ನು ಕಾಪಾಡುವಲ್ಲಿ ಕೃಷಿಯಷ್ಟೇ ಪ್ರಧಾನ ಪಾತ್ರವಹಿಸಿದ್ದ ಈ ಕೈಗಾರಿಕೆಗಳು, ಗ್ರಾಮಗಳ ಸ್ವಾಲಂಬನೆ ಆರ್ಥಿಕ ಜೀವನಕ್ಕೆ ಸಹಕಾರಿಯಾಗಿದ್ದವು. ಪ್ರತಿಯೊಂದು ಗ್ರಾಮವೂ ತನಗೆ ಬೇಕಾಗಿದ್ದ ಪದಾರ್ಥಗಳನ್ನು ಸ್ವತಃ ತಯಾರಿಸಿಕೊಳ್ಳುತ್ತಿತ್ತು. ನೇಯ್ಗೆ, ಲೋಹ, ಎಣ್ಣೆ, ಗೃಹೋಪಕರಣಗಳ ತಯಾರಿಕೆ, ಪೀಠೋಪಕರಣಗಳು, ಉಪ್ಪು ತಯಾರಿಕೆ, ಕುಂಬಾರಿಕೆ ಇತ್ಯಾದಿ ವಿವಿಧ ವೃತ್ತಿ ಕೈಗಾರಿಕೆಗಳು ಅಂದು ಅಸ್ತಿತ್ವದಲ್ಲಿದ್ದವು. ಈ ಕೈಗಾರಿಕೆಗಳಿಗೆ ಬೇಕಾದ ಕಚ್ಚಾ ಪದಾರ್ಥಗಳು ಸಾಮಾನ್ಯವಾಗಿ ಸ್ವಗ್ರಾಮದಲ್ಲೇ ಲಭ್ಯವಾಗುತ್ತಿತ್ತು.[೧೯೬] ಹೀಗೆ ಕೈಗಾರಿಕೆಗಳಲ್ಲಿ ಉತ್ಪಾದಿಸಿದ ವಸ್ತುಗಳನ್ನು ಸಂತೆಗಳಲ್ಲಿ ಹಾಗೂ ತಮ್ಮ ಸ್ವಗ್ರಾಮಗಳಲ್ಲಿ ಮಾರಾಟ ಮಾಡುತ್ತಿದ್ದರು. ಈ ವೃತ್ತಿಗಳನ್ನು ಅನುಸರಿಸುತ್ತಿದ್ದರು ಪ್ರತ್ಯೇಕವಾದ ಬೀದಿಗಳಲ್ಲಿ ವಾಸಿಸುತ್ತಿದ್ದರು.[೧೯೭]

ಪ್ರಾಚೀನ ಕಾಲದ ಸಂಪ್ರದಾಯದಂತೆ ಚಿತ್ರದುರ್ಗ ಪೇಟೆಯಲ್ಲಿ ಬೇರೆ ಬೇರೆ ಜಾತಿಯವರಿಗೆ ಬೀದಿಗಳನ್ನು ನಿರ್ಮಿಸಲಾಗಿತ್ತು. ಎಂಬುದೂ ಸಹ ಕೈಫಿಯತ್ತು ಗುರುತಿಸುತ್ತದೆ. ಕೈಫಿಯತ್ತಿನ ಪ್ರಕಾರ

ಇಂತಹ ಹದಿಮೂರು ಕೇರಿಗಳನ್ನು ಚಿತ್ರದುರ್ಗ ಪೇಟೆಯಲ್ಲಿ ನಿರ್ಮಿಸಲಾಗಿತ್ತು. ಅವುಗಳು ಇಂತಿವೆ. ಬ್ರಾಹ್ಮಣರ ಕೇರಿ, ಕುಂಬಾರಕೇರಿ, ಕಂಚುಗಾರ ಕೇರಿ, ಕೇಣಿಮಾಡುವ ಕೇರಿ, ಉಪ್ಪಾರ ಕೇರಿ, ಕಬಾಡಿ ಕೇರಿ, ತುರುಕರ ಕೇರಿ, ಪಟ್ಟಣನಾವು ಕೇರಿ, ಅಗಸರ ಕೇರಿ, ಜಾಡದಕೇರಿ, ಸಮಗಾರ ಕೇರಿ, ಕಾಯಿ[೯೮] ಪಲ್ಲೇ ಮಾರುವವರ ಕೇರಿ ಮತ್ತು ಜೈನ ಮಾರ್ವಾಡಿಗಳ ಕೇರಿ ಇನ್ನಿತರ ವೃತ್ತಿಗರ ಕುರಿತಾದ ಕೇರಿಗಳಿವೆ. ಹೀಗೆ ಒಂದೊಂದು ವೃತ್ತಿ ಕೈಗಾರಿಕೆಗಳವರೂ ತಮ್ಮದೇ ಆದ ಬೀದಿಗಳಲ್ಲಿ ವಾಸಿಸುತ್ತಿದ್ದದರಿಂದ ಕೊಡು-ಕೊಳ್ಳುವ ವ್ಯವಹಾರ ಸುಲಭ ಸಾಧ್ಯವಾಗಿತ್ತು.

ನಾಯಕರ ಕಾಲದಲ್ಲಿ ವ್ಯಾಪಾರ ಸಂಘಟಿತ ಬಹುಮುಖ್ಯ ಸಮುದಾಯವೆಂದರೆ ಸಾಲುಮೂಲೆ ಬಣಜಿಗರು. ಅವರು ಒಟ್ಟುಗೂಡಿ ಸರಕಾರದೊಂದಿಗೆ ಒಪ್ಪಂದ ಮಾಡಿಕೊಳ್ಳುತ್ತಿದ್ದರು. ವರ್ತಕನೊಬ್ಬರು ವೈಯಕ್ತಿಕವಾಗಿ ಸರಕಾರದೊಂದಿಗೆ ಸಂಪರ್ಕ ಕಂಡುಕೊಳ್ಳುವುದಕ್ಕೆ ಬದಲಾಗಿ, ಈ ಸಂದರ್ಭದಲ್ಲಿ ಇಡೀ ಸಮುದಾಯವೇ ಸಂಪರ್ಕವನ್ನು ಸ್ಥಾಪಿಸಿಕೊಂಡಿತು. ವ್ಯಕ್ತಿಗತವಾಗಿ ಹೋದರೆ ಅಧಿಕಾರಿಗಳು ಅಷ್ಟಾಗಿ ಮರ್ಯಾದೆ ಕೊಡುತ್ತಿರಲಿಲ್ಲವೋ ಏನೋ, ಆದರೆ ಈಗ ಸಮುದಾಯದಲ್ಲಿ ಒಬ್ಬನಾದ್ದರಿಂದ ಅಧಿಕಾರಿಗಳ ಕಣ್ಣಿನಲ್ಲಿ ಅವನ ಗೌರವ ಹೆಚ್ಚಿತ್ತು. ಹೀಗೆ ಕರ್ನಾಟಕದ ಹಾಗೂ ಅಂದಿನ ಕಾಲದ ಇಡೀ ವ್ಯಾಪಾರ ವಹಿವಾಟು ಸುಸಂಘಟಿತವಾಗಿದ್ದುದನ್ನೂ ಸ್ವ-ನಿಯಂತ್ರಿತವಾಗಿದ್ದುದನ್ನೂ ಆ ಕಾಲದಲ್ಲಿ ನೋಡಬಹುದಾಗಿತ್ತು. ೨೬ ವ್ಯಾಪಾರ ಕೇಂದ್ರಗಳಿಗೆ ಸೇರಿದ ಬಣಜಿಗ ವರ್ತಕರು[೯೯] ತಮ್ಮ ಹಿತವನ್ನು ರಕ್ಷಿಸಿಕೊಳ್ಳುವ ಸಲುವಾಗಿ ಹಾಗೂ ಪಾಳೆಯಗಾರರ ಸರಕಾರದೊಂದಿಗೆ ವ್ಯವಹರಿಸುವ ಸಲುವಾಗಿ ಹೀಗೆ ಒಕ್ಕೂಟವನ್ನು ಮಾಡಿಕೊಂಡದ್ದು ನಮಗೆ ಮಧ್ಯಕಾಲೀನ ಚರಿತ್ರೆಯಲ್ಲಿ ತಿಳಿದುಬರುತ್ತದೆ.

ಬಣಜಿಗರಲ್ಲಿ ಸೆಟ್ಟಿ ಸಮುದಾಯ ಹೆಚ್ಚಾಗಿದ್ದು, ಸೆಟ್ಟಿಯರು ಅಂಗಡಿಗಳಲ್ಲಿ ಕುಳಿತು ವ್ಯಾಪಾರ ಮಾಡುತ್ತಿದ್ದರೆ, ಸಣ್ಣಪುಟ್ಟ ವ್ಯಾಪಾರಿಗಳು ಸರಕುಗಳನ್ನು ತಮ್ಮ ತಲೆಯ ಮೇಲೆ ಹೊತ್ತುಕೊಂಡು ಬೀದಿಬೀದಿ ಅಲೆದು ವ್ಯಾಪಾರ ಮಾಡುತ್ತಿದ್ದರು. ಇದು ಈಗಲೂ ನಡೆದು ಬಂದಿದೆ. ಕೆಲವು ಸರಕುಗಳು ತಮ್ಮ ತಮ್ಮ ಪ್ರದೇಶಗಳಲ್ಲಿಯೇ ಮಾರುವ ದವಸ, ಧಾನ್ಯ, ವಸ್ತುಗಳನ್ನು ಮತ್ತೆ ಕೆಲವು ಪ್ರಾಂತಗಳಿಂದ ತರಿಸಿ ಮಾರುತ್ತಿದ್ದರು.

ಹೀಗೆ ಬೇರೆ ಬೇರೆ ಪ್ರದೇಶಗಳಿಂದ, ಪ್ರಾಂತಗಳಿಂದ ವಸ್ತುಗಳನ್ನು ತಂದು ವ್ಯಾಪಾರ ಮಾಡಲು ಮಾರ್ಗಗಳ ಅಗತ್ಯವಿತ್ತು. ಕೆಲವು ಶಾಸನಗಳಲ್ಲಿ 'ಬೀದಿ' ಎಂದು ಬಂದಿರುವುದನ್ನು ಕಾಣಬಹುದು. ಹತ್ತು, ಹನ್ನೊಂದನೆಯ ಶತಮಾನದ ಶಾಸನಗಳಲ್ಲಿ ದಾರಿ,[೧೦೦] ಮಾರ್ಗ,[೧೦೧] ಬಟ್ಟೆ[೧೦೨] ಬೀದಿ ಎಂಬ ಪದಗಳನ್ನು ಉಪಯೋಗಿಸಿರುವುದರಿಂದ, ಆಗಿನಿಂದಲೂ ಮಾರ್ಗಗಳಿದ್ದು, ಹೊಸ ಮಾರ್ಗಗಳನ್ನೂ ಮಾಡಿರಬಹುದು. ಹಿಂದೆ ಹೇಳಿದ 'ಬಟ್ಟೆ'ಯಿಂದಲೂ ರಾಜಧಾನಿಗೆ ಮಾರ್ಗಗಳ ನಿರ್ಮಾಣವಾಗಿರುತ್ತದೆ. ಜನರು ಒಂದೇ ಜಾಗದಲ್ಲಿ ಓಡಾಡುವುದರಿಂದ ದಾರಿಗಳಾಗಿ, ಮುಂದೆ ಅವು ಹೆಚ್ಚು ಹೆಚ್ಚು ಬಳಕೆಯಾಗಲು ಮಾರ್ಗಗಳಾಗುತ್ತವೆ. ಇದರ ವ್ಯವಸ್ಥೆಗೆ 'ಮಾರ್ಗಾಧಿಕಾರಿ'ಗಳನ್ನು ನೇಮಿಸುತ್ತಿದ್ದರು. ಇವರು ಮಾರ್ಗಗಳ ವ್ಯವಸ್ಥೆಯನ್ನು ನೋಡಿಕೊಳ್ಳುವುದರ ಜೊತೆಗೆ 'ಮಾರ್ಗಸುಂಕ'ವನ್ನು ತೆಗೆದುಕೊಳ್ಳುತ್ತಿದ್ದರು.

ದೆಹಲಿ ಸುಲ್ತಾನರು ದಕ್ಷಿಣ ಭಾರತದೊಂದಿಗೆ ಮಾರ್ಗವನ್ನು ರಚಿಸಿಕೊಂಡಿರುವ ಬಹುಮುಖ್ಯ ಉದಾಹರಣೆಗೆ ಕಂಡು ಬರುವುದು ದೊಡ್ಡೇರಿ ಕದನ. ಈ ಕದನದ ಜಾನಪದ ಹಾಗೂ ಚಾರಿತ್ರಿಕ

ಅಂಶಗಳನ್ನು ದಾಖಲಿಸಿದ್ದು ಲಕ್ಷ್ಮಣ್ ತೆಲಗಾವಿ ಅವರು. ಅವರು ಮರಾಠ ಸಂಸ್ಥಾನಕ್ಕೂ ದೆಹಲಿಗೂ ಸಂಪರ್ಕ ಕಲ್ಪಿಸುವಲ್ಲಿ ಒಂದು ರೀತಿಯಲ್ಲಿ ವ್ಯಾಪಾರಿ ವರ್ತಕರಿಂದ ಹಾಗೂ ದಂಡು ತಮ್ಮ ಪ್ರದೇಶಗಳಿಂದ ಹಾದು ಹೋಗುವಾಗ ತೆರಿಗೆಯನ್ನು/ಸುಂಕವನ್ನು ನೀಡಬೇಕಿತ್ತು. ಈ ಕುರಿತು ಒಬ್ಬ ಅಧಿಕಾರಿಯೇ ಇರುತ್ತಿದ್ದ ಎಂದು ಈ ಹಿಂದೆಯೇ ತಿಳಿಸಲಾಗಿದೆ. ಹಾಗೇಯೇ ಔರಂಗಜೇಬನ ಸೇನಾಪತಿ ಖಾಸಿಂಖಾನನು ದೊಡ್ಡೇರಿ ಪ್ರದೇಶದಲ್ಲಿ ಭರಮಣ್ಣ ನಾಯಕನಿಗೆ ಸೆರೆ ಸಿಕ್ಕ ಸಂದರ್ಭದಲ್ಲಿ ಉಲ್ಲೇಖಿಸಿದ ವರ್ತಕರ ಹೆಸರು ಹಾಗೂ ಅವರಿಗೆ ಯಾವ ರಿತಿ ಮಾರ್ಗಾಧಿಕಾರಿ ಪ್ರತಿಕ್ರಿಯಿಸಿದ ಎಂಬ ಈ ಕೆಳಗಿನ ಲಾವಣಿಯಲ್ಲಿ ತಿಳಿಯಬಹುದು.

ಎತ್ತಿನ ಮೇಲಿರುವೋದು। ಅದು ಯಾತರ ಹೇರಣ್ಣ।
ಮೂಲೆ ಕೋಯಣ್ಣ। ಮೂಗಾವುದ ಚಲ್ಲಣ್ಣ।
ಹಣಕಾಸಿನ ಮೇಲೆ। ಆಸೆ ಮಾಡುವವನಲ್ಲಾ।
ಅಯ್ಯಯ್ಯೋ ಧಡಿಗನೇ ಹೊಕ್ಕಲ್ಲಿ ಖಿಡೆನೊ॥೧೨॥
ಹೊದ್ದ ಗುಡಾರವ ಹೊಕ್ಕು ಕಡಿವಾಗ
ಬಣಜಿಗರು ಕಾಣಪ್ಪ। ಬೆಳ್ಳುಳ್ಳಿ ಮಾರುವವರು।
ಕಟ್ಟೆಯ ಮೇಲೆ।
ಓಡಿಸಿ ಕಡಿವಾಗ ಗದಮಿಕೊಂಡು ಕಡಿವಾಗ।
ವಕ್ಕಲಿಗರು ಕಾಣಪ್ಪ। ಬಿಟ್ಟೇಯ ಬಂದೀವಿ।
ಏರಿಯ ಹಿಂದೆ ಹಾರಾಡಿ ಕಡಿವಾಗ।
ಹೊರಾಡಿ ಕಡಿವಾಗ ಬ್ಯಾಡರು ಕಾಣಪ್ಪ
ನಾವು ಬ್ಯಾಟಿಯಾ ಬಂದೀವಿ ॥೧೩॥
ಶೆಟ್ಟೇನಾ ದೊರೆ ಕೈಯಾಗೆ। ಸಿಕ್ಕ ಬಾರದೆಂದೂ।
ದಕ್ಕಬಾರದೆಂದೂ।
ಹಕ್ಕಜ್ಜಿನಾಮೆ ಕುಡಿದು। ಡೇರಾದ ವಳಿಗೆ ಸತ್ತಿದ್ದಾ॥೧೪॥[೨೦೩]

ಮಾರ್ಗಾಧಿಕಾರಿ ಸುಂಕ ಪಡೆಯಲು ಅವರನ್ನು ಕೇಳಿದ ರೀತಿ ಹಾಗೂ ಸೈನ್ಯವು ಎತ್ತುಗಳಲ್ಲಿ, ಗಾಡಿಗಳಲ್ಲಿ ಶಸ್ತ್ರಾಸ್ತ್ರಗಳನ್ನು ತುಂಬಿಕೊಂಡು ಹೋಗುವ ಸಂದರ್ಭದಲ್ಲಿ ತೆರಿಗೆ ವಿನಾಯಿತಿಯನ್ನು ಪಡೆಯಲು ಈ ರೀತಿಯಾಗಿ ಬಣಜಿಗರು, ಬೆಳ್ಳುಳ್ಳಿ ಮಾರುವವರು, ಬೇಡರು ಬೇಟೆಗೆ ಬಂದಿದ್ದೇವೆ ಎಂದು ಹೇಳಿಕೊಂಡಿರುವ ಜಾನಪದೀಯ ಲಾವಣಿಯ ಮೂಲಕ ಈ ಅಧಿಕಾರಿಯನ್ನು ಗುರುತಿಸಬಹುದು. ಹಾಗೂ ಉತ್ತರ ಮತ್ತು ದಕ್ಷಿಣ ಭಾರತದ ಸಂಪರ್ಕ ಮಾರ್ಗವನ್ನು ಸೂಚಿಸಬಹುದು. ಹಾಗೆಯೇ ದಾನ, ದತ್ತಿ, ಕೊಡುವ ಭೂಮಿಯ ಸೀಮಾನಿದರ್ಶನದಿಂದ ಗ್ರಾಮಗ್ರಾಮಗಳ, ದಾರಿಗಳ ನಿದರ್ಶನವಾಗುತ್ತದೆ. ಗುಡ್ಡಕಾಡು ಸೀಮೆಗಳಾದರೆ ಸಾರಿಗೆ ಸಂಪರ್ಕ ಕಷ್ಟಕರವಾಗುತ್ತದೆ.

ಸರಕುಗಳನ್ನು ಸಾಗಿಸುತ್ತಿದ್ದ ರೀತಿಯನ್ನು ಪ್ರವಾಸಿಗರ ಕಥನಗಳಿಂದ ತಿಳಿದುಕೊಳ್ಳಬಹುದು. ಬಂಡಿ, ಪ್ರಾಣಿಗಳ ಮುಖಾಂತರ ಸರಕುಗಳ ಸಾಗಾಣಿಕೆ ನಡೆಯುತ್ತಿತ್ತು. ದೂರದ ಸ್ಥಳಗಳಿಗೆ ಸಾಗಿಸುತ್ತಿದ್ದು ಬಂಡಿಗಳಲ್ಲಿ, ಹತ್ತಿರದಲ್ಲಿ ಸಂಚಾರಕ್ಕೆ ಹೇಸರಗತ್ತೆ[೨೦೪] ಕೋಣಗಳು, ಎತ್ತುಗಳ[೨೦೫] ಮೇಲೆ ಸಾಗಿಸುತ್ತಿದ್ದರು.

“ನಾಲ್ಕು ನಾಡುಗಳ ನೆರೆದಾವನಾಡಲು ಹೇರಿದಡಂ ಕೋಣ ೧೦, ಎತ್ತು೧೦, ಕತ್ತೆ ೧೦, ಅನು ನೆರೆದಾವ ನಡಲು ಹೇರಿಕಾಯ ಸುಂಕಮಂ...[೨೦೬] ಕೋಣ ಮತ್ತು ದೇವರೆತ್ತು.[೨೦೭] ಮೇಲೂ ಸರಕುಗಳನ್ನು ಸಾಗಿಸುತ್ತಿದ್ದರು. ‘ದೇವರೆತ್ತು’ ಎಂದರೆ ದೇವಸ್ಥಾನಗಳಿಗೆ ಬಿಟ್ಟ ಎತ್ತಿರಬಹುದು.

ಲಕ್ಷ್ಮಣ್ ತೆಲಗಾವಿ ಅವರ ಸಂಪಾದಿತ ಮತ್ತೊಂದು ಕೃತಿಯಾದ ‘ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು’ ಎಂಬ ಕೃತಿಯಲ್ಲಿ ಉಪ್ಪಾರ ತಿಮ್ಮಣ್ಣ ಎಂಬ ಸಂಶೋಧನಾ ವಿಷಯವು ವ್ಯಾಪಾರಕ್ಕೆ ಸಂಬಂಧಿಸಿದ ಬಹುಮುಖ್ಯ ಉದಾಹರಣೆಯಾಗಿದೆ. ೧೬ನೇ ಶತಮಾನದಲ್ಲಿ ರಾಯದುರ್ಗದ ಉಪ್ಪಾರರು ಮಲೆನಾಡಿನ ಸೀಮೆಗೆ ಹೋಗಿ ಹೋಳ ಅಡಿಕೆಯನ್ನು ತಂದು ಐನವರು, ಹಯನ, ಗುಡಿಗಟ್ಟಿ, ಬಳ್ಳಾರಿ, ಉಜ್ಜನಿ, ಹತ್ರಿ, ರಾಯದುರ್ಗ, ಕುರುಗೋಡು, ಕೊಂಡಾಪುರ, ನಿಡುಗಲ್ಲು, ವಲಸೆ, ಕಣಿಯಕಲ್ಲು, ರೂಪನಗುಡಿ, ತಾಗಲಾಪುರ, ಗುಡಿಕೋಟೆ, ಮನಸೂರು, ಕಾಮಸಮುದ್ರ, ಸೀರ್ಯ, ಚಿತ್ರದುರ್ಗ, ಮೊಳಕಾಲ್ಮೂರು, ಚಳ್ಳಕೆರೆ, ಜಗಳೂರು, ಹೊಸದುರ್ಗ, ಇನ್ನಿತರೆ ಪ್ರದೇಶಗಳಲ್ಲಿ ಮಾರಾಟ ಮಾಡುತ್ತಿದ್ದರು. ಇವರು ಮುನ್ನೂರು ಜನ ಉಪ್ಪಾರರು ಹಾಗೂ ೩೦೦ ಕೋಣಗಳನ್ನು ಶೃಂಗಾರ ಮಾಡಿಕೊಂಡು ರಾಯದುರ್ಗದಿಂದ ಮಲೆನಾಡಿಗೆ ಹೋಗುತ್ತಿದ್ದರು. ಈ ಸಮಯದಲ್ಲಿ ದಾರಿ ಸುಂಕ ನೀಡದೇ ಇರುವುದರಿಂದ ತಿಮ್ಮಣನಾಯಕನು ಈ ಉಪ್ಪಾರದ ಗುಂಪನ್ನು ಬಂದಿಸಿದನು. ನಂತರ ತಿಮ್ಮಣ್ಣ ಎಂಬ ಉಪ್ಪಾರ ಸಮುದಾಯದ ಒಬ್ಬ ವ್ಯಕ್ತಿ ಮಧ್ಯಸ್ಥಿಕೆ ವಹಿಸಿ ವರ್ಷ ಒಂದಕ್ಕೆ ಒಬ್ಬ ವ್ಯಾಪಾರಿ ಒಂದು ವರಹ ನೀಡುವುದಾಗಿ ಪತ್ರ ಬರೆದು ಮಾಡಿಕೊಂಡ ಒಪ್ಪಂದದ ಅಂಶ ತಿಳಿದು ಬರುತ್ತದೆ.[೨೦೮] ಇದರಿಂದ ಇಲ್ಲಿನ ವ್ಯಾಪಾರ ಪ್ರದೇಶ, ವೃತ್ತಿ ಸಮುದಾಯ, ಹಾಗೂ ಸುಂಕ ವ್ಯವಸ್ಥೆಯನ್ನು ಗಮನಿಸಬಹುದು.

ಸಲಾಬತ್ ಜಂಗನು ಹಾಗಲವಾಡಿಯ ಕೆರೆಯ ಬಳಿ ಇಳಿದುಕೊಂಡು ತಮ್ಮ ಗಾಡಿಗಳಿಗೆ ಕಟ್ಟುವುದಕ್ಕೆ ಐವತ್ತು ಜೊತೆ ಎತ್ತುಗಳನ್ನು ಕಳುಹಿಸಬೇಕೆಂದು ಹೇಳಿ ಕಳುಹಿಸುವನು.[೨೦೯] ಒಳ್ಳೆಯ ಎತ್ತು ಮತ್ತು ಬಂಡಿ ಇಲ್ಲದ ಕೃಷಿಕರ ಆರಂಭ ವ್ಯರ್ಥವೆಂದು ಸರ್ವಜ್ಞ ಹೇಳಿದ್ದಾನೆ. ಬಂಡಿ ಒಂದು ಉತ್ತಮ ಸಂಚಾರಿ ವಾಹನ ಮತ್ತು ಹೇರು ಹೊರುವ ಸಾಧನ ಚಕ್ಕಡಿ ಅಥವಾ ಬಂಡಿ ಪ್ರಾಚೀನ ಕಾಲದಿಂದಲೂ ಜನ ಸಾಮಾನ್ಯರ ಪ್ರಯಾಣದ ಮತ್ತು ಸರಕು ಸಾಗಿಸುವ ಬಹುಮುಖ್ಯ ಸೌಕರ್ಯವಾಗಿತ್ತು.[೨೧೦] ಪ್ರತಿಷ್ಠಿತ ವ್ಯಕ್ತಿಗಳಿಗೆ ಪಲ್ಲಕ್ಕಿಯನ್ನು ಇಟ್ಟುಕೊಳ್ಳಲು ‘ಪಲ್ಲಕ್ಕಿ ಉಂಬಳಿ’ಯನ್ನು ಸರಕಾರ ಕೊಡುತ್ತಿತ್ತು.[೨೧೧] ಬೋಯಿಗಳೆಂಬ ಜಾತಿಯವರು ಪಲ್ಲಕ್ಕಿಯನ್ನು ಹೋರುತ್ತಿದ್ದರು.[೨೧೨] ಎತ್ತಿನ ಹೇರು ಮತ್ತು ಕತ್ತೆಯ ಹೇರು ಎಂದು ಶಾಸನಗಳಲ್ಲಿ[೨೧೩] ಬರುವುದರಿಂದ ಎತ್ತು, ಕೋಣ, ಕತ್ತೆಗಳ ಮೇಲೆ ಸರಕುಗಳನ್ನು ಸಾಗಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಪ್ರಾಣಿಗಳ ಮೇಲಿನ ಹೇರುಗಳಿಗೆ ಸುಂಕವನ್ನು ಕೊಡಬೇಕಾಗಿತ್ತು.[೨೧೪]

ಆದರೆ ಕೃಷಿ ಹಾಗೂ ಗುಡಿಕೈಗಾರಿಕೆಗಳ ವಸ್ತುಗಳ ಉತ್ಪನ್ನಗಳ ಮಾರಾಟವು ಹಳ್ಳಿಯ ಸಂತೆಗಳಿಗೆ ಮಾತ್ರವೇ ಸೀಮಿತವಾಗಿರಲಿಲ್ಲ. ನಗರಗಳು ಮತ್ತು ಪಟ್ಟಣಗಳೂ ಹೆಚ್ಚುವರಿ ವಸ್ತುಗಳ ವಿತರಕಗಳಾಗಿ ವರ್ತಿಸುತ್ತಿದ್ದುವು. ಹೀಗೆ ಹೆಚ್ಚುವರಿ ಕೃಷಿ ಮತ್ತು ಮಾರಾಟದಲ್ಲಿ ನುರಿತಿದ್ದ ವಿಶಿಷ್ಟ ವರ್ಗದ ವರ್ತಕರೇ ಇದ್ದರು.[೨೧೫] ಆದರೆ ಪರಿಣಾಮಕಾರಿಯಾದ ಸಾರಿಗೆಯಾಗಲಿ, ಸಂಪರ್ಕವಾಗಲಿ ಇರದುದರಿಂದ ಹೆಚ್ಚುವರಿ ವಸ್ತುಗಳ ಸಾಗಣೆ ಕುಂಠಿತವಾಗುತ್ತಿತ್ತು. ಆಗ ಇದ್ದ ಏಕೈಕ ಸಾಗಾಣಿಕೆ ವಿಧಾನವೆಂದರೆ ಪ್ರಾಣಿಗಳ ಹೇರುಗಳು. ಆದ್ದರಿಂದ ಇದ್ದದ್ದರಲ್ಲಿ ಹಗುರವೂ ಬೆಲೆ ಬಾಳುವುದೂ ಆದ ಕೃಷಿ ಉತ್ಪಾದನೆಗಳನ್ನು ಮಾತ್ರ ದೂರದ ಸ್ಥಳಗಳಿಗೆ ಹೇರುಗಳ ಮೂಲಕ ಸಾಗಿಸುತ್ತಿದ್ದರು.[೨೧೬]

ಕೃಷಿ ವಸ್ತುಗಳ ವಿದೇಶ ವ್ಯಾಪಾರ ವಹಿವಾಟಿನ ಬಹುಪಾಲನ್ನು ಕಾರವಾರ, ಹೊನ್ನಾವರ, ಮಂಗಳೂರು ಮತ್ತು ಭಟ್ಕಳಗಳು ನಿರ್ವಹಿಸುತ್ತಿದ್ದವು. ನಾಯಕರ ಕಾಲದಲ್ಲಿ ವ್ಯಾಪಾರ–ವಾಣಿಜ್ಯ ವ್ಯವಸ್ಥೆ ಹಿಂದಿನ ಕಾಲಕ್ಕಿಂತ ಹೆಚ್ಚು ಸುಧಾರಿತವಾಗಿತ್ತು. ಆ ಕಾಲಕ್ಕೆ ರಾಜ್ಯದ ವಿವಿಧ ಭಾಗಗಳಿಗೆ ಸಂಪರ್ಕ ಕಲ್ಪಿಸುವ ರಸ್ತೆಗಳು, ವ್ಯಾಪಾರಿ ಕೇಂದ್ರಗಳು ಸಾಕಷ್ಟಿದ್ದವೆನಿಸುತ್ತದೆ. ಪಶ್ಚಿಮ ಕರಾವಳಿ ಮೂಲಕ ಅನೇಕ ಮುಖ್ಯ ವ್ಯಾಪಾರಿ ಮಾರ್ಗಗಳಿದ್ದು ಪ್ರಮುಖ ಬಂದರುಗಳಾದ ಹೊನ್ನಾವರ, ಭಟ್ಕಳದಂಥ ನಗರಗಳಿಗೆ ಸಂಪರ್ಕ ಕಲ್ಪಿಸಿದ್ದವು. ಬಯಲು ಪ್ರದೇಶದಲ್ಲಿ ಮುಖ್ಯ ವಾಣಿಜ್ಯ ವ್ಯವಹಾರ ಮಾರ್ಗ ಪೂರ್ವಪಶ್ಚಿಮವಾಗಿ ಕಂಚಿಯಿಂದ ಹೊರಟು ಕೋಲಾರ ಹತ್ತಿರವಿರುವ ನಂಗಲಿಗೆ ತಲುಪಿ ಮುಂದೆ ಪಶ್ಚಿಮದತ್ತ ತಿರುಗಿ ಚಿಕ್ಕನಾಯಕನಹಳ್ಳಿ, ಅರಸೀಕೆರೆ, ಬೇಲೂರು, ಅಂಗಡಿಗಳನ್ನು ಹಾಯ್ದು ಮಂಗಳೂರನ್ನು ಸೇರುತ್ತಿತ್ತು. ಇನ್ನೊಂದು ಪೂರ್ವ ಪಶ್ಚಿಮ ಹೋಗುವ ಮುಖ್ಯ ರಸ್ತೆ ಹೊನ್ನಾವರದಿಂದ ಹೊರಟು ಬನವಾಸಿ ಬಳ್ಳಿಗಾವೆ, ಬಂಕಾಪುರ, ಹುಬ್ಬಳ್ಳಿ, ದಾಟಿ ಉಚ್ಚಂಗಿಯನ್ನು ತಲುಪುತ್ತಿತ್ತು.[೨೧೭] ಉತ್ತರ ದಕ್ಷಿಣವಾಗಿ ಒಂದು ಬಹುಮುಖ್ಯರಸ್ತೆ ವಿಜಾಪುರದಿಂದ ದಕ್ಷಿಣವಾಗಿ ದ್ವಾರಸಮುದ್ರ, ಚಿತ್ರದುರ್ಗ, ನಿಡುಗಲ್ಲು, ಚನ್ನರಾಯಪಟ್ಟಣ, ಶ್ರವಣಬೆಳಗೊಳ, ತೊಂಡನೂರು, ಶ್ರೀರಂಗಪಟ್ಟಣ, ತಲಕಾಡುಗಳವರೆಗೂ ಹೋಗುತ್ತಿತ್ತು. ದಕ್ಷಿಣದ ಚಿತ್ರದುರ್ಗ, ಅರಸೀಕೆರೆ, ಬೇಲೂರು, ದ್ವಾರಸಮುದ್ರ, ಶ್ರವಣ ಬೆಳಗೊಳ ಈ ನಗರಗಳು ಈ ಮುಖ್ಯ ರಸ್ತೆಗಳ ನಡುವೆ ಆಯಕಟ್ಟಿನ ಸ್ಥಳಗಳಲ್ಲಿದ್ದವು.

ವಿಜಯನಗರದ ಅರಸರ ಕಾಲದಲ್ಲಿಯ ವಾಣಿಜ್ಯ ವ್ಯವಹಾರದ ವೈಖರಿಯನ್ನು ವಿದೇಶಿ ಪ್ರವಾಸಿಗರಾದ ಪೇಯಜ್, ನ್ಯೂನಿಜ್, ಬಾರ್ಬೋಸ್ ಮೊದಲಾದವರು ವರ್ಣಿಸಿದ್ದಾರೆ. ರಾಜಧಾನಿಯಲ್ಲಿ ಮುತ್ತುರತ್ನಗಳನ್ನು ಬಹಿರಂಗವಾಗಿ ಮಾರಾಟ ಮಾಡುತ್ತಿದ್ದರೆಂದು ಅವರು ಆಶ್ಚರ್ಯವನ್ನುಂಟುಮಾಡುವಂತೆ ಬರೆದಿದ್ದಾರೆ. ಅದು ಚರಿತ್ರೆಯಲ್ಲಿ ಎಷ್ಟು ವಾಸ್ತವ ಎನ್ನುವುದು ಅಧ್ಯಯನಕಾರರಿಗೆ ಬಿಟ್ಟಿದ್ದು, ಆದರೆ ಕೃಷ್ಣದೇವರಾಯನ ಕಾಲದಲ್ಲಿ ಉತ್ತಮ ಕುದುರೆಗಳ ಖರೀದಿ ಮತ್ತು ಮಾರಾಟಗಳ ವ್ಯವಹಾರಕ್ಕಾಗಿ ಪೋರ್ಚುಗೀಸ್ ವರ್ತಕರೊಂದಿಗೆ ಆರಂಭವಾದ ಸ್ನೇಹ ಬಂದೂಕು ಮುಂತಾದ ಅಸ್ತ್ರಗಳ ಖರೀದಿಯವರೆಗೂ ಮುಂದುವರಿಯಿತು. ವಿಜಯನಗರದ ರಾಯರು ಪೋರ್ಚುಗಲ್‌ನೊಂದಿಗೆ ಸ್ನೇಹಸಂಬಂಧ ಬೆಳೆಸಿದ್ದರು. ಪೋರ್ಚುಗೀಸ್ ವರ್ತಕರು ಹವಳ, ಕೇಸರಿ, ಮಕಮಲ್‌ಬಟ್ಟೆ ಮತ್ತು ಚಾಕು ಚಾರುಗಳ ವ್ಯಾಪಾರವನ್ನು ಮಾಡುತ್ತಿದ್ದರು. ಬಾರ್ಬೋಸನ ದಿನಚರಿಯಲ್ಲಿ ವಿಜಯನಗರ ಸಾಮ್ರಾಜ್ಯದ ಬಂದರುಗಳಾದ ಹೊನ್ನಾವರ, ಭಟ್ಕಳಗಳ ಪ್ರಸ್ತಾಪ ಬರುತ್ತದೆ. ಈ ವೇಳೆಗಾಗಲೇ ಕರಾವಳಿಯಲ್ಲಿ ನೆಲೆಸಿದ್ದ ಮೂರ್ ಅರಬ್ ವರ್ತಕರ ಹಡಗುಗಳು ಓರ್ಮುಜ್‌ನಿಂದ ಕುದುರೆಗಳನ್ನೂ ಮುತ್ತುಗಳನ್ನೂ ತಾಮ್ರವನ್ನೂ ತರುತ್ತಿದ್ದವು. ಅವುಗಳನ್ನು ಒಳನಾಡಿಗೆ ಸಾಗಿಸಿ ಅಕ್ಕಿ, ಸಕ್ಕರೆ, ಕಬ್ಬಿಣ, ಮಸಾಲೆ ದಿನಸುಗಳನ್ನು ಹೇರಿಕೊಂಡು ಹೋಗುತ್ತಿದ್ದವು. ಕೇರಳದಿಂದ ಅನೇಕ ಮಲಬಾರಿ ಹಡಗುಗಳು ತೆಂಗಿನಕಾಯಿ, ತಾಳೆಬೆಲ್ಲ, ತೆಂಗಿನೆಣ್ಣೆ, ತಾಳೆ ಹೆಂಡವನ್ನು ವಿಜಯನಗರದ ಬಂದರುಗಳಿಗೆ ತರುತ್ತಿದ್ದವು. ಇಲ್ಲಿಂದ ಅಕ್ಕಿ, ಸಕ್ಕರೆ, ಸಾಂಬಾರ ಪದಾರ್ಥಗಳನ್ನು ಒಯ್ಯುತ್ತಿದ್ದವು. ಒಳನಾಡಿನ ವ್ಯಾಪಾರಿ ಕೇಂದ್ರವಾಗಿದ್ದ ಬಿದರೆ ನಗರದ ವರ್ಣನೆಯನ್ನೂ ಈ ದಿನಚರಿಗಳಲ್ಲಿ ನೋಡಬಹುದು.[೨೧೮] ವಾಣಿಜ್ಯ ವ್ಯವಸ್ಥೆ ಎಷ್ಟು ಸುಸಂಘಟಿತ ಆಗಿತ್ತು ಎಂಬುವುದಕ್ಕೆ ಒಂದು ನಿದರ್ಶನವನ್ನು ನ್ಯೂನಿಜ್ ಕೊಡುತ್ತಾನೆ.

"ರಾಯಚೂರು ಯುದ್ಧಕ್ಕೆಂದು ವಿಜಯನಗರದ ಭಾರೀ ಸೈನ್ಯ ಹೊರಟಾಗ ದಂಡು ಬೀಡುಬಿಟ್ಟಿದ್ದ ಪಾಳೆಯವನ್ನು ಬೀದಿಗಳಾಗಿ ವಿಂಗಡಿಸಿ ಪ್ರತಿಯೊಂದು ದಳವಾಯಿಯ ತಂಡಕ್ಕೂ ಪ್ರತ್ಯೇಕ ಅಂಗಡಿಗಳ ವ್ಯವಸ್ಥೆ ಮಾಡಲಾಗಿತ್ತು. ಇಲ್ಲಿ ಕುರಿ, ಕೋಳಿ, ಮೇಕೆ, ಹಂದಿ, ಮತ್ತು ಪಕ್ಷಿಗಳ ಮಾಂಸ ಹೇರಳವಾಗಿ ಮಾರಲಾಗುತ್ತಿತ್ತು. ಅಕ್ಕಿ ಮತ್ತು ಇತರೆ ಧಾನ್ಯಗಳು ಹೇರಳವಾಗಿ ಸಿಗುತ್ತಿದ್ದವು. ಚಿನ್ನದ ಒಡವೆ, ಮುತ್ತು, ಮಾಣಿಕ್ಯಗಳನ್ನು ಮಾರುವ ಅಂಗಡಿಗಳೂ ಇದ್ದವು, ಹುಲ್ಲು, ಸೊಪ್ಪುಸದೆಗಳ ಮೆದೆಗಳೂ ಹೇರಳವಾಗಿದ್ದುವು. ರಾಯಚೂರು ಬೆಂಗಾಡು ಪ್ರದೇಶ. ಆದರೆ ವಿಜಯನಗರದಲ್ಲಿದ್ದಂತೆಯೇ ಯಾರಿಗಾದರೂ ಭಾಸವಾಗುವ ಹಾಗಿತ್ತು."[೨೯೯] ೫೫೦ ಆನೆಗಳಿಗೆ ಬೇಕಾಗುವ ಹುಲ್ಲು ಎಷ್ಟಿದ್ದಿತು? ಅಪಾರ ಸಂಖ್ಯೆಯ ಸೈನಿಕರ ಸಂಖ್ಯೆಗೆ ಆಹಾರ ಒದಗಿಸುವ ವ್ಯವಸ್ಥೆಯ ಅಂದಾಜು ಮಾಡಿಕೊಂಡರೆ ಆಗಿನ ವ್ಯಾಪಾರಿಗಳ ಸಂಘಟನಾ ಸಾಮರ್ಥ್ಯ ತಿಳಿಯುತ್ತದೆ.

ನೀರಾವರಿ ಸೌಕರ್ಯಗಳೂ, ರಸ್ತೆ ಸಾರಿಗೆ ಸೌಲಭ್ಯಗಳೂ ಈ ಕಾಲದಲ್ಲಿ ಹೆಚ್ಚಿದವು. ಸ್ವಾಭಾವಿಕವಾಗಿ ಉತ್ಪಾದನೆ ಹೆಚ್ಚಿ ವ್ಯಾಪಾರಕ್ಕೆ ಉತ್ತೇಜನ ದೊರೆಯಿತು. ಬೇರೆ ದೇಶದ ವರ್ತಕ ಪ್ರಮುಖ ಪೃಥ್ವೀಶೆಟ್ಟಿ ಬಂದರೆ ಆತನಿಗೆ ಗೌರವದ ತಾಂಬೂಲ, ಉಡುಗೊರೆ, ಆತಿಥ್ಯದ ಭತ್ಯೆಗಳನ್ನು ಆಯಾ ಸ್ಥಳದ ನಾಗರಿಕರೂ ಅಧಿಕಾರಿಗಳೂ ಸೇರಿ ಕೊಟ್ಟು ಸನ್ಮಾನಿಸುವ ಸಂಪ್ರದಾಯವಿತ್ತು. ಏಕೆಂದರೆ ಇವನು ವ್ಯಾಪಾರದ ಮುಖ್ಯಸ್ಥರಾಗಿರುತ್ತಿದ್ದ. ವಿಜಯನಗರಕ್ಕೆ ದೊರೆಯುವ ವಜ್ರ ವಜ್ರಕರೂರಿನ ಗಣಿಯಿಂದ ಬರುತ್ತಿದ್ದವು. ಅನೇಕ ಬಗೆಯ ಗಣಿಯ ಉತ್ಪನ್ನಗಳು ಬಂದರು ಪ್ರದೇಶಗಳಿಗೆ ರಫ್ತಾಗುತ್ತಿದ್ದವು.

ಆಂತರಿಕ ವ್ಯಾಪಾರ ಉತ್ತೇಜನಕ್ಕೆ ಅನೇಕ ವರ್ತಕ ಸಮುದಾಯಗಳು ಶ್ರಮಿಸಿದವು. ಅದರಲ್ಲಿ ಬಣಜಿಗರು ವ್ಯಾಪಾರದಲ್ಲಿ ತೊಡಗಿದ್ದರು. ಬುಕಾನನ್‌ನು ಬಣಜಿಗರಲ್ಲಿ ನಾಲ್ಕು ವರ್ಗವನ್ನು ಗುರುತಿಸಿದ್ದಾನೆ. ಇದರಲ್ಲಿ ಬೃಹತ್ ವ್ಯಾಪಾರಿಗಳು ಸೇರಿದ್ದು ಇವರು ಕಚ್ಚಾ ಹತ್ತಿಯನ್ನು ವಿತರಿಸುವುದರ ಜೊತೆಗೆ ಹತ್ತಿಯ ನೂಲು ಮತ್ತು ತಯಾರಾದ ವಸ್ತ್ರಗಳನ್ನು ವಿತರಿಸುತ್ತಿದ್ದರು. ಗುಡರಗಳು ಗ್ರಾಮೀಣ ಮಾರುಕಟ್ಟೆಯ ವ್ಯಾಪಾರಿಗಳಿಂದ ಬಣ್ಣ ಹಾಕುವ ವಿವಿಧ ಸ್ವಾಭಾವಿಕ ಸರಕನ್ನು ಪೂರೈಸಿಕೊಳ್ಳುತ್ತಿದ್ದರು. ಸಂಚಾರ ಕಾರ್ಯಕ್ಕಾಗಿ ಇದ್ದ ವರ್ಗವನ್ನು ಬಡಿಗರು ಎಂದು ಕರೆಯುತ್ತಿದ್ದರು.[೩೦೦] ಮುಸ್ಲಿಂ ಹಾದರು, ಪಕಾನತ್ ಜೋಗರು, ಎರಲಿಗರು, ಲಂಬಾಣಿಗರು, ವಡ್ಡರು, ಕೊರವರು ವ್ಯಾಪಾರವನ್ನು ವೃತ್ತಿಯಾಗಿ ಅವಲಂಬಿಸಿದ್ದರು. ವಡ್ಡರಲ್ಲಿ ಸ್ತ್ರೀಪುರುಷರಾದಿಯಾಗಿ ಎತ್ತುಗಳು ಹಾಗೂ ಕತ್ತೆಗಳನ್ನು ಸಂಚಾರಕ್ಕೆ ಉಪಯೋಗಿಸಿಕೊಂಡು ವ್ಯಾಪಾರ ಮಾಡುತ್ತಿದ್ದರು. ಇವರು ಬೆಲ್ಲ, ಹುಣಸೆ, ಉಪ್ಪು ಹಾಗೂ ಧಾನ್ಯಗಳನ್ನು ವ್ಯಾಪಾರ ಮಾಡುತ್ತಿದ್ದರು. ಕೊರವರು ಸಣ್ಣ ವ್ಯಾಪಾರಿಗಳಾಗಿದ್ದು ಧಾನ್ಯ ಹಾಗೂ ಉಪ್ಪನ್ನು ಮಾರುತ್ತಿದ್ದರು.[೩೦೧] ಕುರುಬರು ಕಂಬಳಿ ನೇಯ್ಗೆಯಲ್ಲಿ ತುಂಬಾ ಪರಿಣಿತಿಯನ್ನು ಹೊಂದಿದ್ದರು. ಹೊಸದುರ್ಗ ತಾಲೂಕಿನ ಶ್ರೀರಾಮಪುರ (ಬೂದಿಹಾಳ್) ಕಂಬಳಿ ನೇಯ್ಗೆಗೆ ಹೆಸರುವಾಸಿಯಾಗಿತ್ತು. ಅಂದಿನ ಕಾಲದ ಕಂಬಳಿ ವ್ಯಾಪಾರದ ಪ್ರಮುಖ ಸರಕಾಗಿತ್ತು. ಇವರು ಹೊದಿಕೆಗಳನ್ನು ತಯಾರು ಮಾಡಿ ಅದನ್ನು ವ್ಯಾಪಾರಿಗಳಿಗೆ ಮಾರುತ್ತಿದ್ದರು. ಈ ಕಪ್ಪು ಹೊದಿಕೆಗಳು ಅಥವಾ ಕಂಬಳಿಗಳು ಮದ್ರಾಸ್, ಬೆಂಗಳೂರು, ಸಾಗರ ಇನ್ನಿತರೇ ಮಾರುಕಟ್ಟೆಯಲ್ಲಿ ಮಾರಾಟ ಮಾಡುವ ಸರಕಾಗಿತ್ತು. ಆ ಮೂಲಕ ಕುರಿಗಳ ವ್ಯಾಪಾರವು ಸಹ ಬಂಡವಾಳದ ವ್ಯಾಪಾರವಾಗಿ ಪರಿವರ್ತನೆ ಹೊಂದಿತು. ಜಗಳೂರು ಇಂದಿಗೂ ಕೋಡು ಕುರಿಗೆ ಹೆಸರಾಗಿದೆ. ಅಂದಿನ ಕಾಲದ ಬೃಹತ್ ಮಾರುಕಟ್ಟೆಯಾಗಿ

ಕುರಿ ವ್ಯಾಪಾರಕ್ಕೆ ಜಗಳೂರು ಸೀಮೆ ಪ್ರಮುಖವಾಗಿತ್ತು. ಕುರುಬ ಹಾಗೂ ಇನ್ನಿತರೇ ಸಮುದಾಯಗಳು ಕುರಿಸಾಕಾಣಿಕೆಯನ್ನು ಮಾಡುತ್ತಿದ್ದರು. ಈ ಕುರಿತಾಗಿ ಬುಕಾನನ್ ದಾಖಲಿಸಿದ್ದಾನೆ.[೨೨೨]

ಹತ್ತಿ, ಅಡಿಕೆ, ಶೇಂಗಾ, ತಂಬಾಕು ಚಿತ್ರದುರ್ಗ ಪ್ರದೇಶದ ಮುಖ್ಯ ವ್ಯಾಪಾರೀ ಸರಕಾಗಿದ್ದು, ಇದರಲ್ಲಿ ಇಕ್ಕೇರಿ ಅಥವಾ ಕೆಳದಿ (ಶಿವಮೊಗ್ಗ ಜಿಲ್ಲೆ)ಯಿಂದ ಬರುವ ಅಡಿಕೆ ವ್ಯಾಪಾರ ಮಹತ್ವದ್ದು. ಹಾಗೆಯೇ ಕರಿಮೆಣಸು ಕೊಡಿಯಾಲ (ಮಂಗಳೂರು)ದಿಂದ ಬಂದು ಬಾರಾಮಹಲ್ (ತಮಿಳುನಾಡಿನಲ್ಲಿ) ಮತ್ತು ಅರ್ಕಾಟ್‌ಗೆ ಹೋಗುತ್ತಿತ್ತು. ಅನಂತರದ ಮುಖ್ಯವಸ್ತು ಶ್ರೀಗಂಧವಾಗಿತ್ತು. ನಗರ ಘಟ್ಟದ ಕಡೆಯಿಂದ ಬರುತ್ತಿದ್ದ ಉತ್ತಮ ಜಾತಿಯ ಶ್ರೀಗಂಧವು ಮಧುರೆ, ದೇವರಾಯ ದುರ್ಗದಿಂದ ಹಾಗೂ ಕಚ್ಚಾಳದಿಂದ ಬರುವುದು ಕೆಳಜಾತಿಯದಾಗಿತ್ತು. ಚಿತ್ರದುರ್ಗ ಮಾರುಕಟ್ಟೆಯಲ್ಲಿ ಮಧ್ಯವರ್ತಿಗಳು ಖರೀದಿಸಿ ಶ್ರೀಗಂಧವನ್ನು ಚೀನಾ ಮತ್ತು ಪಶ್ಚಿಮ ಏಷ್ಯಾಕ್ಕೆ ಕೊಂಡೊಯ್ಯುತ್ತಿದ್ದರು. ಚಿತ್ರದುರ್ಗ ಪ್ರದೇಶದ ಕಂಬಳಿಗಳು ಅಷ್ಟೇ ಅಲ್ಲದೆ ಮಧುಗಿರಿ, ಶಿರಾ, ಗೌರಿಬಿದನೂರು ಪ್ರದೇಶಗಳಿಂದ ಕಂಬಳಿಗಳು ಬರುತ್ತಿತ್ತು. ಮುಖ್ಯ ಸರಕು, ಗಂಧಕಿ(ಗಂಧಿಗೆ)[೨೨೩] ಔಷಧ ಮೂಲಿಕೆಗಳ ವ್ಯಾಪಾರ ಮಾಡುವವರಿದ್ದು ಇವರಲ್ಲಿ ಬಣಜಿಗರು ಹಾಗೂ ಲಾಡರು ಮುಖ್ಯರಾಗಿದ್ದರು.

ಚಿತ್ರದುರ್ಗ ಪ್ರದೇಶದ ಹತ್ತಿಯ ಪ್ರಮಾಣ ದೊಡ್ಡದಾಗಿತ್ತು. ಇದು ಮುಂಬೈ ಪ್ರೆಸಿಡೆನ್ಸಿ (ಈಗ ಕೃಷ್ಣೆಯ ಉತ್ತರದ ಪ್ರದೇಶ) ನಿಜಾಮರ ರಾಜ್ಯ, ನರಗುಂದ, ನವಲಗುಂದ, ಸವಣೂರು, ಹುಬ್ಬಳ್ಳಿ, ಆದೋನಿಗಳಿಂದ ಬರುತ್ತಿದ್ದು, ಬೆಂಗಳೂರಲ್ಲಿ ಸ್ಥಳೀಯ ವ್ಯಾಪಾರಿಗಳು ಇದನ್ನು ಸಗಟಾಗಿ ಖರೀದಿಸಿ ಚಿತ್ರದುರ್ಗ, ತುಮಕೂರು, ಶಿರಾ, ಮತ್ತು ನಗರದಂತಹ ಮಾರುಕಟ್ಟೆಗಳಲ್ಲಿ ಮಾರುತ್ತಿದ್ದರು.[೨೨೪] ಲೋವರ್ ಕರ್ನಾಟಿಕ್ (ಆರ್ಕಾಟುವರೆಗೆ)ನಿಂದ ಭಾರೀ ಪ್ರಮಾಣದಲ್ಲಿ ಉಪ್ಪು ಬರುತ್ತಿದ್ದು ಅದನ್ನು ತಂದವರು ಇಲ್ಲಿಂದ ಹುಣಸೇಹಣ್ಣು, ಎಣ್ಣೆಬೀಜ ಮತ್ತು ಧಾನ್ಯ ಒಯ್ಯುತ್ತಿದ್ದರು.[೨೨೫] ಹಾಗೆಯೇ ಈ ಪ್ರದೇಶದಲ್ಲಿ ಮಣ್ಣು ಉಪ್ಪು ತಯಾರಿಯಾಗುತ್ತಿತ್ತು. ನಗರದಿಂದ (ಶಿವಮೊಗ್ಗ ಜಿ) ಅಡಿಕೆ, ಕರಿಮೆಣಸು, ಶ್ರೀಗಂಧ, ಏಲಕ್ಕಿ, ಆಹಾರಧಾನ್ಯ, ತಂಬಾಕು ಬರುತ್ತಿದ್ದು, ಇಲ್ಲಿಂದ ಕಂಬಳಿ, ಬಟ್ಟೆ, ಕಾಗದ ಇವೆಲ್ಲ ನಗರಕ್ಕೆ ಹೋಗುತ್ತಿದ್ದರೂ ನಗರದ ವ್ಯಾಪಾರಿಗಳು (ಮುಕ್ಕಾಲು ಪಾಲು) ನಗದನ್ನೇ ಒಯ್ಯುತ್ತಿದ್ದರು.[೨೨೬] ಶ್ರೀರಂಗ ಪಟ್ಟಣದಿಂದ ಕರಿಮೆಣಸು, ಶ್ರೀಗಂಧ, ಏಲಕ್ಕಿ ಚಿತ್ರದುರ್ಗಕ್ಕೆ ಬಂದರೆ, ಅಲ್ಲಿಗೆ ಒಯ್ಯುವುದು ಸ್ಥಳೀಯ ಜವಳಿಯವರೇ ಆಗಿದ್ದರು. ಗುಬ್ಬಿಯಿಂದ ಮೆಣಸು, ಅಡಿಕೆ, ತೆಂಗು, ಅರಿಸಿನಗಳು ಬಂದರೆ ಇಲ್ಲಿಂದ ಗುಬ್ಬಿಗೆ ಸ್ಥಳೀಯ ಉತ್ಪನ್ನಗಳು ಹಾಗೂ ಬಾರಿ ಪ್ರಮಾಣದಲ್ಲಿ ನಡೆಯುವ ಎತ್ತಿನ ವ್ಯಾಪಾರಿ ಕೇಂದ್ರಗಳಾಗಿರುವ ಶಿಬಾರ, ಕಲ್ಲೇದೇವರಪುರಗಳಿಂದ ಎತ್ತುಗಳನ್ನು ಕೊಂಡು ಹೊಸಕೋಟೆ, ಕೋಲಾರಗಳಿಗೆ ಒಯ್ಯುತ್ತಿದ್ದರು. ದೊಡ್ಡ ಬಳ್ಳಾಪುರದಿಂದ ಒಳ್ಳೆಯ ಕೆಂಪು ಬಟ್ಟೆ ಬರುತ್ತಿತ್ತು. ಕೋಲಾರ ಕಡೆಯ ನಾಮಗೊಂಡ್ಲುವಿನಿಂದ ಬೆಲ್ಲ, ಕಚ್ಚಾ ಸಕ್ಕರೆ, ಕಲ್ಲು ಸಕ್ಕರೆ ಬರುತ್ತಿತ್ತು. ಹಾಗೆಯೇ ಸ್ಥಳೀಯವಾಗಿ ಮಗ್ಗಗಳಿಂದ ಉತ್ಪಾದನೆಗೊಂಡ ಹತ್ತಿ ಬಟ್ಟೆ ಹಾಗೂ ಕಂಬಳಿಗಳು ಬಹುಪಾಲು ಮಂಗಳೂರು ಬಂದರಿಗೆ ಒಯ್ಯುತ್ತಿದ್ದರು.[೨೨೭] ವಿದೇಶಗಳಿಂದ ಬರುವ ಎಲ್ಲ ವಸ್ತುಗಳು ಕಲ್ಲಿಕೋಟೆ ಬಂದರಿನಿಂದ ತರಲ್ಪಟ್ಟು, ಬಣ್ಣದ ಬಟ್ಟೆಯನ್ನು ಅಲ್ಲಿಗೆ ತೆಗೆದುಕೊಂಡು ಹೋಗುತ್ತಿದ್ದರು. 'ಈಗ ಹಿಂದಿಗಿಂತ ಈ ವ್ಯವಹಾರ ತುಂಬಾ ಕಡಿಮೆಯಾಗಿದೆ' ಎಂದು ಕಲ್ಲಿಕೋಟೆಯ ಬಗ್ಗೆ ಬುಕಾನನ್ ಹೇಳುತ್ತಾನೆ. ಬಳ್ಳಾರಿ, ಆದೋನಿ, ಅಂಗಡಿ, ಧಾರವಾಡ, ಹುಬ್ಬಳ್ಳಿ, ನರಗುಂದ, ನವಲಗುಂದ, ಗುತ್ತಿಗಳಿಂದ

ಬರುವ ವ್ಯಾಪಾರಿಗಳು ಕೃಷ್ಣಾ ನದಿಯ ದಕ್ಷಿಣ ಪ್ರದೇಶ, ಮುಂಬೈ ಪ್ರಾಂತ ಮತ್ತು ನಿಜಾಮರ ರಾಜ್ಯದಿಂದ ಹತ್ತಿ, ಹತ್ತಿಬಟ್ಟೆ, ಧೋತ್ರ (ರೇಷ್ಮೆ ಅಂಚಿರುವ ಹತ್ತಿ ಬಟ್ಟೆ) ಕಂಬಳಿ, ಗೋಧಿ, ಇಂಗು ಇವನೆಲ್ಲ ತಂದು ಬಣ್ಣ ಮತ್ತು ರೇಷ್ಮೆಯ ಬಟ್ಟೆಯನ್ನು ಒಯ್ಯುತ್ತಿದ್ದರು. ಇಲ್ಲವೆ ನಗದನ್ನೇ ಒಯ್ಯುತ್ತಿದ್ದರು. ಪ್ರಾಣಿಗಳ ಮೇಲೆ ಸರಕು ಸಾಗಿಸುವ ಕೆಲವು ಗೋಸಾವಿ ವ್ಯಾಪಾರಿಗಳು ಕಾಶ್ಮೀರದಿಂದ ಶಾಯಿ, ಪುನುಗು ಮತ್ತು ಕೇಸರಿಗಳನ್ನು ಹಾಗೂ ಸೂರತ್‌ನಿಂದ ಪರ್ಶಿಯಾದ ಮುತ್ತುಗಳನ್ನು ತಂದು ಹಣ ಮತ್ತು ಸ್ಥಳೀಯವಾಗಿ ಮಾರಾಟ ಮಾಡುತ್ತಿದ್ದ ಮನ್ನಾರಿನ ಮುತ್ತುಗಳನ್ನು ಕೊಂಡೋಗುತ್ತಿದ್ದರು.[೨೨೮]

ಆರ್ಕಾಟು ನವಾಬರ ರಾಜ್ಯದಿಂದ (ಮುಖ್ಯವಾಗಿ ವಾಲ್ಲಾಜಪೇಟೆಯಿಂದ) ಕಾಗದ, ಕಬ್ಬಿಣದ ಸಾಮಾನು ಗಾಜಿನ ಸಾಮಾನು ಮತ್ತು ಕನ್ನಡಿ, ಬಂಗಾಳ, ಚೀನಾ, ಕಾಂಚಿಯಿಂದ ಆರಣಿಯ ರೇಷ್ಮೆ, ಹತ್ತಿಬಟ್ಟೆ, ಇಂಗ್ಲೆಂಡಿನ ಎಣ್ಣೆ ಬಟ್ಟೆ, ಗಾಜಿನ ಸಾಮಾನು, ಕ್ಯಾನ್ವಾಸ್, ಕಾಗದ, ಕಂಬಳಿ, ಉಪ್ಪು ಗಂಧಕ, ತವರ, ಬಣ್ಣ ಸೀಸ, ಸತು, ತಾಮ್ರ, ಮದ್ದು, ಪೊಟ್ಟಣ ಕಟ್ಟುವ ದಾರ, ಗೋಣಿಚೀಲ ಚಿತ್ರದುರ್ಗಕ್ಕೆ ಬರುತ್ತಿತ್ತು. ಚೀನಾ, ಬಂಗಾಳಗಳಿಂದ ಸಕ್ಕರೆ, ಖರ್ಜೂರ, ಮತ್ತು ಬಾದಾಮಿ ತರುತ್ತಿದ್ದರು. ಮದ್ರಾಸ್ ಜೊತೆ ನೇರ ವ್ಯಾಪಾರ ಸಂಪರ್ಕ ನಡೆಸಲು ಇಲ್ಲಿನ ಗುಜರಾತಿ ವ್ಯಾಪಾರಿಗಳು ಯತ್ನಿಸುತ್ತಿದ್ದರು. ಎಲ್ಲ ವಿಧದ ವಸ್ತುಗಳನ್ನು ಎತ್ತಿನ ಹೇರಿನಲ್ಲಿ ಸಾಗಿಸುತ್ತಿದ್ದರು. ಹತ್ತಿಯ ಸಾರಿಗೆಗೆ ಉತ್ತಮ ಜಾತಿಯ ಎತ್ತುಗಳನ್ನು ಬಳಸುತ್ತಿದ್ದು, ಹತ್ತಿ ಬೆಳೆಯುವ ಪ್ರದೇಶಕ್ಕೆ ಸೇರಿದ ಪಂಚಮ ಬಣಜಿಗರು ಈ ಎತ್ತುಗಳನ್ನು ಹೊಂದಿರುತ್ತಿದ್ದರು. ಈ ಜನ ಕನ್ನಡ ಭಾಷಿಕರಾದರೂ, ಚಿತ್ರದುರ್ಗದ ಪಂಚಮ ಬಣಜಿಗರ ಜೊತೆ ವಿವಾಹ ಸಂಬಂಧ ಬೆಳೆಸುತ್ತಿರಲಿಲ್ಲ. ಎತ್ತರದ ದೇಹ ದಾಢ್ಯತೆ ಜಾತಿಯ ಕೋಣಗಳನ್ನು ಹತ್ತಿ ಸಾರಿಗೆಗೆ ಬಳಸುತ್ತಿದ್ದರು. ಧಾನ್ಯ, ಉಪ್ಪು ಸಾಗಿಸುವವರು ಕತ್ತೆಗಳನ್ನು ಸಾರಿಗೆಗೆ ಬಳಸುತ್ತಿದ್ದರು.

ಸ್ಥಳೀಯ ಜನರು ಹೊಲಿದ ಬಟ್ಟೆ ಬಳಸುವುದು ಕಡಿಮೆಯಾಗಿತ್ತು. ನೇಕಾರನಿಂದ ಬರುವ ಬಟ್ಟೆಯನ್ನು ಹಾಗೇ ದೇಹದ ಸುತ್ತ ಸುತ್ತಿಕೊಳ್ಳುತ್ತಿದ್ದರು. ಮಹಿಳೆಯ ಉಡುಗೆಗೆ 'ಶಿರ' ಎನ್ನುತ್ತಿದ್ದರು. ಪುರುಷರು ದೋತ್ರವನ್ನು ಧರಿಸುತ್ತಿದ್ದರು.[೨೨೯]

ಮೊಳಕಾಲ್ಮೂರು ಪಟ್ಟಣದಲ್ಲಿ ಪಟ್ವೆಗಾರರು ಶ್ರೇಷ್ಠ ರೇಷ್ಮೆ ನೇಯುತ್ತಿದ್ದು; ಇದು ಗಟ್ಟಿಯಾದ ಉಡುಗೆಯಾಗಿತ್ತು. ಪಟ್ವೆಗಾರರು ರೇಷ್ಮೆ ಮತ್ತು ಬಟ್ಟೆಯ ನೇಯ್ಗೆಯಲ್ಲಿ ವಿವಿಧ ವಿನ್ಯಾಸಗಳನ್ನು (ಸೀರೆ, ಕಿರಿಗೆ, ಕುಪ್ಪಸದ ಬಟ್ಟೆಗಳಲ್ಲಿ) ಮಾಡಬಲ್ಲವರಾಗಿದ್ದರು. ಬಿಳಿಯ ಸಾದಾ ಮಸ್ಲಿನ್ ಅನ್ನೂ ಕೂಡ ಅವರು ನೇಯ ಬಲ್ಲವರಾಗಿದ್ದರು. ರೇಷ್ಮೆ ಅಂಚಿನ ಹಸಿರು ಮಸ್ಲಿನ್ ಅನ್ನು ಪಟ್ವೆಗಾರರು ಮಾಡಬಲ್ಲರಾದರೂ ದೇವಾಂಗದವರಷ್ಟು ಚೆನ್ನಾಗಿ ಅಲ್ಲ. ತಮ್ಮ ರೇಷ್ಮೆ ನೂಲಿಗೆ ಪಟ್ವೆಗಾರರು ತಾವೇ ಬಣ್ಣ ಹಾಕುತ್ತಿದ್ದರು. ಮಬ್ಬಾದ ಕಿತ್ತಳೆ, ಅರಿಸಿನ ಬಣ್ಣಗಳನ್ನು ಹಾಕುವ ಪಟ್ವೆಗಾರರು, ಅರಿಸಿನ ಬಣ್ಣ ಹಾಕಿದ ರೇಷ್ಮೆಯನ್ನು ನೀಲಗಾರರಿಗೆ ಕೊಟ್ಟು ಅದನ್ನು ಹಸಿರು ಬಣ್ಣದ್ದಾಗಿ ಮಾಡಿಸಿಕೊಳ್ಳುತ್ತಿದ್ದರು. ಒಣಗಿಸಿದಾಗ ಈ ಬಣ್ಣ ಸಾಕಷ್ಟು ಪಕ್ಕಾ ಆಗುತ್ತಿತ್ತು.[೨೩೦]

ನೀಲಗಾರು ಎಲ್ಲ ಬಣ್ಣಗಳನ್ನೂ ಹಾಕುತ್ತಿದ್ದು, ಅದರಲ್ಲಿ ನಸು ಅಥವಾ ಕಡು ನೀಲ, ಆಕಾಶನೀಲ, ನೇರಳೆ ಬಣ್ಣಗಳು ಸೇರಿದ್ದವು. ಕೆಂಪು ಮತ್ತು ಕಿತ್ತಳೆ ಬಣ್ಣದ ರೇಷ್ಮೆಗೆ ಬೇಡಿಕೆ ಹೆಚ್ಚು ಪಟ್ವೆಗಾರರಂತೆ ಅದೇ ವರ್ಗದ ಬಟ್ಟೆಯನ್ನು ಉತ್ಪಾದಿಸುವ ಕತ್ತೇರಿ[೨೩೧] ಎಂಬ ಜನರಿದ್ದರು. ಶಯನಗಾರು, ಕನ್ನಡ

ದೇವಾಂಗ ಮತ್ತು ತಲಿಗದೇವಾಂಗ ಬೇರೆ ವರ್ಗದ ನೇಕಾರರಾಗಿದ್ದರು. ಇವರು ನೂಲನ್ನು ಪೇಟೆಯಲ್ಲಿ ಖರೀಸಿಸುತ್ತಿದ್ದರು. ಕೆಂಪು ನೂಲು ಆದವಾನಿ, ಬಳ್ಳಾರಿ ಮತ್ತು ಕೃಷ್ಣಾನದಿ ಪರಿಸರದಿಂದ ಬರುತ್ತಿತ್ತು. ನೀಲದ ಬೇರೆ ಬೇರೆ ಛಾಯೆಯ ಬಣ್ಣ ಹಾಕುವವರು ನೀಲಗಾರರು ದೇವಾಂಗದವರು ಹತ್ತಿ ಬಟ್ಟೆಗೆ ದಾಳಿಂಬೆ ಹೂವಿನಂಥ ಕೆಂಪು ಬಣ್ಣ ಹಾಕುತ್ತಿದ್ದರು. ದೇವಾಂಗದವರು ಕಡು ನೀಲಿ ಬಣ್ಣ ಬಟ್ಟೆ ತಯಾರಿಸುತ್ತಿದ್ದು, ಇದನ್ನು ಅವರು ಕಂಪ್ಪು ಅನ್ನುತ್ತಿದ್ದರು. ಈ ನೇಕಾರರು ತಾವು ವ್ಯಾಪಾರಿಗಳಿಂದ ಮುಂಗಡ ಇಲ್ಲವೆ ಲೇವಾದೇವಿಗಾರ('ಬ್ಯಾಂಕರ್ಸ್')ರಿಂದ ಸಾಲ ಪಡೆಯುತ್ತಿದ್ದರು. ಅವರು ತಮ್ಮ ಬಟ್ಟೆಗಳನ್ನು ಗ್ರಾಹಕರಿಗೆ ಇಲ್ಲವೆ ವ್ಯಾಪಾರಿಗಳಿಗೆ ನೇರವಾಗಿ ಮಾರುತ್ತಿದ್ದರು. ತಾವೇ ಪೇಟೆಗೆ ತರುತ್ತಿರಲಿಲ್ಲ. ಇವರ್ಯಾರೂ ನೇಯ್ಗೆ ಬಿಟ್ಟು ಬೇರೆ ಉದ್ಯೋಗ ಮಾಡುತ್ತಿರಲಿಲ್ಲ. ಅವರಲ್ಲಿ ಅನೇಕರು ಶ್ರೀಮಂತರು, ಸೇವರಿಗೆ ತಿಂಗಳಿಗೆ ೨೦ ಪಣ ಕೂಲಿ ಕೊಡುತ್ತಿದ್ದರು. (ಇದು ಎರಡು ವರಹ ಆಗುತ್ತದೆ)[೨೩೨]

ಮುಸ್ಲಿಮರು 'ಬಿಳಿಮಗ್ಗ' ಎಂದು ಕರೆಯುವ ಒಂದು ಜಾತಿಯವರು ನಾನಾ ರೀತಿಯ ಬಿಳಿ ಮಸ್ಲಿನ್ ಬಟ್ಟೆ ನೇಯುತ್ತಿದ್ದರು. ಇವರಲ್ಲಿ ಶಯನಗಾರರು, ಪದ್ಮಶಾಲಿ ಮತ್ತು ಸಮಯ ಸಾಲಿಯವರು ಸೇರಿದ್ದರು. ಪದ್ಮಸಾಲಿಯವರ ಕುಟುಂಬ ಸದಸ್ಯರೆಲ್ಲ ಸೇರಿ ದುಡಿಯುತ್ತಿದ್ದರು. ಆದರೆ ಸಮಯಸಾಲಿಯವರು ಹೆಚ್ಚಾಗಿ ನೌಕರರನ್ನು ಇಟ್ಟುಕೊಳ್ಳುತ್ತಿದ್ದರು. ಈ ಎರಡು ವರ್ಗಗಳ ಜನ ಕೃಷಿಕರಿಗಿಂತ ಹೆಚ್ಚು ಅನುಕೂಲವಂತರಾಗಿದ್ದರು. ಒಳ್ಳೆಯ ಕೆಲಸಗಾರರ ನೌಕರರು ದಿನಕ್ಕೆ ಒಂದು ಪಣ ಗಳಿಸಬಹುದಾಗಿತ್ತು. ಆದರೆ ಇವರು ಸದಾ ಒಡೆಯನ ಸಾಲದಲ್ಲಿ ಇರುತ್ತಿದ್ದರು.[೨೩೩] ಇದು ಕೃಷಿ ಕಾರ್ಮಿಕರ ಜೀತದಂತೆ ಕಂಡುಬರುತ್ತದೆ. ಹೊಸದುರ್ಗ ಪರಿಸರದಲ್ಲಿ ತೊಗಟರು ಭಾರವಾದ ದಪ್ಪ ಬಟ್ಟೆ ನೇಯುತ್ತಿದ್ದು, ಇದಕ್ಕೆ ಕೆಂಪು ಅಂಚು ಇದ್ದು ಎಲ್ಲ ಸಾಮಾನ್ಯ ಜನ ಉಡುವ ಬಟ್ಟೆಯಿದಾಗಿತ್ತು. ಇದೇ ಜನ 'ರುಮಾಲ್' ಎಂಬ ಕೆಂಪು ಅಂಚಿನ ಕರವಸ್ತ್ರದಂಥ ಬಟ್ಟೆ ತಯಾರಿಸುತ್ತಿದ್ದು, ಇದು ಮೂರರಿಂದ ಐದು ಗೇಣು ಅಂಚಿನ ಚೌಕವಾಗಿದ್ದು, ಬಡವರು ಇದನ್ನು ತಲೆಗೆ ಸುತ್ತಿಕೊಳ್ಳುತ್ತಿದ್ದರು. ಇವರು ಕೃಷಿಕಾರ್ಯ ಮಾಡುವವರಾಗಿದ್ದರು.[೨೩೪]

ಬಟ್ಟೆ ವ್ಯಾಪಾರಿಗಳಾದ ನಗರ್ತರು ಚಿತ್ರದುರ್ಗ ಪರಿಸರದಲ್ಲಿ ದೂರದಿಂದ ಭಾರೀ ಬೇಡಿಕೆ ಇಲ್ಲವಾದಲ್ಲಿ ನೇಯ್ಗೆಯವರಿಗೆ ಮುಂಗಡ ಕೊಡುವ ಪರಿಪಾಠವಿರಲಿಲ್ಲ. ಬೇಡಿಕೆ ಇದ್ದಾಗ ಬಟ್ಟೆಯ ಬೆಲೆಯ ಅರ್ಧದಷ್ಟು ಮುಂಗಡ ಕೊಡುತ್ತಿದ್ದರು. ಸಾಲದ ಅವಧಿ ಮೂರು ತಿಂಗಳು; ಇದಕ್ಕೆ ಬಡ್ಡಿ ಇರಲಿಲ್ಲ. ಇಲ್ಲಿನ ಬಟ್ಟೆ ನಗರ, ಶ್ರೀರಂಗಪಟ್ಟಣ, ಚನ್ನರಾಯಪಟ್ಟಣ, ಸಿರಾ, ಮಧುಗಿರಿ, ದೇವನಹಳ್ಳಿಗಳಿಗೆ ಹೋಗುತ್ತಿತ್ತು. ಸ್ವಲ್ಪ ಪ್ರಮಾಣದ ರೇಷ್ಮೆ, ಹತ್ತಿಬಟ್ಟೆ ಹಾಗೂ ಕುಪ್ಪಸದ ಅರಿವೆ ದಕ್ಷಿಣ ಕರ್ನಾಟಕ, ತಮಿಳುನಾಡುಗಳಿಗೆ ಹೋಗುತ್ತಿತ್ತು. ಎಲ್ಲ ರೀತಿಯ ಬಟ್ಟೆಗೂ ಮಂಗಳೂರಿನ ವ್ಯಾಪಾರಿಗಳಿಂದ ತುಂಬಾ ಬೇಡಿಕೆ ಇತ್ತು.[೨೩೫]

ಚಿತ್ರದುರ್ಗ ಪ್ರದೇಶದ ಸಂತೆಗಳು ಕೆಲವು ಪ್ರದೇಶಗಳಲ್ಲಿ ಪ್ರತಿನಿತ್ಯ ಹಾಗೂ ಕೆಲವು ಪಟ್ಟಣಗಳಲ್ಲಿ ವಾರಕೊಮ್ಮೆ ಸೇರುತ್ತಿದ್ದವು. ಈ ಸಂತೆ ಅಥವಾ ಮಾರುಕಟ್ಟೆಗಳಲ್ಲಿ ಸ್ಥಳೀಯವಾಗಿ ಧಾನ್ಯಗಳು, ಬೇಳೆಕಾಳುಗಳು, ಗೋಧಿ, ತರಕಾರಿ, ಉಪ್ಪು, ಹುಣಸೆಹಣ್ಣು, ಸಾಂಬಾರು ಪದಾರ್ಥಗಳು, ತೆಂಗು, ತುಪ್ಪ, ಬೆಲ್ಲ, ಸಕ್ಕರೆ, ವೀಳ್ಯದೆಲೆ, ಅಡಿಕೆ, ಬಣ್ಣದ ವಸ್ತುಗಳು, ಕಬ್ಬಿಣ, ತಾಮ್ರದ ಲೋಹಗಳು, ಕಚ್ಚಾ

ಹತ್ತಿ, ಉಕ್ಕಿನ ಉಳಿಗಳು, ಗೋಣಿಚೀಲಗಳು ಇತ್ಯಾದಿ ದೊರೆಯುತ್ತಿದ್ದು ಇಲ್ಲಿ ಅನೇಕ ವರ್ತಕರು ಭಾಗವಹಿಸುತ್ತಿದ್ದರು. ಇದು ಸ್ಥಳೀಯ ವ್ಯಾಪಾರವನ್ನು ಸೂಚಿಸುತ್ತದೆ. ಸ್ಥಳೀಯವಾಗಿ ಅಷ್ಟೇ ಅಲ್ಲದೇ ವಿದೇಶಿ ವ್ಯಾಪಾರಕ್ಕೆ ಹೆಚ್ಚಿನ ಮಹತ್ವ ನೀಡಿದ್ದು, ಇದೇ ಕಾಲದಲ್ಲಿ ಅಂದರೆ ಇದು ದಿಡೀರ್ ನಾಯಕರ ಕಾಲದಲ್ಲಿಯೇ ಆರಂಭವಾದುದ್ದು ಅಲ್ಲ. ಅದು ಪ್ರಾಚೀನ ಕಾಲದಿಂದಲೂ ಮುಂದುವರೆದುಕೊಂಡು ಬಂದ ವ್ಯಾಪಾರದ ವೃತ್ತಿ, ವಿಶೇಷವಾಗಿ ಕಂಪನಿ ವ್ಯಾಪಾರ ಆರಂಭವಾಗಿದ್ದೇ ವಿಜಯನಗರ ಕಾಲದಲ್ಲಿ. ಹಾಗಾಗಿ ವಿಜಯನಗರ ಕಾಲದಿಂದ ಮುಂದುವರೆದುಕೊಂಡು ಬಂದಿರುವ ಅನೇಕ ಬಂದರುಗಳ ಮೂಲಕ ನಾಯಕರ ಕಾಲದಲ್ಲಿಯೂ ಸಹ ವ್ಯಾಪಾರ ಮುಂದುವರೆದುಕೊಂಡು ಬಂತು.

ಪಶ್ಚಿಮದ ಪರ್ಶಿಯಾ, ಅರೇಬಿಯಾ, ಓರ್ಮೆಜ್, ಮಾಲ್ಡೀವ್ಸ್, ದಕ್ಷಿಣ ಆಫ್ರಿಕ, ಈಜಿಪ್ಟ್, ಜಾವ, ಸುಮಾತ್ರ, ಶ್ರೀಲಂಕಾ, ಉತ್ತರದ ಚೈನಾ ದೇಶಗಳೊಡನೆ ವಿಜಯನಗರೋತ್ತರ ಕಾಲದ ನಾಯಕರು ವ್ಯಾಪಾರ ಸಂಪರ್ಕ ಹೊಂದಿದ್ದರು. ಗೋವಾ, ಬಾರಕೂರು, ಕಾರವಾರ, ಅಂಕೋಲ, ಬಸ್ರೂರು, ಬೈಂದೂರು, ಭಟ್ಕಳ, ಹೊನ್ನಾವರ, ಮಂಗಳೂರು, ಕಲ್ಲಿಕೋಟೆ, ಕೊಚ್ಚಿನ್‌ಗಳು ಪಶ್ಚಿಮ ಕರಾವಳಿಯ ಪ್ರಸಿದ್ಧ ಬಂದರುಗಳಾಗಿ ವಿದೇಶಿ ವ್ಯಾಪಾರಕ್ಕೆ ಹೆಸರಾಗಿದ್ದವು. ಮಲಬಾರ್ ಮತ್ತು ಕೊಂಕಣ ಕರಾವಳಿ ವ್ಯಾಪಾರವು ಪೋರ್ಚುಗೀಸರ ಕೈಯಲ್ಲಿತ್ತು. ೧೫೦೦ರ ನಂತರ ಅವರು ಭಾರತದ ವ್ಯಾಪಾರ ಏಕಸ್ವಾಮ್ಯ ಹೊಂದಿದ್ದ ತಮ್ಮ ಪ್ರತಿಸ್ಪರ್ಧಿಗಳಾದ ಅರಬ್ಬರನ್ನು ಓಡಿಸಿದರು. ಅವರಿಗೆ ಮಂಗಳೂರು, ಹೊನ್ನಾವರ ಮತ್ತು ಭಟ್ಕಳಗಳಲ್ಲಿ ಗೋದಾಮುಗಳಿದ್ದವು. ಪೋರ್ಚುಗೀಸರು ಅರೇಬಿಯಾದಿಂದ ಗೋವಾ ಮೂಲಕ ವಿಜಯನಗರ ಅರಸರಿಗೆ ಕುದುರೆಗಳನ್ನು ಪೂರೈಸುತ್ತಿದ್ದರು.[೨೩೬]

ಅದೇ ಮಾದರಿಯಲ್ಲಿ ನಾಯಕರಿಗೂ ಕುದುರೆಗಳು ಸರಬರಾಜು ಆಗುತ್ತಿದ್ದವು. ಈ ಬಂದರುಗಳ ಮೂಲಕ ಅಕ್ಕಿ, ಸಕ್ಕರೆ, ಮೆಣಸು, ಹತ್ತಿಬಟ್ಟೆ, ಲೋಹಗಳು ಮಾರಾಟವಾಗುತ್ತಿದ್ದವು. ಭಟ್ಕಳದಿಂದ ಅಕ್ಕಿ ಮತ್ತು ಸಕ್ಕರೆ ರಫ್ತಾಗುತ್ತಿದ್ದವು. ಭಟ್ಕಳದಿಂದ ಹೇರುಗಟ್ಟಲೆ ಕಬ್ಬಿಣವನ್ನು ರಫ್ತು ಮಾಡಲಾಗುತ್ತಿತ್ತು. ಓರ್ಮೆಜ್‌ನಿಂದ ಪ್ರತಿವರ್ಷ ೧೫ ಹಡಗುಗಳು ಇಲ್ಲಿಗೆ ಕುದುರೆಗಳು, ಮುತ್ತುಗಳನ್ನು ತರುತ್ತಿದ್ದವು. ಹಾಗೂ ಮೆಣಸು, ಸಾಂಬಾರು ಪದಾರ್ಥಗಳು, ಹುಂಡಿ ಮಾಡಿದ ಸಕ್ಕರೆ, ಬಿಳಿ ಅಕ್ಕಿಯನ್ನು ಒಯ್ಯುತ್ತಿದ್ದವು. ಪೋರ್ಚುಗೀಸರು ಅಕ್ಕಿ ಮತ್ತು ಲವಂಗವನ್ನು ಉತ್ಪಾದಿಸುತ್ತಿದ್ದ ಭಟ್ಕಳದೊಂದಿಗೆ ನಿಕಟ ಸಂಪರ್ಕ ಹೊಂದಿದ್ದರು.[೨೩೭] ಹೊನ್ನಾವರ, ಕಾರವಾರಗಳಿಂದ ಮೆಣಸು, ತಾಳೆಸಕ್ಕರೆ, ತಾಳೆಮದ್ಯ, ಹೊರದೇಶಗಳಿಗೆ ರಫ್ತಾಗುತ್ತಿತ್ತು. ಗೋವಾ ಮತ್ತು ಅಂಕೋಲಗಳಿಂದ ಪ್ರತಿವರ್ಷ ೫೦೦೦ ಕ್ರುಸೆಡೊ ಬೆಲೆಯ ಮೆಣಸು ಅರ್ಮೆಜ್ ಮತ್ತು ಜೆಡ್ಡಾಗಳಿಗೆ ಹಡಗಿನಲ್ಲಿ ಸಾಗುತ್ತವೆ ಎಂದು ಕೊಚ್ಚಿಯಲ್ಲಿದ್ದ ಪೋರ್ಚುಗೀಸ್ ಕ್ಯಾಪ್ಟನ್ ಅಫಾನ್ಸೊ ಮೆಕ್ಸಿಯನು ಹೇಳಿದ್ದಾನೆ.[೨೩೮] ಪುಲಿಕಾಟ್‌ನಿಂದ ಮಲಕ್ಕಾಗೆ ಬಟ್ಟೆ ರಫ್ತಾಗುತ್ತಿತ್ತು. ಓರ್ಮೆಜ್ ಮತ್ತು ಪೇಗುಗಳಿಂದ ಇಲ್ಲಿಗೆ ತಾಮ್ರ, ಹವಳ, ಕುಂಕುಮಗಳು ಪೂರೈಕೆಯಾಗುತ್ತಿದ್ದವು. ಹೀಗೆ ಮಲಬಾರ್ ದೊಡ್ಡ ವಾಣಿಜ್ಯ ಕೇಂದ್ರವಾಗಿ ಬೆಳೆದಿತ್ತು. ಪೂರ್ವ ಕರಾವಳಿಯಲ್ಲಿ ಕಾರೈಕಲ್, ನಾಗಪಟ್ಟಣಂ, ತುತ್‌ಕುಡಿ, ಪುಲಿಕಾಟ್, ಕಾವೇರಿಪಟ್ಟಣಂಗಳು, ಪ್ರಸಿದ್ಧ ಬಂದರುಗಳಾಗಿದ್ದವು. ಇಲ್ಲಿಗೆ ನಾಯಕರ ಕಾಲದಲ್ಲಿ ನೀಲಿ, ಹೊಗೆಸೊಪ್ಪು, ಕಲ್ಲು ಸಕ್ಕರೆ, ಪ್ಲೇಟುಪ್ಪು, ಸುಗಂಧ ದ್ರವ್ಯಗಳು, ಕಬ್ಬಿಣದ ಅದಿರುಗಳು ಹೆಚ್ಚಾಗಿ ಮಾರಾಟವಾಗುತ್ತಿದ್ದವು. ವಿಜಯನಗರ ಸಾಮ್ರಾಜ್ಯದಾದ್ಯಂತ ೩೦೦ ಬಂದರುಗಳಿವೆ ಎಂದು ಅಬ್ದುಲ್ ರಜಾಕ್ ಹೇಳಿದ್ದಾನೆ.[೨೩೯] ವಿದೇಶಿ

ವ್ಯಾಪಾರವು ಪೂರ್ವ ಕರಾವಳಿಗಿಂತ ಹೆಚ್ಚಾಗಿ ಪಶ್ಚಿಮ ಕರಾವಳಿಯಲ್ಲಿ ಕೇಂದ್ರೀಕೃತವಾಗಿತ್ತು. ಈ ವ್ಯಾಪಾರದ ಫಲವಾಗಿ ರಾಜ್ಯಕ್ಕೆ ಅಧಿಕ ವರಮಾನ ಬರುತ್ತಿದ್ದಿತು.

ಒಟ್ಟಾರೆಯಾಗಿ ಅನೇಕ ಸಮುದಾಯಗಳು ವಸ್ತುಗಳ ಉತ್ಪಾದನೆ ಮತ್ತು ಮಾರಾಟದಲ್ಲಿ ತೊಡಗಿದ್ದವು. ಕುಶಲಕರ್ಮಿಗಳು ವಸ್ತುಗಳ ಉತ್ಪಾದನೆ ಮಾಡುವುದರ ಜೊತೆಗೆ ಅವುಗಳ ಮಾರಾಟವನ್ನು ಮಾಡುತ್ತಿದ್ದರು. ಗಾಣಿಗರು ಎಣ್ಣೆಯನ್ನು ಉತ್ಪಾದಿಸುವುದರ ಜೊತೆಗೆ ಎಣ್ಣೆ ವ್ಯಾಪಾರದಲ್ಲೂ ಕಾಣಿಸಿಕೊಂಡಿದ್ದರು. ಅದೇ ರೀತಿ ಸಮಗಾರರು ಚರ್ಮದ ಕೆಲಸ ಮಾಡುವುದರ ಜೊತೆಗೆ ಅವುಗಳ ಉತ್ಪನ್ನಗಳ ಮಾರಾಟ ಮಾಡುತ್ತಿದ್ದರು. ಆದರೆ ಇವರೆಲ್ಲರೂ ಪೂರ್ಣ ಪ್ರಮಾಣದ ವ್ಯಾಪಾರಸ್ಥರಲ್ಲ. ಲಿಂಗಾಯಿತರು, ಜೈನರು, ಅಂಗಡಿಕಾರರು, ಚಿನಿವಾರರು, ನೇಕಾರರು ರಜಪೂತರು, ನಾಯಕರು, ವೈಶ್ಯರು, ಬೆಸ್ತರು ಮುಂತಾದವರು ಸಣ್ಣಪುಟ್ಟ ವ್ಯಾಪಾರ, ವಾಣಿಜ್ಯದಲ್ಲಿ ತೊಡಗಿದ್ದರು. ಗುಜರಾತಿಗಳು ದಕ್ಷಿಣ ಭಾರತದುದ್ದಕ್ಕೂ ತಮ್ಮ ವ್ಯಾಪಾರ ಜಾಲವನ್ನು ಹೊಂದಿದ್ದರು. ಗುಜರಾತಿ ವರ್ತಕರಲ್ಲಿ ಪಾರ್ಸಿಗಳು, ಬೋಹ್ರಾಗಳು, ಬನಿಯಾಗಳು, ಗುಜರಾತಿ ಜೈನರು ಲೋಹಾನರು, ಪಟೇಲರು, ಮಾರವಾಡಿಗಳು ಮತ್ತು ಗುಜರಾತಿ ಬ್ರಾಹ್ಮಣರು ಪ್ರಮುಖರು. ಇವರು ಕೊಂಕಣಿಗಳಂತೆ ಹೆಚ್ಚಾಗಿ ಕರಾವಳಿಯ ಪಟ್ಟಣಗಳಿಗೆ ವಲಸೆ ಬಂದರು. ನಾಯಕರ ಕಾಲದಲ್ಲಿ ಗುಜರಾತಿಗಳು ಚಿತ್ರದುರ್ಗದಿಂದ ಮಂಗಳೂರಿಗೆ ಅಕ್ಕಿ, ಕಬ್ಬು, ತೆಂಗು, ಕರಿಮೆಣಸು ಮುಂತಾದ ವಸ್ತುಗಳೊಂದಿಗೆ ವ್ಯಾಪಾರ ಮಾಡುವ ಪ್ರಮುಖ ವರ್ತಕರಾಗಿದ್ದರು.[೨೪೦]

ಮುಖ್ಯವಾಗಿ ಸಂಸ್ಥಾನಗಳ ಅಭಿವೃದ್ಧಿ-ಅನಭಿವೃದ್ಧಿಯು ಅಂದಿನ ಕಾಲದ ವ್ಯಾಪಾರ ವಾಣಿಜ್ಯದ ಮೇಲೆ ನಿಂತಿತ್ತು. ಆಮದು ಮತ್ತು ರಫ್ತುಗಳ ಮೇಲೆ ಒಳವಾರು ಮತ್ತು ಹೊರವಾರು ಸುಂಕಗಳನ್ನು ಹಾಕುತ್ತಿದ್ದುದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ನಾಯಕರ ಆಡಳಿತ ಪ್ರದೇಶಗಳಿಗೆ ಹೊರರಾಜ್ಯಗಳಿಗೆ ರಫ್ತುಮಾಡಿದ ಪದಾರ್ಥಗಳ ಮೇಲೆ ಒಳವಾರು ಸುಂಕವನ್ನು ವಿಧಿಸುತ್ತಿದ್ದರು. ಪರಸ್ಪರ ಹೊರರಾಜ್ಯಗಳ ಮತ್ತು ರಾಜ್ಯದ ವರ್ತಕರದಲ್ಲಿ ಹೊಂದಾಣಿಕೆ, ಸಹಕಾರ ಇದ್ದುದು ಆ ಕಾಲದ ಶಾಸನ ಹಾಗೂ ಸಾಹಿತ್ಯ ಆಕರಗಳು ವ್ಯಕ್ತಪಡಿಸುತ್ತವೆ. ಇವರೆಲ್ಲ ಒಟ್ಟಾಗಿ ಸೇರಿ ಧಾರ್ಮಿಕ ಕಾರ್ಯಗಳಿಗೆ ಹಣ ಸಂಗ್ರಹಿಸುತ್ತಿದ್ದರು. ಇದನ್ನು 'ಧರ್ಮಕಾಣಿಕೆ' ಎಂಬುದಾಗಿ ಕರೆಯಲಾಗುತ್ತಿತ್ತು. ಹೀಗೆ ಸ್ಥಳೀಯ ಹಾಗೂ ವಿದೇಶಿಯ ವ್ಯಾಪಾರಗಳಿಗೆ ಸರಕುಗಳನ್ನು ಒಂದೆಡೆಯಿಂದ ಮತ್ತೊಂದೆಡೆಗೆ ರವಾನಿಸಲು ವಿವಿಧ ರೀತಿಯ ಸಾರಿಗೆ ವ್ಯವಸ್ಥೆಯನ್ನು ಮಾಡಿಕೊಂಡಿದ್ದುದು ಕಂಡುಬರುತ್ತದೆ.

### ೬.೪. ಉದ್ದಿಮೆಗಳು ಮತ್ತು ಉದ್ದಿಮೆದಾರರು

ಮಾನವ ಮೂಲಭೂತ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಯಾವುದಾದರೂ ಒಂದು ಕ್ಷೇತ್ರದಲ್ಲಿ ದುಡಿಯಬೇಕಿತ್ತು. ಅಕ್ಷರದ ಅರಿವಿರುವ ಸಮುದಾಯಗಳು ದೈಹಿಕ ದುಡಿಮೆಯನ್ನು ಇಷ್ಟಪಡದೆ ಬೌದ್ಧಿಕ ಚಟುವಟಿಕೆಗಳ ಪ್ರಭಾವವಿರುವ ಕ್ಷೇತ್ರದತ್ತ ಮುನ್ನಡೆದರು. ಉತ್ಪಾದನೆ ಮಾಡುವ ಸಮುದಾಯಗಳು ದೈಹಿಕ ದುಡಿಮೆಗೆ ಹೆಚ್ಚು ಅಂಟಿಕೊಂಡವರು. ಇವರಿಗೆ ಆರಂಭದಿಂದಲೂ ರಾಜಪ್ರಭುತ್ವದ ಬೆಂಬಲವಾಗಲಿ, ಧಾರ್ಮಿಕ ಪ್ರಭುತ್ವದ ಬೆಂಬಲವಾಗಲಿ ಸಿಗಲಿಲ್ಲ. ಆರಂಭದಲ್ಲಿ ವೃತ್ತಿಗಳಿಗೆ ಜಾತಿಗಳ ಸೋಂಕು ಇರಲಿಲ್ಲ. ಆದರೆ ವೃತ್ತಿಗಳೇ ಮುಂದೆ ಜಾತಿಗಳಾಗಿ ಬದಲಾವಣೆಯಾದವು.[೨೪೧] ಇವು ಆರ್ಥಿಕ ಸಂಘಟನೆಗಳಿಗಾಗಿ ವೃತ್ತಿ ಸಂಘಗಳನ್ನು ಕಟ್ಟಿಕೊಳ್ಳುವುದರ ಮೂಲಕ ಸಂಘಟಿತ ಬದುಕಿಗೆ ನಾಂದಿಯಾಡಿದವು.

ಪರಂಪರೆಯಿಂದ ತಮಗೆ ಬಂದ ವೃತ್ತಿ ಕೆಲಸ ಕಾರ್ಯಗಳಲ್ಲಿ ವೃತ್ತಿಪರ ಜಾತಿಯವರು ನಿರತರಾಗಿರುತ್ತಿದ್ದರು. ಕುಂಬಾರಿಕೆಯಾಗಲಿ ಅಥವಾ ಮರಕೆಲಸವಾಗಲಿ, ಕಲ್ಲು ಕೆಲಸವಾಗಲಿ ಅಥವಾ ಶಿಲ್ಪವಾಗಲಿ, ಉಪ್ಪು ತಯಾರಿಕೆಯಾಗಲಿ ವೃತ್ತಿಯ ತಂತ್ರ ವಿಧಾನಗಳನ್ನು ತಂದೆಯು ಮಗನಿಗೆ ಕಲಿಸಿಕೊಡುತ್ತಿದ್ದನು. ಮಧ್ಯಯುಗಕ್ಕೆ ಯಂತ್ರಗಳು ಅಪರಿಚಿತವಾಗಿದ್ದುದರಿಂದ ಆ ಕಾಲದ ಉದ್ಯಮಗಳು ಅವಲಂಬಿಸಿದ್ದು ವೃತ್ತಿನಿರತ ವ್ಯಕ್ತಿಗಳ ಕೌಶಲವನ್ನೇ ಎಂದು ಹೇಳಬಹುದು. ಉದ್ಯಮದ ಘಟಕವು ಕುಟುಂಬವಾಗಿತ್ತು. ಕುಶಲ ಕೆಲಸಗಾರರು ಅಥವಾ ಕರ್ಮಿಗಳನ್ನು ಅಲ್ಪಸಂಖ್ಯೆಯಲ್ಲಿ ನೇಮಿಸಿಕೊಳ್ಳಲಾಗುತ್ತಿತ್ತು. ಹಾಗೂ ಉತ್ಪಾದನೆಯು ಸಣ್ಣ ಪ್ರಮಾಣದ್ದಾಗಿತ್ತು. ಕೆಲಸಗಾರರು ತಾವು ವಾಸಿಸುತ್ತಿದ್ದ ಪ್ರದೇಶದಲ್ಲಿ ಕಚ್ಚಾ ಸಾಮಗ್ರಿಯನ್ನು ಪಡೆದುಕೊಳ್ಳಲು ಸಾಧ್ಯವಿತ್ತು. ತುಂಬ ಅಪರೂಪವಾಗಿ ಅವರು ದೂರದ ಸ್ಥಳಗಳಿಂದ ಅವನ್ನು ಆಮದು ಮಾಡಿಕೊಳ್ಳುತ್ತಿದ್ದರು.[೨೪೨] ಆಮದು ಮತ್ತು ರಫ್ತಿನ ವ್ಯವಹಾರವನ್ನು ಮಾಡಲೆಂದೇ ಕೆಲವು ಸಮುದಾಯಗಳು ಚಾರಿತ್ರಿಕ ಕಾಲಘಟ್ಟದಲ್ಲಿ ಗುರುತಿಸಿಕೊಂಡಿವೆ.

ಆರ್ಥಿಕ ಚರಿತ್ರೆಯ ಮಾರುಕಟ್ಟೆಯ ಪ್ರತಿಘಟಕದ ಅಂಶ ಅದರ ಅಸ್ತಿತ್ವವನ್ನೇ ನಿರ್ಧರಿಸುವಂತೆ, ಒಟ್ಟು ಮಾರುಕಟ್ಟೆಯ ಗಾತ್ರವು ದೇಶದ ಆರ್ಥಿಕ ಪ್ರಗತಿಯ ಮಹತ್ವದ ನಿರ್ಧಾರಕವೆಂದು ಪರಿಗಣಿಸಲಾಗುತ್ತದೆ. ಹೀಗೆ ಮಧ್ಯಯುಗದ ವಿದೇಶಿ ಹಾಗೂ ಸ್ವದೇಶಿ ವ್ಯಾಪಾರದ ಮೌಲ್ಯ ಮತ್ತು ಗಾತ್ರವನ್ನು ನಿರ್ಧರಿಸುವುದು ಅಂದಿನ ಉತ್ಪಾದನೆ. ಒಳ್ಳೆಯ ಸಂಚಾರ ಮತ್ತು ಸಂಪರ್ಕ ಸಾಧನಗಳನ್ನು ಹೊಂದಿದ್ದ ರಾಷ್ಟ್ರಗಳಲ್ಲಿಯೂ ಒಳನಾಡಿನ ವ್ಯಾಪಾರವು ಅಂತರಾಷ್ಟ್ರೀಯ ವ್ಯಾಪಾರಕ್ಕಿಂತ ಸಾಮಾನ್ಯವಾಗಿ ತುಂಬಾ ಹೆಚ್ಚಾಗಿದೆ; ಅಲ್ಲದೆ ಅಂತರಾಷ್ಟ್ರೀಯ ವ್ಯಾಪಾರವು ಕೆಲವೇ ನಿರ್ದಿಷ್ಟ ವಸ್ತುಗಳಿಗೆ ಸೀಮಿತವಾಗಿದೆ; ಅವುಗಳ ಒಟ್ಟು ಉತ್ಪಾದನೆಯು ಕಡಿಮೆ ಪ್ರಮಾಣದ್ದಾಗಿದೆ. ಭಾರತದಲ್ಲಿ ಆರಂಭಿಕ ಹಂತದಲ್ಲಿ ವ್ಯಾಪಾರವನ್ನು ಆರಂಭಿಸಿದ ಕಂಪನಿಗಳು ನಯವಾದ ಅರಳೆ ಹಾಗೂ ರೇಷ್ಮೆ ಬಟ್ಟೆ, ಕಬ್ಬಿಣ ವಸ್ತುಗಳು, ಮರದ ವಸ್ತುಗಳು, ಆನೆಯ ದಂತ ಹಾಗೂ ಎಳೆಗಳಿಂದ ಮಾಡಿದ ವಸ್ತುಗಳು, ಅಮೂಲ್ಯ ರತ್ನಗಳು ಮತ್ತು ನೀಲಿ ಬಣ್ಣಗಳಂಥ ಸಿದ್ಧ ವಸ್ತುಗಳ ವ್ಯಾಪಾರದಲ್ಲಿ ತೊಡಗಿದ್ದವು.[೨೪೩] ಸ್ಥಳೀಯವಾಗಿ ಸಿದ್ಧಗೊಂಡ ವಸ್ತುಗಳಿಗೆ ವಿದೇಶಿ ಮಾರುಕಟ್ಟೆಯಲ್ಲಿ ಬೇಡಿಕೆ ಇತ್ತು ಎಂಬುದು ನಿಜವಾದ ಪ್ರಶಸ್ತಿಯಾಗಿತ್ತು.

ಪ್ರಾಚೀನ ಮತ್ತು ಮಧ್ಯಯುಗದ ವ್ಯಾಪಾರ-ವಾಣಿಜ್ಯದಲ್ಲಿ ಸಿಂಹಪಾಲು ಪಡೆದಿರುವ ಉತ್ಪಾದಕರು ಹಾಗೂ ವಿನಿಮಯ ಸಮುದಾಯಗಳು ಸಾಂಘಿಕ ಬದುಕನ್ನು ಕಟ್ಟಿಕೊಂಡಿದ್ದವು. ಅವರು ಕಟ್ಟಿಕೊಂಡ ಸಂಘವು ಕೈಗಾರಿಕೆದಾರರ ಸಹಕಾರಿ ಸಂಘಗಳನ್ನು ಮತ್ತು ಉದ್ದಿಮೆಯ ವ್ಯಕ್ತಿಶಃ ಕೆಲಸಗಾರರನ್ನು ಒಂದೇ ಸಾಂಘಿಕ ಸಂಸ್ಥೆಯಾಗಿ ಜೋಡಿಸುತ್ತಿತ್ತು. ತನ್ನ ಸದಸ್ಯರು ವ್ಯವಹರಿಸುವ ವಸ್ತುಗಳ ಗುಣಮಟ್ಟ, ಬೆಲೆ, ಕೆಲಸದ ನಿಯಮಗಳು ಕೂಲಿ ಇತ್ಯಾದಿಗಳನ್ನು ನಿಗದಿಪಡಿಸುತ್ತಿತ್ತು. ಅದರ ನೀತಿ ನಿಯಮಗಳು ಕಾಯಿದೆಯ ಬಲವನ್ನು ಹೊಂದಿದ್ದವು. ಅವುಗಳನ್ನು ಅರಸ ಮತ್ತು ಸರಕಾರ ಎತ್ತಿ ಹಿಡಿಯುತ್ತಿದ್ದವು.[೨೪೪]

ವೃತ್ತಿಯನ್ನು ಅಥವಾ ಜಾತಿಯನ್ನು ಹೊಂದಿರುವ ಸಮಾಜವನ್ನು ಅನೇಕ ಆಕರಗಳಲ್ಲಿ ಗುರುತಿಸಬಹುದಾಗಿದೆ. ಅವರನ್ನು ಹದಿನೆಂಟು ಜಾತಿಯವರು ಎಂದು ಕರೆದಿದ್ದಾರೆ. ಲಕ್ಷ್ಮೇಶ್ವರದ ಬಾದಾಮಿ ಚಾಲುಕ್ಯರ ಶಾಸನದಲ್ಲಿ ಈ ಹದಿನೆಂಟು ಜಾತಿಗಳ ಉಲ್ಲೇಖವಿದೆ. ಹದಿನೆಂಟನೆಯ ಶತಮಾನದ ವಚನಕಾರರಾದ ಸೊಡ್ಡಳ ಬಾಚರಸ, ಮಾದರ ಚೆನ್ನಯ್ಯ ಹಾಗೂ ಜೇಡರ ದಾಸೀಮಯ್ಯ

ಇವರುಗಳು ಈ ಹದಿನೆಂಟು ಜಾತಿಗಳನ್ನು ಉಲ್ಲೇಖಿಸುವುದರ ಜೊತೆಗೆ ಅವರಲ್ಲಿ ಒಬ್ಬರು ಈ ಜಾತಿಗಳ ಪಟ್ಟಿಯನ್ನೂ ನೀಡುತ್ತಾರೆ. ಸೊಡ್ಡಳ ಬಾಚರಸ ನೀಡುವ ಪಟ್ಟಿ ಹೀಗಿದೆ; ಬ್ರಾಹ್ಮಣ, ಕ್ಷತ್ರಿಯ, ಬಣಜಿಗ, ಒಕ್ಕಲಿಗ, ಗೊಲ್ಲ, ಕುಂಬಾರ, ಪಾಂಚಾಳ, ಉಪ್ಪಾರ, ನಾಯಿಂದ, ಡೊಂಬ, ಅಗಸ, ಜಾಡ, ಕಬ್ಬಲಿಗ, ಹೊಲೆಯ, ಈಡಿಗ, ಸಮ್ಮಗಾರ, ಮುಚ್ಚಿಗ ಹಾಗೂ ಮಾದಿಗ. ಆದರೆ ಇಲ್ಲಿ ಚಿಪ್ಪಿಗ, ಗಾಣಿಗ, ಬೆಸ್ತ, ಮೇದ ಮುಂತಾದ ಗಣ್ಯ ಜಾತಿಗಳನ್ನು ಬಿಟ್ಟಿದ್ದು ಗಮನಿಸಬೇಕಾದ ಅಂಶ.[೨೪೫] ಮುಖ್ಯವಾಗಿ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಸಾಮಾಜಿಕ ರಚನೆಯಲ್ಲಿ ಬರುವ ಜಾತಿಗಳಿಗಿಂತ ವಸ್ತು ಉತ್ಪಾದನೆ ಹಾಗೂ ಮಾರಾಟ ಮಾಡುವ ಸಮುದಾಯಗಳನ್ನು ಕುರಿತು ಅಧ್ಯಯನ ಮಾಡುವಲ್ಲಿ ಮುಂದಾಗಿದೆ. ಉತ್ಪಾದನೆಯನ್ನು ತಮ್ಮ ವೃತ್ತಿಯನ್ನಾಗಿಸಿಕೊಂಡಿದ್ದ ನೇಕಾರರು, ಬಡಗಿಗಳು, ಕಮ್ಮಾರರು, ಕುಂಬಾರರು, ಅಕ್ಕಸಾಲಿಗರು, ಕಂಚುಗಾರರು, ತೆಲ್ಲಿಗರು, ಶಿಲ್ಪಿಗರು, ಮಾತಿಗಾರರು, ಮೇದಾರರು, ಚರ್ಮಕಾರರು ಹೀಗೆ ಅನೇಕ ಸಮುದಾಯಗಳು ಇವೆ. ಈ ಸಮುದಾಯಗಳು ವಸ್ತುಗಳನ್ನು ಉತ್ಪಾದಿಸಿ ಮಾರುಕಟ್ಟೆಯನ್ನು ನಿರ್ಮಿಸುವ ಕಾರ್ಯವನ್ನು ಮಾಡುತ್ತಿದ್ದರು. ಹಾಗಾಗಿಯೇ ಈ ಸಮುದಾಯಗಳನ್ನು ಕುರಿತಾಗಿ ಅನೇಕ ಅಧ್ಯಯನಗಳು ನಡೆದಿವೆ. ನಾಯಕರ ಕಾಲದಲ್ಲಿ ಉತ್ಪಾದನೆ ಹಾಗೂ ಉತ್ಪಾದನೆಯ ಸಮುದಾಯಗಳನ್ನು ಕುರಿತು ನೋಡಬಹುದಾಗಿದೆ.

**ನೇಕಾರರು**

ನಾಯಕರಿಗೆ ಆದಾಯ ತರುವ ಹಾಗೂ ಉತ್ಪಾದನೆಯಲ್ಲಿ ಅತಿ ಹೆಚ್ಚು ಲಾಭವನ್ನು ತರುವ ಗುಡಿ ಕೈಗಾರಿಕೆ ಎಂದರೆ ಕೈಮಗ್ಗದಿಂದ ಬಟ್ಟೆ ತಯಾರಿಸುವುದೇ ಆಗಿತ್ತು. ಇದನ್ನು ಬಿಟ್ಟರೆ ರೇಷ್ಮೆದಾರದ ಉತ್ಪನ್ನ, ಲೋಹದ ವಸ್ತುಗಳ ತಯಾರಿಕೆ, ಮಡಿಕೆ, ಕುಡಿಕೆ ತಯಾರಿಕೆ, ಬಡಗಿ ಕೆಲಸ, ಚರ್ಮ ಹದ ಮಡುವ ಕೈಗಾರಿಕೆ, ಬೆಲ್ಲದ ತಯಾರಿಕೆ, ಎಣ್ಣೆ ತಯಾರಿಕೆ, ಉಪ್ಪನ್ನು ತಯಾರಿಸುವುದು ಮೊದಲಾದವುಗಳು. ಇವುಗಳಲ್ಲಿ ಅನೇಕ ಸಣ್ಣಪುಟ್ಟ ಕೈಗಾರಿಕೆಗಳು, ಪ್ರಮುಖ ದ್ರವ್ಯಗಳ ತಯಾರಿಕೆ, ಕರಕುಶಲ ಕಲೆಗಳು ಪ್ರಸಿದ್ಧವಾಗಿದ್ದವು.

ಅಂದು ಕೃಷಿಯನ್ನು ಬಿಟ್ಟರೆ ಕೈಮಗ್ಗದಿಂದ ಬಟ್ಟೆಯನ್ನು ತಯಾರಿಸುವುದು ಪ್ರಮುಖ ಕೈಗಾರಿಕೆಯಾಗಿದ್ದು, ಇದೊಂದು ಪ್ರಾಚೀನ ಕಾಲದ ಉದ್ಯೋಗವೆನ್ನಬಹುದು. ಹೆಚ್ಚಿನ ಸಂಖ್ಯೆಯಲ್ಲಿ ಸ್ತ್ರೀಯರು ಈ ಕೈಗಾರಿಕೆಯಲ್ಲಿ ತೊಡಗಿರುತ್ತಿದ್ದರು. ಚರಕಕ್ಕೆ ದಾರ ಸಿದ್ಧವಾಗುವುದಕ್ಕಿಂತ ಮುಂಚೆ ಹತ್ತಿಯನ್ನು ಶುದ್ಧಗೊಳಿಸುವ ಮತ್ತು ಬೀಜ ತೆಗೆಯುವ ಕೆಲಸ ನಡೆಯಬೇಕಿತ್ತು. ಇದಕೋಸ್ಕರ 'ಧುನ್' (ಬಿಲ್ಲಿನಾಕಾರದ ಸಾಧನ) ಎನ್ನುವ ಒಂದು ಸಾಧನವನ್ನು ಬಳಸುತ್ತಿದ್ದರು. ಅರಳೆಯನ್ನು ಶುದ್ಧಗೊಳಿಸಿದ ನಂತರ ಅವುಗಳನ್ನು ಕೈಗಾತ್ರದ ಉಂಡೆಗಳನ್ನಾಗಿ ಮಾಡಿಕೊಂಡು ನಂತರ ಚರಕಕ್ಕೆ ಸಿದ್ಧವಾಗುತ್ತಿದ್ದರು. ಕೈಮಗ್ಗಗಳಿಂದ ತಯಾರಾದ ಬಟ್ಟೆಗಳನ್ನು ಸೀರೆ, ಕಿರಿಗೆ, ಕಣ ಎಂದು ಕರೆಯುತ್ತಿದ್ದರು. ಇವುಗಳು ಸ್ತ್ರೀಯರು ಧರಿಸುವ ಬಟ್ಟೆಗಳಾಗಿದ್ದವು.

ವಿದೇಶಿ ಸಾಹಿತಿಗಳು ಅಂದಿನ ಬಟ್ಟೆ ಕೈಗಾರಿಕೆಯ ಬಗ್ಗೆ ಹೇಳುವ ಮಾತೆಂದರೆ. ಭಾರತದಲ್ಲಿ ನೇಕಾರರು ತಯಾರಿಸಿದ ಬಟ್ಟೆಗಳು ಸ್ಥಳೀಯ ಬೇಡಿಕೆಯನ್ನು ಪೂರೈಸುವುದರ ಜೊತೆಗೆ ದೇಶ ವಿದೇಶಗಳ ಮಾರುಕಟ್ಟೆಯ ಬೇಡಿಕೆಗಳನ್ನು ಪೂರೈಸುತ್ತಿದ್ದವು. ಸ್ಥಳೀಯರಿಗಾಗಿ ಅವರು ಒರಟು ಬಟ್ಟೆಗಳನ್ನು ತಯಾರಿಸಿ ಅವುಗಳನ್ನು ಸಂತೆ ಹಾಗೂ ಜಾತ್ರೆಗಳಲ್ಲಿ ಮಾರಾಟ ಮಾಡುತ್ತಿದ್ದರು.

ಉತ್ತಮ ಮಟ್ಟದ ನಯವಾದ ಬಟ್ಟೆಗಳನ್ನು ವ್ಯಾಪಾರಿಗಳು ಸಂತೆಗಳಲ್ಲೇ ಕೊಂಡುಕೊಂಡು ರಫ್ತು ಮಾಡುತ್ತಿದ್ದರು. ಬಟ್ಟೆಯನ್ನು ತಯಾರಿಸಲು ಬೇಕಾದ ದಾರವನ್ನು ಖರೀದಿಸಲು ವರ್ತಕರು ನೇಕಾರಿಕೆ ಮುಂಗಡ ಹಣವನ್ನು ಕೊಡುತ್ತಿದ್ದರು[೨೪೬] ಎಂದು ಸುದೀರ್ಘವಾಗಿ ವಿವರಿಸಿರುವುದು ಅಂದಿನ ಕೈಮಗ್ಗದ ಅಭಿವೃದ್ಧಿಯನ್ನು ಸೂಚಿಸುತ್ತದೆ.

ನೇಕಾರಿಕೆ ವೃತ್ತಿಯು ಆರಂಭಿಕ ವೇದ ಪುರಾಣಗಳ ಕಾಲದಿಂದಲು ಬೆಳೆದುಕೊಂಡು ಬಂದಿದೆ. ಈ ವೃತ್ತಿಯನ್ನು ಮಾಡುವ ಒಂದು ಪಂಗಡವೂ ಇತ್ತು. ಅವರನ್ನೇ ನೇಕಾರರು ಎಂದು ಕರೆಯುತ್ತಾರೆ. ಅದರಲ್ಲಿಯೇ ಉಪ ಪಂಗಡಗಳಾಗಿ ಒಟ್ಟು ನೇಕಾರಿಕೆಯನ್ನೇ ಕುಲ ವೃತ್ತಿಯಾಗಿಸಿಕೊಂಡು ದೇವಾಂಗ, ಪದ್ಮಶಾಲ, ಕುರುಹಿನ ಶೆಟ್ಟಿ, ಸ್ವಕುಳಸಾಲಿ, ಪಟ್ಟಸಾಲಿ, ತೊಗಟವೀರ ಹೀಗೆ ಪ್ರತ್ಯೇಕ ಆರು ಪಂಡಗಳು ಆಯಾ ಜಾತಿಯ ಹೆಸರಿನಲ್ಲಿ ಗುರುತಿಸಿಕೊಂಡು ಬಂದಿವೆ. ಆದ್ದರಿಂದಲೇ ಇವರೆಲ್ಲರ ಸಾಂಸ್ಕೃತಿಕ ಆಚರಣೆ ಹಬ್ಬಹರಿದಿನಗಳು, ಧಾರ್ಮಿಕ ಕಾರ್ಯಗಳು ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿರುವುದನ್ನು ಗುರುತಿಸಬಹುದು.[೨೪೭] ನಂತರದ ದಿನಮಾನಗಳಲ್ಲಿ ಮೇಲಿನ ಆರು ಪಂಗಡಗಳವರಲ್ಲದೆ ಕುರುಬರು, ಮುಸ್ಲಿಂಮರು, ಕ್ರೈಸ್ತರು, ಹರಿಜನರು ಹೀಗೆ ಎಲ್ಲರೂ ಈ ನೇಕಾರಿಕಾ ವೃತ್ತಿಯನ್ನು ಅವಲಂಬಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಪಟ್ವೇಕಾರ ಎನ್ನುವ ಜನಾಂಗವೂ ಈ ವೃತ್ತಿಯನ್ನು ಕುಲ ವೃತ್ತಿಯಾಗಿಸಿಕೊಂಡದ್ದಿದೆ. ಪಟಕಾರ ಎನ್ನುವುದರಿಂದ ಪಟ್ವೇಕಾರ ಬಂದಿದೆ. ಪಟ ಎಂದರೆ ಸಂಸ್ಕೃತದಲ್ಲಿ ಬಟ್ಟೆ ಎಂದಿದೆ. ಈ ಬಟ್ಟೆ ನೇಯುವವನೆ ಪಟಕಾರ. ಕೆಲವರಿಗೆ ಈ ನೇಕಾರಿಕೆ ಕುಲವೃತ್ತಿಯಾದರೆ ಇನ್ನೂ ಕೆಲವರಿಗೆ ಉಪಜೀವನ ವೃತ್ತಿಯಾಗಿದೆ.[೨೪೮]

ನಾಯಕರ ಕಾಲದಲ್ಲಿ ನೇಕಾರರು 'ಮಗ್ಗದ ಸುಂಕ' ಅಥವಾ 'ಮಗ್ಗದೆರೆ' ಸಲ್ಲಿಸುತ್ತಿದ್ದ ಮತ್ತಿತರ ಸಂಗತಿಗಳ ಬಗ್ಗೆ ಕೆಲವು ಶಾಸನಗಳನ್ನು ಇಲ್ಲಿ ಉದಾಹರಿಸಬಹುದು. 'ಮಗ್ಗದೆರೆ' ಎಂಬುದಕ್ಕೆ 'ಜೇಡದೆರೆ' ಎಂಬ ಶಬ್ದವನ್ನೂ ಶಾಸನದಲ್ಲಿ ಬಳಸಲಾಗಿದೆ. ಶಾಸನತಜ್ಞ ಬಿ.ಎಲ್.ರೈಸ್‌ರವರು ಪ್ರಕಟಿಸಿರುವ 'ಎಪಿಗ್ರಾಫಿಯಾ ಕರ್ನಾಟಿಕ' ಸಂಪುಟಗಳ ಅಧ್ಯಯನದಿಂದ ಈ ಅಂಶವನ್ನು ಗಮನಿಸಬಹುದಾಗಿದೆ. ಮಗ್ಗಗಳಿಂದ ಬರುತ್ತಿದ್ದ 'ಸುಂಕ' ಆದಾಯವನ್ನು ದೇವಸ್ಥಾನಗಳಿಗೆ ದತ್ತಿ ಬಿಡುತ್ತಿದ್ದ ಸ್ವಾರಸ್ಯದ ಸಂಗತಿಯೂ ಶಿಲಾ ಶಾಸನಗಳಿಂದ ತಿಳಿದುಬರುತ್ತದೆ.[೨೪೯] ದೊಡ್ಡಗದ್ದುವಳಿಯ ಲಕ್ಷ್ಮೀದೇವಿ ದೇವಸ್ಥಾನಕ್ಕೆ ಸಂಬಂಧಿಸಿದ ಶಾಸನ ಪಾಠ ಈ ರೀತಿ ಇದೆ.

ಜೇಡದೆರೆಯ ಹೆಗ್ಗಡೆಹೊಲ್ಲೆಯ
ನಾತನ ತಮ್ಮ ಹೆಗ್ಗೆರೆ ನಾಗಯ್ಯನು
ಸಿರಿಯವ್ವೆಯ ತಮ್ಮ ಮೇಧಾವಿ (ಯೂ)
(ಆ)ನಂದ ಸಂವತ್ಸರದ ಚೇತ್ರಸು
ಆದಿವಾರದಂದು ಶ್ರೀ ಮಹಾ
ಲಕ್ಷ್ಮೀದೇವಿಯು ಶ್ರೀ ಕಾರ್ಯಕ್ಕೆ ಬಿಟ್ಟ
ಮಗ್ಗ ೨ ಶ್ರೀ ಮಹಾಕಾಳೀ
ದೇವಿಯು ಶ್ರೀಕಾರ್ಯಕ್ಕೆ ಬಿಟ್ಟ

ಮಗ್ಗ ೨ ಶ್ರೀ ಭೂತನಾಥದೇವರ

ಶ್ರೀ ಕಾರ್ಯಕ್ಕೆ ಬಿಟ್ಟ ಮಗ್ಗ ೩ ಭೂ

ತನಾಥ ದೇವರ ಪೂಜಾರಿ ಲ

ಕ್ಷ್ಮಿಯ್ಯಂಗೆ ಬಿಟ್ಟ ೧ ಆಸ್ತು ಮ

ಗ್ಗ ೭ ಇ ಧರ್ಮಮ[೨೫೦]

ಎಂದು ಇದೆ. ಈ ಶಾಸನ ಬಹಳ ವಿಶೇಷವಾಗಿದೆ. 'ಜೇಡದೆರೆ' (ಎಂದರೆ, ಮಗ್ಗದ ಸುಂಕವನ್ನು) ವಸೂಲು ಮಾಡುವುದಕ್ಕಾಗಿ ಒಬ್ಬ ಅಧಿಕಾರಿ ಇದ್ದ ಬಗ್ಗೆ ಇಲ್ಲಿ ಹೇಳಲಾಗಿದೆ. ಈ ಹುದ್ದೆಯ ಹೆಸರು 'ಜೇಡದೆರೆಯ ಹೆಗ್ಗಡೆ' ಎಂದು ಅಂದರೆ, ಮಗ್ಗಗಳಿಗೆ ಇದ್ದ ಸ್ಥಾನ ಹಾಗೂ ಅದರ ಮಹತ್ವವನ್ನು ಕಲ್ಪನೆ ಮಾಡಿಕೊಳ್ಳಬಹುದು. ನೇಯ್ಗೆ ವೃತ್ತಿಯಿಂದ ಹೆಚ್ಚು ಆದಾಯಗಳಿಸಲು ಸಾಧ್ಯವಾಗುತ್ತಿತೆಂಬ ಸಂಗತಿ ಗಮನಾರ್ಹವಾದುದು.

ಶ್ರೀ ಮತ್ ರಾಜಶೆಟ್ಟಿಯವರ ಮಗ ದುಗ್ಗಣಂ ಹರಿಹರಕ್ಕೆ ಹೋಗಿ ಬರುತ್ತಿರ್ದಲ್ಲಿ ನಿಟ್ಟೂರು ಹಾರಿವಾಳದೆಡೆಯಣಗೊಡ್ಡಿ ಸಾಲದಲ್ಲಿ ಬಟ್ಟೆ ಯಕಳ್ಳರು ತಾಳಿತಳ್ತಿರಿದು ಪಲರಂ ಕೊಂಡು ಸುರಲೋಕ ಪ್ರಾಪ್ತನಾದಂ॥[೨೫೧]

ಈ ಶಾಸನದಲ್ಲಿ ಉಲ್ಲೇಖವಾದಂತೆ ಹರಿಹರದ ಬಳಿಯಲ್ಲಿ ರಾಜಶೆಟ್ಟಿಯ ಮಗ ದುಗ್ಗಣನು ಹರಿಹರಕ್ಕೆ ಹೋಗಿ ಬರುತ್ತಿರುವಾಗ ಬಟ್ಟೆಯ ಕಳ್ಳರು ಯುದ್ಧ ಮಾಡಲಾಗಿರುವುದನ್ನು ನೋಡಿದರೆ ಹರಿಹರವು ಬಟ್ಟೆ ವ್ಯಾಪಾರಕ್ಕೆ ಪ್ರಸಿದ್ಧವಾದ ಪಟ್ಟಣವಾಗಿತ್ತೆಂದು ಊಹಿಸಬಹುದು.

ಹಿಂದೆ ಹೇಳಿರುವಂತೆ ಹೊಸದುರ್ಗ, ದಾವಣಗೆರೆ, ಜಗಳೂರು, ಹರಿಹರ ಈ ಪ್ರದೇಶದಲ್ಲಿ ಅತೀ ಹೆಚ್ಚು ಹತ್ತಿ ಬೆಳೆಯನ್ನು ಬೆಳೆಯುತ್ತಿದ್ದರಿಂದ ನೇಯ್ಗೆ ಉದ್ಯಮ ಹೆಚ್ಚಾಗಿ ಅಭಿವೃದ್ಧಿ ಆಗಿತ್ತು. ಬಟ್ಟೆ ವ್ಯಾಪಾರಿಗಳಾದ ನಗರ್ತರು ಹೇಳುವುದೇನೆಂದರೆ ದೂರದಿಂದ ಬಾರೀ ಬೇಡಿಕೆ ಇಲ್ಲವಾದಲ್ಲಿ ನೇಯ್ಗೆಯವರಿಗೆ ಮುಂಗಡ ಕೊಡುವ ಪರಿಪಾಠವಿಲ್ಲ. ಬೇಡಿಕೆ ಇದ್ದಾಗ ಬಟ್ಟೆಯ ಬೆಲೆಯ ಅರ್ಧದಷ್ಟು ಮುಂಗಡ ಕೊಡುತ್ತಾರೆ. ಸಾಲದ ಅವಧಿ ಮೂರು ತಿಂಗಳು; ಇದಕ್ಕೆ ಬಡ್ಡಿ ಇಲ್ಲ. ಇಲ್ಲಿನ ಬಟ್ಟೆ ನಗರ, ಶ್ರೀರಂಗಪಟ್ಟಣ, ಚನ್ನರಾಯಪಟ್ಟಣ, ಸಿರಾ, ಮದುಗರಿ, ದೇವನಹಳ್ಳಿಗಳಿಗೆ ಹೋಗುತ್ತದೆ.[೨೫೨] ರೇಷ್ಮೆ ಸೀರೆಗೆ ಹೆಸರಾದ ಮೊಳಕಾಲ್ಮೂರು[೨೫೩] ನಗರದಲ್ಲಿ ನೇಕಾರ ಸಮುದಾಯದವರು ಅತೀ ಹೆಚ್ಚಿನ ಬಟ್ಟೆಗಳನ್ನು ನೇಯ್ದು ಮಾರಾಟ ಮಾಡುತ್ತಿದ್ದರು. ಬೂದಿಹಾಳು, ಚಳ್ಳಕೆರೆ ಪ್ರದೇಶಗಳಲ್ಲಿ ಕಂಬಳಿಗಳನ್ನು ನೇಯ್ದು ಹಲವು ವ್ಯಾಪಾರಿ ಕೇಂದ್ರಗಳಿಗೆ ಸರಬರಾಜು ಮಾಡುತ್ತಿದ್ದರು.

**ಬಡಗಿಗಳು**

ಮರಗೆಲಸ ಮಾಡುವವರನ್ನು ಬಡಗಿಗಳೆಂದು ಕರೆಯಲಾಗುತ್ತದೆ. ಇವರು ಕೃಷಿಗೆ ಅವಶ್ಯಕವಾದ, ರೈತರ ಜೀವನಕ್ಕೆ ಆಧಾರವಾದ ವಸ್ತುಗಳನ್ನು ತಯಾರಿಸುತ್ತಿದ್ದರು. ಇದರ ಜೊತೆಗೆ ಕಟ್ಟಡಗಳ ರಚನೆಗೆ ಬೇಕಾಗುವ ಸಾಮಗ್ರಿಗಳು, ಅರಮನೆ ಗುರುಮನೆಗೆ ಸುಂದರವಾದ ಕೆತ್ತನೆಯ ಮರಗೆಲಸವನ್ನು ಒದಗಿಸುತ್ತಿದ್ದರು. ಎತ್ತಿನ ಗಾಡಿ ಅಂದಿನ ಕಾಲದ ವಸ್ತು ಸಾಗಣಿಕೆಗೆ ಬಳಸುವ ಬಹು ಮುಖ್ಯ ಸಾರಿಗೆ ಸಾಧನ. ಆದ್ದರಿಂದ ಎತ್ತಿನಗಾಡಿಗಳ ತಯಾರಿಕೆಯಲ್ಲಿ ಹೆಚ್ಚಾಗಿ ತೊಡಗಿರುತ್ತಿದ್ದರು. ಕೃಷಿಗೆ ಪೂರಕವಾದ ಕುಂಟೆ (ಫಸಲಿನ ಮಧ್ಯೆ ಇರುವ ಕಳೆಯನ್ನು ತೆಗೆಯುವ ಉಪಕರಣ, ಇದರಲ್ಲಿ ಐದ್ಗೇಣಿನ ಗುಂಟೆ,

ಕಿರಿಗುಂಟೆ, ಕೈಗುಂಟೆ, ಪಲೆಲಗುಂಟೆ, ಬಾರುಗುಂಟೆ ಎಂದು ಕರೆಸಿಕೊಳ್ಳುತ್ತಿದ್ದ ವಿವಿಧ ರೀತಿಯ ಕುಂಟೆಗಳಿದ್ದವು), ಕುಪ್ಪೆಚಕ್ಕೆ (ಹುಲ್ಲಿನ ಮೆದೆಯನ್ನು ತಟ್ಟುವುದುಕ್ಕೆ ಬಳಸುವ ಮರದ ಸಾಧನ), ಕುಮ್ಮು(ಎತ್ತಿನ ಗಾಡಿಯ ಚಕ್ರದ ಮಧ್ಯಭಾಗದಲ್ಲಿರುವ ಗುಂಭ), ಕೊಂಗ್ಲಿ ಕಟ್ಟೆ(ಕಣದಲ್ಲಿ ತೆನೆ ತಿರುವಿ ಹಾಕಲು ಬಳಸುವ ಉಪಕರಣ), ಗೊಟ್ಟ(ದನಗಳಿಗೆ ಔಷಧಿ ಕುಡಿಸಲು ಬಳಸುತ್ತಿದ್ದ ಸಾಧನ) ಕೊಡ್ಡ (ನೆಲಸಮ ಮಾಡಲು ಬಳಸುವ ಹಲಗೆ) ಅರ್ಗತ್ತಿ (ಬಿದಿರಿನಿಂದ ನಿರ್ಮಿಸಿದ ತೊಲೆ), ಅಣ್ಣೆ (ಬೆಳೆಯನ್ನು ಕಾಪಾಡಲು ಬೆಳೆಯ ಮಧ್ಯ ಹಾಕಿಕೊಳ್ಳುತ್ತಿದ್ದ ಮಂಚ), ಅಡ್ಡೆ (ನೀರು ಹಾಗೂ ಇನ್ನಿತರ ವಸ್ತುಗಳನ್ನು ತರಲು ಬಳಸುತ್ತಿದ್ದ ಉಪಕರಣ), ಉದ್ದಿಗಿ (ಇಸು), ಕುಂಟೆ ಎಳೆಯಲು ಸಹಾಯವಾಗುವಂತೆ ಕುಂಟೆಗೆ ಜೋಡಿಸಿರುವ ಉದ್ದನೆಯ ಬೊಂಬಿನ ಕಟ್ಟಿಗೆ), ಉಪ್ಪಮಣಿ (ಭತ್ತದ ರಾಶಿ ಮಾಡಲು ಬಳಸುತ್ತಿದ್ದ ಸಾಧನ), ಏಣಿ(ಎತ್ತರದ ಭಾಗಕ್ಕೆ ಹತ್ತಲು ಬಿದಿರಿನಿಂದ ನಿರ್ಮಿಸಿದ ಸಾಧನ), ಒನ್ಕೆ(ತೆನೆ ಬಡಿಯಲು ಹಾಗೂ ಭತ್ತ, ರಾಗಿಗಳನ್ನು ಕುಟ್ಟಲು ಬಳಸುತ್ತಿದ್ದ ಪ್ರಮುಖ ಸಾಧನ), ಗರಿಸಿ (ಧಾನ್ಯ ಸಂಗ್ರಹಣೆಗೆ ಮಾಡಿರುವ ಬಿದಿರು ಅಥವಾ ಈಚಲು ಮರದಿಂದ ಮಾಡಿದ ಸಾಧನ), ಗಾಣ (ಎಣ್ಣೆಯನ್ನು ಅಥವಾ ರಸವನ್ನು ತೆಗೆಯುವ ಸಾಧನ) ದೋಟಿ (ಎತ್ತರದ ಮರಗಳಿಂದ ಕಾಯಿ, ಹಣ್ಣು, ಸೊಪ್ಪನ್ನು ಕೊಯ್ಯಲು ಉಪಯೋಗಿಸುವ ಸಾಧನ), ನೇಗಿಲು (ನೆಲವನ್ನು ಊಳಲು ಬಳಸುತ್ತಿದ್ದ ಪ್ರಮುಖ ಸಾಧನ), ಮೆರೆ (ಹುಲ್ಲನ್ನು ಸರಿಸಲು ಬಳಸುವ ಉಪಕರಣ), ಮಟ್ಟಗೋಲು(ನೆಲವನ್ನು ಸಮ ಮಾಡಲು ಬಳಸುವ ಸಾಧನ)[೨೫೪] ಬುಟ್ಟಿ, ಈ ಎಲ್ಲ ಉಪಕರಣಗಳನ್ನು ಬಡಗಿಗಳು ನಿರ್ಮಿಸುತ್ತಿದ್ದರು.

ಗತಕಾಲದ ಬಡಗಿಗಳನ್ನು ಅರೆಕುಶಲ ಬಡಗಿ ಮತ್ತು ಕುಶಲ ಬಡಗಿಗಳು[೨೫೫] ಎಂದು ಎಸ್.ಗುರುರಾಜಾಚಾರ್ ಅವರು ಎರಡು ಭಾಗ ಮಾಡುತ್ತಾರೆ. ದಿನನಿತ್ಯದ ಸಾಮಾನ್ಯ ಜನರು ಉಪಯೋಗಿಸುವ ಪೀಠೋಪಕರಣಗಳು, ನೇಗಿಲು, ಎತ್ತಿನಗಾಡಿ ಮೊದಲಾದ ವ್ಯವಸಾಯೋಪಯೋಗಿ ವಸ್ತುಗಳು, ಸಾಮಾನ್ಯ ಮನೆ ಮುಟ್ಟುಗಳನ್ನು ಮಾಡುವವರನ್ನು ಮೊದಲನೆಯ ಗುಂಪಿಗೂ; ಅರಸುಗಳ ಹಾಗೂ ಅಧಿಕಾರಿಗಳ ಅಭಿರುಚಿಗೆ ಅನುಗುಣವಾಗಿ ಸೂಕ್ಷ್ಮವಾದ ಕೆತ್ತನೆ ಕೆಲಸದ ಪರಿಕರಗಳನ್ನು ವಿಶೇಷವಾದ ಮರದ ದೇವಸ್ಥಾನಗಳನ್ನು ಹಾಗೂ ರಥಗಳನ್ನು ಮಾಡುವವರನ್ನು ಎರಡನೆ ಗುಂಪಿಗೆ ಸೇರಿಸಬಹುದು.

ಮೊದಲನೆಯ ಗುಂಪಿಗೆ ಸೇರಿದ ಅರೆಕುಶಲಗಳಾದ ಬಡಗಿಗಳು ಗ್ರಾಮಗಳಲ್ಲಿ ವಾಸವಾಗಿದ್ದು ಗ್ರಾಮಸ್ಥರಿಗೆ ಬೇಕಾಗುತ್ತಿದ್ದ ಗೃಹೋಪಯೋಗಿ ಹಾಗೂ ವ್ಯವಸಾಯಕ್ಕೆ ಉಪಯೋಗಿಸುವ ವಸ್ತುಗಳನ್ನು ಪೂರೈಸುತ್ತಿದ್ದರು. ಇಂಥ ಬಡಗಿಗಳಿಗೆ ಗ್ರಾಮಸ್ಥರು ವರ್ಷಕ್ಕೆ ಇಷ್ಟು ಎಂದು ಗೊತ್ತಾದ ಅಳತೆಯಲ್ಲಿ ಸಗಟಾಗಿ ಕಾಳನ್ನು ಕೊಡುತ್ತಿದ್ದರು. ಆಯಗಾರರಲ್ಲಿ ಒಬ್ಬನೆಂದು ಪರಿಗಣಿಸಿ ವಾರ್ಷಿಕ ಆಯವನ್ನು ಕೊಡುತ್ತಿದ್ದರು. ಅಥವಾ ಸ್ವಲ್ಪ ಭಾಗ ಜಮೀನನ್ನು ಅನುಭವಿಸಲು ಬಿಟ್ಟುಕೊಡುತ್ತಿದ್ದರು. ಹೀಗೆ ಹಳ್ಳಿಗೆ ಸಲ್ಲಿಸಿದ ಸೇವೆಗಾಗಿ ಬಡಗಿಗಳು ಆಯವನ್ನೊ ಭೂಮಿಯನ್ನೋ ಪಡೆದ ಹಲವು ಉದಾಹರಣೆಗಳು ಶಾಸನಗಳಲ್ಲಿ ಸಿಗುತ್ತವೆ.[೨೫೬]

ಎತ್ತಿನ ಬಂಡಿಗಳು ಅಂದಿನ ಸಾರಿಗೆ ಸಂಪರ್ಕಗಳಾಗಿದ್ದವು. ಬಡಗಿಗಳು ಇವುಗಳನ್ನು ತಯಾರು ಮಾಡುತ್ತಿದ್ದರು. ಇಂಥ ಬಂಡಿಗಳ ಮೇಲೆ ಕಂದಾಯವನ್ನು ವಿಧಿಸಿದ ಉಲ್ಲೇಖಗಳು ಶಾಸನಗಳಲ್ಲಿ

ಸಿಗುತ್ತವೆ. ಆದರೂ ಬಂಡಿಗಳನ್ನು ತಯಾರಿಸಿದ ಬಡಗಿಗಳ ಉಲ್ಲೇಖ ಶಾಸನಗಳಲ್ಲಿ ಸಿಗುವುದು ತಿಳಿಯದು.

ಕಾಲವನ್ನು ಹೇಳಿಲ್ಲದ ಶಿರಾ ತಾಲೂಕಿನ ಶಾಸನವು ಸಾಧಾರಣ ಸಂಶ್ರಾವಣ ಶು: ೧೪ ಗುರುವಾರ ತಾಳಗುಂದದ ಬಡಗಿ ಚಿನ್ನದಗಿರಿಶ...ಡಿ ಬಾಗಿಲು[೨೫೭] ಎಂಬುದಾಗಿ ಹೇಳುತ್ತಾರೆ. ಈ ಶಾಸನವು ದೊಡ್ಡ ಚಿಕ್ಕನಹಳ್ಳಿ ಎಂಬ ಗ್ರಾಮದ ಊರಿನ ಹೊರಬಾಗಿಲಿನ ಮೇಲೆಯೇ ಇರುವುದರಿಂದ ಆ ಒಂದು ದಿಕ್ಕಿನ ಬಾಗಿಲನ್ನು ಇದೇ ಚಿನ್ನದಗಿರಿಶ ಎಂಬ ಬಡಗಿಯು ಮಾಡಿದ್ದಾನೆ ಎಂದು ತಿಳಿಯಬಹುದು.

ಜಗಳೂರು ತಾಲೂಕು ನಿಬಗೂರಿನ ಶಾಸನದಂತೆ ಬಡಗಿ ಲಿಂಗೋಜನು ಕ್ರಿ.ಶ.೧೪೪೮ರಲ್ಲಿ ಆಂಜನೇಯ ಗುಡಿಯನ್ನು ಕಟ್ಟುತ್ತಾನೆ.[೨೫೮] ಇದಕ್ಕಾಗಿ ಗೌಡನು ಇವನಿಗೆ ಅರವತ್ತು ಒಕ್ಕಲು ಮಾನ್ಯವನ್ನು ಕೊಡುತ್ತಾನೆ. ಇದು ಮರದ ದೇವಸ್ಥಾನವಿರಬೇಕು. ಗೌರಯ್ಯ[೨೫೯] ಎನ್ನುವವನು ದೇವಸ್ಥಾನವನ್ನು ಕಟ್ಟಿದ ಮತ್ತೊಬ್ಬ ಬಡಗಿ, ಕಾಲ ೧೫೧೧ ಇವನ ಊರು ಸೊಂಡೇಕೆರೆ, ಇವನ ತಂದೆ ಪರವೋಜ ಎಂದು ಚಿತ್ರದುರ್ಗ ತಾಲೂಕು ಜಂಪಳನಾಯ್ಕನ ಕೋಟೆಯ ಹತ್ತಿರದ ಹನುಮಂತದೇವರ ಗುಡಿ ಇವನು ನಿರ್ಮಿಸುತ್ತಾನೆ.

ಕ್ರಿ.ಶ.೧೫೫೪ರ ಶಾಸನದಲ್ಲಿ ಬಾಗೂರಿನ ಹೊರ ಪೇಟೆಯನ್ನು ಕಟ್ಟಿಸಿದ ಉಲ್ಲೇಖವಿದೆ. ಈ ಸ್ಥಳವು ವ್ಯಾಪಾರ ಸ್ಥಳವಾದ್ದರಿಂದ ಇಂತಹ ಸ್ಥಳಗಳ ಅಭಿವೃದ್ಧಿಗೆ ಅಧಿಕಾರಿಗಳು ಹೆಚ್ಚಿನ ಗಮನ ನೀಡುತ್ತಿದದರು. "...ಹೊರಪೇಠೆ ಖಿಲವಾದಾಗ ಸ್ಥಳೀಯ ನಾಯಕರು ಲಿಂಗಣಗವುಡ, ಸೇನ ಬೋವ ತಿಂಮಪ್ಪ, ಹಸ್ತಿ ಬಡಿಗೆಯ ಮಾದಪ್ಪಸೆಟ್ಟಿ, ಮಲ್ಲಪ್ಪ ಸೆಟ್ಟಿ" ಮುಂತಾದವರನ್ನು ಕರೆಸಿಕೊಂಡು ಪೇಠೆಯನ್ನು ಕಟ್ಟಿಸಿದ್ದನ್ನು ಉಲ್ಲೇಖಿಸುತ್ತಾರೆ.[೨೬೦] ಬಡಿಗೆಯ ಮಾದಪ್ಪಸೆಟ್ಟಿ ಎಂಬ ವ್ಯಕ್ತಿಯನ್ನು ಹೆಸರಿಸಿದೆ. ಬಡಗಿ ವೃತ್ತಿಯ ಉಲ್ಲೇಖವಿರುವುದರಿಂದ ಬಡಗಿ ವೃತ್ತಿ ಪ್ರಮುಖ ವೃತ್ತಿಯಾಗಿತ್ತೆಂದು ಗ್ರಹಿಸಬಹುದು.

ಬಡಗಿಗಳು ನಿರ್ವಹಿಸುತ್ತಿದ್ದ ತುಂಬ ಮುಖ್ಯವಾದ ಕೆಲಸವೆಂದರೆ ಯುದ್ಧದಲ್ಲಿ ಉಪಯೋಗಿಸುತ್ತಿದ್ದ ಕೆಲವು ಮರದ ಆಯುಧಗಳನ್ನು ತಯಾರು ಮಾಡುತ್ತಿದ್ದುದು. ಆದರೆ ಯಾವ ಶಾಸನವೂ ಈ ಬಗ್ಗೆ ಪ್ರಸ್ತಾಪಿಸಿಲ್ಲದಿರುವಾಗ ಕುಮಾರ ರಾಮನ ಚರಿತೆಯು ಈ ವಿಷಯವನ್ನು ಪ್ರಸ್ತಾಪಿಸಿದೆ. 'ಬಲಿವ ಪೆಟಲಬೆಣೆ', 'ಡೆಂಕಣಿ ಗೈ', ಪಂದಿದತೆ' 'ತಿರುಗಣಿ', 'ಭೀಮಗದೆ', ಮೊದಲಾದ ಮರದ ಆಯುಧಗಳನ್ನು ಬಡಗಿಗಳು ಕೆತ್ತಿದ್ದರು ಎಂದು ಹೇಳುತ್ತದೆ.[೨೬೧] 'ಕೆತ್ತುವಾ ಬಡಗಿಗಳಿಂದಾ ದುರ್ಗ ಸಲೆಮೆರೆದುದು' ಎಂಬ ಉಕ್ತಿಯು ಬಹುಶಃ ಯುದ್ಧದ ಆಯುಧಗಳನ್ನು ಶತ್ರುಗಳಿಂದ ರಕ್ಷಿತವಾದ ರಹಸ್ಯವಾದ ದುರ್ಗದ ಒಳಗೆ ಇದ್ದುಕೊಂಡು ನಿರ್ಮಾಣ ಮಾಡುತ್ತಿದ್ದರು ಎಂಬ ಅಂಶವನ್ನು ಹೇಳುತ್ತದೆ.

**ಕಮ್ಮಾರರು**

ಕಮ್ಮಾರರು, ಅಕ್ಕಸಾಲಿಗರು, ಬಡಗಿಗಳು, ಕಂಚುಗಾರರು ಇದೇ ವಿಶ್ವಕರ್ಮ ಕುಲಕ್ಕೆ ಸೇರಿದವರು. ಇವರಲ್ಲಿ ಅಕ್ಕಸಾಲಿಗಳು ಚಿನ್ನದ ಕೆಲಸವನ್ನು ಮಾಡುವವರು ಅಪರೂಪವಾಗಿ ಶಾಸನಗಳನ್ನು ಕೆತ್ತುತ್ತಿದ್ದದ್ದು ಉಂಟು. ಕಬ್ಬಿಣದ ಕೆಲಸಗಳನ್ನು ಮಾಡುತ್ತಿದ್ದವರು ಕಮ್ಮಾರರು ಅಥವಾ ಕಂಬಾರ ಎಂದು ಎರಡೂ ರೂಪಗಳಲ್ಲಿ ಬಳಕೆಯಲ್ಲಿವೆ.

ಮರದ ಕೆಲಸಗಳನ್ನು ಮಾಡುವವನು ಬಡಗಿ. ದೇವಸ್ಥಾನಕ್ಕೆ ಸಂಬಂಧಿಸಿದ ಮರಗೆಲಸ ಮಾಡಲು, ಮುರಿದು ಹೋದ ಸಾಮಾನುಗಳನ್ನು ಸರಿಪಡಿಸಲು ಇವರಿಗೆ ಶಾಶ್ವತವಾದ ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು. ಇವರು ಅನೇಕ ಶಾಸನಗಳನ್ನು ಕೆತ್ತಿದ್ದಾರೆ. ಇದನ್ನು ನೋಡಿದರೆ ಶಿಲ್ಪಿ, ಕಮ್ಮಾರ, ಅಕ್ಕಸಾಲಿ ಮತ್ತು ಬಡಗಿಗಳು ಪರಸ್ಪರದ ವೃತ್ತಿಗಳನ್ನು ಅವಲಂಬಿಸಲು ಅವಕಾಶವಿದ್ದಂತೆ ಊಹಿಸಬಹುದು.

ಪ್ರತಿಯೊಂದು ಹಳ್ಳಿಯಲ್ಲಿಯೂ ಒಬ್ಬ ಕಮ್ಮಾರನಿರುತ್ತಿದ್ದ. ಇವನು ಸಾಮಾನ್ಯವಾಗಿ ತನ್ನ ಮನೆಯಲ್ಲಿ ಅಥವಾ ಮನೆಯ ಹತ್ತಿರವೇ ಕಬ್ಬಿಣದ ಕೆಲಸವನ್ನು ನಿರ್ವಹಿಸುತ್ತಿದ್ದ. ಹೆಚ್ಚಾಗಿ ಕಮ್ಮಾರರು ಕೃಷಿಯ ಉತ್ಪನ್ನಗಳಾಗಿದ್ದ ನೇಗಿಲು, ಕುಡುಗೋಲು, ಕೊಡಲಿ ಮತ್ತು ಗಾಡಿಯ ಉಪಕರಣಗಳನ್ನು ಸಿದ್ಧಪಡಿಸುತ್ತಿದ್ದರು. ಅದೇ ರೀತಿ ಗೃಹ ಉಪಯೋಗಿ ವಸ್ತುಗಳಾದ ಬಾಡಲೆ, ಸೌಟುಗಳು, ಕೊಡಗಳು, ಪಾತ್ರೆಗಳನ್ನು ತಯಾರಿಸುತ್ತಿದ್ದರು. ಸಾಮಾನ್ಯವಾಗಿ ಹಿತ್ತಾಳೆ ಮತ್ತು ತಾಮ್ರವನ್ನು ಅಡಿಗೆ ಪಾತ್ರೆಗಳನ್ನು ಮತ್ತು ಕುಡಿಯುವ ನೀರಿನ ಚಂಬು (ಜಗ್ಗು) ತಯಾರಿಸಲು ಉಪಯೋಗಿಸುತ್ತಿದ್ದರು. ಈ ಲೋಹಗಳನ್ನು ಬಳಸಿ ವಸ್ತುಗಳನ್ನು ತಯಾರಿಸುವ ಕುಶಲ ಕರ್ಮಿಗಳನ್ನು ಹಾಗೂ ಮನೆಯಲ್ಲಿ ಉಪಯೋಗಿಸುವ ಜನರುಗಳನ್ನು ಶ್ರೀಮಂತರೆಂದು ಕರೆಯುತ್ತಿದ್ದರು. ಸಾಮಾನ್ಯ ಜನರು ಪ್ರತಿಯೊಂದಕ್ಕೂ ಮಣ್ಣಿನ ಕುಡಿಕೆ ಇನ್ನಿತರ ವಸ್ತುಗಳನ್ನು ಬಳಸುತ್ತಿದ್ದರು ಎಂದು ಊಹಿಸಬಹುದು.

ಕಬ್ಬಿಣದ ಉತ್ಪಾದನೆಗೆ ಕಬ್ಬಿಣದ ಅದಿರು, ಜೇಡು ಮಣ್ಣು, ಸುಣ್ಣದ ಕಲ್ಲು ಮತ್ತು ಉರುವಲು ಅವಶ್ಯಕ ಕಚ್ಚಾ ಸಾಮಗ್ರಿಗಳು. ಉಕ್ಕಿನ ಉತ್ಪಾದನೆಗೆ ಕಬ್ಬಿಣದ ಅದಿರು, ಮ್ಯಾಂಗನೀಸ್‌ನ ಅದಿರು, ಸುಣ್ಣದ ಕಲ್ಲು, ಡಾಲೋಮೈಟ್, ಕ್ರೋಮೈಟ್, ಉರುವಲು ಮತ್ತು ಕೆಲವೊಂದು ಸಲ ಟೈಟಾನಿಯಂ ಅವಶ್ಯಕವಾಗಿ ಬೇಕಾಗುವ ಕಚ್ಚಾವಸ್ತುಗಳು. ಈ ಎಲ್ಲ ಖನಿಜ ವಸ್ತುಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಸಿಗುತ್ತವೆ. ಆದ್ದರಿಂದ ಇಲ್ಲಿ ಕಬ್ಬಿಣ ಮತ್ತು ಉಕ್ಕನ್ನು ಪುರಾತನ ಕಾಲದಿಂದಲೂ ಉತ್ಪಾದಿಸಲಾಗುತ್ತಿತ್ತು ಎಂಬುದಕ್ಕೆ ಹೊಸದುರ್ಗ ತಾಲೂಕಿನಲ್ಲಿ ಸಿಕ್ಕ ಕುಲುಮೆಗಳು, ಮೂಸೆಗಳು ಮತ್ತು ಕಿಟ್ಟಗಳು ಸಾಕ್ಷಿಯಾಗಿವೆ. ಆದರೆ ಇವುಗಳ ಸರಿಯಾದ ಅಧ್ಯಯನ ಆಗಿಲ್ಲ. ಕೆಲವು ವರ್ಷಗಳ ಹಿಂದೆ ಒಬ್ಬ ವಿದೇಶಿ ಪುರಾತತ್ವ ಶಾಸ್ತ್ರಜ್ಞರು ಹೊಸದುರ್ಗ ತಾಲೂಕಿಗೆ ಭೇಟಿ ನೀಡಿದರು. ಆದರೆ ಅವರ ವರದಿ ಲಭ್ಯವಾಗಿಲ್ಲ.

ಮಧ್ಯಕಾಲೀನ ಕಾಲದಲ್ಲಿ ಮತ್ತು ಅದಕ್ಕೂ ಪೂರ್ವದಲ್ಲಿ ನಮ್ಮ ದೇಶದಿಂದ ಅದರಲ್ಲೂ ವಿಶೇಷವಾಗಿ ಕರ್ನಾಟಕದಿಂದ ಶ್ರೇಷ್ಠ ಮಟ್ಟದ ಉಕ್ಕು ನಿರ್ಯಾತವಾಗುತ್ತಿತ್ತು ಎಂದು ತಿಳಿದುಬರುತ್ತದೆ. ಮಧ್ಯಪ್ರಾಚ್ಯಾದ ಅರಬ್ಬರು ಇಲ್ಲಿಂದ ಉಕ್ಕನ್ನು ಆಮದು ಮಾಡಿಕೊಂಡು ಗ್ರೀಕ್ ಮತ್ತು ರೋಮನ್ನರಿಗೆ ಮಾರುತ್ತಿದ್ದರೆಂದು ತಿಳಿದುಬಂದಿದೆ. ಸುಪ್ರಸಿದ್ಧ ಡಮಾಸ್ಕಾಸ್ ಕತ್ತಿಗಳು ಈ ದೇಶದಲ್ಲಿ ತಯಾರಾಗುತ್ತಿದ್ದವು ಎಂದು ಹೇಳುತ್ತಾರೆ.

ಆಗಲೇ ಹೇಳಿದಂತೆ ಬುಕಾನನ್ ಕ್ರಿ.ಶ.೧೮೦೧ ಮೇ ತಿಂಗಳ ೩ನೇ ದಿನಾಂಕದಂದು ಚಿಕ್ಕ ಬ್ಯಾಳಿಕೆರೆಯಲ್ಲಿರುವ ಎರಡು ಕಬ್ಬಿಣದ ಕುಲುಮೆಗಳಿಗೆ ಭೇಟಿ ನೀಡಿ ಕಬ್ಬಿಣ ಧಾತುಗಳನ್ನು ಎರಕ ಹೊಯ್ಯುವ ಕ್ರಿಯೆಯನ್ನು ವಿವರಿಸಿದ್ದಾನೆ. ಈ ಕಬ್ಬಿಣದ ಬೀಡು ಕಬ್ಬಿಣದ ಉತ್ಪಾದನೆಗಾಗಿ ಕುದುರೆ ಕಣಿವೆ ಕಾವಲಿನ ಗಣಿಯಿಂದ ಕಬ್ಬಿಣದ ಅದಿರನ್ನು (ಕಟ್ಟಿ ಸಣ್ಣ ಚೂರುಗಳ ರೂಪದಲ್ಲಿ) ಕೋಣ ಮತ್ತು ಕತ್ತೆಗಳ ಮೇಲೆ ಸಾಗಿಸಲಾಗುತ್ತಿತ್ತು ಎಂದು ಹೇಳಿದ್ದಾನೆ. ಕುದುರೆ ಕಣಿವೆ ಕಾವಲಿನ ಕಬ್ಬಿಣದ ಅದಿರು ಹೆಮಟೈಟ್ ಖನಿಜವಾಗಿತ್ತು.

ಪ್ರತಿದಿನ ಎರಡು ಸಲ ಕಬ್ಬಿಣ ದ್ರಾವಣವನ್ನು ಹೊರಕ್ಕೆ ತೆಗೆದು ಪ್ರತಿಸಲ ನೇಗಿಲಿನ ೨೧ ಕಬ್ಬಿಣದ ನೇಗಿಲು ಗುಳ(ಕುಳ)ಗಳನ್ನಾಗಿ ಎರಕ ಹೊಯ್ಯಲಾಗುತ್ತಿತ್ತು. ಅಂದರೆ ಪ್ರತಿ ದಿನ ಎರಕ ಹೊಯ್ಯಲಾಗುತ್ತಿದ್ದ ೨೪ ಕಬ್ಬಿಣದ ನೇಗಿಲುಗಳನ್ನು ಈ ಕೆಳಗಿನಂತೆ ಹಂಚಲಾಗುತ್ತಿತ್ತು.

| | |
|---|---|
| ಮಾಲೀಕನಿಗೆ | ೧೧ |
| ಕಮ್ಮಾರನಿಗೆ | ೦೯ |
| ನಾಲ್ಕು ಜನ ಸುತ್ತಿಗೆ ಎತ್ತಿ | ೩.೫ |
| ಹೊಡೆಯುವ ಆಳುಗಳಿಗೆ | ೦೭ |
| ಆರು ಜನ ತಿದಿ ಒತ್ತುವ ಕೂಲಿ ಆಳುಗಳಿಗೆ | ೦೮ |
| ಗಣಿ ಮಾಲೀಕನಿಗೆ | ೦೧ |
| ಕೋಣ ಅಥವಾ ಕತ್ತೆಗಳ ಮಾಲೀಕನಿಗೆ | ೨.೫ |
| **ಒಟ್ಟು** | **೪೨** |

ಪ್ರತಿ ನೇಗಿಲಗುಳದ ಬೆಲೆ ೧/೪ ಫಣ. ಕಬ್ಬಿಣವನ್ನು ಪ್ರತಿ ಹಂಡ್ರಡ್ ಪೇಟಿಗೆ ೭ ಶಿಲ್ಲಿಂಗ್ ಮತ್ತು ೩೪/೩ ಪೆನ್ನುಗಳ ಬೆಳೆ ಕಟ್ಟಲಾಗುತ್ತಿತ್ತು.

ಈ ಕಬ್ಬಿಣದ ಉತ್ಪಾದನೆಯಲ್ಲಿ ೯/೪೨ರಷ್ಟು ಖರ್ಚು ಇದ್ದಿಲಿಗಾಗಿ ಮೀಸಲಾಗಿರುತ್ತಿತ್ತು. ಕೂಲಿಕಾರರನು ಪ್ರತಿ ದಿನ ಅತಿ ಹೆಚ್ಚೆಂದರೆ ೧/೨ಪೆನ್ನುಗಳಿಸುತ್ತಿದ್ದನು. ಕುಲಿಮೆ ಮಾಲಿಕನ ಖರ್ಚು ಈ ರೀತಿಯಾಗಿತ್ತು.

| | |
|---|---|
| ತಿದಿಗಳಿಗಾಗಿ | ೧೦೦ ಫಣ |
| ದಾನ ಮತ್ತು ಬಲಿಗಳಿಗಾಗಿ | ೩೦ ಫಣ |
| ಸರಕಾರಕ್ಕೆ ತೆರಿಗೆ | ೩೭೫ ಫಣ |
| **ಒಟ್ಟು** | **೫೦೫ ಫಣ**[೨೬೨] |

ಚಿತ್ರದುರ್ಗ ನಾಯಕರ ಕಾಲದಲ್ಲಿ ಹೆಚ್ಚಿನ ಕಬ್ಬಿಣದ ವಸ್ತುಗಳು ಉತ್ಪಾದನೆ ಆಗುತ್ತಿದ್ದವು. ಇದಕ್ಕೆ ಸಂಬಂಧಿಸಿದಂತೆ 'ಸಾಣಿಹಳ್ಳಿ' ಗ್ರಾಮವು ಅತೀ ಹೆಚ್ಚು ಕಮ್ಮಾರ ಕುಟುಂಬಗಳನ್ನು ಹೊಂದಿರುವ ಗ್ರಾಮವಾಗಿದ್ದು, ಇಲ್ಲಿ ಸಹಾಣ, ಸಹಣ, ಕುದುರೆಗಳನ್ನು ಸಾಕುವುದು, ಪಳಗಿಸುವುದು, ಆನೆ ಕುದುರೆಗಳನ್ನು ಕಟ್ಟುವ ಮನೆ ಲಾಯ, ಕರೋಟ, ಸಾಹಣಿ ಈಗ ಸಹಣಿ, ಸಾಣಿ, ಸಾಹೀಣಿ ಎಂದು ಕರೆಯುತ್ತಾರೆ. ಯುದ್ಧದ ಆಯುಧಗಳನ್ನು ಹರಿತಗೊಳಿಸಲು, ಮಸೆಯುವ ಕಲ್ಲು, ಉಜ್ಜುವ ಕಲ್ಲುಗಳಿಂದ ನಯಗೊಳಿಸುವ ಕೇಂದ್ರವಾಗಿ ಹೊಸದುರ್ಗ ತಾಲೂಕಿನ ಈ ಗ್ರಾಮವನ್ನು ಗುರುತಿಸಬಹುದು ಎಂದು ಕರ್ನಾಟಕ ಗ್ರಾಮ ಚರಿತ್ರೆ ಕೋಶ (ಚಿತ್ರದುರ್ಗ) ಸಂಪುಟದಲ್ಲಿ ಗುರುತಿಸಲಾಗಿದೆ.[೨೬೩]

ಹಲವು ಗ್ರಾಮಗಳಲ್ಲಿನ ಕಮ್ಮಾರರು ಅನೇಕ ಆಯುಧಗಳನ್ನು ತಯಾರಿಸಿ ಸಾಣಿಕೆರೆಗೆ ಸಾಗಿಸುತ್ತಿದ್ದರು. ಇಲ್ಲಿ ಆಯುಧಗಳನ್ನು ಸಾಣಿ ಹಿಡಿದು ಚಿತ್ರದುರ್ಗದ ನಾಯಕರಿಗೆ ಸಾಗಿಸುತ್ತಿದ್ದರು. ಹಾಗಾಗಿಯೇ ಈ ಗ್ರಾಮಕ್ಕೆ ಸಾಣಿಕೆರೆ ಎಂದು ಹೆಸರು ಬಂದಿರುವುದು ಗಮನಾರ್ಹ.[೨೬೪]

ರೈತರ ವ್ಯವಸಾಯ ಸಾಮಗ್ರಿಗಳನ್ನು ಇಲ್ಲಿ ತಯಾರಿಸಲಾಗುತ್ತಿತ್ತು. ಆನೆಗೋಡ ಶಾಸನೋಕ್ತ ಕಮ್ಮಾರ[೨೬೫] ಮಲ್ಲಯ್ಯ, ಸುರೆಹೊನ್ನ ಶಾಸನೋಕ್ತ ಕುಲುಮೆದೆರೆ,[೨೬೬] ನ್ಯಾಮತಿ ಶಾಸನೋಕ್ತ ಕಮ್ಮಾರ

ಬೀದಿ[೨೬೭] ಈ ಎಲ್ಲ ಉಲ್ಲೇಖಗಳಿಂದ ಈ ಪ್ರದೇಶದಲ್ಲಿ ಕಮ್ಮಾರರು ವಾಸಿಸುತ್ತಿದ್ದುದು ತಿಳಿದುಬರುತ್ತದೆ. ಅವರು ತಯಾರಿಸುತ್ತಿದ್ದ ವಸ್ತುಗಳಿಗೆ ಕೂಲಿಯನ್ನು ಪಡೆಯುತ್ತಿದ್ದರು. ಅಲ್ಲದೆ ಸಮಾಜದಲ್ಲಿ ತಮ್ಮದೆ ಆದ ಓಣಿ (ಬೀದಿ)ಯನ್ನು ನಿರ್ಮಿಸಿಕೊಂಡಿದ್ದರೆಂದು ತಿಳಿದು ಬರುವುದರ ಜೊತೆಗೆ ಇವರಿಗೆ ತೆರಿಗೆಯನ್ನು ವಿಧಿಸಿದ್ದು ತಿಳಿದುಬರುತ್ತದೆ. ಯುದ್ಧರಂಗದಲ್ಲಿ ಹಲವಾರು ಯುದ್ಧ ಶಸ್ತ್ರಾಸ್ತ್ರಗಳನ್ನು ಬಳಸುವುದರಿಂದ ಕಮ್ಮಾರಿಕೆಯು ಕೈಗಾರಿಕೆಗಳಲ್ಲಿ ಬಹುಮುಖ್ಯ ಪಾತ್ರವಹಿಸಿತ್ತೆಂದು ಹೇಳಬಹುದು.

**ಕುಂಬಾರ**

ಮಾನವನ ಅತ್ಯಂತ ಪುರಾತನವಾದ ಕಲೆಗಳಲ್ಲಿ ಕುಂಬಕಲೆ ಕೂಡ ಒಂದು. ಗ್ರಾಮೀಣ ಪರಂಪರೆಯಲ್ಲಿ ಬೆಳೆದು ಬಂದ ಹಲವು ಹನ್ನೊಂದು ಕುಲಕಸುಬುಗಳಲ್ಲಿ ಕುಂಬಾರಿಕೆ ಪ್ರಮುಖವಾದದ್ದು. ಗ್ರಾಮೀಣ ಮೂಲದ ಕುಂಬಾರಿಕೆಯನ್ನು ಜನಪದ ಮೂಲದ ವೃತ್ತಿ ಎಂದು ಕರೆಯಲಾಗುತ್ತದೆ. ಬಹು ಪ್ರಾಚೀನದಿಂದಲೂ ಮಾನವನ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಹಾಗೂ ಲೌಕಿಕ ಬದುಕಿಗೆ ನೆರವಾಗುತ್ತಲೇ ಬಂದ ಕುಂಭ ಕಲೆ ಮೃತ್ ಶಿಲ್ಪವಾಗಿಯೂ ಚರಿತ್ರೆಯುದ್ದಕ್ಕೂ ವಿಜೃಂಭಿಸಿದೆ.

ಕುಂಬಾರ ಎನ್ನುವ ಶಬ್ಧಕ್ಕೆ ಕುಲಾಲ, ಚಕ್ರಿ, ದಂಡಧರ, ಕುಂಭಕಾರ ಮುಂತಾದ ಅರ್ಥಗಳಿವೆ. ಕುಂಭ ಎಂದರೆ ಸಂಸ್ಕೃತದಲ್ಲಿ ನೀರಿನ ಗಡಿಗೆ ಎಂದರ್ಥ ಅಂದರೆ ಕುಂಬಾರರು ಜಲಸಂಸ್ಕೃತಿಯ ಜನಾಂಗ ಎಂದು ಅರ್ಥೈಸಬಹುದು. ಜಲ ಎಂದರೆ ಪವಿತ್ರ ಗಂಗಾ ಮಾತೆ ಎನ್ನುವ ನಂಬಿಕೆ ಇದೆ. ಇನ್ನೊಂದು ರೀತಿಯಲ್ಲಿ ಕುಂಬಾರರು ಅಗ್ನಿ ಸಂಸ್ಕೃತಿಗೆ ಹತ್ತಿರದವರೆಂದು ಹೇಳಬಹುದು. ಮಾಡಿದ ಬದುಕಿಗೆ ಬೆಂಕಿ ಕೊಡುವ ಜನ ಎಂದು ಕುಂಬಾರರ ಬಗೆಗೆ ಗಾದೆ ಇದೆ. ಹಸಿ ಮಣ್ಣಿನ ಮಡಿಕೆಗಳನ್ನು ಅವಿಗೆಯಲ್ಲಿಟ್ಟು ಸುಡುವುದರಿಂದ ಸಹಜವಾಗಿಯೇ ಆ ಮಾತು ಬಂದಿರಬಹುದು.[೨೬೮]

ಮಧ್ಯಯುಗದ ಹಂತಕ್ಕೆ ಬೃಹತ್ ಪ್ರಮಾಣದ ಲೋಹದ ವಸ್ತುಗಳನ್ನು ಬಳಸುವಷ್ಟು ಕೈಗಾರಿಕೆಗಳು ಬೆಳೆದಿರಲಿಲ್ಲ. ಹಾಗಾಗಿ ಮಣ್ಣಿನಿಂದ ಮಾಡಿದ ಪಾತ್ರೆ ಇನ್ನಿತರೆ ಗೃಹೋಪಯೋಗಿ ವಸ್ತುಗಳನ್ನು ತಯಾರಿಸುತ್ತಿದ್ದರು. ಈ ಕೈಗಾರಿಕೆಯು ಸ್ಥಳೀಯವಾಗಿ ಹೆಚ್ಚು ಪ್ರವರ್ಧಮಾನಕ್ಕೆ ಬರಲು ಪ್ರಮುಖ ಕಾರಣವೆಂದರೆ, ಮಣ್ಣಿನಿಂದ ತಯಾರಾದ ಮಡಿಕೆ, ಕುಡಿಕೆ, ಅರಿವಿಗಳು ಒಡೆದು ಹೋಗುವ ಸಂದರ್ಭ ಹೆಚ್ಚಾಗಿದ್ದು ಹಾಗೂ ದೂರದ ಮಾರುಕಟ್ಟೆಗಳಿಗೆ ಕೊಂಡೊಯ್ಯಲು ಸರಿಯಾದ ಸಾರಿಗೆ ವ್ಯವಸ್ಥೆ ಇಲ್ಲದಿರುವುದಾಗಿದ್ದಿತು. ಮಣ್ಣಿನಿಂದ ಪದಾರ್ಥಗಳನ್ನು ತಯಾರಿಸಲು ಕುಂಬಾರರು ಚಕ್ರ, ಕಲ್ಲು ಮತ್ತು ಕೋಲನ್ನು ಬಳಸುತ್ತಿದ್ದರು. ಇವರು ಈ ವಸ್ತುಗಳನ್ನು ತಯಾರಿಸಲು ಅಗತ್ಯವಾದ ಮಣ್ಣಿಗಾಗಿ ಕೆರೆಗಳು, ನದಿಗಳು ಮತ್ತು ನಾಲೆಗಳ ತಳವನ್ನು ಶೋಧಿಸುತ್ತಿದ್ದರು. ಕುಂಬಾರರು ಮಣ್ಣಿನ ತಟ್ಟೆಗಳು, ಊಟದ ಪಾತ್ರೆ, ಎಲೆ, ಹೂವಿನ ಕುಂಡ, ಬಾನಿ, ಹೊಗೆಬತ್ತಿ ಸೇದುವ ಪೈಪು ಹಾಗೂ ಮಣ್ಣಿನ ದೀಪ ಇನ್ನಿತರೆ ದೇವರ ಮೂರ್ತಿಗಳನ್ನು ತಯಾರಿಸುತ್ತಿದ್ದರು. ಪ್ರಮುಖವಾಗಿ ಮನೆಯ ಮೇಲೆ ಛಾವಣಿಗೆ ಹೊದಿಸಲು ನಾಡ ಹೆಂಚುಗಳನ್ನು, ಧಾನ್ಯವನ್ನು ಶೇಖರಿಸಿಕೊಳ್ಳಲು ದೊಡ್ಡ ದೊಡ್ಡ ಮಣ್ಣಿನ ಪಾತ್ರೆಗಳನ್ನು ಗ್ರಾಮೀಣ ಪ್ರದೇಶದಲ್ಲಿ ತಯಾರಿಸುತ್ತಿದ್ದರು. ಇವುಗಳನ್ನು ಗುಡಾಣಗಳೆಂದು ಕರೆಯಲಾಗುತ್ತಿತ್ತು.[೨೬೯] ಹಂತು ತೋಟಕ್ಕೆ ಲೇಸು ತುಂಬು ಕೆರೆಗೆ ಲೇಸು, ಸಂಬಾರ ಲೇಸು ಅಡುಗೆಗೆ, ಊರಿಗೊಬ್ಬ ಕುಂಬಾರ ಲೇಸು ಸರ್ವಜ್ಞ[೨೭೦]

ಸರ್ವಜ್ಞ ತನ್ನ ವಚನಗಳಲ್ಲಿ ಅಂದಿನ ವರ್ಗೀಕೃತ ವೃತ್ತಿ ವ್ಯವಸ್ಥೆಯನ್ನು ಅನಾವರಣಗೊಳಿಸುತ್ತಾನೆ. ಹೊಳಲ್ಕೆರೆ ಶಾಸನ ಉಲ್ಲೇಖವಿರುವ ಕುಂಬಾರ ಬಂಮಣ[೨೭೧] ಎಂಬುವವನು ಹಣ ಸಂಗ್ರಹಿಸಲು ತಲೆಪೂಸದಂನಮುಣದ ವೀರಬ್ರತಮಂ ಕೈಕೊಂಡ; ಅಂದರೆ ಸ್ನಾನ ಮಾಡದ ಅಂನ್ನವನ್ನು ಉಣ್ಣದ ವ್ರತವನ್ನು ಕೈಗೊಂಡು ಕುಂಬೇಶ್ವರ ದೇವಾಲಯವನ್ನು ಕಟ್ಟಿಸಿದಂತೆ ಶಾಸನ ಹೇಳುತ್ತದೆ. ಅಂದರೆ ಉತ್ಪಾದನೆ ಹೆಚ್ಚಾದಂತೆಲ್ಲಾ ಆದಾಯ ಹೆಚ್ಚಾಗುತ್ತಿತ್ತು. ಈ ಆದಾಯದ ಮೂಲಕ ಸಾಮಾಜಿಕ ಕಾರ್ಯಗಳನ್ನು ಮಾಡುತ್ತಿದ್ದರು ಎಂದು ತಿಳಿಯಬಹುದು.

**ಅಕ್ಕಸಾಲಿಗ**

ಕಮ್ಮಾರ, ಬಡಗಿ, ಅಕ್ಕಸಾಲಿಗ, ಶಿಲ್ಪಿ ಹಾಗೂ ಕಂಚುಗಾರ ಇವರು ವಿಶ್ವಕರ್ಮರು, ಪಾಂಚಾಳರು, ವಿಶ್ವಬ್ರಾಹ್ಮಣರು, ಪಂಚಕರ್ಮಿಯರು, ಆಚಾರಿ ಮುಂತಾದ ಹೆಸರುಗಳಿಂದ ಗುರುತಿಸಿಕೊಂಡು ಚರಿತ್ರೆಯಲ್ಲಿ ಪ್ರಮುಖ ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ಸಂಸ್ಕೃತದಲ್ಲಿ ಪಂಚ ಎಂದರೆ ಐದು ಎಂದು ಅರ್ಥ. ಕಬ್ಬಿಣ, ಕಟ್ಟಿಗೆ, ಬೆಳ್ಳಿ, ಬಂಗಾರ, ಕಲ್ಲು ಹಾಗೂ ಕಂಚು ಇವುಗಳಿಂದ ವಸ್ತು ಉತ್ಪನ್ನಗಳನ್ನು ಮಾಡುವ ವೃತ್ತಿಯ ಸಮುದಾಯವನ್ನು ಪಾಂಚಾಳ ಎಂದು ಕರೆಯುತ್ತಾರೆ. ಈ ವೃತ್ತಿ ಸೂಚಕ ಪದಗಳು ಮೇಲ್ನೋಟಕ್ಕೆ ಜಾತಿ ಸೂಚಕಗಳಂತೆ ಭಾಸವಾಗುತ್ತದೆ.[೨೭೨] ಇದರಲ್ಲಿ ಬೆಳ್ಳಿ, ಬಂಗಾರ, ಕಂಚುಗಳನ್ನು ಬಳಸಿ ವಿಭಿನ್ನ ಆಭರಣಗಳನ್ನು ತಯಾರಿಸುವ ವೃತ್ತಿಯವರನ್ನು ಅಕ್ಕಸಾಲಿಗರು ಎಂದು ಕರೆಯುತ್ತಾರೆ.

ಅಕ್ಕಸಾಲಿಗ ಆಭರಣ ಮಾಡುವ ಅನುಭವವನ್ನು, ದಕ್ಷತೆಯನ್ನು ಗಳಿಸಿಕೊಂಡಿರುವವರು. ಚಿನ್ನ, ಬೆಳ್ಳಿ, ತಾಮ್ರ ಮುಂತಾದವುಗಳಿಂದ ಆಭರಣಗಳು, ಕಿರೀಟ, ದೇವರ ವಿಗ್ರಹಗಳು, ದೇವರ ಪೀಠಗಳನ್ನು ಮಾಡುತ್ತಿದ್ದರು. ಅಕ್ಕಸಾಲಿಗರು ಪತ್ತಾರ್, ವಿಶ್ವಕರ್ಮ, ಓಜರು, ಚಿನಿವಾರರು, ರಥಕಾರರು, ಚಿನ್ನಚಾರಿ, ಅರ್ಕಸಾಲಿಗ ಮುಂತಾದ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಅಮೂಲ್ಯ ಆಭರಣಗಳನ್ನು ಸಿದ್ದಪಡಿಸುವುದರಲ್ಲಿ ಇವರು ನಿಪುಣರು. ಅಕ್ಕಸಾಲಿಗರು ನಾವು ಜಗತ್ತನ್ನು ಸೃಷ್ಟಿಸಿದವರೆಂದು, ಪರಬ್ರಹ್ಮ ಸ್ವರೂಪನೆಂದೂ ವೇದಗಳಲ್ಲಿ ವರ್ಣಿತವಾಗಿರುವ 'ವಿಶ್ವಕರ್ಮ' ಅಕ್ಕಸಾಲಿಗ ವಂಶದ ಮೂಲ ಪುರುಷನೆಂದು ನಂಬುತ್ತಾರೆ. ಬಂಗಾರದ ಆಭರಣಗಳನ್ನು ಮಾಡುವ ಸ್ಥಳವನ್ನು 'ಅಕ್ಕಸಾಲೆ' ಎಂದು ಕರೆಯುತ್ತಾರೆ. ಅಕ್ಕಸಾಲಿಗ ವಿಶ್ವಬ್ರಾಹ್ಮಣ ಧರ್ಮದ ಪೂರ್ವಚಾರಗಳನ್ನೆಲ್ಲಾ ಪಾಲಿಸುತ್ತಾ ಶ್ರೇಷ್ಠನಾಗಿರುವ ವಿಶ್ವಕರ್ಮ ವಂಶಸ್ಥನೆ. ಮಾಂಗಲ್ಯ, ಮೂಗುತಿ, ಬಳೆ, ಕುತ್ತಿಗೆ ಸರ, ಕಾಲುಂಗರ, ಮಾಡಬೇಕೆಂಬ ನಿಯಮವಿತ್ತು. ಈ ಪಂಚಾಭರಣಗಳು ಮಂಗಳಕರ ವಸ್ತುಗಳಾಗಿದ್ದು ಸುಮಂಗಲೆಯಾದವಳು ಈ ಪಂಚಾಭರಣಗಳನ್ನು ಕಡ್ಡಾಯವಾಗಿ ತೊಡಲೇಬೇಕಾದ ಆಭರಣಗಳೆಂಬ ನಂಬಿಕೆ ಇದೆ. ಆದರೆ ಇತ್ತೀಚಿನ ದಿನಗಳಲ್ಲಿ 'ಮಾಂಗಲ್ಯ' ಒಂದನ್ನು ಮಾತ್ರ ವೈದಿಕ ಸಂಪ್ರದಾಯಕ್ಕನುಗುಣವಾಗಿ ತಯಾರಿಸಲಾಗುತ್ತಿದೆ. ಇಂದಿಗೂ ಇವರ ಉದ್ಯೋಗ ಪರಂಪರಾಗತವಾಗಿ ಮುಂದುವರೆದುಕೊಂಡು ಬರುತ್ತಿದೆ.[೨೭೩] ಪ್ರಾಚೀನ ಕಾಲದ ನಾಗರಿಕತೆಯನ್ನು ಗುರುತಿಸುವಾಗ ಅಕ್ಕಸಾಲಿಗರು ಮಾಡಿರುವ ಆಭರಣದ ವಿನ್ಯಾಸಗಳು ಪರಿಗಣಿಸಲ್ಪಡುತ್ತವೆ. ಅಕ್ಕಸಾಲಿಗ ವೃತ್ತಿ ಪರಂಪರಾನುಗತವಾಗಿ ಬಂದ ವೃತ್ತಿ. ಈ ವೃತ್ತಿ ಪ್ರಸ್ತುತ ಸಂದರ್ಭದಲ್ಲಿ ಲಾಭದಾಯಕ ವೃತ್ತಿಯಾಗಿ ಮಾರ್ಪಟ್ಟಿದೆ. ಅಕ್ಕಸಾಲಿಗ ವೃತ್ತಿಯ ಬಗ್ಗೆ ಕೌಟಿಲ್ಯನ ಅರ್ಥಶಾಸ್ತ್ರ, ಕನಕದಾಸನ ಮೋಹನ ತರಂಗಿಣಿ ಹಾಗೂ ತ್ರಿಪದಿಗಳಲ್ಲಿ ಉಲ್ಲೇಖವಾಗಿರುವುದನ್ನು ಕಾಣಬಹುದು.

ಸರ್ವಜ್ಞನು ತ್ರಿಪದಿಯಲ್ಲಿ ಅಕ್ಕಸಾಲಿಗರನ್ನು ಕುರಿತು ಈ ಕೆಳಗಿನಂತೆ ಹೇಳಿದ್ದಾನೆ.

'ಅಕ್ಕಸಾಲೆ ಒಂದೂರಿಗೊಕ್ಕಲೆಂನೆನ ಬೇಡ
ಬೆಕ್ಕು ಬಂದಿಲಿಯ ಹಿಡಿಯುವಂತೆ ಊರಿಗೊಂ
ದೊಕ್ಕಲೇ ಮಾರಿ ಸರ್ವಜ್ಞ
ಅಕ್ಕಸಾಲೆಯ ಮಗ ಚಿಕ್ಕವನೆಂದೆನಬೇಡ
ಬೆಕ್ಕು ಬಂದಿಲಿಯ ಹಿಡಿಯುವಂತೆ ಕಮ್ಮಟವ
ನಿಕ್ಕುತಲೆ ಕದಿವ ಸರ್ವಜ್ಞ[೨೭೪]

ಅಕ್ಕಸಾಲಿಗರು ರಾಜರಿಗೆ ಬೇಕಾದ ಎಲ್ಲ ಆಭರಣಗಳನ್ನು ಹಾಗೂ ಆಸ್ಥಾನದ ಆಭರಣಗಳನ್ನು ಮಾಡಿಕೊಡಬೇಕಾಗಿತ್ತು. ರಾಜ ಮಹಾರಾಜರು ಇವರಿಗೆ ಬಿರುದುಗಳನ್ನು ನೀಡಿ ಗೌರವಿಸುತ್ತಿದ್ದರು. ಅಕ್ಕಸಾಲಿಗರು ಜನಸಾಮಾನ್ಯರಿಗೂ ಕೂಡ ಆಭರಣಗಳನ್ನು ತಯಾರಿಸಿಕೊಟ್ಟು ಜನ ಸಾಮಾನ್ಯರ ನಿಕಟಪೂರ್ವರಾಗಿ ಕೆಲಸ ಮಾಡಿರುವುದುಂಟು. ಈಗಲೂ ಈ ಸಮುದಾಯದವರು ತಮ್ಮ ವೃತ್ತಿಯನ್ನು ಮುಂದುವರಿಸಲು ದೊಡ್ಡಪೇಟೆ ಹಾಗೂ ಲಕ್ಷ್ಮಿ ಬಜಾರುಗಳಲ್ಲಿ ಮಳಿಗೆಗಳನ್ನು ಅಥವಾ ಅಂಗಡಿಗಳನ್ನು ಹೊಂದಿದ್ದಾರೆ. ಬಾಗಳಿ ಶಾಸನೋಕ್ತ ಅಕ್ಕಸಾಲಿಯಾ[೨೭೫] ಎಂದು ಅನಗೋಡ ಶಾಸನೋಕ್ತ ಅಕ್ಕಸಾಲಿ ತಿಂಪಣ[೨೭೬] ಎಂಬ ಉಲ್ಲೇಖವಿರುವುದರಿಂದ ಈ ಭಾಗದಲ್ಲಿ ಅಕ್ಕಸಾಲಿಗರು ಇದ್ದುದು ಕಂಡುಬರುತ್ತದೆ. ಜೊತೆಗೆ ಅವರಿಗೆ ವಿವಿಧ ರೀತಿಯ ತೆರಿಗೆ ನೀಡುತ್ತಿದ್ದ ಅಂಶ ಶಾಸನಗಳಿಂದ ತಿಳಿದುಬರುತ್ತದೆ.

ಕೋಗುಂಡಿ ಶಾಸನದಲ್ಲಿ ಕಂಮಟದ ಉಲ್ಲೇಖ ಬಂದಿದೆ. ಕಂಮಟದವನು ಎಂದರೆ ನಾಣ್ಯಗಳ ಅಚ್ಚು ಹಾಕುವವನು ಎಂದರ್ಥ. ಶ್ರೀ ಮನ್ಮಹಾವಡ್ಡ ವ್ಯವಹಾರಿ ರಾಜ ಶ್ರೇಷ್ಠಿ ಕಾಶ್ಯಪಗೋತ್ರದ ಕಂಮೆಕುಲದ ಕಂಮಟದ ಶ್ರೀ ಮಲ್ಲಿಯೋಗಪ್ಪ ಎಂಬುವವನ ಉಲ್ಲೇಖ ಬಂದಿದ್ದು,[೨೭೭] ಇವನು ಈ ಪ್ರದೇಶದ ನಾಣ್ಯ ಚಲಾವಣಾಧಿಕಾರಿಯಾಗಿದ್ದಿರಬೇಕು.

ಅಕ್ಕಸಾಲಿಗರು ಸಾಮಾನ್ಯವಾಗಿ ಬಡವರಾಗಿರುತ್ತಿದ್ದರು. ಚಿನ್ನವನ್ನು ಕರಗಿಸಲು ಸುತ್ತಿಗೆ, ಊದುಕೊಳವೆ, ಚಿಮುಟ ಮತ್ತು ಮುದ್ರೆಗಳು, ಮೂಸೆ, ಕತ್ತರಿ, ತಕ್ಕಡಿ ಬ್ರಷ್ ಮೊದಲಾದ ಉಪಕರಣಗಳನ್ನು ಉಪಯೋಗಿಸುತ್ತಿದ್ದರು. ಅಂದು ಚಿತ್ರದುರ್ಗ ಪ್ರದೇಶ ಹಳೆಕಲ್ಲು, ಹೊನ್ನೆಮರಡಿ, ಗೋನೂರು, ಗುಡ್ಡದ ರಂಗವ್ವನಹಳ್ಳಿ, ಬೋದಿಮರಡಿ, ಆನೆಸಿದ್ರಿ, ದಿಂಡಾವರ[೨೭೮] ಈ ಪ್ರದೇಶದಲ್ಲಿ ಚಿನ್ನದ ಖನಿಜೋದ್ಯಮ ನಡೆಯುತ್ತಿದ್ದು, ಇಲ್ಲಿ ದೊರೆತ ಚಿನ್ನ ಮತ್ತು ಬೆಳ್ಳಿಯ ಲೋಹಗಳಿಂದ ಈ ಕೆಳಗಿನ ಆಭರಣಗಳನ್ನು ತಯಾರಿಸುತ್ತಿದ್ದರು.

* ರಾಗಟೆ – ಉರುಟಾದ ಆಭರಣ ಸ್ತ್ರೀಯರು ತಲೆಯಲ್ಲಿ ಧರಿಸುತ್ತಿದ್ದರು.
* ಕ್ಯಾದಿಗೆ – ಅರ್ಧಚಂದ್ರಾಕಾರದ್ದು ತಲೆಯ ಹಿಂದೆ ಧರಿಸುತ್ತಿದ್ದರು.
* ಜೆಡೆಬಿಲ್ಲೆ – ಚಿಕ್ಕ ಪ್ರಮಾಣದ ಜಡೆಯಲ್ಲಿ ಧರಿಸುತ್ತಿದ್ದರು.
* ಚೌರಿಕುಪ್ಪ – ಅಲಂಕೃತವಾದ ತಲೆ ಪಿನ್ನುಗಳು.
* ಓಲೆ – ಕಿವಿ ಆಭರಣ.
* ಬಾವಲಿ – ಕಿವಿ ಆಭರಣ.
* ಅಡ್ಡಿಕೆ – ಕತ್ತಿನ ಸರ.

* ಕಂಕಣ – ಬಳೆಗಳು.
* ಪದಕ – ಹಣೆಯ ಮೇಲೆ ಧರಿಸುವ ಆಭರಣ.
* ವಂಕಿ – ತೋಳು ತಾಯಿತಿ, ಬಂದಿ, ಮೊಣಕೈ ಮೇಲೆ ಧರಿಸುತ್ತಿದ್ದ ಆಭರಣ.
* ಬಾಬುಬಂದಿ – ತೋಳಿನ ಆಭರಣ.
* ಡಾಬು – ಸೊಂಟಕ್ಕೆ ಧರಿಸುತ್ತಿದ್ದ ಆಭರಣ.
* ಕಾಲುಗೆಜ್ಜೆ – ಕಾಲಿಗೆ ಹಾಕಿಕೊಳ್ಳುತ್ತಿದ್ದ ಆಭರಣ.
* ಪಿಲ್ಲಿ – ಬೆಳ್ಳಿಯ ಕಾಲುಂಗುರ.
* ಉಡುದಾರ – ಪುರುಷರು ಸೊಂಟಕ್ಕೆ ಹಾಕಿಕೊಳ್ಳುವ ಬೆಳ್ಳಿ ಹಾಗೂ ಚಿನ್ನದ ಆಭರಣ.
* ತಾಯಿತ – ಬೆಳ್ಳಿಯ ಸಣ್ಣ ಪೆಟ್ಟಿಗೆ, ಕತ್ತು ಅಥವಾ ಸೊಂಟಕ್ಕೆ ಹಾಕಿಕೊಳ್ಳುತ್ತಿದ್ದ ಆಭರಣ.
* ಮೇಸ್ರಿ – ಮೂಗಿಗೆ ಹಾಕಿಕೊಳ್ಳುವ ಆಭರಣ.[೨೯]

ಅಕ್ಕಸಾಲಿಗರು ರೈತಾಪಿ ವರ್ಗದವರು ದೇವರಿಗೆ ಹರಕೆ ಹೊತ್ತುಕೊಂಡ ಸಂದರ್ಭದಲ್ಲಿ ಕೆಲವೊಂದು ವಿಧಿವತ್ತಾದ ಶಾಸ್ತ್ರಗಳ ಮೂಲಕ ದೇವರಿಗೆ ಆಭರಣಗಳನ್ನು ಮಾಡಿಕೊಡುತ್ತಿದ್ದರು. ಹಾಗೆಯೇ ಹೆಚ್ಚುವರಿ ಉತ್ಪಾದನೆಗೊಂಡ ಬೆಲೆಬಾಳುವ ವಸ್ತುಗಳನ್ನು ಪರಸ್ಪರ ನಗರ ಅಥವಾ ಪಟ್ಟಣ ಪ್ರದೇಶಗಳಿಗೆ ಕಳುಹಿಸುವ ಮತ್ತು ತರಿಸಿಕೊಳ್ಳುವ ವಿನಿಮಯ ವ್ಯಾಪಾರ ಈ ವರ್ಗದಲ್ಲಿ ಇತ್ತು.

*** ಚಮ್ಮಾರರು**

ಭಾರತೀಯ ಜಾತಿ ವ್ಯವಸ್ಥೆಯಲ್ಲಿ ಚಮ್ಮಾರರು ಚಾತುರ್ವರ್ಣ ವ್ಯವಸ್ಥೆಯಿಂದ ಹೊರಗುಳಿಯುತ್ತಾರೆ. ಅವರನ್ನು ಪಂಚಮರೆಂದು ಕರೆಯುತ್ತಾರೆ. ಚಮ್ಮಾರಿಕೆಯು ಅವರ ಪಾರಂಪರಿಕ ವೃತ್ತಿಯಾಗಿದೆ. ಮಾತಂಗ, ಮಣ್ಣೆಗಾರ, ಸಮಗಾರ, ಮಾದರ, ಮೋಚಿ, ಮೊಚಗಾರ, ದೋಹಾರ, ಕಕ್ಕರು ಈ ಮೊದಲಾದ ಹೆಸರುಗಳಿಂದ ಚಮ್ಮಾರರನ್ನು ಕರೆಯಲ್ಪಡುತ್ತಾರೆ. ಈ ಹೆಸರುಗಳು ಅವರು ಮಾಡುವ ಚರ್ಮದ ವೃತ್ತಿಯಿಂದಾಗಿಯೇ ಬಂದಿರಬಹುದು. ಚಮ್ಮಾರರು ತಮ್ಮ ಜನಾಂಗದ ಹುಟ್ಟಿನ ಬಗ್ಗೆ ಅನೇಕ ಐತಿಹ್ಯ– ದೈವಿಕ ನೆಲೆಗಳನ್ನು ಹೊಂದಿದ್ದಾರೆ.[೩೦] ಇವರು ಚರ್ಮ ಹದ ಮಾಡಿ ಚಪ್ಪಲಿ ಹಾಗೂ ಇನ್ನಿತರ ಚರ್ಮದ ವಸ್ತುಗಳನ್ನು ಸಿದ್ದಗೊಳಿಸುತ್ತಿದ್ದರು. ಚಮ್ಮಾರರು ಚರ್ಮವನ್ನು ಹದಗೊಳಿಸಿ ಮಾನವನ ಬಳಕೆಗೆ ಚಪ್ಪಲಿ, ಸೊಂಟಪಟ್ಟಿ, ಬೂಟು, ಪಾಕೇಟ್, ಚರ್ಮದ ಚೀಲಗಳು ಇನ್ನು ಮುಂತಾದವುಗಳಾದರೆ, ಕೃಷಿಕರಿಗೆ ಬಾನಿ. ಇದು ಏತನೀರಾವರಿ ಪದ್ಧತಿಯಲ್ಲಿ ನೀರು ತುಂಬಿಸಿ ಬಾವಿಯಿಂದ ಮೇಲೆ ಎತ್ತಿ ಕಾಲುವೆಗೆ ನೀರು ಹಾಯಿಸಲು ಬಳಸುವ ಬಹು ಮುಖ್ಯ ಸಾಧನವಾಗಿತ್ತು. ಉಳಿದಂತೆ ವಾದ್ಯಗಳಿಗೆ ತಮಟೆ, ಸೈಡ್ ಡ್ರಮ್, ಹಾರ್ಮೋನಿಯಂ, ತಬಲ, ಮದ್ದಳೆ, ಡೊಳ್ಳು ಮುಂತಾದ ವಾದ್ಯಗಳನ್ನು ತಯಾರಿಸುತ್ತಿದ್ದರು. ಪ್ರತಿಯೊಬ್ಬ ವ್ಯಕ್ತಿಗೂ ಚಪ್ಪಲಿ ಅನಿವಾರ್ಯ, ಹಾಗಾಗಿ ಬಹುಬೇಡಿಕೆ ಇರುವ ಈ ಸಾಧನವನ್ನು ತಯಾರಿಸುತ್ತಿದ್ದರು.

ಪ್ರಾಚೀನ ಕರ್ನಾಟಕದಲ್ಲಿ ವಿವಿಧ ವೃತ್ತಿಗಳನ್ನು ಶ್ರಮಿಕವರ್ಗದವರ ಪೈಕಿ ಚಮ್ಮಾರ ಸಮುದಾಯದವರೂ ಸಮಾಜದಲ್ಲಿ ಒಂದು ಪ್ರತಿಷ್ಠಿತ ಸ್ಥಾನ ಪಡೆದುಕೊಂಡುದು ಗಮನಾರ್ಹ. ಕ್ರಿ.ಶ.೯ನೇ ಶತಮಾನದಿಂದ ೧೭ನೇ ಶತಮಾನಗಳವರೆಗೆ ದೊರಕುವ ಕನ್ನಡ ಶಾಸನಗಳಲ್ಲಿ ವಿವಿಧ ವೃತ್ತಿ ಸಂಘಗಳ ಬಗೆಗೆ ಉಲ್ಲೇಖಿಸಲಾಗಿದೆ. ಇವರನ್ನು ಹಿಟ್ಟುಕಾರನೆಂಬ ವಿಶೇಷಣ ಬಳಸಿ

ಗುರುತಿಸಿರುವುದುಂಟು. ಬಡಗಿ, ಕಮ್ಮಾರ, ಅಕ್ಕಸಾಲಿ, ಸೇನಬೋವ, ತಳವಾರ ಮೊದಲಾದವರನ್ನು ಹಿಟ್ಟುಕಾರರಾಗಿದ್ದರೆಂಬುದು ಗಮನಾರ್ಹ ಇಂದಿನ ಆಯಗಾರ ಪದ್ಧತಿಯನ್ನು ಹೋಲುವ ಈ ಹಿಟ್ಟುಕಾರ ವಿಶೇಷಣದ ಅರ್ಥ ಹಿಟ್ಟುಜೀವಿಕೆ ಅಥವಾ ಕಸುಬು; ಜೀವನಾಧಾರವಾದ ಉದ್ಯೋಗ. ಕಾಲಕ್ರಮೇಣ ಇದು ವೃತ್ತಿಗಾರರ ಸಂಘವೆಂಬ ವಿಶೇಷಾರ್ಥ ಹೊಂದಿತೆಂದು ವ್ಯಕ್ತಪಡುತ್ತದೆ.

ವರ್ತಕಸಂಘ ಮತ್ತು ವರ್ತಕ ಪ್ರಕಾರಗಳ ನಡುವಣ ಹೋಲಿಕೆ ವ್ಯತ್ಯಾಸಗಳನ್ನು ಚರ್ಚಿಸಿರುವ ವಿದ್ವಾಂಸರು, ಉತ್ಪಾದಕ ವಿನಿಮಯ ವೃತ್ತಿಗಳನ್ನು ಪ್ರತ್ಯೇಕವಾಗಿ ಗಮನಿಸುತ್ತಾರೆ. ಸಮಗಾರ, ಕುಂಬಾರ, ಮಾದಿಗ, ಅಕ್ಕಸಾಲಿ, ಮೇದರು ಮೊದಲಾದವರು ಆಯಾ ವಸ್ತುಗಳನ್ನು ಉತ್ಪಾದಿಸುವುದರೊಂದಿಗೆ ವ್ಯಾಪಾರ ಕಾರ್ಯವನ್ನೂ ಕೈಗೊಂಡುದನ್ನು ತೋರಿಸುತ್ತಾರೆ. ಉತ್ಪಾಧನೆ ಮಾರಾಟ ಕಾರ್ಯಗಳೆರಡನ್ನೂ ಜೊತೆ ಜೊತೆಯಾಗಿ ಮಾಡಿದ ಸಂಯುಕ್ತ ಶ್ರೇಯಸ್ಸು ಇವರದಾಗಿದೆಯೆನ್ನುತ್ತಾರೆ. ಒಟ್ಟಿನಲ್ಲಿ, ವಿನಿಮಯ ಸಂಘ ಮತ್ತು ಉತ್ಪಾದಕ ವಿನಿಮಯ ಸಂಘಗಳು ನಾಡಿನ ಆರ್ಥಿಕ ವ್ಯವಸ್ಥೆಯನ್ನು ರೂಪಿಸುವಲ್ಲಿ ತಮ್ಮ ಪಾಲಿನ ಸೇವೆ ಸಲ್ಲಿಸಿರುವುದು ವಾಸ್ತವ. ಚಮ್ಮಾರ/ಸಮಗಾರರೂ ಇಂಥಾ ಅಭಿವೃದ್ಧಿ ಕಾರ್ಯದಲ್ಲಿ ಮುಖ್ಯಪಾತ್ರ ವಹಿದುದು ಇಲ್ಲಿ ದೃಢಪಡುತ್ತದೆ.

ಅರಬ್ ದೇಶವ ಪ್ರವಾಸಿ ಅಲ್ಬೂರೋನಿ ತನ್ನ ಬರವಣಿಗೆಯಲ್ಲಿ ಚಮ್ಮಾರರನ್ನು ಪ್ರಸ್ತುತಪಡಿಸಿದ್ದಾನೆ. ಘಜ್ನಿ ಮಹಮ್ಮದನು ಹಿಂದೂದೇಶದ ಮೇಲೆ ದಾಳಿ ನಡೆಸುವ ಸಂದರ್ಭದಲ್ಲಿದ್ದ ಅಲ್ಬೂರೋನಿ, ತನ್ನ ತಾರೀಖ್-ಉಲ್-ಹಿಂದ್ ಕೃತಿಯಲ್ಲಿ ಕ್ರಿ.ಶ.೧೦೦೦-೧೦೩೦ರ ಅವಧಿಯಲ್ಲಿ ಶೂದ್ರಜಾತಿಗಳ ಸ್ಥಾನ ಮಾನಗಳನ್ನು ಕುರಿತು ಬರೆದಿದ್ದಾನೆ. ಸಾಮಾಜಿಕವಾಗಿ ಚಮ್ಮಾರರು ನಡೆಸುತ್ತಿದ್ದ ಕಷ್ಟಸಹಿಷ್ಣುತೆಯ ಜೀವನದ ಮೇಲೂ ಬೆಳಕು ಹಾಯಿಸಿದ್ದಾನೆ. ಶಾಸನಗಳಲ್ಲಿ ಬರುವ 'ಎಂಟು ಹಿಟ್ಟು' ಎಂಬುದು ಅಲ್ಬೂರೋನಿ ಪ್ರಸ್ತಾಪಿಸುವ 'ಎಂಟುಪಂಗಡ'ಗಳೇ ಇರಬೇಕು, ಎಂಟುಹಿಟ್ಟು ಎಂಬುದು ಎಂಟುಮಂದಿಯ ಸಮಿತಿ ಇದು ಸಾಂಘಿಕ ರೂಪ ಹೊಂದಿರುವಂಥಾದ್ದು; ಹಾಗೂ ಸ್ಥಾನಿಕ ಆಡಳಿತದ ಅಂಗವಾಗಿರುವಂಥಾದ್ದು.

ಅಂದಿನ ಸಮಾಜದಲ್ಲಿ ಚಮ್ಮಾರರು ತಮ್ಮ ಚರ್ಮಕಾರವೃತ್ತಿಯನ್ನು ಪಾರಂಪರಿಕವಾಗಿ ಬೆಳೆಸಿಕೊಂಡು ಬಂದಿದ್ದಲ್ಲದೆ, ಇತರ ಶ್ರಮಿಕವರ್ಗದವರಂತೆಯೇ ತಮ್ಮದೇ ಒಂದು ವೃತ್ತಿ ಸಂಘವನ್ನು ಸ್ಥಾಪಿಸಿಕೊಂಡಿದ್ದರು. ದಾನಬಿಡುವ ಮತ್ತು ಪ್ರತಿಪಾಲಿಸುವ ಸಂದರ್ಭಗಳಲ್ಲಿ ಸ್ಥಾನಮಾನ್ಯರೊಡನೆ ಎಂಟು ಮಂದಿ ಸದಸ್ಯರಲ್ಲಿ ಇವರೂ ಪ್ರಾತಿನಿಧಿಕವಾಗಿ ಹಾಜರಿರುತ್ತಿದ್ದರೆಂಬ ಸಂಗತಿ ಇಲ್ಲಿ ಸ್ಪಷ್ಟಪಡುತ್ತದೆ ಇಂಥಾ ಉಲ್ಲೇಖಗಳು ಆ ನಂತರದ ಶಾಸನಗಳಲ್ಲೂ ಅಲ್ಲಲ್ಲಿ ಕಾಣಿಸಿಗುತ್ತವೆ ಎಂದು ಚಮ್ಮಾರರು ಸಾಮುದಾಯಿಕ ಗ್ರಹಿಕೆಗಳು ಎಂಬ ಕೃತಿಯಲ್ಲಿ ಲಕ್ಷ್ಮಣ್ ತೆಲಗಾವಿ ಅವರು ತಿಳಿಸಿದ್ದಾರೆ.

*** ಮೇದರರು**

ಇವರು ಬಿದಿರಿನಿಂದ ಬುಟ್ಟಿಗಳನ್ನು, ಚಾಪೆಗಳನ್ನು ತಯಾರಿಸುತ್ತಿದ್ದರು. ಇದೊಂದು ಪ್ರಮುಖ ಗುಡಿ ಕೈಗಾರಿಕೆಯಾಗಿತ್ತು. ಈ ಕೆಲಸದಲ್ಲಿ ತೊಡಗಿದ್ದವರನ್ನು ಮೇದರೆಂದು ಕರೆಯಲಾಗುತ್ತಿತ್ತು.[೨೮೧] ಬಿದಿರಿನಿಂದ ಅಟ್ಟಕ್ಕೇಣಿ, ಕಾಲು ಮುರಿದವರಿಗೆ ಊರುಗೋಲು, ಅಂದಣ(ಪಲ್ಲಕ್ಕಿ), ಸತ್ತಿಗೆ (ಛತ್ರಿ) ಗುಡಿಗುಂಡಾರ (ತಡಿಕೆ=ಗುಡಿಸಲಿಗೆ ಮುಚ್ಚುವ ಚಾಪೆ), ಮುಂತಾದವುಗಳನ್ನು ತಯಾರಿಸುತ್ತಿದ್ದರೆಂದು ಬಸವಣ್ಣನವರ ವಚನವೊಂದು ಉಲ್ಲೇಖಿಸಿದೆ. ಇವರು ತೊಟ್ಟಿಲನ್ನು ತಯಾರಿಸುತ್ತಿದ್ದರೆಂದು ಕೇತಯ್ಯನ ವಚನ[೨೮೨] ಉಲ್ಲೇಖಿಸುತ್ತದೆ. ತಯಾರಿಸಿದ ವಸ್ತುಗಳನ್ನು ಅವರೇ ಮಾರುತ್ತಿದ್ದರು. ಸಂತೆಗಳಲ್ಲಿ ಅಲ್ಲದೆ

ಹಳ್ಳಿಹಳ್ಳಿಗಳಿಗೆ ತಾವೇ ಕೊಂಡೊಯ್ದು ಮಾರಾಟ ಮಾಡುತ್ತಿದ್ದರೆಂದು ಕಂಡುಬರುತ್ತದೆ. ಇವರನ್ನು ಒಂದೊಂದು ಪ್ರದೇಶದಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತಿತ್ತು. ಉದಾ: ಗವರಿಗರು, ಗೌರಿ ಮಕ್ಕಳು, ಗಂಗೆ ಮಕ್ಕಳು ಎಂದು ಕರೆಯುತ್ತಿದ್ದರು. ಬೆತ್ತವನ್ನು ಸೀಳಿ ಚೆಕ್ಕೆಗಳನ್ನಾಗಿ ಮಾಡಿಕೊಂಡು ಬುಟ್ಟಿ, ಚಾಪೆ, ಕೊಂಗ, ತೊಂಬ ಮುಂತಾದ ಕೃಷಿಗೆ ಅವಶ್ಯಕವಾದ ವಸ್ತುಗಳನ್ನು ತಯಾರಿಸುತ್ತಿದ್ದರು.[೨೮೩] ಚಿತ್ರದುರ್ಗ ಪ್ರದೇಶದಲ್ಲಿ ಪಶುಸಂಗೋಪನೆ ಹೆಚ್ಚಾಗಿತ್ತು. ಅಲ್ಲಿ ದನ ಹಾಗೂ ಕುರಿಗಳನ್ನು ರಾತ್ರಿವೇಳೆ ತರುಬುವುದಕ್ಕೆ (ನಿಲ್ಲಿಸುವುದಕ್ಕೆ) ಹಟ್ಟಿಗಳನ್ನು ಕಟ್ಟುತ್ತಿದ್ದರು. ಅವು ಬಿದಿರಿನಿಂದ ತಯಾರಿಸಿದ ವಸ್ತುಗಳಾಗಿದ್ದು, ಅವುಗಳನ್ನು ಜನ ಸಾಮಾನ್ಯರು ಖರೀದಿ ಮಾಡುತ್ತಿದ್ದರು.

* **ಉಪ್ಪಾರರು**

ಉಪ್ಪನ್ನು ಉತ್ಪಾದನೆ ಮಾಡಿ ಮಾರುವವರನ್ನು ಉಪ್ಪಾರರು ಎಂದು ಕರೆಯುತ್ತಾರೆ.[೨೮೪] ಭಾರತೀಯ ಆಹಾರ ಪದ್ಧತಿಗಳಲ್ಲಿ ಉಪ್ಪು ಬಹು ಮುಖ್ಯವಾದ ಪದಾರ್ಥವಾಗಿತ್ತು. ಕಳೆದ ನಾಲ್ಕು ಸಾವಿರ ವರ್ಷಗಳಲ್ಲಿ ಉಪ್ಪಿನ ಉತ್ಪಾದನೆ ಗಣನೀಯ ಪ್ರಮಾಣದಲ್ಲಿ ಭಾರತದಲ್ಲಿ ಬೆಳೆಯಿತು. ಅದು ಒಂದು ದೊಡ್ಡ ಕೈಗಾರಿಕೆಯ ಸ್ವರೂಪವನ್ನು ಪಡೆದುಕೊಂಡಿತು. 'ಉಪ್ಪಿಗಿಂತ ರುಚಿಯಿಲ್ಲ, ತಾಯಿಗಿಂತ ದೇವರಿಲ್ಲ' ಎಂಬ ಗಾದೆ ಬಂತು. 'ಉಪ್ಪು ತಿಂದ ಮನೆಗೆ ಎರಡು ಬಗೆಯಬಾರದು' ಎಂಬ ನಂಬಿಕೆ ಬಂತು. ಹಿಂದಿಯಲ್ಲಿ 'ನಮಕ್ ಹರಾಮ್' ಎಂಬ ಬೈಗಳ ಉಪ್ಪುಂಡ ಮನೆಗೆ ಎರಡು ಬಗೆದವನಿಗೆ ಮೀಸಲು.

ಬಿ.ಎಸ್.ಹಿರೇಮಠರು ಉಪ್ಪಾರರ ಒಳಪಂಗಡಗಳನ್ನು ಈ ರೀತಿಯಾಗಿ ಗುರುತಿಸುತ್ತಾರೆ. ಅವುಗಳೆಂದರೆ ಕಲ್ಲು ಉಪ್ಪಾರ, ಮಣ್ಣು ಉಪ್ಪಾರ ಎಂಬ ಪ್ರಧಾನ ಭಾಗಗಳು ಉಪ್ಪಾರರಲ್ಲಿವೆ. ಮೇಲು ಸಕ್ಕರೆಯವರು ಸಾಗರದವರು (ಸಗರ ವಂಶದವರು) ಎಂಬ ಒಳಪ್ರಬೇಧಗಳನ್ನು ಕೆಲವರು ಸೂಚಿಸುತ್ತಾರೆ. ತೆಲುಗು ಉಪ್ಪಾರರು, ಎಲೆ ಉಪ್ಪಾರರು ಎಂಬ ಒಳಪಂಗಡಗಳನ್ನು ಕೂಡ ಈ ಪಟ್ಟಿಗೆ ಸೇರಿಸಲಾಗುತ್ತದೆ. ಕಲ್ಲು ಒಡೆಯುವುದೇ ಮೊದಲಾದ ಕೆಲಸ ಮಾಡುವ ಕಲ್ಲು ಉಪ್ಪಾರರಿಗೂ, ಮಣ್ಣಿನ ಕೆಲಸ ಮಾಡುವ ಮಣ್ಣು ಉಪ್ಪಾರರಿಗೂ ಮತ್ತು ತೆಲುಗು ಉಪ್ಪಾರರಿಗೂ ಜನಿವಾರವಿಲ್ಲವೆಂದು ಹೇಳುತ್ತಾರೆ. ಉಳಿದವರಿಗೆ (ಮೇಲು ಸಕ್ಕರೆಯವರು, ಸಾಗರದವರು, ಎಲೆ ಉಪ್ಪಾರರು) ಜನಿವಾರವಿದೆ. ಇದನ್ನು ಉಪ್ಪಾರರ ಗುರುಗಳು ಕಟ್ಟುತ್ತಾರೆ. ಅಂದರೆ ಜನಿವಾರವಿರುವ ಉಪ್ಪಾರರು ಸಾಮಾಜಿಕ ಶ್ರೇಣೀಕರಣದಲ್ಲಿ ಮೇಲಿನವರು ಎಂಬುದೇ ಒಟ್ಟು ವಿಚಾರ.[೨೮೫]

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಚಳ್ಳಕೆರೆ, ಜಗಳೂರು ಹೊಸದುರ್ಗ ಇನ್ನಿತರೆ ಪ್ರದೇಶಗಳಲ್ಲಿ ಈ ಸಮುದಾಯದವರು ವಾಸವಾಗಿದ್ದು, ಅಂದಿನ ಕಾಲದಲ್ಲಿ ಮಣ್ಣುಪ್ಪು ತಯಾರಿಸುತ್ತಿದ್ದರು. ನಾಯಕರ ಕಾಲದ ಇನ್ನೊಂದು ಪ್ರಮುಖ ಗಣಿ ಉದ್ಯಮವೆಂದರೆ ಉಪ್ಪಿನ ಮೋಳೆಗಳು. ಈ ಉಲ್ಲೇಖ ಹೆಚ್ಚಾಗಿ ಮೊಳಕಾಲ್ಲೂರು ತಾಲೂಕಿನಲ್ಲಿ ದೊರೆಯುತ್ತವೆ. ಒಂದು ಶಾಸನದಲ್ಲಿ ಉಪ್ಪಿನ ಮೋಳೆಯ ಅಳತೆಯನ್ನು ನೀಡಲಾಗಿದೆ. ನಾಲ್ಕು x ಮೂರು ಹಾಗೂ ಎರಡು ಮೊಳ ಆಳದ ಚವುಕದಲ್ಲಿ ನೀರು ಹರಿಸಿ ಉಪ್ಪನ್ನು ತೆಗೆಯುತ್ತಿದ್ದರೆಂಬ ಸಂಗತಿ ತಿಳಿಯುತ್ತದೆ.[೨೮೬] ಅದೇ ಗ್ರಾಮದ ಉಪ್ಪಾರರಿಗೆ ಉಪ್ಪಿನ ಮೋಳೆಯನ್ನು ಸರ್ವಮಾನ್ಯವಾಗಿ ನೀಡಿದ ಬಗ್ಗೆಯೂ ದಾಖಲೆಗಳು ತಿಳಿಸುತ್ತವೆ.

ಹೊಳಲ್ಕೆರೆ ದುಮ್ಮಿಯ ಶಾಸನದಲ್ಲಿ ಉಪ್ಪಾರ ಜಾತಿಯ ನಾನಾ ಒಳಜಾತಿಗಳಿಗೆ ಸಮಸ್ಥರು ಸೇರಿ ಮದುವೆಯ ಸುಂಕವನ್ನು ಸರ್ವಮಾನ್ಯ ಮಾಡಿದ ಉಲ್ಲೇಖವಿದೆ.[೨೮೭]

ಉಪ್ಪು ಉತ್ಪಾದನೆ ಪ್ರಾಚೀನ ಮತ್ತು ಮಧ್ಯಕಾಲೀನ ಕಾಲಕ್ಕೆ ಮುಖ್ಯವಾದ ಸರಕಾಗಿದ್ದು, ಉಪ್ಪಾರರು ಮತ್ತು ಇನ್ನಿತರೆ ಸಮುದಾಯದವರು ಉತ್ಪಾದಿಸಿ ಸಂತೆ, ಪಟ್ಟಣ, ನಗರಗಳಲ್ಲಿ ಮಾರುತ್ತಿದ್ದರು. ಆದರೆ ಇವರ ಬದುಕಿನಲ್ಲಿ ಬಹು ದೊಡ್ಡ ಬದಲಾವಣೆ ಕಂಡಿದ್ದು ಬ್ರಿಟಿಶರ ಕಾಲದಲ್ಲಿ. ಬ್ರಿಟಿಶರು ಆಗಮನದ ನಂತರ ಈ ದೇಶದ ಉಪ್ಪಿನ ಕೈಗಾರಿಕೆಗೆ ಭಾರಿ ಹೊಡೆತ ಬಿತ್ತೆಂಬುದು ಗಮನಿಸಬೇಕಾದ ಸಂಗತಿ. ಯಾವುದೇ ದೇಶೀಯ ಸಂಸ್ಥಾನಗಳಲ್ಲಿ ಬ್ರಿಟಿಶ್ ಪ್ರಾಂತ್ಯಗಳ ಗಡಿ ಪ್ರದೇಶದಿಂದ ಐದು ಮೈಲು ದೂರದಲ್ಲಿ ಭೂಮಿಯಿಂದ ಉಪ್ಪನ್ನು ತೆಗೆಯಕೂಡದೆಂದು ೧೮೭೪ರಲ್ಲಿ ಭಾರತ ಸರಕಾರವು ನಿಷೇಧ ಹೇರಿತು. ಉಪ್ಪಿನ ತಯಾರಿಕೆ ಮತ್ತು ಮಾರಾಟವನ್ನು ಸರಕಾರದ ಗುತ್ತಿಗೆಯಾಗಿ ಮಾಡಿ ಉಪ್ಪಾರರು ತಮ್ಮ ಉದ್ಯಮಕ್ಕೆ ತೊಂದರೆ ಆಗುವಂತೆ ಮಾಡಿದರು. ಪರಂಪರಾಗತ ಉದ್ಯೋಗ ತ್ಯಜಿಸಿ ಅವರು ಸುಣ್ಣ, ಇಟ್ಟಿಗೆ ತಯಾರಿಸುವ, ಗೋಡೆ ಕಟ್ಟುವ, ಕೆರೆ ಅಗೆಯುವ ಕೆಲಸಕ್ಕೆ ಹೋಗುವಂತಾಯಿತು. ಈ ದೇಶದ ಎಷ್ಟೋ ಉಪ್ಪಿನ ಮೊಳೆಗಳನ್ನು ಮುಚ್ಚಿಸಿ ಕೆಲವನ್ನು ಮಾತ್ರ ಸರ್ಕಾರಿ ಉಪ್ಪಿನ ಮೋಳೆಗಳಾಗಿ ನಡೆಸಿ ಹೆಚ್ಚಿನ ಬೇಡಿಕೆಯ ಉಪ್ಪನ್ನು ತಮ್ಮ ದೇಶದಿಂದ ಆಮದು ಮಾಡಿ ಇಲ್ಲಿ ಉತ್ಪನ್ನಕ್ಕೆ ಭಾರೀ ಏಟು ಕೊಟ್ಟರು. ಅಲ್ಲದೇ ಈ ಉಪ್ಪಿನ ಮೇಲೆ ಭಾರವಾದ ಅಬಕಾರಿ ಕರ ಹೇರಿ, ಅದರಿಂದ ಭಾರೀ ಪ್ರಮಾಣದ ರಾಜಾದಾಯ ಪಡೆದು ಭಾರತದ ಬಡ ಜನರನ್ನು ಸುಲಿದರು.[೨೮೮]

* **ಗಾಣಿಗರು**

ಪ್ರಾಚೀನ ಕಾಲದಿಂದಲೂ ಮಾನವನಿಗೆ ಎಣ್ಣೆಯ ಪರಿಚಯವಿತ್ತು. ಈ ಎಣ್ಣೆಯ ತಯಾರಿಕೆಯ ಕೈಗಾರಿಕೆಗಳು ಪ್ರತಿ ಗ್ರಾಮಗಳಲ್ಲಿ ಇದ್ದದ್ದು ಕಂಡುಬರುತ್ತದೆ. ಈ ವೃತ್ತಿಯನ್ನು ಮಾಡುವವರನ್ನು ಗಾಣಿಗರೆಂದು ಕರೆಯಲಾಗುತ್ತಿತ್ತು. ಅಂದು ಅವರನ್ನು ಅವರು ಉತ್ಪಾದಿಸುವ ಮಾದರಿ ಹಾಗೂ ಬಳಸುವ ಸಾಧನೆಗಳಿಗೆ ಅನುಗುಣವಾಗಿ ಬೇರೆ ಬೇರೆ ಹೆಸರುಗಳಿಂದಲೂ ಕರೆಯಲಾಗುತ್ತಿತ್ತೆಂದು ಸಾಹಿತ್ಯದಲ್ಲಿ ಕಂಡು ಬರುತ್ತದೆ. ಉದಾಹರಣೆಗೆ ಎರಡು ಎತ್ತುಗಳನ್ನು ಕಲ್ಲಿನ ಗಾಣಕ್ಕೆ ಕಟ್ಟಿ ಎಣ್ಣೆ ತೆಗೆಯುವವರನ್ನು ಹೆಗ್ಗಾಣಿಗರೆಂದು ಕರೆಯುತ್ತಿದ್ದರು. ಆದರೆ ಮರದ ಗಾಣದಲ್ಲಿ ಎಣ್ಣೆ ತೆಗೆಯುವವರನ್ನು ಕಿರುಗಾಣಿಗರೆಂದು ಕರೆಯಲಾಗುತ್ತಿತ್ತು. ಒಂದು ಎತ್ತನ್ನು ಬಳಸಿ ಎಣ್ಣೆ ತೆಗೆಯುವವರನ್ನು ಒಂಟೆತ್ತು ಗಾಣಿಗರೆಂದು ಕರೆಯುತ್ತಿದ್ದರು.[೨೮೯]

ಚಿತ್ರದುರ್ಗ ಪ್ರದೇಶದಲ್ಲಿ ಎಣ್ಣೆ ಉತ್ಪಾದನೆಯ ಬೆಳೆಗಳನ್ನು ಹೆಚ್ಚಾಗಿ ಬೆಳೆಯುತ್ತಿದ್ದರಿಂದ ಈ ವೃತ್ತಿ ತುಂಬಾ ಮಹತ್ವವನ್ನು ಪಡೆದುಕೊಂಡಿತ್ತು. ಈ ವಿಷಯ ಕುರಿತು ಚಿತ್ರದುರ್ಗ ಪ್ರದೇಶದ ಹಲವು ಶಾಸನಗಳು ತೆಲ್ಲಿಗ, ತಲಿಗರು,[೨೯೦] ಎಂದು ಉಲ್ಲೇಖಿಸುತ್ತವೆ. ಅಲ್ಲದೆ ಶಾಸನಗಳು ಗಾಣ[೨೯೧] ಗಾಣದ ಎಣ್ಣೆ,[೨೯೨] ಕೈಗಾಣ[೨೯೩]ಗಳ ಬಗ್ಗೆ ಉಲ್ಲೇಖವನ್ನು ಹೊಂದಿರುವುದರಿಂದ ಎಣ್ಣೆಯನ್ನು ಗಾಣದಿಂದ ತಲ್ಲಿಗರು ತೆಗೆಯುತ್ತಿದ್ದರೆಂದು ತಿಳಿದುಬರುತ್ತದೆ. ತೃಟಿತಗೊಂಡ ಬೆಳಗುತ್ತಿ ಶಾಸನವು[೨೯೪] ತಿಳಿಸುವಂತೆ ತೆಲ್ಲಿಗರು ದೇವರ ನಂದಾದೀವಿಗೆಗೆ ಬಿಟ್ಟಗಾಣ... ಎಂದು ಉಲ್ಲೇಖಿಸಿರುವುದರಿಂದ ತೆಲ್ಲಿಗರು ದಾನವಾಗಿ ಬಿಟ್ಟಿದ್ದು ಕಂಡುಬರುತ್ತದೆ. ಅಲ್ಲದೆ ಅದೇ ಶಾಸನದಲ್ಲಿ ಬೊಪ್ಪಯ್ಯ ಎನ್ನುವವನು ಸಿದ್ದೇಶ್ವರ ಮತ್ತು ಕೇಶವ ದೇವರಿಗೆ ಭೂ ದಾನ ಮಾಡಿ ಪ್ರತಿಯೊಂದು ಗಾಣಕ್ಕೆ ಒಂದು ಹೊನ್ನಿನಂತೆ (ಹಣವನ್ನು ವಣ-೧ನ್ನು ನೀಡಿದ ಉಲ್ಲೇಖವಿದೆ. ಸುರೆಹೊನ್ನ ಶಾಸನದಂತೆ ಬಾಚರಸನ ಅಧಿಕಾರಿಯಾದ ಅನಂತಪ್ಪನು ಬಾಳಿನಾಥ ದೇವರಿಗೆ ಗಾಣದೆರೆ, ಹುಡಿಕೆದೆರೆ (ಕೋಟೆಯ ಅಗ್ರಭಾಗದ) ಮುಂತಾದ ಸುಂಕವನ್ನು ದತ್ತಿ ಬಿಟ್ಟನು.[೨೯೫] ಹೊನ್ನಾಳಿ ಶಾಸನೋಕ್ತ ಮಾಚಗಾವುಂಡನು ಮಲ್ಲಿಕಾರ್ಜುನ ದೇವರಿಗೆ ೪ ಎತ್ತು ಗಾಣವನ್ನು ದಾನ ನೀಡಿದನು.[೨೯೬] ಕುರುವದಗಡ್ಡೆ ಶಾಸನ ತಿಳಿಸುವಂತೆ ಹಲವಾರು ಗೌಡ ಜನಾಂಗ

ಸೇರಿ ವೀರ ಬಲ್ಲಾಳನಿಂದ ರಾಮನಾಥ ದೇವರಿಗೆ ಗಾಣದೆರೆ ತಿಪ್ಪೆಸುಂಕ ಇತರೆ ಸುಂಕಗಳನ್ನು ಧಾರಪೂರ್ವಕವಾಗಿ ದಾನ ಮಾಡಿದ್ದನ್ನು ತಿಳಿಸುತ್ತದೆ.[೨೯೭] ಇದರಿಂದ ಈ ಭಾಗದಲ್ಲಿ ಎಣ್ಣೆ ಕೈಗಾರಿಕೆಗಳು ಪ್ರಮುಖವಾಗಿದ್ದವು ಎಂದು ಹೇಳಬಹುದು. ಜೊತೆಗೆ ಅದರಿಂದ ಬಂದ ಆದಾಯವನ್ನು ದೇವಸ್ಥಾನ ಜೀರ್ಣೋದ್ಧಾರಕ್ಕಾಗಿ ನೀಡುತ್ತಿರುವುದು ಶಾಸನಗಳಿಂದ ತಿಳಿದುಬರುತ್ತದೆ. ನೀಲಗುಂದ ಶಾಸನವು ತಿಳಿಸುವಂತೆ ತೆಲ್ಲಿಗರೈವತ್ತೊಕ್ಕಲು ಎಂಬ ಉಲ್ಲೇಖವನ್ನೊಳಗೊಂಡಿದೆ.[೨೯೮] ಇದರಿಂದ ಅಂದು ತೆಲ್ಲಿಗರು ತಮ್ಮದೇ ಆದ ಸಂಘಗಳನ್ನು ಹೊಂದಿದ್ದರೆಂಬುದು ಮತ್ತು ಗಾಣಗಳ ಮೇಲೆ ತೆರಿಗೆ ವಿಧಿಸಿದ್ದುದು ಮೇಲಿನ ಆಧಾರಗಳಿಂದ ವೇದ್ಯವಾಗುತ್ತದೆ.

ಗಾಣಿಗರು ತಯಾರಿಸಿದ ಎಣ್ಣೆಯನ್ನು ಚರ್ಮದ ಚೀಲ ಅಥವಾ ಮಡಿಕೆಗಳಲ್ಲಿ ಸಂಗ್ರಹಿಸಿ ಸಂತೆ ಹಾಗೂ ಹಳ್ಳಿ ಹಳ್ಳಿಗಳಿಗೆ ಹೋಗಿ ವ್ಯಾಪಾರ ಮಾಡುತ್ತಿದ್ದ ಅಂಶ ನಮಗೆ ತಿಳಿದುಬರುತ್ತದೆ.

*** ಬಳೆಗಾರರು**

ಬಳೆಯನ್ನು ಉತ್ಪಾದಿಸಿ ಮಾರಾಟ ಮಾಡುವ ಸಮುದಾಯವನ್ನು ಬಳೆಗಾರರು ಎಂದು ಕರೆಯುತ್ತೇವೆ. ಇವರನ್ನು ಆಂಧ್ರ ಮೂಲದವರು ಎಂದು ಗುರುತಿಸಿದ್ದಾರೆ. ಇವರು ಕೊಂಕಣಿ ಪ್ರದೇಶದಲ್ಲಿ ಇದ್ದು ಈ ಭಾಗಕ್ಕೆ ವಲಸೆ ಬಂದವರು ಕಮ್ಮಾರಂತಹ ವೃತ್ತಿಯನ್ನು ಅನುಸರಿಸುತ್ತಾರೆ.[೨೯೯] ಬಳೆಯನ್ನು ಮಾಡುವ ಮತ್ತು ಮಾರುವ ವೃತ್ತಿಯು ಈ ಸಮುದಾಯದ ಮೂಲ ವೃತ್ತಿ. ಇದಕ್ಕೆ ಸಂಬಂಧಿಸಿದಂತೆ ಹೊಸದುರ್ಗ ಹಾಗೂ ಹೊಳಲ್ಕೆರೆ ಸೀಮೆಗಳಲ್ಲಿ ಉದ್ಯಮವನ್ನು ಗುರುತಿಸಬಹುದು.

ಹೊಸದುರ್ಗ ತಾಲೂಕಿನ ಮತ್ತೋಡಿನಲ್ಲಿದ್ದ ಗಾಜು ತಯಾರಿಕ ಘಟಕಗಳನ್ನು ಬುಕಾನನ್ ಗಮನಾರ್ಹ ಘಟಕವೆಂದು ಹೊಗಳಿದ್ದಾನೆ. ಮತ್ತೋಡಿನ ಸುತ್ತಮುತ್ತಲಿನ ಪ್ರದೇಶದಲ್ಲಿ ಗಾಜು ತಯಾರಿಕೆಗಾಗಿ ಬೇಕಾಗುವ ಖನಿಜ ವಸ್ತುಗಳು ಸಿಗುತ್ತವೆ. ಅವುಗಳನ್ನು ಒಂದು ವಿಶಿಷ್ಟ ರೀತಿಯಲ್ಲಿ ರಚನೆಯಾದ ಕುಲುಮೆಯಲ್ಲಿ ಮೂಸೆಗಳಲ್ಲಿ ತುಂಬಿ ಕಾಯಿಸಿ, ಕಪ್ಪು, ಹಸಿರು, ನೀಲಿ ಮತ್ತು ಹಳದಿ ಗಾಜನ್ನು ತಯಾರಿಸಲಾಗುತ್ತದೆ. ಈ ಐದು ಬಣ್ಣಗಳ ಗಾಜನ್ನು ಬಳಸಿ ಹೆಣ್ಣು ಮಕ್ಕಳಿಗಾಗಿ ಗಾಜಿನ ಬಳೆಗಳನ್ನು ಉತ್ಪಾದಿಸಲಾಗುತ್ತಿತ್ತು.

ಮೊದಲಿಗೆ ಸವಳು ಮಣ್ಣನ್ನು ಬೇಸಿಗೆಯಲ್ಲಿ ಸಂಗ್ರಹಿಸಲಾಗುತ್ತಿತ್ತು. ಈ ಸವಳು ಮಣ್ಣು ಮತ್ತು ಮರಗಳನ್ನು ದನದ ಸೆಗಣಿಯೊಂದಿಗೆ ಪೆಳಕೆ ಚಾಕುಗಳನ್ನಾಗಿ ಮಾಡಿ ನೆರಳಲ್ಲಿ ಒಣಗಿಸಿ ಸುಡಲಾಗುತ್ತಿತ್ತು. ಆಗ ಒಂದು ಸೋಡಾವನ್ನು (ಆರು ಅಳತೆಯಲ್ಲಿ) ಮತ್ತು ಬೆಣಚಿನ ಪುಡಿಯೊಂದಿಗೆ (ಒಂದು ಅಳತೆ) ಬೆರೆಸಿ ಮೂಸೆಗಳಲ್ಲಿ ತುಂಬಿ ಕುಲುಮೆಯಲ್ಲಿ ೫ ದಿನಗಳ ಕಾಲ ಕಾಯಿಸಲಾಗುತ್ತಿತ್ತು. ಆಗ ಬರುವ ಮಿಶ್ರಣವನ್ನು ಪುಡಿ ಮಾಡಿ ವಿವಿಧ ಪ್ರಮಾಣದಲ್ಲಿ ಬೇರೆ ಖನಿಜ ವಸ್ತುಗಳ ಪುಡಿಯೊಂದಿಗೆ ಬೆರೆಸಿ ಮೂಸೆಗಳಲ್ಲಿ ತುಂಬಿ ಕುಲುಮೆಯಲ್ಲಿ ಕಾಯಿಸಲಾಗುತ್ತಿತ್ತು. ಆಗ ಮೇಲೆ ಹೇಳಲಾದ ಐದು ಬಣ್ಣಗಳ ಗಾಜು ತಯಾರಾಗುತ್ತಿತ್ತು. ನಂತರ ಈ ಗಾಜಿನಿಂದ ಬಳೆಗಳನ್ನು ಉತ್ಪಾದಿಸಲಾಗುತ್ತಿತ್ತು. ಅವುಗಳಲ್ಲಿ ಕಪ್ಪು ಬಣ್ಣದ ಬಳೆಗಳು ತುಂಬಾ ಜನಪ್ರಿಯವಾಗಿದ್ದವು.

ಈ ಗಾಜಿನ ಮೂಲ ಮಿಶ್ರಣದೊಂದಿಗೆ ಕಪ್ಪು ಗಾಜಿನ ಉತ್ಪಾದನೆಗಾಗಿ ಸೋಡಾವನ್ನು ಹಸಿರು ವರ್ಣದ ಗಾಜಿನ ಉತ್ಪಾದನೆಗಾಗಿ ಮ್ಯಾಂಗನೀಸ್ ಮತ್ತು ತಾಮ್ರದ ಪುಡಿಯನ್ನು ಕೆಂಪು ಗಾಜಿನ ಉತ್ಪಾದನೆಗಾಗಿ ಕೆಮ್ಮಣ್ಣನ್ನು (ಬಹುಶಃ ಜಂಬಿಟ್ಟಿಗೆ) ನೀಲಿ ಬಣ್ಣದ ಗಾಜಿಗಾಗಿ ತಾಮ್ರದ ಪುಡಿಯನ್ನು ಮತ್ತು ಹಳದಿ ಗಾಜಿಗಾಗಿ ಹಳದಿ ಬಣ್ಣದ ಹುಡಿಯನ್ನು ಒಂದು ನಿಶ್ಚಿತ ಪ್ರಮಾಣದಲ್ಲಿ ಬೆರೆಸಿ,

ಮೂಸೆಗಳಲ್ಲಿ ತುಂಬಿ ಕುಲುಮೆಯಲ್ಲಿ ಕಾಯಿಸಲಾಗುತ್ತಿತ್ತು. ಬುಕಾನನ್ ಹೀಗೆ ತಾನು ಕಂಡ ಖನಿಜೋದ್ಯಮವನ್ನು ಒಬ್ಬ ಪ್ರವಾಸಿಯಾಗಿ ವಿವರಿಸಿದ್ದಾನೆ.[೩೦೦]

ಸಾಂಪ್ರದಾಯಿಕ ಮಹತ್ವವನ್ನು ಹೊಂದಿರುವ ಬಳೆಯು ಅನೇಕ ಸಂತೆ-ಹಳ್ಳಿಗಳಲ್ಲಿ ಮಾರಾಟವಾಗುವ ಸರಕಾಗಿದ್ದು ರಾಜ್ಯದ ಆದಾಯವನ್ನು ಹೆಚ್ಚಿಸುವಲ್ಲಿ ಈ ಕೈಗಾರಿಕೆಯು ಮಹತ್ವದ್ದಾಗಿದೆ. ನಾಯಕರ ಕಾಲದಲ್ಲಿ ಅನೇಕ ಉತ್ಪಾದನಾ ಸಮುದಾಯಗಳು ಇದ್ದು ಅವುಗಳನ್ನು ವಿವರಿಸುವಷ್ಟು ಮಾಹಿತಿಗಳು ಇಲ್ಲದಿರುವಾಗ ಅದಕ್ಕೆ ಪೂರಕಾದ ಕೆಲವು ಸಮುದಾಯಗಳು ಹಾಗೂ ವೃತ್ತಿಯನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

| **ಸಮುದಾಯಗಳು** | **ವೃತ್ತಿ** |
|---|---|
| ಅಗಸರು | ಬಟ್ಟೆ ತೊಳೆಯುವವರು |
| ಬಣಜಿಗರು | ವ್ಯಾಪಾರಿಗಳು |
| ಬೇಡರು | ಬೇಟೆಗಾರರು |
| ಬೆಸ್ತರು | ಮೀನುಗಾರರು |
| ದರ್ಜಿಗಳು | ಬಟ್ಟೆ ಹೊಲೆಯುವವರು |
| ಗಾಣಿಗರು | ಎಣ್ಣೆ ತೆಗೆಯುವವರು |
| ಗೊಲ್ಲರು | ಪಶುಸಂಗೋಪಕರು |
| ಕ್ಷೌರಿಕರು | ಕ್ಷೌರಮಾಡುವವರು |
| ಈಡಿಗರು | ಹೆಂಡ ಇಳಿಸುವವರು |
| ಕುಂಬಾರರು | ಮಡಿಕೆ ಮಾಡುವವರು |
| ಕುರುಬರು | ಕುರಿಕಾಯುವವರು |
| ಮೋಚಿ | ಚಮ್ಮಾರರು |
| ಮೊದಲಿ | ಪೂಜಾರರು |
| ನಟುವ | ನೃತ್ಯಗಾರರು |
| ನೇಕಾರರು | ಬಟ್ಟೆ ನೇಯುವವರು |
| ಸಾದರು | ಕೃಷಿಕರು |
| ಟೈಗ್ಲರ್ | ತರಕಾರಿ ತೋಟಮಾಡುವವರು |
| ಉಪ್ಪಾರರು | ಉಪ್ಪು ತಯಾರು ಮಾಡುವವರು |
| ಒಕ್ಕಲಿಗರು | ಕೃಷಿಕಾರ್ಮಿಕರು |

ಒಟ್ಟಾರೆಯಾಗಿ ನಾಯಕರ ಕಾಲದಲ್ಲಿ ಅನೇಕ ವಸ್ತುಗಳು ಸ್ಥಳೀಯ ಜನರಿಂದ ಉತ್ಪಾದನೆಯಾಗಿ ಸಂತೆ-ಪೇಟೆ, ಪಟ್ಟಣಗಳ ಮೂಲಕ ಜನರ ಸಾಮಾಜಿಕ ಬದುಕಿಗೆ ಪೂರಕವಾಗಿದ್ದವು. ಕುಶಲಕರ್ಮಿಗಳು ಸಣ್ಣ ಹಾಗೂ ಸರಳಯಂತ್ರಗಳನ್ನು ನಿರ್ಮಿಸುತ್ತಿದ್ದರು. ಎಣ್ಣೆಯನ್ನು ಹಿಂಡಿ ತೆಗೆಯಲು ಗಾಣಗಳನ್ನು, ಅಡುಗೆ ಮಾಡಲು ಹಾಗೂ ಮದ್ದು ಗುಂಡುಗಳನ್ನು ಅರೆದು ತಯಾರಿಸಲು ಒರಳನ್ನು ಕಲ್ಲುಕುಟಿಗರಿಂದ ತಯಾರಿಸುತ್ತಿದ್ದರು. ಚಿತ್ರದುರ್ಗದಲ್ಲಿ ಬೃಹತ್ ಕೋಟೆ ನಿರ್ಮಾಣವಾಗಿದ್ದು, ಕೋಟೆಗೆ ಸಂಬಂಧಿಸಿದ ಕೋಟೆಯ ಯಂತ್ರವನ್ನು ಹಾಗೂ ಇನ್ನೂ ಅನೇಕ ಸರಳ ಯಂತ್ರಗಳನ್ನು ಓಜರು, ಆಚಾರಿಗಳು ನಿರ್ಮಿಸುತ್ತಿದ್ದರು.[೩೦೨]

ಈ ರೀತಿಯಾಗಿ ಕಮ್ಮಾರ, ಬಡಗಿ, ಅಕ್ಕಸಾಲಿ, ಕಂಚುಗಾರ, ಶಿಲ್ಪಿ ಮೊದಲಾದ ಕುಶಲಕಾರ್ಮಿಕರು ಕೈಗಾರಿಕೆಗೆ ಚಾಲನೆಯನ್ನು ಒದಗಿಸಿದರು. ಇವರು ಉತ್ಪಾದನೆ ಮಾತ್ರವಲ್ಲದೆ ಅವುಗಳ ವ್ಯಾಪಾರವನ್ನು ನಡೆಸುತ್ತಿದ್ದರು. ತಾವು ವಾಸಿಸುತ್ತಿರುವ ಪ್ರದೇಶದ ಸುತ್ತಮುತ್ತಲಿನಲ್ಲಿ ಸಿಗುವ ಪ್ರಕೃತಿದತ್ತವಾದ ಕಚ್ಚಾವಸ್ತುಗಳನ್ನೇ ಹೆಚ್ಚಾಗಿ ಬಳಸಿಕೊಂಡು ಕೈಗಾರಿಕೆಗಳನ್ನು ನಡೆಸುತ್ತಿದ್ದರು. ತಾವೇ ಸ್ವತಃ ಮಾರುಕಟ್ಟೆಗಳನ್ನು ಇಲ್ಲವೆ ಸಂತೆಗಳನ್ನು ಏರ್ಪಡಿಸುತ್ತಿದ್ದರು. ಅದೇ ರಿತಿ ತಮ್ಮ ಹಿತರಕ್ಷಣೆಗೋಸ್ಕರ ವೃತ್ತಿ ಸಂಘಗಳನ್ನು ರಚಿಸಿಕೊಂಡಿದ್ದರು. ಕುಶಲ ಕಾರ್ಮಿಕರಿಗೆ ವೇತನವನ್ನು ನೀಡಲಾಗುತ್ತಿತ್ತು. ವೇತನವನ್ನು ಮೊದಲೇ ಗೊತ್ತುಪಡಿಸಲಾಗುತ್ತಿತ್ತು. ವೇತನದ ಪ್ರಮಾಣ ಕೆಲಸವನ್ನು ನೋಡಿಕೊಂಡು ಬೇರೆ ಬೇರೆಯೇ ಆಗಿರುತ್ತಿತ್ತು. ಕುಶಲಕರ್ಮಿಗಳ ಜೀವನೋಪಾಯಕ್ಕೆ ಗದ್ದೆ, ಗದ್ಯಾಣ, ಪಣ, ಹೊನ್ನು, ಕೂಲಿ ಮುಂತಾದವುಗಳನ್ನು ನೀಡಲಾಗುತ್ತಿತ್ತು. ಅರಮನೆ, ಬಸದಿ, ದೇವಸ್ಥಾನ, ಕಮ್ಮಟ ಮೊದಲಾದ ಸಂಸ್ಥೆಗಳಲ್ಲಿ ಕುಶಲಕರ್ಮಿಗಳು ದುಡಿಯುತ್ತಿದ್ದರು. ಕುಶಲಕರ್ಮಿಗಳನ್ನು ಆಯಗಾರರು ಎಂಬುದಾಗಿ ಪರಿಗಣಿಸಲಾಗಿತ್ತು. ಇವರು ಕೆಲವೊಂದು ಸಂದರ್ಭಗಳಲ್ಲಿ ತಮ್ಮ ವೃತ್ತಿಯನ್ನು ಬದಲಾಯಿಸುತ್ತಿದ್ದರು ಎನ್ನುವ ವಿವರಣೆಯೂ ಸಿಗುತ್ತದೆ. ಗ್ರಾಮಗಳಲ್ಲಿ ಚಿನ್ನ, ಬೆಳ್ಳಿಯ ತಯಾರಿಕೆಗೆ ಹೆಚ್ಚು ಪ್ರಾಮುಖ್ಯತೆ ಇಲ್ಲದಿರುವ ಸಂದರ್ಭಗಳಲ್ಲಿ ಅಕ್ಕಸಾಲಿಗರು ಮತ್ತು ಕಂಚುಗಾರರು ಬಡಗಿ ಇಲ್ಲವೆ ಕಮ್ಮಾರಿಕೆ ವೃತ್ತಿಯನ್ನು ಮಾಡಬೇಕಾಗಿತ್ತು. ಒಟ್ಟಿನಲ್ಲಿ ಉತ್ಪಾದನಾ ವರ್ಗದ ಸಾಮಾಜಿಕ ಸ್ಥಾನಮಾನ, ಆದಾಯ ಮತ್ತು ವೇತನ ಅವರು ಉತ್ಪಾದಿಸುವ ವಸ್ತು ಮತ್ತು ಅದರ ಮಾರಾಟವನ್ನು ಅವಲಂಬಿಸಿಕೊಂಡಿರುತ್ತಿತ್ತು.

**೬.೫. ಸಾರಿಗೆ ಸಂಪರ್ಕ**

ಸಾರಿಗೆ ಸಂಪರ್ಕಗಳು ಹಿಂದಿನ ಕಾಲದಿಂದ ಇಂದಿನವರೆಗೂ ಒಂದು ಪ್ರದೇಶದ ಸರ್ವತೋಮುಖ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ್ದು ಗಮನಿಸಬಹುದು. ಸಾರಿಗೆ ಸಂಪರ್ಕಗಳು ದೇಹದ ನರನಾಡಿಗಳಿದ್ದಂತೆ. ಒಬ್ಬ ವ್ಯಕ್ತಿಯ ಆರೋಗ್ಯ ಪೂರ್ಣ ಬೆಳವಣಿಗೆಯಲ್ಲಿ ರಕ್ತನಾಳಗಳು ಹೇಗೆ ಕಾರ್ಯ ನಿರ್ವಹಿಸುತ್ತವೆಯೋ ಅದೇ ರೀತಿ ಒಂದು ನಾಡಿನ ಬೆಳವಣಿಗೆಯಲ್ಲಿ ಸಾರಿಗೆ ಸಂಪರ್ಕ ಸೌಲಭ್ಯಗಳು ನಿರ್ಣಾಯಕ ಪಾತ್ರ ವಹಿಸುತ್ತವೆ. ಈ ಸೌಲಭ್ಯಗಳು ಕೇವಲ ಸರಕು ಸಾಮಗ್ರಿಗಳನ್ನು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಾಗಿಸಲು ಸಹಾಯಕವಾಗಿದ್ದಲ್ಲದೇ ಸಮಾಚಾರಗಳನ್ನು ಒಯ್ಯಲು ಹಾಗೂ ಸೈನ್ಯವನ್ನು ತನ್ನ ಗಡಿಗಳನ್ನು ಕಾಯುವುದಕ್ಕೂ ಹಾಗೂ ಸೈನಿಕ ಕಾರ್ಯಾಚರಣೆಯನ್ನು ನಡೆಸಲು ಬಳಸಲಾಗುತ್ತಿತ್ತು. ಸಾರಿಗೆ ವ್ಯವಸ್ಥೆಯು ಪ್ರಾಚೀನ ಕಾಲದಿಂದ ಇದ್ದುದನ್ನು ಗಮನಿಸಬಹುದು.

ಮನುಷ್ಯ ಅಲೆಮಾರಿ ಜೀವನವನ್ನು ಬಿಟ್ಟು ಒಂದೆಡೆ ನೆಲೆ ನಿಂತಾಗಿನಿಂದ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಒಂದೆಡೆಯಿಂದ ಇನ್ನೊಂಡೆಗೆ ಚಲಿಸಿ ಕೆಲವು ಸಂಪರ್ಕ ಕೇಂದ್ರಗಳನ್ನು ಕಂಡುಕೊಂಡಿದ್ದನ್ನು ಬೃಹತ್ ಶಿಲಾಯುಗದಿಂದಲೂ ಗಮನಿಸಬಹುದು. ಇದಕ್ಕೆ ಸಾಕ್ಷಿಯಾಗಿ ಇಂದಿನ ಕೆಲವು ಹೆದ್ದಾರಿಗಳು ಬೃಹತ್ ಶಿಲಾಯುಗದ ನೆಲೆಗಳ ಮುಖಾಂತರ ಹಾದುಹೋಗಿರುವುದನ್ನು ಕಾಣಬಹುದು. ವ್ಯಾಪಾರವು ಪ್ರಮುಖವಾಗಿ ಭೂ ಮಾರ್ಗ ಮತ್ತು ಜಲ ಮಾರ್ಗಗಳಲ್ಲಿ ನಡೆದಿದ್ದನ್ನು ಅತೀ ಪ್ರಾಚೀನ ಕಾಲದಿಂದಲೂ ಕಾಣಬಹುದು. ಆದರೆ ಈ ಮಾರ್ಗಗಳನ್ನು ಅಂದಿನ ಸರಕಾರಗಳು ನಿರ್ಮಾಣ ಮಾಡಿದ್ದನ್ನು ಮತ್ತು ನಿರ್ವಹಿಸುತ್ತಿದ್ದುದನ್ನು ಅಂದಿನ ಕಾಲದ ದಾಖಲೆಗಳು ಅದರಲ್ಲೂ ಪ್ರಮುಖವಾಗಿ ಶಾಸನಗಳು ನೇರವಾಗಿ ಉಲ್ಲೇಖಿಸದೇ ಪರೋಕ್ಷವಾಗಿ ಬೆಳಕು ಚೆಲ್ಲುತ್ತವೆ.

ನಾವು ತಿಳಿದಿರುವಂತೆ ಭಾರತದಾದ್ಯಂತ ಮೌರ್ಯ ಹಾಗೂ ನಂತರದ ಪ್ರಭುತ್ವಗಳು ಬೃಹತ್ ಪ್ರಮಾಣದ ಹೆದ್ದಾರಿ ವ್ಯವಸ್ಥೆಗೆ ಬುನಾದಿ ಹಾಕಿದ್ದರು. ವಾಣಿಜ್ಯ, ಸೈನ್ಯ ಚಲನವಲನ ಮತ್ತು ಧಾರ್ಮಿಕ ಕ್ಷೇತ್ರಗಳ ಸಂದರ್ಶನ ಇವು ಹೆದ್ದಾರಿ ಸುವ್ಯವಸ್ಥೆಯ ಅಗತ್ಯವನ್ನು ಹೆಚ್ಚಿಸಿದವು. ಹೆದ್ದಾರಿ ನಿರ್ಮಾಣ ಮತ್ತು ಅವುಗಳ ನಿರ್ವಹಣೆ ಸರಕಾರದ ಹಾಗೂ ಸಾರ್ವಜನಿಕ ಸಂಘ ಸಂಸ್ಥೆಗಳ ಹೊಣೆಯಾಯಿತು. ಅಶೋಕನು ಈ ಬಗ್ಗೆ ಕ್ರಮಕೈಗೊಂಡಿದ್ದು ಮಹತ್ವದ್ದಾಗಿದೆ. ನಂತರ ಶಾತವಾಹನರ ಕಾಲದಲ್ಲಿ ದಕ್ಷಿಣದಲ್ಲಿ ಈ ವ್ಯವಸ್ಥೆ ಕ್ರಮವಾಗಿ ಮುಂದುವರೆಯಿತು. ಈ ಒಳಸಂಪರ್ಕ ವ್ಯವಸ್ಥೆಯನ್ನು ರೂಪಿಸುವಲ್ಲಿ ದೇಶದ ಬಂದರುಗಳ ಮತ್ತು ವಾಯುವ್ಯ ಅಂತರಾಷ್ಟ್ರೀಯ ಭೂ ಮಾರ್ಗದ ಪ್ರಭಾವ ಗಣನೀಯವಾಗಿತ್ತೆಂಬುದು ನಮಗೆ ಸ್ಪಷ್ಟವಾಗುತ್ತದೆ.

ಅಫ್ಘಾನಿಸ್ತಾನ, ಪರ್ಷಿಯಾ, ಮಧ್ಯ ಏಷ್ಯಾ, ಮತ್ತು ಚೀನಾಗಳೊಡನೆ ಸಂಪರ್ಕ ಸಾಧಿಸುವಲ್ಲಿ ವಾಯುವ್ಯ ಭಾರತ ಆಯಕಟ್ಟಿನ ಸ್ಥಾನದಲ್ಲಿದೆ. ಖೈಬರ್ ಮತ್ತು ಬೋಲನ್ ಕಣಿವೆಗಳು ಹಾಗೂ ಹಿಂದೂಕುಶ್ ಪರ್ವತ ದಾಟಿಹೋಗುವ ಉತ್ತರದ ಮಾರ್ಗವೂ ಮಧ್ಯಪ್ರಾಚ್ಯಾ ಹಾಗೂ ಮಧ್ಯ ಏಷ್ಯಾದ ಸಂಪರ್ಕಕ್ಕೆ ಕಿಂಡಿಗಳಾಗಿದ್ದವು. ಆದ ಕಾರಣ ಈ ಭೂ ಭಾಗವನ್ನು ಸೀಳಿ ದೊಡ್ಡ ತಡೆಯಾಗಿ ಪರಿಣಮಿಸಿದ್ದ ಸಿಂಧೂ ನದಿ ಭೌಗೋಳಿಕವಾಗಿ ಮಹತ್ವದ ಸ್ಥಾನ ಪಡೆದಿತ್ತು. ಈ ನದಿಯ ಈಚೆಗಿನ ಪ್ರದೇಶ ಭಾರತೀಯರಿಗೆ ಸುರಕ್ಷಿತವೆನಿಸಿದ್ದರೆ ಅದರ ಆಚೆಗಿನ ಭಾಗ ವಿದೇಶಿಯರ ಮುನ್ನಡೆಗೆ ಅಷ್ಟೇ ಸುಲಭವಾಗಿತ್ತು. ಇದರಿಂದಾಗಿ ಸಿಂಧೂ ನದಿಯ ಆಚೆಗಿನ ಪಟ್ಟಣಗಳು ಸಹಜವಾಗಿಯೆ ಅಂತರಾಷ್ಟ್ರೀಯ ಮಾರ್ಗಗಳು ಮತ್ತು ಭಾರತದ ಆಂತರಿಕ ಮಾರ್ಗಗಳ ಕೂಡುಸ್ಥಳಗಳಾಗಿದ್ದವು.

ಕರ್ನಾಟಕದ ವಾಣಿಜ್ಯ ಹಾಗೂ ಸಾಂಸ್ಕೃತಿಕ ಸಂಪರ್ಕಗಳ ಬಗ್ಗೆ ತಿಳಿಯಬೇಕಾದರೆ ಅಲ್ಲಿನ ಭೌಗೋಳಿಕ ಸನ್ನಿವೇಶ ಮತ್ತು ರಾಜಕೀಯ ಹಿನ್ನೆಲೆಗಳನ್ನು ಗಮನಿಸುವುದು ಅಗತ್ಯ. ಮುಖ್ಯವಾಗಿ ರಾಜ್ಯಗಳು ಆಧುನಿಕ ಕಾಲದಲ್ಲಿ ನಿರ್ಮಾಣಗೊಂಡು, ಪ್ರಾಚೀನ ಕಾಲದಲ್ಲಿ ಸಾಮ್ರಾಜ್ಯದ ಗಡಿಗಳೇ ರಾಜ್ಯಗಳಾಗಿದ್ದವು. ಆದರೆ ಪ್ರಸ್ತುತ ಅಧ್ಯಯನ ವಿಷಯ ಕರ್ನಾಟಕ ಭಾಗಕ್ಕೆ ಸೇರಿರುವುದರಿಂದ ಈ ಪ್ರದೇಶದ ಉಲ್ಲೇಖ ಅನಿವಾರ್ಯವಾಗಿದೆ.

ಕನ್ನಡ ನಾಡಿನ ವಿವಿಧ ಭಾಗಗಳು ಮೌರ್ಯರಿಂದ ವಿಜಯನಗರ ಹಾಗೂ ನಂತರದ ಪಾಳೆಯಗಾರರ ಅಧೀನದಲ್ಲಿದ್ದವು. ಹಾಗೂ ಪ್ರಾಚೀನ ಕಾಲದಲ್ಲಿಯೆ ವಿದೇಶಿ ವ್ಯಾಪಾರ ಈ ನಾಡಿನೊಂದಿಗೆ ಹೊಂದಿದ್ದು ಮೊದಲಿಗೆ ರೋಮನ್ ರಾಷ್ಟ್ರದೊಂದಿಗೆ ಮತ್ತು ಪ್ರಾಚೀನ ಕಾಲದ ವಾಣಿಜ್ಯ ಸಮೃದ್ಧವಾಗಿ

ನಡೆಯಿತಾದರೂ ಪ್ರವಾಸಿಗಳಿಗೆ ಕರ್ನಾಟಕದ ಸಂಪನ್ಮೂಲಗಳು ಮತ್ತು ರಾಜಕೀಯ ಸ್ಥಿತಿಯ ಬಗ್ಗೆ ಸ್ಪಷ್ಟ ಚಿತ್ರಣ ದೊರೆಯಲಿಲ್ಲ.[೨೦೫] ಈ ವ್ಯಾಪಾರ ಮಾರ್ಗ, ಸಾರಿಗೆ, ಸಂಪರ್ಕಗಳ ಕುರಿತಾಗಿ ಅನೇಕ ವಿದ್ವಾಂಸರು ಸಂಶೋಧನೆ ಮಾಡಿದ್ದಾರೆ.

ಸಾರಿಗೆ ಸಂಪರ್ಕಗಳ ಕುರಿತು ಸ್ಥಳೀಯ ಆಕರಗಳ ಜೊತೆಗೆ ವಿದೇಶಿ ಯಾತ್ರಿಕರು ಮತ್ತು ವ್ಯಾಪಾರಿಗಳ ಬರಹಗಳು ಸಹ ಮಾಹಿತಿ ನೀಡುತ್ತವೆ. ಉದಾ: ಚೀನಾದ ಯಾತ್ರಿಕ ಫಾಹಿಯಾನನ ಪ್ರಕಾರ ದಕ್ಷಿಣ ಭಾರತದ ವ್ಯಾಪಾರ ಮಾರ್ಗವು ಬಹಳ ಕಷ್ಟದಾಯಕವಾಗಿತ್ತು. ಕ್ರಿ.ಶ.೭ನೇ ಶತಮಾನದಲ್ಲಿ ಭಾರತಕ್ಕೆ ಭೇಟಿಕೊಟ್ಟ ಮತ್ತೋರ್ವ ಚೀನಾ ಯಾತ್ರಿಕ ಹೂಯೆನ್‌ಸ್ತಾಂಗ್ ಕೂಡ ಇದೇ ಅಭಿಪ್ರಾಯವನ್ನು ವ್ಯಕ್ತ ಪಡಿಸಿ ದಾರಿಕಳ್ಳರು ಮತ್ತು ದಟ್ಟ ಅರಣ್ಯಗಳು ಯಾತ್ರಾರ್ಥಿಗಳ ಚಲನವಲನಗಳಿಗೆ ಮತ್ತು ವ್ಯಾಪಾರ ಬೆಳವಣಿಗೆಗೆ ಅಡ್ಡಿಯುಂಟು ಮಾಡುತ್ತಿದ್ದವು ಎಂದಿದ್ದಾನೆ.[೨೦೬] ಬಿ.ಎಲ್.ರೈಸ್‌ರವರು ಮೌರ್ಯ ವಂಶದ ಸ್ಥಾಪಕ ಚಂದ್ರಗುಪ್ತ ಮೌರ್ಯ ಮತ್ತು ಆತನ ಗುರು ಭದ್ರಬಾಹು ಶ್ರವಣಬೆಳಗೊಳಕ್ಕೆ ಕ್ರಿ.ಪೂ. ೪ನೇ ಶತಮಾನದಲ್ಲಿ ಭೇಟಿ ನೀಡಿದಾಗ ಬಹುಶಃ ಚೆನ್ನಾಗಿ ನಿರ್ಮಿತವಾದ ವ್ಯಾಪಾರ ಮಾರ್ಗದಲ್ಲಿ ಬಂದಿರಬಹುದು ಎಂದು ಊಹಿಸಿದ್ದಾರೆ.[೨೦೭] ಅಲ್ಟೇಕರ್ ಮತ್ತು ದಿವಾಕರ್‌ರವರು ಸಾರಿಗೆ ಸಂಪರ್ಕ ವ್ಯವಸ್ಥೆಯು ಎತ್ತಿನ ಗಾಡಿ, ಪ್ರಾಣಿಗಳು ಮತ್ತು ಕೋಣಗಳಿಂದ ಕೂಡಿತ್ತು ಎಂದು ಅಭಿಪ್ರಾಯಪಟ್ಟಿದ್ದಾರೆ.[೨೦೮] ಮುಖ್ಯ ರಸ್ತೆಗಳನ್ನು ಹೆದ್ದಾರಿ(ಹೆಬ್ಬಟ್ಟೆ), ಬಂಡಿದಾರಿ, ಓಣಿಗಳೆಂದು ಕರೆಯಲಾಗಿದ್ದು, ಅವುಗಳನ್ನು ಸ್ಥಳೀಯ ಆಡಳಿತವು ನೋಡಿಕೊಳ್ಳುತ್ತಿತ್ತು.[೨೦೯] ಓಂ ಪ್ರಕಾಶ್ ಪ್ರಸಾದ್ ಪ್ರಕಾರ ಆರಂಭಿಕ ಮಧ್ಯಕಾಲೀನ ಯುಗದಲ್ಲಿ ಸಾರಿಗೆ ಸಂಪರ್ಕಗಳ ಅಭಿವೃದ್ಧಿಗೆ ಧಾರ್ಮಿಕ ಮತ್ತು ಆಡಳಿತದ ಅಗತ್ಯತೆಯು ಪ್ರೇರಣೆಯ ಅಂಶಗಳಾಗಿವೆ. ಆದರೆ ೧೦ ಮತ್ತು ೧೨ನೇ ಶತಮಾನಗಳ ನಡುವೆ ಸಾರಿಗೆ ಮತ್ತು ಸಂಪರ್ಕದ ಬೆಳವಣಿಗೆಯಲ್ಲಿ ವ್ಯಾಪಾರದ ಅವಶ್ಯಕತೆಗಳು ಅತ್ಯಂತ ಶಕ್ತಿದಾಯಕವಾದ ಪ್ರೇರಣೆಯ ಅಂಶಗಳಾಗಿ ಕಂಡುಬಂದಿವೆ. ಬಂದರು ಪಟ್ಟಣಗಳ ಸಮೃದ್ಧಿಯು ತನ್ನ ಆಂತರಿಕ ಹಾಗೂ ಬಾಹ್ಯ ವ್ಯಾಪಾರದ ಮೇಲೆ ಅವಲಂಬಿತವಾಗಿದ್ದು, ಮುಂದುವರಿದಂತೆ ಇದು ಒಳನಾಡಿನ ಸಂಪರ್ಕ ಜಾಲಗಳ ಬೆಳವಣಿಗೆಯ ಮೇಲೆ ಪ್ರಭಾವ ಬೀರಿದೆ. ಆರಂಭಿಕ ಮಧ್ಯಕಾಲೀನ ಕಾಲದ ಯುದ್ಧಗಳು ಹಳೆಯ ರಸ್ತೆಗಳ ಕಾಪಾಡುವಿಕೆ ಹಾಗೂ ಹೊಸ ರಸ್ತೆಗಳ ರಚನೆಗೆ ಆಳುವ ವರ್ಗದವರಿಂದ ಪ್ರೋತ್ಸಾಹ ನೀಡುವಂತೆ ಮಾಡುತ್ತಿದ್ದವು.[೨೧೦] ಸಾಲೆತ್ತೂರು ಪ್ರಕಾರ ತುಳುನಾಡಿನ ರಸ್ತೆಗಳು ವಿಶ್ರಾಂತಿ ಗೃಹಗಳಿಂದ ಕೂಡಿದ್ದು, ಅವುಗಳ ನಿರ್ವಹಣೆಗಾಗಿ ದಯಾವಂತರನ್ನು ನೇಮಿಸಲಾಗಿತ್ತು. ಈ ಬಗೆಯ ವಿಶ್ರಾಂತಿ ಗೃಹಗಳನ್ನು ಕಟ್ಟೆಗಳೆಂದು ಕರೆಯಲಾಗುತ್ತಿತ್ತು. ಅಲ್ಲಿ ಎರಡು ಪ್ರಕಾರದ ಕಟ್ಟೆ ಅಥವಾ ವಿಶ್ರಾಂತಿ ಗೃಹಗಳಿದ್ದವು. ಅವುಗಳೆಂದರೆ ಸಾಮಾನ್ಯ ಕಟ್ಟೆಗಳು ಮತ್ತು ಧರ್ಮಕಟ್ಟೆಗಳು. ಧರ್ಮ ಕಟ್ಟೆಗಳಲ್ಲಿ ಮೂರು ಪ್ರಕಾರದ ಕುಡಿಯುವ ನೀರಿನ ಲೋಟಗಳಿದ್ದವು. ಒಂದನ್ನು ಪ್ರಭುವರ್ಗದವರು ಮತ್ತು ರಾಜಕುಮಾರರಿಗೆ ಕುಡಿಯುವ ನೀರಿಗಾಗಿ ಬಳಸುತ್ತಿದ್ದರೆ, ಇನ್ನೊಂದು ಸಣ್ಣ ಲೋಟವನ್ನು ಬ್ರಾಹ್ಮಣರಿಗೆ ಮತ್ತು ಮೂರನೆಯ ಲೋಹದ ಲೋಟವನ್ನು ಎಲ್ಲ ಬಗೆಯ ಜಾತಿಯವರಿಗೆ ಕುಡಿಯುವ ನೀರಿಗಾಗಿ ಬಳಸಲಾಗುತ್ತಿತ್ತು.[೨೧೧] ಮೋತಿ ಚಂದ್ರರವರು ಕ್ರಿ.ಶ. ೧೧ನೇ ಶತಮಾನದಲ್ಲಿ ಉತ್ತರ ಭಾರತದಲ್ಲಿದ್ದ ವಿಶ್ರಾಂತಿ ಗೃಹಗಳನ್ನು ಜಾಜಮ, ಅಮಪುರಿ, ಕಡ ಮತ್ತು ಬ್ರಹ್ಮ ..ಗಳೆಂಬುದಾಗಿ ಕರೆಯಲಾಗುತ್ತಿತ್ತೆಂದು ತಿಳಿಸಿದ್ದಾರೆ.[೨೧೨] ಅವರ ಪ್ರಕಾರ ಭಾರತದಲ್ಲಿ ಐದು ಪ್ರಮುಖ ಮಾರ್ಗಗಳಿದ್ದು

ಉತ್ತರವನ್ನು ದಕ್ಷಿಣದೊಂದಿಗೆ ಹಾಗೂ ಪೂರ್ವದೊಂದಿಗೆ ಪಶ್ಚಿಮವನ್ನು ಕೂಡಿಸುತ್ತಿದ್ದವು. ಆ ಐದು ಮಾರ್ಗಗಳಲ್ಲಿ ಮೂರನೆ ಮಾರ್ಗವು ಮಹಾರಾಷ್ಟ್ರ/ ಗೋವಾದ ದಕ್ಷಿಣ ಭಾಗದಿಂದ ಆರಂಭವಾಗಿ, ಕೃಷ್ಣ, ತುಂಗಾಭದ್ರಾ ದೋ ಅಬ್ ನದಿ ಮೂಲಕ ಹಂಪಿ ಅಥವಾ ಹರಿಹರದಲ್ಲಿ ತುಂಗಾಭದ್ರಾ ನದಿಯನ್ನು ಹಾದು ಚಿತ್ರದುರ್ಗ ಮೂಲಕ ಹೋಗಿ ಮೈಸೂರನ್ನು ಕಾವೇರಿ ನದಿ ಮೂಲಕ ಪ್ರವೇಶಿಸಿ ಮುಂದಕ್ಕೆ ಸಾಗುತ್ತಾರೆ. ಈ ಮಾರ್ಗಗಳನ್ನು ಯುದ್ಧ, ವ್ಯಾಪಾರ ಮತ್ತು ಸಾಂಸ್ಕೃತಿಕ ಸಂಪರ್ಕಗಳಿಗಾಗಿ ಬಳಸಲಾಗುತ್ತಿತ್ತು.[೨೧೩]

ಅಪ್ಪಾದೊರೈಯವರು ದಕ್ಷಿಣ ಭಾರತದಲ್ಲಿ, ಕರ್ನಾಟಕ ಸೇರಿದಂತೆ ರಸ್ತೆ ಸಂಪರ್ಕಗಳಿದ್ದು, ಅವುಗಳನ್ನು ಅಂದಿನ ರಾಜರು ನಿರ್ಮಿಸುತ್ತಿದ್ದರು, ರಾಜಪಥಗಳು ಅಸ್ತಿತ್ವದಲ್ಲಿದ್ದುದನ್ನು ಹಾಗೂ ಅವುಗಳ ಉದ್ದ ಹಾಗೂ ಅಗಲ ಇತ್ಯಾದಿ ವಿವರಗಳನ್ನು ನೀಡಿರುವುದಲ್ಲದೇ ರಸ್ತೆಗಳಲ್ಲಿ ವಿಶ್ರಾಂತಿ ಗೃಹಗಳಿದ್ದುದನ್ನು ತಿಳಿಸಿದ್ದಾರೆ. ಅವರ ಪ್ರಕಾರ ದೂರದ ವ್ಯಾಪಾರಕ್ಕಾಗಿ ಸಾಕು ಪ್ರಾಣಿಗಳನ್ನು ಹಾಗೂ ಎತ್ತಿನ ಗಾಡಿಗಳನ್ನು ಹೆಚ್ಚಾಗಿ ಬಳಸಲಾಗುತ್ತಿತ್ತು. ಎಸ್.ಗುರುರಾಜಚಾರ್ ತಮ್ಮ ಕೃತಿಯಲ್ಲಿ ಕರ್ನಾಟಕದ ವರ್ತಕರು ಸಮುದ್ರ ಮಾರ್ಗದ ಮುಖಾಂತರ ಬೆಲೆ ಬಾಳುವ ವಸ್ತುಗಳನ್ನು ವ್ಯಾಪಾರ ಮಾಡುತ್ತಿದ್ದರು. ವಿವಿಧ ಭಾಗಗಳಲ್ಲಿ ವಿವಿಧ ರೀತಿಯ ರಸ್ತೆಗಳಿದ್ದುದನ್ನು ಅದರಲ್ಲೂ ಪ್ರಮುಖವಾಗಿ ಬಂಡಿದಾರಿ ಮತ್ತು ಹೆದ್ದಾರಿಗಳಿದ್ದು ಅವು ಅಂದಿನ ರಾಜಧಾನಿಗಳೊಡನೆ ಸಂಪರ್ಕ ಹೊಂದಿದ್ದನ್ನು ತಿಳಿಸಿದ್ದಾರೆ. ಇದಲ್ಲದೇ ಸಮುದ್ರದ ಮುಖಾಂತರ ವ್ಯಾಪಾರ ವ್ಯವಹಾರಗಳಿದ್ದುದನ್ನು ಸಹ ಚರ್ಚಿಸಿದ್ದಾರೆ.[೨೧೪] ಜಿ.ಆರ್.ಕುಪ್ಪಸ್ವಾಮಿಯವರು ಸ್ಥಳೀಯ ಮಟ್ಟದಲ್ಲಿ ಸರಕನ್ನು ಸಾಗಿಸಲು ವಿವಿಧ ರೀತಿಯ ಪ್ರಾಣಿಗಳನ್ನು ಹಾಗೂ ಬಂಡಿಗಳನ್ನು ಬಳಸಲಾಗುತ್ತಿತ್ತು. ಕರ್ನಾಟಕದ ಪಶ್ಚಿಮ ತೀರದ ಕೆಲವು ಪ್ರಮುಖ ಬಂದರುಗಳ ಮುಖಾಂತರ ಬೆಲೆಬಾಳುವ ವಸ್ತುಗಳನ್ನು ರಫ್ತು ಮಾಡಲಾಗುತ್ತಿತ್ತು ಎಂದು ತಿಳಿಸಿದ್ದಾರೆ.[೨೧೬] ಕಾಮೇಶ್ವರ ಪ್ರಸಾದರವರು ಪ್ರಾಚೀನ ಭಾರತದಲ್ಲಿ ಪ್ರಮುಖವಾಗಿ ಎರಡು ವ್ಯಾಪಾರ ಮಾರ್ಗಗಳು, ಉತ್ತರಪಥ ಮತ್ತು ದಕ್ಷಿಣಪಥ ಅಸ್ತಿತ್ವದಲ್ಲಿದ್ದು ಅವು ಭಾರತದ ಎಲ್ಲ ಭಾಗಗಳೊಂದಿಗೆ ಹಾಗೂ ತೀರಪ್ರದೇಶದೊಂದಿಗೆ ಸಂಪರ್ಕ ಹೊಂದಿದ್ದವೆಂದು ಅಭಿಪ್ರಾಯ ಪಟ್ಟಿದ್ದಾರೆ.[೨೧೭] ಈ ಮೇಲಿನ ಬರವಣಿಗೆಗಳು ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದ ಸಾರಿಗೆ ಸಂಪರ್ಕಗಳನ್ನು ಕುರಿತು ಸ್ಪಷ್ಟವಾದ ಚಿತ್ರಣ ನೀಡುವುದಿಲ್ಲ. ವರ್ತಕರು ಸಂತೆಪೇಟೆ, ಪಟ್ಟಣಗಳಿಗೆ ಪಾದ ಮಾರ್ಗ, ಜಲಮಾರ್ಗಗಳ ಮೂಲಕ ಒಂಟಿಯಾಗಿ ಇಲ್ಲವೆ ಸಮೂಹವಾಗಿ ವಸ್ತುಗಳನ್ನು ತೆಗೆದುಕೊಂಡು ಹೋಗುತ್ತಿದ್ದರು. ಸಾಮಾನ್ಯವಾಗಿ ವರ್ತಕರು ಮಾರಾಟದ ವಸ್ತುಗಳನ್ನು ಹಸುಬೆ[೨೧೮] ಹೆಡಗಿ,[೨೧೯] ಮೂಟೆ,[೨೨೦] ಬರಕ,[೨೨೧] ಕೊಡ,[೨೨೨] ಚರ್ಮದಚೀಲ,[೨೨೩] ಬಿದರಿನಕೊಳವೆ,[೨೨೪] ಸಿಂಗಡಿಕಾಯಿ,[೨೨೫] ಕರಂಡಿಗೆ,[೨೨೬] ಜಲ್ಲೆ,[೨೨೭] ಹೇರು, ಕಟ್ಟು, ಸೂಡು,[೨೨೮] ಭಣ್ಣ, ಗಡಿಗೆ,[೨೨೯] ಬಿದಿರಿನಬುಟ್ಟಿ, ಕೊಳಗ,[೨೩೦] ಮುಂತಾದವುಗಳಲ್ಲಿ ತುಂಬಿದ ಸರಕುಗಳನ್ನು ತಲೆಯ ಮೇಲೆ, ಕಂಕುಳದಲ್ಲಿ ಇಲ್ಲವೆ ಹೆಗಲ ಮೇಲೆ ಹೊತ್ತುಕೊಂಡು ಹೋಗುತ್ತಿದ್ದರು. ಇಲ್ಲಿ ಬರುವ ಸರಕು ತುಂಬುವ ಚೀಲದ ವರ್ಣನೆಯು ಸುಂಕದ ಬಂಕಣ್ಣನ ವಚನದಲ್ಲಿ "ಸಾಕಾರವೆಂಬ ಚೀಲದಲ್ಲಿ ಪ್ರಕೃತಿ ವಿಕಾರವೆಂಬ ಭಂಡವ ತುಂಬಿ ಶ್ರೀಯಾಧರ್ಮಗಳೆಂಬ ದಾರವ ದಾರದಲ್ಲಿ ಸೇರಿಸಿ ಕಟ್ಟಲರಿಯದ ಅಣ್ಣಗಳಿಗೆ ಜಗ ಸೆಟ್ಟಿತನವೇಕೆ?[೨೩೦] ಎಂದು ವರ್ಣಿಸಿರುವುದನ್ನು ಗಮನಿಸಿದರೆ ಇಲ್ಲಿ ಬರುವ ಚೀಲ, ದಾರ, ಭಂಡ, ಶೆಟ್ಟಿ ಎಂಬ ಪದಗಳು ವ್ಯಾಪಾರದ ಚಿತ್ರಣವನ್ನು ಮನವರಿಕೆ ಮಾಡಿಕೊಡುತ್ತವೆ.

ವ್ಯಾಪಾರಿಗಳು ತಮ್ಮ ವಸ್ತುಗಳನ್ನು ಸಾಗಿಸಲು ಎತ್ತು, ಕೋಣ, ಕತ್ತೆ,[೩೩೧] ಕುದುರೆ,[೩೩೨] ಆನೆ,[೩೩೩] ದನ,[೩೩೪] ಬಂಡಿ,[೩೩೫] ರಥ,[೩೩೬] ಮೊದಲಾದವುಗಳ ಮೇಲೆ ಹೇರಿಕೊಂಡು ಪಾದಮಾರ್ಗದ ಮೂಲಕ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಗುತ್ತಿದ್ದರು. ಶ್ರೀಮಂತ ವ್ಯಾಪಾರಿಗಳು ಆನೆಗಳ ಮೇಲೆ ವಸ್ತುಗಳನ್ನು ಹೇರಿಕೊಂಡು ಹೋಗುತ್ತಿದುದು ತಿಳಿದುಬರುತ್ತದೆ. ಹೀಗೆ ಭೂ ಮಾರ್ಗದ ಮೂಲಕ ಸಾಗುವ ವ್ಯಾಪಾರವು ಪಾದಮಾರ್ಗ ಬಂಡಿಯದಾರಿ, ರಾಜಬೀದಿಗಳ ಮೂಲಕ ಸಾಗುತ್ತಿದ್ದು ಈ ದಾರಿಗಳನ್ನು ಶಾಸನಗಳಲ್ಲಿ ಬಟ್ಟೆ,[೩೩೭] ದಾರಿ,[೩೩೮] ಹಾದಿ,[೩೩೯] ಕೀಲ್ವಟ್ಟೆ,[೩೪೦] ಮೇಲ್ವಟ್ಟೆ,[೩೪೧] ರಾಜಬೀದಿ, ಅಡ್ಡವಟ್ಟೆ ಬಂಡಿಯದಾರಿ, ಬಂಡಿಯ ಹೆದ್ದಾರಿ[೩೪೨] ಮುಂತಾದ ಹೆಸರುಗಳಿಂದ ಗುರುತಿಸಿರುವುದನ್ನು ಕಾಣುತ್ತೇವೆ. ಅದೇ ರೀತಿ 'ಮಾನಸೋಲ್ಲಾಸ'ದಲ್ಲಿ ಕೂಡಾ ಈ ರಸ್ತೆಗಳ ನಿರ್ವಹಣೆಗಾಗಿಯೇ ಅಧಿಕಾರಿಗಳನ್ನು ನೇಮಿಸಲಾಗುತ್ತಿದ್ದು, ಅವರನ್ನು ಮಾರ್ಗಧಿಕಾರನಿಹಃ ಎಂದು ಕರೆಯಲಾಗುತ್ತಿತ್ತು ಎಂಬ ಅಂಶದಿಂದ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ರಸ್ತೆಗಳ ನಿರ್ಮಾಣ ಹಾಗೂ ನಿರ್ವಹಣೆಯ ಬಗೆಗೆ ಅರಿವು ಇತ್ತು ಎಂಬುವುದು ಸ್ಪಷ್ಟವಾಗುತ್ತದೆ.[೩೪೩]

ವಿಜಯನಗರ ನಂತರದ ಕಾಲದಲ್ಲಿ ಅನೇಕ ಪಾಳೆಯಗಾರರು ತಮ್ಮ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳಲ್ಲಿ ವಿವಿಧ ರೀತಿಯ ಉತ್ಪನ್ನಗಳನ್ನು ಉತ್ಪಾದಿಸಿ ಪರಸ್ಪರ ವ್ಯಾಪಾರ ವಿನಿಮಯ ಮಾಡಿಕೊಳ್ಳುವಲ್ಲಿ ವರ್ತಕರು ಹಾಗೂ ಇನ್ನಿತರೆ ಅಧಿಕಾರಿ ವರ್ಗವು ಸಾಕ್ಷಿಯಾಗಿದ್ದರು. ತಕ್ಕಳದಲ್ಲಿ ಉಪ್ಪು (ಮಣ್ಣುಪ್ಪು) ತಯಾರಾಗಿ ಮಾರಾಟಕ್ಕೆ ದುರ್ಗಕ್ಕೆ ಹೋಗುತ್ತಿತ್ತು. ಮಳವಳ್ಳಿಯಲ್ಲಿ ಒರಟು ಕಂಬಳಿಗಳು ಕಾಡುಗಡಿಯಲ್ಲಿ ದೊಡ್ಡ ಪ್ರಮಾಣದಲ್ಲಿ ಸುಣ್ಣವೂ ಮದ್ದೂರು ಕೆಂಗೇರಿಗಳಲ್ಲಿ ಬೆಲ್ಲವೂ, ಶ್ರೀರಂಗಪಟ್ಟಣದ ಹತ್ತಿರ ಸೈನಿಕ ಸಾಮಗ್ರಿಗಳೂ, ಬಟ್ಟೆ, ಗಡಿಯಾರ ಹಾಗೂ ಜೇಡಿ ಮಣ್ಣಿನ ಪಾತ್ರೆಗಳೂ, ಚನ್ನಪಟ್ಟಣದಲ್ಲಿ ಗಾಜಿನ ಸಾಮಾನುಗಳೂ ಉಕ್ಕಿನ ತಂತಿಗಳು ತಯಾರಾಗಿ ಕರ್ನಾಟಕದ ಮತ್ತು ಹೊರ ಪ್ರಾಂತ್ಯಗಳ ಮಾರುಕಟ್ಟೆಗಳಿಗೆ ಹೋಗುತ್ತಿದ್ದವು. ದೇಶದ ಅನೇಕ ಕಡೆ ಕಬ್ಬಿಣದ ಎರಕ ಹೊಯ್ಯುವ ಕುಲುಮೆಗಳಿದ್ದುವು. ಪಟ್ವೆಗಾರ ಮತ್ತು ಖತ್ರಿ ಜನರು ಉತ್ತಮ ರೇಷ್ಮೆ ನೇಕಾರರಾಗಿದ್ದರು. ಕಚ್ಚಾ ರೇಷ್ಮೆಯನ್ನು ವಿದೇಶಗಳಿಂದ ಮಂಗಳೂರು ಮೂಲಕ ಆಮದು ಮಾಡಿಕೊಳ್ಳಲಾಗುತ್ತಿತ್ತು.[೩೪೪] ವ್ಯಾಪಾರಿಗಳು ರೇಷ್ಮೆ ಮತ್ತು ಬಟ್ಟೆ ನೇಕಾರರಿಗೆ ಸಾಲ ಕೊಟ್ಟು ಉದ್ಯಮ ನಡೆಸುತ್ತಿದ್ದರು. ಹೊಲೆಯರು ಗುಡಾರಗಳನ್ನು ನೇಯುತ್ತಿದ್ದರು. ಚಿತ್ರದುರ್ಗದ ನೇಕಾರರ ಜಾಣ್ಮೆಯನ್ನು ಬುಕಾನನ್ ಬಹುವಾಗಿ ಹೊಗಳಿದ್ದಾನೆ.[೩೪೫] ಮಗ್ಗದ ಮೇಲೆ ತೆರಿಗೆ ಇತ್ತು. ಚಿಕ್ಕಬಳ್ಳಾಪುರದ ಕಲ್ಲುಸಕ್ಕರೆ ಚೀನಿ ಸಕ್ಕರೆಗೆ ಸಮಾನವಾದ ಖ್ಯಾತಿ ಪಡೆದಿತ್ತು. ಮಧುಗಿರಿ, ಸಾವರಾಯನದುರ್ಗ, ದೇವರಾಯನದುರ್ಗ, ಹಾಗಲವಾಡಿಯಲ್ಲಿಯೂ ಇದರಂತೆಯೇ ಬಳ್ಳಾರಿಯ ಸುತ್ತಲೂ ಕಬ್ಬಿಣದ ಅದಿರನ್ನು ಕರಗಿಸಿ ಕಬ್ಬಿಣ ತಯಾರಿಸುವ ಕೈಗಾರಿಕೆ ಬೆಳೆದಿತ್ತು.[೩೪೬] ಅಲ್ಲಲ್ಲಿ ಬಳೆ ತಯಾರಿಕೆಗೆ ಬೇಕಾಗುವ ಗಾಜು ತಯಾರಾಗುತ್ತಿತ್ತು. ಉತ್ತರ ಕರ್ನಾಟಕದ ಭಾಗಗಳಲ್ಲಿಯೂ ಕಂಬಳಿ, ಉಪ್ಪು, ಬೆಲ್ಲ, ಬಟ್ಟೆ, ಮುಂತಾದ ವಸ್ತುಗಳ ತಯಾರಿಕೆ ಕೇಂದ್ರಗಳಿದ್ದವು, ಎಲ್ಲ ಪ್ರಮುಖ ಊರುಗಳಲ್ಲಿ ಸಂತೆಗಳು ಏರ್ಪಾಡು ವ್ಯಾಪಾರ ನಡೆಯುತ್ತಿತ್ತು. ಬಳ್ಳಾರಿ, ಶಿರಾ, ಆದವಾನಿ, ಹುಬ್ಬಳ್ಳಿ, ನರಗುಂದಗಳ ವರ್ತಕರು, ನಿಜಾಮ ರಾಜ್ಯದ ಭಾಗಗಳೊಂದಿಗೆ ವ್ಯಾಪಾರ ಮಾಡುತ್ತಿದ್ದರು. ಪುಣೆಯಿಂದ ಗೋಸಾಯಿಗಳು ಶಾಲು, ಕೇಸರಿ, ಕಸ್ತೂರಿ, ಮತ್ತು ಪರ್ಷಿಯನ್ ಮುತ್ತುಗಳನ್ನು ತಂದು ಮಾರುತ್ತಿದ್ದರು.[೩೪೭] ಪ್ರಧಾನವಾಗಿ ಗಂಧಕ, ಸೀಸ, ತಾಮ್ರ, ವಿದೇಶಿ ಉಕ್ಕು, ಕರ್ಪೂರ ರೇಷ್ಮೆ ಬಟ್ಟೆ, ಕಾಗದ, ಗಾಜಿನ

ಮತ್ತು ಇತರೆ ಪಾತ್ರೆಗಳು, ಖರ್ಜೂರ, ಬಂಗಾಳದ ಸಕ್ಕರೆ ಈ ಎಲ್ಲ ವಸ್ತುಗಳು ಜಲ ಮಾರ್ಗದಿಂದ ಆಮದು ಮಾಡಿಕೊಳ್ಳುವ ವಸ್ತುಗಳಾಗಿದ್ದವು. ಅಡಿಕೆ, ಮೆಣಸು, ಏಲಕ್ಕಿ, ಲವಂಗ, ಗಂಧದ ಮರ, ಗಂಧದ ಸಾಮಾನು, ಗಂಧದ ಎಣ್ಣೆ ಮುಂತಾದವನ್ನು ಪಶ್ಚಿಮ ಕರಾವಳಿಯಿಂದ ವಿದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು.

ಪ್ರಾಚೀನ ಕಾಲದಲ್ಲಿಯೇ ಪ್ರತಿಷ್ಠಾನ (ಪೈಠಾಣ)ದಿಂದ ದಕ್ಷಿಣದತ್ತ ಹೊರಟ ಮಾರ್ಗ ಕೊಲ್ಲಾಪುರ, ಅಶೋಕನ ಶಾಸನಗಳಿರುವ ಕೊಪ್ಪಳ, ಮಸ್ಕಿ, ಚಂದ್ರವಳ್ಳಿ, ಕನಕಗಿರಿ ಮೊದಲಾದ ಪ್ರಾಚೀನ ಪಟ್ಟಣಗಳನ್ನು ಸಂಪರ್ಕಿಸುತ್ತಿದ್ದುದನ್ನು ಗಮನಿಸಬಹುದು.[೨೪೮]

ಬಾರಕನೂರು ಘಾಟಿ ಮಾರ್ಗದಲ್ಲಿ ಹೊನ್ನವರದಿಂದ ದಕ್ಷಿಣದತ್ತ ಹೊರಟ ಮಾರ್ಗ ಬನವಾಸಿ, ಹಾನಗಲ್ ಬಂಕಾಪುರ, ಬೆಳಗಾವಿ, ಹರಿಹರ, ಅರಸೀಕೆರೆ ಶ್ರವಣಬೆಳಗೊಳಗಳನ್ನು ಹಾಯ್ದು ಪಶ್ಚಿಮದತ್ತ ತಲಕಾಡಿಗೂ ಪೂರ್ವದತ್ತ ಬೆಂಗಳೂರು ಕೋಲಾರದ ಕಡೆಗೂ ಹೋಗುತ್ತಿತ್ತು.[೨೪೯] ಮುಂದೆ ಘಟ್ಟ ರಸ್ತೆಗಳಾಗಿ ಭಟ್ಕಳದಿಂದ ಉತ್ತರಕ್ಕಿದ್ದ ಬಂದರುಗಳಿಗೂ ಸಂಪರ್ಕ ಮಾರ್ಗಗಳು ಸುಲಭವಾಗಿದ್ದರೆ, ದಕ್ಷಿಣಕ್ಕಿದ್ದ ಮಲ್ಪೆ, ಮಂಗಳೂರು, ಕುಂಬಳೆ ಮೊದಲಾದ ಬಂದರುಗಳೊಡನೆಯ ಸಂಪರ್ಕ ಕಠಿಣವಾಗಿತ್ತು.[೨೫೦]

ವಿಜಯನಗರೋತ್ತರ ನಾಯಕರ ಕಾಲದಲ್ಲಿ ಚಿತ್ರದುರ್ಗ ಹರಪನಹಳ್ಳಿ, ಸಂತೆಬೆನ್ನೂರು, ಉಚ್ಚಂಗಿ ದುರ್ಗ ಪ್ರಮುಖ ರಾಜಕೀಯ ಕೇಂದ್ರಗಳಾಗಿದ್ದವು. ಹರಿಹರ, ದಾವಣಗೆರೆ, ದುಮ್ಮಿ, ಬಸವಾಪಟ್ಟಣ, ಬಾಗಳಿ, ಹೊನ್ನಾಳಿ, ಕುರುವ, ಮಲೆಬೆನ್ನೂರು, ಸಾಗರ ಪೇಟೆ, ಬಿಳಿಚೋಡು, ಜಗಳೂರು, ಚಳ್ಳಕೆರೆ, ದೊಡ್ಡೆರಿ, ಹೊಸದುರ್ಗ, ಬಾಗೂರು, ಹೊಳಲ್ಕೆರೆ, ಹೊರಕೆದೇಪುರ, ಮೊಳಕಾಲ್ಮೂರು, ಇನ್ನಿತರೆ ಅನೇಕ ಪಟ್ಟಣಗಳಾಗಿದ್ದವು. ಇವುಗಳ ಪ್ರತಿಯೊಂದು ಪಟ್ಟಣಗಳಿಗೂ ಸಂಪರ್ಕ ವ್ಯವಸ್ಥೆಯನ್ನು ಹೊಂದಿದ್ದವು. ಆದರೆ ಈ ಕುರಿತು ಸರಿಯಾದ ಆಧಾರಗಳು ನಮಗೆ ಲಭ್ಯವಿಲ್ಲ. ಸಂತೆಬೆನ್ನೂರು, ಚನ್ನಗಿರಿ, ಹರಿಹರ, ಹರಪನಹಳ್ಳಿ ಪಟ್ಟಣಗಳು ಕೆಳದಿ ರಾಜಧಾನಿಯೊಂದಿಗೆ ರಸ್ತೆ ಸಂಪರ್ಕ ಹೊಂದಿದ್ದವು.[೨೫೧] ಈ ಒಳನಾಡಿನ ರಸ್ತೆಗಳು ಅಷ್ಟೊಂದು ಉತ್ತಮ ಸ್ಥಿತಿಯಲ್ಲಿರಲಿಲ್ಲ. ಈ ರಸ್ತೆಗಳನ್ನು ಪಂಚಾಯಿತಿಯಂತಹ ಸ್ಥಳೀಯ ಆಡಳಿತವು ರಸ್ತೆಗಳನ್ನು ಉತ್ತಮವಾಗಿಡಲು ರಸ್ತೆಗಳ ರಿಪೇರಿ ಮಾಡಲು ಹಣ ವೆಚ್ಚ ಮಾಡಲಾಗುತ್ತಿತ್ತು.[೨೫೨]

ವಿದೇಶಿ ಪ್ರವಾಸಿಗನಾದ ಬುಕಾನನ್ ಮೈಸೂರು ಸಂಸ್ಥಾನದಲ್ಲಿ ಪ್ರವಾಸ ಕೈಗೊಂಡು ಶಿವಮೊಗ್ಗ ಜಿಲ್ಲೆಯ ಮುಖಾಂತರ ದಾವಣಗೆರೆ ಪ್ರದೇಶವನ್ನು ಪ್ರವೇಶಿಸುತ್ತಾನೆ. ಮೊದಲು ಸಾಸ್ವೆಹಳ್ಳಿಯ ಬೆಟ್ಟಗುಡ್ಡಗಳ ಶ್ರೇಣಿಯನ್ನು ದಾಟಿ ಬಸವಾಪಟ್ಟಣ ನಂತರ ಮಲೆಬೆನ್ನೂರಿಗೆ ಬರುತ್ತಾನೆ. ಮುಂದೆ ಹರಿಹರ, ದಾವಣಗೆರೆ ಕೊಡಗನೂರು, ಭೀಮಸಮುದ್ರ ಮೂಲಕ ಚಿತ್ರದುರ್ಗಕ್ಕೆ ಪ್ರಯಾಣ ಮಾಡುತ್ತಾನೆ.[೨೫೩] ಇಲ್ಲಿಯೂ ಒಂದು ರಸ್ತೆ ಮಾರ್ಗವಿದ್ದಿತೆಂದು ತಿಳಿಯಬಹುದು.

* ಪುಣೆಯಿಂದ ಹರಿಹರದ ಮೂಲಕ ಚಿತ್ರದುರ್ಗಕ್ಕೆ ಮಾರ್ಗವಿತ್ತು. ಈ ಮಾರ್ಗದಲ್ಲಿ ಬರುವ ಎಲ್ಲ ನದಿ/ಹೊಳೆಗಳಿಗೆ ಜಲ ಸಾರಿಗೆ ವ್ಯವಸ್ಥೆ ಇದ್ದಿತ್ತು. ಈ ಮಾರ್ಗವು ಪುಣೆಯಿಂದ ಸತಾರ, ಕೊಲ್ಲಾಪುರ, ಕಾಗಲ, ಬೆಳಗಾವಿ, ಧಾರವಾಡ, ಹುಬ್ಬಳ್ಳಿಗಳ ಮೇಲಿಂದ ಹರಿಹರದ ಹತ್ತಿರ ತುಂಗಾಭದ್ರೆಯನ್ನು ದಾಟಿ ಚಿತ್ರದುರ್ಗಕ್ಕೆ ಮುಟ್ಟುತ್ತಿತ್ತು. ಹಾಗೆಯೇ ಹರಿಹರದಿಂದ ಅತ್ತ ಇದು ಮೈಸೂರಿನ ಸೀಮೆಯಲ್ಲಿ ಹಾದು ಬೆಂಗಳೂರಿಗೂ ಮೈಸೂರಿಗೂ ಹೋಗುತ್ತಿತ್ತು.[೨೫೪]

* ಸೊಲ್ಲಾಪುರದಿಂದ ಚಿತ್ರದುರ್ಗಕ್ಕೆ, ಇದು ನಿಜಾಮನ ರಾಜ್ಯದೊಳಗಿಂದ ಬಂದು ಸೊಲ್ಲಾಪುರ, ಬಿಜಾಪುರ, ಬಾಗಲಕೋಟೆ, ಕಲಾದಗಿ, ಬೆಳಗಾವಿಗಳ ಮೇಲಿಂದ ಚಿತ್ರದುರ್ಗಕ್ಕೆ ಹೋಗುತ್ತಿತ್ತು. ಈ ಮಾರ್ಗದಲ್ಲಿ ಬರುವ ಹೊಳೆಗಳ ಮೇಲೆ ನಾವೆಗಳಿರುತ್ತಿತ್ತು. ಈ ಮಾರ್ಗದಿಂದ ಸರಕುಗಳು ಮುಂಬಯಿಗೆ ಹೋಗುತ್ತಿತ್ತು. ಈ ಮಾರ್ಗದಲ್ಲಿ ಮಳೆಗಾಲದಲ್ಲಿ ಹಲವು ಕಡೆಯಲ್ಲಿ ಚಕಡಿಗಾಡಿಗಳಿಗೆ ಪ್ರಯಾಸವಾಗುತ್ತಿತ್ತು.

* ಬಾಗಲಕೋಟೆಯಿಂದ ಚಿತ್ರದುರ್ಗಕ್ಕೆ, ಈ ಮಾರ್ಗದಲ್ಲಿ ಭೀಮಾ, ಕೃಷ್ಣಾ, ಘಟಪ್ರಭಾ, ಮಲಾಪಹಾರಿ, ಈ ಹೊಳೆಗಳನ್ನು ನಾವೆಗಳಲ್ಲಿ ದಾಟಬೇಕಾಗಿತ್ತು. ಈ ಮಾರ್ಗದಲ್ಲಿ ಮಳೆಗಾಲದಲ್ಲಿ ಕೆಲವು ಕಡೆ ಕೆಸರಾಗುತ್ತಿತ್ತು.[೩೫೫]

* ಚಿತ್ರದುರ್ಗ ನಾಯಕರ ಕಾಲದ ಮುಖ್ಯವಾದ ಆಮದುಗಳೆಂದರೆ ಅರೇಬಿಯಾ ಮತ್ತು ಪರ್ಷಿಯಾದಿಂದ ಕುದುರೆಗಳು, ಸಿಲೋನ್ ಮತ್ತು ಬರ್ಮಾಗಳಿಂದ ಆನೆಗಳು, ಈಸ್ಟ್ ಇಂಡೀಸ್‌ನಿಂದ ಸಂಬಾರ ವಸ್ತುಗಳು, ಜಿದ್ದಾ ಏಡನ್ ಮತ್ತು ಚೈನಾಗಳಿಂದ ವೆಲ್ವೆಟ್ ದಮಾಸ್ ಮತ್ತು ಸ್ಯಾಟಿನ್ ಅಂತಹ ಭಾರವಾದ ಬಟ್ಟೆಗಳು. ಇವು ಕರ್ನಾಟಕದ ಕರಾವಳಿ ಬಂದರುಗಳ ಮೂಲಕ ಅಂದರೆ ಭಟ್ಕಳ, ಮಂಗಳೂರು ಮುಂಬಯಿ, ಚೆನ್ನೈ, ಕೊಲ್ಕತ್ತ, ವಿಶಾಖಪಟ್ಟಣಂ, ಗೋವಾ, ಕೊಚ್ಚಿನ್, ಕಾಂಡ್ಲಾ, ಟುಟಿಕಾರಿನ್ ಮುಂತಾದ ಬಂದರುಗಳ ಮೂಲಕ ಒಳನಾಡಿನ ರಸ್ತೆ ಸಂಪರ್ಕಗಳಿಗೆ ಹಲವು ಬಗೆಯ ವಸ್ತುಗಳು ಆಮದಾಗುತ್ತಿದ್ದವು.

ಚಿತ್ರದುರ್ಗದಿಂದ ಇಲ್ಲಿ ಬೆಳೆಯುವಂತಹ ಬೆಳೆಗಳು ಹಾಗೂ ಇನ್ನಿತರೆ ಉತ್ಪನ್ನಗಳಾದ ಭತ್ತ, ರಾಗಿ, ಜೋಳ, ತಂಬಾಕು, ಎಣ್ಣೆ ಬೀಜಗಳು, ಹತ್ತಿ, ತುಪ್ಪ, ತೆಂಗಿನಕಾಯಿ, ಸಕ್ಕರೆ, ಉಪ್ಪು, ಬೆಲ್ಲ, ಮೆಣಸು ಮುಂತಾದವುಗಳು ಯುರೋಪಿನ ರಾಷ್ಟ್ರಗಳಿಗೆ ಪೂರ್ವ ಕರಾವಳಿಯ ಬಂದರುಗಳ ಮೂಲ ರಫ್ತಾಗುತ್ತಿದ್ದವು.[೩೫೬]

ಚಿತ್ರದುರ್ಗ ಪ್ರದೇಶಕ್ಕೆ ಬಹುವಾಗಿ ಜಲ ಸಾರಿಗೆ ವ್ಯವಸ್ಥೆಯನ್ನು ಕಲ್ಪಿಸುವ ಪ್ರದೇಶ ಹರಿಹರ. ಇಲ್ಲಿ ದೊರೆತ ಶಾಸನಗಳ ವಿವರದಂತೆ ತುಂಗಾಭದ್ರಾ ನದಿಯನ್ನು ವ್ಯಾಪಾರಿಗಳು ತೆಪ್ಪ, ದೋಣಿ ಹರಿಗೋಲುಗಳ ಮೂಲಕ ದಾಟುತ್ತಿದ್ದರು. ಈ ದೋಣಿ, ತೆಪ್ಪವನ್ನು ನಡೆಸುವವನಿಗೆ ಅಂಬಿಗಾ ಎಂದು ಕರೆಯುತ್ತಿದ್ದರು.

ಒಟ್ಟಾರೆಯಾಗಿ ನಾಯಕರ ಕಾಲದ ರಸ್ತೆ ಸಂಪರ್ಕವು ನಾಯಕರ ಪೂರ್ವ ಕಾಲದಿಂದಲೂ ಮುಂದುವರೆದುಕೊಂಡು ಬಂದ ರಸ್ತೆ ಹಾಗೂ ಜಲ ಮಾರ್ಗಗಳ ಮೂಲಕವೇ ಮುಂದುವರೆಯಿತು. ಆದರೆ ನಾಯಕರ ನಂತರ ಬ್ರಿಟಿಶ್ ಪ್ರಭುತ್ವ ಸ್ಥಾಪನೆಯಾದ ಮೇಲೆ ರೈಲ್ವೆ ಮಾರ್ಗಗಳು ರಚನೆಗೊಂಡು ವ್ಯಾಪಾರವು ಮತ್ತಷ್ಟು ಉತ್ತೇಜನಗೊಳ್ಳುವುದಕ್ಕೆ ಕಾರಣವಾಯಿತು. ಮುಖ್ಯವಾಗಿ ಚಿತ್ರದುರ್ಗ ಪ್ರದೇಶ ದಕ್ಷಿಣ ಭಾರತದ ಮಧ್ಯದಲ್ಲಿ ಇರುವ ಪ್ರದೇಶವಾಗಿದ್ದರಿಂದ ಉತ್ತರ–ದಕ್ಷಿಣ, ಪೂರ್ವ–ಪಶ್ಚಿಮಕ್ಕೆ ಹಾದುಹೋಗುವ ಎಲ್ಲ ರಸ್ತೆಗಳ ಸಂಪರ್ಕ ಇರುವುದರಿಂದಾಗಿ ಈ ಪ್ರದೇಶ ಪಟ್ಟಣ, ನಗರವಾಗಿ ಬೆಳೆಯಲು ಈ ಸಂಪರ್ಕ ವ್ಯವಸ್ಥೆಯೇ ಮೂಲ ಕಾರಣವಾಯಿತು.

**೬.೬. ಯುರೋಪಿನ ಕಂಪನಿಗಳೊಂದಿಗೆ ಸಂಬಂಧಗಳು**

ಪ್ರಾಚೀನ ಕಾಲದಿಂದಲೂ ಭಾರತದ ಬಂದರುಗಳು ಸಾಂಬಾರು ಪದಾರ್ಥಗಳು, ಮೆಣಸು, ಶುಂಠಿ ಇತ್ಯಾದಿ ವಸ್ತುಗಳಿಗೆ ಪ್ರಸಿದ್ಧವಾಗಿದ್ದವು. ಈ ವಸ್ತುಗಳನ್ನು ಯುರೋಪಿನ ಗ್ರೀಕ್ ಮತ್ತು ರೋಮನ್ ಸಾಮ್ರಾಜ್ಯಗಳಿಗೆ ರಫ್ತು ಮಾಡಲಾಗುತ್ತಿತ್ತು. ಮಧ್ಯಕಾಲದಲ್ಲಿ ಯುರೋಪ್, ಭಾರತ ಮತ್ತು

ದಕ್ಷಿಣಪೂರ್ವ ಏಷ್ಯಾದ ರಾಷ್ಟ್ರಗಳ ನಡುವಿನ ವ್ಯಾಪಾರ ವ್ಯವಹಾರಗಳು, ಪರ್ಶಿಯನ್ ಕೊಲ್ಲಿ, ಕೇಂಪು, ಸಮುದ್ರ ಮತ್ತು ಏಷ್ಯಾದ ನಾರ್ತ್‌ವೆಸ್ಟ್ ಫ್ರಾಂಟಿಯರ್‌ನ ಕಣಿವೆಗಳು ಹೀಗೆ ಬೇರೆ ಬೇರೆ ಮಾರ್ಗಗಳ ಮೂಲಕ ನಡೆಯುತ್ತಿದ್ದವು. ಏಷ್ಯಾದ ವ್ಯಾಪಾರವು ಅರಬ್ ವ್ಯಾಪಾರಿಗಳಿಂದ ನಡೆಯುತ್ತಿದ್ದರೆ, ಮೆಡಿಟೇರಿಯನ್ ಹಾಗೂ ಯೂರೋಪಿನ ವ್ಯಾಪಾರವು ಇಟಾಲಿಯನ್ನರ ಏಕಸ್ವಾಮ್ಯಕ್ಕೆ ಒಳಪಟ್ಟಿತ್ತು.

ಯುರೋಪಿನ ಜನರಿಂದ ಪೂರ್ವದೇಶಗಳ ಸಂಬಾರ್ ಪದಾರ್ಥಗಳಿಗೆ ಹೆಚ್ಚಿನ ಬೇಡಿಕೆ ಇದ್ದುದರಿಂದ ಕ್ರಿ.ಶ. ೧೫೦೦ರ ಹೊತ್ತಿಗೆ ಈ ವ್ಯಾಪಾರವು ಅತ್ಯಂತ ಲಾಭದಾಯಕವಾಗಿತ್ತು. ಇಟಲಿಯು ತನ್ನ ಸಂಪದ್ಭರಿತ ನಗರಗಳಾದ ವೆನಿಸ್, ಜಿನಿವಾ, ಮಿಲಾನ್, ಫ್ಲಾರೆನ್ಸ್ ಇತ್ಯಾದಿಗಳ ಮೂಲಕ ಭಾರತದ ಸಂಬಾರ ಪದಾರ್ಥಗಳನ್ನು ವಿತರಣೆ ಮಾಡುವ ಕೇಂದ್ರವಾಯಿತು. ಪಶ್ಚಿಮ ಯುರೋಪಿನ ದೇಶಗಳು ಇಟಲಿಯ ಏಕಸ್ವಾಮ್ಯಗಳನ್ನು ಇಲ್ಲವಾಗಿಸಿ ಅಟ್ಲಾಂಟಿಕ್ ಕರಾವಳಿಯ ಮೂಲಕ ಒಂದು ಪರ್ಯಾಯ ವ್ಯಾಪಾರ ಮಾರ್ಗವನ್ನು ಹುಡುಕುವ ಯತ್ನದಲ್ಲಿದ್ದವು.

ಕ್ರಿ.ಶ.೧೫ನೇ ಶತಮಾನದ ಉತ್ತರಾರ್ಧದಲ್ಲಿ ಬಲಿಷ್ಠವಾದ ಸಾಮ್ರಾಜ್ಯಗಳು ಕೇಂದ್ರಿಕೃತ ರಾಜ್ಯಗಳು ಉದಯವಾಗಿದ್ದರಿಂದ ಯುರೋಪಿನ ಆರ್ಥಿಕ ಏಕಸ್ವಾಮ್ಯಕ್ಕೆ ಧಕ್ಕೆ ಬಂದಿತು. ಸ್ಪೇನ್, ಪೋರ್ಚುಗಲ್ ದೇಶಗಳು ಹಾಗೂ ಇತರ ರಾಜ್ಯಗಳು ಹೊಸ ಭೂ ಪ್ರದೇಶಗಳನ್ನು ಆವಿಷ್ಕರಿಸುವ ನಾವಿಕರ ಸಾಹಸಕ್ಕೆ ಪ್ರೋತ್ಸಾಹ ನೀಡಿದವು. ಸಮುದ್ರಯಾನ ಕೈಗೊಂಡ ನಾವಿಕರು ಹೊಸ ವೈಜ್ಞಾನಿಕ ಬೆಳವಣಿಗೆಗಳಾದ ದಿಕ್ಸೂಚಿ, ಸಮುದ್ರ ಮಟ್ಟದಿಂದ ಎತ್ತರವನ್ನು ಕಂಡುಹಿಡಿಯುವ ಆ್ಯಸ್ಟ್ರೋಲೇಬ್, ಗನ್ ಪೌಡರ್, ಭೂಪಟ ಬರೆಯುವ ಕಲೆ ಇತ್ಯಾದಿಗಳ ಸಹಾಯವನ್ನು ಪಡೆದುಕೊಂಡರು ಇದರ ಜೊತೆಗೆ ಪೂರ್ವ ದೇಶಗಳ ಸಂಪತ್ತಿನ ಬಗ್ಗೆ ಮಾರ್ಕೋಪೋಲೋ ಮತ್ತು ಕಾಸ್ಮೋಸ್ ಎಂಬ ಈಜಿಪ್ಟಿನ ವ್ಯಾಪಾರಿ ಮುಂತಾದವರು ಹೇಳುತ್ತಿದ್ದ ಕತೆಗಳು, ಧರ್ಮ ಪ್ರಚಾರಕ್ಕಾಗಿ ಉತ್ಸಾಹಿತರಾಗಿದ್ದ ಮಿಶನರಿಗಳು ಇವುಗಳೂ ಸಹ ಸಮುದ್ರಯಾನಕ್ಕೆ ಸ್ಫೂರ್ತಿ ನೀಡಿದವು.[೩೫೭]

ಯುರೋಪಿನಲ್ಲಿ ಉಂಟಾದ ಕೈಗಾರಿಕಾ ಕ್ರಾಂತಿಯಿಂದಾಗಿ ಕೈಗಾರಿಕೆಗಳಿಗೆ ಕಚ್ಚಾವಸ್ತುಗಳು ಬೇಕಾಗಿದ್ದವು. ಹಾಗೂ ಯುರೋಪ್ ಮತ್ತು ಆಫ್ರಿಕಾದಂತಹ ರಾಷ್ಟ್ರಗಳಲ್ಲಿ ಇಸ್ಲಾಂ ಧರ್ಮದ ಆಡಳಿತ ವಲಯಗಳು ಹೆಚ್ಚಾಗಿ ಬೆಳೆದಿದ್ದರಿಂದ ಹಾಗೂ ಭೂ ಮಾರ್ಗಗಳು ಹೆಚ್ಚಾಗಿ ಮುಸ್ಲಿಮರ ಅಧೀನಕ್ಕೆ ಒಳಗಾಗಿದ್ದವು. ವ್ಯಾಪಾರಿಗಳಿಗೆ ಯುರೋಪ್ ರಾಷ್ಟ್ರಕ್ಕೆ ಸರಕುಗಳನ್ನು ಕೊಂಡ್ಯೊಯ್ಯುವಾಗ ಅಪಾರ ಪ್ರಮಾಣದ ತೆರಿಗೆ ಅವರ ಮೇಲೆ ಬೀಳುತ್ತಿತ್ತು. ಕ್ರಿಶ್ಚಿಯನ್ ವರ್ಸಸ್ ಇಸ್ಲಾಂ ಧರ್ಮದ ಸಂಘರ್ಷ ವಸಾಹತು ನೆಲೆಗಳ ಶೋಧನೆಯಲ್ಲಿ ಪೈಪೋಟಿಗೆ ಎಡೆಮಾಡಿ ನೀಡಿತು. ಈ ಹಿನ್ನೆಲೆಯಲ್ಲಿ ೧೫-೧೬ನೇ ಶತಮಾನದಲ್ಲಿ ಹೊಸ ಜಲ ಮಾರ್ಗಗಳ ಶೋಧ ಯುರೋಪಿನ ರಾಷ್ಟ್ರಗಳಿಗೆ ಅನಿವಾರ್ಯವಾಯಿತು.

ಇನ್ನೂ ಕೆಲವು ವಿದ್ವಾಂಸರ ಪ್ರಕಾರ ೧೪೫೩ರಲ್ಲಿ ಟರ್ಕಿಯ ರಾಜ ಎರಡನೆಯ ಮಹಮ್ಮದ್‌ನು ಕಾನ್‌ಸ್ಟಾಂಟಿನೋಪಲ್ ಅನ್ನು ವಶಪಡಿಸಿಕೊಂಡಿದ್ದರಿಂದ ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ರಾಷ್ಟ್ರಗಳ ಮಧ್ಯೆ ಇದ್ದ ಪ್ರಾಚೀನ ವ್ಯಾಪಾರ ಮಾರ್ಗವು ಇಲ್ಲದಂತಾಯಿತು. ಇದರಿಂದ ಯುರೋಪಿನ ವರ್ತಕರು ಪರ್ಯಾಯ ಮಾರ್ಗದ ಅನ್ವೇಷಣೆಯಲ್ಲಿದ್ದರು. ಆದರೆ ಈ ವಾದವನ್ನು ಬಹಳಷ್ಟು ವಿದ್ವಾಂಸರು ಒಪ್ಪುವುದಿಲ್ಲ ಎಂಬ ಅಭಿಪ್ರಾಯವಿದೆ.

ಯುರೋಪಿಯನ್ನರು ಭಾರತದೊಂದಿಗೆ ವ್ಯಾಪಾರವನ್ನು ಆರಂಭಿಸಿದ ಕಾಲದಿಂದಲೂ ಅವರ ದಾಖಲೆಗಳಲ್ಲಿ ವರ್ಷ, ತಿಂಗಳು, ದಿನಾಂಕವಾರು ಅಂಶಗಳು ಚಾರಿತ್ರಿಕ ದಾಖಲೆಗಳು ಹಸ್ತಪ್ರತಿಯ ಮಾದರಿಯಲ್ಲಿ ನಮಗೆ ಸಿಗುತ್ತವೆ. ಮುಖ್ಯವಾಗಿ ಕಾನ್‌ಸ್ಟಾಂಟಿನೋಪಲ್ ಭೂಮಿಯನ್ನು ಟರ್ಕರು ವಶಪಡಿಸಿಕೊಳ್ಳುವ ಪೂರ್ವದಲ್ಲಿಯು ಪೌರ್ವಾತ್ಯ ರಾಷ್ಟ್ರಗಳೊಂದಿಗೆ ವ್ಯಾಪಾರ ಸಂಪರ್ಕ ಭೂ ಮಾರ್ಗದೊಂದಿಗೆ ನಡೆಯುತ್ತಿತ್ತು ಎಂದು ಈ ಹಿಂದೆಯೇ ಹೇಳಲಾಗಿದೆ. ಆದರೆ ಈ ಅಂಶಗಳು ನಮಗೆ ದಾಖಲೆಯ ರೂಪದಲ್ಲಿ ಸಿಗುವುದು ಅವರು ಬಳಸಿದ ಕಾಗದ ಎಂಬ ಹೊಸ ದಾಖಲೆಯ ಮಾಧ್ಯಮವನ್ನು ಬಳಸಿದಾಗ. ಅದಕ್ಕೂ ಪೂರ್ವ ಇದ್ದ ಭಾರತ, ಕರ್ನಾಟಕ ಇನ್ನಿತರೆ ರಾಷ್ಟ್ರಗಳ ಸಂಪರ್ಕ ಸಿಗುವುದು ಶಾಸನಗಳಲ್ಲಿ. ಆದರೆ ಅಂಕಿಅಂಶಗಳಲ್ಲಿ ಸ್ಪಷ್ಟತೆ ಇಲ್ಲದಿರುವುದು ಶಿಲೆಯನ್ನು ಮಾಧ್ಯಮವಾಗಿ ಬಳಸಿ ನಂತರ ಕಾಗದದ ಮೇಲೆ ಬರವಣಿಗೆಯನ್ನು ಬರೆಯುವ ಕಾಲ ನಾಯಕರ ಕಾಲ ಆಗಿದ್ದರಿಂದ ಕೆಲವು ವ್ಯಾಪಾರಕ್ಕೆ ಮಾಡಿಕೊಂಡ ದಾಖಲೆಗಳು ಇಂದಿಗೂ ನಮಗೆ ದೊರಕುತ್ತಿಲ್ಲ. ಆದರೆ ಸಮಕಾಲೀನ ಯುರೋಪಿಯನ್ನರು ನಾಯಕರ ನೆರೆಯ ರಾಜ್ಯಗಳೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಕರಾರುಗಳ ಮೂಲಕ ನಾಯಕರ ಆರ್ಥಿಕ ಮತ್ತು ಚಾರಿತ್ರಿಕ ಇತಿಹಾಸವನ್ನು ಗಮನಿಸುವುದು ಅನಿವಾರ್ಯ. ವಿಜಯನಗರದೊಂದಿಗೆ ವ್ಯಾಪಾರ ಸಂಪರ್ಕವನ್ನು ಪೋರ್ಚುಗೀಸರು ಹೊಂದಿದ್ದರು ಹಾಗೆಯೇ ಬ್ರಿಟಿಶ್ ಪ್ರಾಬಲ್ಯ ಹೆಚ್ಚಾಗುವವರೆಗೂ ಪೋರ್ಚುಗಿಸರೊಂದಿಗೆ ನಾಯಕರು ಸಂಪರ್ಕ ಹೊಂದಿದ್ದರು ಎಂಬುವುದನ್ನು ಗಮನಿಸಬಹುದು.

*** ಪೋರ್ಚುಗೀಸ್**

ಪೋರ್ಚುಗೀಸರ ಆಗಮನವು ಇಂದಿನ ಕನ್ನಡ ಪ್ರದೇಶಗಳನ್ನು ಒಳಗೊಂಡಂತೆ ಇಡೀ, ದಕ್ಷಿಣ ಭಾರತದ ಐತಿಹಾಸಿಕ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಒಂದು ಮಹತ್ವದ ಅಧ್ಯಾಯ. ಪೋರ್ಚುಗೀಸರು ಮಲಬಾರ್ ತೀರದಲ್ಲಿ ನೆಲೆಯೂರಿದ ಬಳಿಕ ಕರ್ನಾಟಕ ಪ್ರದೇಶವನ್ನು ಒಳಗೊಂಡಂತೆ ಇಡೀ ದಕ್ಷಿಣ ಭಾರತದಾದ್ಯಂತ ತೀರ ವ್ಯಾಪಾರ, ಸಾಗರೋತ್ತರ ವ್ಯಾಪಾರ ಒಳನಾಡಿನ ವ್ಯಾಪಾರ ಕೇಂದ್ರಗಳ ಹಿಡಿತ ಮತ್ತು ನಮಗೆ ಬೇಕಾದ ಅಗತ್ಯ ವಸ್ತುಗಳ ಪೂರೈಕೆ ದೈನಂದಿನ ಬಳಕೆಯ ಅಗತ್ಯ ವಸ್ತುಗಳು ಉದಾಹರಣೆಗೆ: ಅಕ್ಕಿ, ಕರಿಮೆಣಸು ತಮ್ಮ ಕೋಟೆ ಕೊತ್ತಲಗಳ ನಿರ್ಮಾಣಕ್ಕೆ ಬೇಕಾಗುವ ಸರಕು ಸಲಕರಣೆ ಹಾಗೂ ಅಗತ್ಯ ಸೇವೆಗಳು, ಈ ಎಲ್ಲ ದೃಷ್ಟಿಯಿಂದ ಸ್ಥಳೀಯ ವ್ಯಾಪಾರಿ ಸಂಘಗಳು, ತೀರ ಪ್ರದೇಶದ ಆರ್ಥಿಕ ವಹಿವಾಟುಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದ, ಸ್ಥಳೀಯ ರಾಜ ಸಂಸ್ಥಾನಗಳು, ಕೇಂದ್ರ ರಾಜಕೀಯ ಶಕ್ತಿ ವಿಜಯನಗರ ಸಾಮ್ರಾಜ್ಯ ಹಾಗೂ ಆ ನಂತರ ಸ್ಥಳೀಯ ಮುಖ್ಯ ರಾಜಕೀಯ ಕೇಂದ್ರ ಬಿಂದು ಕೆಳದಿ, ಮೈಸೂರು, ಚಿತ್ರದುರ್ಗ ಮನೆತನ ಇವುಗಳೊಂದಿಗೆ ಮಾಡಿಕೊಂಡಿದ್ದ ಸೂಕ್ಷ್ಮ ಒಪ್ಪಂದಗಳು ಹಾಗೂ ಸಂಬಂಧವನ್ನು ಹೊಂದಿತ್ತು. ಅಂತೆಯೇ ಇವುಗಳೊಟ್ಟಿಗಿನ ಸಂಬಂಧಗಳನ್ನು ಪೋರ್ಚುಗೀಸರು ಅತಿ ಜಾಗರೂಕತೆಯಿಂದ ನಿರ್ವಹಿಸಬೇಕಿತ್ತು. ಒಟ್ಟಾರೆಯಾಗಿ ವಿಜಯನಗರೋತ್ತರ ಸುಮಾರು ೩೦೦ ವರ್ಷಗಳಲ್ಲಿ ರಾಜಕೀಯ, ಆರ್ಥಿಕ ಹಾಗೂ ಸಾಂಸ್ಕೃತಿಕ ವಲಯದಲ್ಲಿ ಪೋರ್ಚುಗೀಸರು ಬೀರಿದ ಪ್ರಭಾವಗಳನ್ನು ಸ್ಮರಿಸಬಹುದು.

ಪೋರ್ಚುಗೀಸರ ಆಳ್ವಿಕೆಯ ಆರಂಭದ ಅವಧಿ ಅಂದರೆ ಕ್ರಿ.ಶ.೧೬ನೇ ಶತಮಾನವು ಹಲವು ಸಂಚಲನಗಳಿಂದ ಕೂಡಿದ ಹಾಗೂ ಒಂದು ಐತಿಹಾಸಿಕ ತಿರುವನ್ನು ಪಡೆದುಕೊಳ್ಳುತ್ತಿರುವ ಕಾಲ.

ಈ ಸಂದರ್ಭದ ರಾಜಕೀಯ ಭೂಪಟವನ್ನು ನೋಡುವುದಾದರೆ, ಒಂದು ಕಡೆ ವಿಜಯನಗರ ಸಾಮ್ರಾಜ್ಯದ ಸಾಮಂತ ಮನೆತನಗಳಾಗಿ ಉಲ್ಲಾಳ, ಬಂಗವಾಡಿ (ಬಂಗಾಡಿ), ಗೇರುಸೊಪ್ಪ, ಕಳಸ–ಕಾರ್ಕಳ ರಾಜ್ಯ, ಬಾರಕೂರು ರಾಜ್ಯಗಳು, ಭಟ್ಕಳ, ಬಸ್ರೂರು, ಬಾಂಗ್ಯೆರ್ಗಳು ತೀರ ಮತ್ತು ಸಾಗರೋತ್ತರ ವ್ಯಾಪಾರ ವಹಿವಾಟಿನಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಪ್ರಬಲ ಸಂಸ್ಥಾನಗಳಾಗಿ ಬೆಳೆದಿದ್ದರೆ, ಮತ್ತೊಂದೆಡೆ ವಿಜಯನಗರ ಸಾಮ್ರಾಜ್ಯವು ಇಡೀ ದಕ್ಷಿಣ ಭಾರತದ್ಯಾಂತ ಹರಡಿದ್ದು ತಮ್ಮ ವಿಸ್ತಾರ ಸಾಮ್ರಾಜ್ಯವನ್ನು ನಿರ್ವಹಿಸಲು ರಾಜಕೀಯವಾಗಿ ಇದ್ದ ಪಾಳೆಯಗಾರ ವ್ಯವಸ್ಥೆ ಈ ಹೊತ್ತಿಗೆ ಸ್ವಾತಂತ್ರ್ಯದತ್ತ ಮುಖಮಾಡಿತ್ತು.[೩೫೮]

ಚಿತ್ರದುರ್ಗ ನಾಯಕರಿಗಿಂತ ಕೆಳದಿ ಸಂಸ್ಥಾನ ಪೋರ್ಚುಗಿಸರೊಂದಿಗೆ ಹೆಚ್ಚಿನ ವ್ಯಾಪಾರ–ಸಂಪರ್ಕ ಹೊಂದಿದ್ದ ಸಂಸ್ಥಾನವಾಗಿದ್ದು, ಚಿತ್ರದುರ್ಗ ಕುರಿತಾದ ದಾಖಲೆಗಳು ಇದ್ದರು ಚಿತ್ರದುರ್ಗವನ್ನು ಪೋರ್ಚುಗೀಸರು ಕರೆದಿರುವ ಹೆಸರು ತಿಳಿಯುವಲ್ಲಿ ಸ್ಪಷ್ಟತೆ ಇಲ್ಲ. ಆದರೆ 'ಚಿಂತನ್‌ದುರ್ಗ'[೩೫೯] ಎಂದು ಈ ಪೋರ್ಚುಗೀಸ್ ದಾಖಲೆಗಳಲ್ಲಿ ಉಲ್ಲೇಖಗೊಂಡಿದೆ. ಇದು ಕುಡಲೂರು ಪ್ರದೇಶದಲ್ಲಿ ಬರುವ ಮತ್ತೊಂದು ಸ್ಥಳದ ಉಲ್ಲೇಖ ಇದೇ ರೀತಿಯಾಗಿ ಕಂಡು ಬರುವುದರಿಂದ ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ.

ಕೆಳದಿಯು ಕರಾವಳಿಯ ಭಟ್ಕಳ, ಮಂಗಳೂರು, ಬಸ್ರೂರು ಬಂದರುಗಳನ್ನು ಹೊಂದಿದ್ದ ಸಂಸ್ಥಾನವಾಗಿದ್ದು, ಇದು ಪೋರ್ಚುಗೀಸರ ದಾಖಲೆಗಳಲ್ಲಿ ಪೂರ್ಣ ಪ್ರಮಾಣದಲ್ಲಿ ಉಲ್ಲೇಖಗೊಂಡಿದೆ. ಆರಂಭದಿಂದಲೂ ಪೋರ್ಚುಗೀಸರೊಂದಿಗೆ ಕೆಳದಿ ತಮ್ಮ ವ್ಯಾಪಾರ ವಹಿವಾಟುಗಳನ್ನು ಮುಂದುವರೆಸಿಕೊಂಡು ಬಂದಿದೆ. ಶಿವಪ್ಪನಾಯಕ ಅಧಿಕಾರಕ್ಕೆ ಬಂದ ನಂತರ ಪೋರ್ಚುಗೀಸರು ಹಾಗೂ ಕೆಳದಿ ವ್ಯಾಪಾರ ವಾಣಿಜ್ಯಕ್ಕೆ ಸಂಬಂಧಿಸಿದ ಹೊಸ ಅಧ್ಯಯನ ಆರಂಭವಾಗುತ್ತದೆ. ಶಿವಪ್ಪನಾಯಕನು ಅಧಿಕಾರಕ್ಕೆ ಬಂದ ನಂತರ ಕರಾವಳಿಯಲ್ಲಿದ್ದ ಎಲ್ಲ ಪೋರ್ಚುಗೀಸರ ಬಂದರುಗಳನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು.[೩೬೦] ಅವನು ಕರಾವಳಿಯ ಬಂದರುಗಳನ್ನು ಪೋರ್ಚುಗೀಸರ ವಾಣಿಜ್ಯ ವ್ಯವಹಾರಕ್ಕೆ ಉಪಯೋಗಿಸಲು ಅವಕಾಶ ನೀಡಲಿಲ್ಲ. ಶಿವಪ್ಪ ನಾಯಕನು ಒಬ್ಬ ಶ್ರೇಷ್ಠ ಆಡಳಿತಗಾರನಾಗಿದ್ದನು. ಅವನು ನೆರೆಯ ರಾಜರನ್ನೆಲ್ಲಾ ಯುದ್ಧ ಮಾಡಿ ಸೋಲಿಸಿದ್ದನು.[೩೬೧] ಆದರೂ ಶಿವಪ್ಪನಾಯಕನು ಪೋರ್ಚುಗೀಸರ ಬಗೆಗೆ ತಳೆದ ವಿರೋಧಿ ಭಾವನೆ ಅದರಲ್ಲೇ ಕೊನೆಗೊಳ್ಳಲಿಲ್ಲ. ಕರಾವಳಿಯಲ್ಲಿ ಪೋರ್ಚುಗೀಸರಿಗೆ ರಾಜಕೀಯವಾಗಿ ಆರ್ಥಿಕವಾಗಿ ಪ್ರಬಲರಾಗಲು ಬಿಡಲಿಲ್ಲ. ಕ್ರಿ.ಶ.೧೬೫೮ರಲ್ಲಿ ಅವನು ಪೋರ್ಚುಗೀಸರ ಸ್ನೇಹ ಬೆಳೆಸಿಕೊಳ್ಳಲು ಬಯಸಿದನೆಂದು ಪೋರ್ಚುಗೀಸರ ವೈಸರಾಯ್ ಲಿಂಸ್ಬನ್‌ಗೆ ಬರೆದ ಪತ್ರದಿಂದ ತಿಳಿಯುತ್ತದೆ.[೩೬೨] ಶಿವಪ್ಪನಾಯಕನು ತನ್ನ ಆಳ್ವಿಕೆಯ ಅವಧಿಯಲ್ಲಿ ಪೋರ್ಚುಗೀಸರ ರಾಜಕೀಯ ಹಾಗೂ ಆರ್ಥಿಕ ವ್ಯವಸ್ಥೆಯಲ್ಲಿ ಮಹತ್ವದ ಪಾತ್ರವಹಿಸಿದನು.[೩೬೩] ಗೋವೆಯ ವೈಸ್‌ರಾಯ್ ಪತ್ರದಲ್ಲಿ ಪೋರ್ಚುಗೀಸರಿಗೆ ಕುಂದಾಪುರ ಮತ್ತು ಮಂಗಳೂರುಗಳಲ್ಲಿ ವ್ಯಾಪಾರ ಕೇಂದ್ರ ಸ್ಥಾಪಿಸಲು ಅನುಮತಿ ನೀಡಿದ್ದನು ಎಂದು ತಿಳಿಸಲಾಗಿದೆ. ಅವನು ಪೋರ್ಚುಗೀಸರ ಎಲ್ಲ ಹಡಗುಗಳನ್ನು ತನ್ನ ಎಲ್ಲ ಬಂದರುಗಳಿಗೆ ಬರುವುದಕ್ಕೆ ಅವಕಾಶ ನೀಡಲು ಒಪ್ಪಿದನು ಹಾಗೂ ಕೆಳದಿಯಲ್ಲಿನ ಕ್ರೈಸ್ತರಿಗೆ ಸಂಪೂರ್ಣ ರಕ್ಷಣೆ ನೀಡುವುದಾಗಿ ಒಪ್ಪಿದನು.

ಶಿವಪ್ಪನಾಯಕನು ದಿನನಿತ್ಯದ ಆಹಾರ ವಸ್ತುಗಳನ್ನು ಪೋರ್ಚುಗೀಸರಿಗೆ ಪೂರೈಸಿದನು. ಕ್ರಿ.ಶ.೧೬೫೪ರಲ್ಲಿ ೧೦೦೦ ಖಂಡಿ ಮೆಣಸು ಒದಗಿಸಿ, ಪ್ರತಿ ವರ್ಷವೂ ೫೦೦ ಖಂಡಿಗಳು ಒದಗಿಸುವುದಾಗಿ ಭರವಸೆ ನೀಡಿದನು. ಪೋರ್ಚುಗೀಸರಿಗೆ ಶಿವಪ್ಪನಾಯಕನ ಸಂಬಂಧ ಕಳೆದುಕೊಳ್ಳಲು ಧೈರ್ಯವಿರಲಿಲ್ಲ. ವೀರಭದ್ರನಾಯಕನ ಕಾಲದಲ್ಲಿ ಎರಡನೇ ಒಪ್ಪಂದವಾದ ನಂತರ ಅಧಿಕಾರಕ್ಕೆ ಬಂದ ಶಿವಪ್ಪನಾಯಕನು ಕರ್ನಾಟಕದ ಕರಾವಳಿಯ ಮೇಲೆ ತನ್ನ ಒಡೆತನ ಸ್ಥಾಪಿಸಲು ಸ್ವತಂತ್ರ ನೀತಿ ಅನುಸರಿಸಿದನು. ಈ ರೀತಿಯ ರಾಜ್ಯದ ಹಿತಾಸಕ್ತಿ ಹೆಚ್ಚಿಸಲು ಪ್ರಯತ್ನಿಸಿದನು. ಪೋರ್ಚುಗೀಸ್ ಹಾಗೂ ಡಚ್ಚರಿಗೂ ಇದ್ದ ವೈಷಮ್ಯದಿಂದಾಗಿ ಶಿವಪ್ಪನಾಯಕನಿಗೆ ಸ್ವತಂತ್ರ ನೀತಿ ಹೊಂದಲು ಅನುಕೂಲವಾಯಿತು.

ಎರಡನೇ ವೆಂಕಟಪ್ಪ ನಾಯಕನು ಪೋರ್ಚುಗೀಸರೊಂದಿಗೆ ಉತ್ತಮ ಬಾಂಧವ್ಯ ಮುಂದುವರೆಸಿಕೊಂಡು ಹೋಗಲು ನಿರ್ಧರಿಸಿದನು. ಆದರೆ ಪೋರ್ಚುಗೀಸ್ ದಾಖಲೆಗಳಲ್ಲಿ ಇವನ ಸ್ನೇಹವನ್ನು ಪೋರ್ಚುಗೀಸರು ದುರುಪಯೋಗಪಡಿಸಿಕೊಂಡರೆಂದು ತಿಳಿದುಬರುತ್ತದೆ. ಕ್ರಿ.ಶ.೧೬೬೦ರ ಡಿಸೆಂಬರ್‌ನಲ್ಲಿ ಪೋರ್ಚುಗೀಸರು ವೆಂಕಟಪ್ಪನಾಯಕನ ಹಡಗು, ಸರಕುಗಳು ಹಾಗೂ ಕೆಲಸಗಾರರನ್ನು ವಶಪಡಿಸಿಕೊಂಡರು. ಇದಕ್ಕೆ ಪ್ರತಿಯಾಗಿ ಕೊಚ್ಚಿಯಿಂದ ಗೋವಾಕ್ಕೆ ಪ್ರಯಾಣಿಸುತ್ತಿದ್ದ ಪಾದ್ರಿಯನ್ನು ವೆಂಕಟಪ್ಪನಾಯಕನು ಹಿಡಿದು ಸೆರೆಯಲ್ಲಿಟ್ಟನು. ಅನಿವಾರ್ಯವಾಗಿ ಪೋರ್ಚುಗೀಸರು ಸಂಧಾನ ಮಾಡಿಕೊಳ್ಳಬೇಕಾಯಿತು. ಈ ರೀತಿ ಪೋರ್ಚುಗೀಸರು ಅವಿವೇಕದಿಂದ ವರ್ತಿಸಿದ ಕಾರಣವಾಗಿ ಎರಡನೇ ವೆಂಕಟಪ್ಪನಾಯಕನು ಡಚ್ಚರೊಂದಿಗೆ ಸ್ನೇಹ ಬೆಳಸಿಕೊಳ್ಳಲು ಆಸಕ್ತಿ ತೋರಿಸಿದನು.[೩೬೪]

ಕಂ॥ ಹರಪುರದರಸನುಮಂ ಭಾ
ಸುರತರ ಸವಣೂರ ಪತಿ ನವಾಬನ ಫೌಜಂ
ಬರಿಸಿ ಬಹು ನೈನ್ಯಸಹಿತಂ
ತೆರಳಿಸಿ ವರ ಸಬ್ಬುನೀಸ ಕೃಷ್ಣಪ್ಪನುಮಂ ೨೭

ಮ॥ ಪದುಳಿಸಿ ಮಾಯಾಕೊಂಡದೊಡೆಯೊಳ್ ಬಹು
ಸೈನ್ಯ ಸಮೇತನಾಗುತು
ನ್ಮದದಿನಿದಿರ್ಬೆ ಮಾರ್ಮಲೆತು... ವೊಳಪೊ
ಕ್ಕು ಪೋರ್ದ. ದಾ
ಮೆದೆಕೆರೆ ನಾಯಕಾಖ್ಯನ್ನಪನಂ ರಣದೊಳ್
ವಶಗೆಯ್ದು ಶಿಕ್ಷೆಗೆ
ಯ್ದಿದನಮರಾಳಿ ಮೆಚ್ಚುಲದಟಂ ಬಸವೆ
ೞಂದ್ರ ಭೂಮಿಪಂ ॥ ೨೮

ವ॥ ಇಂತು ಮೆದೆಕೆರೆ ನಾಯಕನಂ ಜಯಿಸಿದ ಮಹೋತ್ಸವ ಕಾಲದೊಳಂ ನಿಜಸೈನ್ಯ ಸಮೇತನಾಗುತ್ತು ಮೆಳ್ತಂದು ಸಂದರ್ಶನಂಗೆಯ್ದು.

ಹರಪುರದಸನಂ ಸನ್ಮಾನಿಸಿ ಗಜಾಶ್ವವಸ್ತ್ರಾ ಭರಣಾಧಿಗಳನಿತ್ತು ಬಹಳ ಸಂತೋಷಂಬಡಿಸಿ ಕಳುವೆ ರಾಜ್ಯಂಗೆಯ್ಯುತ್ತು ಮಿರಲೊಂದವಸರದೊಳ್

ಕಂ॥ ಮೆದೆಕೆರೆ ನಾಯಕನ ಸುತಂ
ಮದಮುಖಿ ಕಸ್ತೂರಿರಂಗ ನಾಯಕ ನೈತಂ
ದಿದಿರ್ಚಿಸಿ ಸಂತೆಯಬೆನ್ನೂ
ರದುಭುತಮಾಗಿರ್ಪ ಕೋಂಟೆಯಂ
ವೇಢೈಸಲ್ - ೨೯
ಕದನದೆ ಬಹಿರಾಯ ತಮೋ
ಹಿದಖಾನ ವಜೀರನದಟನುರೆ ಮುರಿದೊಡನಾ
ಮೆದೆಕೆರೆ ನಾಯಕನ ಸುತನಂ
ಸದೆದೋಡಿಸಿ ಜಯವನಾಂತನಾ ಬಸವನ್ನಪಂ ೩೦[೩೬]

ಮಧ್ಯ ಕರ್ನಾಟಕದಲ್ಲಿ ಆಡಳಿತ ಕೇಂದ್ರವಾಗಿ ಗುರುತಿಸಿಕೊಂಡಿರುವ ಚಿತ್ರದುರ್ಗದ ನಾಯಕರಿಗೂ ಈ ಒಪ್ಪಂದದ ಕೆಲವು ಅಂಶಗಳು ಅನ್ವಯವಾಗುತ್ತವೆ. ೩೦.೦೦೦ ಸೈನ್ಯ ಇದ್ದು, ೪.೦೦೦ ಅಶ್ವಪಡೆ ಇದ್ದ ಅಂಶ ಕೆಲವು ದಾಖಲೆಗಳಲ್ಲಿ ತಿಳಿದು ಬರುತ್ತದೆ. (ದೇಶಪಾಂಡೆ ಹೆಚ್.ಟಿ., ಪೂರ್ವೋಕ್ತ, ಪುಟ–೧೧೨) ಇಷ್ಟೊಂದು ಕುದುರೆಯನ್ನು ಅರಬ್ ರಾಷ್ಟ್ರಗಳಿಂದ ಆಮದು ಮಾಡಿಕೊಳ್ಳುತ್ತಿದ್ದರು. ಇದು ಅಂದಿನ ಕಾಲದ ಬಹು ದೊಡ್ಡ ವ್ಯಾಪಾರದ ವಸ್ತು ಆಗಿದ್ದು ಗಮನಿಸಬಹುದು. ಪೋರ್ಚುಗೀಸರು ವ್ಯಾಪಾರದಲ್ಲಿ ಅರಬ್ಬರಿಗೆ ಪೈಪೋಟಿಯನ್ನು ನೀಡುವುದರ ಸಲುವಾಗಿ ಕೆಳದಿಯ ನಾಯಕರು ಮಾಡಿಕೊಂಡಿರುವ ಕೆಲವು ಒಪ್ಪಂದಗಳಿಂದ ತಿಳಿಯಬಹುದು. ಪ್ರಸ್ತುತ ಪ್ರಬಂಧದಲ್ಲಿ ಗುರುತಿಸಿರುವಂತೆ ಕೆಳದಿ ಮೂಲಕ ಮಂಗಳೂರು, ಭಟ್ಕಳ, ಹೊನ್ನಾವರ, ಗೋವಾದ ಕರಾವಳಿ ಬಂದರುಗಳಿಗೂ ಹಾಗೂ ಚಿತ್ರದುರ್ಗಕ್ಕೆ ಇದ್ದ ಪ್ರಾಚೀನ ರಸ್ತೆ ಸಾರಿಗೆಯನ್ನು ಗುರುತಿಸಲಾಗಿದೆ. ಪೋರ್ಚುಗೀಸರಿಂದ ಪರಿಚಯವಾದ ಶೇಂಗಾ, ಪಪ್ಪಾಯಿ, ಅಲೂಗಡ್ಡೆ, ತಂಬಾಕು, ಇವು ಚಿತ್ರದುರ್ಗ ಪ್ರದೇಶದ ಪ್ರಮುಖ ವಾಣಿಜ್ಯ ಬೆಳೆಗಳಾಗಿ ನಾಯಕರ ಕಾಲದಲ್ಲಿ ಗುರುತಿಸಿಕೊಂಡಿವೆ. ಪೋರ್ಚುಗೀಸರ ಬ್ರಿಟಿಶರಿಗೂ ಪೂರ್ವದಲ್ಲಿ ಕೆಲವು ಬೆಳೆಗಳನ್ನು ಪರಿಚಯಿಸುವುದರಿಂದ ಕೃಷಿಯ ವಾಣಿಜ್ಯೀಕರಣಕ್ಕೆ ಪೂರಕವಾದ ಕೆಲವು ಸಂಗತಿಗಳನ್ನು ತಿಳಿಯಬಹುದು. ಪೋರ್ಚುಗೀಸರೊಂದಿಗೆ ಸಂಬಂಧ ಹೊಂದಿದ್ದರ ಬಗ್ಗೆ ಯಾವುದೇ ದಾಖಲೆಗಳು ಲಭ್ಯವಿಲ್ಲ. ಆದರೆ ಬುಕಾನನ್ ತಿಳಿಸಿರುವ ವ್ಯಾಪಾರಿ ಮಾರ್ಗಗಳು ಪೋರ್ಚುಗೀಸರ ಆಡಳಿತ ಕೇಂದ್ರಗಳಿಗೆ ಸಂಪರ್ಕ ಹೊಂದಿದ್ದವು ಎಂಬ ಅಂಶದಿಂದ ಖಚಿತ ಪಡಿಸಬಹುದಾಗಿದೆ. ಒಟ್ಟಾರೆಯಾಗಿ ೧೬ನೇ ಶತಮಾನದಲ್ಲಿ ಕಂಡುಬರುವ ಪ್ರಮುಖ ವ್ಯಾಪಾರದ ಬೆಳವಣಿಗೆಯಲ್ಲಿ ಪೋರ್ಚುಗೀಸರು ಹಾಗೂ ಸ್ಥಳೀಯ ಸಂಸ್ಥಾನಗಳ ಪಾತ್ರ ಮಹತ್ವದ್ದಾಗಿತ್ತು.

ಕೆಳದಿ ಅರಸರು ಹಾಗೂ ಚಿತ್ರದುರ್ಗದ ನಾಯಕರ ಸಂಬಂಧವೂ ಉತ್ತಮವಾಗಿದ್ದು, ಧಾರ್ಮಿಕ ವಿಷಯಗಳಿಗೆ ಹೆಚ್ಚಿನ ಸಂಬಂಧ ಹೊಂದಿದ್ದರು. ಹಾಗೆಯೇ ನಗರಗಳಾಗಿ ಬೆಳೆದಿದ್ದ ರಾಜಧಾನಿಗಳೊಂದಿಗೆ ಸಂಪರ್ಕ ಹೊಂದಿದ್ದವು. ಪೋರ್ಚುಗೀಸರ ಆಡಳಿತ ಕೇಂದ್ರಗಳೊಂದಿಗೆ ನೇರ ಸಂಪರ್ಕವಿತ್ತು. ಉದಾ: ಪುಲಿಕಾಟ್ ತಿರುಪತಿ, ಪೆನ್ನುಗೊಂಡ, ವಿಜಯನಗರ, ಚಿತ್ರದುರ್ಗ, ಶ್ರೀರಂಗಪಟ್ಟಣ, ಮೈಸೂರು, ಮಂಗಳೂರು, ಮತ್ತು ಅಲ್ಲಿಂದ ಕಣ್ಣಾನೂರಿಗೆ ಸಂಪರ್ಕ ಹೊಂದಿದ್ದು, ದಕ್ಷಿಣ ಭಾರತದ ವ್ಯಾಪಾರ ಸಂಪರ್ಕ ಪಡೆದ ನರಮಂಡಲ ವ್ಯವಸ್ಥೆಯಂತೆ ಅಭಿವೃದ್ಧಿ ಹೊಂದಿತ್ತು. ಉತ್ತರದಲ್ಲಿ ಬೀದರ್ ಪಟ್ಟಣ

ಗೋವಾ ಹಾಗೂ ಅಲ್ಲಿಂದ ಮುಂದೆ ಭಟ್ಕಳ ಸಂಪರ್ಕಕ್ಕೆ ಹೊಂದಿದೆ. ಹಾಗೆಯೇ ಬೆಜವಾಡ ಮಕ್ಕಾಪೇಟೆ, ವಿಜಾಪುರ ಮತ್ತು ಅಲ್ಲಿಂದ ಗೋವಾದೊಟ್ಟಿಗೆ ವ್ಯಾಪಾರ ಸಂಪರ್ಕ ಕಲ್ಪಿಸಿಕೊಂಡಿತ್ತು. ಹೀಗೆ ಕ್ರಿ.ಶ.೧೬ನೇ ಶತಮಾನದಲ್ಲಿ ಕಂಡುಬಂದ ಪ್ರಮುಖ ಬೆಳವಣಿಗೆಗಳಲ್ಲಿ ಕನ್ನಡ ಪ್ರದೇಶದ ಒಳನಾಡಿನ ಪೇಟೆ ಪಟ್ಟಣಗಳು ದಕ್ಷಿಣ ಭಾರತದ ಇತರ ಪ್ರಮುಖ ಪೇಟೆ ಪಟ್ಟಣಗಳೊಂದಿಗೆ ಸಂಪರ್ಕ ಸಾಧಿಸಿದಂತೆಯೇ ದೂರದ ಕೆನರಾ ಕರಾವಳಿ ತೀರದ ಪ್ರಮುಖ ರೇವು ಪ್ರದೇಶಗಳೊಂದಿಗೆ ಸಂಪರ್ಕಕ್ಕೆ ಒಂದು ಒಳನಾಡಿನ, ತೀರಭಾಗದ ಹಾಗೂ ಸಾಗರೋತ್ತರ ವ್ಯಾಪಾರ ವಹಿವಾಟಿನಲ್ಲಿ ನಾಯಕರು ಹಾಗೂ ಪೋರ್ಚುಗೀಸರು ಸಕ್ರಿಯವಾಗಿ ಸಂಪರ್ಕ ಸಾಧಿಸಿಕೊಂಡಿದ್ದವು. ಇದು ಇಲ್ಲಿನ ಒಟ್ಟಾರೆ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಬೆಳವಣಿಗೆಯ ಮೇಲೆ ಸಾಕಷ್ಟು ಪ್ರಭಾವ ಬೀರಿತ್ತು.

ಒಟ್ಟಾರೆಯಾಗಿ ಪೋರ್ಚುಗೀಸರು ಚಿತ್ರದುರ್ಗ ನಾಯಕರೊಂದಿಗೆ ಹೊಂದಿದ್ದ ಸಂಬಂಧಗಳ ಬಗ್ಗೆ ಹೆಚ್ಚಿನ ಮಾಹಿತಿ ಅಥವಾ ಆಧಾರಗಳು ಕಂಡು ಬರುವುದಿಲ್ಲ. ಕೆಳದಿ ನಾಯಕರು ಪೋರ್ಚುಗೀಸರೊಂದಿಗೆ ಮಾಡಿಕೊಂಡಿದ್ದ ಒಪ್ಪಂದಗಳಲ್ಲಿ ಅರಬ್ ರಾಷ್ಟ್ರಗಳೊಂದಿಗೆ ವ್ಯಾಪಾರದ ಸಂಬಂಧಗಳನ್ನು ಕೆಳದಿ ನಾಯಕರು ಹೊಂದುವಂತಿಲ್ಲ ಎಂಬ ಅಂಶಗಳು ನಮಗೆ ತಿಳಿದುಬರುತ್ತವೆ. ಮುಖ್ಯವಾಗಿ ಚಿತ್ರದುರ್ಗ ನಾಯಕರ ರಾಜ್ಯದಲ್ಲಿ ೪,೦೦೦ ಅಶ್ವಪಡೆ ಇತ್ತು ಎಂದು ಹೆಚ್.ಟಿ. ದೇಶಪಾಂಡೆಯವರು ಉಲ್ಲೇಖಿಸಿದ್ದಾರೆ. ಅಂದಿನ ಕಾಲದಲ್ಲಿ ಪೋರ್ಚುಗೀಸರು ಮತ್ತು ಅರಬ್ಬರು ವಿಜಯನಗರಕ್ಕೆ ಕುದುರೆಗಳನ್ನು ಸರಬರಾಜು ಮಾಡುವ ಪ್ರಮುಖ ವರ್ತಕರಾಗಿದ್ದರು. ಅದು ನಾಯಕರ ಕಾಲಕ್ಕೆ ನಿಂತಿರಲಿಲ್ಲ. ಅದು ನಿರಂತರವಾಗಿ ಉತ್ತಮ ದರ್ಜೆಯ ಕುದುರೆಗಳನ್ನು ತಂದು ಕರಾವಳಿ ಹಾಗೂ ಮಧ್ಯ ಭಾರತದ ಪಾಳೆಯಗಾರರಿಗೆ ತಲುಪಿಸುವ ವ್ಯಾಪಾರದ ಚಟುವಟಿಕೆಗಳು ನಡೆಯುತ್ತಿದ್ದವು. ಹಾಗೂ ನಾಯಕರ ಕಾಲದಲ್ಲಿ ಪೋರ್ಚುಗೀಸರು ಪರಿಚಯಿಸಿದ ಶೇಂಗಾ, ತಂಬಾಕು, ಪಪ್ಪಾಯಿ, ಹೊಸ ತಳಿಗಳ ಭತ್ತ, ಆಲಲೂಗಡ್ಡೆ, ಮುಸುಕಿನ ಜೋಳ ಮುಂತಾದ ಬೆಳೆಗಳನ್ನು ಪರಿಚಯಿಸಿದ್ದರಿಂದ ನಾಯಕರ ಮತ್ತು ನಾಯಕರ ನಂತರ ದುರ್ಗ ಪ್ರದೇಶದಲ್ಲಿ ಗುರುತಿಸಿಕೊಂಡಿರುವ ಪ್ರಮುಖ ಆರ್ಥಿಕ ಬೆಳೆಗಳಾಗಿದೆ. ಇದರ ಮೂಲಕ ಪೋರ್ಚುಗೀಸರಿಗೂ ಹಾಗೂ ಅವರು ಪರಿಚಯಿಸಿದ ಬೆಳೆಗಳಿಂದ ಪರಸ್ಪರ ಸಂಬಂಧಗಳನ್ನು ಕಲ್ಪಿಸಬಹುದು.

**ಡಚ್ಚರು**

ಯೂರೋಪಿನ ಮತ್ತೊಂದು ಪ್ರಮುಖ ಕಂಪನಿಯೆಂದರೆ ಡಚ್ಚ್ ಈಸ್ಟ್ ಇಂಡಿಯಾ ಕಂಪನಿ. ತಮ್ಮ ವ್ಯಾಪಾರವನ್ನು ಅಭಿವೃದ್ಧಿಗೊಳಿಸುವ ಸಲುವಾಗಿ ೧೬೦೨ರಲ್ಲಿ ಡಚ್ಚರು ಡಚ್ ಈಸ್ಟ್ ಇಂಡಿಯಾ ಕಂಪನಿಯನ್ನು ಸ್ಥಾಪಿಸಿದರು. ಅವರು ತಮ್ಮ ಮೊದಲ ಕಾರ್ಖಾನೆಗಳನ್ನು ಕ್ರಿ.ಶ.೧೬೦೬ರಲ್ಲಿ ಮಚಲಿಪಟ್ಟಣಂ ಹಾಗೂ ಉತ್ತರ ಕೋರಮಂಡಲ್‌ನ ಪೇಟಪುಲಿಯಲ್ಲಿ ಸ್ಥಾಪಿಸಿದರು. ಆಗ ಡಚ್ಚರ ಮುಖ್ಯ ಗುರಿ ಭಾರತವಾಗಿರದೆ, ಹೆಚ್ಚು ಸಾಂಬಾರ ಪದಾರ್ಥಗಳು ದೊರೆಯುತ್ತಿದ್ದ ಇಂಡೋನೇಷ್ಯಾದ ದ್ವೀಪಗಳಾದ ಜಾವಾ, ಸುಮಾತ್ರಗಳಾಗಿದ್ದವು. ಆದರೆ ಕ್ರಮೇಣ ಭಾರತದ ಬಟ್ಟೆಗಳ ಗುಣಮಟ್ಟ ಇಂಡೋನೇಷ್ಯಾಕ್ಕಿಂತ ಒಳ್ಳೆಯದು ಎಂದು ಅರಿವಾದಾಗ ಪುಲಿಕಾಟ್, ಕ್ಯಾಂಬೆ, ಸೂರತ್, ಆಗ್ರಾ, ಹರಿಹರಪುರ, ಪಾಟ್ನಾ, ಉದಯ್‌ಗಂಜ್, ಚಿನ್ಸುರಾ, ಖಾಸಿಂಬಜಾರ್, ಬರಂಗೋರೆ, ಬಾಲಸೋರ್ ಮತ್ತು ನಾಗಪಟ್ಟಣಂಗಳಲ್ಲಿ

ಕಾರ್ಖಾನೆಗಳನ್ನು ಆರಂಭಿಸಿದರು. ೧೬೫೮ರಲ್ಲಿ ಸಿಲೋನ್ ಅನ್ನೂ ಸಹ ಅವರು ಪೋರ್ಚುಗೀಸರಿಂದ ವಶಪಡಿಸಿಕೊಂಡರು.

ಆರಂಭದಲ್ಲಿ ವಸಾಹತುಗಳ ಸ್ಥಾಪನೆಯ ಕಾರ್ಯದಲ್ಲಿ ಡಚ್ಚರು ಮುಂದಾಗಿದ್ದು, ಸ್ಥಳೀಯ ನಾಯಕ ಅಥವಾ ಅರಸು ಮನೆತನಗಳೊಂದಿಗೆ ಪರಸ್ಪರ ವಿನಿಮಯ ಮಾಡಿಕೊಳ್ಳುವುದು ಅನಿವಾರ್ಯವಾಗಿತ್ತು. ಈ ಹಿನ್ನೆಲೆಯಲ್ಲಿ ಕೆಳದಿ ರಾಜ್ಯದ ಬಗ್ಗೆ ಡಚ್ಚರ ಪ್ರವರ್ತನಾದ ಲಿನ್ ಸ್ಕೋಟೆನ್‌ನ ವರದಿಗಳಿಂದ ಡಚ್ಚರಿಗೆ ತಿಳಿದು ಬಂದಿತು.[೩೬೮] ಪೋರ್ಚುಗೀಸರ ಏಕಸ್ವಾಮ್ಯವನ್ನು ಡಚ್ಚರು ವಿರೋಧಿಸುತ್ತಿದ್ದರು. ಹಾಗೂ ಅವರ ಹಿತಾಸಕ್ತಿಗೆ ವಿರುದ್ಧವಾಗಿ ಕೆಲಸಮಾಡುತ್ತಿದ್ದರು. ಕೆಳದಿ ನಾಯಕರು ಪೋರ್ಚುಗೀಸರನ್ನು ಎದುರು ಹಾಕಿಕೊಳ್ಳದ ಕಾರಣ ಡಚ್ಚರಿಗೆ ಕರ್ನಾಟಕದ ಕರಾವಳಿಯಲ್ಲಿ ಬೆಂಬಲ ಸಿಕ್ಕಿರಲಿಲ್ಲ. ಶಿವಪ್ಪನಾಯಕನ ಕಾಲದಲ್ಲಿ ಇಲ್ಲಿ ಹಿಡಿತ ಸಾಧಿಸಲು ನಿರ್ಧರಿಸಿ ಪೋರ್ಚುಗೀಸರೊಂದಿಗೆ ಡಚ್ಚರು ಸ್ಪರ್ಧೆಗಿಳಿದಿರುವುದನ್ನು ಕಾಣಬಹುದಾಗಿದೆ.[೩೬೯] ಶಿವಪ್ಪನಾಯಕನು ತನ್ನ ಅಧಿಕಾರಾವಧಿಯಲ್ಲಿ ವಿದೇಶಿಯರೊಂದಿಗೆ ಉತ್ತಮ ಸಂಬಂಧ ಹೊಂದಿದ್ದರೂ, ಅವರಿಗೆ ಸ್ವಂತ ಕೋಟೆ ನಿರ್ಮಿಸಿಕೊಳ್ಳಲು ಹಾಗೂ ಆಡಳಿತ ನಡೆಸಿ ಅಧಿಕಾರ ಚಲಾಯಿಸಲು ಅವಕಾಶ ನೀಡಲಿಲ್ಲ. ಡಚ್ಚರ ಪ್ರವೇಶದಿಂದಾಗಿ ಕೆಳದಿ ರಾಜ್ಯದ ಮೇಲೆ ಇಬ್ಬರು ವಿದೇಶಿಯರು ವ್ಯಾಪಾರಕ್ಕಾಗಿ ರಾಜರ ಜೊತೆ ಸ್ನೇಹ ಬೆಳೆಸಲು ಆರಂಭಿಸಿದರು. ವಿದೇಶಿಯರಿಗೆ ಸಮುದ್ರದ ಮೇಲೆ ಎಷ್ಟೇ ಹಿಡಿತವಿದ್ದರೂ ಒಳನಾಡಿನಲ್ಲಿ ಕೆಳದಿನಾಯಕರನ್ನು ಸೋಲಿಸುವ ಸಾಮರ್ಥ್ಯ ಇರಲಿಲ್ಲ.

ಡಚ್ಚರು ಶಿವಪ್ಪನಾಯಕನೊಂದಿಗೆ ಸ್ನೇಹ ಸಂಪಾದಿಸುವ ಸಲುವಾಗಿ ಸ್ಥಳೀಯ ಕೆಲವು ಅರಸರು ಕೆಳದಿಯ ವಿರುದ್ಧ ದಂಗೆ ಎದ್ದಾಗ ಕೆಳದಿಗೆ ಸಹಾಯ ಮಾಡಲು ಡಚ್ಚರು ಬಂದರು. ಕಾರಣವೇನೆಂದರೆ ಕರಾವಳಿ ಕರ್ನಾಟಕದ ಮೇಲೆ ತಮ್ಮ ನೌಕಾ ನೆಲೆಯನ್ನು ಸ್ಥಾಪಿಸುವುದು ಅವನ ಉದ್ದೇಶವಾಗಿತ್ತು. ಹಾಗೂ ಕೆಳದಿ ನಾಯಕರು ಪೋರ್ಚುಗೀಸರಿಂದ ದೂರ ಉಳಿದರೆ ಆ ಪ್ರದೇಶದ ಆರ್ಥಿಕ ಚಟುವಟಿಕೆಗಳನ್ನು ತಾವು ಹತೋಟಿಯಲ್ಲಿಟ್ಟುಕೊಳ್ಳಬಹುದೆಂದು ಡಚ್ಚರು ನಂಬಿದ್ದರು. ಶಿವಪ್ಪ ನಾಯಕನು ತನ್ನ ಅವಧಿಯಲ್ಲಿ ಪೋರ್ಚುಗೀಸರಿಂದ ಎಲ್ಲ ಬಂದರುಗಳನ್ನು ವಶಪಡಿಸಿಕೊಂಡಿದ್ದನು. ಇದೇ ವೇಳೆಯಲ್ಲಿ ಡಚ್ಚರು ಶಿವಪ್ಪ ನಾಯಕನೊಂದಿಗೆ ಸ್ನೇಹದಿಂದ್ದರು. ಶಿವಪ್ಪನಾಯಕನ ಆಳ್ವಿಕೆಯ ನಂತರ ಕ್ರಿ.ಶ.೧೬೬೪ ನವೆಂಬರ್ ೩೦ರಂದು ಕರಾವಳಿ ಕರ್ನಾಟಕದ ಬಂದರುಗಳನ್ನು ಪುನಃ ಪೋರ್ಚುಗೀಸರು ಪಡೆದುಕೊಂಡರು. ಡಚ್ಚರು ಆ ಬಂದರುಗಳನ್ನು ತಮ್ಮ ವಶಕ್ಕೆ ಕೊಡಬೇಕೆಂದು ಪೋರ್ಚುಗೀಸರನ್ನು ಒತ್ತಾಯಿಸಿದರು. ಏಕೆಂದರೆ ಶಿವಪ್ಪನಾಯಕನು ಪೋರ್ಚುಗೀಸರೊಂದಿಗೆ ವಿರೋಧ ಕಟ್ಟಿಕೊಂಡಾಗ ಆ ಬಂದರುಗಳನ್ನು ತಮಗೆ ಕೊಡುವುದಾಗಿ ಒಪ್ಪಂದ ಮಾಡಿಕೊಂಡಿದ್ದು, ಬೇರೆ ಯಾರಿಗೂ ಇಲ್ಲಿ ಅವಕಾಶ ನೀಡುವುದಿಲ್ಲವೆಂದು ಹೇಳಿದ್ದಾನೆಂದು ಡಚ್ಚರು ತಿಳಿಸಿದರು. ಆದರೆ ಈ ಸಂದರ್ಭದಲ್ಲಿ ಒಪ್ಪಂದದಲ್ಲಿ ಭಾಗವಹಿಸಿದವರು ಜೀವಂತವಾಗಿ ಇಲ್ಲದಿರುವುದರಿಂದ ಈ ಸಮಸ್ಯೆ ಕಗ್ಗಂಟಾಗಿಯೇ ಉಳಿಯಿತು. ಆದರೆ ಪೋರ್ಚುಗೀಸರು ಅನೇಕ ವಾದಗಳನ್ನು ಮುಂದಿಟ್ಟು, ಆ ಪ್ರದೇಶಗಳನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದರು. ಗೋವೆಯ ವೈಸ್‌ರಾಯ್ 'ಅಂಟೋನಿಯೋ ಡಿಮೆಲ್ಲೊ ಡಿಕಾಸ್ಟ್ರೋ'ನು ಪೋರ್ಚುಗಲ್‌ನ ಲಿಸ್ಬನ್ ಆಸ್ಥಾನಕ್ಕೆ ಪತ್ರ ಬರೆದು 'ಕೆನರಾ ರಾಜನೊಂದಿಗೆ ಒಪ್ಪಂದ ಮಾಡಿಕೊಂಡ ಪ್ರಕಾರ ಅವನು ಪೋರ್ಚುಗೀಸರಿಂದ ಹಿಂದೆ ವಶಪಡಿಸಿಕೊಂಡ ಬಂದರುಗಳನ್ನು ಹಿಂತಿರುಗಿಸಲು ಒಪ್ಪಿದ್ದಾನೆ. ಹಾಗೂ ಅಷ್ಟೇನು ಪ್ರಮುಖವಲ್ಲದ ಕರಾರುಗಳ ಮೇಲೆ ತನ್ನ ರಾಜ್ಯದ ಮೆಣಸನ್ನು

ಕೊಂಡುಕೊಳ್ಳುವಂತೆ ಬಲತ್ಕರಿಸಿಕೂಡದು ಎಂಬ ಮಾತಿಗೆ ಒಪ್ಪಿದ್ದಾನೆ. ಇದರಂತೆ ಅವನು ಹಿಂತಿರುಗಿಸಿದ ಪ್ರದೇಶಗಳನ್ನು ವಶಪಡಿಸಿಕೊಳ್ಳಲು ಹೋದ ನಮ್ಮ ದಂಡನಾಯಕನಿಗೆ ಡಚ್ಚರ ಅಡ್ಮಿರಲ್‌ನು ಬಾರ್ಶಿಲೋರ್‌ನ್ನು ವಶಪಡಿಸಿಕೊಳ್ಳಲು ಅಡ್ಡಿಪಡಿಸಿದನು. ಹಾಗೆ ಮಂಗಳೂರಿನಲ್ಲೂ ಡಚ್ಚರು ವಿರೋಧ ವ್ಯಕ್ತಪಡಿಸಿದರು. ಈ ಡಚ್ಚರು ಕೆಳದಿ ರಾಜರು ನಮಗೆ ಈ ಸ್ಥಳಗಳನ್ನು ಒಪ್ಪಂದದ ಮೂಲಕ ಕೊಟ್ಟಿದ್ದಾರೆ. ಪೋರ್ಚುಗೀಸರಿಗೆ ಇಲ್ಲಿ ಅವಕಾಶವಿಲ್ಲ. ಹಾಗೂ ಅವರೊಂದಿಗೆ ವ್ಯಾಪಾರ ಸಂಬಂಧವಿರಿಸಿಕೊಳ್ಳುವುದಿಲ್ಲವೆಂದು ಹೇಳುತ್ತಿದ್ದಾರೆ. ಇಂಗ್ಲೀಶರು ಸಹಾಯ ಮಾಡದಿದ್ದರೆ ಎಲ್ಲ ಕಳೆದು ಹೋಗುತ್ತದೆ. ಅವರ ಮೂರು ಹಡಗುಗಳು ಡಚ್ಚರ ಹೆದರಿಕೆಯಿಂದ ಗೋವೆಯಲ್ಲಿ ಆಶ್ರಯ ಪಡೆದಿದ್ದು ಹೊರಬರುತ್ತಿಲ್ಲ ಎಂದು ಕ್ರಿ.ಶ.೧೬೬೪ ಡಿಸೆಂಬರ್ ೨೧ನೇ ತಾರೀಖಿನಂದು ತಿಳಿಸಿದ್ದಾನೆ.[೩೭೦] ನಂತರದ ಕ್ರಿ.ಶ.೧೬೬೪ರ ಡಿಸೆಂಬರ್ ೨೪ರ ಪೋರ್ಚುಗೀಸ್ ದಾಖಲೆಯೊಂದು ಗೋವಾ ರಾಜ್ಯ ಪತ್ರಾಗಾರದಲ್ಲಿ ದೊರೆತ್ತಿದ್ದು 'ಆ ದಿನದಂದು ಮಂಗಳೂರನ್ನು ತಮಗೆ ವಹಿಸಿಕೊಡುವಂತೆ ಕೇಳಿರುವುದನ್ನು ಪೋರ್ಚುಗೀಸ್ ನೌಕಾಧಿಕಾರಿ ನಿರಾಕರಿಸಿದ್ದಾನೆ. ಡಚ್ಚರು ಉಲ್ಲಾಳ ರಾಣಿಯೊಂದಿಗೆ ಸ್ನೇಹ ಸಂಪಾದಿಸಿದ್ದಾರೆ. ಹಾಗೂ ಕೆನರಾ ಬಂದರುಗಳನ್ನು ಪೋರ್ಚುಗೀಸರು ಪ್ರವೇಶಿಸಬೇಕಾದರೆ ಡಚ್ಚರ ಒಪ್ಪಿಗೆ ಪಡೆಯಬೇಕೆಂದು ಒತ್ತಾಯಿಸುತ್ತಿದ್ದಾರೆ ಎಂದು ಆ ಪತ್ರದಲ್ಲಿ ತಿಳಿಸಲಾಗಿದೆ.[೩೭೧]

ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಡಚ್ಚರು ಕೆಳದಿಯೊಂದಿಗೆ ಹೊಂದಿದ ಸಂಬಂಧವು ಅಷ್ಟೇನು ಉತ್ತಮವಾಗೇನು ಇರಲಿಲ್ಲ ಎಂದು ತಿಳಿದುಬರುತ್ತದೆ. ಡಚ್ಚರು ಪೋರ್ಚುಗೀಸರೊಂದಿಗಿನ ಘರ್ಷಣೆಯಲ್ಲೇ ಕಾಲ ಕಳೆದರು. ಡಚ್ಚರು ಕೆಲವು ದಿನಗಳ ನಂತರ ಸೀಲೋನ್‌ಗೆ ತಮ್ಮ ವ್ಯಾಪಾರವನ್ನು ಕೇಂದ್ರೀಕರಿಸಿದರು. ಇದರಿಂದ ಕೆಳದಿನಾಯಕರು ಡಚ್ಚರಿಗಿಂತ ಪೋರ್ಚುಗೀಸರೊಂದಿಗೆ ಹೆಚ್ಚು ಆರ್ಥಿಕ ಸಂಬಂಧವಿರಿಸಿಕೊಂಡಿರುವುದನ್ನು ಸೂಕ್ಷ್ಮವಾಗಿ ಗಮನಿಸಬಹುದಾಗಿದೆ.

ಆದರೆ ಡಚ್ಚರು ದಕ್ಷಿಣ ಭಾರತದ ಇನ್ನಿತರೆ ಹಲವು ಪ್ರದೇಶಗಳೊಂದಿಗೆ ನಿಕಟ ಸಂಬಂಧವನ್ನು ಹೊಂದಿದ್ದು, ಆ ಸ್ಥಳಗಳಿಂದ ಹತ್ತಿಯ ಜೊತೆಗೆ ಇಂಡಿಗೋ(ನೀಲಿ), ಪೆಟ್ಲುಪ್ಪು, ಅಫೀಮು, ಕಚ್ಚಾ ರೇಷ್ಮೆ, ಇತ್ಯಾದಿ ವಸ್ತುಗಳ ಸಹಾಯದಿಂದ ಡಚ್ಚರು ಪೋರ್ಚುಗೀಸರ ಹಿಡಿತದಲ್ಲಿದ್ದ ಏಷ್ಯಾದ ವ್ಯಾಪಾರವನ್ನು ತಮ್ಮ ಕೈವಶಮಾಡಿಕೊಂಡರು. ವ್ಯಾಪಾರದ ಸಮಯದಲ್ಲಿ ಗೋವಾವವನ್ನು ಮುಚ್ಚಿದ್ದಲ್ಲದೆ ೧೬೪೧ರಲ್ಲಿ ಮಲಕ್ಕಾವನ್ನು ೧೬೫೫-೫೬ರಲ್ಲಿ ಕೊಲಂಬೋವನ್ನು ಹಾಗೂ ೧೬೫೮-೬೩ರಲ್ಲಿ ಕೊಚ್ಚಿನ್ ಅನ್ನು ವಶಪಡಿಸಿಕೊಂಡರು. ಇದರಿಂದ ಡಚ್ಚರು, ಪೋರ್ಚುಗೀಸರನ್ನು ಏಷ್ಯಾದಿಂದ ಸಂಪೂರ್ಣವಾಗಿ ನಿರ್ಮೂಲನೆ ಮಾಡಿದಂತಾಯಿತು. ಇಷ್ಟಲ್ಲದೆ ಇಂಗ್ಲೀಶರನ್ನೂ ಸಹ ಡಚ್ಚರು ದಕ್ಷಿಣ ಪೂರ್ವ ಏಷ್ಯಾದಿಂದ ಹೊರಟ್ಟಿದರು. ಡಚ್ಚರು ಹಾಗೂ ಇಂಗ್ಲೀಷರ ನಡುವಿನ ಕಾದಾಟಗಳು ೧೬೫೩-೫೪ರ ನಂತರ ಹೆಚ್ಚಾದವು. ಒಮ್ಮೆ ಸೂರತ್ ಬಳಿ ಡಚ್ಚರ ಹಡಗುಗಳು ಬಂದಿದ್ದರಿಂದ ಇಂಗ್ಲೀಶರು ತಮ್ಮ ವ್ಯಾಪಾರವನ್ನು ರದ್ದು ಗೊಳಿಸಬೇಕಾಯಿತು. ೧೬೭೨-೭೪ರಲ್ಲಿ ಡಚ್ಚರು ಮತ್ತೆ ಸೂರತ್ ಹಾಗೂ ಬಾಂಬೆಗಳಲ್ಲಿ ಇಂಗ್ಲೀಶರ ವಸಾಹತುಗಳನ್ನು ಸ್ಥಾಪಿಸದಂತೆ ತಡೆದರು. ಇದಕ್ಕೆ ಪ್ರತಿಯಾಗಿ ಇಂಗ್ಲೀಶರು ಪೋರ್ಚುಗೀಸರೊಂದಿಗೆ ಸೇರಿ ೧೭೫೯ರಲ್ಲಿ ಡಚ್ಚರನ್ನು ಸೋಲಿಸಿದ್ದರಿಂದ ಡಚ್ಚರ ಪ್ರಾಬಲ್ಯ ಕಡಿಮೆಯಾಯಿತು.[೩೭೨] ಕೊನೆಗೆ ಡಚ್ಚರು ೧೭೯೫ರಲ್ಲಿ ತಮ್ಮ ಕೊನೆಯ ನೆಲೆಯನ್ನು ಕಳೆದುಕೊಂಡರು.

## ಫ್ರೆಂಚರು

ಫ್ರೆಂಚರು ೧೬೬೪ರಲ್ಲಿ ಬೇರೆಲ್ಲ ಯುರೋಪಿಯನ್ ದೇಶಗಳಿಗಿಂತ ತಡವಾಗಿ "ದಿ ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿ"ಯನ್ನು ಸ್ಥಾಪಿಸಿದರು. ೧೬೬೪ರಲ್ಲಿ ಅವರು ಸೂರತ್‌ನಲ್ಲಿ ತಮ್ಮ ಪ್ರಥಮ ಕಾರ್ಖಾನೆಯನ್ನು ಸ್ಥಾಪಿಸಿದರು. ೧೬೭೩ರಲ್ಲಿ ಅವರಿಗೆ ಪೂರ್ವ ಕರಾವಳಿಯಲ್ಲಿ ಕಾಣಿಕೆಯಾಗಿ ಪಾಂಡಿಚೇರಿಯನ್ನು ಕೊಡಲಾಯಿತು. ಬಂಗಾಳದ ರಾಜ ಅವರಿಗೆ ೧೬೭೪ರಲ್ಲಿ ಕಲ್ಕತ್ತಾದ ಬಳಿ ಒಂದು ಜಾಗವನ್ನು ಕೊಟ್ಟ ಅಲ್ಲಿ ಅವರು ಚಂದ್ರನಾಗೋರ್ ಎಂಬ ಪಟ್ಟಣವನ್ನು ಸ್ಥಾಪಿಸಿದರು.[೩೭೩]

ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿಯು ಆರಂಭಿಕ ಹಂತದಲ್ಲಿ ಸ್ಥಳೀಯ ಅರಸು ಮನೆತನಗಳೊಂದಿಗೆ ವ್ಯಾಪಾರ ಸಂಬಂಧ ಹೊಂದುವುದರ ಜೊತೆಗೆ ಮರಾಠ ಹಾಗೂ ನಿಜಾಮರ ಜೊತೆ ಅನೇಕ ಯುದ್ಧಗಳನ್ನು ಮಾಡಲಾಯಿತು. ಭಾರತದಲ್ಲಿ ಫ್ರೆಂಚ್ ಪ್ರಭಾವವನ್ನು ವಿಸ್ತರಿಸಲು ರಾಜ್ಯ ವಿಸ್ತರಣೆಗಾಗಿ ವೈಸ್‌ರಾಯ್ ಡೂಪ್ಲೆ ಒಂದು ದೊಡ್ಡ ಯೋಜನೆಯನ್ನು ರೂಪಿಸಿದನು. ಕರಾವಳಿಯ ಅಧಿಪತಿ ಕೆಳದಿ ಅರಸರೊಂದಿಗೆ ಮಲಬಾರಿನ ರಾಜನ ಮುಖಾಂತರ ಆತನು ವ್ಯವಹರಿಸುವಂತಾಯಿತು. ಫ್ರೆಂಚ್ ವರ್ತಕರೂ ಕೆಳದಿ ರಾಜ್ಯದಿಂದ ಮೆಣಸು ಮತ್ತು ಇತರೆ ವಾಣಿಜ್ಯೋದ್ಯಮ ಸರಕುಗಳನ್ನು ಕೊಳ್ಳಲು ಆಸಕ್ತಿ ವಹಿಸಿದ್ದರು. ೧೬೬೪ನೇ ಸೆಪ್ಟೆಂಬರ್ ೧೬ರ ಮಾಹಿತಿಯೊಂದು ಅವರು ಬಾರಕೂರಿನಲ್ಲಿ ನಾರಣಮಲ್ಲನೊಂದಿಗೆ ವ್ಯಾಪಾರೋದ್ಯಮದಲ್ಲಿ ತೊಡಗಿದ್ದುದು ಕಂಡುಬರುತ್ತದೆ.[೩೭೪] ಹೀಗೆ ಮಲಬಾರ್ ಕರಾವಳಿಯ ಮುಖಾಂತರವಾಗಿ ಫ್ರೆಂಚ್ ಮಿಷನರಿಗಳು ಕೆಳದಿ ರಾಜ್ಯವನ್ನು ಪ್ರವೇಶಿಸಲು ಪ್ರಯತ್ನಿಸಿದರು.[೩೭೫]

೧೭೫೧ ಅಕ್ಟೋಬರ್‌ನಲ್ಲಿ ಇಮ್ಮಡಿ ಬಸಪ್ಪನಾಯಕನಿಗೆ ಮಲಬಾರಿನ ಕೋಲತ್ತಿರಿ ರಾಜನೊಂದಿಗೆ ಯುದ್ಧವಾಯಿತು. ಈ ನೆರೆಹೊರೆಯ ಯುದ್ಧವನ್ನು ದುರುಪಯೋಗಪಡಿಸಿಕೊಂಡು ಡೂಪ್ಲೆಯ ಯೋಜನೆ ಮೇರೆಗೆ ಫ್ರೆಂಚರು ಇದರಲ್ಲಿ ಪ್ರವೇಶ ಮಾಡಲು ನಿರ್ಧರಿಸಿದರು. ೧೭೫೧ರಲ್ಲಿ (ಡಿಸೆಂಬರ್) ಇಮ್ಮಡಿ ಬಸಪ್ಪನಾಯಕನ ವಿರುದ್ಧವಾಗಿ ಮಲಬಾರಿಗೆ ಅರಸನಿಗೆ ಫ್ರೆಂಚರು ಸಹಾಯ ನೀಡಿದರು.[೩೭೬] ಸಹಜವಾಗಿಯೇ ಈ ಸನ್ನಿವೇಶವು ಪೋರ್ಚುಗೀಸರಿಗೆ ಬಿಕ್ಕಟ್ಟುಂಟಾಯಿತು. ಪಶ್ಚಿಮ ಕರಾವಳಿಯ ರಾಜಕಾರಣದಲ್ಲಿ ಫ್ರೆಂಚರ ಮಧ್ಯಪ್ರವೇಶದಿಂದ ಅವರ ಸ್ವಾಮ್ಯಕ್ಕೆ ಧಕ್ಕೆಯುಂಟಾಗುವ ಭೀತಿಯೂ ತಲೆದೋರಿತು. ಜೊತೆಗೆ ಈ ಘರ್ಷಣೆಯಲ್ಲಿ ಫ್ರೆಂಚರು ಮೂಗು ತೂರಿಸಿದುದು ಪೋರ್ಚುಗೀಸರಿಗೆ ವಿಚಿತ್ರವಾದ ಧರ್ಮಸಂಕಟವನ್ನುಂಟು ಮಾಡಿತು.[೩೭೭] ಡೂಪ್ಲೆಯು ಕೆಳದಿ ರಾಜ್ಯವನ್ನು ಕಬಳಿಸಿ ತನ್ನ ಅಧೀನದಲ್ಲಿರಿಸಿಕೊಳ್ಳಲು ಹವಣಿಸಿ ತಮಗೆ ಆಯುಧ ಹಾಗೂ ಸೈನಿಕರನ್ನು ಸಹಾಯವಾಗಿ ಕೊಟ್ಟು ಮಂಗಳೂರು ಹಾಗೂ ಇತರ ಬಂದರುಗಳಲ್ಲಿ ಇಮ್ಮಡಿ ಬಸಪ್ಪನಾಯಕನಿಗೆ ಎದುರಾಗಿ ಹಾಗೂ ಬಹಿರಂಗವಾಗಿ ಹಗೆಯನ್ನು ಘೋಷಿಸಲು ಪೋರ್ಚುಗೀಸರನ್ನು ವಿನಂತಿಸಿಕೊಂಡನು.[೩೭೮] ಕೆಳದಿ ಅರಸರೊಂದಿಗೆ ನಿಕಟ ಸಂಪರ್ಕದಿಂದಿದ್ದ ಪೋರ್ಚುಗೀಸರು ಇದನ್ನು ನಿರಾಕರಿಸಿದರು. ಡೂಪ್ಲೆಯ ದುರಾಸೆಯನ್ನು ಅರಿತಿದ್ದ ಅವರು ಕೆಳದಿ ಅರಸರೊಂದಿಗೆ ಇರುವ ವ್ಯಾಪಾರೋದ್ದಿಮೆ ಸಂಬಂಧವನ್ನು ಸುಲಭವಾಗಿ ಕಳೆದುಕೊಳ್ಳುವಂತಿರಲಿಲ್ಲ. ಇಷ್ಟಾದರೂ ಕೆಳದಿ ರಾಜ್ಯದ ಅಧೀನದಲ್ಲಿದ್ದ ಮಂಗಳೂರಿನ ಮೇಲೆ ಫ್ರೆಂಚರು ಆಕ್ರಮಣವನ್ನೆಸಗಿದರು. ಇಮ್ಮಡಿ ಬಸಪ್ಪನಾಯಕನು ಪೋರ್ಚುಗೀಸರೊಂದಿಗೆ ತಮಗಿದ್ದ ಪರಂಪರಾಗತ ಸ್ನೇಹದ ನೀತಿಗನುಣವಾಗಿ ಈ ಸಮಯದಲ್ಲಿ ಫ್ರೆಂಚರ ವಿರುದ್ಧವಾಗಿ

ಸಹಾಯಕ್ಕೆ ಕೋರಿದನು. ಅವನು ನೀಡಿದ ಉತ್ತರ ಹಾರಿಕೆಯದಾಗಿತ್ತು. ಫ್ರೆಂಚರಿಗೆ ತಾವು ಸಹಾಯ ಮಾಡಿಲ್ಲವಾದ್ದರಿಂದ ಕೆಳದಿಗೂ ಮಾಡಲು ಸಾಧ್ಯವಿಲ್ಲ ಎಂದು ಹೇಳಿದರು. ಹಾಗಾದರೆ ಕೆಳದಿಯೊಂದಿಗೆ ಮಾಡಿಕೊಂಡ ನಿರ್ದಿಷ್ಟ ಒಪ್ಪಂದಗಳ ಗತಿಯೇನು ಎಂದು ಕೇಳಿದಕ್ಕೆ ಏಷ್ಯಾದ ಯಾವ ಶತ್ರುವು ಯುದ್ಧಕ್ಕೆ ಬಂದರೂ ಕೆಳದಿಗೆ ನಾವು ಸಹಾಯ ಮಾಡುವವರೇ ಹೊರತು ಯುರೋಪಿಯನ್ ರಾಜರ ವಿರುದ್ದವಾಗಿ ಈ ರೀತಿ ವ್ಯಾಖ್ಯಾನಿಸುತ್ತಾ ಧಾರ್ಮಿಕ ಭಾವನಾತ್ಮಕ ನಂಟು ಉಂಟು ಮಾಡಿದರು. ಫ್ರೆಂಚರಿಗೆ ಸಹಾಯ ಮಾಡದೇ ಹೋದರೂ ಹಿಂದೂ ರಾಜರನ್ನು ಕೈಬಿಟ್ಟರು. ಅದೂ ಇಮ್ಮಡಿ ಬಸಪ್ಪನಾಯಕನು ಡೂಪ್ಲೆಯಿಂದಾಗಿ ಫ್ರೆಂಚರನ್ನು ಎದುರಿಸುತ್ತಿದ್ದ ಅಪಾಯಕಾರಿ ಸಂದರ್ಭದಲ್ಲಿ ಪೋರ್ಚುಗೀಸರು ಕೆಳದಿಯ ನೆರವಿಗೆ ಬರಲಿಲ್ಲ. ಇದರಿಂದ ಬಸಪ್ಪನಿಗೆ ಸೋಲುಂಟಾಯಿತು. ೧೭೫೨ರ ಫೆಬ್ರವರಿಯಲ್ಲಿ ಫ್ರೆಂಚರು ಮತ್ತು ಬಸಪ್ಪನ ನಡುವೆ ಶಾಂತಿ ಸ್ಥಾಪಿಸಲು ಪೋರ್ಚುಗೀಸರು ಪ್ರಯತ್ನಿಸಿದರು. ಫ್ರೆಂಚರ ಪ್ರತಿನಿಧಿ ಮಾರ್ರೈಸ್‌ದೆ ಡೂಪ್ಲೆನಿಗೆ ಬರೆಯುತ್ತಾ ಒಪ್ಪಂದಕ್ಕೆ ಫ್ರೆಂಚರ ಷರತ್ತುಗಳನ್ನು ಬಳಸಲು ಕೇಳಿದನು. ೧೭೫೩ರಲ್ಲಿ ಸಂಧಿಯ ಮಾತುಕತೆಗಾಗಿ ಪಾಂಡಿಚೇರಿಗೆ ರಾಯಭಾರಿಯನ್ನು ಕಳುಹಿಸಲು ಕೆಳದಿ ಅರಸನು ನಿರ್ಧರಿಸಿದನು.[೩೭೯]

ಬಿದನೂರಿನವರ ಪರ ಫ್ರೆಂಚರು ಹಾಗೂ ಮರಾಠರ ಪರ ಚಿತ್ರದುರ್ಗದ ನಾಯಕರು ಯುದ್ಧ ಮಾಡಿದ ಸಂಗತಿಯು ಫ್ರೆಂಚ್ ಆಡಳಿತದಲ್ಲಿ ಪಾಂಡಿಚೇರಿಯಲ್ಲಿ ಡೂಪ್ಲೆಯ ಆಸ್ಥಾನದ ಮುಖ್ಯ ಅಧಿಕಾರಿಯಾಗಿದ್ದ ಆನಂದರಂಗ ಪಿಳ್ಳೆಯ (ಕ್ರಿ.ಶ.೧೭೩೬–೬೦ರಲ್ಲಿ ಕಾರ್ಯ ನಿರ್ವಹಿಸಿದನು.) ದಿನಚರಿಯಿಂದ ತಿಳಿದುಬರುತ್ತದೆ. ಇವನು ಪ್ರತಿ ದಿನ ದಿನಚರಿಯನ್ನು ಬರೆಯುತ್ತಿದ್ದನು.

ಚಿತ್ರದುರ್ಗಕ್ಕೆ ಸೇರಿದ ಮಾಯಕೊಂಡ ಕೋಟೆಗೆ ಸವಣೂರು ಹಕೀಂಖಾನನ ಸಹಾಯದಿಂದ ಮುತ್ತಿಗೆ ಆರಂಭವಾಯಿತು. ಸವಣೂರು ನವಾಬರ ಚರಿತ್ರೆಯಲ್ಲಿ ಹಕೀಂಖಾನನ ಕಾಲ ೧೭೫೪–೧೭೯೫. ಈ ಕಾಲದಲ್ಲಿದ್ದವನು ಅಬ್ದುಲ್ ಮಜೀದ್ ಖಾನ್ ಎಂಬುದಾಗಿ ಕಂಡುಬರುತ್ತದೆ. (೧೭೩೦–೧೭೫೪) ದಿನಾಂಕ: ೦೧.೦೩.೧೭೪೯ (ಈ ದಿನ ಎಫಿಮ ರೀಸ್ ಪ್ರಕಾರ ಬುಧವಾರವಾಗುತ್ತದೆ)ರಂದು ಜರುಗಿದ ಈ ಕದನದಲ್ಲಿ (೧೭೪೮) ಅಬ್ದುಲ್ ಮಜೀದ್‌ಖಾನನನ್ನು ಒಳಗೊಂಡು ಆನೆಗೊಂದಿ, ರಾಯದುರ್ಗ, ಹರಪನಹಳ್ಳಿ, ಪಾಳೆಯಗಾರರು ಕೆಳದಿ ಬಸಪ್ಪನಾಯಕನನ್ನು ಮುಂದಿರಿಸಿಕೊಂಡು ಮಾಯಕೊಂಡ ಕೋಟೆಯನ್ನು ವಶಪಡಿಸಿಕೊಂಡರು. ಈ ಕಾಳಗದಲ್ಲಿ ಹಿರೇಮದಕರಿನಾಯಕನು ಗಾಯಗೊಂಡು ಮಡಿದನು. ಕರ್ನಾಟಕದ ಚರಿತ್ರೆಯಲ್ಲಿ ಚಿತ್ರದುರ್ಗದ ಚರಿತ್ರೆಯ ಖ್ಯಾತ ವಿದ್ವಾಂಸ ಹುಲ್ಲೂರು ಶ್ರೀನಿವಾಸ ಜೋಯಿಸರು ನುಡಿದಂತೆ ಇದು ಒಂದು ಮುಖ್ಯ ಕಾಳಗ. ಯುರೋಪಿನಿಂದ ಭರತಖಂಡಕ್ಕೆ ತಕ್ಕಡಿ ಹಿಡಿದು ವ್ಯಾಪಾರೋದ್ಯಮಕ್ಕೆ ಧಾವಿಸಿ ಬಂದ ಬಿಳಿಯರು ಈ ನಾಡಿನ ಆಂತರಿಕ ವ್ಯವಹಾರ ಹಾಗೂ ಆಂತರಿಕ ಕಲಹಗಳಲ್ಲಿ ಪ್ರವೇಶಿಸಲು ಆಗತಾನೇ ಆರಂಭಿಸಿದ್ದರು. ಕರ್ನಾಟಿನ ಗದ್ದುಗೆಗೆ ವಾರಸುದಾರನಾದ ಮಹಮ್ಮದಾಲಿಯ ಪಕ್ಷವನ್ನು ಇಂಗ್ಲೀಶರೂ, ಚಂದಾಸಾಹೇಬನ ಪಕ್ಷವನ್ನು ಫ್ರೆಂಚರೂ ವಹಿಸಿದರು. ಮಹಾಬಲಶಾಲಿಗಳಾಗಿದ್ದ ಕೆಳದಿ ಅರಸರನ್ನು ದಮನಮಾಡಿ, ತಮ್ಮ ಅಧೀನ ಪಡಿಸಿಕೊಂಡು, ಯುರೋಪಿಯನ್ ಕ್ರೈಸ್ತ ಮೈತ್ರಿ ಇದನ್ನು ಈಡೇರಿಸಿಕೊಳ್ಳಲು ಫ್ರೆಂಚ್ ವೈಸ್‌ರಾಯಿ ಡೂಪ್ಲೆಯು ತಮಗೆ ಆಯುಧಗಳನ್ನು, ಸೈನಿಕರನ್ನೂ ಸಹಾಯವಾಗಿ ದೊರಕಿಸಿಕೊಟ್ಟು ಮಂಗಳೂರು ಹಾಗೂ ಇತರ ಬಂದರುಗಳಲ್ಲಿ ಕೆಳದಿ ಬಸಪ್ಪ ನಾಯಕನಿಗೆ ಎದುರಾಗಿ ಬಹಿರಂಗ

ಹಗೆಯನ್ನು ಘೋಷಿಸಲು ಪೋರ್ಚುಗೀಸರನ್ನು ವಿನಂತಿ ಮಾಡಿಕೊಂಡನು. ಆಗ ಸಾತಾರೆಯಲ್ಲಿ ಮರಾಠೆಯವರ ಬಳಿ ಸೆರೆಯಲ್ಲಿದ್ದ ಚಂದಾಸಾಹೇಬನು ಬಿಡುಗಡೆ ಹೊಂದಿ ಆರ್ಕಾಟಿಗೆ ಹಿಂತಿರುಗುತ್ತಿದ್ದನು. ಇವನು ಚಿತ್ರದುರ್ಗದ ಮದಕರಿನಾಯಕನ ಪಕ್ಷ ವಹಿಸಲು ಕೆಳದಿ ಅರಸರ ಸೈನಿಕರು ಸೆರೆಹಿಡಿದರು. ಚಂದಾ ಸಾಹೇಬನ ಮಗನು ಮಾಯಕೊಂಡದ ಬಳಿ ಮಡಿದನು. ಇವನ ಗೋರಿ ಮಾಯಕೊಂಡದ ಬಳಿಯ ಮಾಗಡಿ ಎಂಬ ಗ್ರಾಮದಲ್ಲಿದೆ. ಚಂದಾ ಸಾಹೇಬನು ಮೋಸದಿಂದ ಲಂಚವನ್ನಿತ್ತು ಅಲ್ಲಿಂದ ಬಿಡುಗಡೆ ಹೊಂದಿ ಫ್ರೆಂಚರೊಡನೆ ಆರ್ಕಾಟಿಗೆ ತೆರಳಿದನು.[೩೮೦] ಈ ರೀತಿಯಾಗಿ ಭಾರತ ಚರಿತ್ರೆಗೆ ಸಾಮಾನ್ಯವಾಗಿ ಹಾಗೂ ಕೆಳದಿ ಚಿತ್ರದುರ್ಗ ಚರಿತ್ರೆಗೆ ವಿಶೇಷವಾಗಿ ಅಮೂಲ್ಯ ಆಕರಗಳನ್ನು ದೊರಕಿಸಿಕೊಡುತ್ತವೆ. ಹಾಗೆಯೇ ಚಿತ್ರದುರ್ಗ ಪ್ರದೇಶದಲ್ಲಿ ಸಮರ್ಥರಾದ ಈ ನಾಯಕರ ಸೇವೆಯಲ್ಲಿ ಕೆಲವರು ನಿಷ್ಠಾವಂತ ಫ್ರೆಂಚ್ ಇಂಜಿನಿಯರರಿದ್ದರು. ಅವರು ಬಲವಾದ ಕೋಟೆಗಳನ್ನು ಇತರ ಸಾರ್ವಜನಿಕ ಉಪಯೋಗಿ ಕಟ್ಟಡಗಳನ್ನೂ ನಿರ್ಮಿಸಿದರು. ಇಂದಿಗೂ ಅವು ಅವರ ವೈಭವದ ಕುರುಹುಗಳಾಗಿ ಉಳಿದಿವೆ. ಅಂತಹ ಇಂಜಿನಿಯರರ ಪೈಕಿ ಜಾನ್ ಎನ್ನುವವನೂ ಒಬ್ಬ, ಉಚ್ಚಂಗಮ್ಮನ ಉಯ್ಯಾಲೆ ಕಂಬಗಳನ್ನೂ, ದೊಡ್ಡ ದೀಪಸ್ತಂಭವನ್ನೂ ಚಿತ್ರದುರ್ಗದಲ್ಲಿ ನಿಲ್ಲಿಸಿದನು. ಈ ದೀಪ ಕಂಬದ ಮೇಲೆ ಕೈ ಮುಗಿದು ನಿಂತಿರುವ ಯುರೋಪಿಯನ್ ವ್ಯಕ್ತಿಯ ಉಬ್ಬು ಶಿಲ್ಪವಿದೆ. ಅನೇಕ ಚರಿತ್ರೆಕಾರರು ಫ್ರೆಂಚರ ಅಧಿಕಾರಿ ಎಂದು ಹೇಳಿದ್ದಾರೆ. ಹೊಸದುರ್ಗ ತಾಲೂಕಿನ ಜಾನಕಲ್ಲಿನ ದುರ್ಭೇದ್ಯವಾದ ಕೋಟೆಯೂ ಬಹುಶಃ ಇವನದೇ ನಿರ್ಮಿತಿ. ಜಾನಕಲ್ಲು ಮತ್ತು ಜಾನಕೊಂಡ ಹಳ್ಳಿಗಳಿಗೆ ಬಹುಶಃ ಈ ಜಾನನ ಹೆಸರನ್ನೇ ಇರಿಸಿದೆಯೆಂದು ತೋರುತ್ತದೆ.[೩೮೧] ಚಿತ್ರದುರ್ಗ ಸಂಸ್ಥಾನದ ಆಶ್ರೀತ ವ್ಯಾಪ್ತಿಗೆ ಬರುವ ನಾಯಕನಹಟ್ಟಿಯೂ ಹಟ್ಟಿ ಮಲ್ಲಪ್ಪನಾಯಕನ ಆಡಳಿತ ಘಟಕವಾಗಿದ್ದು, ನಂತರ ಚಿತ್ರದುರ್ಗ ನಾಯಕರ ಅಧೀನಕ್ಕೆ ಒಳಪಡುತ್ತದೆ. ನಾಯಕನಹಟ್ಟಿಯ ತಿಪ್ಪೇರುದ್ರಸ್ವಾಮಿ ಎಂಬ ಕಾಯಕ ಯೋಗಿಯ ಹೆಸರಿನಲ್ಲಿ ಎರಡು ದೇವಾಲಯಗಳಿವೆ. ಒಂದು ಹೊರ ಮಠ, ಇದು ಇಂಡೋ ಇಸ್ಲಾಮಿಕ್ ಶೈಲಿಯಲ್ಲಿದೆ. ಇನ್ನೊಂದು ಒಳಮಠ ಇದು ದ್ರಾವಿಡ ಶೈಲಿಯ ದೇವಾಲಯವಾಗಿದೆ. ಇಲ್ಲಿ ದೊರೆತ ಶಿಲ್ಪಗಳ ಆಕರಗಳಿಂದ ಫ್ರೆಂಚ್ ಸೈನ್ಯದ ಸೈನಿಕರನ್ನು ಗುರುತಿಸಬಹುದು. ಒಳಮಠದ ಗೋಪುರವು ಸುಮಾರು ೪೦ ಅಡಿ ಎತ್ತರವಿದ್ದು ಅನೇಕ ಪೌರಾಣಿಕ ದೃಶ್ಯಗಳನ್ನು ಗಾರೆಯಲ್ಲಿ ಬಿಡಿಸಿದ್ದಾರೆ. ಈ ಗೋಪುರವನ್ನು ಬಸಟ್ಟಪ್ಪನೆಂಬ ಭಕ್ತನೊಬ್ಬನು ನಿರ್ಮಿಸಿದನು. ದೇವಸ್ಥಾನದ ಒಳಗೆ ಮತ್ತು ಮಹಾದ್ವಾರದ ಮೇಲಿರುವ ಅನೇಕ ಶಿಲ್ಪಗಳ ಜೊತೆಗೆ ಗೋಪುರದ ಮೊದಲನೆಯ ಪಟ್ಟಿಕೆಯಲ್ಲಿ ಮತ್ತು ಒಳಗೆ ಗಾರೆಗಚ್ಚಿನಲ್ಲಿ ಯುರೋಪಿಯನ್ನರ ಕೆಲವು ಶಿಲ್ಪಗಳನ್ನು ಮೂಡಿಸಲಾಗಿದೆ. ಮಹಾದ್ವಾರದ ಮುಂಭಾಗದ ಎಡದಿಂದ ಮೊದಲನೆಯ ಗಾರೆಯ ಶಿಲ್ಪ ಹೀಗಿದೆ.

ಕುದುರೆ ಬಂಡಿಯೊಂದನ್ನು ಎಳೆಯುತ್ತಿರುವ ಕುದುರೆಯು ಅಲಂಕರಿಸಲ್ಪಟ್ಟಿದೆ. ಸಾರಥಿಯು ಯುರೋಪಿಯನ್ ವ್ಯಕ್ತಿಯಾಗಿದ್ದಾನೆ. ಆ ವ್ಯಕ್ತಿಯು ತನ್ನ ಎಡಗೈಯಲ್ಲಿ ಕುದುರೆಯ ಲಗಾಮನ್ನು ಬಲಗೈಯಲ್ಲಿ ಚಾವಟಿಯನ್ನು ಹಿಡಿದಿರುವನು. ಕುದುರೆಯ ಕಾಲುಗಳಿಂದ ಈ ಬಂಡಿಯು ಚಲನೆಯಲ್ಲಿರುವುದು ವ್ಯಕ್ತವಾಗುವುದು, ಬಂಡಿಗೆ ಕಿಟಕಿಯೂ ಇರುವುದು, ಅದರ ಒಳಗಿರುವ ಒಬ್ಬ ವ್ಯಕ್ತಿ ಯುರೋಪಿಯನ್ ಹ್ಯಾಟ್ ಧರಿಸಿರುವುದನ್ನು, ಅವನು ಹಾಕಿಕೊಂಡಿರುವ ಅಂಗಿಯು ಕತ್ತಿನವರೆಗೂ ಇದ್ದಂತೆ ಕಾಣುವುದು. ಆತನ ಮುಂದೆ ಇನ್ನೊಬ್ಬ ವ್ಯಕ್ತಿಯು ಕುಳಿತಿದ್ದು ತಲೆಯ ಮೇಲೆ ಯಾವ

ತರಹದ ಹ್ಯಾಟ್ ಇಲ್ಲದಿದ್ದು ಆ ವ್ಯಕ್ತಿ ಸ್ತ್ರೀ ಎನ್ನಬಹುದು. ಬಂಡಿಯ ಚಕ್ರವನ್ನು ಸುಂದರವಾಗಿ ಮೂಡಿಸಿದ್ದಾರೆ. ಬಂಡಿಯ ಮುಂದೆ ಮೇನೆ (ಪಲ್ಲಕ್ಕಿ) ಒಂದನ್ನು ಹೊತ್ತುಕೊಂಡು ಹೋಗುತ್ತಿರುವ ದೃಶ್ಯವೂ ಇದೆ. ಮೇನೆಯನ್ನು ಹೊತ್ತಿರುವವರು ಸ್ಥಳೀಯರು ಎಂಬುದು ಅವರು ಧರಿಸಿರುವ ಉಡುಪಿನಿಂದ ವ್ಯಕ್ತವಾಗುತ್ತದೆ. ಮೇನೆಯ ಒಳಗೆ ಇಬ್ಬರು ಇದ್ದು ಗಾತ್ರದಲ್ಲಿ ಸಣ್ಣದಾಗಿದ್ದು ತಲೆಯ ಮೇಲೆ ಹ್ಯಾಟನ್ನು ಧರಿಸಿರುವುದರಿಂದ ಆ ವ್ಯಕ್ತಿ ಒಬ್ಬ ಚಿಕ್ಕ ಹುಡುಗ ಇದ್ದಂತೆ ಕಾಣುತ್ತದೆ. ಹಾಗೂ ಆ ಚಾಲಕನೊಡನೆ ಇರುವ ವ್ಯಕ್ತಿಯೂ ಯುರೋಪಿಯನ್ ಎಂಬುದಾಗಿ ತಲೆ ಕೂದಲಿನಿಂದ ಗುರುತಿಸಬಹುದು. ಪ್ರಾಯಶಃ ಸ್ತ್ರೀ ಇದ್ದರೂ ಇರಬಹುದು.

ಮೂರನೆಯದಾಗಿ ಮೇನೆಯ ಮುಂದೆ ಸುಂದರವಾಗಿ ಅಲಂಕರಿಸಿರುವ ಕುದುರೆಯೊಂದು ಇದ್ದು ಅದರ ಸವಾರನು ಯುರೋಪಿಯನ್ ಎಂಬುದು ಅವನು ಧರಿಸಿರುವ ಕೋಟು ಹ್ಯಾಟು ಮತ್ತು ಕೂದಲುಗಳಿಂದ ಕಂಡುಬರುವುದು. ಅವನ ಬಲಗೈಯಲ್ಲಿ ಚಾಟಿ, ಎಡಗೈಯಲ್ಲಿ ಲಗಾಮು ಇರುವುದು ಮತ್ತು ಈ ಕುದುರೆಯ ಮುಂದೆ ಒಂಟೆಯೊಂದು ಸಾಗುತ್ತಿರುವ ದೃಶ್ಯ ಪ್ರಮುಖವಾದದ್ದು. ಅಲಂಕರಿಸಲ್ಪಟ್ಟ ಒಂಟೆಯ ಚಿತ್ರಣ ಪ್ರಮಾಣಬದ್ಧ ತಲೆಯ ಮೇಲೆ ಪವಾರ ಚಪ್ಪಟೆಯಾದಂತಹ ಟೋಪಿಯನ್ನು ಧರಿಸಿರುವನು. ಒಂಟೆಯ ಬಾಯಿ ತೆಗೆದಿದ್ದು ಹಲ್ಲುಗಳು ಸಹ ಕಂಡುಬರುತ್ತವೆ.

ನಾಲ್ಕನೆಯದಾಗಿ ಮೇಲೆ ಹೇಳಿರುವ ಯುರೋಪಿಯನ್ನರನ್ನು ಸ್ವಾಗತಿಸಲು ಬಂದ ಹಾಗೆ ಸ್ಥಳೀಯ ವಾದ್ಯಗಾರರು ಇಬ್ಬರು ಇರುವರು. ಅವರಲ್ಲಿ ಮುಂದೆಯಿರುವವನು ತಮಟೆಯನ್ನು ಬಾರಿಸುತ್ತಾ. ಹಿಂದೆಯಿರುವನು ಕಹಳೆಯನ್ನು ಊದುತ್ತಿದ್ದಾನೆ. ಇವರ ಹಿಂದೆ ಅತ್ಯಂತ ಸುಂದರವಾಗಿ ಕುದುರೆಯ ಮೇಲೆ ಸ್ಥಳೀಯ ಪ್ರಮುಖನೆನ್ನಬಹುದಾದ ಇಬ್ಬರ ಚಿತ್ರಣವಿದೆ. ಇವರು ಸೊಂಟಪ್ಪಿ ಧರಿಸಿದ್ದಾರೆ. ಕುದುರೆಯ ಮೇಲೆ ಅಲಂಕೃತ ಬಟ್ಟೆಯ ತರಹದ ವಸ್ತ್ರವಿದೆ. ಈ ವ್ಯಕ್ತಿಯ ಬಲಗೈ ತುಂಡಾಗಿದೆ. ಇವನು ಧರಿಸಿರುವ ತಲೆಯ ಮೇಲಿನ ಟೋಪಿಯು ಚಪ್ಪಟೆಯಾಗಿದೆ. ಈ ಕುದುರೆ ಸವಾರನೂ ಸಹ ಉದ್ದನೆಯ ಅಂಗಿ ಧರಿಸಿರುವ ಹಾಗೆ ಶಿಲ್ಪಿಸಿದ್ದಾರೆ. ಕುದುರೆಯ ಕತ್ತಿನ ಮೇಲಿನ ಕೂದಲಿನ ಎಳೆಗಳನ್ನು ಸೂಕ್ಷ್ಮವಾಗಿ ಗಾರೆಯಲ್ಲಿ ಮೂಡಿಸಿದ್ದಾರೆ. ಈ ಕುದುರೆಯ ಹಿಂದೆ ಇನ್ನೊಬ್ಬ ಕುದುರೆ ಸಾವರನ್ನು ಇದ್ದು ಕುದುರೆಯು ಮುಂದಿನ ಎಡಗಾಲನ್ನು ಎತ್ತಿದೆ. ಕುದುರೆ ಸವಾರನ ಬಲಗೈಯು ಮುರಿದಿದ್ದು ಸವಾರನ ಸೊಂಟದ ಪಟ್ಟಿಯೊಂದಿಗೆ ಕತ್ತಿಯೂ ಸಹ ಕಾಣುತ್ತದೆ. ಬಹುಶಃ ಇವರುಗಳು ಸ್ಥಳೀಯರು ಹಾಗೂ ಮೇಲೆ ಹೇಳಿರುವ ಯುರೋಪಿಯನ್ನರನ್ನು ಸ್ವಾಗತಿಸಲು ಬಂದವರೆಂದು ಭಾವಿಸಬಹುದು. ಗೋಪುರದ ಎಡಭಾಗದ ಕೆಳಪಟ್ಟಿಯಲ್ಲಿ ಯುರೋಪಿಯನ್ ರಹದಾರಿ ಪತ್ರವೆನ್ನುವ ಹಾಗೆ ಇರುವ ವಸ್ತುವೊಂದನ್ನು ಹಿಡಿದು ಮುಂದೆ ಸಾಗುತ್ತಿದ್ದಾನೆ. ತಲೆಯ ಮೇಲೆ ಯುರೋಪಿಯನ್ ಹ್ಯಾಟ್ ಧರಿಸಿರುವನು. ಎಡಗೈಯಲ್ಲಿ ಲಗಾಮಿದ್ದು ಕೋಟಿನ ತರಹದ ಬಟ್ಟೆಯನ್ನು ಧರಿಸಿರುವುದು ಕಾಣಬರುತ್ತದೆ. ಇವನ ಮುಂದೆ ಇಬ್ಬರೂ ತುತ್ತೂರಿ (ಶಹನಾಯಿ) ಬಾರಿಸುತ್ತಾ ನಿಂತಿರುವ ವಾದ್ಯಗಾರರಿದ್ದಾರೆ. ಇವರ ಉಡುಪು ೧೭ ಅಥವಾ ೧೮ನೇ ಶತಮಾನದ ಯುರೋಪಿಯನ್ನರ ವಸ್ತ್ರಗಳಂತಿದ್ದು, ಅಗಲವಾದ ಸೊಂಟಪಟ್ಟಿಗಳನ್ನು ಧರಿಸಿದ್ದಾರೆ. ತಲೆ ಮೇಲೆ ಯುರೋಪಿಯನ್ ಮಾದರಿಯ ಹ್ಯಾಟುಗಳು ಇರುವುವು. ಮುಂದೆ ವಾದ್ಯಗಳನ್ನು ನುಡಿಸುತ್ತಾ ನಿಂತಿರುವ ಇಬ್ಬರೂ ಪುರುಷರಾಗಿದ್ದರು. ಇವರು ಧರಿಸಿರುವ ವಸ್ತ್ರಗಳು ಮತ್ತು ಎದೆಯ ಮೇಲಿರುವ ಭುಜದಿಂದ ಸೊಂಟದವರೆಗೂ ಇರುವ ಪಟ್ಟಿಗಳು ಮತ್ತು ನಿಂತಿರುವ ಭಂಗಿಯನ್ನು ಸೂಕ್ಷ್ಮವಾಗಿ ಅಭ್ಯಾಸಿಸಿದರೆ

ಯುರೋಪಿಯನ್ ವಾದ್ಯವೃಂದ ಎಂಬುದಾಗಿ ಹೇಳಬಹುದು. ಈ ವಾದ್ಯವೃಂದದ ಮುಂದೆ ಯುರೋಪಿಯನ್ ಸೈನ್ಯದ ಪ್ರಮುಖನೆಂದು ಹೇಳಬಹುದಾದ ವ್ಯಕ್ತಿಯೊಬ್ಬ ನಿಂತಿದ್ದಾನೆ. ಇವನಿಗೆ ಭುಜಕೀರ್ತಿಗಳು ಇವೆ. ಎದೆಯ ಭಾಗದಲ್ಲಿ ಎಡಬಲ ಭುಜದಿಂದ ಸೊಂಟದವರೆಗೂ ಇರುವ ಪಟ್ಟಿಗಳಿವೆ. ಇವನು ಧರಿಸಿರುವ ತಲೆಯ ಟೋಪಿಯು ಭಿನ್ನವಾಗಿದ್ದು ಸ್ವಲ್ಪ ಉದ್ದವಾಗಿದೆ. ಇವನ ಮುಂದೆ ಹತ್ತು ಜನ ಸೈನಿಕರು ಪಥ ಸಂಚಲನದಲ್ಲಿದ್ದಾರೆ. ಇವರುಗಳು ತಮ್ಮ ಎಡಗೈ ಮತ್ತು ಎಡಗಾಲುಗಳನ್ನು ಮುಂದಿಟ್ಟು ಸಾಗುತ್ತಿರುವಾ ಹಾಗೆ ತಮ್ಮ ಬಲಗೈಗಳಲ್ಲಿ ಕತ್ತಿಯನ್ನು ಹೊಂದಿರುವಂತಹ ಕೋವಿಗಳನ್ನು ಬಲಭುಜದ ಮೇಲಿಟ್ಟುಕೊಂಡು ಮುಂದೆ ಸಾಗುತ್ತಿದ್ದಾರೆ. ಇವರ ಸೊಂಟಪಟ್ಟಿಯ ಜೊತೆಗೆ ಕೋವಿ ಗುಂಡುಗಳ ಸಣ್ಣ ಚೀಲವೊಂದು ಇದ್ದಂತೆ ಇರುವುದು. ಇವರ ಹಿಂದೆ ಯುರೋಪಿಯನ್ ಕುದುರೆ ಸವಾರನು ಇದ್ದು ಸೊಂಟ ಪಟ್ಟಿಯೂ ಕಂಡುಬರುತ್ತದೆ. ಇವನೂ ಸಹ ಯುರೋಪಿಯನ್ ಹ್ಯಾಟನ್ನು ಧರಿಸಿ ಸೈನಿಕರ ಹಿಂದೆ ಸಾಗುತ್ತಿರುವನು.

ಗೋಪುರದ ಹಿಂದಿನ ಭಾಗದ ಕೆಳಪಟ್ಟಿಯಲ್ಲಿ ಯುರೋಪಿಯನ್ನರು ಶಿಕಾರಿ ಮಾಡುತ್ತಿರುವ ದೃಶ್ಯವೂ ಕೆತ್ತಲ್ಪಟ್ಟಿದೆ. ಒಬ್ಬ ಯುರೋಪಿಯನ್ ಕುದುರೆ ಸವಾರನು ಕಾಡು ಹಂದಿಯನ್ನು ಶಿಕಾರಿ ಮಾಡುತ್ತಿರುವ ಈ ದೃಶ್ಯದಲ್ಲಿ, ಕಾಡು ಹಂದಿಯ ಆಯಕಟ್ಟಿನ ಜಾಗದಲ್ಲಿ ಎರಡು ಬೇಟೆ ನಾಯಿಗಳು ಕಚ್ಚಿ ಹಿಡಿದಿರುವುದು ಈ ಕಾಡುಹಂದಿಯ ಮುಂಭಾಗದಲ್ಲಿ ಸ್ಥಳೀಯನೊಬ್ಬ ಅದನ್ನು ಭರ್ಜಿಯಿಂದ ಇರಿಯುತ್ತಿದ್ದಾನೆ. ಅಥವಾ ಆಕ್ರಮಣ ಮಾಡುತ್ತಿದ್ದಾನೆ. ಇಲ್ಲಿ ಯುರೋಪಿಯನ್ ಕುದುರೆ ಸವಾರ ಹುಲಿಬೇಟೆಯಾಡುತ್ತಿದ್ದು, ಆ ಹುಲಿಯು ಒಬ್ಬ ಮನುಷ್ಯನನ್ನು ಬಾಯಲ್ಲಿ ಹಿಡಿದಿದ್ದು, ಆ ಹುಲಿಯನ್ನು ಯುರೋಪಿಯನ್ ಸವಾರನು ಕೋವಿಯಿಂದ ಹೊಡೆಯುತ್ತಿರುವ ದೃಶ್ಯವನ್ನು ರೂಪಿಸಲಾಗಿದೆ. ಅದರಲ್ಲೇ ಯುರೋಪಿಯನ್ ವ್ಯಕ್ತಿಯೊಬ್ಬನಿದ್ದು ಅವನನ್ನು ಸ್ಥಳೀಯ ಸ್ತ್ರೀಯರು ಸುತ್ತುವರೆದಿರುವಂತೆ ಹಾಗೂ ಆ ವ್ಯಕ್ತಿ ಆ ಸ್ತ್ರೀಯರ ಕೈಗಳನ್ನು ಎಳೆಯುತ್ತಿರುವಂತೆ ಅಶ್ಲೀಲವೆನ್ನಿಸುವ ಗಾರೆಯ ಶಿಲ್ಪವೊಂದಿದೆ.[೩೮೨]

ಈ ಮೇಲಿನ ಯುರೋಪಿಯನ್ನರ ಗಾರೆ ಶಿಲ್ಪಗಳಿಂದ ಇವರುಗಳು ಫ್ರೆಂಚರೆಂದು ಹೇಳಬಹುದು. ಕಾರಣ ಬ್ರಿಟಿಶ್ ಮಿಲ್ಟ್ರಿಯ ಡ್ರಸ್ ಕೋಡ್ ಕಪ್ಪು ಟೋಪಿ ಕೆಂಪು ಕೋಟು ಧರಿಸಿದ್ದು, ಹಾಗೆಯೇ ಫ್ರೆಂಚರು ಕಪ್ಪು ಟೋಪಿ, ಹಸಿರು ಕೋಟು ಧರಿಸಿರುವುದು ಈ ಶಿಲ್ಪಗಳಲ್ಲಿ ಗುರುತಿಸಬಹುದು. ವಿಶೇಷವಾಗಿ ಕೆಂಪು ಉಡುಪನ್ನು ಧರಿಸಿದ ಸೈನಿಕರ ಶಿಲ್ಪಗಳನ್ನು ಈ ಗೋಪುರದಲ್ಲಿ ಕಾಣಬಹುದು. ಬಹು ಸಂಖ್ಯೆಯಲ್ಲಿ ಫ್ರೆಂಚರ ಶಿಲ್ಪಗಳನ್ನು ಈ ಗೋಪುರದಲ್ಲಿ ನೋಡಬಹುದಾಗಿದೆ.

ಉಬ್ಬು ಶಿಲ್ಪಗಳು ಹಂಪಿಯ ವಿಜಯ ವಿಠಲ ದೇವಾಲಯದಲ್ಲಿ ಇದ್ದು, ಅದರಲ್ಲಿ ಕುದುರೆ ವ್ಯಾಪಾರ ಮಾಡುತ್ತಿದ್ದ ಪೋರ್ಚುಗೀಸರ ಉಡುಗೆಯಾದ ಟೋಪಿ ಹಾಗೂ ಕೋಟಿನಿಂದ ಗುರುತಿಸಬಹುದು. ಹಾಗೆಯೇ ಪರ್ಷಿಯನ್ನರಾದ ಮುಸ್ಲಿಮರು, ಗಡ್ಡದಾರಿಗಳನ್ನು ಗುರುತಿಸುವುದರ ಮೂಲಕ ವಿದೇಶಿ ವ್ಯಾಪಾರ ಸಂಬಂಧಗಳನ್ನು ತಿಳಿಯಬಹುದಾಗಿದೆ. ಈ ರೀತಿಯ ಅನೇಕ ಶಿಲ್ಪಗಳನ್ನು ಹಂಪಿ ಪರಿಸರದ ಅನೇಕ ದೇವಾಲಯಗಳಲ್ಲಿ ಗುರುತಿಸಬಹುದು. ಅದರಲ್ಲಿ ಮಹಾನವಮಿ ದಿಬ್ಬ, ಹಜಾರ ರಾಮಸ್ವಾಮಿ ದೇವಾಲಯಗಳಲ್ಲಿ ಇದೇ ರೀತಿ ಶಿಲ್ಪಗಳನ್ನು ಗುರುತಿಸುವುದರ ಮೂಲಕ ನಾಯಕನಹಟ್ಟಿಯ ಒಳಮಠದ ಗೋಪುರದ ಮೇಲೆ ಇರುವ ಶಿಲ್ಪಗಳನ್ನು ಅದೇ ರೀತಿಯಾಗಿ ತೌಲನಿಕ ಅಧ್ಯಯನಕ್ಕೆ ಒಳಪಡಿಸಬಹುದಾಗಿದೆ. ಒಟ್ಟಾರೆಯಾಗಿ ಫ್ರೆಂಚರು ಇತರೆ ಯುರೋಪಿನ

ಕಂಪನಿಗಳಿಗಿಂತ ಹೆಚ್ಚು ಚಿತ್ರದುರ್ಗ ನಾಯಕರೊಂದಿಗೆ ಸಂಬಂಧವನ್ನು ಹೊಂದಿದ್ದರು ಎಂಬ ಅಂಶ ತಿಳಿದು ಬರುತ್ತದೆ. ಇವರು ಫ್ರಾನ್ಸ್ ಪ್ರಭುತ್ವದ ಹಿಡಿತದಲ್ಲಿ ಇದ್ದು, ಸ್ಥಳೀಯರೊಂದಿಗೆ ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿಯು ಅನುದಾನಗಳಿಗೆ, ಸಬ್ಸಿಡಿಗಳಿಗೆ ಹಾಗೂ ಸಾಲಗಳಿಗೆ ಹೀಗೆ ಎಲ್ಲ ವಿಧದಲ್ಲೂ ಫ್ರೆಂಚ್ ಸರಕಾರದ ಮೇಲೆ ಅವಲಂಬಿತವಾಗಿತ್ತು. ಆದರೆ ಫ್ರೆಂಚ್ ಸರ್ಕಾರವೇನೂ ಸಮರ್ಥವಾಗಿರಲಿಲ್ಲ. ಅದು ನಿರಂಕುಶವಾಗಿದ್ದುದಲ್ಲದೆ ಭ್ರಷ್ಟವೂ ಆಗಿದ್ದರಿಂದ ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿಯ ಆಡಳಿತವು ಶಿಥಿಲಗೊಂಡಿತು. ಮೇಲಾಗಿ ಅದಕ್ಕೆ ಮೊದಲಿನಿಂದ ಕೊನೆಯವರೆಗೆ ಆರ್ಥಿಕ ಕೊರತೆಯ ಸಮಸ್ಯೆ ಕಾಡಿತು.

**ಬ್ರಿಟಿಶರು**

ಭಾರತದೊಂದಿಗೆ ವ್ಯಾಪಾರವು ಐರೋಪ್ಯ ವರ್ತಕರಿಗೆ ಒಂದು ಮುಖ್ಯವಾದ, ಆದರೆ ಜಟಿಲವಾದ ಕಾರ್ಯವಾಗಿದ್ದಿತು. ಸಾಮಾನ್ಯವಾಗಿ ಈ ವ್ಯಾಪಾರಗಾರರು ಸ್ಥಾಪಿಸಿದ ಕಂಪನಿಗಳಿಗೆ ಅವರವರ ಸರಕಾರಗಳ ಬೆಂಬಲವಿದ್ದಿತು. ಸಾರತಃ ಪೈಪೋಟಿಯು ಈ ಬಿಡಿ ಕಂಪನಿಗಳ ನಡುವೆಯಲ್ಲ, ಆದರೆ ಅವುಗಳ ಸರಕಾರಗಳ ನಡುವೆ ಇದ್ದಿತು. ಭಾರತಕ್ಕೆ ಬಂದ ಪೋರ್ಚುಗೀಸ್ ಸಾಹಸತಂಡಗಳಿಗೆ ಪೋರ್ಚುಗೀಸ್ ದೊರೆಯೇ ಸಾಧನ ಸಜ್ಜು ಒದಗಿಸಿದ್ದ, ಹಣಕಾಸು ನೀಡಿದ್ದ. ಡಚ್ಚರೂ ಬ್ರಿಟಿಶರೂ ಸ್ಥಾಪಿಸಿದ್ದ ಕಂಪನಿಗಳಿಗೆ ಅವುಗಳ ಸರಕಾರಗಳು ಸನ್ನದುಗಳನ್ನು ನೀಡಿದ್ದವು. ಉದಾಹರಣೆಗೆ ಹದಿನೇಳನೆಯ ಶತಮಾನದ ಆರಂಭಿಕ ಕಾಲದಲ್ಲಿ ಸ್ಥಾಪಿತವಾದ ಬ್ರಿಟಿಶ್ ಈಸ್ಟ್ ಇಂಡಿಯಾ ಕಂಪನಿಗೆ ಬ್ರಿಟಿಶ್ ಸರಕಾರವು ಕ್ರಮೇಣ ಹೆಚ್ಚು ಹೆಚ್ಚು ಹಕ್ಕುಗಳನ್ನು ನೀಡಿತು. ಬ್ರಿಟಿಶ್ ಸರಕಾರ ಅನುಮೋದಿಸಿದ ಅನೇಕ ಸನ್ನದುಗಳು ಬ್ರಿಟನ್ನಿನಲ್ಲಿ ಈ ಕಂಪನಿಯ ಸ್ಥಾನವನ್ನು ಭದ್ರಪಡಿಸುವುದರಲ್ಲಿ ಪ್ರಮುಖ ಘಟನೆಗಳಾಗಿದ್ದವು. ೧೬೫೭ರ ಕ್ರಾಮ್‌ವೆಲ್ ಸನ್ನದು, ಈಸ್ಟ್ ಇಂಡಿಯಾ ಕಂಪನಿಗೆ ಯುದ್ಧ ಘೋಷಿಸುವ ಹಾಗೂ ಶಾಂತಿ ಒಪ್ಪಂದ ಮಾಡಿಕೊಳ್ಳುವ ಹಕ್ಕು ನೀಡಿದ ೧೬೬೧ರ ಸನ್ನದು, ನಾಣ್ಯಗಳನ್ನು ಟಂಕಿಸುವ, ಕೋರ್ಟ್ ಮಾರ್ಷಲ್ ನಡೆಸುವ, ತನ್ನ ಸ್ವಂತ ಸೈನ್ಯವನ್ನೂ ನೌಕಾದಳವನ್ನೂ ಇರಿಸಿಕೊಳ್ಳುವ ಹಕ್ಕನ್ನು ಕಂಪನಿಗೆ ನೀಡಿದ ೧೬೮೬ರ ಸನ್ನದು, ಇವುಗಳಲ್ಲಿ ಮುಖ್ಯವಾದವು. ೧೬೯೮ರಲ್ಲಿ ಖಾಸಗಿ ವರ್ತಕರ ವೃಂದವೊಂದು ಮತ್ತೊಂದು ಈಸ್ಟ್ ಇಂಡಿಯಾ ಕಂಪನಿಯನ್ನು ಸ್ಥಾಪಿಸಿತು. ಈ ಎರಡು ಕಂಪನಿಗೂ ೧೭೦೨ರಲ್ಲಿ ವಿಲೀನಗೊಂಡಾಗ ಈ ಕ್ರಮಕ್ಕೆ ಪಾರ್ಲಿಮೆಂಟು ೧೭೦೮ರಲ್ಲಿ ಒಂದು ಶಾಸನದ ಮೂಲಕ ಅಧಿಕೃತ ಮನ್ನಣೆ ನೀಡಿತು. ಅಂದಿನಿಂದಾಚೆಗೆ ಭಾರತದಲ್ಲಿ ಈ ಕಂಪನಿಯ ಚಟುವಟಿಕೆಗಳು ಶೀಘ್ರಗತಿಯಲ್ಲಿ ಬೆಳೆದವು.[೩೮೩] ಈ ಮೂಲಕ ಭಾರತದ ಅನೇಕ ಸಂಸ್ಥಾನಗಳೊಂದಿಗೆ ವ್ಯಾಪಾರದ ಒಪ್ಪಂದಗಳನ್ನು ಮಾಡುವುದರ ಮೂಲಕ ತಮ್ಮ ವ್ಯಾಪಾರದಲ್ಲಿ ಪ್ರಗತಿಯನ್ನು ಹೊಂದುವುದರ ಮೂಲಕ ಬಹುಕಾಲದವರೆಗೆ ವಸಾಹತು ಸ್ಥಾಪಿಸಲು ಸಾಧ್ಯವಾಯಿತು.

ಕಾರವಾರದಲ್ಲಿ ಇಂಗ್ಲಿಶ್ ಫ್ಯಾಕ್ಟರಿಯು ವಸಾಹತುಶಾಹಿ ಚರಿತ್ರೆಯಲ್ಲಿ ಸೂರತ್ ನಂತರ ಅಸ್ತಿತ್ವಕ್ಕೆ ಬಂದ ಒಂದು ಪ್ರಮುಖ ಫ್ಯಾಕ್ಟರಿಯಾಗಿದೆ. ಸರ್ ವಿಲಿಯಂ ಕೋರ್ಟೈನ್ ಕಂಪನಿಯ ಏಜೆಂಟ್, ಕ್ಯಾಪ್ಟನ್ ಐಡ್ಡೆಲ್‌ನು ೧೬೩೮ರಲ್ಲಿ ಕಾರವಾರದಲ್ಲಿ ಬಿಜಾಪುರದ ಆದಿಲ್‌ಶಾಹಿಗಳು ಗ್ರಾಂಟ್ ನೀಡಿದ ಜಾಗದಲ್ಲಿ ಫ್ಯಾಕ್ಟರಿ ಆರಂಭಿಸಿದನು. ೧೬೫೩ರಲ್ಲಿ ಇದು ಲಂಡನ್ ಈಸ್ಟ್ ಇಂಡಿಯಾ ಕಂಪನಿಯ ಆಸ್ತಿಯಾಯಿತು. ತರುವಾಯ ಮುಂಚಿನ ೩೦ ವರ್ಷಗಳ ಕಾಲ ಬಿರುಸಿನ ವ್ಯಾಪಾರಿ ಕೇಂದ್ರವಾಗಿ

ಬೆಳವಣಿಗೆಯಾಯಿತು. ಆನಂತರ ಪೋರ್ಚುಗೀಸ್ ಮತ್ತು ಸೋಂದಾ ಪ್ರಾಂತ್ಯದ ಸಾಮಂತರು ಇದನ್ನು ವಶಪಡಿಸಿಕೊಂಡರು. ಸೋಂದಾ ಪ್ರಾಂತ್ಯದ ಉತ್ಕೃಷ್ಟ ಗುಣಮಟ್ಟದ ಕರಿಮೆಣಸು, ದಖ್ಖನ್ನಿನ ಕೆಲವು ಪ್ರಮುಖ ಹತ್ತಿ ಸಾಮಗ್ರಿಗಳು, ಶ್ರೀಗಂಧದ ಮರ, ಏಲಕ್ಕಿ, ಲವಂಗ, ದಾಲ್ಚಿನ್ನಿ ಮೊದಲಾದವುಗಳು ವಿಕ್ರಯಿಸಲ್ಪಡುತ್ತಿತ್ತು.

ಪೋರ್ಚುಗೀಸರಿಂದ ಮುಚ್ಚಲ್ಪಟ್ಟ ಈ ಫ್ಯಾಕ್ಟರಿ ಮತ್ತೆ ೧೬೮೫ರಲ್ಲಿ ಪುನರ್ ತೆರೆಯಲ್ಪಟ್ಟಿತ್ತು. ಕೇವಲ ೩ ವರ್ಷಗಳ ಅವಧಿಯಲ್ಲಿ ಇಲ್ಲಿ ವ್ಯಾಪಾರವು ಈ ಮೊದಲಿನಂತೆ ಬೃಹತ್ ಪ್ರಮಾಣದಲ್ಲಿ ನಡೆಯಿತು. ಅನಂತರ ೪೦ ವರ್ಷಗಳ ಅವಧಿಯಲ್ಲಿ ನಿರಂತರವಾಗಿ ಮತ್ತೆ ಪೋರ್ಚುಗೀಸರಿಂದ ಹಾಗೂ ಸೋಂದಾದ ಸಾಮಂತರಿಂದ ವಿರೋಧ ಎದ್ದು ಬಂತು. ಡಚ್ಚರಿಂದ ಉಂಟಾದ ಕರಿಮೆಣಸಿನ ವ್ಯಾಪಾರಕ್ಕೆ ತಡೆ ಪ್ರಕ್ರಿಯಿಂದ ಕರಿಮೆಣಸು ವ್ಯಾಪಾರ ಕುಸಿಯಿತು. ೧೬೯೭ರಲ್ಲಿ ಮರಾಠರು ಕಾರವಾರ ಫ್ಯಾಕ್ಟರಿಯ ಮೇಲೆ ದಾಳಿ ನಡೆಸಿದರು. ಮರಾಠರು ಬೇರೆ ಬೇರೆ ಅವಧಿಯಲ್ಲಿ ೧೬೬೫, ೧೬೭೪ ಮತ್ತು ೧೭೧೫ರಲ್ಲಿ ಕರಾವಾರ ಫ್ಯಾಕ್ಟರಿಯ ಮೇಲೆ ದಾಳಿ ನಡೆಸುತ್ತಾರೆ. ಸೋಂದಾ ಪ್ರಾಂತ್ಯದ ಸಾಮಂತರಾಜ ಬಸವಲಿಂಗ (೧೬೯೫–೧೭೪೫) ಹಳೆಯ ಕೋಟೆಯನ್ನು ನೆಲಸಮ ಮಾಡಿ, ಕಾಳಿ ನದಿಯ ಉತ್ತರದ ದಡದಲ್ಲಿ ಚಿತ್ತಕೂಟ, ಸದಾಶಿವಘಡದಲ್ಲಿ ಹೊಸ ಕೋಟೆ ನಿರ್ಮಿಸಿದನು. ಇಲ್ಲಿಯೇ ಇದ್ದ ಹಳೆಯ ಫ್ಯಾಕ್ಟರಿಯನ್ನು ಬಂಧಿಖಾನೆಯಾಗಿ ಪರಿವರ್ತಿಸಿದನು.

ಜಾರ್ಜ್ ಟೈಲರ್, ಫ್ಯಾಕ್ಟರಿಯ ಏಜೆಂಟ್ ಆಗಿದ್ದಾಗ ಆತ ಶತ್ರುಗಳನ್ನು ಪ್ರಚೋದಿಸಿ ದಾಳಿ ಮಾಡಲು ಸಹಕರಿಸುತ್ತಿದ್ದ. ಬಸವ ಲಿಂಗಪ್ಪ (ಸೋಂದಾದ ಸಾಮಂತರಾಜ)ನ ಶತ್ರುತ್ವದಿಂದ ಫ್ಯಾಕ್ಟರಿಯು ೧೭೨೦ರಲ್ಲಿ ಮುಚ್ಚಲ್ಪಟ್ಟಿತ್ತು. ಪುನಃ ೧೭೫೦ರಲ್ಲಿ ತೆರೆಯಲ್ಪಟ್ಟು ೨ ವರ್ಷ ಕಾರ್ಯಾರಂಭ ಮಾಡಿತ್ತು. ೧೭೫೨ರಲ್ಲಿ ಪೋರ್ಚುಗೀಸರು ಮತ್ತೆ ವಶಪಡಿಸಿಕೊಂಡು ಏಕಸ್ವಾಮ್ಯವನ್ನು ಘೋಷಿಸಿದರು. ಕೆನರಾ ಪ್ರಾಂತ್ಯದಲ್ಲಿ ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಬ್ರಿಟಿಶ್ ಈಸ್ಟ್ ಇಂಡಿಯಾ ಕಂಪನಿಯು ಮಧ್ಯ ಪ್ರವೇಶವನ್ನು ಆರಂಭಿಸಿದ ಮೇಲೆ ಕಾರವಾರ ಫ್ಯಾಕ್ಟರಿ ಮತ್ತೆ ಜೀವಕಳೆ ಹೊಂದಿತ್ತು. ೧೭೯೯ರ ನಂತರ ತನ್ನ ಪಾತ್ರವನ್ನು ನಿರ್ಣಾಯಕವಾಗಿ ರೂಪೀಕರಿಸಿತು.

ಕಾರವಾರದ ಇಂಗ್ಲಿಶ್ ಏಜೆಂಟ್ ಆಗಿದ್ದ ರುಸ್ಟಾನ್ ಸೂರತಿನ ಇಂಗ್ಲಿಶ್ ಫ್ಯಾಕ್ಟರಿ ಕೌನ್ಸಿಲಿಗೆ ಪದೇ ಪದೇ ಮನವಿ ಮಾಡಿದ ಕಾರಣ ಕಾರವಾರದ ಫ್ಯಾಕ್ಟರಿಯನ್ನು ಅಲ್ಲಿಂದ ಹುಬ್ಬಳ್ಳಿಗೆ ವರ್ಗಾಯಿಸಲು ಆದೇಶ ನೀಡಲಾಯಿತು. ಈ ಘಟನೆಗೆ ಮುಖ್ಯ ಕಾರಣ ಕಾರವಾರದಲ್ಲಿ ವ್ಯಾಪಾರಿಗಳಿಗೆ ವಿವಿಧ ರೀತಿಯ ಕಿರುಕುಳ ಮತ್ತು ತೊಂದರೆಗಳನ್ನು ನೀಡಲಾಗುತ್ತಿತ್ತು. ಆದಾಯವೂ ಅಲ್ಲಿ ಇಳಿಮುಖಗೊಂಡಿತ್ತು. ಆದಾಯದ ಕೊರತೆಯಿಂದ ಇತರೆ ಹಲವಾರು ಸಮಸ್ಯೆಗಳು ಎದುರಾದವು ಎಂದು ಜಾದುನಾಥ್ ಸರ್ಕಾರ್‌ರವರು ೧೬೬೩ರಲ್ಲಿ ಕಾರವಾರದ ಫ್ಯಾಕ್ಟರಿಯ ದುಃಸ್ಥಿತಿಯ ಬಗ್ಗೆ ವಿವರಿಸುತ್ತಾರೆ.

ನಾಯಕರಿಗೂ ಬ್ರಿಟಿಶ್‌ರಿಗೂ ನೇರ ಸಂಪರ್ಕದ ದಾಖಲೆಗಳು ಸಿಗುವುದಿಲ್ಲ. ಪರೋಕ್ಷವಾಗಿ ಪೋರ್ಚುಗೀಸ್ ಮತ್ತು ಮೈಸೂರು ಸಂಬಂಧ ಹಾಗೂ ತಿರುವಂಕೂರಿನ ಆಡಳಿತಗಾರರ ಮೂಲಕ ಇವರ ಸಂಬಂಧವನ್ನು ಗುರುತಿಸಬಹುದು.

ಹೈದರಾಲಿ ಚಿತ್ರದುರ್ಗ ಕೋಟೆಯನ್ನು ವಶಪಡಿಸಿಕೊಂಡು ನಾಯಕರ ಕುಟುಂಬವನ್ನು ಶ್ರೀರಂಗಪಟ್ಟಣಕ್ಕೆ ಕರೆದ್ಯೊಯ್ದನು. ನಂತರ ಕೋಟೆ ಸಂಪೂರ್ಣವಾಗಿ ಹೈದರನ ವಶವಾಯಿತು.

ಹಾಗ ಹೈಬತ್ ಜಂಗ್ ಎಂಬ ಅಧಿಕಾರಿಯ ಮೂಲಕ ಚಿತ್ರದುರ್ಗವನ್ನು ನಿಯಂತ್ರಿಸುತ್ತಿದ್ದನು. ಕೊನೆಯ ಯುದ್ಧದಲ್ಲಿ ಮದಕರಿ ನಾಯಕನು ಸತ್ತ ಬಳಿಕ ಅವನ ಕುಟುಂಬದ ಒಬ್ಬನಾದ ದೊಡ್ಡ ಮದಕರಿನಾಯಕ ಹೈದರನ ಪಕ್ಷ ಸೇರಿದ. ಇವನು ೫೦೦೦-೬೦೦೦ ಸೈನ್ಯದ ಮುಖ್ಯಸ್ಥನಾಗಿ ತಿಂಗಳಿಗೆ ೩೦೦ ರೂ.ಗಳ ಭಕ್ಷಿಸ್ ಅನ್ನು ಪಡೆಯುತ್ತಿದ್ದನು. ಹಾಗೂ ಹತ್ತು ಕುದುರೆಗಳನ್ನು ನೀಡಿದ್ದನು. ವೆಲ್ಲೂರು ಮತ್ತು ತಿರುವಂಕೂರುಗಳ ಮೇಲೆ ಯುದ್ಧ ಮಾಡಿದನು ಹೈದರನ ಪರವಾಗಿ. ಹೈದರ್ ಮತ್ತು ಟಿಪ್ಪುವಿನ ಸೇವಕನಾಗಿ ಚಿತ್ರದುರ್ಗದ ದೊಡ್ಡ ಮದಕರಿನಾಯಕ ಸೇವೆ ಸಲ್ಲಿಸಿದ ಸಂಗತಿ ಜಂಪಣ್ಣನ ಕೈಫಿಯತ್ತಿನ ಆಧಾರದ ಮೇಲೆ ತಿಳಿಯುತ್ತವೆ. ನಂತರ ೧೭೯೯ರ ಟಿಪ್ಪುವಿನ ಕೊನೆಯ ಯುದ್ಧದ ನಂತರ ಬ್ರಿಟಿಶರು ಟಿಪ್ಪು ಸುಲ್ತಾನನ ಸೇವೆಯಲ್ಲಿ ಇದ್ದ ಅಧಿಕಾರಿಗಳಿಗೆ ಪಿಂಚಣಿಯನ್ನು ನಿಗದಿಪಡಿಸಿದ್ದರು. ಅದರಲ್ಲಿ

| | | | | |
|---|---|---|---|---|
| ದೊಡ್ಡ ಮದಕರಿ ನಾಯಕನಿಗೆ | - | ೧೦೯೦ | - | ವರಹಗಳು |
| ದೊಡ್ಡ ಮದಕರಿ ನಾಯಕನ | | | | |
| ಮಗ ಜಂಪಣ್ಣನಿಗೆ | - | ೩೯೦ | - | ವರಹಗಳು |
| ಕಾಟಪ್ಪ | - | ೧೯೦ | - | ವರಹಗಳು |
| ಬೊಮ್ಮರಾಜ | - | ೫೯೦ | - | ವರಹಗಳು |
| ರಾಮವ್ವ | - | ೫೯೦ | - | ವರಹಗಳು |
| ಸಬರಿ ಭರಮಪ್ಪನಿಗೆ | - | ೫೯೦ | - | ವರಹಗಳು |
| **ಒಟ್ಟು** | | **೧೬೦೪೦** | | **ವರಹಗಳು** |

ಎಂದು ನಿಗದಿಪಡಿಸಲಾಗಿತ್ತು. ಇವರೆಲ್ಲರೂ ಚಿತ್ರದುರ್ಗ ನಾಯಕರ ಕುಟುಂಬಕ್ಕೆ ಸೇರಿದವರು ಆಗಿದ್ದರು. ಹಾಗೆಯೇ ದಿವಾನ್ ಪೂರ್ಣಯ್ಯ ಇವರ ಅಧೀನದಲ್ಲಿ ದೊಡ್ಡ ಮದಕರಿನಾಯಕನಿಗೆ ಹರಿಹರ ಸೀಮೆಯ ಸೇವೆಯನ್ನು ಕಲ್ಪಿಸಿಕೊಟ್ಟಿದ್ದನು. ಆದರೆ ಅವರಿಬ್ಬರಿಗೆ ವೈಯಕ್ತಿಕವಾಗಿ ಸಣ್ಣ ಕಲಹ ನಡೆದು ಅಧಿಕಾರದಿಂದ ಹೊರ ಬರುತ್ತಾನೆ. ಮುಂದೆ ಹೊಳಲ್ಕೆರೆಯಲ್ಲಿ ತಮ್ಮ ಕುಟುಂಬದ ಸದಸ್ಯರು ವಾಸಿಸುತ್ತಾರೆ. ಸ್ವಲ್ಪ ದಿನಗಳ ನಂತರ ಚಳ್ಳಕೆರೆಯ ದೊಡ್ಡೇರಿಯಲ್ಲಿ ಬಂದು ನೆಲೆಸಿ ಸಾವನ್ನಪ್ಪುತ್ತಾನೆ. ನಂತರ ಜಂಪಣ್ಣ ನಾಯಕನಿಗೆ ಪೂರ್ಣಯ್ಯನು ಬೆಂಗಳೂರಿನಲ್ಲಿ ೪೦೦೦ ಸೈನಿಕರ ನಾಯಕತ್ವವನ್ನು ವಹಿಸಿಕೊಡುತ್ತಾನೆ. ಮತ್ತು ಬ್ರಿಟಿಶರ ಅಧೀನದಲ್ಲಿ ಇದ್ದ ಮೈಸೂರು ಸಂಸ್ಥಾನದಿಂದ ತಿಂಗಳ ೮೧೬೦ ವರಹಗಳ ವಾರ್ಷಿಕ ಆದಾಯವನ್ನು ಪಡೆಯುತ್ತಿದ್ದ ಮಾಹಿತಿ ಸಿಗುತ್ತದೆ.[೩೮೫]

ಸಾಕಿಯವರ ಮೇಕಿಂಗ್ ಹಿಸ್ಟರಿ ೨ನೇ ಸಂಪುಟದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಪಾಳೆಯಗಾರ ಕುಟುಂಬಗಳಿಗೆ ಬ್ರಿಟಿಶರು ಘೋಷಿಸಿದ ಸವಲತ್ತುಗಳ ಬಗ್ಗೆ ಜೆ.ಸಿ.ದುವಾ ವಿವರವಾಗಿ ಬರೆಯುತ್ತಾರೆ. ೧೪ ಪಾಳೆಯಗಾರರಿಗೆ ಕೊಡಲಾಗುತ್ತಿದ್ದ ಪಿಂಚಣಿ ಎಷ್ಟು ನಿರಂತರವಾಗಿತ್ತೆಂದರೆ 'ಸ್ವಾತಂತ್ರ್ಯ' ಬಂದ ಎರಡು ದಶಕಗಳ ನಂತರ ೧೯೬೯ರಲ್ಲಿ ತಹಸೀಲ್ದಾರ್ ಕಛೇರಿಗೆ ಭೇಟಿ ಕೊಟ್ಟಾಗ ಪಾಳೆಯಗಾರರ ವಂಶಸ್ಥರು ಸರಕಾರದಿಂದ ಇನ್ನೂ ಪಿಂಚಣಿ ನೀಡುತ್ತಿದ್ದ ವಿಷಯ ತಿಳಿಯಿತು ಎಂದು ಬುಕಾನನ್

ದಾಖಲಿಸುತ್ತಾನೆ. ಎಲ್ಲ ಪಾಳೆಯಗಾರರಿಗೆ ಅವರವರ ಆಸ್ತಿಪಾಸ್ತಿಯನ್ನು ಹಿಂದಿರುಗಿಸಲಾಯಿತು ಮತ್ತು ಬಂಗಾಳದ ಜಮೀನುದಾರರಿಗೆ ರೂಪಿಸಿದ ನೀತಿಗಳನ್ನು ಹೇರಲಾಯಿತು. ಒಂದು ನಿರ್ದಿಷ್ಟ ಮೊತ್ತವನ್ನು ಬಾಡಿಗೆಯಾಗಿ ನೀಡಬೇಕಿತ್ತು. ಅಥವಾ ಕಪ್ಪಕಾಣಿಕೆಯನ್ನು ಒಪ್ಪಿಸಬೇಕಿತ್ತು. ಆದರೆ ಜನರ ಮೇಲೆ ಇವರಿಗೆ ಯಾವುದೇ ನ್ಯಾಯಾಧಿಕಾರ ನೀಡಲಿಲ್ಲ. ಜನರ ರಕ್ಷಣೆಗೆ ಶಿರಸ್ತೇದಾರರನ್ನು ಸಂಬಳದ ಮೇಲೆ ಸರಕಾರವೇ ನೇಮಿಸಿತು. ರೆವಿನ್ಯೂ ಮತ್ತು ಪೋಲೀಸ್ ಅಧಿಕಾರಿಗಳ ಖರ್ಚನ್ನು ಪಾಳೆಯಗಾರರು ನೋಡಿಕೊಳ್ಳಬೇಕಿತ್ತು. ಮೊದಲಿನ ಆದಾಯಕ್ಕೆ ಹೋಲಿಸಿದರೆ ಈಗವರಿಗೆ ಆಗುತ್ತಿದ್ದ ಲಾಭ ನಾಲ್ಕರಲ್ಲಿ ಒಂದರಷ್ಟಾದರೂ ದೇಶದ ಪರಿಸ್ಥಿತಿ ಸುಧಾರಿಸಿದಂತೆ ಆದಾಯ ಬಹಳಷ್ಟು ಹೆಚ್ಚಾಗುತ್ತದೆ.

ಹಳೆಯ ಮೈಸೂರಿನಲ್ಲಿ ಎರಡು ರೀತಿಯಿಂದ ವಸಾಹತುಶಾಹಿ ಊಳಿಗಮಾನ್ಯತೆಯ ಹೊಂದಿಕೊಂಡಿತು. ಒಂದೆಡೆ ಮೈಸೂರು ಸಾಮ್ರಾಜ್ಯದ ಹೃದಯ ಭಾಗದಲ್ಲಿ ಪಾಳೆಯಗಾರರ ನಿರ್ನಾಮವಾಗಿಬಿಟ್ಟಿತ್ತು. ಉಳಿದ ಕೆಲವೇ ಪಾಳೆಯಗಾರರಿಗೆ ಪಿಂಚಣಿ ನೀಡಿ ಹಳ್ಳಿಗಳ ಪಟೇಲರನ್ನಾಗಿ ಮಾಡಲಾಯಿತು. ಚಿತ್ರದುರ್ಗದ ನಾಯಕ ಮನೆತನದ ಯಾರನ್ನು ಪಟೇಲರನ್ನಾಗಿ ನೇಮಿಸಲಾಯಿತು ಮತ್ತೊಂದೆಡೆ ತಮಿಳುನಾಡು ಮತ್ತು ಆಂಧ್ರಪ್ರದೇಶದ ಗಡಿಗಳಿಗೆ ಹೊಂದಿಕೊಂಡ ಭಾಗಗಳಲ್ಲಿ ಪಾಳೆಯಗಾರರ ಪದ್ಧತಿ ಇನ್ನೂ ಶಕ್ತವಾಗಿತ್ತು. ಕಾರಣ ಟಿಪ್ಪು ಸುಲ್ತಾನ ಅವರ ವಿರುದ್ಧ ಹೋರಾಡಲಾರಂಭಿಸಿದ್ದು ತುಂಬ ತಡವಾಗಿ, ಈ ಪಾಳೆಯಗಾರರು ಜಮೀನ್ದಾರರಾದರು ಮತ್ತು ರೈತ ಕೂಲಿಯವರಿಂದ ತೆರಿಗೆ ವಸೂಲಿ ಮಾಡುತ್ತಿದ್ದರು.[೩೮೬]

**೬.೭. ಚಿತ್ರದುರ್ಗದ ನಗರೀಕರಣ ಮತ್ತು ಪೇಟೆ-ಪಟ್ಟಣಗಳ ಬೆಳವಣಿಗೆ**

*** ಚಿತ್ರದುರ್ಗದ ನಗರೀಕರಣ**

ಭಾರತದಲ್ಲಿ ನಗರೀಕರಣ ಪ್ರಕ್ರಿಯೆಯನ್ನು ಪ್ರಾಗೈತಿಹಾಸ ಕಾಲದ ನವಶಿಲಾಯುಗ ಕಾಲದಿಂದಲೂ ಕಾಣಬಹುದು. ಈ ಪ್ರಕ್ರಿಯೆಯು ಸ್ಪಷ್ಟವಾಗಿ ಗುರುತಿಸಲ್ಪಡುವುದು ಸಿಂಧೂ ಸಂಸ್ಕೃತಿಯಲ್ಲಿಯೇ. ಈ ಸಂಸ್ಕೃತಿಗೆ ಸೇರಿದ ನೆಲೆಗಳ ಉತ್ಖನನಗಳಿಂದ ನಮಗೆ ಅನೇಕ ನಗರಗಳು ಉಪಲಬ್ಧವಾಗಿದ್ದು, ಇವುಗಳು ತಮ್ಮ ಎಲ್ಲ ಅಗತ್ಯಗಳನ್ನು ಪೂರೈಸಿಕೊಳ್ಳುವಂತಹ ಘಟಕಗಳಾಗಿದ್ದವೆಂಬುದು ತಿಳಿದುಬರುತ್ತದೆ. ಸಿಂಧೂ ಕಣಿವೆ ಸಂಸ್ಕೃತಿಯ ನೆಲೆಗಳ ನಗರ ರಚನಾ ವಿಧಾನ ಮತ್ತು ಶೈಲಿಯು ಮುಂದೆ ಆದಿ ಮತ್ತು ಚಾರಿತ್ರಿಕ ಕಾಲದಲ್ಲಿಯೂ ಮುಂದುವರೆದು ಮಧ್ಯಕಾಲೀನ ಯುಗದಲ್ಲಿ ಪ್ರಬುದ್ಧವಾಗಿ ಬೆಳೆಯಿತು. ಇಲ್ಲಿಯವರೆಗೆ ಭಾರತದ ವಿವಿದೆಡೆಗಳಲ್ಲಿ ನಡೆದಂತಹ ಉತ್ಖನನದಲ್ಲಿ ಅನೇಕ ನಗರಗಳು ಪತ್ತೆಯಾಗಿವೆ.[೩೮೭]

ಭಾರದ ನಗರೀಕರಣ ಕುರಿತಾಗಿ ವಿಜಯ್‌ಕುಮಾರ್ ಠಾಕೂರ್ ಅವರು 'ಅರ್ಬನೈಜೇಷನ್ ಇನ್ ಏನ್ಸಿಯಂಟ್ ಇಂಡಿಯಾ' ಕೃತಿಯಲ್ಲಿ ನಗರಗಳ ಲಕ್ಷಣಗಳನ್ನು ತಿಳಿಸುವಾಗ ಸುಮಾರು ಹದಿನಾರು ಅಂಶಗಳನ್ನು ಪ್ರಸ್ತಾಪಿಸಿದ್ದಾರೆ.[೩೮೮] ಮುಖ್ಯವಾಗಿ ನಗರ ರೂಪಗೊಳ್ಳುವುದು ರಾಜಕೀಯ ಆಡಳಿತ ಕೇಂದ್ರಗಳಾಗಿ, ಧಾರ್ಮಿಕ ಕೇಂದ್ರಗಳಾಗಿ, ಶೈಕ್ಷಣಿಕ ಕೇಂದ್ರಗಳಾಗಿ, ಪ್ರವಾಸಿ ಕೇಂದ್ರಗಳಾಗಿ ಹಾಗೂ ವಾಣಿಜ್ಯ-ವ್ಯಾಪಾರ ಕೇಂದ್ರಗಳಾಗಿ. ನಗರದ ಅರ್ಥ ವ್ಯವಸ್ಥೆಯ ಕುರಿತು ಚರ್ಚಿಸುವಾಗ ನಗರವಾಸಿಗಳ ಬದುಕು, ಆರ್ಥಿಕ ರೂಪಾಂತರಗಳು, ವ್ಯಾಪಾರ-ವಾಣಿಜ್ಯ, ಕುಶಲಕರ್ಮಿಗಳು ಮತ್ತು ಕೈಗಾರಿಕೆ, ವರ್ತಕ ಸಂಘಗಳ ಕಾರ್ಯ ಚಟುವಟಿಕೆಗಳು, ಸಮುದಾಯಗಳ ವಲಸೆ ಪ್ರವೃತ್ತಿ, ಬಂಡವಾಳಗಾರರು ಮುಂತಾದ ವಿಚಾರಗಳು ಮುಖ್ಯವೆನಿಸುತ್ತವೆ.[೩೮೯]

ಚಿತ್ರದುರ್ಗ ಪ್ರದೇಶದ ನಗರೀಕರಣ ಪ್ರಕ್ರಿಯೆಯನ್ನು ಕುರಿತು ಚರ್ಚಿಸುವಾಗ ಈ ಪ್ರದೇಶವು ಪೌರಾಣಿಕ ಹಿನ್ನೆಲೆಯಿಂದಲೂ ಪ್ರಾಮುಖ್ಯತೆಯನ್ನು ಪಡೆದ ಪ್ರದೇಶವಾಗಿತ್ತು ಎಂಬುವುದು ಈಗಾಗಲೇ ತಿಳಿದಂತಹ ವಿಷಯವಾಗಿದೆ. ಇದು ಪ್ರಾಚೀನ ಕಾಲದಲ್ಲಿ ಚಿನ್ಮೂಲಾದ್ರಿನಾಡೆಂದೂ, ಪೌರಾಣಿಕ ಕಾಲದಲ್ಲಿ ಹಿಡಿಂಬ ಪಟ್ಟಣವೆಂದೂ, ಮೌರ್ಯರ ಕಾಲದಲ್ಲಿ ಕುಂತಳ ಸೀಮೆಗೆ ಒಳಪಟ್ಟಿದ್ದಾಗಿತ್ತು. ಶಾತವಾಹನರ ಕಾಲದಲ್ಲಿ ಚಂದ್ರವಳ್ಳಿಯು ಪ್ರಮುಖ ವ್ಯಾಪಾರಿ ಕೇಂದ್ರವಾಗಿತ್ತೆಂದು ಪುರಾತತ್ವಜ್ಞರ ಉತ್ಖನನದ ಫಲವಾಗಿ ತಿಳಿದು ಬಂದಿದ್ದು, ಕದಂಬರ ಕಾಲದ ಆಡಳಿತ ಶಾಖೆಯಾಗಿಯೂ, ಚಾಲುಕ್ಯರ ಕಾಲದಲ್ಲಿ ಸೂಳ್ಗಲ್ ಎಂದೂ, ಹೊಯ್ಸಳರ ಕಾಲದಲ್ಲಿ ಚಿಮ್ಮತ್ತೂರು ಪಟ್ಟಣ, ಬ್ರಹ್ಮಾಪುರಿಗಿರಿ, ಪೆರುಮಾಳೆಪುರ ಎಂದೂ, ರಾಷ್ಟ್ರಕೂಟರ-ನೊಳಂಬರ ಕಾಲದಲ್ಲಿ ಸೂಲಗಲ್-೭೦ ಎಂದೂ, ನೊಳಂಬವಾಡಿ ೩೨೦೦೦ ನಾಡೆಂದೂ, ವಿಜಯನಗರ ಮತ್ತು ಪಾಳೆಯಗಾರರ ಕಾಲದಲ್ಲಿ ಬೆಂಮತ್ತೆನಕಲ್ಲು, ಚಿಮ್ಮತ್ತನೂರು, ಬೆಂಮತ್ತೂರುಕಲ್ಲು, ಬೆಮ್ಮತ್ತನಕಲ್ಲು, ಚಿಂನ್ಮನಗಿರಿದುರ್ಗ (ಕ್ರಿ.ಶ.೧೭೦೦), ಶಿಂಗನಗಿರಿದುರ್ಗ (ಕ್ರಿ.ಶ.೧೭೧೪), ತೆಲುಗು ಶಾಸನದಲ್ಲಿ ಚಿತ್ತಕಲ್ಲು ದುರ್ಗ ಎಂದೂ, ಕೃಷ್ಣದೇವರಾಯನ ದಿನಚರಿಯಲ್ಲಿ ಚಿಮಟದುರ್ಗ, ೧೫ನೇ ಶತಮಾನದ ವಿಜಯನಗರದ ವೀರಮಲ್ಲಣ್ಣ ಒಡೆಯನು 'ಮಲ್ಲರಾಯನದುರ್ಗ' ಎಂದೂ, ಬುಕನನ್ ಛತ್ರಕಲ್ ಎಂದೂ, ಬ್ರಿಟಿಶರು ಚಿಟಲ್‌ಡ್ರುಗ್ ಎಂದೂ, ಚಿತ್ರದುರ್ಗದ ಆಯಗಾರರ ವಿವರದಲ್ಲಿ ಚಿನ್ಮೂಲಗಿರಿದುರ್ಗ ಎಂದೂ ಹೈದರಾಲಿ, ಟಿಪ್ಪುಸುಲ್ತಾನರ ಕಾಲದಲ್ಲಿ ಪರೋಕ್ ಯಾಬ್ ಹಿಸ್ಸಾರ್, ಪರೋಕಾಬಾದ್ ಎಂದೂ, ಮೈಸೂರು ಒಡೆಯರ ಕಾಲದಲ್ಲಿ ಚಿತ್ರದುರ್ಗ ಎಂಬ ಹೆಸರುಗಳಿಂದ ಚಿತ್ರದುರ್ಗವನ್ನು ಸಂಬೋಧಿಸುತ್ತಿದ್ದರು.[೩೯೬]

ಮೌರ್ಯರ ಕಾಲಕ್ಕೆ ಚಿತ್ರದುರ್ಗದ ನಗರ ವ್ಯವಸ್ಥೆಯ ಬಗ್ಗೆ ಚರ್ಚಿಸುವಾಗ ಅಶೋಕನ ಶಾಸನ ಹಾಗೂ ಮೌರ್ಯರ ನಾಣ್ಯಗಳಿಂದ ಕೆಲವು ಪ್ರದೇಶಗಳನ್ನು ಧಾರ್ಮಿಕ ಹಾಗೂ ವ್ಯಾಪಾರಿ ಕೇಂದ್ರಗಳೆಂದು ಗುರುತಿಸಬಹುದಾಗಿದೆ. ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಹಲವಾರು ನಗರ ಪ್ರದೇಶಗಳು ಕರ್ನಾಟಕದ ನಗರ ಚರಿತ್ರೆಯ ವ್ಯಾಪ್ತಿಯನ್ನು ವಿಸ್ತರಿಸುವಂತೆ ಮಾಡಿದವು. ಅಶೋಕನ ಸಾಮ್ರಾಜ್ಯ ಕರ್ನಾಟಕದ ಬಹುಭಾಗವನ್ನು ಆವರಿಸಿತ್ತು ಎನ್ನುವುದು ಶಾಸನಗಳಿಂದ ಸ್ಪಷ್ಟವಾಗಿದೆ. ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ಧಾಪುರ ಮತ್ತು ಜಟಿಂಗರಾಮೇಶ್ವರ; ರಾಯಚೂರು ಜಿಲ್ಲೆಯ ಮಸ್ಕಿ; ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉದೇಗೋಳಂ; ಕೊಪ್ಪಳ ಜಿಲ್ಲೆಯ ಗವಿಮಠ, ಪಾಲ್ಕುಗುಂಡು ಹಾಗೂ ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಸನ್ನತಿಯಲ್ಲಿ ದೊರೆತ ಅಶೋಕನ ಶಾಸನಗಳು ಕೆಲವೊಂದು ಪಟ್ಟಣಗಳ ಕುರಿತು ಮಾಹಿತಿ ನೀಡುತ್ತವೆ. ಮೌರ್ಯರ ಆಳ್ವಿಕೆಯ ಸಂದರ್ಭದಲ್ಲಿ ಬನವಾಸಿ, ಮಸ್ಕಿ, ತೆಕ್ಕಲಕೋಟೆ, ಸನ್ನತಿ, ಜಟಿಂಗರಾಮೇಶ್ವರ, ಬ್ರಹ್ಮಗಿರಿ, ಚಂದ್ರವಳ್ಳಿ ಮೊದಲಾದವುಗಳು ಪ್ರಮುಖ ಪಟ್ಟಣಗಳಾಗಿದ್ದವು.[೩೯೧]

ಶಾತವಾಹನರ ಆಳ್ವಿಕೆಯ ಸಂದರ್ಭದಲ್ಲಿನ ಕೆಲವು ನಗರ ಪ್ರದೇಶಗಳೆಂದರೆ ಚಂದ್ರವಳ್ಳಿ, ಮಸ್ಕಿ, ಸನ್ನತಿ, ಬನವಾಸಿ, ಇಂಡಿ, ಬಾದಾಮಿ, ಆಳಗುಂದ, ಹೀರಕಲ್, ವಡಗಾಂವ್ ಮಾಧವಪುರ, ಹಲಶಿ, ಹಾನಗಲ್, ಕಾರವಾರ ಮುಂತಾದವು. ಇವುಗಳಲ್ಲಿ ಚಂದ್ರವಳ್ಳಿಯನ್ನು ಶಾತವಾಹನರ ಆಳ್ವಿಕೆಗೆ ಸಂಬಂಧಿಸಿದಂತೆ ಪ್ರಮುಖ ಕೇಂದ್ರವನ್ನಾಗಿ ಮಾಡಿಕೊಂಡಿದ್ದರೆಂಬ ಅಂಶ ಶಾಸನಗಳಿಂದ ತಿಳಿದುಬರುತ್ತದೆ. ಚಂದ್ರವಳ್ಳಿಯಲ್ಲಿ ನಡೆದ ಭೂ ಸಂಶೋಧನೆಯಿಂದ ಶಾತವಾಹನರ ಆಳ್ವಿಕೆಯ ಮೇಲೆ ಹಾಗೂ ಚಂದ್ರವಳ್ಳಿಯ ನಗರ ವ್ಯವಸ್ಥೆಯ ಮೇಲೆ ಹೆಚ್ಚಿನ ಅಧ್ಯಯನ ಸಾಧ್ಯವಾಯಿತು. ಶಾತವಾಹನರ

ಸಮಕಾಲೀನವಾಗಿ ಚಂದ್ರವಳ್ಳಿಯಲ್ಲಿ ರೋಮನ್ ನಾಣ್ಯಗಳು ಹಾಗೂ ಮಡಿಕೆ ಚೂರುಗಳು ದೊರೆತಿದ್ದು, ಈ ಕಾಲದಲ್ಲಿ ರೋಮನ್ನರೊಂದಿಗೆ ಚಂದ್ರವಳ್ಳಿ ವ್ಯಾಪಾರ ಸಂಬಂಧವನ್ನು ಹೊಂದಿತ್ತು ಎಂಬುದು ತಿಳಿದುಬರುತ್ತದೆ. ಶಾತವಾಹನರ ಸಮಕಾಲೀನ ಸಾಮಂತ ಚುಟು ಅರಸುಮನೆತನ ಹಾಗೂ ಶಾತವಾಹನರ ಹಲವು ವಸ್ತುಗಳು ಹಾಗೂ ನಾಣ್ಯಗಳು ಹೇರಳವಾಗಿ ಚಂದ್ರವಳ್ಳಿಯಲ್ಲಿ ದೊರೆತ ಹಿನ್ನೆಲೆಯಲ್ಲಿ ಚಂದ್ರವಳ್ಳಿಯು ಶಾತವಾಹನರ ರಾಜಧಾನಿ ಅಥವಾ ರಾಜಧಾನಿಗಳಲ್ಲಿ ಒಂದು ಆಗಿರಬೇಕೆಂಬ ತೀರ್ಮಾನಕ್ಕೆ ಬರಲಾಗಿದೆ.[೩೯೨]

ಪ್ರಾಚೀನ ಕಾಲದಿಂದಲೂ ವ್ಯಾಪಾರಿ ಕೇಂದ್ರವಾಗಿ ಗುರುತಿಸಿಕೊಂಡು ಬಂದ ಚಿತ್ರದುರ್ಗವು ಮೌರ್ಯ ಮತ್ತು ಶಾತವಾಹನರ ಕಾಲದ ತರುವಾಯ ಕದಂಬರ ಆಡಳಿತದ ವ್ಯಾಪ್ತಿಗೆ ಸೇರಿದಂತಹ ಪ್ರದೇಶವಾಗಿದ್ದು, ಕದಂಬ ಶ್ರೇಷ್ಠ ದೊರೆ ಎನಿಸಿಕೊಂಡ ಮಯೂರಶರ್ಮನು ಚಂದ್ರವಳ್ಳಿಯಲ್ಲಿ ಶಾಸನವನ್ನು ಕೆತ್ತಿಸಿದ್ದನು. ಈ ಶಾಸನದಲ್ಲಿ ಹಲವು ರಾಜರುಗಳನ್ನು ಸೋಲಿಸಿದ ವಿಜಯದ ಸಾಧನೆ ನೆನಪಿಗಾಗಿ ಕೆರೆಯನ್ನು ಕಟ್ಟಿಸಿದ್ದರ ಬಗ್ಗೆ ಉಲ್ಲೇಖವಿದೆ. ಚುಟು ವಂಶದ ಪ್ರಾಂತೀಯ ರಾಜಧಾನಿಯಾಗಿದ್ದ ಈ ಚಂದ್ರವಳ್ಳಿಯು ಕದಂಬರ ಕಾಲದಲ್ಲಿಯೂ ಪ್ರಮುಖ ಪಟ್ಟಣವಾಗಿ ಇದ್ದಿರಬೇಕೆಂದು ಈ ಶಾಸನದಿಂದ ಸೂಚಿತವಾಗಿದೆ. ಅಲ್ಲದೆ ಇವರ ಕಾಲದಲ್ಲಿನ ಅನೇಕ ಶಾಸನಗಳು ಈ ಪ್ರದೇಶದಲ್ಲಿ ದೊರಕಿವೆ.[೩೯೩]

ಕಲ್ಯಾಣದ ಚಾಲುಕ್ಯ ವಂಶದಲ್ಲಿ ಸರ್ವಶ್ರೇಷ್ಠನಾದ ಆರನೆ ವಿಕ್ರಮಾದಿತ್ಯನು (ಕ್ರಿ.ಶ.೧೦೭೬–೧೧೨೬) ಐವತ್ತು ವರ್ಷಗಳವರೆಗೆ ದಕ್ಷತೆಯಿಂದ ಆಳ್ವಿಕೆ ನಡೆಸಿ ಕರ್ನಾಟಕಕ್ಕೆ ಶಾಶ್ವತ ಕೀರ್ತಿಯನ್ನು ತಂದನು. ಚಿತ್ರದುರ್ಗ ಜಿಲ್ಲೆಯಲ್ಲಿ ಇವನ ಶಾಸನಗಳಿಗೇನೂ ಕೊರತೆಯಿಲ್ಲ; ಸಾಕಷ್ಟಿವೆ. ಚಾಲುಕ್ಯ ಮತ್ತು ಪಲ್ಲವ ಮನೆತನಗಳಲ್ಲಿ ನಿರಂತರವಾಗಿ ನಡೆಯುತ್ತಿದ್ದ ಕಾದಾಟದಿಂದ ಎರಡು ರಾಜ್ಯಗಳ ಗಡಿಭಾಗಗಳಲ್ಲಿದ್ದ ಚಿತ್ರದುರ್ಗದ ವಿವಿಧ ಪ್ರದೇಶಗಳಲ್ಲಿ ಅಶಾಂತಿ ಏರ್ಪಟ್ಟಿದ್ದಿತೆಂಬುದಾಗಿ ಹೇಳಬಹುದು. ಆದರೆ ಚಿತ್ರದುರ್ಗ ಜಿಲ್ಲೆಯಲ್ಲಿ ದೊರೆತಿರುವ ಬಾದಾಮಿಯ ಚಾಲುಕ್ಯರಿಗೆ ಸಂಬಂಧಿಸಿದ ಕೆಲವು ಶಾಸನಗಳಿಂದ ಚಿತ್ರದುರ್ಗ ಭಾಗವು ಈ ಕಾಲಾವಧಿಯಲ್ಲಿ ಚಾಲುಕ್ಯರ ಆಳ್ವಿಕೆಗೆ ಸೇರಿತ್ತೆಂದು ತಿಳಿದುಬರುತ್ತದೆ. ಇಲ್ಲಿ ರಾಜಕೀಯ ಅಂಶಗಳಿಗೆ ಮಾತ್ರ ತಿಳಿಸುವಂತ ಶಾಸನಗಳು ಹೆಚ್ಚಾಗಿದ್ದರೂ ಸಾಮಾನ್ಯವಾಗಿ ಪರಸ್ಪರ ವಿನಿಮಯ ಪ್ರಕ್ರಿಯೆಗಳು ನಡೆಯುತ್ತಿದ್ದವು ಎಂಬುದನ್ನು ಮರೆಯುವಂತಿಲ್ಲ.[೩೯೪]

ಚಿತ್ರದುರ್ಗ ಪ್ರದೇಶದಲ್ಲಿ ರಾಷ್ಟ್ರಕೂಟರ ಶಾಸನಗಳು ಬಹುಸಂಖ್ಯೆಯಲ್ಲಿ ದೊರೆಯದಿದ್ದರೂ ಈ ಭೂ ಭಾಗ ಸುಮಾರು ಕ್ರಿ.ಶ.೭೯೮ರಿಂದ ಕ್ರಿ.ಶ.೯೮೨ರವರೆಗೆ ಅವರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ತಿಳಿದುಬರುತ್ತದೆ. ಮುಖ್ಯವಾಗಿ ೨ನೇ ಅಮೋಘವರ್ಷನ ಕಾಲಘಟ್ಟದಲ್ಲಿ ಬರೆಯಿಸಲ್ಪಟ್ಟ ಇಸಾಮುದ್ರ ಶಾಸನದಲ್ಲಿ ಚಿತ್ರದುರ್ಗವು ಪ್ರಮುಖ ವಿದ್ಯಾಕೇಂದ್ರಗಳಲ್ಲೊಂದಾಗಿದ್ದು ಹಾಗೂ ವಿದ್ಯಾರ್ಥಿ, ಗುರುಗಳ ಪಾಲನೆಗೆ ದತ್ತಿಬಿಟ್ಟ ವಿಚಾರಗಳನ್ನು ತಿಳಿಯಬಹುದಾಗಿದೆ.

ಚಿತ್ರದುರ್ಗ ಪ್ರದೇಶದಲ್ಲಿ ರಾಷ್ಟ್ರಕೂಟ, ಚಾಲುಕ್ಯ ಮನೆತನಗಳ ಸಾಮಂತ ಮನೆತನಗಳಾದ ನೊಳಂಬ, ಸೇವುಣ ಅರಸು ಮನೆತನಗಳು ಆಳ್ವಿಕೆಯನ್ನು ಮಾಡಿದ್ದು ಇವರಿಗೆ ನೊಳಂಬವಾಡಿ ಅಥವಾ ನೊಳಂಬಾಡಿ ೩೨೦೦೦ನಾಡು ಎಂಬ ಹೆಸರಿದ್ದಿತು. ಈ ಜಿಲ್ಲೆಯಲ್ಲಿ ನೊಳಂಬ ಸಂತತಿಗೆ ವಿಶೇಷವಾದ ಮಹತ್ವವಿದೆ. ಅತೀ ಹೆಚ್ಚು ಶಾಸನಗಳು ಈ ಪ್ರದೇಶದಲ್ಲಿ ಕಂಡುಬಂದಿದ್ದು ಈ ಸಂತತಿಯ ಮುಂದೆ ಸೂಚಿಸಿದ ಸಂಖ್ಯೆಯನ್ನು ಆಧರಿಸಿ ಇದೊಂದು ಆಡಳಿತ ಘಟಕವಾಗಿತ್ತೆಂದು

ತಿಳಿದುಬರುತ್ತದೆ. ಅಲ್ಲದೇ ಇವರು ಸ್ಥಳೀಯ ಕೇಂದ್ರಗಳಿಗೆ ಹೆಚ್ಚಿನ ಮಾನ್ಯತೆಯನ್ನು ನೀಡಿರುವುದು ಗೋಚರಿಸುವಂತಿದೆ.[೩೯೫]

ಯಾದವರು ಅಥವಾ ಸೇವುಣರು ದೇವಗಿರಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ಮಾಡಿದರು. ಚಿತ್ರದುರ್ಗ ಪ್ರದೇಶವು ಅವರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಹೇಳಬಹುದಾದರೆ ಇಲ್ಲಿ ಅವರ ಆಳ್ವಿಕೆಗೆ ಸಂಬಂಧಿಸಿದಂತೆ ಸುಮಾರು ಇಪ್ಪತ್ತೆರಡು ಶಾಸನಗಳು ಕಂಡುಬಂದಿದ್ದು, ಹರಿಹರ, ಭಾನುವಳ್ಳಿ, ಅಣಜಿ, ಹೆಮ್ಮನ ಬೇತೂರು ಶಾಸನಗಳಲ್ಲಿ ಹೆಚ್ಚು ದಾನ ಪಡೆದ ಉಲ್ಲೇಖಗಳು ತಿಳಿದುಬಂದಿವೆ.[೩೯೬]

ಹೊಯ್ಸಳರ ಕಾಲದಲ್ಲಿ ಚಿತ್ರದುರ್ಗ ಬಹುಮುಖ್ಯ ಪಟ್ಟಣವಾಗಿತ್ತು ಎಂದು ತಿಳಿಸಬಹುದಾದ ಸುಮಾರು ಐವತ್ತಕ್ಕೂ ಹೆಚ್ಚು ಶಾಸನಗಳು ಇವೆ. ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ 'ಬೆಮ್ಮತೂರು ಪಟ್ಟಣ' ಎಂದು ಕರೆಯಲಾಗುತ್ತಿತ್ತೆಂದು ತಿಳಿಸುತ್ತವೆ. ಕೋಗುಂಡಿ ಶಾಸನದಲ್ಲಿ ಮಹಾವಡ್ಡ ವ್ಯವಹಾರಿ ಮಲ್ಲಯೋಗಪ್ಪ ಎಂಬುವನು ಬಾಚೇಶ್ವರ ದೇವಾಲಯ ನಿರ್ಮಿಸಿದರ ಬಗ್ಗೆ ಅರುಹುತ್ತದೆ. ಸಿದ್ದಾಪುರ ಶಾಸನವು ವಿಜಯಗಿರಿ ಪಟ್ಟಣವನ್ನು ನಿರ್ಮಿಸಿದರ ಬಗ್ಗೆ ತಿಳಿಸುತ್ತಿದ್ದು, ಕುಂದವಾಡ ಗ್ರಾಮದ ಶಾಸನವು ಹೊಯ್ಸಳರ ಕಾಲದ ಚಿತ್ರದುರ್ಗ ಪ್ರದೇಶದ ಜನತೆಯ ಆರ್ಥಿಕ ಜೀವನಕ್ಕೆ ಹಿಡಿದ ಕನ್ನಡಿಯಂತಿದೆ. ಕುಂದವಾಡದಲ್ಲಿ ರಾಣಿಯಾದ ಅಭಿನವ ಕೇತಲದೇವಿಯು ಪ್ರತಿ ಬುಧವಾರ ಸಂತೆ ನಡೆಯುವಂತೆ ಏರ್ಪಟ್ಟಿಸಿದಳಂತೆ. ಸಂತೆಗಳು ವಾರಕ್ಕೊಮ್ಮೆ ಸೇರುತ್ತಿದ್ದವು, ಅವುಗಳನ್ನು ವಾರದ ಸಂತೆ ಎಂಬುದಾಗಿ ಕರೆಯಲಾಗುತ್ತಿತ್ತು. ಸಂತೆಯ ಮೇಲೆ ಉಸ್ತುವಾರಿಯನ್ನು ನೋಡಿಕೊಳ್ಳಲು ಪಟ್ಟಣಸ್ವಾಮಿ ಎಂಬ ಅಧಿಕಾರಿಗಳನ್ನು ನೇಮಿಸಿರುತ್ತಿದ್ದರು. ಈ ಕಾಲದಲ್ಲಿ ಹೆಚ್ಚು ಪ್ರಚಲಿತವಾಗಿದ್ದ ಅಯ್ಯಾವೊಳೆ ಐನೂರ್ವರೆಂಬ ವರ್ತಕ ಸಂಘ ಪ್ರಮುಖ ಸಂಘಟಿತ ಸಂಸ್ಥೆಯಂತೆ ಕಂಡುಬರುತ್ತದೆ. ಅಲ್ಲದೆ ಸೆಟ್ಟಿಯರು, ಸೆಟ್ಟಿಗುತ್ತರು, ಅಂಕಕಾರರು, ಎಂಟನಾಡಪದಿನರ್ವರು, ಗವರೆಗಳು, ಗಾತ್ರಿಗಳು, ಬೀರರು, ಬೀರ ವಣಿಗರು, ಗಂದಿಗರು, ಗಾವುಂಡರು, ಈ ರೀತಿಯಾಗಿ ಮೊದಲಾದವರು ಐಯ್ಯಾವೊಳೆ ಐನೂರ್ವರು ಸಂಘದ ಸದಸ್ಯರಾಗಿದ್ದರು. ಈ ಪ್ರದೇಶದಲ್ಲಿಯೂ ತಮ್ಮ ವ್ಯಾಪಾರ ಶಾಖೆಯನ್ನು ಹೊಂದಿದ್ದರ ಬಗ್ಗೆ ಶಾಸನದ ಉಲ್ಲೇಖವಿದೆ.[೩೯೭]

ರಾಷ್ಟ್ರಕೂಟರಿಂದ ಹೊಯ್ಸಳರವರೆಗಿನ ಅವಧಿಯಲ್ಲಿ ವ್ಯಾಪಾರ, ವಾಣಿಜ್ಯ, ವರ್ತಕರು ಮತ್ತು ವರ್ತಕರ ಸಂಘಗಳು ನಗರ ಅರ್ಥ ವ್ಯವಸ್ಥೆಯಲ್ಲಿ ವಹಿಸಿದಷ್ಟೇ ಮಹತ್ವದ ಪಾತ್ರವನ್ನು ಕುಶಲಕರ್ಮಿಗಳೂ ವಹಿಸಿದ್ದರು. ಕಮ್ಮಾರರು, ಬಡಗಿಗಳು, ಅಕ್ಕಸಾಲಿಗರು, ಶಿಲ್ಪಿಗಳು ಮೊದಲಾದವರು ಅಂದಿನ ಪ್ರಮುಖ ಕುಶಲಕರ್ಮಿಗಳಾಗಿದ್ದರು. ಅವರೆಲ್ಲರೂ ತಮ್ಮ ವೃತ್ತಿ ಸಂಘಗಳನ್ನು ಕಟ್ಟಿಕೊಂಡಿದ್ದರು. ಪ್ರಜಾಹಿತ ಕಾರ್ಯಗಳಲ್ಲಿ ಅತ್ಯಂತ ಆಸಕ್ತನಾಗಿದ್ದ ಪೆರುಮಾಳ ದೇವನು ಕ್ರಿ.ಶ.೧೨೮೫ರಲ್ಲಿ ಚಿತ್ರದುರ್ಗದ ಬ್ರಹ್ಮಪುರಿ ಬೆಟ್ಟವನ್ನು ಪೆರುಮಾಳೆಪುರವೆಂದು ನಾಮಕರಣ ಮಾಡಿದ ಬಗ್ಗೆ ಹಿಡಿಂಬೇಶ್ವರ ದೇವಾಲಯದ ಮುಂದಿರುವ ಶಾಸನದಲ್ಲಿ ಈ ಬ್ರಹ್ಮಪುರಿಯ ನಿರ್ವಹಣೆಗೆ ಕುರುಬ ಕಾಳೇಯನ ಕೆರೆಯನ್ನೂ, ಅಲ್ಲಿನ ಭೂಮಿಯನ್ನು ದಾನ ನೀಡಿ ವಿದ್ಯಾ ಕೇಂದ್ರದ ಪೋಷಕನಾಗಿದ್ದರ ಬಗ್ಗೆ ತಿಳಿಸುತ್ತದೆ.[೩೯೮] ಈ ಎಲ್ಲ ಅಂಶಗಳನ್ನು ಗಮನಿಸಿದರೆ ಹೊಯ್ಸಳರ ಕಾಲದಲ್ಲಿ ಚಿತ್ರದುರ್ಗವು ಒಂದು ವ್ಯಾಪಾರಿ ಕೇಂದ್ರ, ವಿದ್ಯಾಕೇಂದ್ರ, ಒಂದು ಪಟ್ಟಣವಾಗಿ ಬೆಳೆದಿದ್ದರ ಬಗ್ಗೆ ಖಚಿತವಾದ ಗುರುತುಗಳು ಕಂಡುಬರುತ್ತವೆ.

ಮಧ್ಯಕಾಲೀನ ಚರಿತ್ರೆಯಲ್ಲಿ ವಿಜಯನಗರ ಅರಸರ ಆಳ್ವಿಕೆಯು ಸ್ಥಿತ್ಯಂತರಗೊಂಡ ನಗರೀಕರಣ ಪ್ರಕ್ರಿಯೆಗೆ ಗಟ್ಟಿಯಾದ ತಳಹದಿಯನ್ನು ರೂಪಿಸಿದ ಕಾಲಘಟ್ಟವಾಗಿದೆ. ಚಿತ್ರದುರ್ಗವು ವಿಜಯನಗರದ ಅಧೀನದಲ್ಲಿದ್ದು ಕೆಲವು ಪ್ರತಿನಿಧಿಗಳಿಂದ ಆಡಳಿತಕ್ಕೆ ಒಳಗಾದ ಪ್ರದೇಶವಾಗಿತ್ತು. ಇವರ ಕಾಲದಲ್ಲಿ ಈ ಪ್ರದೇಶವನ್ನು ಬೆಮ್ಮತ್ತನಕಲ್ಲು[೩೯೯] ಎಂದು ಕರೆಯುತ್ತಿದ್ದರು. ವಿಜಯನಗರದ ಅರಸರು ನೇರವಾಗಿ ಹಾಗೂ ಪರೋಕ್ಷವಾಗಿಯೂ ಆಡಳಿತ ಕೇಂದ್ರವಾಗಿ ಮಾಡಿಕೊಂಡಿದ್ದು ಇವರ ಆಳ್ವಿಕೆಯ ಸಮಯದಲ್ಲಿ ಅತೀ ಹೆಚ್ಚು ಅಗ್ರಹಾರಗಳಿಗೆ ದಾನ, ದತ್ತಿ ನೀಡಿದ ಕುರುಹುಗಳು ಕಂಡುಬರುತ್ತದೆ. ಅಲ್ಲದೆ ಚಿತ್ರದುರ್ಗ ಕೋಟೆಯ ನಿರ್ಮಾಣದ ಮೊದಲ ಹಂತವು ಈ ಕಾಲಕ್ಕಾಗಲೇ ನಿರ್ಮಾಣಗೊಂಡಿತ್ತು. ವಿಜಯನಗರದ ಅರಸರ ಆಳ್ವಿಕೆಯ ಕಾಲದಲ್ಲಿ ಕೃಷಿಯೇತರ ಚಟುವಟಿಕೆಗಳು ಗಟ್ಟಿಯಾಗಿ ಕಾಣಿಸಿಕೊಳ್ಳಲಾರಂಭಿಸಿದವು. ನಗರದ ಅರ್ಥ ವ್ಯವಸ್ಥೆಯು ಒಂದು ಮುಖ್ಯ ಆರ್ಥಿಕ ಪರಿವರ್ತನೆಯಾಗಿ ರೂಪುಗೊಳ್ಳತೊಡಗಿತು. ಕೈಗಾರಿಕೆ ಮತ್ತು ವ್ಯಾಪಾರ-ವಾಣಿಜ್ಯಗಳಲ್ಲಿ ಹೆಚ್ಚು ಹಣವನ್ನು ವಿನಿಯೋಗಿಸಲಾಯಿತು. ಮಾರುಕಟ್ಟೆ ಕೇಂದ್ರಿತವಾದ ನಗರಗಳು ರಚನೆಯಾದವು. ಸ್ಥಳೀಯ ಗುಡಿ ಕೈಗಾರಿಕೆ ಹಾಗೂ ಕಸುಬುಗಳಿಗೆ ಹೆಚ್ಚಿನ ಪ್ರಾಶಸ್ತ್ಯ ದೊರೆತ ಕಾಲ ಇದಾಗಿದ್ದು, ವಿದೇಶಿಯರ ಆಗಮನದಿಂದಾಗಿ ಈ ಕಾಲಘಟ್ಟದ ನಗರ ಹಾಗೂ ಆರ್ಥಿಕ ವಲಯದಲ್ಲಿ ಪಲ್ಲಟಗಳನ್ನು ಗುರುತಿಸಬಹುದಾಗಿದೆ.

ಕೃಷಿಯೇತರ ಉತ್ಪಾದನೆಯ ಹೆಚ್ಚಳ, ಸಂತೆ ಮತ್ತು ಮಾರುಕಟ್ಟೆ ಕೇಂದ್ರಿತ ವ್ಯಾಪಾರ ಒಳನಾಡು ಹಾಗೂ ಸಾಗರೋತ್ತರ ವಾಣಿಜ್ಯ ವಹಿವಾಟಿನ ವೃದ್ಧಿಗೆ ಕಾರಣವಾಯಿತು. ಸಂತೆಗಳು ಮತ್ತು ಮಾರುಕಟ್ಟೆಗಳು ಬಹುಬೇಗ ದೊಡ್ಡ ವ್ಯಾಪಾರ ಕೇಂದ್ರವಾಗಿ ಬೆಳೆದವು ಹಾಗೂ ಅವುಗಳ ಸುತ್ತ ನೂತನ ಪಟ್ಟಣಗಳು ಮತ್ತು ನಗರ ಕೇಂದ್ರಗಳು ಹುಟ್ಟಿಕೊಂಡವು. ಇದು ನಗರ ಅರ್ಥ ವ್ಯವಸ್ಥೆಯನ್ನು ಬೆಳೆಸಿತು. ಇವರ ಕಾಲದಲ್ಲಿ ಬಂದ ಪೋರ್ಚುಗೀಸ್ ವರ್ತಕರು ಇವರ ಪ್ರಾಂತ್ಯ ಕೇಂದ್ರಗಳೊಂದಿಗೆ ನೇರವಾದ ವ್ಯಾಪಾರ ಒಪ್ಪಂದಗಳೊಂದಿಗೆ ವ್ಯಾಪಾರ ವಹಿವಾಟನ್ನು ಮುಂದುವರೆಸಿದರು.[೪೦೦]

ನಾಯಕರ ಕಾಲದಲ್ಲಿಯೇ ಚಿತ್ರದುರ್ಗ ಪ್ರದೇಶವು ಹೆಚ್ಚು ನಗರ ಸ್ವರೂಪವನ್ನು ಪಡೆದುಕೊಂಡಿತ್ತು ಎಂದರೆ ತಪ್ಪಾಗಲಾರದು. ಪಾಳೆಯಗಾರರು ಸ್ಥಳೀಯ ಕೇಂದ್ರಗಳನ್ನು ತಮ್ಮ ಆಡಳಿತ ಕೇಂದ್ರಗಳಾಗಿ ರೂಪಿಸಿಕೊಂಡ ಮೇಲೆ ಆ ಸ್ಥಳಕ್ಕೆ ಆಡಳಿತ ನೆಲೆಯಲ್ಲಿ ನಗರ ರೂಪವನ್ನು ನೀಡಿದರು. ಬಹುಮುಖ್ಯವಾಗಿ ಚಿತ್ರದುರ್ಗವು ಭೌಗೋಳಿಕವಾಗಿ ಸುತ್ತಲೂ ಬೆಟ್ಟ-ಗುಡ್ಡಗಳಿಂದ ಆವೃತವಾದ ಪ್ರದೇಶವಾಗಿದ್ದು, ನೈಸರ್ಗಿಕವಾಗಿ ಸಂದಿಸುವ ಸ್ಥಳದಲ್ಲಿ ನಗರವು ರಚನೆಯಾಗಿದೆ. ವಿಜಯನಗರ ನಂತರದ ಉತ್ತರ ಕರ್ನಾಟಕ ಹಾಗೂ ದಕ್ಷಿಣ ಕರ್ನಾಟಕಗಳನ್ನು ಪರಸ್ಪರ ಸಂಬಂಧ ಕಲ್ಪಿಸುವ ಮುಖ್ಯ ರಸ್ತೆಯಲ್ಲಿ ಈ ಸ್ಥಳ ಗುರುತಿಸಿಕೊಂಡಿದ್ದರಿಂದ ಇಲ್ಲಿಗೆ ಹೆಚ್ಚಿನ ವರ್ತಕ ಸಮುದಾಯಗಳು ಬಂದು ನೆಲೆನಿಂತರು. ಸ್ಥಳೀಯ ಹಾಗೂ ಅಂತರ್‌ರಾಜ್ಯ ಹಾಗೂ ವಿದೇಶಿಯರ ಆಗಮನದಿಂದಾಗಿ ಚಿತ್ರದುರ್ಗ ಪ್ರದೇಶ ಒಂದು ಜಿಲ್ಲಾ ಕೇಂದ್ರ ಸ್ಥಳವಾಗಿ ರೂಪಗೊಳ್ಳಲು ಸಾಧ್ಯವಾಯಿತು. ಗ್ರಾಮೀಣ ಪ್ರದೇಶಗಳಿಂದ ಆವೃತವಾಗಿರುವ ಚಿತ್ರದುರ್ಗ ಪ್ರದೇಶವು ಅತೀ ವೇಗವಾಗಿ ನಗರ ರೂಪವನ್ನು ಪಡೆದುಕೊಂಡಿತು. ಇದಕ್ಕೆ ನಾಯಕರ ಸಾಮಾಜಿಕ ಕಾರ್ಯಗಳ ಪಾತ್ರ ಬಹುಮುಖ್ಯವಾದುದು. ಉದಾ: ನಾಯಕರು ಚಿತ್ರದುರ್ಗದ ಸುತ್ತಲೂ ಅತೀ ಹೆಚ್ಚು ಕೆರೆಗಳನ್ನು ನಿರ್ಮಿಸಿದರು. ಇವುಗಳಲ್ಲಿ ಮಲ್ಲಾಪುರದ ಕೆರೆ,

ಭರಮಸಾಗರದ ಕೆರೆ, ಭೀಮಸಮುದ್ರದ ಕೆರೆ, ಸೆಂಗೆನಹಳ್ಳಿ ಕೆರೆ, ಸಿದ್ಧಮ್ಮನಹಳ್ಳಿ ಕೆರೆ, ಗೊನೂರು ಕೆರೆ, ಶಿವಗಂಗದ ಕೆರೆ, ಜಮಾಪುರದ ಕೆರೆ, ಮುದ್ದಾಪುರದ ಕೆರೆ, ಬಿದರಿಕೆರೆ ಕೆರೆ ಹೀಗೆ ಅನೇಕ ಕೆರೆಗಳನ್ನು ನಿರ್ಮಿಸಿ ಇವುಗಳ ಮೂಲಕ ಅತೀ ಹೆಚ್ಚು ಕೃಷಿ ಉತ್ಪನ್ನಗಳನ್ನು ಬೆಳೆದು, ರೈತರ ಉತ್ಪನ್ನಗಳಿಗೆ ಮಾರುಕಟ್ಟೆಯನ್ನು, ಸಂತೆಗಳನ್ನು ಚಿತ್ರದುರ್ಗದಲ್ಲಿ ಕಲ್ಪಿಸಿದರು. ಇದರ ಪರಿಣಾಮವಾಗಿ ರಾಗಿಪೇಟೆ, ಚಿಕ್ಕಪೇಟೆ, ದೊಡ್ಡಪೇಟೆ ಮುಂತಾದ ಪ್ರದೇಶಗಳು ಪ್ರಮುಖ ವ್ಯಾಪಾರ ಕೇಂದ್ರವಾಗಿ ಬೆಳೆದವು. ಮಾರುಕಟ್ಟೆಗಳನ್ನು ರಚಿಸುವುದರ ಮೂಲಕ ವಿದೇಶಿ ವರ್ತಕರ ವ್ಯಾಪಾರಕ್ಕೆ ಅನುವು ಮಾಡಿಕೊಟ್ಟಿದ್ದರಿಂದ ಇದು ವ್ಯಾಪಾರಿ ಕೇಂದ್ರವಾಗಿ ಬೆಳೆಯಲು ಕಾರಣವಾಯಿತು. ಚಿತ್ರದುರ್ಗದ ನಾಯಕರು ಚಿತ್ರದುರ್ಗವನ್ನು ಕೋಟೆಯಿಂದಾವೃತವಾದ ಪಟ್ಟಣವನ್ನಾಗಿ ಕಟ್ಟಿದರು. ಚಿತ್ರದುರ್ಗವು ಮಿಲಿಟರಿ ದೃಷ್ಟಿಯಿಂದ ಮಹತ್ವವನ್ನು ಪಡೆದುಕೊಂಡ ಪಟ್ಟಣ. ಚಿತ್ರದುರ್ಗವು ಭೂ ವೈಜ್ಞಾನಿಕ ಮಹತ್ವ ಪಡೆದ ಭೌಗೋಳಿಕ ಪರಿಸರ ಹಾಗೂ ಪಟ್ಟಣವು ಬೆಟ್ಟದ ಸಾಲು, ಏಳುಸುತ್ತಿನ ಕೋಟೆ, ಜಲಾಶಯ, ಆಗಳು, ದೇವಾಲಯ, ಮಠಮಂದಿರ ಮುಂತಾದವುಗಳಿಂದ ಕೂಡಿದ್ದಾಗಿತ್ತು. ಚಿತ್ರದುರ್ಗವು ಪ್ರಾಚೀನ ಕಾಲದಿಂದಲೇ ವಿದ್ಯಾ ಕೇಂದ್ರವಾಗಿ, ವ್ಯಾಪಾರಿ ಕೇಂದ್ರವಾಗಿ, ಧಾರ್ಮಿಕ ಕೇಂದ್ರವಾಗಿ, ಸಂಪರ್ಕ ಕೇಂದ್ರವಾಗಿ ರೂಪಗೊಂಡಿತ್ತು. ವಿದೇಶಿ ಬ್ರಿಟಿಶ್ ಅಧಿಕಾರಿ ಬುಕಾನನ್ ಚಿತ್ರದುರ್ಗವು ದಾವಣಗೆರೆ, ಶಿವಮೊಗ್ಗ, ಸಾಗರದ ಮಾರ್ಗವಾಗಿ ಮದ್ರಾಸ್ ಪ್ರಾಂತ್ಯಕ್ಕೆ ವ್ಯಾಪಾರ ಸಂಬಂಧಗಳ ಕುರಿತಾಗಿ ಹೇಳಿ ಇದೊಂದು ವ್ಯಾಪಾರ ಕೇಂದ್ರವೆಂದು ಗುರುತಿಸಿದ್ದಾನೆ.[೪೦೧]

ಒಟ್ಟಾರೆಯಾಗಿ ಚಿತ್ರದುರ್ಗವು ಹೊಯ್ಸಳರ ಕಾಲದಿಂದ ಮೈಸೂರು ಒಡೆಯರ ಕಾಲದವರೆಗೂ ಪ್ರಮುಖ ವ್ಯಾಪಾರಿ ಕೇಂದ್ರವಾಗಿ ಗುರುತಿಸುವಲ್ಲಿ ಸ್ಥಳೀಯ ಹಾಗೂ ವಿದೇಶಿಯರ ಪಾತ್ರ ಬಹುಮುಖ್ಯವಾದುದು. ವಿಜಯನಗರದ ಪತನದ ನಂತರ ಪರಸ್ಪರ ವ್ಯಾಪಾರ ಮಾಡಿಕೊಂಡಿದ್ದ ವರ್ತಕ ಸಮುದಾಯಗಳಿಗೆ ಪ್ರತಿಸ್ಪರ್ಧಿಗಳಾಗಿ ಬಂದ ಪೋರ್ಚುಗೀಸರು, ಫ್ರೆಂಚರು, ಡಚ್ಚರು ಹಾಗೂ ಬ್ರಿಟಿಶರು ಸ್ಥಳೀಯ ಪಾಳೆಯಗಾರರೊಂದಿಗೆ ನೇರ ವ್ಯಾಪಾರ ಒಪ್ಪಂದಗಳನ್ನು ಮಾಡಿಕೊಳ್ಳುವುದರ ಮೂಲಕ ಮಳಿಗೆಗಳನ್ನು ತೆರೆದರು. ಅಲ್ಲದೆ ಮೂಲ ವ್ಯಾಪಾರಿ ವೃತ್ತಿಯನ್ನು ಅನುಸರಿಸುತ್ತಿದ್ದ ಜೈನ ವರ್ತಕರು, ಗುಜರಾತಿಗಳು, ರಾಜಸ್ಥಾನಿಗಳು ಹಾಗೂ ಕರಾವಳಿಯಲ್ಲಿ ಮಧ್ಯವರ್ತಿಗಳಾಗಿದ್ದ ಮುಸ್ಲಿಂ ಸಮುದಾಯಗಳು ಯುರೋಪಿಯನ್ನರ ಆಗಮನದಿಂದಾಗಿ ಸ್ಥಳೀಯ ವ್ಯಾಪಾರ ಸಂಘ ಸಂಸ್ಥೆಗಳನ್ನು ರಚಿಸಿಕೊಂಡು ವಲಸೆ ಬರುವುದರ ಮೂಲಕ ಚಿತ್ರದುರ್ಗಕ್ಕೆ ಬಂದು ಶಾಶ್ವತವಾದ ನೆಲೆಗಳನ್ನು ರೂಪಿಸಿಕೊಂಡರು. ಪ್ರಸ್ತುತದಲ್ಲಿ ಚಿತ್ರದುರ್ಗ ರಾಜ್ಯ ಹಾಗೂ ದೇಶಗಳೊಂದಿಗೆ ವ್ಯಾಪಾರ ಹಾಗೂ ಇನ್ನಿತರೆ ವಲಯಗಳಲ್ಲೆಲ್ಲ ಗುರುತಿಸಿಕೊಳ್ಳಲು ವಲಸೆ ಬಂದ ವ್ಯಾಪಾರಿ ಸಮುದಾಯದವರು ಕಾರಣರಾಗಿದ್ದಾರೆ. ಪ್ರಸ್ತುತ ಚಿತ್ರದುರ್ಗವು ಜಿಲ್ಲಾ ಆಡಳಿತ ಕೇಂದ್ರವಾಗಿದ್ದು, ಇಲ್ಲಿ ಐತಿಹಾಸಿಕ ಏಳುಸುತ್ತಿನ ಕೋಟೆಯಿಂದಾಗಿ ಪ್ರವಾಸಿಗರ ತಾಣವಾಗಿ, ಮುರುಘಾರಾಜೇಂದ್ರ ಮಠದ ಧಾರ್ಮಿಕ ಕ್ಷೇತ್ರವಾಗಿ, ವಿದ್ಯಾಭ್ಯಾಸದ ಕೇಂದ್ರವಾಗಿ, ಮಾರುಕಟ್ಟೆ ವ್ಯಾಪಾರಿ ಕೇಂದ್ರವಾಗಿ, ಕೈಗಾರಿಕೆಗಳು ಹಾಗೂ ಗಣಿಗಾರಿಕೆಯಿಂದಾಗಿ ಇದೊಂದು ಪ್ರಮುಖ ನಗರವಾಗಿ ಕರ್ನಾಟಕ ಹಾಗೂ ಭಾರತದಲ್ಲಿ ಗುರುತಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

* **ಪೇಟೆ–ಪಟ್ಟಣಗಳ ಬೆಳವಣಿಗೆ**

ಪ್ರಾಚೀನ ಕರ್ನಾಟಕದಲ್ಲಿ ಕೃಷಿ ವ್ಯವಸ್ಥೆಗೆ ಪೂರಕವಾದ ನಗರ ವ್ಯವಸ್ಥೆ ರೂಪುಗೊಂಡಿತ್ತು. ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಲು ಸಂತೆ, ಮಾರುಕಟ್ಟೆಗಳ ಅವಶ್ಯಕತೆಯಿತ್ತು. ಕೃಷಿ ವಿಸ್ತರಣೆಗೆ ಆದಾಗ ಸಹಜವಾಗಿಯೇ ನಗರ ಕೇಂದ್ರಗಳ ವ್ಯಾಪ್ತಿ, ಸ್ವರೂಪಗಳೂ ಬದಲಾದವು. ರಸ್ತೆ ವ್ಯವಸ್ಥೆ, ಆಡಳಿತ ನೋಡಿಕೊಳ್ಳಲು ಅಧಿಕಾರಿಗಳ ನೇಮಕ, ಆ ಮೂಲಕ ರಾಜಕೀಯ ವ್ಯವಸ್ಥೆಯೊಂದರ ಹುಟ್ಟು, ವಿದೇಶಿ ಸಂಪರ್ಕ, ವರ್ತಕರ ಹಿತಾಸಕ್ತಿಗಳನ್ನು ಕಾಪಾಡಲು ವರ್ತಕ ಸಂಘಗಳ ಹುಟ್ಟು ಮುಂತಾದ ಹೊಸ ಬದಲಾವಣೆಗಳು ಕಾಣಿಸಿಕೊಂಡವು. ನಾಯಕರ ಕಾಲದ ಕರ್ನಾಟಕದಲ್ಲಿ ಕೃಷಿ ರಾಜ್ಯದ ಆರ್ಥಿಕತೆಯ ಬೆನ್ನೆಲುಬಾಗಿದ್ದರೂ ಕೃಷಿಯೇತರ ಚಟುವಟಿಕೆಗಳೂ ನಡೆಯುತ್ತಿದ್ದವು. ಕೈಕಸುಬುಗಳಿಗೆ ಪ್ರೋತ್ಸಾಹ ನೀಡಲಾಗುತ್ತಿತ್ತು. ಹಾಗೂ ಕೈಕಸುಬುಗಳಿಗೆ ಪ್ರೋತ್ಸಾಹ ದೊರೆಯುವ ಕಸುಬುದಾರರ ಶ್ರೇಣಿಗಳು ಅಸ್ತಿತ್ವಕ್ಕೆ ಬಂದವು. ಸಣ್ಣ ಪ್ರಮಾಣದ ಕೈಗಾರಿಕೆಗಳು ಆರಂಭಗೊಂಡವು. ಶಸ್ತ್ರಾಸ್ತ್ರಗಳನ್ನು ತಯಾರಿಸುವ, ನೌಕೆಗಳನ್ನು ಕಟ್ಟುವ ಕಸುಬುದಾರರ ಬಗ್ಗೆ ಸರಕಾರವೇ ನೇರವಾಗಿ ಆಸಕ್ತಿ ತೋರಿಸುತ್ತಿತ್ತು. ಅವರಿಗೆ ತೆರಿಗೆ ವಿನಾಯಿತಿಯನ್ನೂ ನೀಡಲಾಗುತ್ತಿತ್ತು. ಸಿದ್ದವಸ್ತುಗಳ ಮೇಲೆ ತೆರಿಗೆ ವಿಧಿಸುವ, ದಂಡಗಳನ್ನು ನಿಗದಿಪಡಿಸುವ, ಸಾಲ ನೀಡುವ ಮುಂತಾದ ಕೆಲಸ ಕಾರ್ಯಗಳು ಸಹಜವಾಗಿಯೇ ಅಸ್ತಿತ್ವದಲ್ಲಿದ್ದವು.[೪೦೨] ನಾಯಕರ ನಾಣ್ಯಗಳ ಹಾಗೂ ನಾಣ್ಯಗಳನ್ನು ಟಂಕಿಸುವುದರ ಬಗ್ಗೆ ಪರ–ವಿರೋಧ ಚರ್ಚೆಗಳು ಇದ್ದರೂ ಅವರು ನಾಣ್ಯಗಳನ್ನು ಚಲಾಯಿಸುತ್ತಿದ್ದರು ಎನ್ನುವುದಂತೂ ಸ್ಪಷ್ಟ. ಈ ಎಲ್ಲ ಅಂಶಗಳು ಕೇಂದ್ರದಿಂದ ನಡೆಯುತ್ತಿದ್ದರೂ ಅದು ಸಾಕಾರಗೊಳ್ಳುವುದಿಲ್ಲ ಎಂಬ ಅಂಶ ಅರಿತಿದ್ದ ನಾಯಕರು ಅನೇಕ ಆಡಳಿತ ಘಟಕಗಳಿಗೆ ಅಧಿಕಾರ ಹಸ್ತಾಂತರ ಮಾಡಿದ್ದರು. ಹೀಗೆ ರಚಿನಗೊಂಡ ಅನೇಕ ಆಡಳಿತ ಘಟಕಗಳೇ ಪೇಟೆ ಪಟ್ಟಣಗಳಾಗಿ ಬೆಳೆಯಲು ಸಾಧ್ಯವಾಯಿತು.

ವಿಜಯನಗರ ಕಾಲದಲ್ಲಿ ಸ್ಥಾಪನೆಯಾದ ನಗರಗಳನ್ನು ಪ್ರಮುಖವಾಗಿ ೨೬ ಕೇಂದ್ರಗಳನ್ನು ಗುರುತಿಸಿದ್ದಾರೆ. ಅವುಗಳೆಂದರೆ. ೧. ವಿಜಯನಗರಿ, ೨. ಹಸ್ತಿನಾವತಿ, ೩. ದೋರಸಮುದ್ರ, ೪. ಗುತ್ತಿ, ೫. ಪೆನುಗೊಂಡ, ೬, ಆದವಾನಿ, ೭. ಉದಯ ಗಿರಿ, ೮. ಚಂದ್ರಗಿರಿ, ೯. ಮುಳುವಾಯಿ ಅಥವಾ ಮುಳುಬಾಗಿಲು, ೧೦.ಕಂಚಿ, ೧೧. ಪಡೆವೀಡು, ೧೨.ಚದುರಂಗಪಟ್ಟಣ, ೧೩. ಮಂಗಳೂರು, ೧೪. ಬಾರಕೂರು, ೧೫. ಹೊನ್ನಾವರ, ೧೬. ಚಂದಾವರ, ೧೭. ಚಂದ್ರಗುತ್ತಿ, ೧೮. ಅಣ್ಣಿಗೇರಿ, ೧೯. ಹುಲಿಗೆರೆ, ೨೦. ನಿಡುಗಲ್ಲು, ೨೧. ಚಿಮತನಕಲ್ಲು, ೨೨. ತರಿಯಕಲ್ಲು, ೨೩. ಆನೆವಿಡ್ಡ, ೨೪. ಸರಿಕೆಲ್ಲೆಯ, ೨೫. ತೆಲಕಲಾಂಬಿ, ಅಥವಾ ತೆರಕಣಾಂಬಿ, ಮತ್ತು ೨೬. ಸಿಂಗಪಟ್ಟಣ. ಈ ಪಟ್ಟಿಯಿಂದ ನಾವು ಬಳ್ಳಾರಿ, ಹಾಸನ, ಕೋಲಾರ, ದಕ್ಷಿಣ ಕನ್ನಡ, ಉತ್ತರ ಕನ್ನಡ, ಶಿವಮೊಗ್ಗ, ಧಾರವಾಡ, ತುಮಕೂರು, ಚಿತ್ರದುರ್ಗ ಮತ್ತು ಮೈಸೂರು ವಿಜಯನಗರ ಕಾಲದಲ್ಲಿ ಬಹುಮುಖ್ಯ ವ್ಯಾಪಾರ ಕೇಂದ್ರಗಳನ್ನು ಹೊಂದಿದ್ದ ಜಿಲ್ಲೆಗಳು ಎಂದು ಹೇಳಬಹುದು.[೪೦೩]

ನಾಯಕರ ಕಾಲದಲ್ಲಿ ವಿಜಯನಗರ ಕಾಲದಲ್ಲಿ ಇದ್ದ ಆಡಳಿತ ಘಟಕಗಳನ್ನು ಅನೇಕ ಶಾಸನಗಳಲ್ಲಿ ಉಕ್ತವಾಗಿರುವಂತೆ ಸೀಮೆ, ನಾಡು, ಸ್ಥಳ, ವಿಳಿತ ಅಥವಾ ವೇಂಠೆ ಪದಗಳನ್ನು ಬಳಸಲಾಗಿದ್ದು[೪೦೪] ಅವು ಅಂದಿನ ಕಾಲದ ಪೇಟೆ ಅಥವಾ ಸಂತೆಗಳು ನಡೆಯುವ ಪ್ರಮುಖ ಕೇಂದ್ರಗಳಾಗಿದ್ದವು. ಅದರ ಮೂಲಕ ಚಿತ್ರದುರ್ಗ ಪ್ರದೇಶದಲ್ಲಿ ಅನೇಕ ನಗರ ಕೇಂದ್ರಗಳು ಬೆಳವಣಿಗೆಯಾಗಿ ಇಂದು ತಾಲೂಕು ಕೇಂದ್ರಗಳಾಗಿ, ಹೋಬಳಿ ಕೇಂದ್ರಗಳಾಗಿ, ಧಾರ್ಮಿಕ ಕೇಂದ್ರಗಳಾಗಿ ಬೆಳೆದಿರುವುದು ಕಾಣಬಹುದು.

ಮುಖ್ಯವಾಗಿ ೭೨೨ ಗ್ರಾಮಗಳು ನಾಯಕರ ಆಡಳಿತಕ್ಕೆ ಒಳಪಟ್ಟಿದ್ದು, ೬೫ ಸಣ್ಣ ಪಟ್ಟಣಗಳು ಇದ್ದವು ಮತ್ತು ೧೨ ಪ್ರಮುಖ ನಗರ ಅಥವಾ ಪಟ್ಟಣಗಳನ್ನು ಗುರುತಿಸಲಾಗಿದೆ.[೪೦೫]

ಪ್ರಮುಖವಾದ ೧೨ ನಗರಗಳ ಪಟ್ಟಿಯನ್ನು ಕೊಡುವುದಾದರೆ ೧. ಚಿತ್ರದುರ್ಗ, ೨. ಹಿರಿಯೂರು, ೩. ಹೊಸದುರ್ಗ, ೪. ಹೊಳಲ್ಕೆರೆ, ೫. ಮಾಯಾಕೊಂಡ, ೬. ಹರಿಹರ, ೭. ಅಣಜಿ, ೮. ಕಣಕುಪ್ಪೆ, ೯. ದೊಡ್ಡೇರಿ, ೧೦. ತಳುಕು, ೧೧. ಮೊಳಕಾಲ್ಮೂರು, ೧೨. ಗುಡೇಕೋಟೆ ಉಳಿದಂತೆ ನಂತರ ಕಾಲದಲ್ಲಿ ಅಂದರೆ ಹೈದರ್ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿ ದಾವಣಗೆರೆ, ಚಳ್ಳಕೆರೆ, ಜಗಳೂರು ಪ್ರದೇಶಗಳು ಅಭಿವೃದ್ಧಿಯನ್ನು ಪಡೆಯುತ್ತವೆ.

ಚಿತ್ರದುರ್ಗ ನಾಯಕರ ಅಧೀನ ಸಂಸ್ಥಾನಗಳಾಗಿದ್ದ ಜರಿಮಲೆ, ರಾಯದುರ್ಗ, ಕುಂದುರ್ಪಿ, ನಿಡುಗಲ್ಲು, ಮತ್ತೋಡು, ಗುಡೇಕೋಟೆ, ನಾಯಕನಹಟ್ಟಿ, ಇವು ನಾಯಕರ ಆಶ್ರಿತ ಆಡಳಿತ ರಾಜಕೀಯ ಕೇಂದ್ರಗಳಾಗಿ ನಾಯಕರ ಕಾಲದಲ್ಲಿ ಸಂತೆಗಳು ನಡೆಯುತ್ತಿದ್ದ ಪ್ರಮುಖ ಸ್ಥಳಗಳೆಂದರೆ ಮಾಯಕೊಂಡ, ಹೂವಿನಗೆರೆ, ಹೋದಿಗೆರೆ, ಮಲೆಬೆನ್ನೂರು, ಸಂತೆಬೆನ್ನೂರು, ಹರಿಹರ, ಹೊಳಲು, ಮೈಲಾರ, ಉಚ್ಚಂಗಿದುರ್ಗ, ಬಿಳಿಚೋಡು, ದಾವಣಗೆರೆ, ಉಜ್ಜನಿ, ಜಗಳಲೂರು, ಅಣಜಿ, ನಾಯಕನಹಟ್ಟಿ, ತಳುಕು, ದೊಡ್ಡೇರಿ, ಮೊಳಕಾಲ್ಮೂರು, ಗಾಜನೂರು, ಒಡ್ಡು, ಕಂಪಲಿ, ಚಳ್ಳಕೆರೆ, ಜೋಗಿಮರಡಿ, ಐಮಂಗಲ, ಹಿರಿಯೂರು, ಪರಶುರಾಂಪುರ, ಹುಳಿಯೂರು, ಬೂದಿಹಾಳು, ಹೊಸದುರ್ಗ, ಸಣ್ಣಕ್ಕಿ ಬಾಗೂರು, ರಾಮಗಿರಿ, ಹೊಳಲ್ಕೆರೆ, ಸೀಬಾರ, ಗುತ್ತಿನಾಡು, ಸಿರಿಗೆರೆ, ಚಿತ್ರಳ್ಳಿ ಹಾಗೂ ಚಿತ್ರದುರ್ಗ.

ವಿಜಯನಗರ ಹಾಗೂ ನಾಯಕರ ಕಾಲದ ಶಾಸನಗಳಲ್ಲಿ ಉಲ್ಲೇಖವಿರುವ ಕೊಡಗನೂರು ಸೀಮೆ, ಗುಂಟನೂರು ಸೀಮೆ, ಗುಡ್ಡದ ಸೀಮೆ, ಹರಿಹರ ಸೀಮೆ, ಮಲೆಬೆನ್ನೂರು, ಚಾವಡಿ, ಧರ್ಮಪುರ ಸಂಮತು ಅಂಕ ಸಮುದ್ರ ನಾಡು, ಅಣಜಿ ಸ್ಥಳ ಅಣಬೂರು ಸ್ಥಳ ಅರಳಿಹಾರ ಸ್ಥಳ, ಉಚ್ಚಂಗಿ ಮೇಂಠ, ಕಾಲುವಳ್ಳಿ ಲಿಂಗದಹಳ್ಳಿ ಸೀಮೆ, ಕುರುಬರಹಳ್ಳಿ ಸ್ಥಳ, ಕೊಟ್ಟೂರು ಚಾವಡಿ, ಕೊಡಗನೂರು ಸೀಮೆ, ಕೋಟೆಕೆರೆಯ ವೇಂಠೆ, ಗವುಡನಹಳ್ಳಿ ಸ್ಥಳ, ಗುಂಟನೂರು ಸೀಮೆ, ಗುಡ್ಡದ ಸೀಮೆ/ಗುಡ್ಡದ ನಾಡು, ಗೋಸಿಕೆರೆ ನಾಡು, ಚಿಂ(ಮ)ತನಕಲ ನಾಡು, ಚಿತ್ರಹಳ್ಳಿ ಸೀಮೆ, ನಾಡು, ಜಗಳೂರು ಸೀಮೆ, ನಾಡು ಜಯಕಾರ ರಾಮಪಯನ ಮಾಗಣೆ, ಜಾಜೂರು ಸೀಮೆ/ಸ್ಥಳ, ತವನಿಧಿ ಸ್ಥಳ, ದುಂಮಿಯ ಸೀಮೆ, ದೊಡ್ಡೇರಿ ಸೀಮೆ, ಧರ್ಮಪುರ ಸಂಮತು, ನಂದನ ಸೋಮಸ್ಥಳ, ನವಬಕುವಾಡ ಸೀಮೆ, ನಿಡುಗಲ್ಲು ಮಹಾದುರ್ಗ, ನುಲಿಯನೂರು ಸ್ಥಳ, ಪಾಂಡ್ಯ ನಾಡು, ಬನ್ನಿಕೋಡ ಸೀಮೆ, ಬಗ್ಗನಡುವಿನ ಸ್ಥಳ, ಬನ್ನೂರು ಸೀಮೆ, ಬಸ್ವಾಪಟ್ಟಣದ ಸೀಮೆ/ಸ್ಥಳ, ಬಾಗೂರು ವಳಿತ/ ಸೀಮೆ, ಬಿಳಿಚೇಡ ಸೀಮೆ, ಬುಕ್ಕಾಪಟ್ಟಣ ಸ್ಥಳ, ಬೂದಿಹಾಳು ಸೀಮೆ, ಬೆಮ್ಮತ್ತನೂರು ನೆಲೆವೀಡು/ ದುರ್ಗ/ ಪಟ್ಟಣ, ಬೆಮ್ಮತ್ತನೂರು ವಿತ್ತಿ/ ಬೆಂಮತೂರು ನಾಡು/ ಬೆಂಮತ್ತನಕಲ್ಲ ಸೀಮೆ, ಬೇತೂರು ಸೀಮೆ, ಮಂಗಳವಾಡ ಗ್ರಾಮದ ಹೋಬಳಿ, ಮತ್ತನಡವಿನ ಸೀಮೆ, ಮದ್ದ ಅಹಳನದಿ, ಮದ್ದಸಮುದ್ರಸ್ಥಳ, ಮಲೆಯಬೆನ್ನೂರು ಸೀಮೆ, ಮಲೆಯನೂರುಸ ಸ್ಥಳ, ಯಿಕ್ಕನೂರು (ಇಕ್ಕನೂರು) ಸ್ಥಳ, ರಾಮಗಿರಿ ಸೀಮೆ, ರಾಯದುರ್ಗ ರಾಜ್ಯ, ಲಕ್ಕಿಹಳ್ಳಿ ಸ್ಥಳ, ಸಮುಖನೂರು ನಾಡು, ಹರತೀ ಸ್ಥಳ, ಹರಿಹರನ ಸೀಮೆ (ಕೂಡ್ಲೂರು ಸೀಮೆ), ಹಸ್ತಿನಾವತಿ ವಳಿತ, ಹಾನೆಯದ ನಾಡು, ಹಿರಿಯೂರು ಸೀಮೆ, ಹೊರ್ರಕೆರ್ರ ದೇವರ ಪುರ ಸೀಮೆ/ಕಸಬೆ, ಹೊಸೂರು ಸ್ಥಳ, ಹೊಳಲಕೆರೆಯ ವಿತ್ತಿ/ಸೀಮೆ/ಮಾಗಣಿ[೩೦೬]

ಹೀಗೆ ಸ್ಥಳ, ಸೀಮೆ, ನಾಡು, ರಾಜ್ಯ, ವೇಂಠೆ, ವಿತ್ತ, ಹೋಬಳಿ, ವಳಿತ, ಸುಮತು, ಮಾಗಣಿ, ಚಾವಡಿ ಮುಂತಾದ ಆಡಳಿತ ಪರಿಭಾಷೆಯಲ್ಲಿ ಅನೇಕ ಸ್ಥಳಗಳನ್ನೂ ಪ್ರಮುಖವಾಗಿ ೬೫ ಕೇಂದ್ರಗಳು ಗುರುತಿಸಿಕೊಂಡಿವೆ.

ಪ್ರಸ್ತುತ ಜಿಲ್ಲಾ ಕೇಂದ್ರ ಹಾಗೂ ತಾಲೂಕು ಕೇಂದ್ರಗಳಾಗಿರುವ ಪ್ರಮುಖ ಎಂಟು ಪೇಟೆ-ಪಟ್ಟಣಗಳ ಬೆಳವಣಿಗೆಯ ಕುರಿತು ಪ್ರಸ್ತುತ ಸಂಶೋಧನೆಯಲ್ಲಿ ವಿವರಿಸಲಾಗಿದೆ. ಈ ಹಿಂದೆಯೇ ಆದಿ ಮೌರ್ಯರ ಕಾಲದಿಂದ ಪ್ರಸ್ತುತದ ಕರ್ನಾಟಕ ರಾಜ್ಯದ ಒಂದು ಜಿಲ್ಲಾ ಕೇಂದ್ರವಾಗಿ ರಚನೆಯಾಗಿ ರೂಪಗೊಂಡ ಚಿತ್ರದುರ್ಗದ ಬಗ್ಗೆ ವಿವರಿಸಲಾಗಿದೆ.

**ದಾವಣಗೆರೆ**

ಒಂದು ಐತಿಹ್ಯದ ಪ್ರಕಾರ ದಾವಣಗೆರೆ ಎಂಬ ಹೆಸರು ಊರಿನ ಹತ್ತಿರದಲ್ಲಿಯೇ ಇದ್ದ ದಾವಣಕೆರೆ ಎಂಬ ಕೆರೆಯ ಹೆಸರಿನಿಂದ ಉತ್ಪತ್ತಿಯಾಯಿತು. ದಾವಣಕೆರೆ ಒಂದು ಕಾಲದಲ್ಲಿ ದನಕರುಗಳ ಮಾರಾಟದ ಸ್ಥಳವಾಗಿತ್ತು. ಇಂದಿಗೂ ಆ ಸ್ಥಳದಲ್ಲಿ ದನಕರುಗಳ ಸಂತೆಯಾಗುತ್ತದೆ. ಆ ಕೆರೆಯ ಹತ್ತಿರದಲ್ಲಿಯೇ ಇದ್ದ ಹಳ್ಳಿ ದಾವಣಕೆರೆ ಎಂಬ ಹೆಸರಿನಿಂದ ಕರೆಯಲ್ಪಟ್ಟಿತು. ನಂತರ ದಾವಣಕೆರೆ ಎಂಬ ಹೆಸರು ಹ್ರಸ್ವವಾಗಿ ದಾವಣಗೆರೆಯಾಯಿತು. ದಾವಣಗೆರೆ ಸ್ಥಳನಾಮ ಕುರಿತು. ಬಿ.ರಾಜಶೇಖರಪ್ಪ ಅವರು ದಾವ, ದಾವಣ ಎಂಬ ಹೆಸರುಗಳನ್ನು ಕುರಿತು ಹೇಳುವಾಗ 'ದಾವ' ಎಂಬುದು ಸಂಸ್ಕೃತದ 'ದಾಮ' ಎಂಬ ಶಬ್ದದ ತದ್ಭವ ಎನ್ನುವುದು ಸ್ಪಷ್ಟವಾಗಿದೆ. ಹೆಸರಿನಲ್ಲಿ ಪೂರ್ವಪದವಾಗಿ ದಾವ ಎಂಬುದನ್ನು ಹೊಂದಿರುವವರಿಗೆ, ಆ ರೂಪ ಬರುವ ಶಾಸನಗಳಲ್ಲಿ ಪೂರ್ವಪದವಾಗಿ ದಾಮ ಎಂಬುದನ್ನು ಬಳಸಲಾಗಿದೆ. ಉದಾಹರಣೆಗೆ ದಾವಣಂದಿ, ದಾಮಣಂದಿ, ದಾವಣ-ದಾಮಣ; ದಾವಯ-ದಾಮಯ; ದಾವದಂಡಾಧಿಪ-ದಾಮದಂಡನಾಯಕ; ದಾವರಸ-ದಾಮರಸ ಇತ್ಯಾದಿಗಳನ್ನು ಸೂಚಿಸಿ ದಾವಣಗೆರೆ ಎಂಬ ಸ್ಥಳನಾಮವು ಜಾನಪದ ಅಥವಾ ಕಾಲ್ಪನಿಕ ಅಥವಾ ದಂತಕತೆಗಳ ರೀತಿಯಲ್ಲಿ ಈ ಹೆಸರು ಬಂದಿದೆ.[೪೦೭]

ದಾವಣಗೆರೆಯೂ ಪ್ರಾಚೀನ ಕಾಲದಿಂದಲೂ ಅನೇಕ ಮನೆತನಗಳ ಒಡೆತನಕ್ಕೆ ಒಳಗಾಗಿದ್ದು ಕ್ರಿ.ಶ.೧೧೨೧ರ ಶಾಸನವೊಂದರಲ್ಲಿ ಮೊದಲಬಾರಿಗೆ ದಾವಣಗೆರೆಯ ಬಗ್ಗೆ ಶಾಸನೋಕ್ತ ಸ್ಥಳ ನಾಮವನ್ನು ಹೊಂದಿದೆ. ದಾವಣಗೆರೆ ಪಟ್ಟಣ ಅಥವಾ ನಗರವಾಗಿ ಬೆಳೆಯಲು ಅಂದಿನ ಕಾಲದ ಸಂಪರ್ಕ ಮಾರ್ಗದಲ್ಲಿ ಬರುವ ಒಂದು ಪ್ರಮುಖ ಸ್ಥಳವಾಗಿರುವುದರಿಂದ ಇದು ನಗರ ಸ್ವರೂಪವನ್ನು ಪಡೆಯಲು ಸಾಧ್ಯವಾಯಿತು. ಹರಿಹರ ಮತ್ತು ಬೆಂಗಳೂರಿನ ನಡುವೆ ಉಗಿಬಂಡಿಯ (ರೈಲ್ವೆ) ಮಾರ್ಗವಾಗುವುದಕ್ಕಿಂತ ಮೊದಲು ದಾವಣಗೆರೆಯಲ್ಲಿ ನಡೆಯುತ್ತಿದ್ದ ವಾಣಿಜ್ಯದ ಬಗ್ಗೆ ವಿವರಗಳು ಸಿಗುವುದಿಲ್ಲ. ಮೊದಲಿನಿಂದಲೂ ದಾವಣಗೆರೆ, ಚಿತ್ರದುರ್ಗ, ಶಿವಮೊಗ್ಗ, ಬಳ್ಳಾರಿ, ಧಾರವಾಡ, ಮತ್ತು ತುಮಕೂರು, ಜಿಲ್ಲೆಗಳೊಡನೆ ವಾಣಿಜ್ಯ ಸಂಬಂಧವನ್ನಿಟ್ಟುಕೊಂಡಿತ್ತು. ಆದರೆ ನಂತರ ನಿರ್ಮಿಸಿದ ರಸ್ತೆಗಳ ಜಾಲಬಂಧ ವಾಣಿಜ್ಯದ ತೀವ್ರ ಬೆಳವಣಿಗೆಗೆ ಕಾರಣವಾಯಿತು.

ಹಿಂದಿನ ಕಾಲದಲ್ಲಿ ವಾಣಿಜ್ಯದ ಬೆಳವಣಿಗೆಗೆ ಎಷ್ಟೋ ಸಂಗತಿಗಳು ಅಡ್ಡಿಯಾಗಿದ್ದವು. ವಿವಿಧ ರಾಜ್ಯಗಳು ಮಾಡಿಕೊಂಡಿದ್ದ ಷರತ್ತುಗಳು, ಹೊಯ್ಸಳ ಮತ್ತು ವಿಜಯನಗರ ರಾಜ್ಯಗಳ ನಡುವೆ ಆಗುತ್ತಿದ್ದ ಸೈನಿಕ ದಾಳಿಗಳು ವಾಣಿಜ್ಯದ ಬೆಳವಣಿಗೆಗೆ ಅಡ್ಡಿಯಾಗಿದ್ದವು. ಈ ಭಾಗದಲ್ಲಿ ನೌಕಾ

ಸಂಚಾರಕ್ಕೆ ಯೋಗ್ಯವಾದ ನದಿಗಳಿಲ್ಲದಿದ್ದುದು ರಫ್ತು ವ್ಯಾಪಾರಕ್ಕೆ ಅಡ್ಡಿಯಾಗಿತ್ತು. ಈ ಭಾಗದಲ್ಲಿ ನೌಕಾ ಸಂಚಾರಕ್ಕೆ ಯೋಗ್ಯವಾದ ನದಿಗಳಿಲ್ಲದಿದ್ದುದು ರಫ್ತು ವ್ಯಾಪಾರಕ್ಕೆ ಅಡ್ಡಿಯಾಗಿತ್ತು. ಅಂದಿನ ದಿನಗಳಲ್ಲಿ ಅಗತ್ಯದ ವಸ್ತುಗಳ ಬಗ್ಗೆ ಜನರು ಸ್ವಾವಲಂಬಿಗಳಾಗಿದ್ದರು. ತಾವು ಬೆಳೆದ ಧಾನ್ಯಗಳನ್ನು ಮತ್ತು ಉತ್ಪಾದಿಸಿದ ಇತರ ವಸ್ತುಗಳನ್ನು ತಮ್ಮ ಬಳಕೆಗೆ ಉಪಯೋಗಿಸಿಕೊಂಡು ಮಿಕ್ಕಿದುದನ್ನು ಹತ್ತಿರದ ಸ್ಥಳಗಳಿಗೆ ಕಳುಹಿಸುತ್ತಿದ್ದರು. ರಸ್ತೆ ಹಾಗೂ ಜಲಸಾರಿಗೆ ಸರಿಯಾಗಿರಲಿಲ್ಲ. ಎತ್ತಿನ ಚಕ್ಕಡಿಗಳನ್ನು ಬಿಟ್ಟು ಬೇರಾವುದೇ ವಾಹನಗಳಿರಲಿಲ್ಲ. ಅವುಗಳನ್ನು ಸಹ ಮಳೆಗಾಲದಲ್ಲಿ ಉಪಯೋಗಿಸಲು ಬರುವಂತಿರಲಿಲ್ಲ. ಕೆಲವೇ ರಾಜಮನೆತನಗಳು ಬಹಳ ಕಾಲ ರಾಜ್ಯವಾಳಿದರೂ ಸಹ ಆಮದು ಮತ್ತು ರಫ್ತುಗಳ ಮೇಲೆ ಅವರು ಹಾಕಿದ್ದ ಕಟ್ಟಳೆಗಳಿಂದಾಗಿ, ಸುಂಕದ ದರದಲ್ಲಿ ಆಗುತ್ತಿದ್ದ ವ್ಯತ್ಯಾಸಗಳಿಂದಾಗಿ, ವ್ಯಾಪಾರಸ್ಥರಿಗೆ ಹೊರಗಿನ ನಾಡುಗಳೊಂದಿಗೆ ವ್ಯಾಪಾರ ಸಂಬಂಧವನ್ನಿಟ್ಟುಕೊಳ್ಳಲು ಅನುಮತಿಯನ್ನು ಕೊಡಲು ಹಾಕುತ್ತಿದ್ದ ಕಟ್ಟಳೆಗಳಿಂದಾಗಿ ವಾಣಿಜ್ಯ ಬೆಳವಣಿಗೆಗೆ ಅಡ್ಡಿಯಾಗಿತ್ತು. ಇದಲ್ಲದೆ ಕಾಲಕಾಲಕ್ಕೆ ಬದಲಾಗುತ್ತಿದ್ದ ರಾಜಮನೆತನಗಳು ಬದಲಾದಂತೆ ಅವುಗಳೊಂದಿಗೆ ಚಲಾವಣೆಯಲ್ಲಿದ್ದ ನಾಣ್ಯಗಳು ತೂಕ ಮತ್ತು ಅಳತೆಗಳು ಸಹ ಬದಲಾಗುತ್ತಿದ್ದವು. ಇವೆಲ್ಲ ಕಾರಣಗಳಿಂದಾಗಿ ವಾಣಿಜ್ಯದ ಬೆಳವಣಿಗೆ ಆಗಲಿಲ್ಲ. ವಾಣಿಜ್ಯ-ವ್ಯಾಪಾರವನ್ನು ಅಭಿವೃದ್ಧಿಪಡಿಸುವಾಗ ರಸ್ತೆಗಳನ್ನು ಸರಿಪಡಿಸಿ ಚಿತ್ರದುರ್ಗ ಮತ್ತು ಬೆಂಗಳೂರುಗಳ ನಡುವೆ ಜಲ್ಲಿರಸ್ತೆಯನ್ನು ನಿರ್ಮಿಸಲಾಯಿತು. ರಾಜ್ಯದ ಹೆದ್ದಾರಿಗಳನ್ನು ಹೊರರಾಜ್ಯದ ಹೆದ್ದಾರಿಗಳೊಂದಿಗೆ ಕೂಡಿಸಲಾಯಿತು. ಕ್ರಿ.ಶ.೧೮೬೮ರಲ್ಲಿ ತುಂಗಾಭದ್ರ ನದಿಯ ಮೇಲಿನ ಸೇತುವೆ ಪೂರ್ಣವಾಯಿತು. ಇದರಿಂದಾಗಿ ಹೊರ ರಾಜ್ಯಗಳೊಂದಿಗೆ ದಾವಣಗೆರೆ ವಾಣಿಜ್ಯ ಸಂಬಂಧವನ್ನು ಬೆಳೆಸಲು ಅವಕಾಶವಾಯಿತು. ಬ್ರಿಟಿಶ್ ನಾಣ್ಯಗಳನ್ನು ಚಲಾವಣೆಗೆ ತರಲಾಯಿತು. ಈ ಕ್ರಮಗಳಿಂದಾಗಿ ದಾವಣಗೆರೆ ಬಹುಬೇಗನೆ ಒಂದು ಪ್ರಮುಖ ವಾಣಿಜ್ಯ ಕೇಂದ್ರವಾಗಿ ಮಾರ್ಪಟ್ಟಿತು.[೪೦೯]

ದಾವಣಗೆರೆ ಪ್ರದೇಶವು ಅತೀ ಹೆಚ್ಚು ಬೆಳಕಿಗೆ ಬಂದದ್ದು ಹತ್ತಿ ನೂಲು ತಯಾರಿಕೆ ಹಾಗೂ ಬಟ್ಟೆ ಕೈಗಾರಿಕೆಯಿಂದಾಗಿ. ಕರ್ನಾಟಕದಲ್ಲಿ ಹತ್ತಿಯನ್ನು ಹಿಂದಿನಿಂದಲೂ ಬೆಳೆಯಲಾಗುತ್ತಿತ್ತು. ಹಾಗೂ ಹತ್ತಿಗೆ ಸಂಬಂಧಿಸಿದ ಕಾರ್ಖಾನೆಗಳೂ ಇದ್ದವು. ಹತ್ತಿ ನೂಲು ತೆಗೆಯುವುದು ಹತ್ತಿ ಬಟ್ಟೆ ತಯಾರಿಕೆ ಮುಂತಾದ ಕೆಲಸಗಳಲ್ಲಿ ಅನೇಕರು ತೊಡಗಿಕೊಂಡಿರುತ್ತಿದ್ದರು. ೧೮೬೦ರ ದಶಕದಲ್ಲಿ ಅಮೆರಿಕಾದಲ್ಲಾದ ಆಂತರಿಕ ಕಲಹಕ್ಕೂ ಕರ್ನಾಟಕದ ಹತ್ತಿ ಉದ್ಯಮಕ್ಕೂ ನೇರ ಸಂಬಂಧವಿದೆ. ಯುರೋಪಿನ ಹತ್ತಿ ಗಿರಣಿಗಳಿಗೆ ಅಮೇರಿಕಾದಿಂದ ಹೆಚ್ಚಿನ ಪ್ರಮಾಣದಲ್ಲಿ ಹತ್ತಿ ಪೂರೈಕೆಯಾಗುತ್ತಿತ್ತು. ಅಮೇರಿಕಾದಲ್ಲಿ ಆಂತರಿಕ ಕಲಹ ಆರಂಭಗೊಂಡು ಹತ್ತಿ ಪೂರೈಕೆಯಲ್ಲಿ ವ್ಯತ್ಯಯಗಳು ಕಾಣಿಸಿಕೊಂಡಾಗ ಸಹಜವಾಗಿಯೇ ಯುರೋಪಿನ ಹತ್ತಿ ವರ್ತಕರ ಹಾಗೂ ಹತ್ತಿ ಮಿಲ್ಲುಗಳ ದೃಷ್ಟಿ ಭಾರತದತ್ತ ಹೊರಳಿತು. ಹತ್ತಿ ಬೆಳೆಯುತ್ತಿದ್ದ ಪ್ರದೇಶಗಳನ್ನು ಅಭಿವೃದ್ಧಿ ಪಡಿಸಲಾಯಿತು. ಧಾರವಾಡ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳು, ಉತ್ತರ ಕರ್ನಾಟಕದ ಕೆಲಭಾಗಗಳು ಹಾಗೂ ಚಿತ್ರದುರ್ಗದ ದಾವಣಗೆರೆ ಮುಂತಾದ ಪ್ರದೇಶಗಳನ್ನು ಹತ್ತಿ ಬೆಳೆ ವ್ಯಾಪಕವಾಗಿ ಹಬ್ಬಿತು. ಇಲ್ಲಿನ ಕಚ್ಚಾ ಹತ್ತಿಗೆ ಲಂಕಶೈರ್ ಮತ್ತು ಮಾನ್‌ಚೆಸ್ಟೆರುಗಳಲ್ಲಿ ಹೆಚ್ಚಿನ ಬೇಡಿಕೆ ಇತ್ತು. ವಿದೇಶಿ ತಳಿಗಳು ಈ ಪ್ರದೇಶಗಳಲ್ಲಿ ಬಳಕೆಗೊಂಡವು. ಹತ್ತಿಗೆ ಸಂಬಂಧಿಸಿದ ಕಾರ್ಖಾನೆಗಳೂ ಆರಂಭಗೊಂಡವು.[೪೧೦]

ಕೆಲಸ ಮಾಡುವ ಜನ ದುಡಿಯುವ ವರ್ಗವಾಗಿ ಗುರುತಿಸಿಕೊಂಡರು. ವಿಜಯನಗರದ ಕಾಲದವರೆಗೂ ಭಾರತ ಕೃಷಿ ವ್ಯವಸ್ಥೆಯು ಒಂದು ಪರ್ವವಾದರೆ, ವಿಜಯನಗರೋತ್ತರ ಕೃಷಿ ಕ್ಷೇತ್ರದಲ್ಲಿ ಮಹಾ ಪಲ್ಲಟವಾದ ಕಾಲವಾಗಿ ಗುರುತಿಸಬಹುದು. ಕಾರಣ ಬೃಹತ್ ವ್ಯಾಪಾರಿ ಕಂಪನಿಗಳು ಭಾರತದ ಸಾಂಪ್ರದಾಯಿಕ ಕೃಷಿ ಪದ್ಧತಿಯ ಬೆಳೆಗಳಿಗೆ ಬದಲಾಗಿ ಯುರೋಪಿಯನ್ ರಾಷ್ಟ್ರಗಳಿಗೆ ಬೇಕಾದ ಬೆಳೆಗಳನ್ನು ಬೆಳೆಯಲು ಭಾರತದಲ್ಲಿ ವಸಾಹತು ಸ್ಥಾಪಿಸಿ ಹೊಸ ತಳಿ, ಹಾಗೂ ಆರ್ಥಿಕ ಬೆಳೆಗಳನ್ನು ಪರಿಚಯಿಸಿದ್ದು ನಾಯಕರ ಕಾಲದಲ್ಲಿಯೇ ಈ ಕ್ಲಿಷ್ಟಕರ ಪರಿಸ್ಥಿತಿಯಲ್ಲಿ ರೈತರ ಹೊಸ ಪ್ರಯೋಗಕ್ಕೆ ಒಳಗಾಗಿ ಯಶಸ್ಸು ಕಂಡುಕೊಂಡ ಕಾಲ ಅದಾಗಿತ್ತು.

ಭೂ ಮಾಲೀಕತ್ವ, ಭೂ ಮಾಲೀಕರು, ಮಧ್ಯವರ್ತಿಗಳು ಮುಂತಾದ ವಿಚಾರಗಳು ಆರ್ಥಿಕ ಚರಿತ್ರೆಯಲ್ಲಿ ಸಾಕಷ್ಟು ಚರ್ಚೆಗೆ ಒಳಗಾಗಿವೆ. ರೈತರು ಭೂಮಾಲೀಕರೊಂದಿಗೆ ಹೊಂದಿದ್ದ ಸಂಬಂಧಗಳ ಅಧ್ಯಯನ ರೈತ ಚರಿತ್ರೆಯ ಬಹುಮುಖ್ಯ ಅಂಶ. ಏಕೆಂದರೆ ಈ ಸಂಬಂಧಗಳು ರೈತರ ಸ್ಥಾನಮಾನ, ಬದುಕನ್ನು ಸೂಚಿಸುವ ಅಂಶಗಳೂ ಆಗಿವೆ. 'ಆಧುನಿಕ' ಎಂದು ಕರೆಯಲ್ಪಡುವ ಚಾರಿತ್ರಿಕ ಕಾಲಘಟಕ್ಕೆ ಈ ರೈತ ನೀಡಿದ ಪ್ರತ್ಯುತ್ತರ ಮುಂತಾದ ವಿಷಯಗಳನ್ನು ಚರ್ಚಿಸುವ ಅಗತ್ಯವಿದೆ. ಭಾರತದ ಚರಿತ್ರೆಯ ಅಧ್ಯಯನದಲ್ಲಿ ರೈತರ ಚರಿತ್ರೆಯನ್ನು ಮೊದಲ ಬಾರಿಗೆ ಸೇರಿಸಿದವರೆಂದರೆ ಡಿ.ಡಿ, ಕೊಸಾಂಬಿ, ಆರ್.ಎಸ್.ಶರ್ಮ ಡೇನ್ಯಲ್ ಥೋರ್ನರ್, ಇರ್ಫಾನ್ ಹಬೀಬ್, ಸಂಜಯ್ ಸುಬ್ರಮಣ್ಯಂ ಮುಂತಾದವರು. ಮಾರ್ಕ್ಸ್‌ವಾದಿಗಳು ರೈತರು ಜಮೀನಿನೊಂದಿಗೆ ಹೊಂದಿದ್ದ ಸಂಬಂಧಗಳ ಆಧಾರದ ಮೇಲೆ ರೈತರನ್ನು ಮೂರು ವಿಧವಾಗಿ ವಿಂಗಡಿಸಿದರು. ಅವುಗಳೆಂದರೆ: ಕೃಷಿ ಕಾರ್ಮಿಕರನ್ನು ಸಂಬಳಕ್ಕೆ, ಬಲಾತ್ಕಾರದ ದುಡಿಮೆಗೆ ಉಪಯೋಗಿಸುತ್ತಿದ್ದ ಶ್ರೀಮಂತ ರೈತರು, ಕುಟುಂಬದ ಸದಸ್ಯರನ್ನೇ ಕೃಷಿಯಲ್ಲಿ ತೊಡಗಿಸುತ್ತಿದ್ದ ಮಧ್ಯಮ ರೈತರು ಹಾಗೂ ಕುಟುಂಬದ ನಿರ್ವಹಣೆಗೆ ಸಾಕಾಗುವಷ್ಟು ಭೂಮಿಯನ್ನು ಹೊಂದಿರದ ಮತ್ತು ತಾವೇ ದುಡಿಯುತ್ತಿದ್ದ ಬಡ ರೈತರು. ಇದರೊಂದಿಗೆ ಕೃಷಿ ಭೂಮಿಯನ್ನು ಹೊಂದಿರದ ಕೃಷಿ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದ ಭೂ ರಹಿತ ಕೃಷಿ ಕಾರ್ಮಿಕರಿರುತ್ತಿದ್ದರು. ಇವರನ್ನು ರೈತ ಚರಿತ್ರೆಯ ವ್ಯಾಪ್ತಿಯೊಳಗೆ ಇಟ್ಟುಕೊಂಡೇ ಅಧ್ಯಯನ ನಡೆಸಬೇಕಾಗುತ್ತದೆ.[2]

ಭೂ ಮಾಲೀಕರು ಮತ್ತು ಕೃಷಿ ಕಾರ್ಮಿಕರು ಇವರಿಬ್ಬರ ನಡುವಿನ ಸಂಬಂಧಗಳನ್ನು ಅರ್ಥಮಾಡಿಕೊಳ್ಳಲಿಕ್ಕೆ ಚರಿತ್ರೆಯಲ್ಲಿ ಆಕರಗಳು ಲಭ್ಯವಿವೆ. ಹಿಡುವಳಿದಾರರು ಭೂ ಮಾಲೀಕರ ಹತ್ತಿರ ಕೆಲಸ ನಿರ್ವಹಿಸುವಾಗ ಇವರನ್ನು ಎರಡು ಆಯಾಮಗಳಲ್ಲಿ ಗುರುತಿಸಬಹುದು. ಒಂದು ಕೂಲಿ ಕಾರ್ಮಿಕರು, ಎರಡನೆಯದಾಗಿ ಜೀತದಾಳು ಅಥವಾ ಗುಲಾಮರು. ಕೃಷಿ ವ್ಯವಸ್ಥೆಯಲ್ಲಿ ಕೂಲಿ ಕಾರ್ಮಿಕರು ದುಡಿಯುವುದು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವ ಪದ್ಧತಿ. ರೈತರು, ಕೂಲಿ ಕಾರ್ಮಿಕರು, ತಳವರ್ಗದ ಸಮುದಾಯಗಳು ಜೀವನ ನಿರ್ವಹಣೆಗಾಗಿ ಮಾಲೀಕರನ್ನು ಅವಲಂಬಿಸಿರುವಂತಹ ಪದ್ಧತಿ ಕಂಡುಬರುತ್ತಿತ್ತು. ಆಧುನಿಕ ದಿನಗಳಲ್ಲಿಯೂ ವ್ಯವಸ್ಥೆಯಲ್ಲಿ ದೊಡ್ಡ ಬದಲಾವಣೆಯೇನು ಕಂಡು ಬರುವುದಿಲ್ಲ.

ಹಲವಾರು ಸಮಸ್ಯೆಗಳ ತಿಕ್ಕಾಟಗಳು, ಜಾತಿ ಸಂಘರ್ಷಗಳ ಮಧ್ಯೆ ಹಲವು ಸಮುದಾಯಗಳು ಜೀವನ ನಡೆಸಬೇಕಾಗಿದ್ದಿತು. ಸಮಾಜದ ಅತ್ಯಂತ ತಳಸ್ತರದಲ್ಲಿರುವವರು ಅಪಮಾನ, ಅನ್ಯಾಯ,

ಶೋಷಣೆಗಳನ್ನು ಅನುಭವಿಸಬೇಕಾಗಿತ್ತು. ಊಳಿಗಮಾನ್ಯ ಪದ್ಧತಿ, ಜೀತ ಪದ್ಧತಿ, ಗುಲಾಮಗಿರಿ ಪದ್ಧತಿ, ದೈಹಿಕ ದುಡಿಮೆ, ಬಹಿಷ್ಕಾರ ಮುಂತಾದ ಪದ್ಧತಿಗಳು ತಳ ಜಾತಿಗಳ ರೈತರಿಗೆ, ಕೂಲಿಕಾರರಿಗೆ, ಕುಶಲಕರ್ಮಿಗಳಿಗೆ ಮತ್ತು ಆಯಗಾರರಿಗೆ ಕಂಠ ಪ್ರಾಯವಾಗಿದ್ದವು.[೩]

ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ರೈತರು ಮಹತ್ವದ ಪಾತ್ರವಹಿಸಿದ್ದರು. ಇವರು ಧಾರ್ಮಿಕ ಸಂಸ್ಥೆಗಳಾದ ದೇವಾಲಯ, ಮಠಗಳು ಹಾಗೂ ಕೃಷಿಯೇತರ ವರ್ಗದವರು ಹೊಂದಿದ್ದ ಜಮೀನುಗಳಲ್ಲಿ ಕೂಲಿಗಳಾಗಿ ದುಡಿಯುತ್ತಿದ್ದರು. ಬೀಜಬಿತ್ತನೆ, ನಾಟಿ, ಗೊಬ್ಬರ ಹಾಕುವುದು, ಕೊಯ್ಲು ಮುಂತಾದ ಕಾರ್ಯಗಳಿಗೆ ಕೂಲಿಗಳನ್ನು ನೇಮಿಸಲಾಗುತ್ತಿತ್ತು. ನಾಯಕರ ಕಾಲದಲ್ಲಿ ಬಳ್ಳಾರಿಯಲ್ಲಿ ಮೊದಲ ಬಾರಿಗೆ ಗೊಬ್ಬರದ ಕೈಗಾರಿಕೆ ಇದ್ದ ಅಂಶ ಬ್ರಿಟಿಶರ ದಾಖಲೆಗಳಿಂದ ತಿಳಿದುಬರುತ್ತದೆ.[೪] ಸಣ್ಣ ಪುಟ್ಟ ಕೃಷಿಕರಾಗಿದ್ದ ರೈತರಿಗೂ ಕೂಡ ನಾಟಿ ಹಾಗೂ ಕೊಯ್ಲಿನ ಸಂದರ್ಭದಲ್ಲಿ ಕೂಲಿಗಳ ಸೇವೆ ಅವಶ್ಯಕವಾಗಿತ್ತು. ಆರಂಭದಿಂದಲೂ ಕೃಷಿಕರಲ್ಲದವರು ತಮ್ಮ ಜಮೀನುಗಳನ್ನು ಗುತ್ತಿಗೆಗೆ ಬಿಡುವ ಬದಲು ಕೂಲಿಗಳನ್ನು ನೇಮಿಸಿಕೊಳ್ಳುವುದರ ಮೂಲಕ ಬೆಳೆ ತೆಗೆಯುವುದು ರೂಢಿಯಾಗಿತ್ತು. ಇವರ ನೇಮಕ ಅತ್ಯಂತ ಅವಶ್ಯಕವಾಗಿತ್ತೆಂದು ತಿಳಿದು ಬರುತ್ತದೆ.[೫] ಬ್ರಹ್ಮದೇಯ ಪಡೆದ ಬ್ರಾಹ್ಮಣರು ದೇವಾಲಯದ ಆದಾಯ ಪಡೆದ ಧಾರ್ಮಿಕ ಸಂಸ್ಥೆಗಳು, ಶ್ಯಾನುಭೋಗ ಮುಂತಾದವರು ಕೃಷಿಯಲ್ಲಿ ತೊಡಗಿರಲಿಲ್ಲ. ಇವರು ದಾನ ಧರ್ಮದಿಂದ ಪಡೆದ ಭೂಮಿ ಅಥವಾ ತಾವೇ ಕ್ರಯಕ್ಕೆ ಕೊಂಡ ಭೂಮಿಯನ್ನು ಹಾಗೂ ಸರಕಾರ ನೀಡಿದ ಉಂಬಳಿ, ಕೊಡಗಿ, ಇನಾಂ ಭೂಮಿಗಳನ್ನು ಕೃಷಿ ಮಾಡಲು ಆಳುಗಳನ್ನು ನೇಮಿಸಿಕೊಳ್ಳುತ್ತಿದ್ದರು.[೬] ಅದರಲ್ಲೂ ಬ್ರಾಹ್ಮಣರು ತಮ್ಮ ಜಮೀನುಗಳನ್ನು ತಾವೇ ಸ್ವತಃ ವ್ಯವಸಾಯ ಮಾಡುತ್ತಿದ್ದುದು ಬಹಳ ವಿರಳವಾಗಿತ್ತಾದ್ದರಿಂದ ಈ ಕೂಲಿಗಳ ಅಗತ್ಯ ಅವರಿಗೆ ಹೆಚ್ಚಾಗಿತ್ತು.[೭] ಕೂಲಿಗಳಲ್ಲಿ ಕೆಲವು ಬಾರಿ ಒಬ್ಬನೇ ಯಜಮಾನನ ಭೂಮಿಯಲ್ಲಿ ವಂಶ ಪಾರಂಪರ್ಯವಾಗಿ ದುಡಿಯುತ್ತಿದ್ದರು. ಇವರನ್ನು ಹುಟ್ಟುತ್ತಲೆ (ಜೀತ) ಕೂಲಿಗಳು ಎಂಬುದಾಗಿ ಕರೆಯುತ್ತಿದ್ದರು. ಮತ್ತೆ ಕೆಲವರು ತಮಗೆ ಇಷ್ಟ ಬಂದವವರ ಕೃಷಿ ಭೂಮಿಯಲ್ಲಿ ಕೆಲಸ ಮಾಡುತ್ತಿದ್ದರು. ಇವರನ್ನು ಮನ್ನು ಎಂಬುದಾಗಿ ಕರೆಯಲಾಗುತ್ತಿತ್ತು.[೮] ತೋಟಗಳಲ್ಲಿ ಅಡಿಕೆ ಫಸಲನ್ನು ಕುಯ್ಲು ಮಾಡುತ್ತಿದ್ದ ವ್ಯಕ್ತಿ ಗೊನೆಕಾರ ಚಿನ್ನಣ್ಣ ಎಂಬಾತನ ಉಲ್ಲೇಖ ಇದೆ.[೯] ಈತನೂ ಕೂಡ ಕೂಲಿಯವನೇ ಆಗಿದ್ದನು. ಮರದಿಂದ ಮರಕ್ಕೆ ಹಾರಿ ಅಡಿಕೆ ಕುಯ್ಲು ಮಾಡುವ ಚಾಕಚಕ್ಯತೆಯ ಅಪಾಯಕಾರಿ ಕೆಲಸ ನುರಿತ ವ್ಯಕ್ತಿಗಳಿಂದ ಮಾತ್ರ ಸಾಧ್ಯವಿತ್ತು. ಈ ಭಾಗದ ಹಲವೆಡೆಗಳಲ್ಲಿ ಇಂದಿಗೂ ಈ ಗೊನೆಕಾರರಿರುವುದು ಗಮನಾರ್ಹ.

ಕೃಷಿಕರಲ್ಲಿ ಬಹುತೇಕ ಶೂದ್ರರೇ ಹೆಚ್ಚು. ಗೌಡ, ಶೂದ್ರ, ಒಕ್ಕಲಿಗ, ಹೊಲೆಯರು ನೆಲವನ್ನು ಉಳುಮೆ ಮಾಡುತ್ತಿದ್ದರು. ಭೂಮಿ ಸಂಪೂರ್ಣ ರಾಜನ ಹಿಡಿತದಲ್ಲಿತ್ತು. ರಾಜನ ಖಾಸಗಿ ಒಡೆತನ ಇರಲಿಲ್ಲವೆಂದು ವಿದ್ವಾಂಸರು ಹೇಳಿದ್ದಾರೆ. ಖಾಸಗಿ ಆಸ್ತಿಯನ್ನು ಕೊಂಡು ರಾಜ ದಾನ ಮಾಡಿದ ಘಟನೆ ಕಂಡುಬರುತ್ತದೆ. ಹೊಸ ಗ್ರಾಮ ನಿರ್ಮಾಣ ಮಾಡಲು ಕಾಡನ್ನು ಕಡಿದು ವಿಸ್ತರಿಸಿದ್ದು ಸಿರಾ ಶಾಸನದಿಂದ ತಿಳಿದುಬರುತ್ತದೆ. ಹೆಚ್ಚಾಗಿ ಆಳರಸರು ಬ್ರಾಹ್ಮಣರಿಗೆ ಪ್ರತ್ಯೇಕ ಅಗ್ರಹಾರ, ಹಳ್ಳಿಗಳನ್ನು ನಿರ್ಮಿಸಿದ್ದು ಉಲ್ಲೇಖವಿದೆ. ಕೃಷಿಯ ಹಿಡಿತವು ಸಹ ಬ್ರಾಹ್ಮಣರ ಕಪಿಮುಷ್ಠಿಯಲ್ಲಿತ್ತು. ಭೂ ಒಡೆಯನು ಜಾತಿನಿಂದನೆ, ಭ್ರಷ್ಟನಾದರೆ, ಅಂತವನ ಭೂಮಿಯನ್ನು ಮುಟ್ಟು ಗೋಲು ಹಾಕಿಕೊಂಡು ಸರ್ಕಾರವೇ

ಎಲ್ಲ ಜವಾಬ್ದಾರಿಗಳನ್ನು ನೋಡಿಕೊಳ್ಳುತ್ತಿತ್ತು. ಅಣ್ಣ, ತಮ್ಮ, ಅಕ್ಕ, ತಂಗಿ, ಮಕ್ಕಳು, ಮೊಮ್ಮಕ್ಕಳು, ಪತ್ನಿಯರು, ತಮ್ಮನ ಮಕ್ಕಳು ಮತ್ತು ಅಳಿಯ ಹೀಗೆ ಎಲ್ಲರ ಒಪ್ಪಿಗೆಯು ಅನಿವಾರ್ಯವಾಗಿತ್ತು. ಭೂಮಿಯನ್ನು ಪರಭಾರೆ ಮಾಡುವಾಗ ಗ್ರಾಮ, ನಾಡು, ಭೂಮಿ ಹೀಗೆ ಗಡಿಕಲ್ಲುಗಳನ್ನು ಹಿಂದೆ ನೆಡುತ್ತಿದ್ದರು.[೧೦]

ಉಂಬಳಿ ಅಥವಾ ತೆರಿಗೆ ರಹಿತ ಆಸ್ತಿ ಅಥವಾ ಗ್ರಾಮ, ಕೊಡಗಿ ಅಥವಾ ಸಾಮಾನ್ಯವಾದ ನೆಲದ ಉಡುಗೊರೆ, ಜೋಡಿ ಅಥವಾ ಸರಕಾರವು ತೆರಿಗೆಯನ್ನು ಮನ್ನಾ ಮಾಡಿದ ನೆಲ, ಸರ್ವಮಾನ್ಯಕ್ಕೆ ಅಥವಾ ಎಲ್ಲ ತೆರಿಗೆಗಳಿಂದ ಮುಕ್ತ ಇತ್ಯಾದಿ ದಾನಗಳನ್ನು ಸೈನಿಕರಿಗೆ ಅಥವಾ ಮಹತ್ಕಾರ್ಯ ಮಾಡಿದವರಿಗೆ ಕೊಡಲಾಗುತ್ತಿತ್ತು. ಉದಾಹರಣೆಗೆ, ದೇವರಾಜ ಒಡೆಯರು ೧೬೬೦ರಲ್ಲಿ ಹಂಗಳದ ಗಂಗೆ ಬಸವೇಗೌಡ ಎಂಬುವನಿಗೆ ತೆರಿಗೆ ರಹಿತವಾಗಿ ಭೂಮಿಯನ್ನು ದಾನಮಾಡಿದರು[೧೧] ಈ ತೆರನಾದ ಭೂದಾನಗಳು, ಅವುಗಳ ಜೊತೆ ಜೊತೆಗೆ ಹೆಚ್ಚಿನ ದಾನಗಳು ಕೂಡಿ ಗ್ರಾಮಾಂತರ ಪ್ರದೇಶಗಳಲ್ಲೂ ಬ್ರಾಹ್ಮಣೇತರ ಭೂ ಮಾಲಿಕ ವರ್ಗವೊಂದು ಸೃಷ್ಟಿಯಾಯಿತು. ಸಾಮಾಜಿಕ ರಚನೆಯನ್ನು ಸಂಕೀರ್ಣಗೊಳಿಸಿತು. ಈ ವರ್ಗದಲ್ಲಿ ಅತ್ಯಂತ ಮೇಲಿನ ವಿಭಾಗದ ವ್ಯಕ್ತಿಗಳು ಭೂ ಹಿಡುವಳಿದಾರರಾಗಿದ್ದರು. ಶಾಸನಗಳಲ್ಲಿ ಶ್ರೀಮಂತ ರೈತರ ಬಗೆಗೆ ಉಲ್ಲೇಖಗಳಿವೆ. ಉದಾಹರಣೆಗೆ ಭರಮಣ್ಣ ನಾಯಕನ ಆಳ್ವಿಕೆಯಲ್ಲಿ ಶ್ರೀಮಂತರಾಗಿದ್ದ ರೈತರು ಭೂಕಂದಾಯವನ್ನೂ ಇತರೆ ತೆರಿಗೆಗಳನ್ನು ಸರಕಾರಕ್ಕೆ ಸಲ್ಲಿಸುವುದನ್ನು ಪ್ರತಿಭಟಿಸಿದರು, ನಿಬಂಧನೆಗಳನ್ನು ಅವರು ಉಲ್ಲಂಘಿಸಿದರು.[೧೨] ರಾಜನಿಷ್ಠೆಯಂತಹ ಮೌಲ್ಯಗಳು ಪ್ರಧಾನವಾಗಿದ್ದರೂ ಕೆಲವರು ಆಗಾಗ ಅಧಿಕಾರಿಗಳನ್ನು ಪ್ರತಿಭಟಿಸುತ್ತಿದ್ದರು. ಅವರು ಕೈಗೊಂಡ ಕ್ರಮಗಳು ತಮಗೂ ತಮ್ಮ ಹಳ್ಳಿಗೂ ತೊಂದರೆ ಕೊಡುವಂತಿದ್ದಾಗ ಪ್ರತಿಭಟಿಸುತ್ತಿದ್ದರು. ಭೂ ಮಾಲೀಕ ಬೇಸಾಯ ಮಾಡುವ ಸಂದರ್ಭಗಳಲ್ಲಿ ಭೂ ಒಡೆತನವೂ ಸಂಬಂಧಿತ ಹಕ್ಕುಗಳೂ ಶಕ್ತಿಯ ಮೂಲಗಳಾಗಿದ್ದವು. ಕೆಲವೊಮ್ಮೆ ಅವರು ರಾಜಕೀಯವಾಗಿಯೂ ಪ್ರಭಾವ ಬೀರುತ್ತಿದ್ದುದುಂಟು. ಅವರ ಕೆಳಗಿನ ಸ್ತರದಲ್ಲಿ ಗುತ್ತಿಗೆಗೆ ಪಡೆದು ಬೇಸಾಯ ಮಾಡುವ ರೈತರಿದ್ದರು. ಕುಶಲಕರ್ಮಿಗಳು, ಇತರ ಸೇವಾವೃತ್ತಿ ಕಸುಬುವರ್ಗಗಳಿದ್ದವು. ಇವರಿಗೆ ನೆಲವಾಗಲಿ ರಾಜಕೀಯ ಸಾಮಾಜಿಕ ಅಧಿಕಾರವಾಗಲಿ ಇರಲಿಲ್ಲ. ಹಲವು ವೇಳೆ ಭೂ ಹಿಡುವಳಿದಾರರ ಆರ್ಥಿಕ ಮತ್ತು ರಾಜಕೀಯ ಹತೋಟಿಗೆ ಒಳಪಟ್ಟಿರುತ್ತಿದ್ದರು. ಧಾರ್ಮಿಕ ಮತ್ತು ಲೌಕಿಕ ವ್ಯಕ್ತಿಗಳಿಗೆ ಭೂಮಿಯ ತೆರಿಗೆ ಹಕ್ಕುಗಳನ್ನು ದಾನ ಮಾಡುತ್ತಿದ್ದುದರಿಂದಾಗಿ, ಕೃಷಿ ವ್ಯವಸ್ಥೆಯಲ್ಲಿ ಸ್ಪಷ್ಟವಾಗಿ ಗೋಚರಿಸುವಂತಹ ಬದಲಾವಣೆಗಳಾದವು.

ವಿಶೇಷವಾಗಿ ಗಮನಿಸಬೇಕಾದದ್ದು ಸ್ವಯಂ ಆಡಳಿತವಿದ್ದ ಬಾರಾಬಲೂತಿ ವ್ಯವಸ್ಥೆ. ಈ ಕಾಲಾವಧಿಯುದ್ದಕ್ಕೂ ಇದು ಗ್ರಾಮ ಸಮುದಾಯದ ಒಂದು ಸಾಮಾನ್ಯ ಲಕ್ಷಣವಾಗಿತ್ತು. ಈ ವ್ಯವಸ್ಥೆಯಲ್ಲಿ ಗೌಡ (ಗ್ರಾಮದ ಮುಖ್ಯಸ್ಥ), ಶಾನಬೋಗ (ಗ್ರಾಮದ ಲೆಕ್ಕಿಗ), ಪಂಚಾಂಗದ ಬ್ರಾಹ್ಮಣ (ಜ್ಯೋತಿಷಿ), ಕಬ್ಬಿಣದ ಕೆಲಸದವನು (ಕಮ್ಮಾರ) ಅಕ್ಕಸಾಲೆ/ಚಿನ್ನ ಬೆಳ್ಳಿ ಕೆಲಸದವನು), ಕುಂಬಾರ (ಮಡಕೆ ಮಾಡುವವನು), ಅಗಸ (ಬಟ್ಟೆ ಒಗೆಯುವವನು), ಕೆಲಸೆ(ಕ್ಷೌರಿಕ), ತೋಟಿ(ಜಲಗಾರ), ತಳವಾರ (ಕಾವಲಿನವನು), ಕೆರೆ–ನೀರುಗಂಟಿ (ಕೆರೆಯ ತೂಬುಗಳನ್ನು ನಿಯಂತ್ರಿಸುವವನು) ಮತ್ತು ಓಜದವನು (ಬಡಗಿ) ಇವರು ಗ್ರಾಮದ ಆಡಳಿತವನ್ನೂ ಸಾಮುದಾಯಿಕ ಜೀವನದ ಇತರೆ ಎಲ್ಲ ವಿಭಾಗಗಳನ್ನು ನೋಡಿಕೊಳ್ಳುತ್ತಿದ್ದರು. ಅವರ ಸ್ಥಾನಮಾನ ಮತ್ತು ಹೊಣೆಗಾರಿಕೆಗಳಿಗೆ ಅನುಗುಣವಾಗಿ,

ಅಧಿಕಾರಿಗಳಿಗೆ ವೇತನವನ್ನು ಸಾಮಾನ್ಯವಾಗಿ ವಸ್ತು ರೂಪದಲ್ಲಿ ನೀಡಲಾಗುತ್ತಿದ್ದಿತು. ಗೌಡ ಮತ್ತು ಶಾನಭೋಗರು ಗ್ರಾಮಸ್ಥರು ಬೆಳೆದ ಬೆಳೆಗಳಲ್ಲಿ ಒಂದು ಪಾಲನ್ನು ತೆಗೆದುಕೊಳ್ಳಬಹುದಾಗಿತ್ತು. ಗ್ರಾಮಕ್ಕೆ ಸಂಬಂಧಿಸಿದ ಕಡತಗಳನ್ನು ಕಂದಾಯದ ವಿವರಗಳನ್ನು ವಸೂಲಿಮಾಡಿದ್ದು, ಸರಕಾರಕ್ಕೆ ಕಟ್ಟಿದ್ದು ಮೊದಲಾದ ಅಂಶಗಳನ್ನು ನಮೂದು ಮಾಡುವುದಕ್ಕಾಗಿ ಕಡತದ ಕಾಣಿಕೆಯ ಹಣ ಎಂದು ಹೆಚ್ಚಿನ ಶುಲ್ಕವನ್ನು ರೈತರಿಂದ ಶಾನುಭೋಗನು ಪಡೆಯುತ್ತಿದ್ದನು. ಮಿಕ್ಕವರಿಗೆ ಬಿಡಿ ರೈತರು ತಲಾ ಒಂದು ಹೊರೆ ತೆನೆ ಸಮೇತವಾದ ಹುಲ್ಲು, ಒಂದು ಕೊಳಗ ಧಾನ್ಯವನ್ನು ಕೊಡುತ್ತಿದ್ದರು. ಅವರು ಸಲ್ಲಿಸುವ ಸೇವೆಗಾಗಿ, ತೋಟಿ ಮತ್ತು ತಳವಾರರ ಹೊರತು ಮಿಕ್ಕವರಿಗೆ ರೈತರಿಂದ ನಿರ್ದಿಷ್ಟ ಪ್ರಮಾಣದ ಧಾನ್ಯವು ಹೆಚ್ಚಿನ ಭತ್ಯೆಯಾಗಿ (ಹಡದೆ) ಪ್ರತಿಯೊಬ್ಬ ಬೇಸಾಯಗಾರನಿಂದಲೂ ದೊರಕುತ್ತಿದ್ದಿತು. ಇತರ ವರಮಾನಗಳ ಜೊತೆಗೆ, ಜ್ಯೋತಿಷಿ, ತೋಟಿ, ತಳವಾರ, ನೀರಗಂಟಿ ಇವರು ತಮ್ಮ ಜೀವನಕ್ಕಾಗಿ ಕಂದಾಯ ಮುಕ್ತ ಭೂಮಿಯನ್ನು (ಮಾನ್ಯ ಭೂಮಿ) ಪಡೆಯುತ್ತಿದ್ದರು.[೧೩] ಹೀಗಾಗಿ ಬೇಸಾಯಗಾರನು ಭಾರವಾದ ಹೊರೆಯನ್ನೆ ಹಂಚಿಕೊಳ್ಳಬೇಕಾಗಿತ್ತು.

ನಾಯಕರ ಕಾಲದಲ್ಲಿ ಕೃಷಿ ಮಾಡುವ ರೈತರು ಅಂದಿನ ಸಮಾಜದ ಕೆಳಸ್ತರದಲ್ಲಿ ಕಂಡುಬರುವ ಒಂದು ವರ್ಗವಾಗಿದ್ದು, ಕೃಷಿ ಉತ್ಪಾದನೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದರು. ಆದರೆ ಇವರ ಉತ್ಪಾದನೆಯಿಂದಾಗಿಯೇ ಸಂಸ್ಥಾನದ ಆರ್ಥಿಕತೆ ಹೆಚ್ಚುತ್ತಿದ್ದ ಅಂಶವನ್ನು ಚರಿತ್ರೆಯಲ್ಲಿ ಗುರುತಿಸುವಲ್ಲಿ ಸಾಕಷ್ಟು ದಾಖಲೆಗಳು ಲಭ್ಯವಿಲ್ಲ. ಆದರೆ ಭೂಮಾಲೀಕರ ನಿರಂತರ ಶೋಷಣೆಯಿಂದಾಗಿ ಯಾವುದೇ ಹಕ್ಕು ಮತ್ತು ಸೌಲಭ್ಯಗಳನ್ನು ಹೊಂದಿರದೆ ತಮ್ಮ ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಪಡೆಯದೇ ಭೂ ಮಾಲೀಕನನ್ನು ಈ ವರ್ಗದವರು ಅವಲಂಭಿಸಿದ್ದರು. ಇದರ ಪರಿಣಾಮದಿಂದಾಗಿ ಕೃಷಿ ಕಾರ್ಮಿಕರು ಜೀತದಾಳುಗಳಾಗಿ ತಮ್ಮ ದೈಹಿಕ ಶ್ರಮದಿಂದ ಅಧಿಕಾರಿಗಳ ಖಜಾನೆಯನ್ನು ತುಂಬಿಸುತ್ತಿದ್ದರು. ಅದಕ್ಕೆ ಪ್ರತಿಯಾಗಿ ಭೂಮಾಲೀಕರು ಇವರನ್ನು ವಂಚಿಸಿ ತಮ್ಮ ಅಧಿಕಾರ ಬಲದಿಂದ ನಿರಂತರವಾಗಿ ದುಡಿಸಿಕೊಂಡು ವಿಲಾಸಿ ಜೀವನವನ್ನು ನಡೆಸುತ್ತಿದ್ದರು. ಇದು ರೈತ ಮತ್ತು ಭೂಮಾಲೀಕರ ನಡುವಿನ ಸಂಬಂಧಗಳು ಸಮಾಜದಲ್ಲಿ ಜಟಿಲಗೊಳ್ಳಲು ಕಾರಣವಾಗಿರಬಹುದಾಗಿದೆ. ರೈತರನ್ನು ನಾಯಕರ ಕಾಲದಲ್ಲಿ ಮತ್ತೊಂದು ರೀತಿಯಾಗಿ ಅಧ್ಯಯನ ಮಾಡಬಹುದು. ಸಾಂಪ್ರದಾಯಿಕವಾಗಿ ಬೆಳೆಯುತ್ತಿದ್ದ ಬೆಳೆಗಳಾದ ಹುರುಳಿ, ರಾಗಿ, ಜೋಳ, ಭತ್ತ, ನವಣೆ, ಸಾವೆ, ಎಳ್ಳು, ಎಸರು, ಸಜ್ಜೆ, ಇನ್ನಿತರೆ ಬೆಳೆಗಳು ಆಹಾರ ಉತ್ಪಾದನೆಯ ಬೆಳೆಗಳಾಗಿ ಸ್ಥಳೀಯ ಮಟ್ಟದ ಮಾರುಕಟ್ಟೆಯನ್ನು ರೂಪಿಸಬಹುದಾದ ಬೆಳೆಗಳಾಗಿದ್ದವು. ಆದೆ ಯುರೋಪಿಯನ್ನರ ಆಗಮನದಿಂದಾಗಿ ಹೊಸ ಬೆಳೆಗಳನ್ನು ಅದರಲ್ಲೂ ವಾಣಿಜ್ಯ ಬೆಳೆಗಳನ್ನು ಪರಿಚಯಿಸುವುದರ ಜೊತೆಗೆ ಹೊಸ ತಳಿಯ ಹತ್ತಿ, ಭತ್ತ, ಬೆಳೆಗಳನ್ನು ಕಡಿಮೆ ಅವಧಿಯಲ್ಲಿ ಹೆಚ್ಚಿನ ಇಳುವರಿಯನ್ನು ಪಡೆಯುವ ಹೊಸ ಆವಿಷ್ಕಾರದ ಪ್ರಯೋಗಕ್ಕೆ ಮದ್ಯಕಾಲೀನ ರೈತ ಒಳಗಾಗಬೇಕಾಗಿತ್ತು. ಈ ಹಿಂದೆಯೇ ಹೇಳಿದಂತೆ ಚಿತ್ರದುರ್ಗ ನಾಯಕರ ಕಾಲದಲ್ಲಿ ಹೊಸದಾಗಿ ಪರಿಚಯಗೊಂಡ ಬೆಳೆಗಳಲ್ಲಿ ಶೇಂಗಾ, ಹತ್ತಿ, ಪಪ್ಪಾಯಿ, ತಂಬಾಕು, ಆಲೂಗಡ್ಡೆ, ಹಾಗೂ ಹೊಸ ತಳಿಯ ಭತ್ತ, ಮತ್ತು ಅಡಿಕೆ ಬೆಳೆಗಳು ಪರಿಚಯವಾದವು. ಇದರಿಂದಾಗಿ ಕೃಷಿಯೂ ವಾಣಿಜ್ಯೀಕರಣಗೊಂಡಿತು. ಮಾರುಕಟ್ಟೆಯಲ್ಲಿ ಬೇಡಿಕೆ ಇರುವ ಮತ್ತು ಹೆಚ್ಚಿನ ಆದಾಯವನ್ನು ತರುವ ಬೆಳೆಗಳನ್ನು ರೈತರು ಬೆಳೆಯಲು ಮುಂದಾದರು. ಇದನ್ನು ಪ್ಲಾಂಟೇಶನ್ ಎಕಾನಮಿ ಎಂದು ಆರ್ಥಿಕ

ತಜ್ಞರು ಗುರುತಿಸಿದ್ದಾರೆ. ಭಾರತಕ್ಕೆ ಬಂದ ಯುರೋಪಿಯನ್ನರಲ್ಲಿ ಬ್ರಿಟಿಶರು ಕೃಷಿಯನ್ನು ವಾಣಿಜ್ಯೀಕರಿಸುವುದರ ಜೊತೆಗೆ ಅವರ ಅನುಕೂಲಕ್ಕಾಗಿ ಸಾರಿಗೆ ಸಂಪರ್ಕವನ್ನು ಅಭಿವೃದ್ಧಿ ಪಡಿಸಿದರು.

ನಾಯಕರ ಕಾಲದಲ್ಲಿ ಕೃಷಿಯು ಒಂದು ಉದ್ಯಮವಾಗಿ ಕಂಡುಬರಲಾರಂಭಿಸಿತು. ವಸಾಹತು ಆಳ್ವಿಕೆ ಆರಂಭಗೊಂಡ ನಂತರ ಪಶ್ಚಿಮಘಟ್ಟಗಳು ರಬ್ಬರ್, ತಂಬಾಕು, ಟೀ, ಕಾಫಿ ತೋಟಗಳಾಗಿ ಪರಿವರ್ತನೆಗೊಳ್ಳಲಾರಂಭಿಸಿದವು. ವಾಣಿಜ್ಯ ಬೆಳೆ ಬೆಳೆಯುವ ಪ್ರವೃತ್ತಿ ಇಲ್ಲಿಂದ ಆರಂಭಗೊಂಡಿತು. ಹೀಗೆ ವಸಾಹತು ಕರ್ನಾಟಕದ ಅರ್ಥವ್ಯವಸ್ಥೆಯು ಸೀಮಿತ ಪ್ರದೇಶಗಳಲ್ಲಿ ವ್ಯವಸ್ಥಿತವಾದ ಬಂಡವಾಳಶಾಹಿ ಬೆಳವಣಿಗೆಗೆ ಆಸ್ಪದ ನೀಡಿತು. ೧೮ನೇ ಶತಮಾನದ ಮಧ್ಯಭಾಗದ ವೇಳೆಗೆ ತೋಟದ ಉದ್ಯಮಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಲಾಯಿತು. ಈ ಪ್ರಕ್ರಿಯೆ ಭಾರತದಾದ್ಯಂತ ಕಂಡುಬಂತು. ಅಸ್ಸಾಂ ಬಂಗಾಳ, ಅಹಮದಾಬಾದ್, ಮುಂಬಯಿ, ಕರ್ನಾಟಕದ ಕೊಡಗು ದಕ್ಷಿಣ ಕನ್ನಡ, ಚಿಕ್ಕಮಗಳೂರು, ಧಾರವಾಡ, ಚಿತ್ರದುರ್ಗ, ದಾವಣಗೆರೆ ಮುಂತಾದ ಪ್ರದೇಶಗಳಲ್ಲಿ ಪ್ಲಾಂಟೇಷನ್ ಆರ್ಥಿಕತೆ ಕಾಣಿಸಿಕೊಂಡಿತು.[೧೪]

ಕೃಷಿಯನ್ನು ವಾಣಿಜ್ಯೀಕರಿಸುವ ಬ್ರಿಟೀಶರ ನೀತಿ ಅವರ ಆಳ್ವಿಕೆಯುದ್ದಕ್ಕೂ ಮುಂದುವರಿಯಿತು. ಇದರಿಂದಾಗಿ ಕೃಷಿಯ ವಿಸ್ತರಣೆ ಕಂಡುಬಂತು. ಮುಖ್ಯ ಬೆಳೆಗಳನ್ನು ಗಮನದಲ್ಲಿಟ್ಟುಕೊಂಡು ಕೃಷಿಯನ್ನು ವಿಸ್ತರಿಸಲಾಯಿತು. ಬ್ರಿಟಿಶರ ಆಗಮನವಾದ ಬಳಿಕ ಸ್ಥಳೀಯ ಕೈಗಾರಿಕೆಗಳಲ್ಲಿ ಕೆಲವು ಮೂಲೆಗುಂಪಾದವು. ಯುರೋಪಿನಲ್ಲಾದ ಕೈಗಾರಿಕಾ ಕ್ರಾಂತಿ ಭಾರತದ ಕೈಗಾರಿಕೆಗಳ ಮೇಲೆ ಒಳ್ಳೆಯ ಪರಿಣಾಮಗಳನ್ನೇನೂ ಬೀರಲಿಲ್ಲ. ಹೀಗಾಗಿ ಸ್ಥಳೀಯ ಸಣ್ಣಮಟ್ಟ ಕೈಗಾರಿಕೆಗಳಲ್ಲಿ ದುಡಿಯುತ್ತಿದ್ದ ಕುಶಲಕರ್ಮಿಗಳು ನಿರುದ್ಯೋಗಿಗಳಾಗಬೇಕಾಗಿ ಬಂತು. ಅವರೆಲ್ಲರೂ ಗ್ರಾಮಾಂತರ ಪ್ರದೇಶಗಳಿಗೆ ಹೋಗುವ ಮತ್ತು ಕೃಷಿಯಲ್ಲಿ ತೊಡಗಿಸಿಕೊಳ್ಳುವ ಒತ್ತಾಯಕ್ಕೆ ಒಳಗಾದರು. ಬ್ರಿಟಿಶರಿಗೆ ಇದು ಅನುಕೂಲವಾಗಿಯೇ ಪರಿಣಮಿಸಿತು. ವಾಣಿಜ್ಯ ಬೆಳೆಗಳನ್ನು ಬೆಳೆಯುವ ದೊಡ್ಡ ದೊಡ್ಡ ಎಸ್ಟೇಟ್‌ಗಳು ನಿರ್ಮಾಣವಾಗುತ್ತಿದ್ದ ಆ ಸಂದರ್ಭದಲ್ಲಿ ಕೂಲಿ ಕೆಲಸಗಾರರ ಅವಶ್ಯಕತೆ ಹಿಂದಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂತು.

ಬ್ರಿಟಿಶರ ವಾಣಿಜ್ಯ ಕೃಷಿಯ ಪ್ರಯತ್ನಗಳಿಗೆ ಬಲ ಬಂದದ್ದು ೧೮೬೧ರ ನಂತರ. ಪಶ್ಚಿಮ ಘಟ್ಟಗಳ ಕಾಡುಗಳಲ್ಲಿ ಕಾಫಿ ಮತ್ತು ಏಲಕ್ಕಿ ಬೆಳೆಯಲು ಭೂಮಿಯ ಪಟ್ಟಿಗಳನ್ನು ಹರಾಜು ಮಾಡಲಾಯಿತು. ಮಾರ್ಕ್ ಕಬ್ಬನ್ ಕಾಫಿ ಬೇಸಾಯವನ್ನು ಪರಿಚಯ ಮಾಡಿಸುವ ಪ್ರಯತ್ನಪಟ್ಟನು. ಬ್ರಿಟಿಶರು ವಾಣಿಜ್ಯ ಬೆಳೆಗಳಲ್ಲೂ ತಮಗೆ ಲಾಭ ತರುವಂಥ ಬೆಳೆಗಳಿಗೆ ಹೆಚ್ಚಿನ ಒತ್ತನ್ನು ಕೊಟ್ಟರು.[೧೫] ತಂಬಾಕು ಬೆಳೆಯಲು ಪ್ರೋತ್ಸಾಹ ನೀಡಿದ್ದು ಅಲ್ಲದೇ ಶೇಂಗಾ, ಹತ್ತಿ, ಪಪ್ಪಾಯಿ ಮುಂತಾದ ಬೆಳೆಗಳಿಗೂ ಉತ್ತೇಜನ ನೀಡಲಾಯಿತು. ಇವೆಲ್ಲವೂ ಆರ್ಥಿಕ ಬೆಳೆಗಳಾಗಿ ಗುರುತಿಸಿಕೊಂಡವು. ಇದರ ಮೂಲಕ ಅನೇಕ ಬಟ್ಟೆ ಕೈಗಾರಿಕೆಗಳು ತಲೆ ಎತ್ತುವಂತೆ ಮಾಡಿದವು. ಅದೇ ರೀತಿಯಾಗಿ ಶೇಂಗಾ ಬೆಳೆಯನ್ನು ಈ ಪ್ರದೇಶದ ಪ್ರಮುಖ ಆರ್ಥಿಕ ಬೆಳೆಯಾಗಿ ಇಂದಿಗೂ ಕಾಣಬಹುದು.

ರೈತರ ಉತ್ಪಾದನಾ ವ್ಯವಸ್ಥೆ ಮೇಲೆ ಅನೇಕ ಭೂ ಸುಧಾರಣೆಗಳು ಬರುವುದರ ಮೂಲಕ ಅವರ ಉತ್ಪಾದನಾ ವಲಯ ಕಡಿತಗೊಂಡ ಅನೇಕ ಅಂಶಗಳನ್ನು ಗುರುತಿಸಬಹುದು. ಭೂಮಿಯನ್ನು ಸಣ್ಣ ಸಣ್ಣ ತುಂಡುಗಳಾಗಿ ಹಂಚುವ ಭೂ ಸುಧಾರಣೆಗಿಂತ ಎಕರೆಗಟ್ಟಲೆ ಭೂಮಿಯನ್ನು ಒಂದು ಕಡೆ ಸೇರಿಸುವ ಭೂಸುಧಾರಣೆ ಇಂದು ಬೇಕಾಗಿದೆ ಎನ್ನುವವಾದ ಎಷ್ಟರ ಮಟ್ಟಿಗೆ ಸರಿ ಎಂದು ಪರಿಶೀಲಿಸೋಣ. ಭೂಮಿ ಗಾತ್ರ ಮತ್ತು ಮಾರುಕಟ್ಟೆಯಲ್ಲಿ ವ್ಯವಹರಿಸುವ ಶಕ್ತಿಯ ನಡುವೆ ಸಂಬಂಧ

ಕಲ್ಪಿಸಲಾಗಿದೆ. ಸಣ್ಣ ಮತ್ತು ಅತೀ ಸಣ್ಣ ರೈತರು ಮಾರುಕಟ್ಟೆಯಲ್ಲಿ ನೇರವಾಗಿ ವ್ಯವಹರಿಸುವುದು ಕಷ್ಟ ಅಂತವರು ತಮ್ಮ ಸಣ್ಣ ಭೂಮಿಯನ್ನು ಮಾರುಕಟ್ಟೆಯಲ್ಲಿ ವ್ಯವಹರಿಸುವ ದೊಡ್ಡ ರೈತರಿಗೆ ಪರಭಾರೆ ಮಾಡಿದರೆ ಸಣ್ಣ ರೈತರಿಗೆ ವಿಶೇಷ ತೊಂದರೆ ಇಲ್ಲದ ಮಾರುಕಟ್ಟೆಯ ಲಾಭಗಳು ಹರಿದು ಬರುತ್ತವೆ ಎನ್ನುವ ಗ್ರಹಿಕೆ ಈ ವಾದದ ಹಿಂದೆ ಇದೆ. ಆದರೆ ವಾಸ್ತವದಲ್ಲಿ ರೈತರಿಗೆ ಮಾರುಕಟ್ಟೆಯಲ್ಲಿ ವ್ಯವಹರಿಸಲು ಕಷ್ಟವಾಗುತ್ತಿರುವುದು ಕೃಷಿ ಭೂಮಿಯ ಗಾತ್ರದಿಂದ ಅಲ್ಲ. ಸಣ್ಣ ಮತ್ತು ಅತೀ ಸಣ್ಣ ರೈತರು ಕೂಡ ಮಾರುಕಟ್ಟೆಯಲ್ಲಿ ವ್ಯವಹರಿಸಬಹುದು. ಕರ್ನಾಟಕದ ರೈತರ ಆತ್ಮಹತ್ಯೆಯನ್ನು ಅಧ್ಯಯನ ಮಾಡಿದವರ ಪ್ರಕಾರ ಆತ್ಮಹತ್ಯೆಗೂ ಕೃಷಿ ಭೂಮಿಯ ಗಾತ್ರಕ್ಕೂ ಸಂಬಂಧ ಇಲ್ಲ. ಅಂದರೆ ಸಣ್ಣ ರೈತರು ಹೆಚ್ಚು ಸಂಖ್ಯೆಯಲ್ಲಿ ಆತ್ಮಹತ್ಯೆ ಮಾಡಿಕೊಂಡಿಲ್ಲ. ಎಲ್ಲ ಗಾತ್ರದ ರೈತರು ಆತ್ಮಹತ್ಯೆ ಮಾಡಿಕೊಂಡವರಲ್ಲಿ ಕಂಡು ಬರುತ್ತಾರೆ.[೧೬] ಅದೇ ರೀತಿಯಲ್ಲಿ ಆತ್ಮಹತ್ಯೆ ಮಾಡಿಕೊಂಡವರಲ್ಲಿ ಮಾರುಕಟ್ಟೆ ಆಳವಾಗಿ ಬೇರೂರಿದ ಪ್ರದೇಶಗಳ (ಕರಾವಳಿ ಕರ್ನಾಟಕ, ಬೆಂಗಳೂರು ಮುಂತಾದ ಪ್ರದೇಶದ) ರೈತರ ಸಂಖ್ಯೆ ಕಡಿಮೆ ಇದೆ. ಆದರೆ ಮಾರುಕಟ್ಟೆ ವಿಶೇಷವಾಗಿ ಬೆಳೆಯದಿರುವ ಪ್ರದೇಶಗಳಲ್ಲಿ ದಾವಣಗೆರೆ, ಚಿತ್ರದುರ್ಗ, ಹಾವೇರಿ, ರೈತರು ಹೆಚ್ಚು ಆತ್ಮಹತ್ಯೆ ಮಾಡಿಕೊಂಡಿದ್ದಾರೆ.[೧೭] ಆದುದರಿಂದ ಮಾರುಕಟ್ಟೆ ವ್ಯವಹಾರ ಮತ್ತು ರೈತರ ಕೃಷಿ ಭೂಮಿ ಗಾತ್ರಕ್ಕೂ ಸಂಬಂಧ ಕಲ್ಪಿಸುವುದು ಸರಿಯಲ್ಲ. ಭೂಮಿಯ ಗಾತ್ರಕ್ಕಿಂತ ಸಣ್ಣ ರೈತರನ್ನು ಕಾಡುವ ದೊಡ್ಡ ಸಮಸ್ಯೆಗಳೆಂದರೆ (ಮಾರುಕಟ್ಟೆಯಲ್ಲಿ ವ್ಯವಹರಿಸುವ ದೃಷ್ಟಿಯಿಂದ) ಬೇಡಿಕೆ ಮತ್ತು ಪೂರೈಕೆ ಲೆಕ್ಕಚಾರ ಇಲ್ಲದಿರುವುದು, ಗ್ರಾಮೀಣ ಪ್ರದೇಶಗಳಲ್ಲಿ ಸಾರಿಗೆ ಸಂಪರ್ಕಗಳ ಕೊರತೆ, ಬೆಳೆದಿರುವುದನ್ನು ಬೇಡಿಕೆ ಬರುವ ತನಕ ಕಾಯ್ದಿರಿಸಲು ಬೇಕಾಗಿರುವ ಕೋಲ್ಡ್ ಸ್ಟೋರೇಜ್ ಸೌಲಭ್ಯಗಳ ಕೊರತೆ, ನೀರಾವರಿಯ ಕೊರತೆ, ಮಾರುಕಟ್ಟೆ ಮಾಹಿತಿ ಕೊರತೆ, ಅಧಿಕೃತ ಹಣಕಾಸು ಸಂಸ್ಥೆಗಳಿಂದ ದೊರೆಯದಿರುವ ಹಣಕಾಸು ಸೌಲಭ್ಯ ಇತ್ಯಾದಿಗಳು ಸಣ್ಣ ರೈತರು ಮಾರುಕಟ್ಟೆಯಲ್ಲಿ ವ್ಯವಸಹರಿಸುವಲ್ಲಿ ದೊಡ್ಡ ತೊಡಕಾಗಿವೆ.[೧೮] ಮೇಲಿನ ಎಲ್ಲ ಕೊರತೆಗಳು ವ್ಯವಹಾರದ ವೆಚ್ಚವನ್ನು ಹೆಚ್ಚಿಸುತ್ತವೆ. ವ್ಯವಹಾರದ ವೆಚ್ಚ ಹೆಚ್ಚಿದಂತೆ ಮಾರುಕಟ್ಟೆಯಲ್ಲಿ ಸ್ಪರ್ಧಿಸುವ ಶಕ್ತಿ ಕಡಿಮೆ ಆಗುತ್ತದೆ.

ಮಧ್ಯಯುಗದಲ್ಲಿ ರೈತರು ಎರಡು ಕಡೆಯಿಂದ ಶೋಷಣೆ ಗುರಿಯಾಗುತ್ತಿದ್ದರು. ಒಂದು ಕಡೆ ಅಂದಿನ ಆಡಳಿತ ವರ್ಗ, ಜಮೀನ್ದಾರರು ಒಂದಾಗಿ ಸೇರಿ ಮಡುವ ಶೋಷಣೆ, ಮತ್ತೊಂದು ಕಡೆ ಸಮಾಜದೊಳಗಿನ ಅಂತರಿಕ ವರ್ಗೀಕರಣ, ಮಾರ್ಕೆಟ್ ಅಭಿವೃದ್ಧಿ ಅಂಶಗಳ ರೂಪದಲ್ಲಿ ನಡೆಯುವ ಶೋಷಣೆ. ಆದರೆ ಈ ಎರಡು ಬಗೆಯ ಬೆಳವಣಿಗೆಗೆ ಕಾರಣಗಳು ಗ್ರಾಮೀಣ ಸಮಾಜದ ಹೊರಗೆ ಇದ್ದವು. ಮಧ್ಯಯುಗದಲ್ಲಿ ಕೃಷಿ ಉತ್ಪನ್ನಗಳ ರೂಪದಲ್ಲಿ ಕೃಷಿಯ ಹೆಚ್ಚುವರಿ ಮೌಲ್ಯವನ್ನು ಪಟ್ಟಣಗಳಿಗೆ ಸಾಗಿಸುವುದರಿಂದ ಏರ್ಪಟ್ಟ ಆರ್ಥಿಕ ಪರಿಸ್ಥಿತಿಗಳೆ ಬೆಳವಣಿಗೆಗಳಿಗೆ ಬುನಾದಿ ಹಾಕಿವೆ.

ಬಹುಭಾಗದ ರೈತಾಪಿವರ್ಗಕ್ಕೆ ಯಾವುದೋ ಒಂದು ಬಗೆಯಲ್ಲಿ ಬದುಕುವುದೇ ದೊಡ್ಡ ಹೋರಾಟವಾಗಿತ್ತು. ಅದಕ್ಕೂ ಮೊದಲ ೧೭ನೇ ಶತಮಾನದ ಬಗ್ಗೆ ನಮಗೆ ಹೆಚ್ಚಿನ ಮಾಹಿತಿ ಲಭಿಸುತ್ತದೆ. ಪ್ರಕೃತಿ ವೈಪರೀತ್ಯಗಳ ಅಧೀನದಲ್ಲಿ ಮಾನವರೆಲ್ಲರೂ ಅನುಭವಿಸುವ ದುರಾವಸ್ಥೆ ಹಾಗೇ ಇದ್ದೇ ಇದೆ. ರೈತರ ವಿಷಯದಲ್ಲಿ ಇದಕ್ಕೆ ದುರ್ಭರವಾದ ಭೂಮಿ ತೆರಿಗೆ ಸೇರಿಕೊಂಡಿತು. ರೈತರ ಉತ್ಪಾದನೆಯಲ್ಲಿ ಹೆಚ್ಚಿನ ಭಾಗವನ್ನು ತೆರಿಗೆ ರೂಪದಲ್ಲಿ ಕಿತ್ತುಕೊಂಡು ಹೋಗುತ್ತಿದ್ದರು. ಅದ್ದರಿಂದ

ರೈತಾಪಿ ವರ್ಗಕ್ಕೆ ಸಂಬಂಧಿಸಿದ ಎಲ್ಲ ಸಾಮಾಜಿಕ ಘರ್ಷಣೆಗಳಿಗೆ ಭೂಮಿ ತೆರಿಗೆಯ ಭಾರವೇ ಮೂಲ ಕಾರಣವಾಗಿ ಕೆಲಸ ಮಾಡಿದೆ. ಜಮೀನ್ದಾರರು ಮತ್ತು ರೈತರ ನಡುವೆಯಾಗಲಿ, ಮೇಲ್ವರ್ಗಗಳ ರೈತರು (ಶ್ರೀಮಂತ) ಮತ್ತು ಸಾಮಾನ್ಯ ರೈತರ ನಡುವೆಯಾಗಲಿ ಸಶಸ್ತ್ರ ರೂಪ ಪಡೆದುಕೊಂಡ ಘರ್ಷಣೆಗಳು ಬಹಳ ಕಡಿಮೆ. ಅಂದಿನ ಸಮಾಜದಲ್ಲಿ ಭೂ ತೆರಿಗೆಗಳೇ ಮುಖ್ಯ ವೈರುಧ್ಯಗಳಾಗಿ ಕೆಲಸ ಮಾಡಿವೆ. ಉಳಿದ ಘರ್ಷಣೆಗಳೆಲ್ಲ ದ್ವಿತೀಯ ವೈರುಧ್ಯಗಳಾಗಿಯೆ ಕೆಲಸ ಮಾಡಿವೆ.

ನಾಯಕರ ಕಾಲದಲ್ಲಿ ಈ ಮೇಲಿನ ಎಲ್ಲ ವ್ಯವಸ್ಥೆಗಳಿಗೆ ಒಳಗಾಗಬೇಕಾದ ಅನಿವಾರ್ಯತೆ ರೈತರದ್ದಾಗಿತ್ತು. ಆದರೆ ಪಾಶ್ಚಿಮಾತ್ಯ ಕೃಷಿ ಹಾಗೂ ತಂತ್ರಜ್ಞಾನದ ಬಳಕೆಯು ಈ ಕಾಲದಲ್ಲಿ ಹೆಚ್ಚು ಪ್ರಚೂರಗೊಂಡಿದ್ದರಿಂದ ಅಭಿವೃದ್ಧಿಯ ಅನೇಕ ಅಂಶಗಳನ್ನು ಕೂಡ ಗುರುತಿಸಬಹುದು.

**ವ್ಯಾಪಾರಿ ವರ್ಗಗಳ ಗುರುತಿಸಿಕೊಳ್ಳುವಿಕೆ**

ವ್ಯಾಪಾರಿಗಳು ಮತ್ತು ವರ್ತಕ ಸಂಘಗಳು ರಾಜಕೀಯವಾಗಿ ಮತ್ತು ಆಡಳಿತಾತ್ಮಕವಾಗಿ ಭಾಗವಹಿಸುತ್ತಿದ್ದರು. ರಾಜ ಮತ್ತು ರಾಜ್ಯದೊಡನೆ ಆದಷ್ಟು ಮಟ್ಟಿಗೆ ಸುಮಧುರ ಸಂಬಂಧಗಳನ್ನು ಹೊಂದಿರುತ್ತಿದ್ದರು. ಆರ್ಥಿಕ ರಂಗದ ವಿವಿಧ ಚಟುವಟಿಕೆಗಳಾದ ವ್ಯವಸಾಯ ಕೈಗಾರಿಕೆ, ಕುಶಲಕಲೆ, ವ್ಯಾಪಾರ-ವಾಣಿಜ್ಯ ಮೊದಲಾದ ಯಾವುದೇ ಕ್ಷೇತ್ರ ಅಭಿವೃದ್ಧಿ ಹೊಂದಬೇಕಾದರೆ ಆಳುವ ವರ್ಗದ ಪ್ರೋತ್ಸಾಹ ಮತ್ತು ಪೋಷಣೆ ಅವಶ್ಯಕವಾದುದು. ರಾಜಕೀಯ ಸ್ಥಿರತೆ ಮತ್ತು ಆಡಳಿತದ ವ್ಯವಸ್ಥೆಯಿಂದ ಮಾತ್ರ ಆರ್ಥಿಕ ಸುಭದ್ರತೆ ಮತ್ತು ಸಮೃದ್ಧಿಯನ್ನು ಸಾಧಿಸಲು ಸಾಧ್ಯ. ರಾಜರು, ರಾಣಿಯರು, ಮಂತ್ರಿಗಳು ಹಾಗೂ ವಿವಿಧ ಅಧಿಕಾರ ವರ್ಗದವರಿಂದ ಪ್ರೋತ್ಸಾಹ ಪಡೆದುಕೊಂಡ ವರ್ತಕರು, ಲಭ್ಯವಾಗಿದ್ದ ಸಂಪನ್ಮೂಲಗಳನ್ನು ವ್ಯವಸ್ಥಿತವಾಗಿ ಬಳಸಿಕೊಂಡು ವ್ಯಾಪಾರ-ವಾಣಿಜ್ಯಗಳನ್ನು ಅಭಿವೃದ್ಧಿಪಡಿಸಿದರು.

ಮುಕ್ತ ಅಥವಾ ಸರಳವಾದ ವ್ಯಾಪಾರ ವಾಣಿಜ್ಯ ಚಟುವಟಿಕೆಗಳಿಗೆ ರಾಜಾಶ್ರಯವು ಅತ್ಯಾವಶ್ಯಕ. ವ್ಯಾಪಾರ ಮತ್ತು ವಾಣಿಜ್ಯದಿಂದ ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಆದಾಯ ಬರುತ್ತಿದ್ದರಿಂದ, ಅಂದಿನ ಆಳುವ ವರ್ಗ ವ್ಯಾಪಾರ ವಾಣಿಜ್ಯಕ್ಕೆ ಪ್ರೋತ್ಸಾಹವನ್ನು ಕೊಟ್ಟು ಅದರ ಅಭಿವೃದ್ಧಿಗಾಗಿ ಸಹಕರಿಸುತ್ತಿದ್ದರು. ಆದುದರಿಂದ ಸರಕಾರವು ಕ್ರಮಬದ್ಧ ತೆರಿಗೆ ಹಾಗೂ ಹಲವು ರಿಯಾಯಿತಿ ಮತ್ತು ಪ್ರೋತ್ಸಾಹಗಳ ಮೂಲಕ ವರ್ತಕರನ್ನು ಬೆಂಬಲಿಸುತ್ತಿತ್ತು. ಸರಕಾರವು ವರ್ತಕ ಸಂಘ ಅಥವಾ 'ವಣಿಕ' ಸಂಘಗಳ ವಿಚಾರದಲ್ಲಿ ಯಾವುದೇ ತೆರನಾದ ಹಸ್ತಕ್ಷೇಪ ಮಾಡುತ್ತಿರಲಿಲ್ಲವಾದುದರಿಂದ ಅವು ಸ್ವಾಯತ್ತ ಸಂಸ್ಥೆಗಳಾಗಿ ಸ್ವತಂತ್ರವಾಗಿ ಕಾರ್ಯನಿರ್ವಹಿಸುತ್ತಿದ್ದವು. ಸೈನ್ಯ ಮತ್ತು ವ್ಯಾಪಾರ ದೃಷ್ಟಿಗಳಿಂದ ರಸ್ತೆಗಳು, ಸಾರಿಗೆ ಸಂಪರ್ಕಗಳು ಮತ್ತು ಬಂದರುಗಳ ಮಹತ್ವವನ್ನು ಅರಿತಿದ್ದ ರಾಜರು ಉತ್ತಮ ರಸ್ತೆಗಳನ್ನು ನಿರ್ಮಿಸಿ, ನೆರಳಿಗಾಗಿ ಸಾಲುಮರಗಳನ್ನು ನೆಡಿಸಿ, ವರ್ತಕರು ತಂಗಲು ವಿಶ್ರಾಂತಿ ಗೃಹಗಳನ್ನು ನಿರ್ಮಿಸಿ, ದರೋಡೆಕೋರರು ಮತ್ತು ಕಳ್ಳಕಾಕರ ಆಕ್ರಮಣಗಳಿಂದ ವ್ಯಾಪಾರಿಗಳನ್ನು ಸಂರಕ್ಷಿಸಿ, ವ್ಯಾಪಾರ ವಹಿವಾಟುಗಳು ಸುಗಮವಾಗಿ ನಡೆದುಕೊಂಡು ಹೋಗಲು ಹಲವು ಬಗೆಯ ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳನ್ನು ಟಂಕಿಸಿ, ಚಲಾವಣೆಗೆ ತಂದಿರುವುದನ್ನು ದಾಖಲೆಗಳ ಸಮೇತ ನೋಡಬಹುದು.

ಪ್ರಭುತ್ವವು ಎಲ್ಲೆಲ್ಲಿ ಸಾಧ್ಯವೋ ಮತ್ತು ಎಲ್ಲೆಲ್ಲಿ ಅಗತ್ಯವೋ ಅಲ್ಲೆಲ್ಲಾ ಹೆಚ್ಚುವರಿ ಉತ್ಪಾದನೆಗೆ ತಕ್ಕ ಪರಿಸ್ಥಿತಿಯನ್ನು ನಿರ್ಮಿಸುತ್ತಿತ್ತು. ಹೊಸದಾಗಿ ಭೂಮಿಯನ್ನು ಕೃಷಿಗೊಳಪಡಿಸುವ ಅವರ ನೀತಿಯ

ಫಲವಾಗಿ ಕೃಷಿ ಉತ್ಪಾದನೆ ಹೆಚ್ಚಿತು. ಈ ನೀತಿಯನ್ನು ನಾಯಕರ ಕಾಲದಲ್ಲಿಯೂ ಗುರುತಿಸಬಹುದು. ಅದಕ್ಕಿಂತ ಮಿಗಿಲಾಗಿ ಅವರ ಪ್ರಜೆಗಳು ಮಾರುಕಟ್ಟೆಗಳಲ್ಲಿ ಆ ಹೆಚ್ಚುವರಿ ಉತ್ಪನ್ನಗಳನ್ನು ಮಾರಾಟ ಮಾಡುತ್ತಿದ್ದುದರಿಂದ ನಾಯಕರ ಭಂಡಾರಕ್ಕೆ ಅಧಿಕ ಆದಾಯ ಬರುತಿತ್ತು. ನಾಯಕರ ಒಟ್ಟು ವಾರ್ಷಿಕ ಆದಾಯ ನಲವತ್ತು ಲಕ್ಷ ಪಗೋಡಗಳು ಆಗಿದ್ದವು. ಹಾಗಾಗಿ, ವಾಣಿಜ್ಯ ಅಗತ್ಯ ಮತ್ತು ಹೆಚ್ಚುವರಿ ಇದ್ದುದು ಈ ಕಾರಣಗಳಿಂದ ಹಲವು ನಗರ ಪಟ್ಟಣಗಳು ಬೆಳೆಯಲು ಅವಕಾಶವಾಯಿತು. ಪ್ರಾಂತ್ಯಾಧಿಕಾರಿಗಳು ನಾಡಿನ ಮುಖ್ಯಸ್ಥರು, ವರ್ತಕರು ಮತ್ತು ಪ್ರಭುತ್ವದೊಂದಿಗೆ ಸಹಯೋಗದಿಂದ ಅನುಕೂಲವಾಗಿದ್ದ ಸ್ಥಳಗಳನ್ನು ಸ್ಥಾಪಿಸುತ್ತಿದ್ದರು. ಪ್ರತಿಯೊಂದು ನಾಡಿನ ಪಟ್ಟಣಗಳು ಅಥವಾ ಮಾರುಕಟ್ಟೆ ಕೇಂದ್ರಗಳು, ಕ್ರಿಶ್ಚಿಯನ್ನರು, ಮುಸ್ಲಿಮರು, ಗುಜರಾತಿಗಳು, ಕೊಂಕಣಿಗಳು, ಬಣಜಿಗರು, ಸೆಟ್ಟಿ–ಗುತ್ತ, ಜೈನರು ದೇಶಿ, ನಾನಾದೇಶಿ, ನಗರ, ಗವರೆ, ಗತ್ತಿಗ, ಶೆಟ್ಟಿಗುತ್ತ, ಮುಮ್ಮರಿದಂಡ ಮತ್ತು ಅಂಜಮಾನ ಮುಂತಾದವರೊಂದಿಗೆ ಸಂಬಂಧವಿರಿಸಿಕೊಂಡಿದ್ದುದು ತಿಳಿದುಬರುತ್ತದೆ.[೨೦]

ವ್ಯಾಪಾರಿಗಳು, ವ್ಯಾಪಾರ–ವಾಣಿಜ್ಯಗಳಿಂದ ಸಂಗ್ರಹಿದ ಹಣವನ್ನು ಧಾರ್ಮಿಕ ಕಾರ್ಯಗಳಿಗೂ ವಿನಿಯೋಗಿಸುತ್ತಿದ್ದರಲ್ಲದೆ, ಭೌತಿಕ ಜೀವನವೇ ಶ್ರೇಷ್ಠವೆಂದು ಬಗೆಯದೆ ಧಾರ್ಮಿಕ ಬದುಕು ನಡೆಸಿದರು. ಅವರು ಕೈಗೊಂಡ ಧಾರ್ಮಿಕ ಕಾರ್ಯಗಳಿಗೆ ಅಂದಿನ ಪರಿಸರವೂ ಪ್ರೇರಣೆ, ಪ್ರೋತ್ಸಾಹ ನೀಡಿದೆ. ಅಲ್ಲದೆ ಮಹಾ ಪ್ರಧಾನ, ದಂಡನಾಯಕ, ದಳವಾಯಿ, ಗೌಡ ಮೊದಲಾದವರು ಧಾರ್ಮಿಕ ಕಾರ್ಯಗಳ ಪ್ರೋತ್ಸಾಹ ಮತ್ತು ಉತ್ತೇಜನಗಳಿಗಾಗಿ ವರ್ತಕರಿಗೆ ಹಲವು ರೀತಿಯಲ್ಲಿ ದತ್ತಿಗಳನ್ನು ಕೊಟ್ಟಿದ್ದಾರೆ.[೨೧] ಈ ಹಿಂದೆಯೇ ಹಲವು ವರ್ತಕರ ಉಲ್ಲೇಖ ಹಾಗೂ ಅವರು ನೀಡಿದ ದಾನದ ಅಂಶಗಳನ್ನು ವಿವರಿಸಿದ್ದು, ದಾನ ಮತ್ತು ಪ್ರತಿಪಾಲನೆಗಳು ಪುಣ್ಯ ಅಥವಾ ಪ್ರಾಪ್ತಿಯ ಪರಮ ಸಾಧನಗಳು. ಹೀಗಾಗಿ ದಾನ ನೀಡುವುದು ಅಂದಿನ ಕಾಲದ ಪುಣ್ಯ, ಸ್ವರ್ಗ ಪಡೆಯುವ ಉದ್ದೇಶವಾಗಿತ್ತು.

ನಾಯಕರ ಕಾಲದಲ್ಲಿ ವ್ಯಾಪಾರಿ ಸಮುದಾಯಗಳ ಸಹಭಾಗಿತ್ವ ಹೆಚ್ಚಾದಂತೆಲ್ಲಾ ಪೇಟೆ–ಪಟ್ಟಣಗಳು ಬಿರುಸಿನ ವ್ಯಾಪಾರ ಚಟುವಟಿಕೆಗಳ ಕೇಂದ್ರಗಳಾಗಿ ಪರಿವರ್ತನೆಗೊಂಡವು. ವ್ಯಾಪಾರ ಸಾಮಗ್ರಿಗಳ ಸಾಗಾಣಿಕೆಯ ದೃಷ್ಟಿಯಿಂದ ಸಾರಿಗೆ ಸಂಪರ್ಕ. ಕ್ಷೇತ್ರದಲ್ಲಿ ಮಹತ್ತರವಾದ ಬದಲಾವಣೆಗಳುಂಟಾದವು. ಅನೇಕ ಹೊಸ ರಸ್ತೆಗಳ ನಿರ್ಮಾಣ, ನದಿ ಮತ್ತು ಸಾಗರದ ಬಳಕೆ ಇವೆಲ್ಲವೂ ವ್ಯಾಪಕವಾಗಿ ನಡೆದವು. ರೈತ ಮತ್ತು ವರ್ತಕರ ಮಧ್ಯೆಕೊಂಡಿಗಳಾಗಿ ವ್ಯವಹರಿಸುವ ಏಜೆಂಟರುಗಳು ಅಥವಾ ಲೇವಾದೇವಿದಾರರ ವರ್ಗವೊಂದು ಹುಟ್ಟಿಕೊಂಡಿತು. ಇವರು ಮಧ್ಯವರ್ತಿಗಳಾಗಿದ್ದು, ಹಣಕಾಸಿನ ನೆರವನ್ನು ಕೃಷಿಕರಿಗೆ ಮತ್ತು ವರ್ತಕರಿಗೆ ಒದಗಿಸುತ್ತಿದ್ದರು. ವ್ಯಾಪಾರಸ್ಥರಿಗೆ ಹಾಗೂ ವಾಣಿಜ್ಯ ಬೆಳೆಗಳನ್ನು ಬೆಳೆಯುವವರಿಗೆ ಹಣಕಾಸಿನ ನೆರವನ್ನು ಹೊಸದಾಗಿ ಅಸ್ತಿತ್ವಕ್ಕೆ ಬಂದ ಲೇವಾದೇವಿದಾರರು ನೀಡಲಾರಂಭಿಸಿದವು. ವ್ಯಾಪಾರಸ್ತರ ಹಿತಾಸಕ್ತಿಗಳನ್ನು ಕಾಪಾಡುವ ಉದ್ದೇಶದಿಂದ ವಣಿಕ ಸಂಘಗಳು ಹುಟ್ಟಿಕೊಂಡವು. ಹೀಗೆ ಇವೆಲ್ಲವೂ ಹಂತ ಹಂತವಾಗಿ ಬೆಳೆದು ಬಂದು ವ್ಯಾಪಾರ ಮತ್ತು ವಾಣಿಜ್ಯ ವ್ಯವಸ್ಥಿತವಾಗಿ ನಡೆಯುವಂತೆ ಹಾಗೂ ಲಾಭದಾಯಕವಾಗುವಂತೆ ಆಯಿತು. ಇದರರ್ಥ ಲಾಭಗಳನ್ನು ಎಲ್ಲರೂ ಪಡೆದುಕೊಂಡರು ಎಂದಲ್ಲ. ಶ್ರೀಮಂತ ವರ್ತಕರು, ಪ್ಲಾಂಟರುಗಳು, ಖಾಸಗಿ ಕೈಗಾರಿಕೆಗಳು, ಕಂಪನಿಗಳು ಮತ್ತು ಮಧ್ಯವರ್ತಿಗಳು ಇದರ ಲಾಭವನ್ನು ಗರಿಷ್ಠ ಪ್ರಮಾಣದಲ್ಲಿ ಪಡೆದುಕೊಂಡರು.[೨೨]

ವ್ಯಾಪಾರಕ್ಕೆ ಹೋದ ವರ್ತಕರನ್ನು ಯವುದೇ ಗ್ರಾಮ ಅಥವಾ ಪ್ರದೇಶದ ಪುರ ಪ್ರಮುಖರು ವೀಳ್ಯದೆಲೆ, ಉಡುಗೊರೆ ಸಲ್ಲಿಸುವುದರೊಂದಿಗೆ ಬರಮಾಡಿಕೊಳ್ಳುತ್ತಿದ್ದರು. ವರ್ತಕರು, ಅರಸರು, ಪುರ ಪ್ರಮುಖರಿಂದ ಮರ್ಯಾದೆ ಪಡೆಯುತ್ತಿದ್ದುದು ಸಮಾಜದಲ್ಲಿ ಅವರು ಗಳಿಸಿಕೊಂಡ ಗೌರವದ ಸಂಕೇತವಾಗಿತ್ತು. ಆದುದರಿಂದಲೇ ವರ್ತಕರು ಸಮಾಜಕ್ಕೆ ಉಪಯೋಗವಾಗುವ ಹಲವಾರು ಸಾಮಾಜಿಕ ಸೇವೆಗಳನ್ನು ಕೈಗೊಳ್ಳುತ್ತಿದ್ದರೆಂಬುದಕ್ಕೆ ಹಲವು ಉದಾಹರಣೆಗಳಿವೆ. ಬಾಳು ತಪ್ಪಿದ ಹೆಣ್ಣಿಗೆ ಕೆಲವು ನಿಯಮಗಳನ್ನು ಹಾಕಿ, ಆಕೆಯ ಬಾಳು ಸುಗಮವಾಗಿ ಸಾಗುವ ವ್ಯವಸ್ಥೆಯನ್ನು ಬಾಗೂರ ಮಲ್ಲಿಸೆಟ್ಟಿ, ಹಿರೇಬಾಗೂರ ತಿಮ್ಮ ಸೆಟ್ಟಿ, ಹೊನ್ನವಳ್ಳಿಯ ಸೂರಿಸೆಟ್ಟಿ ಮಾಡಿದ್ದರೆಂದು ತಿಪಟೂರು ಶಾಸನದಿಂದ ತಿಳಿದುಬರುತ್ತದೆ.[೨೩]

ಮೈಸೂರು ಸಂಸ್ಥಾನ ಭೀಕರ ಕ್ಷಾಮಕ್ಕೆ ಒಳಪಟ್ಟಾಗ ಸ್ವಲ್ಪವೂ ಮಳೆ ಬೆಳೆಯಿಲ್ಲದೆ ಹಸಿವು, ರೋಗ ರುಜಿನಗಳು ತಾಂಡವವಾಡಿದವು. ಇದಕ್ಕೆ ಸಿಕ್ಕ ಸಾವಿರಾರು ಜನ ಸತ್ತರು ಬ್ರಿಟೀಶ ಕಮೀಷನರ್ ನೇತೃತ್ವದ ಆಗಿನ ಮೈಸೂರು ಸರಕಾರವು ಪರಿಹಾರ ಕಾರ್ಯಗಳನ್ನು ಕೈಗೊಂಡಿತಾದರೂ, ರಾಜ್ಯದ ಬೊಕ್ಕಸ ಬರಿದಾಗಿ ಆರ್ಥಿಕ ಸ್ಥಿತಿ ತೀರ ಹದಗೆಟ್ಟಿತು. ಈ ಸಂಗತಿ ಆಗಲೇ ಚರಿತ್ರೆಯಲ್ಲಿ ವ್ಯಕ್ತವಾಗಿದೆ. ಈ ಅವಧಿಯಲ್ಲಿ ಅದರಲ್ಲೂ ೧೮೭೬ರಲ್ಲಿ ಚಿತ್ರದುರ್ಗದ ಪ್ರಾಂತ್ಯವೂ ಬರದ ಕ್ರೂರ ದವಡೆಯಲ್ಲಿ ಸಿಕ್ಕಿ ನರಳಿತು. ಆಗ ಹಸಿದು ಕಂಗಾಲಾದ ಜನರಿಗೆ ತಮ್ಮ ಶಕ್ತಿ ಮೀರಿ ಅನ್ನದಾನ ಮಾಡಿದವರು ಕಾಶಿ ಅಪ್ಪಣ್ಣ ಶೆಟ್ಟರು. ಚಿತ್ರದುರ್ಗದ ದೊಡ್ಡ ಪೇಟೆಯ ಉಚ್ಚಂಗಮ್ಮ ದೇವಸ್ಥಾನದ ಮುಂದೆ ಸುಮಾರು ಮೂರು ತಿಂಗಳ ಕಾಲ ಈ ಅಂಬಲಿದಾನ ನಡೆದದ್ದು ತಲೆಮಾರಿನಿಂದ ತಲೆಮಾರಿಗೆ ನೆನಪಾಗಿ ಉಳಿದಿದೆ.[೨೪]

ಚಿತ್ರದುರ್ಗ ಪ್ರದೇಶವು ಪ್ರಾಚೀನ ಕಾಲದಿಂಲೂ ಅನೇಕ ವರ್ತಕ ಸಮುದಾಯಗಳನ್ನು ಹೊಂದಿರುವ ಪ್ರದೇಶವಾಗಿದೆ. ಉದಾ: ರಾಜಸ್ಥಾನಿಗಳು, ಗುಜರಾತಿಗಳು, ಜೈನರು, ಮುಸ್ಲಿಮರು ಮುಂತಾದವರು. ಇವರು ದೂರದ ಪರ್ಶಿಯಾ, ಅರೇಬಿಯಾ, ಆಫ್ರಿಕಾ ಮತ್ತು ಯುರೋಪ್ ದೇಶಗಳೊಡನೆ ವಾಣಿಜ್ಯ ಸಂಬಂಧವನ್ನು ಹೊಂದಿದ್ದರು. ಸಾಗರೋತ್ತರ ವ್ಯಾಪಾರಕ್ಕೆ ನಾಯಕರ ಕಾಲದ ವರ್ತಕರು ನಾವೆಗಳನ್ನು ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ.

ಚಿತ್ರದುರ್ಗ ಪ್ರದೇಶವು ಜೈನರ ಪ್ರಮುಖ ವ್ಯಾಪಾರಿ ಕೇಂದ್ರವಾಗಿ ಗುರುತಿಸಿಕೊಂಡಿದೆ. ಇಲ್ಲಿ ಅಮೃತ ಶಿಲೆಗಳಿಂದ ನಿರ್ಮಿಸಿದ ಎರಡು ಬಸದಿಗಳಿವೆ. ಹಾಗೆಯೇ ಇವರು ವಾಸಿಸುವ ಪ್ರದೇಶವು ಮೂರು ಬಜಾರುಗಳಿಂದ ಕೂಡಿದೆ. ದೊಡ್ಡಪೇಟೆಯಲ್ಲಿ ಇವರ ವ್ಯಾಪಾರಿ ಮಳಿಗೆಗಳು ಹಾಗೂ ಲಕ್ಷ್ಮೀ ಬಜಾರ್‌ನಲ್ಲಿ ಅಧಿಕ ಸಂಖ್ಯೆಯ ವ್ಯಾಪಾರಿ ಮಳಿಗೆಗಳನ್ನು ಹೊಂದಿದ್ದಾರೆ. ಜಾನಕಲ್ಲು ಪ್ರದೇಶವು ಹೊಯ್ಸಳರ ಕಾಲದ ಪ್ರಮುಖ ವಾಸಸ್ಥಳ ಅದು ಅನೇಕ ಜೈನ ಮುನಿಗಳ ತಪಸ್ಸಿನ ಸ್ಥಳ. ಇಲ್ಲಿ ವಾಸಿಸುವ ಬಹುತೇಕ ಜೈನರು ಹೊಸದುರ್ಗ ತಾಲೂಕು ಕೇಂದ್ರದಲ್ಲಿ ಅತೀ ಹೆಚ್ಚು ವ್ಯಾಪಾರಿ ಮಳಿಗೆಗಳನ್ನು ಹೊಂದಿದ್ದಾರೆ. ಹೆಗ್ಗೆರೆ[೨೫] ಮತ್ತು ಹೊಳ್ಳಲ್ಕೆರೆ, ದಾವಣಗೆರೆಯಲ್ಲಿ ಜೈನ ಬಸದಿಗಳಿದ್ದು, ಅಲ್ಲಿ ಜೈನ ಸಮುದಾಯ ನಗರೀಕರಣ ಪ್ರಕ್ರಿಯೆಗೆ ಹಾಗೂ ವ್ಯಾಪಾರ ಉದ್ದಿಮೆಯನ್ನು ಅಭಿವೃದ್ಧಿ ಪಡಿಸಲು ಮೂಲ ಕಾರಣವಾದ ವರ್ತಕ ಸಮುದಾಯವಾಗಿದೆ.

ಗುಜರಾತಿಗಳು ರಾಜಪ್ರಭುತ್ವದ ಕಾಲಾವಧಿಯಲ್ಲಿಯೇ ಕರ್ನಾಟಕಕ್ಕೆ ಬಂದಿದ್ದರು. ಈ ವಿಷಯ ಕುರಿತು ಹಿಂದೆ ಚರ್ಚಿಸಲಾಗಿದೆ. ನಾಯಕರು ತಮ್ಮ ಕಾಲಾವಧಿಯಲ್ಲಿಯೇ ವಿದೇಶಿ ವರ್ತಕರಿಗೆ ಮುಖ್ಯವಾಗಿ ಯುರೋಪಿನ ಕಂಪನಿಗಳಿಗೆ ವ್ಯತಿರಿಕ್ತವಾಗುವಂತೆ ವ್ಯಾಪಾರವನ್ನು ಉತ್ತೇಜಿಸಲು ಗುಜರಾತಿಗಳು ಮತ್ತು ರಾಜಾಸ್ಥಾನಿಗಳು ಕಂಪನಿಯ ಮಧ್ಯವರ್ತಿಗಳಾಗಿ ಹಾಗೂ ವ್ಯಾಪಾರಿ ಸಮುದಾಯಗಳಾಗಿ ದುರ್ಗ ಪರಿಸರದಲ್ಲಿ ನೆಲೆಸಿದ್ದರು. ಇವರಿಗೆ ವ್ಯಾಪಾರವನ್ನು ಕೈಗೊಳ್ಳುವಂತೆ ಮಾಡಿ ಇವರಿಗೆ ಸೌಲಭ್ಯಗಳನ್ನು ಮತ್ತು ರೀಯಾಯಿತಿಗಳನ್ನು ಒದಗಿಸಿದ್ದರು. ಬ್ರಿಟಿಶರ ಅವಧಿಯಲ್ಲಿಯೂ ಈ ವರ್ತಕ ಸಮುದಾಯವು ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ನೆಲೆಸಿತ್ತು ಇವರು ಬ್ರಿಟಿಶರ ಅವಧಿಯಲ್ಲಿ ಶ್ರೀಮಂತ ವರ್ತಕರಾಗಿ, ಮಧ್ಯವರ್ತಿಗಳಾಗಿ, ಹಾಗೂ ಲೇವಾದೇವಿದಾರರಾಗಿದ್ದರು. ಇವರು ಬ್ರಿಟಿಶರ ಮತ್ತು ಸ್ಥಳೀಯ ವರ್ತಕರ ಮಧ್ಯ ಏಜೆಂಟರುಗಳಾಗಿಯೂ ಕಾರ್ಯನಿರ್ವಹಿಸುತ್ತಿದ್ದರು. ಬ್ರಿಟಿಶರ ಅವಧಿಯಲ್ಲಿ ಇವರು ವ್ಯಾಪಾರದಲ್ಲಿ ಇನ್ನೂ ಹೆಚ್ಚಿನ ತರಬೇತಿಯನ್ನು ಪಡೆದರು. ಗುಜರಾತಿಗಳು ಕಷ್ಟಜೀವಿಗಳಾಗಿದ್ದು, ವ್ಯಾಪಾರದಲ್ಲಿ ಪರಿಣಿತಿ ಹೊಂದಿದವರಾಗಿದ್ದರಿಂದ ಇಂದು ದೇಶದ ಎಲ್ಲ ಭಾಗಗಳಲ್ಲಿ ತಮ್ಮ ವ್ಯಾಪಾರವನ್ನು ನಡೆಸುತ್ತಿದ್ದಾರೆ.[೨೬]

ಈ ಸಮುದಾಯದವರು ಗುಜರಾತ್ ರಾಜ್ಯದ ವಿವಿಧ ಪ್ರದೇಶಗಳಿಂದ ಬಂದವರಾಗಿದ್ದಾರೆ. ಚಿತ್ರದುರ್ಗ, ದಾವಣಗೆರೆ ಪ್ರದೇಶದಕ್ಕೆ ಬರಲು ಕಾರಣ ಗುಜರಾತಿನಲ್ಲಿ ಹೆಚ್ಚಾಗಿ ನಡೆಯುತ್ತಿದ್ದ ಯುದ್ಧಗಳು, ಬರಗಾಲ ಪರಿಸ್ಥಿತಿ, ಉದ್ಯೋಗವನ್ನು ಸೃಷ್ಟಿಸುವ ಕಾರ್ಖಾನೆಗಳು ಇಲ್ಲದಿರುವುದು, ವ್ಯಾಪಾರದಲ್ಲಿ ಪೈಪೋಟಿ ಇದ್ದದ್ದು, ಈ ಎಲ್ಲ ಕಾರಣಗಳಿಂದಾಗಿ ಇವರು ದೇಶದ ನಾನಾ ಭಾಗಗಳಿಗೆ ವಲಸೆ ಹೋದರು. ಅದೇ ರೀತಿಯಾಗಿ ಕರ್ನಾಟಕಕ್ಕೂ ಬಂದರು. ಕರ್ನಾಟಕದ ಪ್ರಮುಖ ವ್ಯಾಪಾರ ಕೇಂದ್ರಗಳಿಗೆ ವಲಸೆ ಹೋದರು. ಅಲ್ಲಿ ವ್ಯಾಪಾರ ನಡೆಸುವಾಗ ಒಳನಾಡಿನೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿದರು. ಇವರು ಬೆಂಗಳೂರು, ತುಮಕೂರು, ಶಿರಾ, ಚಿತ್ರದುರ್ಗ, ದಾವಣಗೆರೆ, ಹೊಳಲ್ಕೆರೆ, ಹೊಸದುರ್ಗ, ಚಳ್ಳಕೆರೆ, ಮೊಳಕಾಲ್ಮೂರು ಪ್ರದೇಶಗಳಿಗೆ ಬಂದರು. ಉದ್ಯೋಗವನ್ನು ಅರಸುತ್ತಾ ಬಂದಿದ್ದ ಇವರು ಇಲ್ಲಿ ಮೊದಲು ರೈತರ ಉತ್ಪಾದನಾ ಬೆಳೆಗಳ ಲೇವಾದೇವಿಗಾರರಾಗಿ ಈ ಪ್ರದೇಶಗಳಲ್ಲಿ ಆರಂಭದಲ್ಲಿ ಗುರುತಿಸಿಕೊಂಡಿದ್ದರು, ನಂತರ ಸೂರತ್, ಗುಜರಾತ್, ಮಂಗಳೂರಿನ ಹೆಂಚುಗಳ ವ್ಯಾಪಾರವನ್ನು ಮೊದಲುಗೊಳಿಸಿ ಬಟ್ಟೆ ಅಂಗಡಿ, ಬಂಗಾರರ ಅಂಗಡಿಗಳನ್ನು ಹೊಂದಿದರು. ಇವರು ಗುಜರಾತಿಗಳಲ್ಲಿ ಮುಖ್ಯವಾಗಿ ಪಟೇಲ್, ವಾಣಿಯಾ, ಬ್ರಾಹ್ಮಣ, ಬನಿಯಾ, ಶಾಗಳು, ಅಂಬಾನಿ, ಗಾಮಿಗಳು, ಗಡವಿಗಳು ಎಂಬ ಪಂಗಡಳಿಂದ ಗುರುತಿಸಿಕೊಂಡಿದ್ದಾರೆ.[೨೭]

ಚಿತ್ರದುರ್ಗ ಮತ್ತು ದಾವಣಗೆರೆ ಪ್ರದೇಶಗಳಲ್ಲಿ ಅಧಿಕಸಂಖ್ಯೆಯಲ್ಲಿ ಇರುವವರೆಂದರೆ ಪಟೇಲ್‌ರು. ಗುಜರಾತಿನ ಪಟೇಲ್‌ರ ಜಾತಿ ವಾಲ್ಮೀಕಿ. ಇಲ್ಲಿಯ ವಾಲ್ಮೀಕಿ (ನಾಯಕ)ಗಳನ್ನು ಗುಜರಾತಿಯಲ್ಲಿ ಪಟೇಲ ಎನ್ನುವರು ಈ ಪಾಟೇಲರಲ್ಲಿ ಎರಡು ಉಪ ಪಂಗಡಗಳಿವೆ. ಕಡವಪಾಟೀಲ ಹಾಗೂ ಲೇವಾಪಾಟೀಲ. ಕಡವ ಪಾಟೇಲರು ಭಾರತದ ಎಲ್ಲ ಕಡೆ ತಮ್ಮ ವ್ಯಾಪಾರ ಜಾಲವನ್ನು ಹೊಂದಿದ್ದಾರೆ. ಲೇವಾಪಾಟೇಲರು ಲಂಡನ್, ಅಮೆರಿಕಾ ಹಾಗೂ ಜರ್ಮನ್ ಮುಂತಾದ ದೇಶಗಳಲ್ಲಿ ನೆಲೆಸಿದ್ದಾರೆ.

ಚಿತ್ರದುರ್ಗ ಪಟೇಲರು ಮತ್ತು ದಾವಣಗೆರೆಯಲ್ಲಿ ಮುಖ್ಯವಾಗಿ ಟಿಂಬರ್ (ಕಟ್ಟಿಗೆ) ವ್ಯಾಪಾರದ ಮೂಲಕ ಗುರುತಿಸಿಕೊಂಡಿದ್ದಾರೆ. ಜೊತೆಗೆ ಬಟ್ಟೆ ವ್ಯಾಪಾರ, ಸಾರಿಗೆ ಉದ್ಯಮ, ಗಣಿಗಾರಿಕೆ, ಹಾರ್ಡ್‌ವೇರ್ ವ್ಯಾಪಾರ ಮುಂತಾದವುಗಳಲ್ಲೂ ತೊಡಗಿಸಿಕೊಂಡಿದ್ದಾರೆ. ಗುಜರಾತ್ ಪ್ರದೇಶಗಳ ಕಾರ್ಖಾನೆಗಳಿಗೆ ಇಲ್ಲಿಂದ ಕಚ್ಚಾ ಸರಕುಗಳನ್ನು ಕಳುಹಿಸುತ್ತಾರೆ. ಗುಜರಾತಿಗಳು ಎಂದು ಕರೆಯುವ ನಾವು ಇವರು ಗುಜರಾತಿನ ಕಚ್, ಅಹಮದಾಬದ್, ಸೂರತ್ ಬರೋಡ, ರಾಜಕೋಟ್‌ಗಳಿಂದ ಚಿತ್ರದುರ್ಗಕ್ಕೆ ಬಂದಿದ್ದಾರೆ.[೨೮] ಗಡವಿ ಸಮುದಾಯವು ಗುಜರಾತ್‌ನಲ್ಲಿ ಇರುವ ತಮ್ಮ ಕಾರ್ಖಾನೆಗಳಿಗೆ ಈ ಪ್ರದೇಶದಿಂದ ಸರಕುಗಳನ್ನು ಕಳುಹಿಸುತ್ತದೆ. ಅಂದರೆ ಗುಜರಾತಿಗಳಲ್ಲಿ ಈ ಸಮುದಾಯವು ಗಣಿಗಾರಿಕೆಯನ್ನು ಮಾಡುತ್ತದೆ. ಇನ್ನೊಂದು ಸಮುದಾಯವಾದ ಗಾಮಿಗಳು ಸಾರಿಗೆ ಉದ್ಯಮವನ್ನು ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಇವರ ಜನಸಂಖ್ಯೆ ಚಿತ್ರದುರ್ಗ ನಗರದಲ್ಲಿ ಕಡಿಮೆ ಪ್ರಮಾಣದಲ್ಲಿದೆ.[೨೯] ಚಿತ್ರದುರ್ಗ ಮತ್ತು ದಾವಣಗೆರೆ ಪ್ರದೇಶದಲ್ಲಿ ಪಟೇಲ ಸಮುದಾಯದವರ ಜನಸಂಖ್ಯೆ ೧೨೦೦ ಇದೆ. ೮೦-೧೦೦ ಮನೆಗಳು ಇವೆ. ೧೨ ಸಾಮಿಲ್‌ಗಳಿವೆ. ಈ ಸಮುದಾಯದವರು ತಮ್ಮ ವ್ಯಾಪಾರ ವಾಣಿಜ್ಯಕ್ಕೆ ಸಂಬಂಧಿಸಿದಂತೆ ವಿದೇಶಗಳೊಂದಿಗೆ ಮತ್ತು ಬಂದರು ಪಟ್ಟಣಗಳ ಜೊತೆ ಸಂಬಂಧವನ್ನು ಹೊಂದಿದ್ದಾರೆ.[೩೦]

ರಾಜಸ್ಥಾನಿಗಳು ಭಾರತದ ವಿವಿಧ ಪ್ರದೇಶಗಳಲ್ಲಿ ನೆಲೆ ನಿಂತು ವಿಶಾಲವಾದ ವ್ಯಾಪಾರ ಜಾಲವನ್ನು ಹೊಂದಿದ ವರ್ತಕ ಸಮುದಾಯದವರಾಗಿದ್ದಾರೆ. ಚಿತ್ರದುರ್ಗ, ದಾವಣಗೆರೆ ಇನ್ನಿತರೆ ದುರ್ಗ ಪ್ರದೇಶದ ಪ್ರಮುಖ ವ್ಯಾಪಾರಿ ಕೇಂದ್ರಗಳಲ್ಲಿ ಈ ವರ್ತಕ ಸಮುದಾಯ ಮುಖ್ಯ ಪಾತ್ರವಹಿಸಿರುವುದನ್ನು ಗುರುತಿಸಬಹುದು ಇದು ರಾಜಸ್ಥಾನದಿಂದ ವಲಸೆ ಬಂದ ವರ್ತಕ ಸಮುದಾಯವಾಗಿದೆ. ವಲಸೆ ಬರಲು ಹಲವು ಕಾರಣಗಳನ್ನು ನೋಡಬಹುದು. ಒಂದನೆಯದಾಗಿ ರಾಜಸ್ಥಾನ ಹೆಚ್ಚಾಗಿ ಮರುಭೂಮಿ ಪ್ರದೇಶವನ್ನು ಹೊಂದಿದೆ. ಹಾಗಾಗಿ ನೀರಿನ ಅಭಾವ ಹಾಗೂ ಉತ್ತಮ ಸಾರಿಗೆ ವ್ಯವಸ್ಥೆಯ ಕೊರತೆ ಇದೆ. ಎರಡನೆಯದಾಗಿ ವ್ಯವಸಾಯ ಮಾಡಲು ಯೋಗ್ಯವಾದ ವಾತಾವರಣವಿಲ್ಲದಿರುವುದು. ಮೂರನೆಯದಾಗಿ ಬ್ರಿಟಿಶ್ ವರ್ತಕ ಕಂಪನಿಯು ಜೋಧ್‌ಪುರವನ್ನು ಒಳಗೊಂಡಂತೆ ಹಲವು ಮುಖ್ಯ ಪ್ರದೇಶಗಳನ್ನು ವಶಪಡಿಸಿಕೊಂಡದ್ದು. ಇದರಿಂದಾಗಿ ಪ್ರಮುಖ ವ್ಯಾಪಾರ-ವಾಣಿಜ್ಯ ಚಟುವಟಿಕೆಗಳು ಕಂಪನಿಯ ಅಧೀನಕ್ಕೆ ಒಳಪಟ್ಟಿತು. ನಾಲ್ಕನೆಯದಾಗಿ, ಸ್ಥಳೀಯವಾಗಿ ರಾಜಾಸ್ಥಾನದಲ್ಲಿ ವ್ಯಾಪಾರ ಸಮುದಾಯಗಳಲ್ಲಿ ಉಂಟಾದ ಪೈಪೋಟಿ. ಇದು ವ್ಯಾಪಾರದ ಉದ್ದೇಶದಿಂದ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋಗಲು ಕಾರಣವಾಯಿತು.[೩೧]

ಈ ವರ್ತಕ ಸಮುದಾಯವು ಚಿತ್ರದುರ್ಗಕ್ಕೆ ಯಾವಾಗ ವಲಸೆ ಬಂದದ್ದು ಎಂಬುದರ ಬಗ್ಗೆ ನಿಖರ ಮಾಹಿತಿಗಳಿಲ್ಲ. ಆದರೆ ಇವರು ಮೂಲತಃ ಜೈನ ಧರ್ಮಾವಲಂಬಿಗಳು. ಜೈನ ಧರ್ಮ ಆರಂಭದಿಂದಲೂ ವರ್ತಕ ಸಮುದಾಯ ಅಥವಾ ವಾಣಿಜ್ಯ ವ್ಯಾಪಾರವನ್ನು ಪ್ರೋತ್ಸಾಹಿಸುತ್ತಿದ್ದ ಧರ್ಮ ಎನ್ನಬಹುದು. ಮತ್ತೊಂದು ವಿಚಾರವೆಂದರೆ ಹೊಯ್ಸಳರ ವಿಷ್ಣುವರ್ಧನನ ಕಾಲದವರೆಗೆ ಕರ್ನಾಟಕದ ಹಲವು ಅರಸು ಮನೆತನಗಳು ಜೈನ ಧರ್ಮಕ್ಕೆ ರಾಜಾಶ್ರಯ ನೀಡಿದ್ದವು. ೧೧ನೇ ಶತಮಾನದ ನಂತರ ಜೈನರ ಪ್ರಾಬಲ್ಯ ಕರ್ನಾಟಕದ ಪ್ರದೇಶದಲ್ಲಿ ಕಡಿಮೆಯಾಗತೊಡಗಿದ್ದನ್ನು ಗುರುತಿಸಬಹುದು. ಚಿತ್ರದುರ್ಗ ಪ್ರದೇಶದ ಜೈನ ಕೇಂದ್ರವಾಗಿ ಗುರುತಿಸಿಕೊಂಡಿರುವ ಹೆಗ್ಗೆರೆ, ಬೇತೂರು,

ಶಾಮನೂರು, ಹೊಳಲ್ಕೆರೆ, ದಿಡಗೂರು, ಚಿಕ್ಕಯೆರೆಹಳ್ಳಿ, ಬೆಳಗುತ್ತಿ, ಸಾಸುವೆಹಳ್ಳಿ, ಸಿದ್ದಾಪುರ, ಚಿತ್ರದುರ್ಗ, ದಾವಣಗೆರೆ ಮುಂತಾದ ಸ್ಥಳಗಳಲ್ಲಿ ಶಾಸನಗಳು, ಜೈನರು ನೀಡಿರುವ ದಾನ ದತ್ತಿಗಳನ್ನು ಕುರಿತು ಉಲ್ಲೇಖಿಸುತ್ತವೆ.[೩೨] ಜಾನಕಲ್ಲು ಮತ್ತು ಹೆಗ್ಗೆರೆ ಇವು ಪ್ರಾಚೀನ ಜೈನ ಬಸದಿಗಳನ್ನು ಹೊಂದಿದ್ದು, ನಾಯಕರ ಕಾಲದ ಜೈನ ಬಸದಿಯು ದೊಡ್ಡಪೇಟೆಯಲ್ಲಿ ನಂತರ ಲಕ್ಷ್ಮಿಬಜಾರ್‌ನಲ್ಲಿ, ದಾವಣಗೆರೆಯ ರಾಷ್ಟ್ರೀಯ ಹೆದ್ದಾರಿ-೪ರ ದಾವಣಗೆರೆ ಪ್ರವೇಶ ಮಾರ್ಗದಲ್ಲಿ ಇದ್ದು ಇವು ನಾಯಕರ ಮತ್ತು ನಾಯಕರೋತ್ತರ ಕಾಲದಲ್ಲಿ ಜೈನರು ಈ ಪ್ರದೇಶಗಳೊಂದಿಗೆ ಸಂಬಂಧವನ್ನು ಹೊಂದಿದ್ದರು ಎಂಬುದು ಖಚಿತವಾಗುತ್ತದೆ. ಈ ನಿಟ್ಟಿನಲ್ಲಿ ಅವರು ರಾಜಾಸ್ಥಾನಿ ವರ್ತಕರು ಸಹ ಆಗಿರುವ ಸಾಧ್ಯತೆ ಹೆಚ್ಚಿದೆ. ಹಾಗೇ ರಾಜಸ್ಥಾನಿ ವರ್ತಕರು ಈ ಪ್ರದೇಶದಲ್ಲಿ ಬಹಳ ಹಿಂದಿನಿಂದಲೂ ಇರುವುದಕ್ಕೆ ಸಾಕ್ಷಿ ಎಂಬಂತೆ ಇನ್ನೂರು ವರ್ಷಗಳಿಗಿಂತ ಹಳೆಯದಾದ ದಿಗಂಬರ ಜೈನ ದೇವಾಲಯವು ಹೆಗ್ಗೆರೆ ಮತ್ತು ಜಾನಕಲ್ಲು ಪ್ರದೇಶಗಳಲ್ಲಿ ಇವೆ.

ರಾಜಾಸ್ಥಾನಿ ವರ್ತಕ ಸಮುದಾಯದವರಲ್ಲಿ ಮಹೇಶ್ವರಿ, ಅಗರ್‌ವಾಲ್, ದಿಂಗಬರ್, ಶ್ವೇತಾಂಬರ್, ಸ್ಥಾನಕ, ಓಸ್‌ವಾಲ್ ಜೈನರು, ಚೌದ್ರಿ, ರಜಪೂತ, ಸೋನಿ, ಪುರೋಹಿತ ಎಂಬ ಹಲವು ಪಂಗಡಗಳಿವೆ. ಇವರನ್ನು ಸಾಮಾನ್ಯವಾಗಿ ಮಾರ್‍ವಾಡಿ, ಸೇಟ್, ಶೆಕಾವತಿ ಎಂದು ಕರೆಯಲಾಗಿದೆ ಮಾರ್‍ವಾಡಿ ಎಂದರೆ ಮಾರ್‍ವಾಡದ ನಿವಾಸಿಗರು ಎಂದರ್ಥ, ಶೆಕಾವತಿ ಎಂದರೆ ಮಾಂಡ್ವಾ, ಫತೇಪುರ್, ರಾಮಘರ್, ಬಿಸ್ನೌ ಮತ್ತು ಚುರು ಪ್ರದೇಶಗಳಿಗೆ ಸೇರಿದವರು ಎಂದರ್ಥ. ಈ ಸಮುದಾಯವು ದೇಶದ ಇತರ ಭಾಗಗಳಂತೆ ಕರ್ನಾಟಕದ ಎಲ್ಲ ನಗರಗಳಲ್ಲಿಯೂ ನೆಲೆಸಿದ್ದಾರೆ. ರಾಜಾಸ್ಥಾನಿಗಳಲ್ಲಿ ಜೈನ ಸಮುದಾಯದ ಶ್ವೇತಾಂಬರರು ಅಧಿಕ ಸಂಖ್ಯೆಯಲ್ಲಿದ್ದಾರೆ. ಚಿತ್ರದುರ್ಗದಲ್ಲಿ ಎಲ್ಲ ಪಂಗಡದವರು ನೆಲೆಸಿದ್ದು, ಇವರಲ್ಲಿ ಮುಖ್ಯವಾಗಿ ಮಹೇಶ್ವರಿ, ಅಗರ್‌ವಾಲ್ ಮತ್ತು ಓಸ್‌ವಾಲ್ ಜೈನರು ಹೆಚ್ಚಾಗಿರುವವರು.[೩೩] ಮಹೇಶ್ವರಸಿ ಜೈನರು ಜೋಧಪುರ ಕಡೆಯವರು, ರಾಜಪೂತರು ಮತ್ತು ಅಗರವಾಲರು ಅಗೆಸೇನನ ವಂಶೀಕರು ಎಂದು ಹೇಳಿಕೊಳ್ಳುವರು ಹಾಗೆಯೇ ಓಸ್‌ಲಾಲ್ ಜೈನರು ಓಸಿಯಾನ್ ಎಂಬ ಪ್ರದೇಶದ ಶ್ವೇತಾಂಬರ ಜೈನರು, ಇವರು ಚಿತ್ರದುರ್ಗ ಇನ್ನಿತರೆ ವ್ಯಾಪಾರಿ ಕೇಂದ್ರಗಳಲ್ಲಿ ಆರಂಭದಿಂದಲೂ ತಾಮ್ರ ಮತ್ತು ಕಂಚಿನ ಪಾತ್ರೆಗಳ ವ್ಯಾಪಾರ ಮಾಡುವರು. ಜೊತೆಗೆ ಲೇವಾದೇವಿ, ವಜ್ರ ಆಭರಣದ ವ್ಯಾಪಾರ ವಾಣಿಜ್ಯಗಳಲ್ಲಿ ತೊಡಗಿಸಿಕೊಂಡಿದ್ದರು. ಕೆಲವರು ದೊಡ್ಡ ದೊಡ್ಡ ಎಸ್ಟೇಟ್‌ಗಳ ಮಾಲೀಕರಾಗಿದ್ದರೆ. ಇನ್ನೂ ಕೆಲವರು ಉದ್ಯಮಶೀಲರಾಗಿ ಗುರುತಿಸಿಕೊಂಡಿದ್ದಾರೆ. ಇವರು ಹಲವು ಕೈಗಾರಿಕೆಗಳ ಮಾಲೀಕರಾಗಿಯೂ ಕಾರ್ಯನಿರತರಾಗಿದ್ದಾರೆ.[೩೪] ದುರ್ಗ ಪರಿಸರದ ಒಟ್ಟು ಜನ ಸಂಖ್ಯೆಯ ೩ರಷ್ಟು ಸ್ಥಾನಮಾನವನ್ನು ಹೊಂದಿದ ಸಮುದಾಯವಾಗಿತ್ತು. ಈ ರಾಜಾಸ್ಥಾನಿ ವರ್ತಕರು ಅತೀ ಹೆಚ್ಚು ವಲಸೆ ಬಂದದ್ದು ಟಿಪ್ಪು ಸುಲ್ತಾನನ ಆಳ್ವಿಕೆ ಕಾಲ ಹಾಗೂ ನಂತರದ ಕಾಲದಲ್ಲಿ. ದುರ್ಗದಲ್ಲಿ ಅತೀ ಹೆಚ್ಚು ಮಳಿಗೆಳನ್ನು ಹೊಂದಿರುವ ಸಮುದಾಯವಾಗಿದ್ದು, ನಗರ ಬೆಳವಣಿಗೆಯಲ್ಲಿ ಈ ಸಮುದಾಯದ ಪಾತ್ರ ಮುಖ್ಯವಾದುದಾಗಿದೆ. ಬಂಗಾರ, ಬೆಳ್ಳಿ, ಹಾರ್ಡ್‌ವೇರ್, ಎಲೆಕ್ಟ್ರಾನಿಕ್ ವಸ್ತುಗಳು, ಬಟ್ಟೆ ವ್ಯಾಪಾರ ಇನ್ನಿತರೆ ವ್ಯಾಪಾರಿ ವೃತ್ತಿಗಳಿಂದ ಈ ಪ್ರದೇಶಗಳಲ್ಲಿ ಗುರುತಿಸಿಕೊಂಡಿದ್ದಾರೆ.

ಚಿತ್ರದುರ್ಗ ಪರಿಸರದಲ್ಲಿ ಗುರುತಿಸಿಕೊಂಡಿರುವ ಬಹುಮುಖ್ಯ ಸಮುದಾಯಗಳಲ್ಲಿ ಮುಸ್ಲಿಂ ವರ್ತಕ ಸಮುದಾಯವು ಮುಖ್ಯವಾಗಿದೆ. ಈ ಸಮುದಾಯವು ಮೂಲ ನಿವಾಸಿಗಳಾಗಿರದೆ

ವಲಸಿಗರಾಗಿರುವುದರಿಂದ ವ್ಯಾಪಾರವನ್ನೇ ಮೂಲ ವೃತ್ತಿಯನ್ನಾಗಿ ಮಾಡಿಕೊಂಡು ಇಲ್ಲಿ ನೆಲೆ ನಿಂತರು ಈ ಸಮುದಾಯವು ಅಧಿಕ ಸಂಖ್ಯೆಯಲ್ಲಿ ಕರಕುಶಲಕರ್ಮಿ ಮತ್ತು ವ್ಯಾಪಾರಿಗಳನ್ನು ಒಳಗೊಂಡಿದೆ. ಈ ಅಧ್ಯಯನದಲ್ಲಿ ದುರ್ಗ ಪ್ರದೇಶದ ನಗರೀಕರಣಕ್ಕೆ ಪ್ರಮುಖ ಸಮುದಾಯವಾಗಿದ್ದ ಮುಸ್ಲಿಂ ವರ್ತಕರ ನಡುವಿನ ಶಿಯಾ, ಸುನ್ನಿ ಎಂಬ ಎರಡು ಪಂಗಡಗಳನ್ನು ಭಿನ್ನವಾಗಿ ಪರಿಗಣಿಸಿಲ್ಲ. ಬದಲಾಗಿ ವ್ಯಾಪಾರ-ವಾಣಿಜ್ಯದ ಹಿನ್ನೆಲೆಯಲ್ಲಿ ಗುರುತಿಸಿಕೊಂಡಿರುವ ಮುಸ್ಲಿಂ ವರ್ತಕ ಸಮುದಾಯಗಳು ಎಂದು ಗಮನಿಸಲಾಗಿದೆ. ೯-೧೦ನೇ ಶತಮಾನದಲ್ಲಿಯೇ ಅರಬ್ಬರೊಡನೆ ವಿದೇಶಿ ವ್ಯಾಪಾರವು ಕರಾವಳಿ ತೀರದಲ್ಲಿ ಕಂಡುಬಂದಿತು. ಈ ವರ್ಗ ನೇರವಾಗಿ ಚಿತ್ರದುರ್ಗದೊಂದಿಗೆ ಸಂಪರ್ಕ ಹೊಂದಿತ್ತೋ ಇಲ್ಲವೋ ಎಂದು ಗುರುತಿಸುವುದು ಕಷ್ಟಕರ. ಮುಂದೆ ಅಲ್ಲಾವುದ್ದೀನ್ ಖಿಲ್ಜಿಯ ಕಾಲದಲ್ಲಿ ದಕ್ಷಿಣ ಭಾರತದ ಬಹುಭಾಗವನ್ನು ಯುದ್ಧದಲ್ಲಿ ಗೆಲ್ಲುವುದನ್ನು ನೋಡಬಹುದು. ಈ ಪ್ರದೇಶಗಳು ನೇರ ಆಳ್ವಿಕೆಗೆ ಒಳಪಡದಿದ್ದರು. ಮುಸ್ಲಿಂ ವರ್ತಕರಿಗೆ ಪರಿಚಿತವಾಗಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಈ ವೇಳೆಗೆ ದುರ್ಗ ಹೊಯ್ಸಳರ ಅಧಿಪತ್ಯಕ್ಕೆ ಒಳಗಾದ ಒಂದು ಘಟಕ ಕೇಂದ್ರವಾಗಿತ್ತು. ಮುಸ್ಲಿಂ ಸಮುದಾಯವು ನಿಖರವಾಗಿ ಯಾವ ಕಾಲದಲ್ಲಿ ಬಂದಿದ್ದರು ಎಂಬ ಪೂರಕ ಆಕರಗಳ ಕೊರತೆ ಇದೆ. ಶಿರಾದ ನವಾಬರು ಹಾಗೂ ಬೆಂಗಳೂರು ಪ್ರದೇಶದಲ್ಲಿ ಬೃಹತ್ ಸಂಖ್ಯೆಯಲ್ಲಿ ಮುಸ್ಲಿಂ ಜನಸಂಖ್ಯೆ ಇದ್ದ ಕಾರಣ ದುರ್ಗಕ್ಕೆ ವಲಸೆ ಬಂದಿರಬಹುದು. ನಂತರ ಹೈದರ್ ಕಾಲಕ್ಕೆ ಪೂರ್ಣ ಪ್ರಮಾಣದ ನೆಲೆಬೀಡಾಗಿರವುದರಿಂದಾಗಿ ಚಿತ್ರದುರ್ಗದಲ್ಲಿ ಮುಸ್ಲಿಂ ವರ್ತಕರು ದೊಡ್ಡ ಪ್ರಮಾಣದಲ್ಲಿ ವಲಸೆ ಹೋದೊಡನೆ ಈ ಪ್ರದೇಶದೊಂದಿಗೆ ಇದ್ದ ವಾಣಿಜ್ಯ ಸಂಪರ್ಕ ಹೆಚ್ಚಾಯಿತು. ಅತೀ ಹೆಚ್ಚಿನ ಕರಕುಶಲ ಹಾಗೂ ವ್ಯಾಪಾರ ವೃತ್ತಿಯನ್ನು ಹೊಂದಿರುವ ಮುಸ್ಲಿಂ ಸಮುದಾಯ ನಾಯಕ ಮತ್ತು ನಾಯಕರೋತ್ತರ ಕಾಲದಲ್ಲಿ ಮುಖ್ಯವಾಹಿನಿಗೆ ಬಂದರೆಂದು ಹೇಳಬಹುದು. ಚಿತ್ರದುರ್ಗ ಪರಿಸರದಲ್ಲಿ ಮುಖ್ಯವಾಗಿ ೪ ಮಸೀದಿಗಳಿದ್ದು ಅನೇಕ ದರ್ಗಾಗಳನ್ನು ಹೊಂದಿರುವ ಧಾರ್ಮಿಕ ನೆಲೆಯಲ್ಲಿ ಗುರುತಿಸಿಕೊಂಡಿದೆ. ಈ ವರ್ತಕ ಸಮುದಾಯದ ಶೇಖ್, ಪರ್ಶಿಯನ್, ಪಠಾಣ್, ಅರಬ್, ಕಾಂದಹಾರಿ, ಬಲೂಚಿ, ಕಚ್ ಮೆಮನ್, ದಖನಿ ಸೈರ್, ಲಜ್ಜಿ, ಪಿಂಜಾರಿ ಅನೇಕ ಪಂಗಡದವರನ್ನು ಕಾಣಬಹುದು. ಈ ಹೆಸರುಗಳು ಮುಸ್ಲಿಂ ವರ್ತಕ ಸಮುದಾಯದ ಸ್ಥಳಗಳ ನೆಲೆಯಲ್ಲಿರುವುದು ಗಮನಾರ್ಹ. ಈ ಮುಸ್ಲಿಂ ವರ್ತಕ ಸಮುದಾಯಗಳು ಆ ಕಾಲದ ಅತ್ಯಂತ ಲಾಭದಾಯಕ ವ್ಯಾಪಾರವಾಗಿದ್ದ ಕುದುರೆ ಮತ್ತು ಬಟ್ಟೆ ವ್ಯವಹಾರದಲ್ಲಿ ಬಹುತೇಕವಾಗಿ ತೊಡಗಿಸಿಕೊಂಡಿದ್ದರು.

ಚಿತ್ರದುರ್ಗ ಪ್ರದೇಶದಲ್ಲಿ ಪ್ರಮುಖವಾಗಿ ಕಂಡುಬರುವ ಮುಸ್ಲಿಂ ವರ್ತಕ ಸಮುದಾಯಗಳಲ್ಲಿ ಕಚ್ ಮೇಮನ್ ಒಂದು. ಇವರು ಸಿಂಧಿನಿ ಲೋಹನ ಸಮುದಾಯಕ್ಕೆ ಸೇರಿದವರು. ಇವರು ಗುಜರಾತಿನ ಕಚ್ ಪ್ರದೇಶದಿಂದ ವಲಸೆ ಬಂದವರು ಆಗಿರುವುದರಿಂದ ಕಚ್ ಮೆಮನ್‌ರು ಎಂದು ಕರೆಯುತ್ತಾರೆ. ಇವರು ಕಂಪನಿ ನೆಲೆಗಳಾದ ಕಲ್ಕತ, ಬಾಂಬೆ, ಮದ್ರಾಸ್ ಮೊದಲಾದ ಪ್ರದೇಶಗಳಲ್ಲಿ ನೆಲೆಸಿದವರಾಗಿದ್ದು, ಹೆಚ್ಚಾಗಿ ಮಧ್ಯವರ್ತಿಗಳಾಗಿ, ಲೇವಾದೇವಿ ಮಾಡುವ ಕಾರ್ಯದಲ್ಲಿ ಹೆಚ್ಚು ತೊಡಗಿದ್ದರು. ಹಜೀ ಸರ್ ಇಸ್ಮಾಯಿಲ್ ಸೇಟ್ ಚಿತ್ರದುರ್ಗದ ರಾಗಿ ಪೇಟೆಯಲ್ಲಿ (ಸಂತೆಪೇಟೆ) ಬೃಹತ್ ಮಳಿಗೆಯನ್ನು ಹೊಂದಿದ ವಾಣಿಜ್ಯೋದ್ಯಮಿ. ಇದರೊಡನೆ ರೇಸ್ ಕುದುರೆಗಳ ಆಮದು

ರಫ್ತುಗಾರರಾಗಿ ಮತ್ತು ಹಲವು ಉದ್ಯಮಗಳ ಮಾಲೀಕರಾಗಿದ್ದರು. ಉಳಿದಂತೆ ಶೇಖ್ ಮತ್ತು ಪಠಾಣ್ ವರ್ತಕ ಮುಸ್ಲಿಂ ಸಮುದಾಯಗಳು ಶೇಖ್ ಪಂಗಡವು ಅಬುಬರ್ಕ್‌ನ ವಂಶಕ್ಕೆ ಸೇರಿದವರು ಮತ್ತು ಪಠಾಣರು ಅಫಘಾನ್ ಮೂಲದವರು. ಈ ಸಮುದಾಯಗಳ ವೃತ್ತಿ ವ್ಯಾಪಾರ, ಮುಖ್ಯವಾಗಿ ಪಶ್ಚಿಮ ಕರಾವಳಿ ಪ್ರದೇಶಗಳೊಂದಿಗೆ ಸಂಪರ್ಕ ಹೊಂದಿದ್ದರು. ಇವರು ಮೊಳಕಾಲ್ಮೂರು, ದುರ್ಗ ಪ್ರದೇಶದಲ್ಲಿ ರೇಷ್ಮೆ ಬಟ್ಟೆ ವ್ಯಾಪಾರದಲ್ಲಿ ತೊಡಗಿದ ಸಮುದಾಯಗಳಾಗಿವೆ.[೩೫] ಲಬ್ಬೆ ಸಮುದಾಯವು ಕೋರಮಂಡಲ ಕರಾವಳಿಯ ನಾಗಪಟ್ಟಣಂಗೆ ಸೇರಿದವರು. ಅದೇ ರೀತಿಯಾಗಿ ಮಾಪಿಳ್ಳೆ ಸಮುದಾಯವು ಮಲಬಾರ್ ತೀರ ಪ್ರದೇಶಕ್ಕೆ ಸೇರಿದವರು. ಲಬ್ಬೆ ಔದ್ಯೋಗಿಕ ವಾಣಿಜ್ಯ ಸಮುದಾಯವಾಗಿದ್ದು, ನಗರ ಪ್ರದೇಶದಲ್ಲಿ ನೆಲೆನಿಲ್ಲುತ್ತಿದ್ದರು.[೩೬] ಇವರು ಚಿತ್ರದುರ್ಗ, ದಾವಣಗೆರೆ ಪ್ರದೇಶದ ಪೇಟೆಗಳಲ್ಲಿ ನೆಲೆನಿಂತಿದ್ದಾರೆ. ಇಂದಿಗೂ ಈ ಸಮುದಾಯಗಳ ಮಸೀದಿಗಳನ್ನು ಕಾಣಬಹುದು. ಈ ಸಮುದಾಯವು ಲೋಹದ ಯಂತ್ರ ಭಾಗಗಳನ್ನು ಮಾರುತ್ತಿದ್ದರು. ಜೊತೆಗೆ ಚರ್ಮದ ಕೈಗಾರಿಕೆಯಲ್ಲಿ ಪ್ರಮುಖರಾಗಿದ್ದರು. ಭಾರಿ ಮೊತ್ತದ ಚರ್ಮದ ಉತ್ಪನ್ನಗಳನ್ನು ಮಾರಾಟ ಮಾಡುತ್ತಿದ್ದರು. ಅಲ್ಲದೆ ಕಾಫಿ ಉತ್ಪನ್ನಗಳ ಸಗಟು ಮಾರಾಟಗಾರರು ಸಹ ಆಗಿದ್ದರು. ಇನ್ನೊಂದು ಉಪ ಪಂಗಡವಾಗಿರುವ ಡೆಕ್ಕನಿ ಮುಸ್ಲಿಮರು, ಇವರನ್ನು ನವಾಯತ್ ಅಥವಾ ಕೊಂಕಣಿ ಮುಸ್ಲಿಂ ಎಂದು ಕರೆಯಲಾಗಿದೆ. ನವಾಯತ್ ಎಂದರೆ ಅರಾಬಿಕ್ ಭಾಷೆಯಲ್ಲಿ ನಾವಿಕ ಎಂದರ್ಥ. ಇವರು ಇರಾಕ್ ದೇಶದ ಮೂಲದವರು. ಸಾಗರ ವ್ಯಾಪಾರದಲ್ಲಿ ತಮ್ಮದೇ ಹಿಡಿತವನ್ನು ಸಾಧಿಸಿದ ವರ್ತಕ ಸಮುದಾಯವಾಗಿದ್ದು, ಭಟ್ಕಳ ಪರಿಸರದಲ್ಲಿ ಬಂದು ನೆಲೆಸಿದರು. ಒಳನಾಡು ವ್ಯಾಪಾರದ ಮೂಲಕ ವಿಸ್ತರಿಸುತ್ತ ಚಿತ್ರದುರ್ಗದಲ್ಲಿ ಈ ಸಮುದಾಯದವರನ್ನು ಗುರುತಿಸಬಹುದು.

ದುರ್ಗ ಪರಿಸರದಲ್ಲಿ ಕ್ರೈಸ್ತ ಧರ್ಮದ ಪ್ರವೇಶದೊಂದಿಗೆ ಕ್ರೈಸ್ತ ವರ್ತಕ ಸಮುದಾಯಗಳ ಇರುವಿಕೆಯನ್ನು ಗುರುತಿಸಬಹುದು. ಯುರೋಪಿನ ಕಂಪನಿಗಳು ಭಾರತದೊಂದಿಗೆ ಸಂಪರ್ಕವನ್ನು ಸಾಧಿಸಲು ಇದ್ದ ಮುಖ್ಯವಾದ ಉದ್ದೇಶಗಳೆಂದರೆ ಧರ್ಮ, ವ್ಯಾಪಾರ ಹಾಗೂ ಸಾಮ್ರಾಜ್ಯದ ವಿಸ್ತರಣೆ, ಈ ಎಲ್ಲ ಉದ್ದೇಶಗಳಿಗೂ ಚಿತ್ರದುರ್ಗ ಹಂತಹಂತವಾಗಿ ಬಳಕೆಯಾಗುತ್ತಾ ಹೋಯಿತು. ಕ್ರೈಸ್ತ ಧರ್ಮದ ಇರುವಿಕೆಯಿಂದಾಗಿ ಇಲ್ಲಿ ಎರಡು ಚರ್ಚ್‌ಗಳು ನಿರ್ಮಾಣಗೊಂಡವು.

ವ್ಯಾಪಾರಿಗಳು ವಿವಿಧ ದಾನ ಧರ್ಮಗಳನ್ನು ಮಾಡುತ್ತಿದ್ದರಲ್ಲದೆ, ಪ್ರಯಾಣಿಕರು ವ್ಯಾಪಾರಿಗಳು ಮತ್ತು ತೀರ್ಥಯಾತ್ರಿಕರ ಅನುಕೂಲತೆಗಾಗಿ ರಸ್ತೆಗಳನ್ನು ನಿರ್ವಹಿಸುತ್ತಿದರಲ್ಲದೆ, ಅವುಗಳ ಮೇಲ್ವಿಚಾರಣೆಯನ್ನು ಸಹ ನೋಡಿಕೊಳ್ಳುತ್ತಿದ್ದರು. ಅರಸರು ಸಹ ಇದಕ್ಕೆ ಬೆಂಬಲ ನೀಡುತ್ತಿದ್ದರು. ಈ ವೇಳೆಯಲ್ಲಿ ರಚನೆಗೊಂಡ ಕೋಟೆ ಹಾಗೂ ಮಠಗಳು ವರ್ತಕರಿಗೆ ಆಶ್ರಯಗಳನ್ನು ನೀಡುವುದರ ಜೊತೆಗೆ ವ್ಯಾಪಾರಕ್ಕೆ ಪೂರಕವಾದ ಮಾರುಕಟ್ಟೆಗಳನ್ನು ರೂಪಿಸುತ್ತಿದ್ದವು. ಈ ಎಲ್ಲ ಅಂಶಗಳ ಜೊತೆಗೆ ಮಠಗಳು, ವರ್ತಕರು, ಲೇವಾದೇವಿಗಾರರು ಬ್ಯಾಂಕಿಂಗ್ ವ್ಯವಸ್ಥೆಗೆ ಭದ್ರ ಬುನಾದಿಯನ್ನು ಕಲ್ಪಿಸಿದರು. ಒಂದುಕಡೆ ವ್ಯಾಪಾರ ಉದ್ದೇಶವನ್ನು ಹೊಂದಿರುವ ವಸಾಹತು ಪ್ರದೇಶಗಳ ರೂಪಗೊಳ್ಳುವಿಕೆ ಹಾಗೂ ಇನ್ನೊಂದೆಡೆ ಸ್ಥಳೀಯ ನಾಯಕರ ಧೋರಣೆಗಳು ವ್ಯಾಪಾರ-ವಾಣಿಜ್ಯಕ್ಕೆ ಪೂರಕವಾದ ವಾತಾವರಣವನ್ನು ಸೃಷ್ಟಿಸಿದವು.

## ೭.೨. ಸಮುದಾಯಗಳ ಹೊಸ ಒಲವುಗಳು

ವ್ಯಾಪಾರ ಮತ್ತು ವಾಣಿಜ್ಯದ ಇತಿಹಾಸವನ್ನು ಒಂದು ನಿರ್ದಿಷ್ಟ ಕಾಲದ ಮಿತಿಯೊಳಗೆ ಅಧ್ಯಯನ ಮಾಡುವಾಗ ಆ ಕಾಲಕ್ಕೆ ಪೂರ್ವದ ಸ್ಥಿತಿಗತಿ ಹಾಗೂ ನಂತರದ ಕಾಲವನ್ನು ತಿಳಿಯುವುದು ಅವಶ್ಯಕವಾಗುತ್ತದೆ. ವ್ಯಾಪಾರ ಮತ್ತು ವಾಣಿಜ್ಯ ಎಂಬ ವಿಷಯವು ಆರ್ಥಿಕ ವ್ಯವಸ್ಥೆಯೊಳಗಿನ ಒಂದು ಪ್ರಮುಖ ಘಟಕ. ಅರ್ಥಶಾಸ್ತ್ರದಲ್ಲಿ ಮೂರು ಮೂಲಭೂತವಾದ ಅಂಶಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಉತ್ಪಾದನೆ, ವಿತರಣೆ ಹಾಗೂ ಅನುಭೋಗ, ವ್ಯಾಪಾರ ಮತ್ತು ವಾಣಿಜ್ಯವು ಅರ್ಥ ವ್ಯವಸ್ಥೆಯ ವಿತರಣೆಗೆ ಸಂಬಂಧಿಸಿದ್ದಾಗಿದೆ. ಇದಲ್ಲದೆ ಒಂದು ಕಾಲದ ಅರ್ಥವ್ಯವಸ್ಥೆ ಕೃಷಿ, ವ್ಯಾಪಾರ–ವಾಣಿಜ್ಯವೂ ಸೇರಿದಂತೆ ಆ ಕಾಲದ ರಾಜಕೀಯ ಪರಿಸ್ಥಿತಿಯನ್ನು ಹೊಂದಿಕೊಂಡಿರುತ್ತದೆ. ಅದಕ್ಕನುಗುಣವಾಗಿ ಆಡಳಿತ ವ್ಯವಸ್ಥೆ ಸ್ಥಾಪಿತವಾಗಿರುತ್ತದೆ. ಆದ್ದರಿಂದ ವ್ಯಾಪಾರ ಮತ್ತು ವಾಣಿಜ್ಯ ಕೇಂದ್ರಿತ ಅರ್ಥವ್ಯವಸ್ಥೆಗೂ ರಾಜಕೀಯ ಮತ್ತು ಆಡಳಿತ ವ್ಯವಸ್ಥೆಗೂ ನಿಕಟವಾದ ಸಂಬಂಧವಿದೆ.[೩೭]

ಭಾರತವೂ ಸೇರಿದಂತೆ ವಸಾಹತು ನೆಲೆಯಿಂದ ಸ್ವತಂತ್ರಗೊಂಡ ಪ್ರದೇಶಗಳಲ್ಲಿ ವಿಭಿನ್ನ ಧರ್ಮಗಳ ಪ್ರಭಾವಕ್ಕೆ ಹಾಗೂ ಆರ್ಥಿಕ ನೀತಿಗಳಿಂದಾಗಿ ಎರಡು ಅಸಮಾನ ಸಂಸ್ಕೃತಿಗಳು ರೂಪುಗೊಂಡವು. ಅಧಿಕಾರದ ನೆಲೆಯಲ್ಲಿ ದುರ್ಬಲವಾಗಿರುವ ಸಂಸ್ಕೃತಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು, ತನ್ನ ಅನನ್ಯತೆಯನ್ನು ಸ್ಥಾಪಿಸಲು, ಬಗೆಬಗೆಯಾಗಿ ಹೆಣಗಾಡುವ ಪರಿಸ್ಥಿತಿ ನಿರ್ಮಾಣಗೊಂಡಿತು. ಒಂದು ಸಂಸ್ಕೃತಿ ತನ್ನ ಅನನ್ಯತೆಯನ್ನು ಗುರುತಿಸಲು ಮತ್ತು ಸ್ಥಾಪಿಸಲು ಅತೀವ ಕ್ರಿಯಾಶೀಲವಾಗುವುದು ಅದು ಇನ್ನೊಂದು ಸಂಸ್ಕೃತಿಯೊಡನೆ ಮುಖಾಮುಖಿಯಾದಾಗ ಮಾತ್ರ.

ಸಂಸ್ಕೃತಿಗಳ ನಿರ್ಣಾಯಕ ಮುಖಾಮುಖಿ ವಸಾಹತುಶಾಹಿಯ ಸಂದರ್ಭದಲ್ಲಿ ತನ್ನದೇ ಆದ ಒಂದು ಮೊನಚನ್ನು ಪಡೆದರೂ, ಭಾರತದಲ್ಲಿ ಇಂತಹ ಪ್ರಕ್ರಿಯೆ ನಿರಂತರವಾಗಿ ನಡೆದುಕೊಂಡು ಬಂದಿದೆ. ಮಧ್ಯಕಾಲೀನ ಯುಗದಲ್ಲಿ ಮುಸ್ಲಿಂ ಸಂಸ್ಕೃತಿ ಭಾರತವನ್ನು ಪ್ರವೇಶಿಸಿದಾಗಲೂ ರಕ್ಷಣೆ, ಸಮರ್ಥನೆ, ರಾಜಿ ಮುಂತಾದ ಮಾರ್ಗಗಳನ್ನು ಜರೂರಾಗಿ ರೂಪಿಸಿಕೊಳ್ಳುವ ಅಗತ್ಯ ಭಾರತೀಯ ಸಂಸ್ಕೃತಿಗೆ ಒದಗಿತ್ತು. ಇಂತಹ ವಿಶಿಷ್ಟ ಕಾಲ ಘಟ್ಟದಲ್ಲಿ ಮಾತ್ರ ಅಲ್ಲದೆ, ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಭಾಷಿಕ, ಧಾರ್ಮಿಕ, ಸಾಂಸ್ಕೃತಿಕ ಸ್ವರೂಪದ ಅಸಮಾನ ಘಟಕಗಳ ತಿಕ್ಕಾಟ ನಡೆಯುತ್ತಲೇ ಇತ್ತು. ಹೀಗೆ ಹೇಳಬಹುದೇನೋ ಭಿನ್ನ ಹಾಗೂ ಅಸಮಾನ ಸಂಸ್ಕೃತಿಗಳ ಭಾಷೆಗಳು, ಧರ್ಮಗಳ ಆರ್ಥಿಕ ನೀತಿಗಳು, ಜೀವನ ಶೈಲಿಗಳ ನಡುವೆ ನಿರಂತರವಾಗಿ ಈ ದೇಶದಲ್ಲಿ ನಡೆದಿರುವ ಮುಖಾಮುಖಿಯೇ ಇಂದು ನಾವು ಯಾವುದನ್ನು 'ಭಾರತೀಯ'ವೆಂದು ಗುರುತಿಸುತ್ತೇವೆಯೋ ಆ ಸಂಸ್ಕೃತಿಯನ್ನು ರೂಪಿಸಿದೆ. ಇಂತಹ ಮುಖಾಮುಖಿಯನ್ನು ವಿವಿಧ ನೆಲೆಗಳಲ್ಲಿ, ವೈದಿಕxಅವೈದಿಕ, ಆರ್ಯxದ್ರಾವಿಡ, ಸಂಸ್ಕೃತxಪ್ರಾಂತೀಯ ಭಾಷೆ, ಶಿಷ್ಟxಜಾನಪ ಇತ್ಯಾದಿ ಗುರುತಿಸುತ್ತ ಹೋಗಬಹುದು. ಈ ಹಿನ್ನೆಲೆಯಲ್ಲಿ ಚಿತ್ರದುರ್ಗದ ಸಾಮಾಜಿಕ ಸಂಘರ್ಷವನ್ನು ವಿವರಿಸಲಾಗಿದೆ.

ಚಿತ್ರದುರ್ಗದ ನಾಯಕರ ಅವಧಿಯಲ್ಲಿ ರೂಪುಗೊಂಡ ಧಾರ್ಮಿಕ ಪರಿಸರ ಹಾಗೂ ಅದು ಸಮಾಜ ಮತ್ತು ಆರ್ಥಿಕತೆಯ ಮೇಲೆ ಬೀರಿದ ಪ್ರಭಾವ ಕುತೂಹಲವಾದ ಅಧ್ಯಯನವಾಗಿದ್ದು, ಚಿತ್ರದುರ್ಗದ ಚರಿತ್ರೆಯ ಹೊಸ ಆಯಾಮವೊಂದನ್ನು ಪರಿಚಲಿಸುತ್ತದೆ. ಚಿತ್ರದುರ್ಗದ ನಾಯಕ ಧಾರ್ಮಿಕ ಒಲವುಗಳನ್ನು ಇದರಿಂದ ಅರ್ಥೈಸಿಕೊಳ್ಳಬುದಾಗಿದೆ.

ಚಿತ್ರದುರ್ಗದ ಮುರುಘಮಠವು ಕ್ರಿ.ಶ.೧೭ನೇ ಶತಮಾನದ ಅಂತ್ಯಭಾಗದಲ್ಲಿ ಸ್ಥಾಪನೆಯಾಯಿತು. ಚಿತ್ರದುರ್ಗದ ಬೃಹನ್ಮಠದ ಸ್ಥಾಪಕರಾದ ಮುರುಘ ಶಾಂತ ವೀರಸ್ವಾಮಿಗಳ ಆಶೀರ್ವಾದದೊಂದಿಗೆ ಚಿತ್ರದುರ್ಗದ ಭರಮಣ್ಣ ನಾಯಕನು ಆರಸನಾದನೆಂದು ತಿಳಿಯುತ್ತದೆ. ಕ್ರಿ.ಶ.೧೬೮೯ರಲ್ಲಿ ಅವನು ಪಟ್ಟಕ್ಕೆ ಬಂದ ನಂತರ ಅವನ ಅರಮನೆಯ ಹತ್ತಿರವೇ ಇದ್ದ ಸಂಪಿಗೆ ಸಿದ್ದೇಶ್ವನ ದೇವಾಲಯದ ಪಕ್ಕದಲ್ಲೇ ಮುನ್ನೂರು ಅರವತ್ತು ಅಂಕಣ ವಿಸ್ತಾರವಾದ ದೊಡ್ಡ ಮಠವನ್ನು ಕಟ್ಟಿಸಿಕೊಟ್ಟಿದ್ದನು. ನಂತರ ಮರುಘ ಶಾಂತವೀರರನ್ನು ಕರೆತಂದನು. ಭರಮಣ್ಣನಾಯಕನ ಭಕ್ತಿ ಗೌರವದಿಂದ ಅವರು ಅಲ್ಲಿಯೇ ನೆಲೆಸಿದರು. ಅಂದಿನಿಂದ ಚಿಮ್ಮಾಲಾದ್ರಿ ಬೃಹನ್ಮಠವು ಮುರುಘರಾಜೇಂದ್ರಸ್ವಾಮಿಗಳಿಂದ ಚಿತ್ರದುರ್ಗದಲ್ಲಿ ಸ್ಥಾಪನೆಯಾಯಿತು. ಇವರು ಚಿತ್ರದುರ್ಗದ ನಾಯಕ ಅರಸರಿಗೆ ರಾಜಗುರುಗಳಾಗಿದ್ದರು. ಈ ಮಠದ ಗುರುಪಂಪರೆ ಇಂದಿಗೂ ಶ್ರೀ ಶಿವಮೂರ್ತಿಮರುಘರಾಜೇಂದ್ರ ಸ್ವಾಮಿಗಳೊಂದಿಗೆ ಮುಂದುವರಿದುಕೊಂಡು ಬಂದ ಶೈವ[೩೯] ಮಠವಾಗಿದೆ.

ಚಿತ್ರದುರ್ಗದ ಮುರುಘಮಠವು ದಕ್ಷಿಣ ಭಾರತದ ಹಲವು ಭಾಗದಲ್ಲಿ ತನ್ನ ಶಾಖಾ ಮಠಗಳನ್ನು ಹೊಂದಿದೆ.[೪೦] ಅವುಗಳಲ್ಲಿ ಮುಖ್ಯವಾದವುಗಳು ಧಾರವಾಡದ ಮುರುಘಮಠ, ಬೆಂಗಳೂರಿನ ಸರ್ವಭೂಷಣ ಮಠ, ಬೆಟ್ಟದಪುರದ ವಿರಕ್ತಮಠ, ಸೋಮವಾರ ಪೇಟೆಯ ಮುರುಘಮಠ, ಬ್ಯಾಡಗಿ ವಿರಕ್ತಮಠ, ಅಥಣಿ ಗಚ್ಚಿನಮಠ, ಹಾವೇರಿಯ ಮುರುಘಮಠ, ಶಿರಸಿಯ ರುದ್ರದೇವರ ಮಠ, ತಮಿಳುನಾಡಿನ ಕುಂಭಕೋಣಮಠ ಹಾಗೂ ಕೊಲ್ಲಾಪುರದ ಮುರುಘಮಠ. ಈ ಶಾಖಾ ಮಠಗಳನ್ನೆಲ್ಲ ಜನರು ವಿರಕ್ತಮಠ, ಮುರಿಗೆ ಮಠಗಳೆಂದು ಕರೆಯುತ್ತಾರೆ. ಮುರುಘಮಠಕ್ಕೆ ಸುಮಾರು ೩೦೦೦ದಷ್ಟು ಶಾಖಾ ಮಠಗಳಿವೆ. ಈ ಎಲ್ಲ ಶಾಖಾ ಮಠಗಳು ಸ್ವಂತ ಭೂಹಿಡುವಳಿಗಳನ್ನು ಸ್ಥಿರ, ಚರ, ಆಸ್ತಿಯನ್ನು ಆಯಾ ಭಾಗದ ಭಕ್ತರಿಂದ, ವರ್ತಕರಿಂದ ರಾಜರುಗಳಿಂದ ಪಡೆದಿವೆ. ಲಿಂಗಾಯತರಷ್ಟೇ ಅಲ್ಲದೆ ಬೇರೆ ಸಮುದಾಯದ ಜನರು, ಮುಸ್ಲಿಂ ಧರ್ಮದ ನವಾಬರೂ ದತ್ತಿ ನೀಡಿದ್ದಾರೆ. ಹಿರೇಮಲ್ಲೂರು ಈಶ್ವರನ್ ಅವರು ಗಮನಿಸಿರುವಂತೆ "ಚಿತ್ರದುರ್ಗ ಮುರುಘಮಠವು ಸ್ಥಾವರ ಹಾಗೂ ಚರಸಂಪತ್ತಿಗೆ ಹೆಸರಾದ ವಿರಕ್ತಮಠ. ಆ ಮಠದ ಒಡೆತನಕ್ಕೆ ಸೇರಿದ ಭೂಮಿ ಚಿತ್ರದುರ್ಗ ಜಿಲ್ಲೆಯ ಹೊರಗೂ, ಒಳಗೂ ತುಂಬಿದೆ. ಕೊಡಗು ಜಿಲ್ಲೆಯ ಬೇಲೂರು, ಗುಬ್ಬಿ, ಜಂಬೂರು ಹಳ್ಳಿಗಳಲ್ಲಿಯೇ ದಾನವಾಗಿ ಕೊಟ್ಟ ಮಠದ ಆಸ್ತಿ ೬೦೦ ಎಕರೆಗೂ ಮೀರುತ್ತದೆ" ಎಂದಿದ್ದಾರೆ.[೪೧] ಈ ಮಠದ ಇಂಥ ಕೆಲವು ಉದಾಹರಣೆಗಳಲ್ಲಿ ಮುರುಘಮಠದ ಆರ್ಥಿಕ ಭದ್ರತೆಗೆ ದಾನ ನೀಡಿದ ಹಲವು ಸಂಸ್ಥಾನಗಳ ರಾಜರುಗಳೆಂದರೆ ಚಿತ್ರದುರ್ಗದ ನಾಯಕ ಅರಸರು, ಕೆಳದಿ, ಕೊಡಗು, ಸೋದೆ, ಸವಣೂರು ನವಾಬರು, ಶಿರಸಂಗಿ, ಮೈಸೂರು ಒಡೆಯರು, ಉಮ್ಮತ್ತೂರು, ಪುಂಗನೂರು, ಕೊಲ್ಲಾಪುರ ಇನ್ನು ಮುಂತಾದ ಸಂಸ್ಥಾನಗಳ ಅರಸರು ಚಿತ್ರದುರ್ಗದ ಮುರುಘ ಮಠಕ್ಕೆ ಅನೇಕ ವಿಧದ ದಾನ ದತ್ತಿಗಳನ್ನು ನೀಡಿದ್ದಾರೆ.

ಚಿತ್ರದುರ್ಗದ ಮುರುಘಮಠವು ಕ್ರಿ.ಶ.೧೭ನೇ ಶತಮಾನದಿಂದಲೂ, ರಾಜರುಗಳಿಂದ ಬಂದಂತಹ ತೆರಿಗೆ ಮುಕ್ತ ಭೂದಾನಗಳು, ಪ್ರಜೆಗಳಿಂದ ಬಂದ ಭೂದಾನಗಳು, ಮಠವೇ ಕೊಂಡುಕೊಂಡ ಭೂ ಹಿಡುವಳಿಗಳು, ವಿಶಿಷ್ಟ ಸಂದರ್ಭಗಳಲ್ಲಿ ದೊರೆತ ದಾನ ದತ್ತಿಗಳು ವೀಸದಿಂದ ಬರುತ್ತಿದ್ದ ಆದಾಯ, ಹೀಗೆ ಬೇರೆ ಬೇರೆ ಹಂತಗಳಲ್ಲಿ ದೊರೆತ ಆದಾಯದಿಂದಾಗಿ ಮಠವು ಶ್ರೀಮಂತವಾಗಿ ಬೆಳೆದುದನ್ನು

ಗುರುತಿಸಬಹುದಾಗಿದೆ. ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ ಮತ್ತು ತಮಿಳುನಾಡಿನ ಹಲವು ಭಾಗಗಳಲ್ಲಿ ಭೂ ಒಡೆತನ ಹೊಂದಿದ್ದು, ಮಠವು ಜಮೀನ್ದಾರಿ ಸಂಸ್ಥೆಯಂತೆ ಭೂ ಮಾಲೀಕತ್ವದ ಎಲ್ಲ ಚಟುವಟಿಕೆಗಳಲ್ಲಿ ತೊಡಗಿದೆ. ಅದು ವಿಸ್ತಾರವಾದ ಭೂ ಹಿಡುವಳಿಯನ್ನು ಹೊಂದಿದೆ. ಈ ಮಠದ ಭೂ ಹಿಡುವಳಿಗಳನ್ನು ಖುಷ್ಕಿ, ತರಿ, ಮತ್ತು ಭಾಗಾಯ್ತು ಎಂದು ಗುರುತಿಸಬಹುದು.[೪೨]

ಕೊಡಗು ಜಿಲ್ಲೆಯ ಸೋಮವಾರಪೇಟೆ, ಗುಂಡ್ಲು ಪೇಟೆ, ಅಬ್ಬಿಮಠ, ಚಿಗಟಿಹಳ್ಳಿ ಮುಂತಾದ ಪ್ರದೇಶಗಳಲ್ಲಿ ಮಠದ ಭೂಹಿಡುವಳಿಗಳಿವೆ.[೪೩] ಕೊಡಗಿನ ರಾಜರು ಕ್ರಿ.ಶ.೧೭೭೮ರಲ್ಲಿ ಸೋಮವಾರ ಪೇಟೆ ತಾಲೂಕು ಬೇಲೂರು ವಾಸವನಹಳ್ಳಿ ಸರ್ವೇನಂಬರ್ ೨/೪ರಲ್ಲಿ ೧೩೦೦ಎಕರೆ ಭೂಮಿಯನ್ನು ಅಬ್ಬಿಮಠ ಮತ್ತು ಮಾದೇವಪುರ ಮಠಕ್ಕೆ ನೀಡಿದ್ದರು. ಈ ಎರಡು ಕೊಡಗಿನ ಮಠಗಳು ಚಿತ್ರದುರ್ಗದ ಮುರುಘ ಮಠದ ಶಾಖಾಮಠಗಳಾಗಿವೆ.[೪೪]

ಇನ್ನೂ ಹಲವು ಪ್ರದೇಶಗಳಲ್ಲಿ ಮಠಕ್ಕೆ ಸೇರಿದ ಭೂಹಿಡುವಳಿಗಳನ್ನು ನೇರವಾಗಿ ಮಠವೇ ಉಳುಮೆಗೊಳಪಡಿಸುತ್ತದೆ. ಮುರುಘ ಮಠವು ಪ್ರಸ್ತುತ ಒಂದು ಪ್ರವಾಸಿ ತಾಣವಾಗಿ ಪ್ರವಾಸಿಗರನ್ನು ಆಕರ್ಷಿಸುವ ತಾಣವಾಗಿದೆ. ಮಠದಲ್ಲಿ ಕಾರ್ಯ ನಿರ್ವಹಿಸುವಂತ ಕೆಲಸಗಾರರ ಸಂಖ್ಯೆ ಸುಮಾರು ೨೦೦೦ಕ್ಕೆ ಹೆಚ್ಚಿನ ಕಾರ್ಮಿಕ ಸೇವಾ ವಲಯವನ್ನು ಹೊಂದಿದೆ. ನಾಯಕರ ಕಾಲದಲ್ಲಿ ನಿರ್ಮಾಣಗೊಂಡಿರುವ ಕೋಟೆಯನ್ನು ಬಿಟ್ಟರೆ ಪ್ರಸ್ತುತ ದಿನಗಳಲ್ಲಿ ಚಿತ್ರದುರ್ಗ ಇದೊಂದು ವಿದ್ಯಾ ಕೇಂದ್ರವಾಗಿ ರಚನೆಯಾಗಿದ್ದು. "ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ" ಎಂಬ ಬಸವಣ್ಣನವರ ವಾಣಿಯಂತೆ ಶಿಕ್ಷಣ ಪ್ರಸಾರವೇ ಸಮಾಜದ ಏಳಿಗೆಗೆ ಕಾರಣವೆಂಬುದನ್ನು ಬೃಹನ್ಮಠ ಹಿಂದಿನಿಂದಲೂ ಪಾಲಿಸಿಕೊಂಡು ಬಂದಿದೆ. ಕರ್ನಾಟಕದಲ್ಲಿ ಬಹುದೊಡ್ಡ ಪ್ರಮಾಣದಲ್ಲಿ ಶಾಲಾ-ಕಾಲೇಜುಗಳು, ಪ್ರಸಾದ ನಿಲಯಗಳು ನಡೆಸುತ್ತಿರುವ ಕೆಲವೇ ಧಾರ್ಮಿಕ ಸಂಸ್ಥೆಗಳಲ್ಲಿ ಬೃಹನ್ಮಠವೂ ಒಂದಾಗಿದೆ. ಇದರ ಒಂದು ಅಂಗ ಸಂಸ್ಥೆಯಾದ ಎಸ್.ಜೆ.ಎಂ.ವಿದ್ಯಾಪೀಠವು ಶಿಶುವಿಹಾರಗಳು, ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆಗಳು, ಪದವಿಪೂರ್ವ ಮತ್ತು ಕಲಾ, ವಿಜ್ಞಾನ, ವಾಣಿಜ್ಯ, ಕಾನೂನು, ಲಲಿತಕಲಾ, ಪದವಿ ಕಾಲೇಜುಗಳು, ಚಿತ್ರಕಲಾ, ಶೂಶ್ರೂಷೆ ಮತ್ತಿತರ ವೃತ್ತಿ ಶಿಕ್ಷಣದ ವಿವಿಧ ವಿದ್ಯಾಲಯಗಳು, ತಂತ್ರಜ್ಞಾನ, ದಂತವೈದ್ಯಕೀಯ, ಔಷಧಿ ವಿಜ್ಞಾನ ಮಹಾವಿದ್ಯಾಲಯಗಳು; ಅಂಗವಿಕಲ ಮಕ್ಕಳ ವಸತಿಯುತ ಶಾಲೆಗಳು, ಈ ಮುಂತಾದವುಗಳನ್ನು ಆರಂಭಿಸಿ ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದೆ. ಈ ವಿದ್ಯಾಪೀಠದ ವಿವಿಧ ವಿದ್ಯಾಲಯಗಳಲ್ಲಿ ಓದುತ್ತಿರುವ ವಿದ್ಯಾರ್ಥಿಗಳಲ್ಲಿ ಸುಮಾರು ಮುಕ್ಕಾಲು ಪಾಲು ಗ್ರಾಮಾಂತರ ಪ್ರದೇಶದ ವಿದ್ಯಾರ್ಥಿಗಳು ಎಂಬುದು ಗಮನಾರ್ಹ ಸಂಗತಿ.[೪೫] ಇಷ್ಟೇ ಅಲ್ಲದೆ ದೇಶದ ವಿವಿಧ ರಾಜ್ಯದ ವಿದ್ಯಾರ್ಥಿಗಳಿಗೆ ಆಶ್ರಯ ತಾಣವಾಗಿದೆ.

ಇಷ್ಟೇ ಅಲ್ಲದೇ ಸಾಮಾಜಿಕ, ಉತ್ಸವಗಳನ್ನು ನಡೆಸುತ್ತಿದೆ. 'ಶರಣ ಸಂಸ್ಕೃತಿ ಉತ್ಸವ' ಮುರುಘ ಮಠದ ವಿಶೇಷ ಉತ್ಸವ ಆಗಿದ್ದು ನಾಡಿನ ಹಾಗೂ ಹೊರ ರಾಜ್ಯ, ದೇಶದ ಸಂಪನ್ಮೂಲ ವ್ಯಕ್ತಿಗಳಿಂದ, ಕಲೆ, ಸಾಹಿತ್ಯ, ಜಾನಪದೀಯ ಅಂಶಗಳ ಪ್ರಚಾರ ಮಾಡುವ ಬಹು ದೊಡ್ಡ ಕಾರ್ಯವನ್ನು ಮಾಡುತ್ತಿದೆ. ಹೀಗೆ ಮಾಡುವುದರ ಮೂಲಕ ನಾಯಕರ ನಂತರ ಮಠದ ಮೂಲಕ ದುರ್ಗ ಪರಿಸರವನ್ನು ಗುರುತಿಸುವ ಛಾಪನ್ನು ಮೂಡಿಸಿದೆ. ಉಳಿದಂತೆ ಚಿತ್ರದುರ್ಗದ ನಗರೀಕರಣಕ್ಕೆ ಸಂಬಂಧಿಸಿದಂತೆ ಅನೇಕ ವ್ಯಾಪಾರಿ ಮಳಿಗೆಗಳನ್ನು ಸ್ಥಾಪಿಸುವುದರ ಮೂಲಕ ಇಲ್ಲಿ ವರ್ತಕರಿಗೆ ಆಶ್ರಯ ನೀಡುವಂತಹ ಕೆಲಸವು ಮುರುಘ ಮಠದ ಮೂಲಕ ನಡೆದಿದೆ.

ನಾಯಕರ ಕಾಲದಲ್ಲಿ ರೂಪಗೊಂಡಿರುವ ಹಬ್ಬ, ಉತ್ಸವ, ಜಾತ್ರೆಗಳನ್ನು ಇಂದಿಗೂ ಈ ಪ್ರದೇಶದಲ್ಲಿ ಗುರುತಿಸಬಹುದಾಗಿದೆ. ವಿಶೇಷವಾಗಿ ಆಚರಿಸುವ ಉತ್ಸವಾಂಬ ಉತ್ಸವ, ಉಳಿದಂತೆ ಬರಗೇರಮ್ಮ, ತಿಪ್ಪಿನ ಗಟ್ಟದಮ್ಮ, ಅಂತರಗಟ್ಟದಮ್ಮ, ಗೌರಸಂದ್ರದ ಮಾರಮ್ಮ, ಕಣಿವೆ ಮಾರಮ್ಮ, ಕಣಿವೆ ದುರ್ಗಮ್ಮ, ಬನಶಂಕರಿ, ಏಕನಾಥೇಶ್ವರಿ ಮತ್ತು ಉಚ್ಚಂಗಮ್ಮ ಇವರುಗಳು ನವದುರ್ಗಿಯರು ಇವರ ಹಬ್ಬ-ಉತ್ಸವಗಳು ನಡೆಯುತ್ತಿತ್ತು. ಇವರಲ್ಲಿ ಬರಗೇರಮ್ಮ ಹಿರಿಯಳು, ತಿಪ್ಪಿನ ಗಟ್ಟದಮ್ಮ ಎಲ್ಲರಿಗಿಂತ ಕಿರಿಯಳು. ಈ ಅಕ್ಕತಂಗಿಯರಲ್ಲಿ ಯಾವ ಕಾರಣಕ್ಕೋ ಮನಸ್ತಾಪವುಂಟಾಗಿ, ಅಕ್ಕ ತಂಗಿಗೆ ಇನ್ನೆಂದೂ ನಿನ್ನ ಮುಖ ನೋಡುವುದಿಲ್ಲವೆಂದು ಹೇಳಿದಾಗ, ತಂಗಿ ಅಕ್ಕನ ಕಾಲಿಗೆ ಬಿದ್ದು ಕ್ಷಮೆಯಾಚಿಸಲು, ಅಕ್ಕನಿಗೆ ತಂಗಿಯ ಮೇಲೆ ಕನಿಕರವುಂಟಾಗಿ, 'ವರ್ಷಕ್ಕೊಮ್ಮೆ ಭೇಟಿಯಾಗೋಣ' ಎಂದು ಹೇಳಿದಳಂತೆ. ಅದರಂತೆ ನಾಯಕರ ಕಾಲದಲ್ಲಿ ಆರಂಭವಾದ ಈ ಉತ್ಸವ ಇಂದಿಗೂ ದೊಡ್ಡಪೇಟೆಯ ರಾಜಬೀದಿಯಲ್ಲಿ ಅಕ್ಕತಂಗಿಯರ 'ಭೇಟಿಯ ಉತ್ಸವ'[೪೬] ಸಾಕ್ಷಿಗಾಗಿ ಉಚ್ಚಂಗಮ್ಮನ ಮುಂದೆ ನಡೆಯುತ್ತದೆ. ನಾಯಕರ ಕಾಲದ ಆರಾಧನಾ ಪರಂಪರೆಗಳನ್ನು ಈ ಉತ್ಸವಗಳ ಮೂಲಕ ಇಂದು ಕಾಣಬಹುದಾಗಿದೆ. ಇವುಗಳಲ್ಲಿ ಬುಡಕಟ್ಟು ಸಂಸ್ಕೃತಿ ಜನಪದ ಸಂಸ್ಕೃತಿ ಹಾಗೂ ರೈತ ಸಂಸ್ಕೃತಿಗಳೆಲ್ಲವೂ ಸಮ್ಮಿಳಿತವಾಗಿದ್ದು, ಚಿತ್ರದುರ್ಗದ ಜನಸಂಸ್ಕೃತಿಯನ್ನು ಅರ್ಥೈಸಿಕೊಳ್ಳಲು ಸಹಕಾರಿಯಾಗಿವೆ.

ಚಿತ್ರದುರ್ಗದ ನಾಯಕರು ಮೂಲತಃ ಮ್ಯಾಸಬೇಡ ಬುಡಕಟ್ಟಿಗೆ ಸೇರಿದವರು. ಇವರು ಆಚರಿಸುವ ಹಬ್ಬಗಳಲ್ಲಿ ಯುಗಾದಿ ಹಬ್ಬ ವಿಶೇಷವಾದದ್ದು. ಪ್ರತಿವರ್ಷ ನಾಯಕರು ಯುಗಾದಿ ಅಮವಾಸ್ಯೆ ದಿನದಂದು ಬೇಟೆಯಾಡುವ ಪರಂಪರೆಯನ್ನು ಹೊಂದಿದ್ದು, ಯುಗಾದಿ ಅಮವಾಸ್ಯೆ ಬೇಟೆಯಂತಲೇ ಕರೆಯಲಾಗಿದೆ. ಅಮವಾಸ್ಯೆಯ ಹಿಂದಿನ ದಿನ ಎಲ್ಲ ಗ್ರಾಮದ ಮುಖಂಡರು ಸೇರಿ ಆಯುಧಗಳನ್ನು ಸಿದ್ಧಪಡಿಸಿಕೊಳ್ಳಲು ಸಮಾಲೋಚನೆ ನಡೆಸುತ್ತಾರೆ. ಅಮವಾಸ್ಯೆಯ ದಿನ ಬೆಳ್ಳಿಗೆಯಿಂದ ಕತ್ತಲಾಗುವವರೆಗೂ ತಮ್ಮ ವ್ಯಾಪ್ತಿಯಲ್ಲಿ ಬರುವ, ಕಾವಲು, ಗುಡ್ಡ, ಕಾಡು, ಅರಣ್ಯ ಇನ್ನಿತರೆ ಪ್ರದೇಶಗಳಲ್ಲಿ ಸುತ್ತಾಡಿ, ಜಿಂಕೆ, ಹಂದಿ, ಮೊಲ ಇನ್ನಿತರೆ ಪ್ರಾಣಿಗಳನ್ನು ಬೇಟೆಯಾಡಿ ಸಂಜೆ ವೇಳೆಗೆ ಊರ ಬಳಿ ಬಂದು ತಮಟೆ, ಉರುಮೆ ವಾದ್ಯಗಳೊಂದಿಗೆ ಗ್ರಾಮದ ತುಂಬೆಲ್ಲ ಮೆರವಣಿಗೆ ಮಾಡಿ ಊರ ಮಧ್ಯದಲ್ಲಿ ಇರುವ 'ಬುಡ್ಡೆ ಕಲ್ಲು'[೪೭] ಎಂದು ಕರೆಯುವ ಸ್ಥಳಕ್ಕೆ ಹಂದಿ ತಲೆ ಮತ್ತು ಕಾಲುಗಳನ್ನು ಬುಡ್ಡೆ ಕಲ್ಲಿನ ಹತ್ತಿರ ಹೂತುಹಾಕಿ ಉಳಿದ ಹಂದಿ ದೇಹವನ್ನು ಮಾದಿಗರಿಗೆ ನೀಡುತ್ತಾರೆ. ಉಳಿದ ಪ್ರಾಣಿಗಳಾದ ಜಿಂಕೆ, ಮೊಲ ಮುಂತಾದವುಗಳನ್ನು ಮ್ಯಾಸ ಬೇಡರು ತಿನ್ನುತ್ತಾರೆ. ಈ ಪರಂಪರೆ ನಾಯಕರ ಕಾಲದಿಂದ ಆರಂಭವಾಗಿ ಇಂದಿಗೂ ಪ್ರತಿ ಹಳ್ಳಿಗಳಲ್ಲಿ ಮುಂದುವರೆಸಿಕೊಂಡು ಹೋಗಲಾಗುತ್ತಿದೆ.[೪೮] ಅಷ್ಟೆ ಅಲ್ಲದೆ ನಾಯಕರು ಆರಂಭದಿಂದಲೂ ಯುದ್ಧಕಲೆಯಲ್ಲಿ ಪ್ರವೀಣರು ಎಂಬ ಮಾತುಗಳಿವೆ. ಅದರಂತೆ ವರ್ಷಕ್ಕೊಮ್ಮೆಯಾದರೂ ತಮ್ಮ ಕಲೆಯನ್ನು ಪ್ರದರ್ಶಿಸುವ ವೇದಿಕೆಯಂತೆ ಈ ಸಂಪ್ರದಾಯ ಮುಂದುವರೆದುಕೊಂಡು ಬಂದಿದೆ.

ಚಿತ್ರದುರ್ಗವು ನಾಯಕರ ಹಾಗೂ ನಾಯಕರ ನಂತರದ ಅವಧಿಗಳಲ್ಲಿ ಕೃಷಿ ವ್ಯಾಪಾರ, ಮಠ, ಇವುಗಳ ಮೂಲಕ ಕೋಟೆ ಗುರುತಿಸಿಕೊಂಡು ಬಂದಿದೆ. ಮುಖ್ಯವಾಗಿ ಕೃಷಿಯಲ್ಲಿ ಆದ ಬದಲಾವಣೆಯೆಂದರೆ ಬಾವಿ ನೀರಾವರಿ, ಕೆರೆಯ ನೀರಾವರಿಯ ನಂತರ ರೂಪಗೊಂಡ ಕೊಳವೆ

ಬಾವಿಯು ಆಧುನಿಕ ಆವಿಷ್ಕಾರಗಳಿಂದ ಭೂಮಿಯಿಂದ ನೀರು ಎತ್ತುವ ಯಂತ್ರಗಳ ಸಹಾಯದಿಂದ ಬೃಹತ್ ಪ್ರಮಾಣದ ತೋಟಗಳು ರಚನೆಯಾಗಿವೆ. ಬಾಳೆ, ತೆಂಗು, ಅಡಿಕೆ, ಪಪ್ಪಾಯಿ, ತಂಬಾಕು, ಶುಂಠಿ, ದಾಳಿಂಬೆ, ಕಲ್ಲಂಗಡಿ, ಕಬ್ಬು, ಇನ್ನಿತರೆ ತರಕಾರಿ ಪುಷ್ಪಗಳನ್ನು ಬೆಳೆಯುವುದರ ಮೂಲಕ ಇಂದಿಗೂ ಬೃಹತ್ ಪ್ರಮಾಣದ ಮಾರುಕಟ್ಟೆಯಾಗಿ ಗುರುತಿಸಿಕೊಂಡಿದೆ. ಅದೇ ರೀತಿಯಾಗಿ ವ್ಯಾಪಾರ–ವಾಣಿಜ್ಯ ಚಟುವಟಿಕೆಗಳು ಚುರುಕುಗೊಂಡಿರುವುದರಿಂದಾಗಿ ಉತ್ತರ ಮತ್ತು ದಕ್ಷಿಣ ಭಾರತದ ವಿವಿಧ ವರ್ತಕರು ಈ ಪ್ರದೇಶದೊಂದಿಗೆ ವಾಣಿಜ್ಯ ವ್ಯಾಪಾರವನ್ನು ನಡೆಸುವಂತಾಗಿದೆ. ಉತ್ತರ ಮತ್ತು ದಕ್ಷಿಣ ಭಾರತವನ್ನು ಸೇರಿಸುವ ರಾಷ್ಟ್ರೀಯ ಹೆದ್ದಾರಿ ಈ ಪ್ರದೇಶದಲ್ಲಿ ಹಾದು ಹೋಗುವುದರಿಂದ ವ್ಯಾಪರ ಚಟುವಟಿಕೆ ವೃದ್ಧಿಗೊಂಡು, ವಿವಿಧ ಪ್ರದೇಶಗಳ ವರ್ತಕ ಸಮುದಾಯಗಳು ನೆಲೆ ನಿಲ್ಲುವಂತೆಯೂ ಆಗಿದೆ. ವ್ಯಾಪಾರಿ ಸಮುದಾಯಗಳ ಬಹುಮುಖಿ ಚಟುವಟಿಕೆಗಳು ಚಿತ್ರದುರ್ಗದ ನಗರ ವಿಸ್ತರಣೆಗೂ ಕಾರಣವಾಗಿ ಹೊಸ ನಗರ ವಿನ್ಯಾಸವನ್ನು ರೂಪಿಸಿವೆ. ಚಿತ್ರದುರ್ಗವು ನಾಯಕರ ಆಳ್ವಿಕೆಯ ಕುರುಹುಗಳು ಹಾಗೂ ಚಹರೆಗಳನ್ನು ಉಳಿಸಿಕೊಂಡೇ ಬೆಳವಣಿಗೆ ಹೊಂದುತ್ತಿರುವುದನ್ನು ಕಾಣಬಹುದಾಗಿದೆ. ಚಿತ್ರದುರ್ಗವು ಇಂದು ಪ್ರಮುಖ ಪ್ರವಾಸೋದ್ಯಮದ ತಾಣವಾಗಿ ಗುರುಸಿಕೊಂಡಿರುವುದನ್ನು ಈ ಹಿನ್ನೆಲೆಯಿಂದಲೇ ನೋಡಬಹುದಾಗಿದೆ.

ನಾಯಕರ ಕಾಲದಲ್ಲಿ ಕೃಷಿ ಉತ್ಪನ್ನ, ಮಾರುಕಟ್ಟೆ ವ್ಯವಸ್ಥೆಯಿಂದಾಗಿ ಅತೀ ಹೆಚ್ಚು ತೆರಿಗೆ ಬರುತ್ತಿತ್ತು. ನಾಯಕರ ನಂತರ ಕಾಲದಲ್ಲಿ ಕೃಷಿ ಕ್ಷೇತ್ರದಲ್ಲಿ ಮತ್ತಷ್ಟು ಬದಲಾವಣೆಳು ಕಂಡುಬಂದವು ಕಾರಣ ಕೃಷಿಯ ವಾಣೀಜ್ಯೀಕರಣದಿಂದಾಗಿ ಸಾಂಪ್ರದಾಯಿಕ ಕೃಷಿ ಬೆಳೆಗಳಿಗೆ ಬದಲಾಗಿ ಹತ್ತಿ, ತಂಬಾಕು, ಭತ್ತ, ಬಾಳೆ, ಕಬ್ಬು, ತೆಂಗು, ದಾಳಿಂಬೆ, ಶೇಂಗಾ ಮತ್ತು ಅಡಿಕೆ ಬೆಳೆಗಳು ಹೆಚ್ಚು ಪ್ರಚಾರಕ್ಕೆ ಬಂದವು. ಇದರ ಮೂಲಕ ಹೆಚ್ಚಿನ ಆರ್ಥಿಕ ಬೆಳೆಗಳನ್ನು ಬೆಳೆಯುವುದರ ಮೂಲಕ ಜಾಗತೀಕ ಮಟ್ಟದಲ್ಲಿ ರಾಜ್ಯ. ವಿದೇಶಗಳಿಗೆ ಇಲ್ಲಿ ಬೆಳೆದಿರುವ ವಸ್ತುಗಳನ್ನು ರಫ್ತು ಮಾಡುವುದರ ಮೂಲಕ ಆರ್ಥಿಕ ಸಂಚಲನವನ್ನುಂಟು ಮಾಡಿದವು. ನಾಯಕರ ಕಾಲದಲ್ಲಿ ನಿರ್ಮಾಣಗೊಂಡ ಕೆರೆ, ಕಾಲುವೆಗಳಿಂದ ಕೃಷಿ ಭೂಮಿ ಹೆಚ್ಚಾಗಿ ನೀರಾವರಿ ವ್ಯವಸ್ಥೆಯಿಂದಾಗಿ ವಾರ್ಷಿಕವಾಗಿ ಎರಡು ಬೆಳೆಗಳನ್ನು ಬೆಳೆಯುವುದರ ಮೂಲಕ ಎಣ್ಣೆ ಗಾಣಗಳು, ಕಬ್ಬಿನ ಗಾಣಗಳು ನೂಲು ಉದ್ಯಮ ಮುಂತಾದ ಗೃಹ ಕೈಗಾರಿಕೆಗಳು ಗ್ರಾಮ ಮತ್ತು ಪಟ್ಟಣ ಪ್ರದೇಶಗಳಲ್ಲಿ ಚುರುಕುಗೊಂಡವು ಸ್ಥಳೀಯ ಮಟ್ಟದಲ್ಲಿ ಸಂಘಟಿತಗೊಂಡ ಕೈಗಾರಿಕೆಗಳಾದ ರೇಷ್ಮೆ ಸೀರೆ ನೇಯ್ಗೆ ಹಾಗೂ ಗಾಣಿಗರಿಂದ ಉತ್ಪಾದನೆಯಾಗುತ್ತಿದ್ದ ಎಣ್ಣೆ ಉದ್ಯಮಗಳು ಸ್ಥಳೀಯ ಮಾರುಕಟ್ಟೆ ಅಲ್ಲದೆ ವಿದೇಶಿ ಕಂಪನಿಯವರ ಜೊತೆ ವ್ಯಾಪಾರ ಹೊಂದಿದ್ದರಿಂದ ಟಿಪ್ಪು ಸುಲ್ತಾನ್ ಇಲ್ಲಿಯ ಸ್ಥಳೀಯ ನೇಯ್ಗೆಗಾರರನ್ನು ಕರೆದೊಯೊದು ಬೆಂಗಳೂರು ಪಟ್ಟಣದಲ್ಲಿ ಹೊಸ ಬಡವಾಣೆಯನ್ನು ತೆರೆದಿದ್ದು ಕಾಣಬಹುದು. ಹಾಗೂ ಸ್ಥಳೀಯವಾಗಿ ಬೆಳೆಯುತ್ತಿದ್ದ ಹತ್ತಿ ಬೆಳೆಯನ್ನು ಬೀಜ ಮತ್ತು ಹರಳೆಯನ್ನು ಬೇರ್ಪಡಿಸಿ ಮದ್ರಸಾ ಪ್ರಸಿಡೇನ್ಸಿಗೆ ಹೊಳಲ್ಕೆರೆ, ಹೊಸದುರ್ಗ, ದಾವಣಗೆರೆ ಪರಿಸರದ ಜನರು ಮಾರಾಟ ಮಾಡುತ್ತಿದ್ದರು ಎಂದು ಸೂರ್ಯನಾಥ್ ಕಾಮತ್ ಅವರು ತಿಳಿಸಿದ್ದಾರೆ.

ನಗರೀಕರಣ ಪ್ರಕ್ರಿಯೇಗೆ ಒಳಗಾಗಿದ್ದ ಅನೇಕ ಪೇಟೆ–ಪಟ್ಟಣಗಳು ನಾಯಕರೋತ್ತರ ತನ್ನ ವಿಸ್ತೀರ್ಣತೆಯನ್ನು ಹೆಚ್ಚಿಸಿಕೊಂಡವು. ನಾಯಕ ಕಾಲದಲ್ಲಿ ರೂಪಗೊಂಡ ಚಳ್ಳಕೆರೆ, ಜಗಲೂರು, ಮೊಳಕಾಲ್ಮೂರು, ಹಿರಿಯೂರು, ಹೊಸದುರ್ಗ, ಚಿತ್ರದುರ್ಗ, ಹೊಳಲ್ಕೆರೆ, ಹರಿಹರ ಮುಂತದ

ನಗರಗಳು ಅನೇಕ ವರ್ತಕ ಸಮುದಯಗಳ ಆಗಮನದಿಂದಾಗಿ ಹಾಗೂ ಸ್ಥಳೀಯ ಜನರು ಕೃಷಿ ಉತ್ಪನ್ನಗಳನ್ನು ಬೆಳೆದಿದ್ದರಿಂದ ಅವರ ಬೆಳೆಗಳಿಗೆ ಮಾರಾಟ ಮಾಡಲು ಮಾರುಕಟ್ಟೆಗಳನ್ನು ಹೊಂದಿದ್ದವು. ನಗರೀಕರಣಕ್ಕೆ ಉತ್ತೇಜನ ನೀಡಲು ಸಾರಿಗೆ-ಸಂಪರ್ಕಗಳಿಗೆ ರಸ್ತೆ ಸಾರಿಗೆ ಸುಗಮಗೊಂಡಿತ್ತು. ಗ್ರಾಮೀಣ ಪ್ರದೇಶಗಳಲ್ಲಿ ಗುಡಿ ಕೈಗಾರಿಕೆಗಳಿಂದಾಗಿ ಉತ್ಪಾದನೆಯಾದ ವಸ್ತುಗಳಿಗೆ ಮಾರುಕಟ್ಟೆ ಕಲ್ಪಿಸಿತ್ತು. ಹೊಸ ಪಟ್ಟಣಗಳು, ದೇವಾಲಯಗಳು, ನಗರಗಳು ಮತ್ತು ರಾಜಧಾನಿ ನಗರಗಳು ರಾಜರ ಮತ್ತು ಪ್ರಜೆಗಳ ಸಕಲ ಚಟುವಟಿಕೆಗಳ ಮುಖ್ಯ ಕೇಂದ್ರಗಳಾಗಿ ಬೆಳೆದವು. ಈ ನಗರ ಕೇಂದ್ರಗಳನ್ನು ಕುರಿತು ವಿಸ್ತಾರವಾದ ನಿರೂಪಣೆಯು ನಮಗೆ ಸಮಕಾಲೀನ ಮೂಲಗಳಲ್ಲಿ ದೊರಕುತ್ತದೆ. ಶಾಸನಗಳು ಮತ್ತು ಸಾಹಿತ್ಯಿಕ ಮೂಲಗಳಿಂದ ನಮಗೆ ಆ ಶತಮಾನದ ನಗರ ಮತ್ತು ನಗರ ಜೀವನಗಳ ಚಿತ್ರವು ದೊರಕುತ್ತದೆ. ಅದು ಸ್ವಲ್ಪಮಟ್ಟಿಗೆ ಆದರ್ಶಯುತವಾಗಿದ್ದರೂ ವಾಸ್ತವ ಪರಿಸ್ಥಿತಿಗಳಿಂದ ಬಹು ದೂರವಾಗಿಲ್ಲ. ಶ್ರೀಮಂತರ ಅನೇಕ ಅಂತಸ್ತುಗಳ ಭವ್ಯ ಸೌಧಗಳು, ಚಪ್ಪಟೆ ಚಾವಣಿಯಗಾರೆ ಕೆಲವು ಮಧ್ಯಮ ವರ್ಗದ ಜನರ ನಿವಾಸಗಳು (ಮಾಳಿಗೆ) ಮತ್ತು ಸಾಮಾನ್ಯ ಕೆಳವರ್ಗದ ಜನರ ಸಾಮಾನ್ಯ ಮನೆಗಳು ಇವೆಲ್ಲವೂ ಇರುತ್ತಿದ್ದು, ನಗರಗಳು ಸಮಾಜದ ಎಲ್ಲ ಸ್ತರಗಳ ಸದಸ್ಯರನ್ನೂ ಆಕರ್ಷಿಸಿದ್ದವು ಎಂಬುದನ್ನು ಸ್ಪಷ್ಟಪಡಿಸುತ್ತದೆ. ನಾಯಕರ ಕಾಲದಲ್ಲಿ ನಿರ್ಮಾಣಗೊಂಡಿದ್ದ ಸಂತೆ ಬಜಾರುಗಳು ಕಸುಬುದಾರರಿಂದ ನಿರ್ಮಾಣ ಆಗಿದ ಕಸೂತಿ ವಸ್ತುಗಳು, ಅನೇಕ ಉದ್ಯಮಗಳಿಂದ ನಿರ್ಮಾಣ ಆಗಿದ್ದ ವಸ್ತುಗಳಿಗೆ ಮಾರುಕಟ್ಟೆಗಳನ್ನು ನಗರ ಪ್ರದೇಶಗಳಲ್ಲಿ ಗುರುತಿಸಬಹುದು.

ನಾಯಕರ ಹಾಗೂ ನಾಯಕರೋತ್ತರ ಕಾಲದಲ್ಲಿ ಕೈಗಾರಿಕೆಯ ಬೆಳವಣಿಗೆಯಾಗಬೇಕಾದರೆ ಪ್ರಮುಖ ಕಚ್ಚಾ ವಸ್ತುಗಳು ಅತ್ಯಗತ್ಯ ಈ ದೃಷ್ಟಿಯಲ್ಲಿ ರಾಜ್ಯದ ಕೈಗಾರಿಕೆಗಳು ಬೆಳೆಯಲು ಸಹಾಯಕವಾಗುವ ಹೆಚ್ಚು ಕಡಿಮೆ ಎಲ್ಲ ಉತ್ಪನ್ನಗಳು ದೊರೆಯುತ್ತಿದ್ದವು ಎಂದು ಕಂಡುಬರುತ್ತದೆ. ಪ್ರತಿ ವರ್ಷವೂ ಸಾಮ್ರಾಜ್ಯದಲ್ಲಿ ಸಾಕಷ್ಟು ಮೌಲ್ಯದ ಕೃಷಿ ಮೂಲದ ಕಚ್ಚಾ ವಸ್ತುಗಳು ಉತ್ಪನ್ನವಾಗುತ್ತಿದ್ದವು. ಇವುಗಳಲ್ಲಿ ಮುಖ್ಯವಾದವುಗಳೆಂದರೆ ಹತ್ತಿ, ಎಣ್ಣೆ ಬೀಜಗಳು, ಕಬ್ಬುಗಳಾಗಿದ್ದವೆಂದು ಕಂಡುಬರುತ್ತದೆ. ಇವುಗಳಲ್ಲಿ ಹತ್ತಿ, ಎಣ್ಣೆ, ರೇಷ್ಮೆ ಮತ್ತು ಇತರ ದಾರಗಳು ಬಟ್ಟೆ ತಯಾರಿಸುವ ಕೈಗಾರಿಕೆಗಳಿಗೆ ಕಚ್ಚಾವಸ್ತುಗಳಾಗಿದ್ದವು. ಹೆಚ್ಚು ಮೌಲ್ಯವುಳ್ಳ ಅರಣ್ಯದ ಉತ್ಪನ್ನಗಳೂ ಸಹ ದೊರೆಯುತ್ತಿದ್ದವು. ಚರ್ಮವನ್ನು ಹದಮಾಡುವ ತೊಗಟೆಯನ್ನು ಕಾಡಿನಿಂದಲೇ ತರುತ್ತಿದ್ದರು. ಅಂಟು, ಸೀಗೆ, ಬೊಂಬುಗಳು ಕಾಡಿನ ಉತ್ಪನ್ನಗಳಾಗಿದ್ದ, ಕೈಗಾರಿಕೆ ಹಾಗೂ ವ್ಯಾಪಾರಗಳಲ್ಲಿ ಪ್ರಮುಖವಾದ ಸ್ಥಾನವನ್ನು ಹೊಂದಿದ್ದವೆಂದು ಹೇಳಬಹುದು. ಚಿತ್ರದುರ್ಗ ಭೌಗೋಳಿಕ ಪರಿಸರದಲ್ಲಿ ಕಬ್ಬಿಣದ ಅದಿರು ದೊರೆಯುತ್ತಿದ್ದರಿಂದ ಕಬ್ಬಿಣದ ತಯಾರಿಕೆಯ ಕೈಗಾರಿಕೆಗಳೂ ಅಭಿವೃದ್ಧಿ ಹೊಂದಿದ್ದವೆಂದು ಆಧಾರಗಳು ತಿಳಿಸುತ್ತವೆ.[೯೯]

ಕೈಗಾರಿಕೆ ಎಂದರೆ ಕೈಮಗ್ಗದಿಂದ ಬಟ್ಟೆ ತಯಾರಿಸುವುದೇ ಆಗಿತ್ತು. ಇದನ್ನು ಬಿಟ್ಟರೆ ರೇಷ್ಮೇ ದಾರದ ಉತ್ಪನ್ನ, ಲೋಹದ ವಸ್ತುಗಳ ತಯಾರಿಕೆ, ಮಡಿಕೆ-ಕುಡಿಕೆ ತಯಾರಿಕೆ, ಬಡಗಿ ಕೆಲಸ, ಚರ್ಮಹದ ಮಾಡುವ ಕೈಗಾರಿಕೆ, ಬೆಲ್ಲದ ತಯಾರಿಕೆ, ಎಣ್ಣೆ ತಯಾರಿಕೆ, ಉಪ್ಪನ್ನು ತಯಾರಿಸುವುದು ಮೊದಲಾದವುಗಳು ರಾಜ್ಯದ ಎಲ್ಲ ಕಡೆ ಸಾಮಾನ್ಯವಾಗಿ ಹರಡಿಕೊಂಡಿದ್ದ ಕರಕುಶಲ ಕಸುಬುಗಳಾಗಿದ್ದವು. ಇವುಗಳಲ್ಲಿ ಅನೇಕ ಸಣ್ಣ ಪುಟ್ಟ ಕೈಗಾರಿಕೆಗಳೂ ಸಹ ಜೀವನದ ಪ್ರಮುಖ ದ್ರವ್ಯಗಳ ತಯಾರಿಕೆ, ಕರಕುಶಲ ಉದ್ಯಮಗಳು ನಾಯಕರ ಕಾಲದಲ್ಲಿ ಎಷ್ಟು ಪ್ರಮಾಣ ಉತ್ಪಾದನೆ ಆಗುತ್ತಿತ್ತೋ ನಾಯಕೋತ್ತರ ಕಾಲದಲ್ಲಿ ಇವರು ತಮ್ಮ ಕೈಗಾರಿಕೆಗಳಿಂದ ಉತ್ಪಾದನೆಯಾಗುವ ವಸ್ತುಗಳಿಗೆ ತೆರಿಗೆ ಸಲ್ಲಿಸುತ್ತಿದ್ದರು.

ನಾಯಕರ ಕಾಲದಲ್ಲಿ ಕನ್ನಡ ಭಾಷೆ ಆಡಳಿತ ಭಾಷೆಯಾಗಿದ್ದು, ನಾಯಕರ ನಂತರ ಹೈದರ್, ಟಿಪ್ಪು ಮತ್ತು ಸುಲ್ತಾನರ ಕಾಲದಲ್ಲಿ ಉರ್ದು ಭಾಷೆ ಆಡಳಿತ ಭಾಷೆಯಾಗಿ ಹೆಚ್ಚು ಪ್ರಚಾರಕ್ಕೆ ಬಂದಿತು. ಆದರೆ ಕನ್ನಡ ಭಾಷೆ ಬಹು ಸಂಖ್ಯಾತರ ಭಾಷೆ ಆಗಿದ್ದರಿಂದ ನಾಯಕರ ಕಾಲದಲ್ಲಿ ಕರೆದಿರುವ ಕೋಟೆ ಹಾಗೂ ಇನ್ನಿತರೆ ಆಡಳಿತ ಘಟಕಗಳಿಗೆ ನಾಯಕರು ಕರೆದಿರುವ ಹೆಸರುಗಳ ಮೂಲಕೆ ಕನ್ನಡ ಭಾಷೆಯ ಮೂಲಕ ಗುರುತಿಸಿರುವುದು ಕಾಣಬಹುದಾಗಿದೆ.

ಚಿತ್ರದುರ್ಗ ನಾಯಕರು ಹೆಚ್ಚಿನ ಸಂಖ್ಯೆಯಲ್ಲಿ ಧಾರ್ಮಿಕ ನೆಲೆಯ ದೇಗುಲಗಳು, ಗದ್ದುಗೆಗಳು, ಮಠಗಳು, ಲೌಕಿಕ ನೆಲೆಯ ಅರಮನೆಗಳು, ರಕ್ಷಣಾತ್ಮಕ ಸ್ಮಾರಕಗಳಾದ ಕೋಟೆ ಕಂದಕಗಳು, ಮೂರ್ತಿ ಶಿಲ್ಪಗಳಾದ ಬಿಡಿಶಿಲ್ಪ, ಉಬ್ಬುಶಿಲ್ಪ, ಲೋಹ ಶಿಲ್ಪಗಳನ್ನು ನಿರ್ಮಿಸಿದರು. ಇವುಗಳಲ್ಲಿ ಹೆಚ್ಚಿನವು ಕಾಲಗರ್ಭದಲ್ಲಿ ಕಣ್ಮರೆಯಾಗಿವೆ.[೫೦] ಇದಕ್ಕೆ ಅನೇಕ ಕಾರಣಗಳಿವೆ. ಆದರೆ ಇವರ ವಾಸ್ತು ಶೈಲಿಯಲ್ಲಿ ದ್ರಾವಿಡ ಶೈಲಿಯನ್ನು ಮುಂದುರೆಸಿದ್ದು ಇವರ ಶೈಲಿಯಲ್ಲಿ ರಚನೆಗೊಂಡ ರಕ್ಷಣಾ ಶೈಲಿಯ ಕೋಟೆ ಹಾಗೂ ಅನೇಕ ದೇವಾಲಯ, ಭತೇರಿ ಮಂಟಪ, ದ್ವಾರ ಬಾಗಿಲುಗಳೇ ಸಾಕ್ಷಿಯಾಗಿದ್ದು ಇದು ಹೊಸತನವನ್ನು ನೀಡುತ್ತದೆ.

ನಾಯಕರ ಕಾಲದಲ್ಲಿ ಅನೇಕ ಸ್ಥಳೀಯ ಪಾಳೆಯಗಾರರೊಂದಿಗೆ ನಿರಂತರ ಯುದ್ಧಗಳು ಘಟಿಸುತ್ತಿದ್ದು, ಇವರ ಸೈನ್ಯದಲ್ಲಿ ಇದ್ದ ಬೇಡ ಪಡೆಯ ಸ್ಥಾನ ಪ್ರಮುಖವಾದದ್ದು. ಚರಿತ್ರೆಯಲ್ಲಿ ಕಂಡುಬರುವ ಬೇಡ ಪಡೆಯು ಚಿತ್ರದುರ್ಗ ನಾಯಕರ ಕಾಲದಲ್ಲಿ ವಿಶೇಷತೆಯನ್ನು ಪಡೆದುಕೊಂಡಿದ್ದು 'ಗೆರಿಲ್ಲ' ಯುದ್ಧ ತಂತ್ರವನ್ನು ಕರಗತ ಮಾಡಿಕೊಂಡಿದ್ದು ಇದು ನಾಯಕರ ಸೈನ್ಯ ವ್ಯವಸ್ಥೆಯಲ್ಲಿ ಹೊಸತನವನ್ನು ಗುರುತಿಸಿಕೊಂಡಿದೆ. ಮೂಲತಃ ನಾಯಕರು ವೈಷ್ಣವ ಧರ್ಮ ಪರಿಪಾಲಕರು ಆಗಿದ್ದರು. ಆದರೆ ಇವರು ಶಕ್ತಿ ಪರಂಪರೆಯ ಶಾಕ್ತ ಪಂಥದ ದೇವತೆಗಳನ್ನು ಆರಾಧನೆ ಮಾಡುವ ಪರಂಪರೆ ಇತ್ತು. ಕುಲ ದೇವತೆಯಾದ ಉಚ್ಚಂಗೆಮ್ಮ ಏಕನಾಥೇಶ್ವರಿ ಹಾಗೂ ನವದುರ್ಗಿಯರ ಆರಾಧನೆ ಹೆಚ್ಚು ಪ್ರಚಾರಕ್ಕೆ ಬಂದಿದ್ದವು. ನಾಯಕರ ಕಾಲದಲ್ಲಿ ಆಂಜನೇಯ, ರಂಗನಾಥ, ದೇವಾಲಯಗಳೇ ಹೆಚ್ಚು ನಿರ್ಮಾಣಗೊಂಡವು. ವಿಶೇಷವಾಗಿ ವಿಜಯನಗರ ಕಾಲದಲ್ಲಿ ಆರಾಧನಾ ಪರಂಪರೆಗೆ ಬಂದಿದ್ದ ಆಂಜನೇಯ ಮೂರ್ತಿ ನಾಯಕರ ಕಾಲದಲ್ಲಿ ಹೆಚ್ಚು ಆರಾಧನೆಯನ್ನು ಕಂಡಿದ್ದು, ನಾಯಕರ ಕಾಲದ 'ಹನುಮ ಧ್ವಜ' ಇಂದಿಗೂ ಅಲ್ಲಿ ರಾರಾಧಿಸುವುದು ಕಾಣಬಹುದು. ನಾಯಕರ ಕಾಲದಲ್ಲಿ ಆರಂಭವಾದ ಸಿಡಿ, ಗಾವು, ಬಲಿ, ಜಾತ್ರೆ, ಉತ್ಸವಗಳು ನವದುರ್ಗಿ ಶಕ್ತಿ ಆರಾಧನಾ ಪರಂಪರೆಯಲ್ಲಿ ಮುಂದುವರೆದಿವೆ.

ನಾಯಕರ ಆಡಳಿತ ಕೇಂದ್ರವಾಗಿ ಹಾಗೂ ಪ್ರಮುಖ ಪಟ್ಟಣವಾಗಿ ಗುರುತಿಸಿಕೊಂಡಿದ್ದ ಚಿತ್ರದುರ್ಗ ಹಾಗೂ ಇನ್ನಿತರೆ ಪೇಟೆ-ಪಟ್ಟಣಗಳಿಗೆ ವಲಸೆ ಹೆಚ್ಚು ಕಂಡುಬರುತ್ತದೆ. ಬಡತನದ ಬೇಗೆಯಿಂದ ತಪ್ಪಿಸಿಕೊಳ್ಳಲು ನಮ್ಮಂತಹ ದೇಶಗಳಲ್ಲಿ ಅನೇಕ ಕರಕುಶಲ ಕಾರ್ಮಿಕರು ತಮ್ಮ ಹುಟ್ಟೂರನ್ನು ತೊರೆದು ನಗರಗಳಿಗೆ ಕೆಲಸವನ್ನು ಹುಡುಕುತ್ತಾ ಬರುತ್ತಾರೆ. ಈ ಕಾರ್ಮಿಕರು ತಮ್ಮ ಸಂಸಾರದೊಂದಿಗೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಹೋಗುತ್ತಾರೆ. ಕೃಷಿ ಕೆಲಸಗಳು ಕ್ಷೀಣಿಸಿದ ಕಾಲದಲ್ಲಿ ಜನತೆ ವಲಸೆ ಹೋಗುತ್ತಾರೆ. ಇದನ್ನು ಋತುಮಾನದ ವಲಸೆ ಎಂದು ಕರೆಯುತ್ತಾರೆ. ಮಳೆಗಾಲದಲ್ಲಿ ಕೃಷಿ ಚಟುಟಿಕೆಗಳು ಆರಂಭವಾದ ಕೂಡಲೆ ತಮ್ಮ ತಮ್ಮ ಊರು ಸೇರುವ ವಲಸಿಗರಿದ್ದಾರೆ. ಕೆಲಸ ಹುಡುಕಿಕೊಂಡು ದೇಶದ ಉದ್ದಗಲಕ್ಕೂ ಲಕ್ಷಾಂತರ ಶ್ರಮಿಕರು ಅದರಲ್ಲೂ ಇತ್ತೀಚೆಗೆ ರೈತರು, ರೈತ

ಕಾರ್ಮಿಕರು ಪಟ್ಟಣಗಳತ್ತ ವಲಸೆ ಹೋಗುತ್ತಿದ್ದಾರೆ. ವಾಯುಗುಣದ ವೈಪರಿತ್ಯದಿಂದಾಗಿ ಬರಗಾಲ ಬಂದಾಗ ರೈತರು ಬೇಸಾಯದ ಬವಣೆಗಳಿಗೆ ಬೆದರಿ ಪಟ್ಟಣಕ್ಕೆ ಗುಳೆ ಹೋಗುತ್ತಿದ್ದಾರೆ. ಇವರಲ್ಲಿ ಕೃಷಿ ನಿರಾಶ್ರಿತರು, ಅಲೆಮಾರಿ ಜನಾಂಗಗಳು, ಬುಡಕಟ್ಟು ಜನರು, ವ್ಯಾಪಾರಿಗಳು ಇನ್ನಿತರೆ ಸಮುದಾಯಗಳು ನಾಯಕರ ಕಾಲದಲ್ಲಿ ನಿರ್ಮಾಣಗೊಂಡಿದ್ದ ಪೇಟೆ-ಪಟ್ಟಣಗಳಿಗೆ ತಮ್ಮ ಜೀವನ ನಿರ್ವಾಹಣೆಗಾಗಿ ಗ್ರಾಮಗಳಿಂದ ಪೇಟೆಗಳಿಗೆ ವಲಸೆ ಹೋಗುತ್ತಿರುವುದು ಗುರುತಿಸಬಹುದು.

ನಾಯಕರ ಕಾಲದಲ್ಲಿ ನಿರ್ಮಾಣಗೊಂಡಿದ್ದ ಅನೇಕ ಆಡಳಿತ ವಿಭಾಗಗಳು ಇಂದು ಜಿಲ್ಲೆ, ತಾಲೂಕು, ಹೋಬಳಿ, ಗ್ರಾಮ ಪಂಚಾಯಿತಿ ಮುಂತಾದ ಆಡಳಿತ ಕೇಂದ್ರಗಳಾಗಿ ಗುರುತಿಸಿಕೊಂಡಿವೆ. ಇದರೊಂದಿಗೆ ನೋಡುವುದಾದರೆ ಅನೇಕ ಸೀಮೆ, ಮಾಗಣಿ, ಸ್ಥಳ, ಪುರ, ಚಾವಡಿ ಮುಂತಾದ ಹೆಸರುಗಳಿಂದ ಗುರುತಿಸಿಕೊಂಡಿರುವ ಅನೇಕ ಗ್ರಾಮ, ಅಥವಾ ಪಟ್ಟಣಗಳು ನಾಯಕರ ಕಾಲದ ಸ್ಮಾರಕ ನಗರಗಳಾಗಿದ್ದು ಪ್ರಸ್ತುತ ಕಾಲದಲ್ಲಿ ಆಡಳಿತ ಕೇಂದ್ರಗಳ ಉಪ ಭಾಗಗಳಾಗಿ ರಚನೆಯಾಗಲು ನಾಯಕರು ಮಾಡಿಕೊಂಡಿದ್ದ ಉಪ ವಿಭಾಗಗಳೇ ಎಂದು ಗುರುತಿಸಬಹುದಾಗಿದೆ.

ಕ್ರಿ.ಶ. ೧೬ನೇ ಶತಮಾನದಲ್ಲಿ ಚಿತ್ರದುರ್ಗ ಪ್ರದೇಶವನ್ನು ಕೇಂದ್ರವಾಗಿ ಮಾಡಿಕೊಂಡಿದ್ದ ನಾಯಕರು ಇಂದಿಗೂ ಅದು ಗುರುತಿಸಿಕೊಂಡಿದ್ದು ರಕ್ಷಣಾ ಶೈಲಿಯ ಕೋಟೆ ಹಾಗೂ ಮುರುಘ ಮಠದ ಮೂಲಕ ಕೋಟೆ ಅಂದಿನ ಕಾಲಕ್ಕೆ ಅದು ಅನಿವಾರ್ಯವಾಗಿದ್ದರು ಸಹ ಇದು ಅದು ಪ್ರವಾಸಿಗರ ಗಮನ ಸೆಳೆದ ಏಳು ಸುತ್ತಿನ ಕಲ್ಲಿನ ಕೋಟೆಯ ಮೂಲಕ ಖ್ಯಾತಿ ಹೊಂದಿದೆ. ಇಂದು ನಾಯಕರು ಇಲ್ಲದೇ ಹೋಗಿದ್ದರು ಅವರು ನಿರ್ಮಿಸಿದ ಕೋಟೆ ಹಾಗೂ ಸ್ಮಾರಕಗಳು ನಾಯಕರ ಹೆಸರಿನ ಮೂಲಕ ದುರ್ಗ ಪ್ರದೇಶವನ್ನು ಪ್ರವಾಸಿಗರ ಹಾಗೂ ಅವರಿಗೆ ದುರ್ಗದ ಚರಿತ್ರೆಯನ್ನು ವಿವರಿಸುವ ಮಾಹಿತಿದಾರರು ಅದೊಂದು ಉದ್ಯಮವಾಗಿ ಮಾಡಿಕೊಂಡಿದ್ದಾರೆ. ಹಾಗಾಗಿ ಪ್ರವಾಸೋದ್ಯಮದ ಮೂಲಕ ದುರ್ಗದ ಕೋಟೆ ಗುರುತಿಸಿಕೊಂಡಿದ್ದು ಗಮನಾರ್ಹ. ಅದೇ ರೀತಿಯಗಿ ಮುರುಘ ಮಠವು ಧಾರ್ಮಿಕ ಕೇಂದ್ರವಾಗಿ ಪ್ರವಾಸೋದ್ಯಮ ಸ್ಥಳವಾಗಿ ರಚನೆಯಾಗಲು ನಾಯಕರ ಸಾಧನೆ ಅಪಾರವಾದದು.

ಒಟ್ಟಾರೆಯಾಗಿ ಚಿತ್ರದುರ್ಗ ಪ್ರದೇಶ ಹಾಗೂ ಇತರೆ ಪೇಟೆ ಪಟ್ಟಣಗಳ ಅಭಿವೃದ್ಧಿಯಿಂದಾಗಿ ತನ್ನದೇ ಆದ ಐಡೆಂಟಿಟಿಯನ್ನು ಹೊಂದಿದೆ. ಇದಕ್ಕೆ ನಾಯಕರು ಹೊಂದಿದ್ದ ಆಡಳಿತ ಹಾಗೂ ಪ್ರಗತಿ ಪರ ದೋರಣೆಗಳೆ ಸಾಕ್ಷಿಯಾಗಿವೆ. ಕೃಷಿಯನ್ನು ಉತ್ತೇಜಿಸಿ ಜನರ ಬದುಕನ್ನು ಸುರಕ್ಷಿತಗೊಳಿಸಲು ಅನೇಕ ಕೆರೆ-ಕಾಲುವೆ, ಕಟ್ಟೆಗಳು, ಬಾವಿ ಇತ್ಯಾದಿ ಜಲ ಸಂಗ್ರಾಹಕಗಳಿಂದ ಹೆಚ್ಚಿನ ಕೃಷಿ ಉತ್ಪನ್ನಗಳು ಬೆಳೆದು ಮಾರುಕಟ್ಟೆ ರಚನೆಯಾಗಲು ಕಾರಣವಾಯಿತು. ಮಾರುಕಟ್ಟೆಯಲ್ಲಿ ಅಪಾರ ಸಂಖ್ಯೆಯ ವ್ಯಾಪಾರಿಗಳು ಬಂದು ನೆಲೆನಿಲ್ಲಲು, ಮಳಿಗೆಗಳನ್ನು ತೆರೆಯಲಾಯಿತು. ಇದರ ಮೂಲಕ ಒಂದು ಕಡೆ ನಗರೀಕರಣ ಪ್ರಕ್ರಿಯೆ ಚುರುಕುಗೊಂಡಂತೆ, ವ್ಯಾಪಾರ-ವಾಣಿಜ್ಯ ಚಟುವಟಿಕೆಗಳು ಅಭಿವೃದ್ಧಿಯನ್ನು ಹೊಂದಿದ್ದು, ವ್ಯಾಪಾರಿಗಳ ಬೇಡಿಕೆ ಇರುವ ಬೆಳೆಗಳನ್ನು ಬೆಳೆಯುವುದರ ಮೂಲಕ ಶೇಂಗಾ, ಹತ್ತಿ, ಅಡಿಕೆ, ಭತ್ತ ಪ್ರಮುಖ ಆರ್ಥಿಕ ಬೆಳೆಗಳಾಗಿ ಗುರುತಿಸಿಕೊಂಡಿದೆ. ನಗರವು ವಿಸ್ತಾರಗೊಳ್ಳಲು ಗ್ರಾಮೀಣ ಪ್ರದೇಶದ ಜನರು ಕೆಲಸವನ್ನು ಹರಸಿ ಪೇಟೆಗಳಿಗೆ ವಲಸೆ ಹೋಗುವ, ಉದ್ಯಮಗಳ ಸೃಷ್ಠಿಗೆ ಕಾರಣವಾಗಿದೆ. ಈ ಎಲ್ಲ ಸಾಮಾಜಿಕ ಹಾಗೂ ಆರ್ಥಿಕ ಅಂಶಗಳ ಮೂಲಕ ನಾಯಕೋತ್ತರ ಅವಧಿಯ ಹೊಸ ಒಲವುಗಳನ್ನು ಗುರುತಿಸಬಹುದಾಗಿದೆ.

## ಕೊನೆಟಿಪ್ಪಣಿಗಳು

೧. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.ಸಂ.-೩೦

೨. ಅದೇ, ಪು.ಸಂ-೩೦

೩. ಸಂತೋಷ್ ಎನ್.ಜಿ., ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ನಾಯಕರ ಕಾಲದ ಕೃಷಿ ವ್ಯವಸ್ಥೆ, (೧೩೩೬-೧೮೦೦), ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಅಪ್ರಕಟಿತ ಪಿಎಚ್.ಡಿ., ಮಹಾಪ್ರಬಂಧ, ೨೦೦೯, ಪು.ಸಂ-೧೮೩

೪. ಅಬೇಸನ್ ಸಿ.ಯು., ಎ ಕಲೆಕ್ಷನ್ ಆಫ್ ಟ್ರೀಟೀಸ್, ಎಂಗೇಜ್‌ಮೆಂಟ್ಸ್ ಆ್ಯಂಡ್ ಸನ್ನದ್ಸ್ ರಿಲೇಟಿಂಗ್ ಟು ಇಂಡಿಯಾ ಆ್ಯಂಡ್ ಸೆಗ್‌ಬೋರಿಂಗ್ ಕಂಟ್ರೀಸ್, ವ್ಯಾಲ್ಯೂಂ-III, ಆಫೀಸ್ ಆಫ್ ದಿ ಸುಪ್ರಿಡೇಂಟ್ ಆಫ್ ಗೌರ್ಮೆಂಟ್ ಪ್ರಿಂಟಿಂಗ್ ಇಂಡಿಯಾ, ೧೮೯೨, ಪು.ಸಂ-೧೦೧

೫. ಅಪ್ಪಾದೊರೈ ಎ., ಎಕಾನಮಿಕ್ ಕಂಡೀಶನ್ಸ್ ಇನ್ ಸೌತರ್ನ್ ಇಂಡಿಯಾ (೧೦೦೦-೧೫೦೦ ಎ.ಕೆ) ಸಂಪುಟ-I, ಮದ್ರಾಸ್ ಯುನಿವರ್ಸಿಟಿ, ಮದ್ರಾಸ್, ೧೯೩೦, ಪು.ಸಂ-೨೫೪

೬. ಶಿವಣ್ಣ ಕೆ.ಎಸ್., ಫ್ರಮ್ ಲೇಬರ್ಸ್ ಆಫ್ ಕರ್ನಾಟಕ ಐ.ಹೆಚ್.ಸಿ ಪ್ರೊಸಿಡಿಂಗ್ಸ್, ೩೯ನೇ ಅಧಿವೇಶನ, ಹೈದರಾಬಾದ್, ವ್ಯಾಲ್ಯೂಂ-I, ೧೯೭೮, ಪು.ಸಂ-೧೪೨

೭. ಮಹಾಲಿಂಗಂ ಟಿ.ವಿ., ಅಡ್ಮಿನಿಸ್ಟ್ರೇಷನ್ಸ್ ಆ್ಯಂಡ್ ಸೋಷಿಯಲ್ ಲೈಫ್ ಅಂಡರ್ ವಿಜಯನಗರ, ವ್ಯಾಲ್ಯೂಂ-II, ಮದ್ರಾಸ್, ೧೯೭೫, ಪು.ಸಂ-೭೬, ೭೭

೮. ಶಿವಣ್ಣ ಕೆ.ಎಸ್., ಪೂರ್ವೋಕ್ತ, ಪು.ಸಂ-೨೫೧

೯. ಎ.ಕ.V, ಕೆ.ಆರ್.ನಗರ-೧೧೭

೧೦. ವಿರೂಪಾಕ್ಷಿ ಪೂಜಾರಹಳ್ಳಿ, ವಿಜಯನಗರ ಕಾಲದ ಸಂಸ್ಕೃತಿ, ಬೇಟೆ, ಪಶುಪಾಲನೆ ಮತ್ತು ಕೃಷಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪು.ಸಂ-೧೬೬

೧೧. ಕ್ಯೂಜೆ.ಎಂ.ಎಸ್.ಜುಲೈ-೧೯೩೨, ಪು.ಸಂ-೩೩

೧೨. ರಾಮಕೃಷ್ಣರಾವ್ ಬಿ., ಅನಾಲ್ಸ್ ಆಫ್ ದಿ ಮೈಸೂರು ರಾಯಲ್ ಫ್ಯಾಮಿಲಿ ಭಾಗ-೧, ಪು.ಸಂ-೧೧೯, ೧೨೦

೧೩. ಎ.ಕ.IV, ೨, ಹೆಚ್.ಜಿ.೨೧

೧೪. ಮೋಹನ್‌ಕೃಷ್ಣ ರೈ ಕೆ., ವಸಾಹತುಶಾಹಿ ಮತ್ತು ನಗರೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭, ಪು.ಸಂ-೧೮

೧೫. ಅದೇ, ಪು.ಸಂ-೧೯

೧೬. ದೇಶಪಾಂಡೆ ಆರ್.ಎಸ್., ಸುಸೈಡ್ ಬೈ ಫಾರ್ಮರ್ಸ್ ಇನ್ ಕರ್ನಾಟಕ ಅಗ್ರೇರಿಯನ್ ಡಿಸ್ಟ್ರೆಸ್ ಆ್ಯಂಡ್ ಪಾಸಿಬಲ್ ಎಲಿವಿಯೇಟರಿ ಸ್ಟೆಪ್ಸ್, ಎಕಾನಮಿಕಲ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ ೩ (೨೬) ಜೂನ್, ಜುಲೈ, ೨೦೦೨, ಪು.ಸಂ-೨೬೦೧, ೨೬೦೨

೧೭. ಅದೇ, ಪು.ಸಂ-೨೬೦೧, ೨೬೧೦

೧೮. ಚಂದ್ರಪೂಜಾರಿ ಎಂ., ಯಾಕೀಗ ಭೂಮಿ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.ಸಂ-೧೨

೧೯. ದೇಶಪಾಂಡೆ ಎಚ್.ಟಿ., ದಿ ಚಿತ್ರದುರ್ಗ ಸ್ಟೇಟ್ (೧೫೬೮-೧೭೭೯), ಪೂಣೆ ವಿಶ್ವವಿದ್ಯಾಲಯ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ೧೯೭೯, ಪು.ಸಂ-೧೧೨

೨೦. ಷೇಕ್ ಅಲಿ ಬಿ.(ಸಂ)., ಕರ್ನಾಟಕ ಚರಿತ್ರೆ, ಸಂಪುಟ-೩, ಪೂರ್ವೋಕ್ತ, ಪು.ಸಂ-೨೦೨, ೨೦೩

೨೧. ಹಿರೇಮಠ ಬಿ.ಆರ್., ಶಾಸನಗಳಲ್ಲಿ ವರ್ತಕರು, ಪೂರ್ವೋಕ್ತ, ಪು.ಸಂ-೧೫೧-೧೫೨

೨೨. ಮೋಹನ್ ಕೃಷ್ಣ ರೈ ಕೆ., ಪೂರ್ವೋಕ್ತ, ಪು.ಸಂ-೨೪, ೨೫

೨೩. ಜ್ಞಾನ ಪ್ರಕಾಶ್ ಬಿ.ಕೆ., ಪ್ರಾಚೀನ ಕರ್ನಾಟಕದಲ್ಲಿ ವ್ಯಾಪಾರ ಮತ್ತು ವಾಣಿಜ್ಯ (ಹೊಯ್ಸಳ ಕಾಲದವರೆಗೆ) ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ೨೦೦೫, ಪು.ಸಂ-೨೬೬

೨೪. ರಾಜಶೇಖರಪ್ಪ ಬಿ., ಇತಿಹಾಸ ಕಥನ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೧, ಪು.ಸಂ-೨೧೯

೨೫. ಮಲ್ಲಿಕಾ ಎಸ್.ಘಂಟಿ (ಪ್ರ.ಸಂ), ಕರ್ನಾಟಕದ ಜೈನ ಶಾಸನಗಳು, ಸಂಪುಟ-೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೯, ಪು.ಸಂ-೩೭೯, ೩೫೮

೨೬. ಮೋಹನ್‌ಕೃಷ್ಣ ರೈ ಕೆ., ವಸಾಹತುಪೂರ್ವ ಕರ್ನಾಟಕದ ನಗರ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು.ಸಂ-೪೮, ೪೯, ಮೋಹನ್‌ಕೃಷ್ಣ ರೈ ಕೆ., ಪೂರ್ವೋಕ್ತ, ಪು.ಸಂ-೩೯

೨೭. ರಣಬೀರ್ ಚಕ್ರವರ್ತಿ, ಟ್ರೇಡ್ ಆ್ಯಂಡ್ ಟ್ರೇಡರ್ಸ್ ಇನ್ ಅರ್ಲಿ ಇಂಡಿಯನ್ ಸೊಸೈಟಿ, ಮನೋಹರ್ ಪಬ್ಲಿಕೇಷನ್, ನವದೆಹಲಿ, ೨೦೦೨, ಪು.ಸಂ-೭೫, ೮೦

೨೮. ಶರ್ಮ ಜಿ.ಡಿ., ಅರ್ಬನ್ ಎಕಾನಮಿ ಇನ್ ವೆಸ್ಟರ್ನ್ ಇಂಡಿಯಾ ಇನ್ ಲೇಟ್ ಎಟೀನ್ತ್ ಸೆಂಚುರಿ; ಇನ್ ದಿ ಸಿಟಿ ಇನ್ ಇಂಡಿಯನ್ ಹಿಸ್ಟರಿ, ಇಂದು ಬಂಗಾ(ಸಂ), ದೆಹಲಿ, ೧೯೯೧, ಪು.ಸಂ-೬೩, ೬೮

೨೯. ಸಂದರ್ಶನ ಭೂಪಾಲರಾಘವೇಂದ್ರ ಶೆಟ್ಟಿ, ಶೆಟ್ಟಿ ಸಮುದಾಯದವರು ಚಿತ್ರದುರ್ಗ.

೩೦. ಸಿರಿನ್ ಮೆಹತಾ, ದಿ ಮಹಾಜನಾಸ್ ಆ್ಯಂಡ್ ಬಿಸಿನೆಸ್ ಕಮ್ಯುನಿಟೀಸ್ ಆಫ್ ಅಹಮದಾಬಾದ್, ಇನ್ ಬಿನೆಸೆಸ್ ಕಮ್ಯುನಿಟೀಸ್ ಆಫ್ ಇಂಡಿಯಾ, ತ್ರಿಪಾಡಿ (ಸಂ), ನ್ಯೂ ಡೆಲ್ಲಿ, ೧೯೮೪, ಪು.ಸಂ-೧೮೦, ೧೮೩

೩೧. ಅನುಪಮ ಬಿ., ಹೊಸಪೇಟೆ ನಗರದ ವರ್ತಕ ಸಮುದಾಯಗಳು: ಚಾರಿತ್ರಿಕ ಅಧ್ಯಯನ, ೨೦೦೯, ಕನ್ನಡ ವಿಶ್ವವಿದ್ಯಾಲಯ, ಹಂಪಿ ಅಪ್ರಕಟಿತ ಎಂ.ಫಿಲ್ ಮಹಾಪ್ರಬಂಧ, ಪು.ಸಂ-೩೦

೩೨. ಮಲ್ಲಿಕಾ ಎಸ್.ಘಂಟಿ, ಪೂರ್ವೋಕ್ತ, ಪು.ಸಂ-೩೭೯, ೩೫೮

೩೩. ಚಂದ್ರಮೌಳಿ ಕೆ., ಬೆಂಗಳೂರು ನೋಟಗಳು, ಪ್ರಸಮ್‌ಬುಕ್ಸ್, ಪ್ರೈ.ಲಿ., ಬೆಂಗಳೂರು, ೨೦೦೨, ಪು.ಸಂ-೩೬೨

೩೪. ಯಶೋಧ ಪಿ., ಬೆಂಗಳೂರಿನ ವರ್ತಕ ಸಮುದಾಯಗಳು: ವಸಾಹತು ಕಾಲಘಟ್ಟದ ಅಧ್ಯಯನ (೧೭೯೯-೧೯೪೭) ೨೦೧೬, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಪು.ಸಂ-೧೪೮

೩೫. ಅದೇ, ಪು.ಸಂ-೧೪೬

೩೬. ಅದೇ, ಪು.ಸಂ-೧೪೮

೩೭. ಮಹದೇವಮ್ಮ ಪಿ., ಮೈಸೂರು ರಾಜ್ಯದ ವ್ಯಾಪಾರ ಮತ್ತು ವಾಣಿಜ್ಯದ ಅಭಿವೃದ್ಧಿಗೆ ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರ ಕೊಡುಗೆ (೧೭೬೧-೧೭೯೯), ಮೈಸೂರು ವಿಶ್ವವಿದ್ಯಾಲಯ, ಮೈಸೂರು ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ೨೦೦೮, ಪು.ಸಂ-೧೦೩

೩೮. ರಾಮಚಂದ್ರನ್ ಸಿ.ಎನ್., ವಸಾಹತೋತ್ತರ ಚಿಂತನೆ, ಅಂಕಿತ ಪುಸ್ತಕ, ಬೆಂಗಳೂರು, ೨೦೧೬, ಪು.ಸಂ-೭೩

೩೯. ಬಸವರಾಜು ಎಲ್.(ಸಂ)., ಮಹದೇವನ ಮಹಾಲಿಂಗೇಂದ್ರ ವಿಜಯ, ಚಿತ್ರದುರ್ಗ ಬೃಹನ್ಮಠ, ಚಿತ್ರದುರ್ಗ, ೧೯೭೧, ಪು.ಸಂ-೭೪-೮೧

೪೦. ಎಡ್ಗರ್ ಥರ್ಸ್ಟನ್, ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ, ಸಂಪುಟ-IV, ಗೌರ್ಮೆಂಟ್ ಪ್ರೆಸ್, ಮದ್ರಾಸ್, ೧೯೦೯, ಪು.ಸಂ-೨೬೯

೪೧. ಹಿರೆಮಲ್ಲೂರು ಈಶ್ವರನ್, ಲಿಂಗಾಯತ ಧರ್ಮ : ಒಂದು ಅಧ್ಯಯನ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೬, ಪು.ಸಂ-೧೧೦

೪೨. ಬಸವರಾಜಪ್ಪ ಎಚ್.ಈ., ಚಿತ್ರದುರ್ಗ ಪ್ರದೇಶದ ಭೂ ಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ೨೦೦೦, ಪು.ಸಂ-೧೩೬

೪೩. ಅದೇ, ಪು.ಸಂ-೧೩೭

೪೪. ಅದೇ, ಪು.ಸಂ-೧೩೮

೪೫. ಎಚ್‌ಟಿಟಿಪಿಎಸ್: ೧೧ ಕೆಎನ್.ಎಂ.ವಿಕಿಪೀಡಿಯ, ಓಆರ್‌ಜಿ ಮುರುಘಾಮಠ (ಅಂತರ್‌ಜಾಲ)

೪೬. ಶ್ಯಾಮಲ ಸಿ.ಆರ್., ಪೂರ್ವ ಕರ್ನಾಟಕದ ಪಾಳೆಯಗಾರರು : ಒಂದು ಅಧ್ಯಯನ, ಮುಂಬೈ ವಿಶ್ವವಿದ್ಯಾಲಯ, ಮುಂಬೈ, ೨೦೧೭, ಪು.ಸಂ-೬೪೮, ೪೯

೪೭. ಬುಡ್ಡೆಕಲ್ಲು: ಇದು ಗ್ರಾಮದ ಮಧ್ಯೆ ಭಾಗದಲ್ಲಿ ಊತಿರುವ ಗ್ರಾಮದ ಸಿರಿ-ಸಂಪತ್ತಿನ ಕೇಂದ್ರವಾಗಿದೆ. ಇದನ್ನು ಗ್ರಾಮ ದೇವತೆಗಳ ಆಚರಣೆಯ ಸಮಯದಲ್ಲಿ ಹಾಗೂ ಯುಗಾದಿ ಹಬ್ಬದ ಸಮಯದಲ್ಲಿ ಇಲ್ಲಿ ಕೋಣ, ಹಂದಿಯ ತಲೆಗಳನ್ನು, ಹಾಗೂ ಅವುಗಳ ಬಲಗಾಲನ್ನು ಊತು ವಿವಿಧ ಪೂಜಾ ಕಾರ್ಯಕ್ರಮಗಳಿಂದ ಗ್ರಾಮಸ್ಥರೆಲ್ಲ ಸೇರಿ ನೆಟ್ಟಿರುವ ಕಲ್ಲು.

೪೮. ವಿರೂಪಾಕ್ಷಿ ಪೂಜಾರಹಳ್ಳಿ, ಬೇಟೆ ಮತ್ತು ಬೆಡರು, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ, ೨೦೦೭, ಪು.ಸಂ-೨೮೪, ೨೮೫

೪೯. ಚಿನ್ನಸ್ವಾಮಿ ಸೋಸಲೆ ಎನ್., ಪೂರ್ವೋಕ್ತ, ಪು.ಸಂ-೧೨೧

೫೦. ಯೋಗೀಶ್ವರಪ್ಪ ಡಿ.ಎನ್., ಹಾಗಲವಾಡಿ ನಾಯಕರು, ಮುರುಘರಾಜೇಂದ್ರ ಗ್ರಂಥ ಮಾಲೆ, ಚಿತ್ರದುರ್ಗ, ೨೦೧೬, ಪು.ಸಂ-೧೬೮, ೧೬೯

## ಅಧ್ಯಾಯ – ಎಂಟು

# ಸಮಾರೋಪ

ವಿಜಯನಗರೋತ್ತರ ಕಾಲದಲ್ಲಿ ವ್ಯಾಪಾರ ಮತ್ತು ವಾಣಿಜ್ಯ ಪ್ರಧಾನ ಆರ್ಥಿಕ ಚಟುವಟಿಕೆಯಾಗಿ ಕಂಡುಬರಲಾರಂಭಿಸಿತು. ವ್ಯವಸಾಯವೇ ಅಂದಿನ ಪ್ರಮುಖ ಅವಲಂಬಿತ ಉದ್ಯೋಗವಾಗಿದ್ದರೂ, ವ್ಯವಸಾಯವಲ್ಲದೇ ಇನ್ನಿತರ ಉಪ ಕಸುಬುಗಳನ್ನು ಹೊಂದಿರುವ ಉತ್ಪಾದನಾ ವರ್ಗವೊಂದು ಸೃಷ್ಟಿಯಾಗಿತ್ತು. ಒಂದು ಕಡೆ ಭೂ ಪ್ರದೇಶವು ವ್ಯಾಪಾರ-ವಾಣಿಜ್ಯವನ್ನು ವೃದ್ಧಿಸಲು ಕಾರಣವಾಗಿತ್ತು ಎಂಬುದಕ್ಕೆ ಕೆಲವು ಅಂಶಗಳನ್ನು ಗಮನಿಸಬಹುದು. ವ್ಯಾಪಾರ ವಾಣಿಜ್ಯವಿಲ್ಲದೆ, ಆರ್ಥಿಕ ಸ್ಥಿತಿ ಮುಂದುವರಿಯುವುದಿಲ್ಲವೆಂಬ ವಾಸ್ತವಿಕ ಸತ್ಯವನ್ನು ಜನರು ಮನಗಂಡಿದ್ದರು. ಏಕೆಂದರೆ ವ್ಯಾಪಾರವು ಜನರ ಬೇಕು-ಬೇಡಗಳನ್ನು, ಬೇಡಿಕೆ-ನೀಡಿಕೆಗಳನ್ನು ಆಸೆ-ಆಕಾಂಕ್ಷೆಗಳನ್ನು ಪೂರೈಸುವ ಮತ್ತು ಕಲ್ಪಿಸುವ ಸಾಧನವಾಗಿತ್ತು. ಮಾನವ ಜನಾಂಗದ ಆರ್ಥಿಕ ಬದುಕನ್ನು ರೂಪಿಸಿದ ಹಲವಾರು ಅಂಶಗಳಲ್ಲಿ ವ್ಯಾಪಾರ ಮತ್ತು ವಾಣಿಜ್ಯ ಅತಿ ಮುಖ್ಯವೆನಿಸಿವೆ. ವರ್ತಕ ಸಮುದಾಯವು ಕೈಗೊಂಡ ವ್ಯಾಪಾರ ವೃತ್ತಿಯಿಂದ ರಾಜಕೀಯ ಸ್ಥಿರತೆ, ನಾಡಿನ ಆರ್ಥಿಕ ಬೆಳವಣಿಗೆ, ಸಾಮಾಜಿಕ ಜೀವನದ ಸ್ಥಿತಿಗತಿಗಳು, ಧಾರ್ಮಿಕ ಸಮನ್ವಯತೆ ಮತ್ತು ಸಾಂಸ್ಕೃತಿಕ ಸಮನ್ವಯತೆಯು ಬೆಳೆಯಿತು. ವ್ಯಾಪಾರಿಗಳು ಮತ್ತು ವರ್ತಕ ಸಂಘಗಳು ಅಂಗಡಿ, ಪೇಟೆ, ಸಂತೆ, ಜಾತ್ರೆಗಳ ಮೂಲಕ ಪ್ರಮುಖ ವ್ಯಾಪಾರ ಕೇಂದ್ರಗಳ ಅಭಿವೃದ್ಧಿಗೆ ಕಾರಣರಾದರು. ಈ ವ್ಯಾಪಾರ ಕೇಂದ್ರಗಳಲ್ಲಿ ಲಭ್ಯವಾಗುವ ವಸ್ತುಗಳ ಬೆಲೆ ಮತ್ತು ಬೇಡಿಕೆಗೆ ಅನುಗುಣವಾಗಿ ದೇಶದಾದ್ಯಂತ ಮತ್ತು ಪ್ರಪಂಚದಾದ್ಯಂತ ಮಾರುಕಟ್ಟೆಗಳು ಲಭ್ಯವಾದವು. ಈ ಬೆಳವಣಿಗೆ ಆರ್ಥಿಕ ಲಾಭಗಳಿಸುವುದಕ್ಕೆ ಮಾತ್ರ ಸೀಮಿತವಾಗಿರದೆ, ಪರಸ್ಪರ ಸಂಸ್ಕೃತಿ, ಸಂಪ್ರದಾಯಗಳ ಪ್ರಸಾರಕ್ಕೂ ಅನುವು ಮಾಡಿಕೊಟ್ಟವು. ಇದು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಸಂಬಂಧಗಳ ಸಮನ್ವಯತೆಗೆ ಸಹಾಕಾರಿಯಾಯಿತು. ಆದುದರಿಂದಲೇ ವ್ಯಾಪಾರ ಮತ್ತು ವಾಣಿಜ್ಯಗಳ ಮೂಲಕವೂ ಸಂಸ್ಕೃತಿ ಮತ್ತು ನಾಗರಿಕತೆಗಳು ಪ್ರಸಾರವಾಗುತ್ತವೆ ಎಂಬ ಅಭಿಪ್ರಾಯವು ವಾಸ್ತವಿಕವಾಗಿದೆ. ಈ ಸಂಪರ್ಕಗಳ ಮೂಲಕವೇ ಭಾರತೀಯ ಸಂಸ್ಕೃತಿಯು ಹೊರನಾಡುಗಳಿಗೂ, ಹೊರನಾಡುಗಳ ಸಂಸ್ಕೃತಿ ಭಾರತದಲ್ಲೂ ಸಮ್ಮಿಳನಗೊಳ್ಳಲು ಸಾಧ್ಯವಾಯಿತು.

ವಿಜಯನಗರ ಹಾಗೂ ವಿಜಯನಗರೋತ್ತರ ಕಾಲ ಈ ಸಂಸ್ಕೃತಿ, ಹಾಗೂ ವ್ಯಾಪಾರದ ನೀತಿಗಳನ್ನು ವಿಲೀನ ಮಾಡಿಕೊಂಡ ಕಾಲವಾಗಿದ್ದರಿಂದ ಪಾಶ್ಚಿಮಾತ್ಯ ಸಂಸ್ಕೃತಿ ಹಾಗೂ ಸಿದ್ಧಾಂತಗಳ ಮೂಲಕ ಹೊಸ ವ್ಯವಸ್ಥೆ ನಿರ್ಮಾಣಕ್ಕೆ ಕಾರಣವಾಯಿತು.

ಪ್ರಾಚೀನ ಕಾಲದಿಂದ ಮಧ್ಯಕಾಲೀನ ಯುಗದವರೆಗೆ ಕರ್ನಾಟಕದ ವ್ಯಾಪಾರ ಮತ್ತು ವಾಣಿಜ್ಯವನ್ನು ಕುರಿತು ವಿಶೇಷವಾಗಿ ದಕ್ಷಿಣ ಭಾರತ ಸಂಶೋಧಕರು ಐತಿಹಾಸಿಕ ಹಿನ್ನೆಲೆಯಲ್ಲಿ ವಿವೇಚಿಸಿದಾಗ ಚಿತ್ರದುರ್ಗ ನಾಯಕರು ಅಧಿಕಾರ ಸ್ಥಾಪಿಸಿಕೊಂಡ ಚಿತ್ರದುರ್ಗ ಪ್ರದೇಶದ ಭೌಗೋಳಿಕತೆ ಹಾಗೂ ಅಲ್ಲಿ ಜೀವನ ಕಂಡುಕೊಂಡ ಜನ ಜೀವನದ ಬಗ್ಗೆ ತಿಳಿದುಕೊಳ್ಳಬಹುದಾಗಿದೆ. ಭೂ ಉತ್ಖನನ ದಾಖಲೆಗಳು ಶಾಸನಗಳು, ಹಸ್ತಪ್ರತಿಗಳ ಸಹಾಯದಿಂದ

ಚಿತ್ರದುರ್ಗ ಪ್ರದೇಶವು ಆದಿಮಾನವನ ಕಾಲದಿಂದಲೂ ನಾಗರಿಕತೆಯ ಕೇಂದ್ರವಾಗಿದ್ದು, ಇಲ್ಲಿನ ಭೌಗೋಳಿಕ ವೈವಿಧ್ಯತೆ, ಪ್ರಕೃತಿ ಸಂಪನ್ಮೂಲಗಳು, ಹಿತರಕವಾದ ವಾಯುಗುಣ, ಮಣ್ಣಿನ ಫಲವತ್ತತೆ ಹಾಗೂ ಸಸ್ಯಸಂಪತ್ತು ಪ್ರಾಗೈತಿಹಾಸದ ಅಥವಾ ಶಿಲಾಯುಗಗಳ ಸಂಸ್ಕೃತಿ ಬೆಳೆದು ಬರಲು ಸಾಧ್ಯವಾಯಿತು. ಇಲ್ಲಿ ಹರಿಯುವ ವೇದಾವತಿ, ಚಿನ್ನಹಗರಿ, ಇನ್ನಿತರೆ ತೊರೆ ಸಾಲುಗಳು ಆದಿ ಮಾನವನ ಜನ ಜೀವನದ ಮುಖ್ಯ ಕೇಂದ್ರಗಳಾಗಿದ್ದವು. ಅಲ್ಲಿ ದೊರಕುವ ಅರಣ್ಯ ಮತ್ತು ಖನಿಜ ಸಂಪತ್ತು ಚಿತ್ರದುರ್ಗ ಪ್ರದೇಶದ ಜನರ ಆರ್ಥಿಕ ಬದುಕನ್ನು ಶ್ರೀಮಂತಗೊಳಿಸಿತ್ತು.

ಕರ್ನಾಟಕದಲ್ಲಿ ಲಭ್ಯವಾಗುತ್ತಿದ್ದ ಅಪರೂಪದ ಖನಿಜಗಳಾದ ಚಿನ್ನ, ಬೆಳ್ಳಿ, ತಾಮ್ರ, ಮ್ಯಾಂಗನೀಸ್, ಕಬ್ಬಿಣ ಮೊದಲಾದವುಗಳಲ್ಲದೇ ವಿಶೇಷವಾದ ಹರಳುಕಲ್ಲುಗಳು, ಗ್ರಾನೈಟ್‌ಗಳು ಚಿತ್ರದುರ್ಗ ಪ್ರದೇಶದಲ್ಲಿ ದೊರೆಯುತ್ತಿದ್ದವು. ಅರೆ ಮಲೆನಾಡು ಭಾಗವಾದ ಹೊಳಲ್ಕೆರೆ, ಹರಿಹರ, ದಾವಣಗೆರೆ, ಹೊಸದುರ್ಗ ಭಾಗದಲ್ಲಿ ಲಭ್ಯವಿರುವ ಅರಣ್ಯ ಸಂಪತ್ತನ್ನು ಬಳಸಿ ಉತ್ಪಾದನೆಗೊಂಡ ವಸ್ತುಗಳು, ವಿಶೇಷವಾಗಿ ಕೈಗೆಲಸಗಾರರಿಂದ ಆಲಂಕಾರಿಕ ವಸ್ತುಗಳನ್ನು ಹೇರಳವಾಗಿ ತಯಾರಿಸಲಾಗುತ್ತಿತ್ತು. ಕೃಷಿ ಮತ್ತು ಕೈಗಾರಿಕೆಗಳ ಉತ್ಪನ್ನಗಳಲ್ಲದೆ ಕರಕುಶಲ ಕಲಾವಿದರು ತಯಾರಿಸುತ್ತಿದ್ದ ಅಲಂಕಾರಿಕ ಹಾಗೂ ಬೆಲೆ ಬಾಳುವ ವಸ್ತುಗಳ ಉತ್ಪಾದನೆ ಹೆಚ್ಚಿತು. ಈ ಹೆಚ್ಚುವರಿ ಉತ್ಪನ್ನಗಳನ್ನು ಮಾರಾಟ ಮಾಡುತ್ತಿದ್ದರಿಂದ ತೆರಿಗೆಯ ರೂಪದಲ್ಲಿ ಅರಸರ ಭಂಡಾರಕ್ಕೆ ಅಧಿಕ ಆದಾಯ ಬರುತ್ತಿತ್ತು. ಹೀಗಾಗಿ ವಾಣಿಜ್ಯದ ಅಗತ್ಯ ಮತ್ತು ಹೆಚ್ಚುವರಿ ಇದ್ದು, ಈ ಕಾರಣಗಳಿಂದ ಹಲವು ನಗರ ಕೇಂದ್ರಗಳು ವೃದ್ಧಿಯಾಗಲು ಅವಕಾಶವಾಯಿತು.

ಪಟ್ಟಣ, ಊರು, ಪುರ ಇವು ಹಳ್ಳಿಗಳಿಂದ ಬೇರೆಯಾಗಿದ್ದ ನಗರ ಪ್ರದೇಶವನ್ನು ಸೂಚಿಸುತ್ತಿದ್ದವು. ವಾಸ್ತವವಾಗಿ ವಾಣಿಜ್ಯವು ಒಂದು ಹಳ್ಳಿಯನ್ನು ಪಟ್ಟಣವನ್ನಾಗಿ ಪರಿವರ್ತಿಸುತ್ತಿದ್ದಿತು ಎಂದು ಹೇಳಬಹುದು. ರಾಜರು, ಅಧಿಕಾರ ವರ್ಗದವರು, ನಾಡಿನ ಮುಖ್ಯಸ್ಥರು ವರ್ತಕರೊಂದಿಗೆ ಸೌಹಾರ್ದಯುತವಾಗಿದ್ದು, ಅನುಕೂಲಕರವಾಗಿದ್ದ ಸ್ಥಳಗಳಲ್ಲಿ ಮಾರುಕಟ್ಟೆಗಳನ್ನು ನಿರ್ಮಿಸಿಕೊಡುತ್ತಿದ್ದರಲ್ಲದೆ, ಕ್ರಮಬದ್ಧವಾದ ತೆರಿಗೆಗಳನ್ನು ವಿಧಿಸುವುದು, ಹೊಸಪಟ್ಟಣಗಳ ನಿರ್ಮಾಣಕ್ಕೆ ಪ್ರೋತ್ಸಾಹ, ಸಾರಿಗೆ ಸಂಚಾರಗಳಿಗೆ ಯೋಗ್ಯ ರಸ್ತೆಗಳ ನಿರ್ಮಾಣ ಮತ್ತು ಅವುಗಳ ರಕ್ಷಣೆ, ಸರಕುಗಳ ಮೇಲೆ ವಿಧಿಸಿದ್ದ ಸುಂಕಗಳಿಗೆ ತೆರಿಗೆ ರಿಯಾಯಿತಿ ಇತ್ಯಾದಿಗಳನ್ನು ಒದಗಿಸುವುದರ ಮೂಲಕ ವರ್ತಕರಿಗೆ ನೇರವಾಗಿ ಸಹಕರಿಸುತ್ತಿದ್ದರು. ಮುಖ್ಯವಾಗಿ ವರ್ತಕ ಸಂಘಗಳ ಸ್ಥಾಪನೆಗೆ ಸ್ವತಂತ್ರ ಅವಕಾಶವನ್ನು ನೀಡಿದ್ದರಲ್ಲದೆ, ಸರಕಾರವು

ವರ್ತಕ ಸಂಘಗಳ ಆಡಳಿತದಲ್ಲಿ ಯಾವುದೇ ಹಸ್ತಕ್ಷೇಪವನ್ನು ಮಾಡುತ್ತಿರಲಿಲ್ಲ. ಆದುದರಿಂದ ವರ್ತಕ ಸಂಘಗಳು ಸ್ವಾಯತ್ತ ಸಂಸ್ಥೆಗಳಾಗಿ ಹೆಚ್ಚಿನ ಅಧಿಕಾರ ಮತ್ತು ಅವಕಾಶಗಳನ್ನು ಪಡೆದುಕೊಂಡು ವ್ಯವಹಾರ ವಾಣಿಜ್ಯಗಳನ್ನು ನಿರಾಂತಕವಾಗಿ ಮುಂದುವರಿಸಿಕೊಂಡು ಹೋಗುತ್ತಿದ್ದವು.

ಕರ್ನಾಟಕೇತರ ರಾಜ ಮನೆತನಗಳಾದ ಮೌರ್ಯರು, ಶಾತವಾಹನರು, ಪಲ್ಲವರು, ಚೋಳರು ಹಾಗೂ ಮತ್ತಿತರ ರಾಜಕೀಯ ಶಕ್ತಿಗಳು ಅದರಂತೆ ಕರ್ನಾಟಕದ ಪ್ರಬಲ ರಾಜಮನೆತನಗಳಾದ ಕದಂಬ, ಗಂಗ, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಸೇವುಣರು, ಹೊಯ್ಸಳರು, ವಿಜಯನಗರ ಅರಸರು, ನಂತರದ ಪಾಳೆಯಗಾರರು ಮತ್ತು ಮೈಸೂರು ಸಂಸ್ಥಾನದ ನಿರಂತರ ಆಧಿಪತ್ಯಕ್ಕೆ ಒಳಗಾಗಿದ್ದ ಚಿತ್ರದುರ್ಗವು ದೇಶದ ಇತರ ಭಾಗಗಳೊಂದಿಗೆ ಹೊಂದಿದ್ದ ರಾಜಕೀಯ ಸಂಬಂಧಗಳು, ವ್ಯಾಪಾರ ವಾಣಿಜ್ಯದ ಸಂಬಂಧಗಳು ಏರ್ಪಡಲು ಕಾರಣವಾಯಿತು. ಇದರಿಂದ ಚಿತ್ರದುರ್ಗ ಪ್ರದೇಶದ ವರ್ತಕರು ಕರ್ನಾಟಕದ ಹಾಗೂ ದೇಶದ ಇತರ ಭಾಗಗಳಿಗೂ ಯಾವುದೇ ಅಡೆತಡೆಯಿಲ್ಲದೆ ಹೋಗಿ ಬರಲು ಸಾಧ್ಯವಾಗಿತ್ತು. ಅಲ್ಲದೇ ರಾಜ ಮಹಾರಾಜರುಗಳಿಗೆ ಅವಶ್ಯಕವಾಗಿದ್ದ ಸರಕುಗಳನ್ನು ಯುದ್ಧಕ್ಕೆ ಬೇಕಾಗಿದ್ದ ಉತ್ಕೃಷ್ಟ ದರ್ಜೆಯ ಕುದುರೆಗಳು, ಆನೆಗಳು, ನೌಕಾದಳದ ಬಲ ಸಂವರ್ಧನೆಗೆ ಬೇಕಾಗಿದ್ದ ದೋಣಿ, ಶಸ್ತ್ರಾಸ್ತ್ರಗಳು ಮುಂತಾದವುಗಳನ್ನು ದೇಶ ವಿದೇಶಗಳಿಂದ ವರ್ತಕರು ತಲುಪಿಸುತ್ತಿದ್ದರು. ವರ್ತಕರು ಅರಸರೊಂದಿಗೆ ಆತ್ಮೀಯರಾಗಿದ್ದು ರಾಜಮಹಾರಾಜರ ನಡುವೆ ಶಾಂತಿ ಒಪ್ಪಂದಗಳನ್ನು ಮತ್ತು ಸಂಧಿಗಳನ್ನು ಏರ್ಪಡಿಸಿ, ಪರಸ್ಪರ ಐಕ್ಯತೆಯಿಂದ ಇರಲು ಶ್ರಮಿಸುತ್ತಿದ್ದರು. ಅಂದರೆ ಇವರು ಸಂಧಿವಿಗ್ರಹಿಗಳಂತೆ ಕಾರ್ಯನಿರ್ವಹಿಸುತ್ತಿದ್ದರು. ಅರಸನಿಗೆ ಅವಶ್ಯಕತೆ ಇದ್ದಾಗ ತಮ್ಮಲ್ಲಿದ್ದ ಸೈನ್ಯದ ನೆರವನ್ನು ನೀಡುತ್ತಾ, ಅವಶ್ಯಕ ಸಂದರ್ಭಗಳಲ್ಲಿ ತಾವೇ ನೇರವಾಗಿ ಯುದ್ಧಗಳಲ್ಲಿ ಪಾಲ್ಗೊಂಡ ದಾಖಲೆಗಳು ಇವೆ. ಆಡಳಿತದಲ್ಲಂತೂ ವರ್ತಕರು ಮತ್ತು ವರ್ತಕ ಸಂಘಗಳ ಪಾತ್ರ ವಿಶಿಷ್ಟವಾದುದು. ಅದರಲ್ಲೂ ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ, ನಗರ-ಪಟ್ಟಣಗಳು ಮತ್ತು ನಾಡ ಆಡಳಿತದಲ್ಲಿ ನೇರವಾಗಿ ವರ್ತಕ ಸಮುದಾಯವೇ ಸಂಪೂರ್ಣ ಹೊಣೆಗಾರಿಕೆಗಳನ್ನು ಹೊಂದಿತ್ತು. ಆದುದರಿಂದಲೇ ನಗರತ್ತಾರ್, ಪಟ್ಟಣಸೆಟ್ಟಿ, ಪಟ್ಟಣಸ್ವಾಮಿ ಮುಂತಾದ ನಗರಪಟ್ಟಣಗಳ ಅಧಿಕಾರಗಳ ಪದವಿಗಳನ್ನು ವ್ಯಾಪಾರದ ಹಿನ್ನೆಲೆಯಲ್ಲಿ ಅನುಷ್ಠಾನಗೊಳಿಸಿದ್ದುದನ್ನು ನಾವು ಶಾಸನಗಳಲ್ಲಿ ಗುರುತಿಸಬಹುದು. ಪಟ್ಟಣ, ಪಟ್ಟಣಸೆಟ್ಟಿ ಎಂಬ ಮನೆತನದ ಹೆಸರುಗಳೂ ಈಗಲೂ ಚಿತ್ರದುರ್ಗ ನಗರದಲ್ಲಿ ಕಂಡುಬರುತ್ತವೆ. ಇವರೆಲ್ಲರೂ ಈಗಲೂ ಸೆಟ್ಟಿಗಳೇ ಆಗಿದ್ದಾರೆ.

ವಿಜಯನಗರೋತ್ತರ ಕಾಲದ ವ್ಯಾಪಾರ ಚಟುವಟಿಕೆಗಳು ಅಂಗಡಿ, ಪೇಟೆ, ಮಂಡಿ, ಸಂತೆಪೇಟೆ, ಸಂತೆ, ಜಾತ್ರೆ, ದೇವಾಲಯ ಸಂಕೀರ್ಣಗಳು, ತೀರ್ಥಕ್ಷೇತ್ರಗಳು, ನಗರಪಟ್ಟಣಗಳು ಆಂತರಿಕ ಮತ್ತು ರಾಷ್ಟ್ರೀಯ ವ್ಯಾಪಾರ ವಾಣಿಜ್ಯಗಳ ಬೆಳವಣಿಗೆಯಲ್ಲಿ ನಿರ್ವಹಿಸಿದ ಪಾತ್ರ ಬಹುಮುಖ್ಯವಾದುದು. ಊರಗೌಡ, ಶ್ಯಾನುಭೋಗ, ತಳವಾರ, ಸ್ಥಾನಿಕ, ವರ್ತಕ ಮೊದಲಾದವರು ಊರು ಮತ್ತು ಪಟ್ಟಣಗಳಲ್ಲಿ ಸಂತೆಕಟ್ಟಿಸಿ, ಸಂತೆ ಮಾಡಿಸುತ್ತಿದ್ದ ವಿಷಯ ಕೂಡ ಶಾಸನಗಳಲ್ಲಿ ಉಲ್ಲೇಖಗೊಂಡಿದೆ (ಉದಾಹರಣೆಗೆ ಬಿಳಿಚೋಡು ಶಾಸನ). ಸಾಮಾನ್ಯವಾಗಿ ಸಂತೆಯ ದಿನ ಮಾತ್ರ ಬಹುಶಃ ಹೊರ ಪೇಟೆಗಳಲ್ಲಿ ನಡೆಯುತ್ತಿತ್ತು, ಈ ಪೇಟೆ ಆನೆಬಾಗಿಲು ಬಳಿ ಇರುವ ರಾಗಿಪೇಟೆ ಅಥವಾ ಚಿಕ್ಕಪೇಟೆ ಉಳಿದ ದಿನಗಳಲ್ಲಿ ಒಳಪೇಟೆಗಳಲ್ಲಿ ವ್ಯಾಪಾರ ನಡೆಯುತ್ತಿತ್ತು. ಈ ಪೇಟೆಯನ್ನು ದೊಡ್ಡ ಪೇಟೆ (ಉಚ್ಚಂಗೆಮ್ಮ

ದೇವಾಲಯದ ಮುಂದಿನ ಬೀದಿ)ಎಂಬುದಾಗಿ ಕರೆಯಲಾಗುತ್ತಿತ್ತು. ವ್ಯಾಪಾರವು ತನ್ನ ಆರಂಭದ ಆರ್ಥಿಕತೆ ಜಾತ್ರೆ ಮತ್ತು ದೇವಾಲಯ ಸಂಕೀರ್ಣಗಳಿಗೂ ವಿಸ್ತರಿಸಿತ್ತು. ಪ್ರತಿ ವರ್ಷಕ್ಕೊಮ್ಮೆಯಂತೆ ನೂರಾರು ಊರು ಹಾಗೂ ಪಟ್ಟಣಗಳಲ್ಲಿ ಜಾತ್ರೆಗಳು ನಡೆಯುತ್ತಿದ್ದವು. ಜಾತ್ರೆಗಳು ಸಾಮಾನ್ಯವಾಗಿ ಒಂದು ದಿವಸದಿಂದ ಒಂದು ತಿಂಗಳವರೆಗೆ ನಡೆಯುತ್ತಿತ್ತು. ಚಿತ್ರದುರ್ಗ ಪ್ರದೇಶದಲ್ಲಿನ ಜಾತ್ರೆಗಳು ಪ್ರಾದೇಶಿಕ ವೈವಿಧ್ಯತೆಯಿಂದ ಕೂಡಿದ್ದವು. ಜಾತ್ರೆಗಳಲ್ಲಿ ಜಾನುವಾರುಗಳ ಪ್ರದರ್ಶನ ಹಾಗೂ ಗ್ರಾಮ ಕೈಗಾರಿಕೆಗಳ ಉತ್ಪನ್ನಗಳ ವಸ್ತುಪ್ರದರ್ಶನ ಏರ್ಪಡಿಸುವ ಮೂಲಕ ಜನ ಆರ್ಥಿಕ ಪರಿಸ್ಥಿತಿಗಳನ್ನು ಸುಧಾರಿಸುವಲ್ಲಿ ಜಾತ್ರೆಗಳು ಪೂರಕವಾಗಿರುತ್ತಿದ್ದವು. ದೇವಾಲಯ ಸಂಕೀರ್ಣ ಮತ್ತು ತೀರ್ಥಕ್ಷೇತ್ರಗಳತ್ತ ವಿವಿಧ ವರ್ಗಗಳ ಜನರು, ಕಸುಬುದಾರರು ಮತ್ತು ವ್ಯಾಪಾರಿಗಳು ಬಂದು ನೆಲೆಸುತ್ತಿದ್ದರಿಂದ ಸ್ಥಳೀಯ ಸರಕಾರಗಳಿಗೆ ತೆರಿಗೆ ರೂಪದಲ್ಲಿ ಹೆಚ್ಚಿನ ಆದಾಯ ಸಿಗುತ್ತಿತ್ತು. ದೇವಾಲಯಗಳು ನಡೆಸುತ್ತಿದ್ದ ಬ್ಯಾಂಕಿಂಗ್ ಮತ್ತು ಬಡ್ಡಿ ವ್ಯವಹಾರವು ಸಹ ಅಂದಿನ ವ್ಯಾಪಾರ ವಾಣಿಜ್ಯಗಳಿಗೆ ಬಂಡವಾಳ ಹೂಡಲು ಮತ್ತು ವ್ಯಾಪಾರದ ಬೆಳವಣಿಗೆಗೆ ಸಹಾಯಕವಾಗಿದ್ದವು.

ನಾಯಕರ ಆಳ್ವಿಕೆಯ ಕಾಲದಲ್ಲಿ ಧರ್ಮವೇ ಸಮಾಜದ ಸ್ಥಿರವೂ, ನಿರ್ಣಯದ ಆಧಾರ ಸ್ತಂಭವೂ ಆಗಿ ಪರಿಣಮಿಸಿತ್ತು. ಜನ ಜೀವನವು ಸಾಮಾಜಿಕ, ಧಾರ್ಮಿಕ ಸ್ವರೂಪದ್ದಾಗಿತ್ತು. ದೇವಾಲಯ ನಿರ್ಮಾಣ, ದೇವರಿಗೆ, ದೇವಾಲಯಗಳಿಗೆ, ಅಲ್ಲಿಯ ಸಿಬ್ಬಂದಿಗೆ, ಬ್ರಾಹ್ಮಣರಿಗೆ ಬಗೆಬಗೆಯ ಕಾಣಿಕೆ ಉಡುಗೊರೆಗಳನ್ನು ನೀಡುವುದೇ ಮೊದಲಾದ ವೈವಿಧ್ಯಪೂರ್ಣ ಚಟುವಟಿಕೆಗಳಿಂದ ದೇವಾಲಯ ಸಂಸ್ಕೃತಿ ಕೂಡಿತ್ತು. ಪ್ರಭುತ್ವವು ಅದಕ್ಕೆ ಪೂರಕವಾಗಿಯೇ ಇತ್ತು.

ಚಿತ್ರದುರ್ಗದ ನಾಯಕರು ಮೂಲತಃ ವೈಷ್ಣವ ದೈವ ಆರಾಧಕರಾಗಿದ್ದರು. ಆದರೆ ವೀರಶೈವ ಧರ್ಮವನ್ನು, ಜಂಗಮ ಪಂಥದ ಜನಪ್ರಿಯ ರೂಪದೊಂದಿಗೆ ನಾಯಕರು ಸಹ ಗುರು ಪರಂಪರೆಯನ್ನು ಮುಂದುವರೆಸಿದರು. ಕ್ರಿ.ಶ.೧೬೮೯-೧೭೨೧ರವರೆಗೆ ಚಿತ್ರದುರ್ಗ ಸಂಸ್ಥಾನವನ್ನಾಳಿದ ಬಿಚ್ಚುಗತ್ತಿ ಭರಮಣ್ಣ ನಾಯಕನು ಪಾಳೆಯಗಾರನಾಗುವುದಕ್ಕಿಂತ ಮುಂಚೆ ದುರ್ಗವು ದಳವಾಯಿಗಳ ಅಂತಃಕಲಹದಿಂದ ತತ್ತರಿಸಿ ಮತ್ತಿವಂಶ ಅಂತ್ಯ ಕಂಡಾಗ ಬಿಳಿಚೋಡು ವಂಶದ ಭರಮಣ್ಣನಿಗೆ ಹರಗುರು ಚರಮೂರ್ತಿಗಳಾದ ಶ್ರೀ ಮುರಿಗೆ ಶಾಂತವೀರಸ್ವಾಮಿಗಳ ದರ್ಶನವಾಗಿ 'ನೀನು ಮುಂದೆ ದೊರೆಯಾಗುತ್ತೀಯೇ' ಎಂಬ ಭವಿಷ್ಯವಾಣಿಯಂತೆ ಬಿಚ್ಚುಗತ್ತಿ ಭರಮಣ್ಣ ನಾಯಕನು ಚಿತ್ರದುರ್ಗ ಸಂಸ್ಥಾನದ ನಾಯಕನಾಗುತ್ತಾನೆ ಎಂಬ ಐತಿಹ್ಯವಿದೆ. ಆದರೆ ಸಂಪಿಗೆ ಸಿದ್ದೇಶ್ವರ ದೇವಾಲಯದ ಪಕ್ಕದಲ್ಲಿ ಮೂನ್ನೂರ ಅರವತ್ತು ಅಂಕಗಳದ ಕಲ್ಲಿನಿಂದ ಕೂಡಿದ ಬೃಹನ್ಮಠ ಕಟ್ಟಿಸಿದನು. ಅದಕ್ಕೂ ಪೂರ್ವ ಶೃಂಗೇರಿ ಮಠವು ರಾಜಗುರು ಮಠವಾಗಿತ್ತು. ನಂತರ ಮುರುಘ ಮಠ ರಾಜಗುರು ಪರಂಪರೆಯನ್ನು ಮುಂದುವರಿಸಿದ ಬಗ್ಗೆ ವಿವರಿಸಬಹುದಾಗಿದೆ. ಪ್ರಸ್ತುತ ನಾಯಕರ ಆಡಳಿತ ಅಂತ್ಯವಾದರೂ ನಾಯಕರು ನೆಲೆಕೊಟ್ಟ ಬೃಹನ್ಮಠ ಇಂದು ಅನೇಕ ಶಾಖೆಗಳನ್ನು ಹೊಂದಿದ್ದು ಶಿಕ್ಷಣ, ದಾಸೋಹ, ವ್ಯಾಪಾರ, ನಗರೀಕರಣಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದೆ.

ನಾಯಕರ ಕಾಲದಲ್ಲಿ ದೇವಾಲಯವು ಸುವ್ಯವಸ್ಥಿತವಾದ ಧಾರ್ಮಿಕ, ಸಾಮಾಜಿಕ, ನ್ಯಾಯಿಕ, ಆರ್ಥಿಕ, ಶೈಕ್ಷಣಿಕ ಮತ್ತು ಸೌಂದರ್ಯಾತ್ಮಕ ಸಂಸ್ಥೆಯಾಗಿತ್ತು. ಅದರದೆ ನಿಯಮ ನಿಬಂಧನೆಗಳು, ಹಕ್ಕು ಬಾಧ್ಯತೆಗಳು, ಕಾರ್ಯನಿರತ ಸಿಬ್ಬಂದಿ, ಆಡಳಿತವನ್ನು ನೋಡಿಕೊಳ್ಳಲು ಸಮಿತಿಗಳು ಮತ್ತು ವಿಶ್ವಸ್ಥರು

ಇರುತ್ತಿದ್ದರು. ವಿಜಯನಗರೋತ್ತರ ಪಾಳೆಯಗಾರರ ಆಡಳಿತದ ಅವಧಿಯಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಅಲ್ಲಲ್ಲೇ ಹಳ್ಳಿಗಳು ಗುಂಪಾಗಿದ್ದವು. ಇವುಗಳ ಸಮೂಹದಿಂದಾಗಿ ಸುತ್ತಣ ಕಾಡನ್ನು ಕಡಿದು ವ್ಯವಸಾಯ ಯೋಗ್ಯವಾಗಿ ಮಾಡಲು ಸಹಕಾರಯುತ ಪ್ರಯತ್ನಕ್ಕೆ ಅವಕಾಶವಾಗುತ್ತಿತ್ತು. ಸಾಮಾನ್ಯವಾಗಿ ನೀರಿನ ಆಸರೆ ಇರುವ ಕಡೆಗಳಲ್ಲಿ ಹಳ್ಳಿಗಳು ಹುಟ್ಟಿಕೊಳ್ಳುತ್ತಿದ್ದುವು. ಭದ್ರತೆಯ ದೃಷ್ಟಿಯಿಂದಲೂ ಪ್ರತ್ಯೇಕವಾಗಿರುವುದಕ್ಕಿಂತ ಗುಂಪುಗುಂಪಾಗಿರುವುದು ಅನುಕೂಲವಾಗಿತ್ತು. ಈ ಹಳ್ಳಿಗಳಿಗೆ ಕೆಲವು ನಿರ್ದಿಷ್ಟ ಲಕ್ಷಣಗಳಿದ್ದವು. ಮೊದಲನೆಯದು, ಸ್ವಯಂ ಪೂರ್ಣತೆ ಮತ್ತು ಪ್ರತ್ಯೇಕತೆ. ಉತ್ತಮ ಸಂಪರ್ಕವಾಗಲಿ, ರಸ್ತೆ ಮೊದಲಾದ ಸಾರಿಗೆಯಾಗಲಿ ಇರದಿದ್ದುದರಿಂದ ಹಳ್ಳಿಗಳು ಹೊರಜಗತ್ತಿನ ಸಂಪರ್ಕ ಪಡೆದಿರಲಿಲ್ಲ. ತಮ್ಮ ಆಹಾರವನ್ನು ತಾವೇ ಉತ್ಪಾದಿಸುತ್ತಿದ್ದರು. ಉಪಕರಣಗಳನ್ನು ತಯಾರಿಸಿಕೊಳ್ಳುತ್ತಿದ್ದರು, ಪಾತ್ರೆಗಳನ್ನು ತಾವೇ ಎರಕ ಹಾಕಿಕೊಳ್ಳುತ್ತಿದ್ದರು, ಕಾಯಿಲೆಗೆ ಮದ್ದು ಮಾಡಿಕೊಳ್ಳುತ್ತಿದ್ದರು. ಭೋಗ ವಸ್ತುಗಳಿಗೆ ಹಾಗೂ ಇತರೆ ಜೀವನೋಪಾಯ ವಸ್ತುಗಳನ್ನು ತರುವುದಕ್ಕಾಗಿ ಹಣಕ್ಕೆ ಇತರರನ್ನು ಅವರು ಅವಲಂಬಿಸಬೇಕಾಗಿತ್ತು. ಎರಡನೆಯದಾಗಿ, ಅವರು ಉತ್ಪಾದಿಸಿದ ವಸ್ತುಗಳಿಗೆ ಮಾರುಕಟ್ಟೆ ಸೀಮಿತವಾಗಿತ್ತು, ಗ್ರಾಮೀಣ ಕೈಗಾರಿಕೆಯಂತೂ ತುಂಬಾ ಹಿಂದುಳಿದಿತ್ತು. ಕುಶಲಕರ್ಮಿಗಳು ಮತ್ತು ಕಸುಬುದಾರರು ಹಳ್ಳಿಗಳ ಸೀಮಿತ ಅಗತ್ಯಗಳನ್ನು ಮಾತ್ರ ಪೂರೈಸುತ್ತಿದ್ದರು. ಹಾಗಾಗಿ ಹೆಚ್ಚಿನ ಬೆಳವಣಿಗೆಗೆ ಅಲ್ಲಿ ಅವಕಾಶವಿರಲಿಲ್ಲ. ಮೂರನೆಯದಾಗಿ ಹಳ್ಳಿಗಳಲ್ಲಿ ಒಂದು ಸಹಜ ಅರ್ಥವ್ಯವಸ್ಥೆ ಚಾಲ್ತಿಯಲ್ಲಿತ್ತು. ಅದು ವಸ್ತುವಿನಿಮಯ ಪದ್ಧತಿ. ವಿವಿಧ ಸೇವೆಗಳಿಗೆ ಪ್ರತಿಫಲವಾಗಿ ಸುಗ್ಗಿಯ ಸಮಯದಲ್ಲಿ ಬೆಳೆಯನ್ನು ಹಂಚಿಬಿಡುತ್ತಿದ್ದರು. ಚಿನ್ನ, ಬೆಳ್ಳಿ, ತಾಮ್ರ ನಾಣ್ಯಗಳು ಮುದ್ರಣಗೊಳ್ಳುತ್ತಿದ್ದರೂ ಕೂಡ, ಸಾಮಾನ್ಯವಾಗಿ ನೇರ ವಸ್ತು ವಿನಿಮಯ ಪದ್ದತಿಯೇ ರೂಢಿಯಲ್ಲಿದ್ದುದು. ಎಲ್ಲರೂ ಧಾನ್ಯವನ್ನೇ ಪಡೆಯಲು ಇಚ್ಛಿಸುತ್ತಿದ್ದರು. ಹೊರೆ ಹೆಚ್ಚಾದರೂ ಏನೂ ಬಾಧಕವಿರಲಿಲ್ಲ. ಏಕೆಂದರೆ ವಿನಿಮಯ ನಡೆಯುತ್ತಿದ್ದುದು ಹಳ್ಳಿಯೊಳಗೇ. ಧಾನ್ಯದಷ್ಟೇ ಮಟ್ಟಿಗೆ ಭೂಮಿಯನ್ನು ಪಡೆಯಲೂ ಜನರು ಉತ್ಸುಕರಾಗಿರುತ್ತಿದ್ದರು. ಪಟೇಲ, ಶ್ಯಾನುಬೋಗ, ತಳವಾರ, ಜೋತಿಷಿ, ಇಂತಹ ಗ್ರಾಮದ ಅಧಿಕಾರಿಗಳ ಸೇವೆಗೆ ಪ್ರತಿಫಲದ ರೂಪದಲ್ಲಿ ಸರಕಾರವು ಭೂಮಿಯನ್ನು ಕೊಡುತ್ತಿತ್ತು. ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ವ್ಯವಸ್ಥೆ ಪ್ರಧಾನವಾಗಿತ್ತು. ಒಂದು ಜಾತಿಯಲ್ಲಿ ಜನಿಸುವುದು ಒಂದು ವೃತ್ತಿಯನ್ನು ಅವಲಂಬಿಸಲು ನಿರ್ಣಾಯಕವಾದ ಅಂಶವಾಗುತ್ತಿತ್ತು. ಆ ಸದಸ್ಯರು ಬೇರೆ ಯಾವುದೇ ವೃತ್ತಿಯನ್ನು ಹಿಡಿಯುವುದನ್ನು ಅದು ತಡೆಯುತ್ತಿತ್ತು. ಗುತ್ತಿಗೆ, ಕೂಲಿ, ಬೆಲೆ ಮೊದಲಾದವನ್ನು ರೂಢಿಯೇ ನಿರ್ಧರಿಸುತ್ತಿತ್ತು. ಅವು ಬೇಡಿಕೆ ನೀಡಿಕೆಯ ಅರ್ಥವ್ಯವಸ್ಥೆಯಾಗಿರಲಿಲ್ಲ. ಆದರಿಂದ ಹಳ್ಳಿಯ ಲಕ್ಷಣ ಬದಲಾಗುತ್ತಿರಲಿಲ್ಲ. ಜಮೀನ್ದಾರನಿಗೆ ರೈತರು ಕೊಡುತ್ತಿದ್ದ ಗುತ್ತಿಗೆ ರೂಢಿಯಿಂದ ಬಂದದ್ದಾಗಿತ್ತು. ನಾಯಕರ ಕಾಲದ ಭೂಮಿಯ ಯಜಮಾನಿಕೆ ಸಂಪೂರ್ಣ ಅಧಿಕಾರ ಸರಕಾರಕ್ಕೆ ಸೇರಿತ್ತು. ಕಾರಣ ಅವರು ಮೂಲತಃ ಅಮರ ಮಾಗಣೆಯನ್ನು ಪಡೆದಿರುವ ಜಮೀನ್ದಾರರಾಗಿದ್ದರಿಂದ ಅವರು ಇನ್ನಿತರೆ ವರ್ಗಗಳಿಗೆ ಹಿಡುವಳಿಗಾಗಿ ಭೂಮಿಯನ್ನು ನೀಡಿ, ತೆರಿಗೆಯನ್ನು, ಆದಾಯವನ್ನು ಹೆಚ್ಚಿಸಿಕೊಳ್ಳುತ್ತಿದ್ದರು, ಇವರು ಗುತ್ತಿಗೆ ಆದಾಯದ ಮೇಲೆ ಹೆಚ್ಚಿನ ಭೂಮಿಯ ಉಳುಮೆಗೆ ನೀಡುತ್ತಿದ್ದರಿಂದ ಗುತ್ತಿಗೆ ದರವೇ ಬಹಳ ಕಾಲ ಚಾಲ್ತಿಯಲ್ಲಿತ್ತು. ಕೂಲಿಯೂ ಅಷ್ಟೇ ರೂಢಿಯಿಂದ ಬಂದದ್ದು. ಕಸುಬುದಾರರಿಗೆ ರೂಢಿಯ ದರದಲ್ಲಿ ಅವರ ಸೇವೆಗೆ ಪ್ರತಿಫಲವನ್ನು ವರ್ಷಕ್ಕೊಮ್ಮೆ ಸುಗ್ಗಿಯ

ಕಾಲದಲ್ಲಿ ಧಾನ್ಯರೂಪದಲ್ಲಿ ಕೊಡಲಾಗುತ್ತಿತ್ತು. ಈ ಪದ್ಧತಿಯಲ್ಲಿದ್ದ ಒಂದು ಅನುಕೂಲವೆಂದರೆ, ಅಂಕಿತವಾದ ಮತ್ತು ವಾಸ್ತವವಾದ ಕೂಲಿಗಳ ನಡುವೆ ವ್ಯತ್ಯಾಸ ತುಂಬ ಕನಿಷ್ಠವಾಗಿದ್ದದ್ದು, ಹಣದುಬ್ಬರವಾಗಲಿ. ಹಣದ ಕೊಳ್ಳುವ ಶಕ್ತಿಯಲ್ಲಿ ಏರುಪೇರಾಗಲಿ ಆ ಕಾಲದಲ್ಲಿರಲಿಲ್ಲ.

ಸಾಮಾನ್ಯವಾಗಿ ದುಡಿಯುವ ವರ್ಗಗಳನ್ನು ಮೂರು ಗುಂಪಾಗಿ ಗುರುತಿಸಬಹುದು. ರೈತರು, ಕಸಬುದಾರರು ಮತ್ತು ಹಳ್ಳಿಯ ಅಧಿಕಾರಿಗಳು ಮತ್ತು ಕೆಲಸದಾಳುಗಳು. ರೈತರು ಅಥವಾ ಕೃಷಿಕರಲ್ಲಿ ಜಮೀನುದಾರರು ಮತ್ತು ಗುತ್ತಿಗೆದಾರರು ಎಂದು ಎರಡು ವರ್ಗ. ಸಣ್ಣ ಭೂ ಹಿಡುವಳಿಗಳನ್ನು ಹೊಂದಿದ್ದು, ಅವುಗಳನ್ನು ಬೇಸಾಯ ಮಾಡುತ್ತಿದ್ದರು. ಅದಕ್ಕೆ ತಾವೇ ಶ್ರಮಪಡುತ್ತಿದ್ದರು. ತಮ್ಮ ಅಲ್ಪ ಉಳಿತಾಯದಿಂದಲೆ ಜಮೀನುದಾರನಿಂದ ಪಡೆದ ಸಾಲದಿಂದಲೆ ಅಗತ್ಯ ಬಂಡವಾಳವನ್ನು ರೂಪಿಸಿಕೊಳ್ಳುತ್ತಿದ್ದರು. ಹಳ್ಳಿಯಲ್ಲಿ ಹಣ ಸಾಲಕೊಡುವ ಲೇವಾದೇವಿಗಾರರು ಇರುತ್ತಿದ್ದರು. ತಾವು ಬೆಳೆದುದನ್ನು ತಾವೇ ಹೊತ್ತುಕೊಂಡು ಸಮೀಪದ ಮಾರುಕಟ್ಟೆ ಸ್ಥಳಕ್ಕೆ ಹೋಗಿ ಉಪ್ಪು, ಬಟ್ಟೆ, ಮೊದಲಾದ ಅವಶ್ಯಕ ವಸ್ತುಗಳಿಗೆ ಹಳ್ಳಿಯಲ್ಲಿ ಲಭ್ಯವಾದ ಭೋಗವಸ್ತುಗಳಿಗೆ ವಿನಿಮಯ ಮಾಡಿಕೊಳ್ಳುತ್ತಿದ್ದರು. ಹಳ್ಳಿಯ ಮುಖಂಡ ಗೌಡ, ಶ್ಯಾನುಬೋಗ, ಈ ಅಧಿಕಾರಿಗಳ ವೇತನವೂ ಭೂಮಿಯ ಮಂಜೂರಾತಿಯಿಂದ ಪಾವತಿಯಾಗುತ್ತಿತ್ತು. ಪ್ರತಿಯೊಂದು ಗ್ರಾಮದಲ್ಲೂ ಪಂಚಾಯತಿ ಅಥವಾ ಗ್ರಾಮದ ಹಿರಿಯರ ಮಂಡಳಿ ಇದ್ದು, ವ್ಯಾಜ್ಯಗಳನ್ನು ತೀರ್ಮಾನಿಸುವ ನ್ಯಾಯಾಲಯಗಳಾಗಿ ವರ್ತಿಸುತ್ತಿದ್ದವು.

ಹೆಚ್ಚು ಕಡಿಮೆ ಪ್ರತಿಯೊಂದು ಹಳ್ಳಿಯಲ್ಲಿಯೂ ಒಬ್ಬ ಬಡಗಿ, ಒಬ್ಬ ಕಮ್ಮಾರ, ಒಬ್ಬ ಕುಂಬಾರ, ಒಬ್ಬ ನಾಯಿಂದ, ಚಮ್ಮಾರ, ಕಾವಲುಗಾರ, ಅಕ್ಕಸಾಲಿಗ, ಅಂಗಡಿಕಾರ, ಗಾಣಿಗ ಮತ್ತು ಜ್ಯೋತಿಷಿ ಇರುತ್ತಿದ್ದರು. ಸ್ವಲ್ಪ ದೊಡ್ಡ ಹಳ್ಳಿಯಾದರೆ ನೇಕಾರರು, ಲೇವಾದೇವಿಗಾರರು, ಸಗಟಾಗಿ ಧಾನ್ಯ ವ್ಯಾಪಾರ ಮಾಡುವವರು ಇರುತ್ತಿದ್ದರು. ಇವರಿಗೆ ತೆರಿಗೆಯಿಲ್ಲದ ಮನೆಗಳು, ಸುಗ್ಗಿಯ ಕಾಲದಲ್ಲಿ ಧಾನ್ಯ ದೊರಕುತ್ತಿದ್ದುವು. ನೇಕಾರರಿಗೆ ಕೆಲವೊಮ್ಮೆ ಹಣ ಕೊಡಲಾಗುತ್ತಿತ್ತು. ಚಮ್ಮಾರರು ಸತ್ತ ದನಗಳ ತೊಗಲು ಸುಲಿದು ಹದಮಾಡಿ ಪಾದರಕ್ಷೆಗಳನ್ನು ತಯಾರಿಸುತ್ತಿದ್ದರು. ಬಡಗಿಗಳು ನೇಗಿಲುಗಳನ್ನು, ಕಮ್ಮಾರರು ಅದಕ್ಕೆ ಬೇಕಾದ ಕಬ್ಬಿಣದ ಗುಳ(ಕುಳ)ಗಳನ್ನೂ ತಯಾರಿಸುತ್ತಿದ್ದರು. ಕುಂಬಾರರು ಹಳ್ಳಿಗಳಿಗೆ ಅಗತ್ಯವಾದ ಮಣ್ಣಿನ ಪಾತ್ರೆಗಳನ್ನು ತಯಾರಿಸಿಕೊಡುತ್ತಿದ್ದರು. ಪ್ರತಿಹಳ್ಳಿಯಲ್ಲೂ ಎಣ್ಣೆಯನ್ನು ಹಿಂಡುವ ಗಾಣಿಗರು, ಅಗಸರು, ನಾಯಿಂದರು, ಮತ್ತು ಜಾಡಮಾಲಿಗಳು ಇದ್ದರು. ಇವರ ಕರ್ತವ್ಯಗಳನ್ನೂ ಇವರಿಗೆ ಕೊಡಬೇಕಾದ ಸಂಭಾವನೆಯನ್ನೂ ರೂಢಿಯೇ ನಿರ್ಧರಿಸಿತ್ತು. ಈ ಗ್ರಾಮ ಜೀವನವು ನಾಯಕರ ಕಾಲದಲ್ಲಿ ಇತ್ತು.

ಪ್ರತಿಯೊಂದು ರಾಜ್ಯದ ಏಳು-ಬೀಳು ಕೃಷಿಯನ್ನೇ ಅವಲಂಬಿಸಿತ್ತು. ಅಂದರೆ ಎಲ್ಲ ಆರ್ಥಿಕ ಚಟುವಟಿಕೆಗಳಿಗೂ ಕೃಷಿಯೇ ಮೂಲಾಧಾರವಾಗಿತ್ತೆಂದು ಹೇಳಬಹುದು. ರಾಜ್ಯದ ಖಜಾನೆಗೆ ಹೆಚ್ಚಿನ ಆದಾಯ ಬರುತ್ತಿದ್ದ ಮೂಲವೂ ಆಗಿತ್ತು. ಅಲ್ಲದೇ ಪ್ರತಿಯೊಬ್ಬ ಪ್ರಜೆಗೂ ಜೀವನಾಧಾರವಾಗಿತ್ತು. ಹಾಗಾಗಿ ಕೃಷಿಯು ಪ್ರಜೆಗಳಿಂದ ಪ್ರಭುಗಳವರೆಗೂ ಮನ್ನಣೆ ಗಳಿಸಿತ್ತು. ಅಂದಿನ ಜನತೆ 'ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆಯೇ ಲೇಸು' ಎಂಬ ಗಾದೆ ಮಾತಿನಲ್ಲಿ ಅಚಲವಾದ ನಂಬಿಕೆ, ವಿಶ್ವಾಸವಿಟ್ಟಿದ್ದರು.

ನಾಯಕರ ಅಧೀನಕ್ಕೆ ಒಳಪಟ್ಟ ಪ್ರದೇಶ ಅರೆ ಮಲೆನಾಡು ಮತ್ತು ಬಯಲು ಸೀಮೆಗೆ ಸೇರಿದ್ದು, ನಾಯಕರ ಪೂರ್ವದಲ್ಲಿ ಕೆಲವು ಕೆರೆ, ಬಾವಿ, ಕಾಲುವೆ, ಕಟ್ಟೆಗಳು ನಿರ್ಮಾಣವಾಗಿದ್ದವು. ಆದರೆ ಅತೀ ಹೆಚ್ಚು, ಕೆರೆ, ಬಾವಿಗಳು ನಿರ್ಮಾಣ ಆಗಿದ್ದು ನಾಯಕರ ಕಾಲದಲ್ಲಿಯೇ ಎಂದು ಹೇಳಬಹುದು. ಅಧಿಕ ಕೃಷಿ ಉತ್ಪನ್ನಗಳನ್ನು ಬೆಳೆದು ಮಾರುಕಟ್ಟೆಯ ರಚನೆಗೆ ಹಾಗೂ ವ್ಯಾಪಾರ-ವಾಣಿಜ್ಯ ಚಟುವಟಿಕೆಗಳನ್ನು ಚುರುಕುಗೊಳಿಸಲು ಈ ಅಂಶವು ನೆರವಾಯಿತು.

ಕೃಷಿ ಆಧಾರಿತ ಅರ್ಥ ವ್ಯವಸ್ಥೆಯಲ್ಲಿ ರಾಜರು, ಅಧಿಕಾರಿಗಳು, ರಾಣಿಯರು ಮತ್ತು ಅವರ ಕುಟುಂಬ ವರ್ಗದವರು, ಬ್ರಾಹ್ಮಣರು ಮತ್ತು ಭೂ ಮಾಲೀಕರು ಪ್ರಮುಖವಾಗಿ ಗುರುತಿಸಿಕೊಂಡಿದ್ದರು. ದಾನ ನೀಡುವ ಪದ್ಧತಿ ಶ್ರೇಣಿಕೃತ ಸಾಮಾಜಿಕ ಅರ್ಥ ವ್ಯವಸ್ಥೆಯನ್ನು ಸೂಚಿಸುವುದರ ಮೂಲಕ ಉಳಿಗಮಾನ್ಯ ವ್ಯವಸ್ಥೆಯನ್ನು ದೃಢೀಕರಿಸಿತು. ಭೂ ಆಧಾರಿತ ಅರ್ಥ ವ್ಯವಸ್ಥೆಯು ಪರಿವರ್ತನೆಗೊಂಡಿರುವುದು ರಾಜ್ಯ ವ್ಯವಸ್ಥೆಯ ಮೇಲೆ ಮಹತ್ತರವಾದ ಪರಿಣಾಮವನ್ನು ಬೀರಿತು. ದಾನ ನೀಡುವ ಅಥವಾ ಕಾಣಿಕೆ ಕೊಡುವ ಹಕ್ಕು ಒಡೆತನ ಸ್ಥಾಪಿಸಲು ಅವಕಾಶ ನೀಡುತ್ತಿತ್ತು. ಇದರಿಂದ ಶ್ರೇಣೀಕೃತ ಸಾಮಾಜಿಕ ಅರ್ಥವ್ಯವಸ್ಥೆಯಲ್ಲಿ ಮಧ್ಯವರ್ತಿಗಳು ನಿರ್ಣಾಯಕ ಪಾತ್ರವನ್ನು ವಹಿಸಿ ಕೃಷಿಕರು ಹಾಗೂ ಉತ್ಪಾದಕ ವರ್ಗಗಳ ಮೇಲೆ ಹಿಡಿತವನ್ನು ಹೊಂದಿದ್ದ ಕೇಂದ್ರ ಪ್ರಭುತ್ವದ ನೇರ ಸಂಬಂಧಗಳನ್ನು ಮೊಟಕುಗೊಳಿಸಿದರು. ಇದು ವಿಕೇಂದ್ರೀಕೃತ ಆಡಳಿತ ವ್ಯವಸ್ಥೆಯನ್ನು ಹುಟ್ಟುಹಾಕಿ ಭೂ ಮಾಲೀಕರ ಮೂಲಕ ತಮ್ಮ ಅಧಿಕಾರವನ್ನು ಬಳಸಿ ಸಮಾಜದ ಕೆಳವರ್ಗದವರ ಮೇಲೆ ಹತೋಟಿಯನ್ನು ಸಾಧಿಸಿದರು. ಪರಿಣಾಮವಾಗಿ ಉತ್ಪಾದಕ ವರ್ಗಗಳನ್ನು ಯಾಂತ್ರಿಕ ಜೀವಿಗಳನ್ನಾಗಿಸಿತು. ಕೃಷಿಕರು ಮತ್ತು ಉತ್ಪಾದಕ ವರ್ಗಗಳು ಸಮಾಜದ ಕೆಳಸ್ತರಕ್ಕೆ ದೂಡಲ್ಪಟ್ಟರು. ಮಧ್ಯವರ್ತಿಗಳು ಕೃಷಿಕರ ಮೇಲೆ ನೇರ ಹತೋಟಿಯನ್ನು ಇರಿಸಿಕೊಂಡು ರಾಜ್ಯದ ಬೊಕ್ಕಸಕ್ಕೆ ಸಂದಾಯವಾಗುತ್ತಿದ್ದ ವರಮಾನದ ಹೆಚ್ಚಿನ ಪಾಲನ್ನು ತಮ್ಮದಾಗಿಸಿಕೊಂಡರು. ಈ ಪ್ರಕ್ರಿಯೆಗಳು ಕೇಂದ್ರ ಪ್ರಭುತ್ವದ ಅಧಿಕಾರವನ್ನು ಕ್ಷೀಣಿಸಿದ ರೀತಿಯಲ್ಲಿಯೇ ಸಂಕೀರ್ಣ ಸಮಾಜ ಮತ್ತು ರಾಜಕಾರಣವನ್ನು ಹುಟ್ಟು ಹಾಕಿದವು.

ಭೂ ಮಾಲೀಕ ವರ್ಗ ನಂತರದ ವಸಾಹತು ನೆಲೆಯಲ್ಲಿ ತಮ್ಮ ಶಕ್ತಿಯನ್ನು ಪ್ರದರ್ಶಿಸಲು ಹೋಗಿ ಮೂಲೆಗುಂಪಾದ ಅಂಶವನ್ನು ಸ್ಮರಿಸಬಹುದು. ನಾಯಕರ ಕಾಲದಲ್ಲಿ ಬಂದ ವಿದೇಶಿ ಕಂಪನಿಗಳು ಕೃಷಿಯನ್ನು ವಾಣಿಜ್ಯೀಕರಣ ಮಾಡಿ ಹೊಸ ಆರ್ಥಿಕ ಅಲೆಯನ್ನು ಸೃಷ್ಟಿಸಿದವು. ಇಂದಿಗೂ ಈ ನೀತಿ ಪ್ರಚುರಗೊಂಡ ಬಗೆಯನ್ನು ತಿಳಿಯಬಹುದು.

**ಅಧ್ಯಯನದ ಫಲಿತಗಳು**

೧. ಚರಿತ್ರೆ ಬರವಣಿಗೆಯ ರಾಷ್ಟ್ರೀಯ ಮಾದರಿಗಳು ರೂಪಿಸಿದ ವೈಧಾನಿಕತೆಯ ಚೌಕಟ್ಟನ್ನು ಮೀರುವ ಹಾಗೂ ಸ್ಥಳೀಯ ಅಧ್ಯಯನ ಮಾದರಿಯನ್ನು ಅಳವಡಿಸಿಕೊಳ್ಳುವ ಪ್ರಯತ್ನವನ್ನು ಮಹಾಪ್ರಬಂಧದಲ್ಲಿ ಮಾಡಲಾಗಿದೆ.

೨. ನಾಯಕರ ಆಳ್ವಿಕೆಯ ಅವಧಿಯಲ್ಲಿ ಯುರೋಪಿನ ಈಸ್ಟ್ ಇಂಡಿಯಾ ಕಂಪನಿಗಳ ವ್ಯಾಪಾರದ ಮೇಲಿನ ಏಕಸ್ವಾಮ್ಯಕ್ಕಾಗಿ ಪರಸ್ಪರ ಪೈಪೋಟಿ ನಡೆಸುತ್ತಿದ್ದವು ಅದೇ ರೀತಿ ಸ್ಥಳೀಯ ಅರಸುಮನೆತನಗಳೊಂದಿಗೆ ಆರ್ಥಿಕ ಕಾರಣಗಳಿಗಾಗಿ ಯುದ್ಧ ಹಾಗೂ ಒಪ್ಪಂದಗಳಲ್ಲೂ

ನಿರತವಾಗಿದ್ದವು. ಈ ಎಲ್ಲ ಬೆಳವಣಿಗೆಗಳು ಸ್ಥಳೀಯ ಆರ್ಥಿಕತೆಯ ಮೇಲೆ ಬೀರಿದ ಪರಿಣಾಮಗಳನ್ನು ಮಹಾಪ್ರಬಂಧದಲ್ಲಿ ಸ್ಪಷ್ಟವಾಗಿ ಗುರುತಿಸಲಾಗಿದೆ.

೩. ಚಿತ್ರದುರ್ಗ ಪ್ರದೇಶವು ಮೌರ್ಯ ಮತ್ತು ಶಾತವಾಹನರ ಕಾಲದಲ್ಲಿ ವ್ಯಾಪಾರ ಕೇಂದ್ರಗಳನ್ನು ಹೊಂದಿತ್ತು. ಬ್ರಹ್ಮಗಿರಿ ಹಾಗೂ ಚಂದ್ರವಳ್ಳಿಯಲ್ಲಿ ದೊರೆತಿರುವ ಚೀನಿ, ಮತ್ತು ಗ್ರೀಕ್ ರೋಮನ್ ನಾಣ್ಯಗಳ ಮೂಲಕ ಈ ಪ್ರದೇಶ ಪ್ರಾಚೀನ ವ್ಯಾಪಾರ-ವಾಣಿಜ್ಯ ಚಟುವಟಿಕೆಗಳ ಕೇಂದ್ರವಾಗಿತ್ತು ಎಂದು ಚಿತ್ರದುರ್ಗ ಪರಿಸರವು ವ್ಯಾಪಾರ ಮತ್ತು ವಾಣಿಜ್ಯದ ಕೇಂದ್ರವಾಗಿ ಬೆಳವಣಿಗೆ ಹೊಂದುವುದಕ್ಕೆ ಈ ಅಂಶವು ಪ್ರಮುಖ ಕಾರಣ ಎನ್ನುವುದನ್ನು ಮಹಾಪ್ರಬಂಧದಲ್ಲಿ ಕಂಡುಕೊಳ್ಳಲಾಗಿದೆ.

೪. ಮೌರ್ಯರ ನಂತರ ಉತ್ತರ ಮತ್ತು ದಕ್ಷಿಣ ಭಾರತವನ್ನು ಏಕ ಅಧಿಪತ್ಯಕ್ಕೆ ಸೇರಿಸಿದ್ದು ಕಲ್ಯಾಣದ ಚಾಲುಕ್ಯರ ಅರಸನಾದ ಇಮ್ಮಡಿ ಪುಲಿಕೇಶಿ. ಇವನ ಕಾಲದ ಶಾಸನಗಳು ಚಿತ್ರದುರ್ಗ ಪ್ರದೇಶದಲ್ಲಿ ಕಂಡುಬರುವುದರಿಂದ ಉತ್ತರ ಭಾರತದ ಅನೇಕ ವರ್ತಕ ಸಮುದಾಯಗಳು ಇವನ ಕಾಲದಲ್ಲಿ ವಲಸೆ ಬಂದಿರುವ ಸಂಗತಿಗಳನ್ನು ಪ್ರಸ್ತುತ ಸಂಶೋಧನೆಯಲ್ಲಿ ಗುರುತಿಸಲಾಗಿದೆ.

೫. ವಿಜಯನಗರದ ಅಧೀನರಾಗಿದ್ದ ಚಿತ್ರದುರ್ಗದ ನಾಯಕರು ೧೫೬೮ರಲ್ಲಿ ನಾಯಕ ಪ್ರತಿನಿಧಿಯಾಗಿ ಆಯ್ಕೆಗೊಂಡರು. ಇವರು ಮೂಲತಃ ಜಮೀನ್ದಾರರಾಗಿದ್ದು, ಇವರು ವಿಜಯನಗರಕ್ಕೆ ತೆರಿಗೆಯನ್ನು ಸಂಗ್ರಹಿಸಿ ಒಪ್ಪಿಸುವ ಕೆಲಸ ನಿರ್ವಹಿಸುವ ಅಧಿಕಾರಿಗಳಾಗಿ ನೇಮಕಗೊಂಡಿದ್ದರು. ವಿಜಯನಗರದ ಪತನದ ನಂತರ ಇವರು ತಮ್ಮದೇ ಆದ ಕೃಷಿ ಮತ್ತು ವ್ಯಾಪಾರ ನೀತಿಗಳನ್ನು ಅನುಸರಿಸಿದರು.

೬. ಚಿತ್ರದುರ್ಗ ಪ್ರದೇಶವು ಅನೇಕ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿದ್ದ ಪ್ರದೇಶವಾಗಿದ್ದು ಪ್ರಾಚೀನ ಕಾಲದಲ್ಲಿ ಅನೇಕ ಕೆರೆ, ಬಾವಿ, ಕಟ್ಟೆ, ಕಾಲುವೆಗಳನ್ನು ನಿರ್ಮಿಸಲಾಗಿತ್ತು. ಆದರೆ ವಿಜಯನಗರೋತ್ತರ ಕಾಲದಲ್ಲಿ ಅಧಿಕಾರಕ್ಕೆ ಬಂದ ಚಿತ್ರದುರ್ಗದ ನಾಯಕರಲ್ಲಿ ಬಿಚ್ಚುಗತ್ತಿ ಭರಮಣ್ಣ ನಾಯಕನು ಸುಮಾರು ಇಪ್ಪತ್ತು ಕೆರೆಗಳನ್ನು ನಿರ್ಮಿಸುವುದರ ಮೂಲಕ ಕೃಷಿಯ ವಿಸ್ತರಣೆಗೆ ಅವಕಾಶ ಕಲ್ಪಿಸಿದ್ದನ್ನು ಸ್ಮರಿಸಬಹುದು. ಹಾಗೂ ಇದರ ಮೂಲಕ ಮಾರುಕಟ್ಟೆ ವಿಸ್ತರಣೆಯಾಗಿ ವ್ಯಾಪಾರ ಚುರುಕುಗೊಂಡಿತು.

೭. ಸಾರಿಗೆ ಸಂಪರ್ಕ ಕಲ್ಪಿಸುವ ಮುಖ್ಯ ಹೆದ್ದಾರಿ ಹಾದು ಹೋಗುವ ಆಯಕಟ್ಟಿನ ಸ್ಥಳದಲ್ಲಿ ಚಿತ್ರದುರ್ಗವು ಇದ್ದು, ಇದು ಅನೇಕ ವರ್ತಕ ಸಮುದಾಯಗಳನ್ನು ಆಕರ್ಷಿಸುವ ಮಾರುಕಟ್ಟೆಯನ್ನು ಹೊಂದಿದ್ದರಿಂದ ಇದೊಂದು ವ್ಯಾಪಾರಿ ಕೇಂದ್ರವಾಗಿ ಗುರುತಿಸಿಕೊಂಡಿತು.

೮. ಚಿತ್ರದುರ್ಗ ಪ್ರದೇಶವು ಬಯಲು ಸೀಮೆಯಾಗಿದ್ದರಿಂದ ಸಾಂಪ್ರದಾಯಿಕ ಆಹಾರದ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಆದರೆ ಯುರೋಪಿಯನ್ನರ ಆಗಮನದ ಬಳಿಕ ಆರ್ಥಿಕ ಬೆಳೆಗಳನ್ನು ಬೆಳೆಯಲು ಆರಂಭಿಸಲಾಯಿತು. ೧೬೨೦ರ ದಶಕದಲ್ಲಿ ಪೋರ್ಚುಗೀಸರು ಮುಸುಕಿನ ಜೋಳ, ಹೊಗೆಸೊಪ್ಪು, (ತಂಬಾಕು), ನೆಲ ಗಡಲೆ(ಶೇಂಗಾ), ಆಲೂಗಡ್ಡೆ, ಮೆಣಸಿನಕಾಯಿ, ಪಪ್ಪಾಯಿ, ಟೊಮೊಟೊ ಬೆಳಗಳ ಹೊಸ ತಳಿಗಳನ್ನು ಪರಿಚಯಿಸಿದರು. ಇಂದಿಗೂ ಚಿತ್ರದುರ್ಗ ಪ್ರದೇಶದ ಆರ್ಥಿಕ ಬೆಳೆಯಾಗಿ ಗುರುತಿಸಿಕೊಂಡಿರುವ ಶೇಂಗಾ ಪ್ರಮುಖ ಆರ್ಥಿಕ ಬೆಳೆಯಾಗಿದ್ದು, ಅನೇಕ ಕೈಗಾರಿಕೆಗಳು ತಲೆಎತ್ತುವಂತಾಯಿತು. ಪಾಶ್ಚಿಮಾತ್ಯರ ಕೃಷಿ ಪದ್ಧತಿಯನ್ನು ನಾಯಕರ ಕಾಲದಲ್ಲಿ ಅಳವಡಿಸಿಕೊಂಡಿದ್ದ ಅಂಶವನ್ನು ಪ್ರಸ್ತುತ ಪ್ರಬಂಧದಲ್ಲಿ ಗುರುತಿಸಲಾಗಿದೆ.

೯. ದಾವಣಗೆರೆ ನಗರದಲ್ಲಿ ಹಳೇ ಸಂತೆ ಪೇಟೆ ಎಂದು ಗುರುತಿಸಲಾಗುವ ದೊಡ್ಡ ಪೇಟೆಯಲ್ಲಿ ಇಂದಿಗೂ ಬಣಜಿಗರ ಸಂಘ ಅಸ್ತಿತ್ವದಲ್ಲಿದೆ. ವ್ಯಾಪಾರಕ್ಕೆ ಪೂರಕವಾದ ಈ ವರ್ತಕರ ಒಕ್ಕೂಟವನ್ನು ಗುರುತಿಸಲಾಗಿದೆ.

೧೦. ಘಟ್ಟಿ ಹೊಸಹಳ್ಳಿಯು ನಾಯಕರ ಕಾಲದಲ್ಲಿ ಬಳೆ ಮತ್ತು ಕಬ್ಬಿಣದ ಆಯುಧಗಳ ಉತ್ಪಾದನಾ ಕೈಗಾರಿಕಾ ನೆಲೆಯಾಗಿ ಗುರುತಿಸಿಕೊಂಡಿದ್ದು, ಇಲ್ಲಿ ಬಳೆ ತಯಾರಿಕೆಗೆ ಬಳಸುತ್ತಿದ್ದ ಮಣ್ಣಿನ ಮೂಸೆ, ಹಾಗೂ ಕಬ್ಬಿಣ ತಯಾರಿಕೆಯ ಕಿಟ್ಟ ಹಾಗೂ ಬೂದಿ ದಿಬ್ಬಗಳನ್ನು ಗುರುತಿಸಲಾಗಿದೆ.

೧೧. ಜಗಳೂರು ಸೀಮೆಯು ನಾಯಕರ ಕಾಲದಲ್ಲಿ ಅತೀ ಹೆಚ್ಚು ಬುಡಕಟ್ಟು ಸಮುದಾಯಗಳಿಂದ ಸುತ್ತುವರೆದ ಪ್ರದೇಶವಾಗಿತ್ತು. ನಾಯಕರ ಕಾಲದ ಪಶುಸಂಪತ್ತು ಪ್ರಮುಖ ಆರ್ಥಿಕ ಸಂಪತ್ತುಗಳಲ್ಲಿ ಒಂದಾಗಿತ್ತು. ಅದೇ ರೀತಿಯಾಗಿ ಜಗಳೂರು ಸಂತೆಯೂ ಕೋಡುಕುರಿಗೆ ಖ್ಯಾತಿಯನ್ನು ಪಡೆದಿರುವ ಮಾರುಕಟ್ಟೆಯಾಗಿ ಗುರುತಿಸಿಕೊಂಡಿತ್ತು. ಈ ಪರಂಪರೆ ಮುಂದುವರಿದಿರುವುದನ್ನು ಇಂದಿಗೂ ಕಾಣಬಹುದಾಗಿದೆ.

೧೨. ಹೊಸದುರ್ಗ ಸೀಮೆಯು ಕುರಿ ಕಂಬಳಿ, ಒಣಮೆಣಸಿನ ಕಾಯಿ, ತೆಂಗಿನ ನಾರು ಹಾಗೂ ಒಣಕೊಬ್ಬರಿ, ಉತ್ಪಾದನಾ ಸೀಮೆಯಾಗಿದ್ದು, ಸಾಗರ, ಬ್ಯಾಡಗಿ, ಇಕ್ಕೇರಿ, ಬೆಂಗಳೂರು ಇನ್ನಿತರೆ ಪ್ರದೇಶಗಳಲ್ಲಿ ಈ ಸೀಮೆಯ ಉತ್ಪನ್ನಗಳಿಗೆ ತುಂಬಾ ಬೇಡಿಕೆ ಇದ್ದುದನ್ನು ಗುರುತಿಸಲಾಗಿದೆ.

೧೩. ಪೋರ್ಚುಗೀಸರಿಂದ ಪರಿಚಯವಾದ ಶೇಂಗಾ ಬೆಳೆಯನ್ನು ಮೊಳಕಾಲ್ಮೂರು ಹಾಗೂ ಚಳ್ಳಕೆರೆ ಸೀಮೆಗಳಲ್ಲಿ ಬೆಳೆಯಲಾಗುತ್ತಿತ್ತು. ಒಣಬೇಸಾಯ ಪದ್ದತಿ ಹೆಚ್ಚಾಗಿ ಇದ್ದುದರಿಂದ ಮಳೆಯಾಶ್ರಿತ ಬೆಳೆಯಾಗಿ ಶೇಂಗಾ ಬೆಳೆಯನ್ನು ಬೆಳೆಯುತ್ತಿದ್ದರಿಂದ ಅತೀ ಹೆಚ್ಚಿನ ಎಣ್ಣೆ ಕೈಗಾರಿಕೆಗಳು ಚಳ್ಳಕೆರೆ ನಗರದಲ್ಲಿ ತಲೆಎತ್ತುವಂತಾಯಿತು. ಆದ್ದರಿಂದ ಪ್ರಸ್ತುತ ಚಳ್ಳಕೆರೆಯು ತೈಲ ನಗರಿ (ಆಯಿಲ್ ಸಿಟಿ) ಅಥವಾ ಸೆಕೆಂಡ್ ಬಾಂಬೆ (ಛೋಟಾ ಮುಂಬೈ) ಎಂದು ಗುರುತಿಸಿಕೊಂಡಿದೆ.

೧೪. ಆಂಧ್ರ ಪ್ರದೇಶದ ಗಡಿ ಭಾಗದಲ್ಲಿ ಕಂಡುಬರುವ ಮೊಳಕಾಲ್ಮೂರು ನಗರವು ರೇಷ್ಮೆ ಬೆಳೆಗೆ ಹೆಸರುವಾಸಿಯಾಗಿದ್ದು, ಇದು ಯುರೋಪಿಯನ್ನರು ಪರಿಚಯಿಸಿದ ಆರ್ಥಿಕ ಬೆಳೆಯಾಗಿದೆ. ಕರ್ನಾಟಕ ಹಾಗೂ ವಿದೇಶಿ ವ್ಯಾಪಾರದಲ್ಲಿ ಮೊಳಕಾಲ್ಮೂರು ರೇಷ್ಮೆ ಸೀರೆ ಉದ್ಯಮವು ತನ್ನದೇ ಆದ ಮಹತ್ವವವನ್ನು ಪಡೆದುಕೊಂಡಿದ್ದನ್ನು ನಾಯಕರ ಕಾಲದಿಂದಲೇ ಗುರುತಿಸಲಾಗಿದೆ.

೧೫. ಬಾಗೂರು ಸೀಮೆಯು ಕೆರೆ ನೀರಾವರಿಯಿಂದಾಗಿ ಅತೀ ಹೆಚ್ಚು ಭತ್ತ ಉತ್ಪಾದನಾ ಸೀಮೆಯಾಗಿ ನಾಯಕರ ಕಾಲದಿಂದಲೇ ಗುರುತಿಸಿಕೊಂಡಿದೆ. ಇಲ್ಲಿ ಉತ್ಪಾದಿಸುವ "ಸಣ್ಣಕ್ಕಿ" ತುಂಬಾ ಹೆಸರುವಾಸಿಯಾಗಿದೆ. ಪ್ರಸ್ತುತ ಸಂಶೋಧನಾ ಕ್ಷೇತ್ರಕಾರ್ಯದಲ್ಲಿ ದೊರೆತಿರುವ ಮಾಹಿತಿಯ ಪ್ರಕಾರ ಬಾಗೂರಿನಲ್ಲಿ ಉತ್ಪಾದಿಸುತ್ತಿದ್ದ ಅಕ್ಕಿಯನ್ನು ಮೈಸೂರಿನ ಒಡೆಯರು ತಮ್ಮ ಸೇವನೆಗಾಗಿ ಬಳಸುತ್ತಿದ್ದರು.

೧೬. ಕರಾವಳಿ ಪ್ರದೇಶಗಳಲ್ಲಿ ಸಮುದ್ರದ ನೀರನ್ನು ಬಳಸಿ ಉಪ್ಪನ್ನು ತಯಾರಿಸಿದರೆ, ನಾಯಕರ ಕಾಲದಲ್ಲಿ ಹಳ್ಳಗಳಲ್ಲಿ ಕಂಡುಬರುವ ಚೌಳು (ಸೌಳು)ಮಣ್ಣನ್ನು ಬಳಸಿ ಉಪ್ಪನ್ನು ತಯಾರಿಸಿ ಮಾರುಕಟ್ಟೆಯಲ್ಲಿ ಮಾರುತ್ತಿದ್ದರು. ಈ ರೀತಿ ಉತ್ಪಾದನೆಗೊಳ್ಳುವ ಉಪ್ಪನ್ನು 'ಮಣ್ಣುಪ್ಪು' ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ಈ ಅಂಶವನ್ನು ಪ್ರಸ್ತುತ ಸಂಶೋಧನೆಯಲ್ಲಿ ಕಂಡುಕೊಳ್ಳಲಾಗಿದೆ.

೧೭. ದಾವಣಗೆರೆ ಪ್ರದೇಶವು ಕಪ್ಪು ಮತ್ತು ಕೆಂಪು ಮಣ್ಣಿನಿಂದ ಕೂಡಿದ ಪ್ರದೇಶವಾಗಿದ್ದು, ಇಲ್ಲಿ ಸಾಂಪ್ರದಾಯಿಕ ಹತ್ತಿ ಹಾಗೂ ಮುಸುಕಿನ ಜೋಳ ಹೆಚ್ಚಾಗಿ ಬೆಳೆಯಲಾಗುತ್ತಿತ್ತು. ಆದರೆ ಯುರೋಪಿಯನ್ನರು ಭಾರತಕ್ಕೆ ಬಂದ ನಂತರ ಹೊಸ ತಳಿಯ ಹತ್ತಿ ಬೆಳೆಗಳನ್ನು ಪರಿಚಯಿಸಿದ್ದರಿಂದ ಬಟ್ಟೆ ನೇಯ್ಗೆ ಉದ್ಯಮವು ಚುರುಕುಗೊಂಡಿದ್ದರಿಂದ ಕರ್ನಾಟಕದ 'ಮ್ಯಾಂಚೆಸ್ಟರ್' ನಗರವಾಗಿ, ಗುರುತಿಕೊಂಡಿತು.

೧೮. ವಿಜಯನಗರೋತ್ತರ ಕಾಲದಲ್ಲಿ ಅನೇಕ ಪೇಟೆಪಟ್ಟಣಗಳು ರಚನೆಯಾಗಿದ್ದರಿಂದ ರಾಜ್ಯದ ಹಾಗೂ ದೇಶದ ವಿವಿಧ ಭಾಗಗಳಿಂದ ವರ್ತಕ ಸಮುದಾಯಗಳು ವಲಸೆ ಬಂದು ಮಾರುಕಟ್ಟೆ ರಚನೆ ಹಾಗೂ ನಗರೀಕರಣ ಪ್ರಕ್ರಿಯೆ ಚುರುಕುಗೊಳ್ಳಲು ಕಾರಣವಾಯಿತು. ವಸತಿ ನೆಲೆಗಳನ್ನು ಅದೇ ರೀತಿಯಾಗಿ ನಾಯಕರ ಕಾಲದಲ್ಲಿ ವಿವಿಧ ಧರ್ಮದ ಹಾಗೂ ವೃತ್ತಿಯ ಸಮುದಾಯಗಳು ವಲಸೆ ಬಂದು ನೆಲೆ ನಿಂತಿರುವ ಗುರುತಿಸುವುದರ ಮೂಲಕ ಪೇಟೆ ಪಟ್ಟಣಗಳ ಬೆಳವಣಿಗೆಯನ್ನು ಗುರುತಿಸಲಾಗಿದೆ.

೧೯. ಫ್ರೆಂಚರ ಐತಿಹ್ಯಗಳು ಚಿತ್ರದುರ್ಗ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಆನಂದ ರಂಗ ಪಿಳ್ಳೆಯವರ ಡೈರಿಯಲ್ಲಿಯೂ ಫ್ರೆಂಚರ ಉಲ್ಲೇಖಗಳು ಕಂಡುಬರುತ್ತವೆ. ನಾಯಕನಹಟ್ಟಿಯ ಒಳಮಠದ ದ್ವಾರಗೋಪುರದ ಮೇಲೆ ಕಂಡುಬರುವ ಗಾರೆ ಶಿಲ್ಪಗಳು ಹಾಗೂ ಅವರು ಧರಿಸಿರುವ ಉಡುಗೆಯಿಂದಾಗಿ ಫ್ರೆಂಚ್ ಸೈನ್ಯದ ಡ್ರೆಸ್ ಕೋಡ್ ಎಂದು ಗುರುತಿಸಲಾಗಿದೆ. ಇದರ ಮೂಲಕ ಪಾಶ್ಚಿಮಾತ್ಯ ಕಂಪನಿಯ ವ್ಯಾಪಾರಿಗಳು ಈ ಪ್ರದೇಶದೊಂದಿಗೆ ಸಂಬಂಧ ಹೊಂದಿದ್ದ ಅಂಶವನ್ನು ತಿಳಿಯಬಹುದಾಗಿದೆ.

೨೦. ನಾಯಕರ ಕಾಲದಲ್ಲಿ ನಿರ್ಮಾಣಗೊಂಡ ಕೋಟೆ ಹಾಗೂ ಬೃಹನ್ಮಠವು ಐತಿಹಾಸಿಕ ಹಾಗೂ ಧಾರ್ಮಿಕ ಕೇಂದ್ರವಾಗಿ ನಗರೀಕರಣ ಪ್ರಕ್ರಿಯೆಗೆ ಸಾಕ್ಷಿಯಾಗಿದೆ. ನಾಯಕರ ನಂತರ ಪ್ರವಾಸೋದ್ಯಮದ ಮೂಲಕ ಕೋಟೆ ಗುರುತಿಸಿಕೊಂಡರೆ, ಧಾರ್ಮಿಕ ಹಾಗೂ ಶೈಕ್ಷಣಿಕ ಕೇಂದ್ರವಾಗಿ ಮುರುಘಾಮಠವು ಗುರುತಿಸಿಕೊಂಡಿತು. ಇವುಗಳ ಜೊತೆಗೆ ಒನಕೆ ಓಬವ್ವೆಯೂ ಸೇರ್ಪಡೆಗೊಂಡಿದದು, ಇವೆಲ್ಲವೂ ಚಿತ್ರದುರ್ಗದ ಐಡೆಂಟಿಟಿಯ ಪ್ರಶ್ನೆಗಳಾಗಿರುವುದನ್ನು ಮಹಾಪ್ರಬಂಧದಲ್ಲಿ ಗುರುತಿಸಲಾಗಿದೆ.

# ಪೂರಕ ಆಕರಗಳು

## I. ಪ್ರಾಥಮಿಕ ಆಕರಗಳು

### ೧. ಪತ್ರಾಗಾರ ದಾಖಲೆಗಳು

#### * ಗೋವಾ ಪತ್ರಾಗಾರದ ದಾಖಲೆಗಳು


೧. Livro de Reis Vizinhos, Vol-1, 1619-1626

೨. Livro de Resi Vizinhas, Vol-1, 1693-1698

೩. Livro de Resi Vizinhas, Vol-1, 1714-1722

೪. 7740 Livro de Acordaos e-Assentos, Vol-1, 1694-1709

೫. Livro de Segredo no-1, fls15:doc 28, 1637, Maio 9, p-545

೬. Archivo Portuguese Oriental (10 Vols Nua Goa) 1857-1876

೭. Asentos I, 555-6

೮. Livro de Correspondinia do Canara : No-2 Fls76077, 1722


#### * ಚೆನ್ನೈ ಪತ್ರಾಗಾರದ ದಾಖಲೆಗಳು


೧. Pub : Cons Vol-X, pp-240, 243

೨. Pub : Cons Vol-XI, pp- 2, 3

೩. Pub : Des From Court, Vol-VII, pp-244

೪. Pub : VM. 221-A

೫. Pub : VM. 224-A

೬. Pub : Cons Vol-X, pp-43, 45

೭. Foster, E.F.I, 1661-64, pp-346


#### * ಪಾಂಡಿಚೇರಿ ಪತ್ರಾಗಾರದ ದಾಖಲೆಗಳು


೧. Serie F/10 Ministere de aGricuture

೨. F/10/427 et. 428. Cultures industreielles, don't la garance (1751-1763

೩. 150AQ, Librairie des Sciences Girardot it Compagnie (1533-1800)

೪. Banques; 1 AQ, Banque Comondo (1833-1920)

೫. 6 Louis XV and The years Proceding Revolution (1715-1788)

೬. 5th ed. Paris: Encycolpaedia Universitis, (2002, 28 v:1-23)

೭. Thougths of Louis XIV, or Maxims of Government and Reflections on the Occupation of King (1666 : English Transcription)

## ೨. ಗೆಜೆಟಿಯರ್‌ಗಳು, ಶಾಸನ ಸಂಪುಟಗಳು ಹಾಗೂ ಪ್ರಕಟಿತ ಆಡಳಿತಾತ್ಮಕ ವರದಿಗಳು


೧. ಅಭಿಶಂಕರ್ ಕೆ., ಬಳ್ಳಾರಿ ಡಿಸ್ಟ್ರಿಕ್ಟ್ ಗೆಜೆಟಿಯರ್, ಬೆಂಗಳೂರು, ೧೯೭೨

೨. ಅಭಿಶಂಕರ್ ಕೆ., ಶಿವಮೊಗ್ಗ ಡಿಸ್ಟ್ರಿಕ್ಟ್ ಗೆಜೆಟಿಯರ್, ಬೆಂಗಳೂರು, ೧೯೭೫

೩. ಫ್ರಾನ್ಸಿಸ್ ಡಬ್ಲ್ಯೂ, ಬಳ್ಳಾರಿ ಡಿಸ್ಟ್ರಿಕ್ಟ್ ಗೆಜೆಟಿಯರ್, ಮದ್ರಾಸ್, ೧೯೦೪

೪. ರೈಸ್ ಬಿ.ಎಲ್.(ಸಂ)., ಮೈಸೂರು ಗೆಜೆಟಿಯರ್, ಸಂಪುಟ–೧, ೨, ಲಂಡನ್,೧೮೯೭

೫. ವೆಂಕಟರಂಗೋ ಕಟ್ಟಿ (ಕನ್ನಡಕ್ಕೆ), ಗೆಜೆಟಿಯರ್, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ಏಷಿಯನ್ ಎಜುಕೇಷನ್ ಸರ್ವಿಸಸ್, ನವದೆಹಲಿ, ೧೯೮೪

೬. ಸತ್ಯನ್ ಬಿ.ಎನ್.(ಸಂ)., ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್, ಕರ್ನಾಟಕ ಸರಕಾರ, ಬೆಂಗಳೂರು, ೧೯೬೭

೭. ಸೂರ್ಯನಾಥ ಕಾಮತ್ ಯು.(ಸಂ)., ಭಾರತದ ಗೆಜೆಸಟಿಯರ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ–೧, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ೧೯೮೯

೮. ಹಯವದನ್ ರಾವ್ ಸಿ.(ಸಂ)., ಮೈಸೂರು ಗೆಜೆಟಿಯರ್, ಸಂಪುಟ–೧ರಿಂದ ೫, ಮೈಸೂರು ಸರ್ಕಾರ, ಬೆಂಗಳೂರು, ೧೯೨೯

೯. ರೈಸ್ ಬಿ.ಎಲ್.(ಸಂ)., ಮೈಸೂರು ಮತ್ತು ಕೂರ್ಗ್ ಗೆಜೆಟಿಯರ್, ಸಂಪುಟ–೩, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು, ೧೮೭೮

೧೦. ಇಂಪೀರಿಯಲ್ ಗೆಜೆಟಿಯರ್ ಆಫ್ ಇಂಡಿಯಾ ಮೈಸೂರು ಮತ್ತು ಕೂರ್ಗ್, ಕಲ್ಕತ್ತಾ, ೧೯೦೮

೧೧. ಹಂಟರ್, ಸರ್ ವಿಲಿಯಂ ವಿಲ್ಸನ್ (ಸಂ)., ಭಾರತದ ಗೆಜೆಟಿಯರ್, ಲಂಡನ್, ೧೮೮೬

೧೨. ಭಟ್ಟ ಎಸ್.ಸಿ.(ಸಂ)., ದಿ ಎನ್‌ಸೈಕ್ಲೋಪಿಡಿಕ್ ಡಿಸ್ಟ್ರಿಕ್ಟ್ ಗೆಜೆಟಿಯರ್ ಆಫ್ ಇಂಡಿಯಾ, ಸಂಪುಟ–೧, ದಕ್ಷಿಣ ವಲಯ ನವದೆಹಲಿ, ೧೯೯೭

೧೩. ರೈಸ್ ಬಿ.ಎಲ್.(ಸಂ)., **ಎಪಿಗ್ರಾಫಿ ಕರ್ನಾಟಿಕ, ಸಂಪುಟಗಳು– I, II, III, IV, V, VI, VII, VIII, IX, X, XI, XII, XIII**, ಮೈಸೂರು ಗವರ್ನಮೆಂಟ್ ಸೆಂಟ್ರಲ್ ಪ್ರೆಸ್, ಬೆಂಗಳೂರು, ೧೯೦೨–೧೯೦೩

೧೪. ಗೋಪಾಲ್ ಬಿ.ಆರ್.(ಸಂ)., ವಿಜಯನಗರ ಇನ್ಸ್‌ಸ್ಕ್ರಿಪ್ಷನ್ಸ್ ವ್ಯಾಲ್ಯೂಂ–**IV**, ಗೌರ್ಮೆಂಟ್ ಪಬ್ಲಿಕೇಷನ್ಸ್, ೧೯೮೫

೧೫. ಪಂಚಮುಖಿ ಆರ್.ಎಸ್.(ಸಂ)., ಕರ್ನಾಟಕ ಇನ್ಸ್‌ಸ್ಕ್ರಿಪ್ಷನ್ಸ್, ಸಂಪುಟ–೧, ೧೯೪೧

೧೬. ರಾವ್ ಬಹದ್ದೂರ್ ಹೆಚ್., ಶಾಸ್ತ್ರಿ ಕೃಷ್ಣ (ಸಂ)., **ಸೌತ್ ಇಂಡಿಯನ್ ಇನ್ಸ್‌ಸ್ಕ್ರಿಪ್ಷನ್ಸ್ ಸಂಪುಟ– IX(i,iii), XI(i,ii), XV, XVIII, XX,** ಸರ್ಕಾರಿ ಮುದ್ರಣಾಲಯ, ಮದ್ರಾಸ್, ೧೯೨೩

೧೭. ದೇವರಕೊಂಡಾರೆಡ್ಡಿ (ಸಂ)., **ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ–I, II, VI, VII,**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೧೮. **ಮೈಸೂರು ಆರ್ಕಿಯಾಲಜಿಕಲ್ ಸಂಪುಟಗಳು** ಸುಪ್ರಿಡೆಂಟ್ ಆಫ್ ಗೌರ್ಮೆಂಟ್ ಪ್ರಸ್, ೧೯೧೦, ೧೯೧೬, ೧೯೨೯, ೧೯೩೦, ೧೯೩೨, ೧೯೩೪, ೧೯೩೬, ೧೯೪೦, ೧೯೪೨

೧೯. ಗೋಪಾಲ್ ಬಿ.ಆರ್.(ಸಂ)., ಎಪಿಗ್ರಾಫಿಯ ಕರ್ನಾಟಕ, (ಪರಿಷ್ಕೃತ ಮುದ್ರಣ) ಸಂಪುಟ–೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೨

೨೦. ಗೋಪಾಲ್ ಬಿ.ಆರ್.(ಸಂ)., ಎಪಿಗ್ರಾಫಿಯ ಕರ್ನಾಟಕ, (ಪರಿಷ್ಕೃತ ಮುದ್ರಣ) ಸಂಪುಟ–೨,

ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೩
೨೧. ಗೋಪಾಲ್ ಬಿ.ಆರ್.(ಸಂ)., ಎಪಿಗ್ರಾಫಿಯ ಕರ್ನಾಟಕ, (ಪರಿಷ್ಕೃತ ಮುದ್ರಣ) ಸಂಪುಟ–೩, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೪
೨೨. ಗೋಪಾಲ್ ಬಿ.ಆರ್.(ಸಂ)., ಎಪಿಗ್ರಾಫಿಯ ಕರ್ನಾಟಕ, (ಪರಿಷ್ಕೃತ ಮುದ್ರಣ) ಸಂಪುಟ–೫, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೬
೨೩. ಗೋಪಾಲ್ ಬಿ.ಆರ್.(ಸಂ)., ಎಪಿಗ್ರಾಫಿಯ ಕರ್ನಾಟಕ, (ಪರಿಷ್ಕೃತ ಮುದ್ರಣ) ಸಂಪುಟ–೬, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೭
೨೪. ಗೋಪಾಲ್ ಬಿ.ಆರ್.(ಸಂ)., ಎಪಿಗ್ರಾಫಿಯ ಕರ್ನಾಟಕ, (ಪರಿಷ್ಕೃತ ಮುದ್ರಣ) ಸಂಪುಟ–೭, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೯
೨೫. ಗೋಪಾಲ್ ಬಿ.ಆರ್.(ಸಂ)., ಎಪಿಗ್ರಾಫಿಯ ಕರ್ನಾಟಕ, (ಪರಿಷ್ಕೃತ ಮುದ್ರಣ) ಸಂಪುಟ–೮, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೪
೨೬. ಗೋಪಾಲ್ ಬಿ.ಆರ್.(ಸಂ)., ಎಪಿಗ್ರಾಫಿಯ ಕರ್ನಾಟಕ, (ಪರಿಷ್ಕೃತ ಮುದ್ರಣ) ಸಂಪುಟ–೯, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೯೦
೨೭. ಫ್ರಾನ್ಸಿಸ್ ಬುಕಾನನ್., ಎ ಜರ್ನಿ ಫ್ರಮ್ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಆ್ಯಂಡ್ ಮಲಬಾರ್, ಸಂಪುಟ–೧, ೩, ಗೌರ್ನಮೆಂಟ್ ಪ್ರೆಸ್, ಬೆಂಗಳೂರು, ೧೮೭೦
೨೮. ಡುರೇಟ್ ಬಾರ್ಬೋಸ, ದಿ ಬುಕ್ ಆಫ್ ಡುರೇಟ್ ಬಾರ್ಬೋಸ, ಆ್ಯನ್ ಅಕೌಂಟ್ ಆಫ್ ದಿ ಕಂಟ್ರೀಸ್ ಬೋರ್ಡಿಂಗ್ ಆನ್ ದಿ ಇಂಡಿಯನ್ ಒಷಿಯನ್ ಆ್ಯಂಡ್ ದೈರ್ ಇನೋಬಿಟೆಂಟ್ಸ್ ಇತ್ಯಾದಿ, ಕಂಪ್ಲೀಟೆಡ್ ಅಬಾಟ್ ದಿ ಇಯರ್ ೧೫೧೮, ಈ.ಡಿ. ಆ್ಯಂಡ್ ಅನೋಟೇಟೆಡ್ ಬೈ ದೇಮ್ಸ್ ಹಕ್ಲುಯತ್, ಲಂಡನ್, ೧೯೧೮
೨೯. ಹ್ಯಾಮಿಲ್ಟನ್ ಅಲೆಗ್ಸಾಂಡರ್, ಎ ನ್ಯೂ ಅಕೌಂಟ್ ಆಫ್ ಈಸ್ಟ್ ಇಂಡಿಯಾ (ಸಂ)., ಫೋಸ್ಟರ್, ಎರಡು ಸಂಪುಟಗಳು, ಲಂಡನ್, ೧೯೩೦
೩೦. ಮ್ಯಾಕ್ಲಿನ್ ಸಿ.ಡಿ., ಮ್ಯಾಕ್ಲಿನ್ಸ್ ಮ್ಯಾನ್ಯುವಲ್ ಆಫ್ ದಿ ಮದ್ರಾಸ್ ಪ್ರೆಸಿಡೆನ್ಸಿ, ಸಂಪುಟ–೧, ಏಷಿಯನ್ ಎಜುಕೇಷನಲ್ ಸರ್ವೀಸ್, ನ್ಯೂಡೆಲ್ಲಿ, ೧೯೮೭
೩೧. ಎಡ್ಗರ್ ಥರ್ಸ್ಟನ್, ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ, ಸಂಪುಟ–೧, ಎ ಮತ್ತು ಬಿ., ಏಸಿಯನ್ ಎಜುಕೇಷನಲ್ ಸರ್ವೀಸ್, ನ್ಯೂಡೆಲ್ಲಿ, ೧೯೮೭

## ೩. ಪಿಎಚ್.ಡಿ ಮತ್ತು ಎಂ.ಫಿಲ್ ಮಹಾಪ್ರಬಂಧಗಳು

೧. ಸಂತೋಷ್ ಎನ್.ಜಿ., **ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ನಾಯಕರ ಕಾಲದ ಕೃಷಿ ವ್ಯವಸ್ಥೆ, (ಕ್ರಿ.ಶ.೧೩೩೬–೧೮೦೦)** ಪಿಎಚ್.ಡಿ ಮಹಾಪ್ರಬಂಧ ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೨೦೦೯
೨. ಅರುಣ್ ಹೆಚ್.ಟಿ., **ಕೆಳದಿ ಅರಸರ ತೆರಿಗೆ ಪದ್ಧತಿ,** ಪಿಎಚ್.ಡಿ ಮಹಾಪ್ರಬಂಧ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೨೦೦೬
೩. ಮಂಜುನಾಥ ಟಿ., **ಚಿತ್ರದುರ್ಗ ಹಾಗೂ ಸುತ್ತಮುತ್ತಲಿನ ಪಾಳೆಯಗಾರರ ಸಾಂಸ್ಕೃತಿಕ ಇತಿಹಾಸ,** ಪಿಎಚ್.ಡಿ ಮಹಾಪ್ರಬಂಧ, ಕುವೆಂಪು ವಿಶ್ವವಿದ್ಯಾಲಯ, ಹಂಪಿ, ೨೦೦೬

೪. ಬಸವರಾಜಪ್ಪ ಹೆಚ್.ಇ., **ಚಿತ್ರದುರ್ಗ ಪ್ರದೇಶದ ಭೂ ಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ, (೧೭೭೯-೧೯೫೬)** ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೫. ಮಂಜಣ್ಣ ಟಿ., **ಚಿತ್ರದುರ್ಗದ ಪಾಳೆಯಗಾರರ ಅವನತಿ : ಒಂದು ಅಧ್ಯಯನ (ಕ್ರಿ.ಶ.೧೭೦೦-೧೮೦೦),** ಪಿಎಚ್.ಡಿ ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೧೦

೬. ಮಹೇಂದ್ರಕುಮಾರ ಕೆ.ಸಿ., **ಹಾಸನ ಜಿಲ್ಲೆಯ ಅರಸು ಮನೆತನಗಳು (ಕ್ರಿ.ಶ. ೧೫೦೦-೧೮೦೦),** ಪಿಎಚ್.ಡಿ ಮಹಾಪ್ರಬಂಧ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೨೦೧೧

೭. ಕೃಷ್ಣಪ್ಪ ಕೊಂಚಾಡಿ., **ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ (ಯೂರೋಪಿಯನ್ನರ ಆಗಮನದಿಂದ ವಸಾಹತುಶಾಹಿ ಕಾಲಘಟ್ಟದವರೆಗೆ),** ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೮

೮. ಮಹದೇವಮ್ಮ ಪಿ., **ಮೈಸೂರು ರಾಜ್ಯದ ವ್ಯಾಪಾರ ಮತ್ತು ವಾಣಿಜ್ಯದ ಅಭಿವೃದ್ಧಿಗೆ ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರ ಕೊಡುಗೆ, (೧೭೬೧-೧೭೯೯),** ಪಿಎಚ್.ಡಿ ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೯. ಮಹೇಶ್ ಜಿ., **ವಿಜಯನಗರ ಕಾಲದ ವೃತ್ತಿ ಆಧಾರಿತ ಜಾತಿಗಳು : ಒಂದು ಅಧ್ಯಯನ (ಕ್ರಿ.ಶ.೧೩೩೬-೧೫೬೫),** ಪಿಎಚ್.ಡಿ ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೧೩

೧೦. ಸಿದ್ಧಲಿಂಗಮ್ಮ ಬಿ.ಜಿ., **ಮಧ್ಯಕಾಲೀನ ಕರ್ನಾಟಕದಲ್ಲಿ ಕುಶಲಕರ್ಮಿಗಳು ಒಂದು ಸಾಮಾಜಿಕ ಮತ್ತು ಚಾರಿತ್ರಿಕ ಅಧ್ಯಯನ,** ಪಿಎಚ್.ಡಿ ಮಹಾಪ್ರಬಂಧ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೨೦೦೭

೧೧. ಜ್ಞಾನ ಪ್ರಕಾಶ್ ಬಿ.ಕೆ., **ಪ್ರಾಚೀನ ಕರ್ನಾಟಕದಲ್ಲಿ ವ್ಯಾಪಾರ ಮತ್ತು ವಾಣಿಜ್ಯ (ಹೊಯ್ಸಳ ಕಾಲದವರೆಗೆ)** ಪಿಎಚ್.ಡಿ ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೦೫

೧೨. ಶಿವಪ್ಪ ಆರ್., **ಚಿತ್ರದುರ್ಗ ಪಾಳೆಯಗಾರರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧ ನೀತಿ : ಒಂದು ಅಧ್ಯಯನ, (ಕ್ರಿ.ಶ.೧೬ನೇ ಶತಮಾನದಿಂದ ೧೮ನೇ ಶತಮಾನದವರೆಗೆ),** ಪಿಎಚ್.ಡಿ ಮಹಾಪ್ರಬಂಧ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೨೦೦೬

೧೩. ಬಸಯ್ಯಾ ಮಠಪತಿ., **ಕಲ್ಯಾಣ ಚಾಲುಕ್ಯರ ಕಾಲದ ವ್ಯಾಪಾರ ಮತ್ತು ವಾಣಿಜ್ಯ ವ್ಯವಸ್ಥೆ (ಶಾಸನಗಳ ಆಧಾರದಿಂದ),** ಪಿಎಚ್.ಡಿ ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೧೭

೧೪. ಯಶೋಧ ಪಿ., **ಬೆಂಗಳೂರಿನ ವರ್ತಕ ಸಮುದಾಯಗಳು ವಸಾಹತು ಕಾಲಘಟ್ಟದ ಅಧ್ಯಯನ (೧೭೯೯-೧೯೪೭),** ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೬

೧೫. ಅನುಪಮ.ಬಿ., **ಹೊಸಪೇಟೆ ನಗರದ ವರ್ತಕ ಸಮುದಾಯಗಳು: ಚಾರಿತ್ರಿಕ ಅಧ್ಯಯನ,** ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೧೬. ದೇಶಪಾಂಡೆ ಹೆಚ್.ಟಿ., **ದಿ ಚಿತ್ರದುರ್ಗ ಸ್ಟೇಟ್, (೧೫೬೮-೧೭೭೯),** ಪಿಎಚ್.ಡಿ. ಮಹಾಪ್ರಬಂಧ, ಪುಣೆ ವಿಶ್ವವಿದ್ಯಾಲಯ, ಪುಣೆ, ೧೯೭೯

೧೭. ರಿಟಾ ಬ್ರಗಾಂಜ್, **ಗೋವಾ-ಕರ್ನಾಟಕದ ರಿಲೇಷನ್ಸ್ ೧೭೬೩-೧೮೫೭, (ಎ ಪೋಲಿಟಿಕಲ್ ಆ್ಯಂಡ್ ಎಕಾನಮಿಕ್ ಸ್ಟಡಿ),** ಪಿಎಚ್.ಡಿ. ಮಹಾಪ್ರಬಂಧ, ಗೋವಾ ವಿಶ್ವವಿದ್ಯಾಲಯ, ಗೋವಾ, ೨೦೦೧

## ೪. ನಿಯತ ಕಾಲಿಕೆಗಳು

೧. ಹಸ್ತಪ್ರತಿ ಅಧ್ಯಯನ ಸಂಪುಟಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ
೨. ಜಾನಪದ ಅಧ್ಯಯನ ಸಂಪುಟಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ
೩. ಸಂಕ್ರಮಣ ಮಾಸಪತ್ರಿಕೆ
೪. ಪ್ರಬುದ್ಧ ಕರ್ನಾಟಕ
೫. ಮಾನವಿಕ ಕರ್ನಾಟಕ
೬. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ
೭. ಕರ್ನಾಟಕ ಭಾರತಿ
೮. ಜರ್ನಲ್ ಆಫ್ ಮೈಸೂರು ಯೂನಿವರ್ಸಿಟಿ
೯. ಜರ್ನಲ್ ಆಫ್ ಮಿಥಿಕ್ ಸೊಸೈಟಿ
೧೦. ಜರ್ನಲ್ ಆಫ್ ನ್ಯೂಮಿಸ್‌ಮ್ಯಾಟಿಕ್ ಸೊಸೈಟಿ ಆಫ್ ಇಂಡಿಯಾ
೧೧. ಜರ್ನಲ್ ಆಫ್ ದಿ ಸೌತ್ ಇಂಡಿಯನ್ ನ್ಯೂಮಿಸ್‌ಮ್ಯಾಟಿಕ್ ಸೊಸೈಟಿ
೧೨. ಇಂಟರ್‌ನ್ಯಾಷನಲ್ ಜರ್ನಲ್ ಆಫ್ ಕನ್ನಡ ರಿಸರ್ಚ್
೧೩. ಸಂಶೋಧನಾ ಮಾರ್ಗ, ಜರ್ನಲ್ ಆ್ಯನ್ ಅಕಾಡೆಮಿಕ್ ರಿಸರ್ಚ್ ಜರ್ನಲ್ ಆಫ್ ಕನ್ನಡ
೧೪. ಇತಿಹಾಸ ದರ್ಪಣ
೧೫. ಇತಿಹಾಸ ದರ್ಶನ ಸಂಪುಟಗಳು, ಕರ್ನಾಟಕ ಇತಿಹಾಸ ಅಕಾಡೆಮಿ (ರಿ)., ಬೆಂಗಳೂರು
೧೬. ಹೊಸತು, ಮಾಸಪತ್ರಿಕೆ, ನವಕರ್ನಾಟಕ ಪಬ್ಲಿಕೇಷನ್ಸ್, ಪ್ರೈವೆಟ್ ಲಿಮಿಟೆಡ್, ಬೆಂಗಳೂರು
೧೭. ಚರಿತ್ರೆ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೧೮. ಸಮಾಜ ಅಧ್ಯಯನ, ಸಮಾಜ ವಿಜ್ಞಾನಗಳ ಸಂಶೋಧನಾ ಪತ್ರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೧೯. ದಿ ಹಿಸ್ಟಾರಿಕಲ್ ರಿವಿವ್ಯೂ, ಇಂಡಿಯನ್ ಕೌನ್ಸಿಲ್ ಆಫ್ ಹಿಸ್ಟಾರಿಕಲ್ ರಿಸರ್ಚ್
೨೦. ಪುರಾಬಿಲೇಖ ಪುರಾತತ್ವ, ಜರ್ನಲ್ ಆಫ್ ದಿ ಡೈರೆಕ್ಟರೇಟ್ ಆಫ್ ಆರ್ಕೇವ್ಸ್, ಆರ್ಕಿಯಾಲಜಿ ಆ್ಯಂಡ್ ಮ್ಯೂಸಿಯಂ, ಪಣಜಿ, ಗೋವಾ
೨೧. ವಾಲ್ಮೀಕಿ ವಾಣಿ, ಮಾಸಿಕ ಪತ್ರಿಕೆ, ಚಿತ್ರದುರ್ಗ
೨೨. ಪ್ರಜಾವಾಣಿ ದಿನಪತ್ರಿಕೆ
೨೩. ಸಾಧನ ಮಾಸಪತ್ರಿಕೆ

## II. ಆನುಷಂಗಿಕ ಆಕರಗಳು

## ೫. ಕನ್ನಡ ಕೃತಿಗಳು

೧. ಅಂಬಳಿಕೆ ಹಿರಿಯಣ್ಣ (ಪ್ರಸಂ)., **ದಕ್ಷಿಣ ಭಾರತೀಯ ದೇಶೀ ಕೃಷಿ ವಿಜ್ಞಾನ ಕೋಶ ೧ ಮತ್ತು ೨**, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ೨೦೧೮

೨. ಅಣ್ಣಿಗೇರಿ ಎಂ.ಎಂ., ಶೇಷಶಾಸ್ತ್ರಿ ಆರ್.(ಸಂ)., **ಶಾಸನಸಂಗ್ರಹ**, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೮೨

೩. ಅಥಣಿ ಎಸ್ ಶಂಕರ್., ಪಾಂಡುರಂಗ ಜೋಯಿಸರು ಹುಲ್ಲೂರು(ಸಂ)., **ಚಿತ್ರದುರ್ಗ ಏಳುಸುತ್ತಿನ ಕೋಟೆ**, ಶ್ರೀಜಯಭಾರತಿ ಪ್ರಕಾಶನ, ಕರುವಿನ ಕಟ್ಟೆ, ಚಿತ್ರದುರ್ಗ, ೧೯೮೮

೪. ಅಬ್ದುಲ್ ಅಜೀಜ್, ವಾಸು ಕೆ.ಜಿ.(ಸಂ)., **ಕರ್ನಾಟಕದ ಆರ್ಥಿಕತೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೫. ಅಬ್ದುಲ್ ಸತ್ತಾರ್., **ತರೀಕೆರೆಯ ಪಾಳೆಯಗಾರರು**, ಶ್ರೀ ಲೋಕಪಾವನಿ ಪ್ರಕಾಶನ, ಪಾಂಡವಪುರ, ಮಂಡ್ಯ ಜಿಲ್ಲೆ, ೧೯೯೭

೬. ಅಮರೇಶ ಯತಗಲ್, **ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು**, ಪಲ್ಲವಿ ಪಬ್ಲಿಕೇಷನ್ಸ್, ಲಿಂಗಸೂರು, ೨೦೧೮

೭. ಈಶ್ವರಪ್ಪ ಎಂ.ಜಿ., **ಕೃಷಿ ಜಾನಪದ**, ಕನ್ನಡ ಭಾರತಿ ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ೨೦೦೪

೮. ಉಜ್ಜಿನಪ್ಪ ಜಿ.ಎಸ್., **ಬಯಲು ಸೀಮೆಯಲ್ಲಿ ಕೃಷಿ ಮತ್ತು ತೋಟಗಾರಿಕೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೯. ಎಚ್ಚೆಸ್ಸೆ(ಸಂ)., **ಅವಲೋಕ ಕರ್ನಾಟಕ ಪರಂಪರೆಯ ಸಮೀಕ್ಷೆ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫

೧೦. ಕಮಲಾ ಹಂಪನಾ., **ಮಹಾಮಂಡಲೇಶ್ವರಿ ರಾಣಿ ಚೆನ್ನಭೈರಾದೇವಿ ಮತ್ತು ಇತರ ಕರಾವಳಿ ರಾಣಿಯರು**, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೧೧

೧೧. ಕರ್ನಾಟಕ ಕೈಪಿಡಿ, **ಕರ್ನಾಟಕ ಗ್ಯಾಸೆಟಿಯರ್ ಇಲಾಖೆ**, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು, ೧೯೯೬

೧೨. **ಕರ್ನಾಟಕದ ಪರಂಪರೆ, ಸಂಪುಟ-೧ ಮತ್ತು ೨**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೪

೧೩. ಕಲಬುರ್ಗಿ ಎಂ.ಎಂ.(ಸಂ)., **ಸಿರುಮನ ನಾಯಕನ ಸಾಂಗತ್ಯ**, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೮೩

೧೪. ಕಲಬುರ್ಗಿ ಎಂ.ಎಂ.(ಸಂ)., **ಸಿರುಮನ ಚರಿತೆ**, ರಾಮಕವಿ, ಶಿವರಾತ್ರಿ ದೇಶಿ ಕೇಂದ್ರ, ಮುತ್ತೂರು ಸಂಸ್ಥಾನ ಮಠ, ಮೈಸೂರು, ೧೯೯೧

೧೫. ಕಲಬುರ್ಗಿ ಎಂ.ಎಂ., ರಾಮಭಟ್ಟ ಬಿ.ಎಸ್.(ಸಂ)., **ಕೆಳದಿ ಸಂಸ್ಥಾನ ಸಮಗ್ರ ಅಧ್ಯಯನ**, ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ಶ್ರೀ ಮುರುಘ ರಾಜೇಂದ್ರ ಮಠ, ಆನಂದಪುರ, ೧೯೯೪

೧೬. ಕಲಬುರ್ಗಿ ಎಂ.ಎಂ., **ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೧೭. ಕ್ಯಾತನ ಹಳ್ಳಿ ರಾಮಣ್ಣ (ಸಂ)., **ಫ್ಲೀಟರು ಸಂಗ್ರಹಿಸಿದ ಐದು ಐತಿಹಾಸಿಕ ಲಾವಣಿಗಳು**, ಪ್ರಸಾರಾಂಗ ಮತ್ತು ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೦೮

೧೮. ಕುಮಾರ್ ಕೆ.ಎಂ., **ಕರ್ನಾಟಕದಲ್ಲಿನ ರೈತ ಚಳುವಳಿ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮

೧೯. ಕುಮುದಿನಿ ಸಿ.ಕೆ., **ಪ್ರಾಚೀನ ಭಾರತದಲ್ಲಿ ಬೇಸಾಯ**, ಕನ್ನಡ ಅಧ್ಯಯನ ವಿಭಾಗ ಕೃಷಿ, ವಿವಿ, ಬೆಂಗಳೂರು, ೧೯೮೬

೨೦. ಕೃಷ್ಣ ಎಂ.ಹೆಚ್., **ಕರ್ನಾಟಕ ಪೂರ್ವ ಚರಿತ್ರೆ,** ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, ೧೯೫೩

೨೧. ಕೃಷ್ಣಮೂರ್ತಿ ಕ.ರಾ.(ಸಂ)., **ಪಾಳೆಯಗಾರರ ಪದಗಳು,** ಜಾನಪದ ಸಾಹಿತ್ಯ ಅಕಾಡೆಮಿ, ಮೈಸೂರು, ೧೯೭೨

೨೨. ಕೃಷ್ಣಮೂರ್ತಿ ಕ.ರಾ.(ಸಂ)., **ಚಿತ್ರಕಲ್ಲು ಮದಕರಿ,** ಜಾನಪದ ಅಕಾಡೆಮಿ, ಬೆಂಗಳೂರು, ೧೯೭೫ ಕೃಷ್ಣಮೂರ್ತಿ ಹನೂರು (ಸಂ)., **ಮ್ಯಾಸಬೇಡರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೨೩. ಕೃಷ್ಣರಾವ್ ಎಂ.ವಿ., ಕೇಶವಭಟ್ಟ ಎಂ.(ಸಂ)., **ಕರ್ನಾಟಕದ ಇತಿಹಾಸ ದರ್ಶನ,** ಕರ್ನಾಟಕದ ಸಹಕಾರಿ ಪ್ರಕಾಶನ, ಬೆಂಗಳೂರು, ೨೦೦೦

೨೪. ಕೃಷ್ಣರಾವ್ ಪಿ., **ಚಿತ್ರದುರ್ಗ ಬೆಟ್ಟ ಮತ್ತು ನಾಯಕ ಸಾಮ್ರಾಜ್ಯ,** ಬೆಂಗಳೂರು, ೧೯೫೭

೨೫. ಕೆಳದಿ ಗುಂಡಾ ಜೋಯಿಸ್ (ಅನು)., **ಲಿಂಗಣ್ಣ ಕವಿಯ ಕೆಳದಿ ನೃಪವಿಜಯ,** ಕನ್ನಡ ಸಾಹಿತ್ಯದ ಪರಿಷತ್ತು, ಬೆಂಗಳೂರು, ೧೯೯೯

೨೬. ಕೊಟ್ರೇಶ್ ಎಂ.(ಸಂ)., **ಕಲ್ಯಾಣ ಕರ್ನಾಟಕದ ಅರಸು ಮನೆತನಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೨೭. ಖಂಡೋಬರಾವ್ ಹೆಚ್., **ನಾಣ್ಯ ಕರ್ನಾಟಕ,** ಮಗರ್ ಪಬ್ಲಿಕೇಷನ್ಸ್, ಗಾಂಧಿ ನಗರದ ಮುಖ್ಯರಸ್ತೆ, ಶಿವಮೊಗ್ಗ, ೨೦೦೨

೨೮. ಗಂಗಾನಾಯಕ ಕೆ.ಎನ್., **ಕೆಳದಿ ಅರಸರ ಶಾಸನ ಸಂಪುಟ–೨,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೧೧

೨೯. ಗಂಗಾನಾಯಕ್ (ಪ್ರ.ಸಂ)., **ಪಾಳೆಯಗಾರರ ಶಾಸನಗಳು, ಸಂಪುಟ–೧,** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು, ೨೦೧೨

೩೦. ಗಂಡುಗಲಿ ಟಿ.ಎನ್., **ದೇಶ ದ್ರೋಹಿ ದೊಡ್ಡ ಮದಕರಿ,** ಮದಕರಿ ಪ್ರಕಾಶನ, ಚಿತ್ರದುರ್ಗ, ೧೯೯೫

೩೧. ಗಂಡುಗಲಿ ಟಿ.ಎನ್., **ಪ್ರಮುಖ,** ಮದಕರಿ ಪ್ರಕಾಶನ, ಚಿತ್ರದರ್ಗು, ೧೯೯೫

೩೨. ಗಿರಿಜ ಟಿ., **ಚಿತ್ರದುರ್ಗ ಜಿಲ್ಲಾದರ್ಶನಿ,** ರೇಖಾ ಪ್ರಕಾಶನ, ದಾವಣಗೆರೆ, ೧೯೯೧

೩೩. ಗುರುರಾಜಾಚಾರ್ ಎಸ್., **ಮಧ್ಯಕಾಲೀನ ಕರ್ನಾಟಕದ ವಿದೇಶೀ ವ್ಯಾಪಾರ,** ಮಾನವಿಕ ಕರ್ನಾಟಕ, ಸಂಪುಟ–೪, ಸಂಚಿಕೆ–೧, ೧೯೭೩

೩೪. ಗುರುರಾಜಾಚಾರ್ ಎಸ್., **ಕರ್ನಾಟಕದ ಕೆಲವು ಕೈಗಾರಿಕೆಗಳು,** ಮಾನವಿಕ ಕರ್ನಾಟಕ, ಸಂಪುಟ–೪, ಸಂಚಿಕೆ–೨, ೧೯೭೪

೩೫. ಗುರುರಾಜಾಚಾರ್ ಎಸ್., **ಕರ್ನಾಟಕದ ಕೆಲವು ಖ್ಯಾತ ವರ್ತಕರು : ಕ್ರಿ.ಶ.೧೩೦೦ರವರೆಗೆ, ಮಾನವಿಕ ಕರ್ನಾಟಕ ಸಂಪುಟ–೬, ಸಂಚಿಕೆ**–೧, ೧೯೭೫

೩೬. ಗೋಪಾಲ್‌ರಾವ್ ಹೆಚ್.ಎಸ್., **ನಾಗಾಭಿನಂದನ,** ಎಂ.ಜಿ.ನಾರಾಯಣ ರಾವ್ ಅಭಿನಂದನಾ ಸಮಿತಿ, ಬೆಂಗಳೂರು, ೧೯೯೪

೩೭. ಗೋಪಾಲ್ ಆರ್., **ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೦೫

೩೮. ಗೋಶಾಲ್ ಯು.ಎನ್.(ಮೂಲ)., ಜಯವಂತ ಕುಳ್ಳಿ (ಅನು)., **ಪ್ರಾಚೀನ ಭಾರತದ ಕಂದಾಯ ವ್ಯವಸ್ಥೆ,** ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರ ದೊಡ್ಡಿ, ಬೆಂಗಳೂರು, ೨೦೧೨

೩೯. ಗೋವಿಂದರಾಜು ಸಿ.ಆರ್., **ನವಚಾರಿತ್ರಿಕವಾದ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೪೦. ಗೋವಿಂದರಾಜು, ನರಸಿಂಹೇಗೌಡ, **ಪ್ರಾಚೀನ ಕೃಷಿ ತಂತ್ರಗಳು**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೭

೪೧. ಚಂದ್ರಪೂಜಾರಿ ಎಂ.(ಸಂ)., **ಸಮುದಾಯ ಮತ್ತು ಸಹಭಾಗಿತ್ವ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೪೨. ಚಂದ್ರಪೂಜಾರಿ ಎಂ.(ಪ್ರಸಂ)., **ಸಾಮಾಜಿಕ ಮತ್ತು ಮಾನವಿಕ ಅಧ್ಯಯನಗಳ ಪರಿಭಾಷಾ ಕೋಶ**, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೫

೪೩. ಚಂದ್ರಶೇಖರ್ ಬಾಳೆ (ಸಂ)., ಯತಿರಾಜು ಸಿ., **ಕಾಯಕದ ಕೃಷಿ**, ಕೃಷಿಭಾರತ್ ಪ್ರಕಾಶನ, ೨೦೧೬

ಚಂದ್ರಶೇಖರ ಹೆಚ್., **ಭೂವಿಜ್ಞಾನಿಯ ಕಣ್ಣಲ್ಲಿ ಇತಿಹಾಸ**, ಸಿ.ವಿ.ಜಿ ಇಂಡಿಯಾ, ಬೆಂಗಳೂರು, ೨೦೧೫

೪೪. ಚಂದ್ರಶೇಖರ್ ಎಸ್., ಸುರೇಂದ್ರರಾವ್ ಬಿ.(ಸಂ)., **ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು, ಸಂಪುಟ-೧ರಿಂದ ೧೨**, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೬

೪೫. ಚಿದಾನಂದ ಮೂರ್ತಿ ಎಂ., **ಸಂಶೋಧನ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೦

೪೬. ಚಿದಾನಂದ ಮೂರ್ತಿ ಎಂ., **ಕರ್ನಾಟಕ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨

೪೭. ಚಿನ್ನಸ್ವಾಮಿ ಸೋಸಲೆ ಎನ್., **ನಮ್ಮ ಗ್ರಾಮಗಳು ಅಂದು-ಇಂದು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೪೮. ಚಿನ್ನಸ್ವಾಮಿ ಸೋಸಲೆ ಎನ್., **ಸಾಮ್ರಾಜ್ಯ ಮತ್ತು ಸಂಸ್ಥಾನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೪೯. ಚಿನ್ನಸ್ವಾಮಿ ಸೋಸಲೆ ಎನ್., **ವಸಹಾತು ಕಾಲಘಟ್ಟದ ಮೈಸೂರು ಸಂಸ್ಥಾನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೫೦. ಚಿನ್ನಸ್ವಾಮಿ ಸೋಸಲೆ ಎನ್., **ಕರ್ನಾಟಕ ಚರಿತ್ರೆ ಮತ್ತು ಸಾಹಿತ್ಯ**. ಸಿ.ವಿ.ಜಿ.ಪಬ್ಲಿಕೇಶನ್, ಬೆಂಗಳೂರು, ೨೦೧೨

೫೧. ಚಿನ್ನಸ್ವಾಮಿ ಸೋಸಲೆ ಎನ್.(ಸಂ)., **ಕರಾವಳಿ ಕರ್ನಾಟಕದ ಜೈನ ಅರಸು ಮನೆತನಗಳು ಸಾಂಸ್ಕೃತಿಕ ಅಧ್ಯಯನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪

೫೨. ಚಿನ್ನಸ್ವಾಮಿ ಸೋಸಲೆ ಎನ್., **ಒನಕೆ ಓಬವ್ವ : ದಲಿತ ಸಂವೇದನೆಯೊಂದಿಗೆ ಮುಖಾಮುಖಿ**, ಗೌತಮ್ ಪ್ರಕಾಶನ, ಕಮಲಾಪುರ, ೨೦೧೬

೫೩. ಚಿನ್ನಸ್ವಾಮಿ ಸೋಸಲೆ ಎನ್., **ಪ್ರಭುತ್ವ ಮತ್ತು ದಲಿತರು**, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೬

೫೪. ಜಯಪ್ಪ ಗೌಡ ಡಿ.ಎಸ್., **ಕರ್ನಾಟಕದ ಕಡಲಾಚೆಯ ಸಂಪರ್ಕಗಳು, (ಕ್ರಿ.ಶ.೧೩೫೦ರವರೆಗೆ)**, ಮೈಸೂರು, ೧೯೮೩

೫೫. ಜಯರಾಮರೆಡ್ಡಿ ಕೋಟ್ಲ, **ಬಂದನಾ ಕರಿಭಂಟ ಹಾಯ್ಕಲ್‌ಗೆ**, ಕೋಟ್ಲ ಕಲ್ಯಾಣನಿಧಿ, ಕೋಟ್ಲಮನೆ, ಚಿತ್ರದುರ್ಗ, ೨೦೦೫

೫೬. ತ.ರಾ.ಸು., **ರಾಜ್ಯದಾಹ,** ಹೇಮಂತ ಸಾಹಿತ್ಯ, ಬೆಂಗಳೂರು, ೨೦೦೧

೫೭. ತಿಪ್ಪಣ್ಣ ಬಿ.(ಸಂ)., **ಮೇಲುದುರ್ಗ, ಸ್ಮರಣ ಸಂಚಿಕೆ,** ಅಖಿಲ ಕರ್ನಾಟಕ ನಾಯಕ ಜನಾಂಗದ ತೃತೀಯ ಮಹಾಸಮ್ಮೇಳನ, ಚಳ್ಳಕೆರೆ, ೧೯೭೮

೫೮. ತಿಪ್ಪೇರುದ್ರಸ್ವಾಮಿ, **ಶಿಸ್ತುಗಾರ ಶಿವಪ್ಪನಾಯಕ,** ಡಿ.ವಿ.ಕೆ.ಕೃಷ್ಣಮೂರ್ತಿ, ಪ್ರಕಾಶನ, ಮೈಸೂರು, ೧೯೬೪

೫೯. ತಿಪ್ಪೇಸ್ವಾಮಿ ಜಿ.ಆರ್., **ದಕ್ಷಿಣ ಕರ್ನಾಟಕದ ಬೇಸಾಯದ ಹಾಡುಗಳು,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೯

೬೦. ತಿಪ್ಪೇಸ್ವಾಮಿ ಪಿ.ಆರ್., **ಗ್ರಾಮೀಣ ಗೃಹ ವಸ್ತುಗಳು,** ಮಹರ್ಷಿ ಪ್ರಕಾಶನ, ಮೈಸೂರು, ೨೦೦೩

೬೧. ತಿಮ್ಮಪ್ಪ ಎ.ಕೆ., **ದಾವಣಗೆರೆ ಜಿಲ್ಲೆಯ ಜಾತ್ರೆಗಳ ಜಾನಪದೀಯ ಅಧ್ಯಯನ,** ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ಹಾವೇರಿ ಜಿಲ್ಲೆ, ೨೦೧೭

೬೨. ದಿವಾಕರ್ ಆರ್.ಆರ್., **ಕರ್ನಾಟಕ ಪರಂಪರೆ,** ಭಾಗ-೧ ಮತ್ತು ೨, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨

೬೩. ದೀಕ್ಷಿತ್ ಜಿ.ಎಸ್., **ಕೆಳದಿ ನಾಯಕರು,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೯

೬೪. ದೀಪಾ., **ಚಿತ್ರದುರ್ಗ ತಾಲ್ಲೂಕು ದರ್ಶನ,** ಐ.ಬಿ.ಹೆಚ್., ಪ್ರಕಾಶನ, ಬೆಂಗಳೂರು, ೧೯೮೬

೬೫. ದುರಗಪ್ಪ ಎಂ.ಕೆ., **ವಿಜಯನಗರೋತ್ತರ ಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು : ಚಾರಿತ್ರಿಕ ಅಧ್ಯಯನ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೨೦೧೦

೬೬. ದೇವಿಪ್ರಸಾದ್ ಚಟ್ಟೋಪಾಧ್ಯಾಯ (ಮೂಲ)., ಗಾಯತ್ರಿ ಎನ್.(ಅನು)., **ಆರಂಭಿಕ ಹಂತಗಳು,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೫

೬೭. ದೇಸಾಯಿ ಗೋವಿಂದ ಮೂರ್ತಿ, **ಸವಣೂರು ನವಾಬರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೬೮. ನಂಜುಂಡಸ್ವಾಮಿ ಎ.ಎಸ್., **ಪಾಳೆಯಗಾರರು ಮತ್ತು ಒಡೆಯರ ಇತಿಹಾಸ,** ಸಮಾಜ ಪುಸ್ತಕಾಲಯ, ಧಾರವಾಡ, ೧೯೮೬

೬೯. ನರಸಿಂಹಮೂರ್ತಿ ಎ.ವಿ., **ಕರ್ನಾಟಕ ಶಾಸನ ಸಂಪತ್ತು,** ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೩

೭೦. ನರಸಿಂಹಮೂರ್ತಿ ಎ.ವಿ., **ವಿಜಯನಗರ ನಾಣ್ಯ ಸಂಪತ್ತು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

೭೧. ನಾಡಿಗರ ಕೃಷ್ಣರಾಯ, **ಹರಿಹರ ಕ್ಷೇತ್ರ,** ಐ.ಬಿ.ಹೆಚ್., ಪ್ರಕಾಶನ, ಬೆಂಗಳೂರು, ೧೯೭೨

೭೨. ನಾಯಕ ಡಿ.ಬಿ.(ಪ್ರಸಂ)., **ಕರ್ನಾಟಕ ಗ್ರಾಮ ಚರಿತ್ರೆ ಕೋಶ ಚಿತ್ರದುರ್ಗ,** ಸಂಪುಟ-೧ ಮತ್ತು ೩, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು, ೨೦೧೭

೭೩. ಪಂಚಮುಖಿ ಆರ್.ಎಸ್., **ಕರ್ನಾಟಕದ ಶಾಸನಗಳು,** ಡೈರೆಕ್ಟರೇಟ್ ಕನ್ನಡ ರಿಸರ್ಚ್ ಇನ್ಸ್ಟಿಟ್ಯೂಟ್ ಆಫ್ ಧಾರವಾಡ, ಧಾರವಾಡ, ೧೯೫೩

೭೪. ಪ್ರಕಾಶ್ ಎಂ.ಪಿ., **ಡೊಮಿಂಗೋಸ್ ಫಯಾಸ್ ಕಂಡ ವಿಜಯನಗರ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೭೫. ಪ್ರಸನ್ನ ಕುಮಾರ್ ಎಂ., ಅನಂತರಾಮಯ್ಯ ಆರ್.ಎಲ್.(ಅನು)., **ಮೈಸೂರಿನ ಇತಿಹಾಸದಲ್ಲಿ ದಾನ,** ಸಮನ್ವಯ ಪ್ರಕಾಶನ, ಮಂಗಳೂರು, ೨೦೦೧

೭೬ ಪುಟ್ಟೇಗೌಡ ಎಂ., **ಭಾರತದ ನೀರಾವರಿ ಮತ್ತು ಕೈಗಾರಿಕೆಗಳು,** ನಭಶ್ರೀ ಪ್ರಕಾಶನ, ಮೈಸೂರು, ೧೯೮೨

೭೭. ಪುಟ್ಟಣ್ಣ ಎಂ.ಎಸ್., **ಚಿತ್ರದುರ್ಗ ಪಾಳೆಯಗಾರರು**, ಮದಕರಿ ಪ್ರಕಾಶನ, ಚಿತ್ರದುರ್ಗ, ೧೯೯೭

೭೮. ಪುಟ್ಟಣ್ಣ ಎಂ.ಎಸ್., **ಪಾಳೆಯಗಾರರ ಐದು ಉಪನ್ಯಾಸಗಳು**, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೨೩

೭೯. ಪುಟ್ಟಸ್ವಾಮಿ ಬಿ.ಎಸ್., **ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು**, ಮನೋಜ್ ಪಬ್ಲಿಕೇಶನ್, ಬೆಂಗಳೂರು, ೨೦೧೨

೮೦. ಪುಷ್ಪ ಬಸವನಗೌಡರ, **ಮುರುಘಾ ಪರಂಪರೆಯ ಪ್ರಾಚೀನ ಸಾಹಿತ್ಯ**, ಶ್ರೀ ಮುರುಘರಾಜೇಂದ್ರ ಗ್ರಂಥಮಾಲೆ, ಶ್ರೀ ಮುರುಘಾ ಮಠ, ಚಿತ್ರದುರ್ಗ, ೧೯೯೯

೮೧. ಬರ್ನಾಲ್ ಜೆ ಡಿ.,(ಮೂಲ), ಶ್ರೀಮತಿ ಗದುತ್ರಿ ಮೂರ್ತಿ, ನಟರಾಜ್ ಕೆ.ಎಸ್.(ಅನು)., **ಇತಿಹಾಸದಲ್ಲಿ ವಿಜ್ಞಾನ, ಸಂಪುಟ-೧ರಿಂದ ೪**, ಕುವೆಂಪು ಭಾಷಾ ಭಾರತಿ ಪ್ರಾದಿಕಾರ, ೨೦೧೨

೮೨. ಬಸವರಾಜು ಎಲ್.(ಸಂ)., **ದೇವರ ದಾಸಿಮಯ್ಯನ ವಚನಗಳು**, ಗೀತಾ ಬುಕ್ ಹೌಸ್, ಮೈಸೂರು, ೧೯೮೫

೮೩. ಬಸವರಾಜು ಎಲ್.(ಸಂ)., **ಬಸವಣ್ಣನವರ ವಚನಗಳು**, ಗೀತಾ ಬುಕ್‌ಹೌಸ್, ಮೈಸೂರು, ೧೯೮೮

೮೪. ಬಸವರಾಜ್ ಯಳಮಲ್ಲಿ., (ಸಂ), **ತೂಕ ಮತ್ತು ಅಳತೆ ಸಾಧನಗಳ ಇತಿಹಾಸ ಮತ್ತು ಪರಂಪರೆ**, ತುಲಾಭವನ ಟ್ರಸ್ಟ್ (ರಿ)., ದಾವಣಗೆರೆ, ೨೦೧೦

೮೫. ಬಾಗೂರು ಆರ್ ನಾಗರಾಜಪ್ಪ., **ಹೊಸದುರ್ಗದಸುತ್ತ**, ಅಭಿವೃದ್ಧಿ ವೇದಿಕೆ, ಹೊಸದುರ್ಗ, ೧೯೮೪

೮೬. ಬಾಗೂರು ನಾಗರಾಜಪ್ಪ., **ಹೊಸದುರ್ಗದ ಒಡಲಾಗೆ**, ನೇಕಾರ ಪ್ರಕಾಶನ, ಸೊರಬ, ಶಿವಮೊಗ್ಗ ಜಿಲ್ಲೆ, ೨೦೦೫

೮೭. ಬಾಶಮ್ ಎ ಎಲ್.,(ಮೂಲ), ಮಿರ್ಜಿ ಡಿ ಆರ್.,(ಅನು), **ಪ್ರಾಚೀನ ಭಾರತವೆಂಬ ಅದ್ಭುತ**, ಐ.ಬಿ.ಹೆಚ್.ಪ್ರಕಾಶನ, ಬೆಂಗಳೂರು, ೨೦೧೨

೮೮. ಭಾನುಮತಿ ವೈ ಸಿ., **ಅರಸರ ಚರಿತ್ರೆಗಳು**, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೧೧

೮೯. ಭೀಮರೆಡ್ಡಿ ಕೆ.ಎನ್., **ಮೊಳಕಾಲ್ಮೂರು ತಾಲ್ಲೂಕು ದರ್ಶನ**, ಐ.ಬಿ.ಹೆಚ್., ಪ್ರಕಾಶನ, ಬೆಂಗಳೂರು, ೧೯೮೭

೯೦. ಮಂಜುನಾಥ್ ಸಿ ಯು., **ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ (ಕ್ರಿ.ಶ.೧೧೫೦-೧೩೪೦)**, ಚಿತ್ಕಲಾ ಪ್ರಕಾಶನ, ಕುಪ್ಪಂ, ೨೦೧೨

೯೧. ಮಜುಂದಾರ್ ಆರ್.ಸಿ. (ಪ್ರ.ಸಂ) (ಮೂಲ), ನರಸಿಂಹಮೂರ್ತಿ ಎ.ವಿ.(ಅನು)., **ಮುಘಲ್ ಸಾಮ್ರಾಜ್ಯ, ಭಾಗ-೩**, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೩

೯೨. ಮಲ್ಲಿಕಾರ್ಜುನ ಹೊಸಪಾಳ್ಯ., **ಕೃಷಿ ಆಚರಣೆ**, ಕರ್ನಾಟಕ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮

೯೩. ಮಹಂತೇಶ ಎಸ್.ಎನ್.(ಸಂ)., **ಗತಕಥನ**, ಸಂಶೋಧನಾ ಅರ್ಧವಾರ್ಷಿಕ ಸಂಪುಟ-೧, ಸಂಚಿಕೆ-೧, ಜನವರಿ-ಜೂನ್, ೨೦೧೫, ಆದಿತ್ಯ ಪ್ರಕಾಶನ, ಚಿತ್ರದುರ್ಗ, ೨೦೧೫

೯೪. ಮಹದೇವ ಸಿ., **ನೇಕಾರ ಸಮಾಜ ಸಂಸ್ಕೃತಿ ಆರ್ಥಿಕ ಸ್ಥಿತಿಗತಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೯೫. ಮಹದೇವಯ್ಯ ಎಂ ಪಿ., **ಪ್ರಾಚೀನ ಕರ್ನಾಟಕದ ಆಡಳಿತ ಪದ್ಧತಿಯ ಕೆಲವು ಅಂಶಗಳು**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೪

೯೬. ಮೀರಾಸಾಬಿಹಳ್ಳಿ ಶಿವಣ್ಣ., **ದುರುಗ ಜಾನಪದ**, ಶಕ್ತಿ ಪ್ರಕಾಶನ, ಬೆಂಗಳೂರು, ೧೯೯೯

೯೭. ಮುಕುಂದ ರೆಡ್ಡಿ ಮಾ.ನಾ., **ಹಿರಿಯೂರು ತಾಲ್ಲೂಕು ದರ್ಶನ**, ಐ.ಬಿ.ಹೆಚ್., ಪ್ರಕಾಶನ, ಬೆಂಗಳೂರು, ೧೯೮೭

೯೮. ಮುನ್ಷಿ ಕೆ ಎಂ.,(ಮೂಲ), ನರಸಿಂಹಮೂರ್ತಿ ಎ.ವಿ.,(ಅನು), **ಸಾಮ್ರಾಜ್ಯಕ್ಕಾಗಿ ಹೋರಾಟ**, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೦

೯೯. ಮೈಲಹಳ್ಳಿ ರೇವಣ್ಣ., (ಸಂ), **ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೮೪

೧೦೦. ಮೋತೀಚಂದ್ರ (ಮೂಲ)., ಪಾಟೀಲ್ ಹೆಚ್ ಎಸ್.,(ಅನು), **ಸಾರ್ಥವಾಹ**, ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೭೨

೧೦೧. ಮೋಹನ್‌ಕೃಷ್ಣ ರೈ ಕೆ., **ನಗರೀಕರಣ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೧೦೨. ಮೋಹನ್‌ಕೃಷ್ಣ ರೈ ಕೆ., **ಪರಿಸರ ಚಳುವಳಿಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೧೦೩. ಮೋಹನ್‌ಕೃಷ್ಣ ರೈ ಕೆ., **ಪ್ರಭುತ್ವ ಮತ್ತು ಜನತೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೧೦೪. ಮೋಹನ್‌ಕೃಷ್ಣ ರೈ ಕೆ., **ವಸಾಹತುಪೂರ್ವ ಕರ್ನಾಟಕದ ನಗರ ಚರಿತ್ರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೧೦೫. ಮೋಹನ್‌ಕೃಷ್ಣ ರೈ ಕೆ.,(ಸಂ), **ದಕ್ಷಿಣ ಭಾರತದ ಚರಿತ್ರೆ ಆಯ್ದ ವಿಷಯಗಳು**, ಕನ್ನಡ ವಿಶ್ವವಿದ್ಯಾಲಯದ, ದೂರಶಿಕ್ಷಣ ಪಾಠಗಳು, ದೂರಶಿಕ್ಷಣ ನಿರ್ದೇಶನಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೧೦೬. ಮೋಹನ್‌ಕೃಷ್ಣ ರೈ ಕೆ., **ವಸಹತುಶಾಹಿ ಮತ್ತು ನಗರೀಕರಣ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೧೦೭. ಮೋಹನ್‌ಕೃಷ್ಣ ರೈ ಕೆ., **ಚರಿತ್ರೆ ಕಥನ**, ಪಲ್ಲವ ಪ್ರಕಾಶನ, ಚನ್ನಪಟ್ಟಣ, ೨೦೦೯

೧೦೮. ಮೋಹನ್‌ಕೃಷ್ಣ ರೈ ಕೆ., **ಕೆನರಾದ ವಿಭಜನೆ ಹತ್ತಿ ರಾಜಕೀಯದ ವಿಶ್ಲೇಷಣೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೧೦೯. ಮೋಹನ್‌ಕೃಷ್ಣ ರೈ ಕೆ., **ತುಳುನಾಡ ಸಿರಿ ಬದುಕು ಹೋರಾಟದ ಕಥನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೧೧೦. ಮೋಹನ್‌ಕೃಷ್ಣ ರೈ ಕೆ., **ತುಳುನಾಡು ಕನ್ನಡ ನುಡಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨

೧೧೧. ಮೋಹನ್‌ಕೃಷ್ಣ ರೈ ಕೆ., **ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫

೧೧೨. ಮೋಹನ್‌ಕೃಷ್ಣ ರೈ ಕೆ., **ಯುದ್ಧ ಮತ್ತು ಒಪ್ಪಂದ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೮

೧೧೩. ಯಶೋಧಾ ರಾಜಶೇಖರಪ್ಪ ಪಿ., **ಗತಬಿಂಬ ಸಂಶೋಧನಾ ಲೇಖನಗಳು**, ಸಿವಿಜಿ ಇಂಡಿಯಾ, ಬೆಂಗಳೂರು, ೨೦೧೫

೧೧೪. ಯೋಗೀಶ್ವರಪ್ಪ ಡಿ.ಎನ್., **ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು**, ಧಾತ್ರಿಪುಸ್ತಕ, ಬೆಂಗಳೂರು, ೨೦೦೯

೧೧೫. ಯೋಗೀಶ್ವರಪ್ಪ ಡಿ.ಎನ್., **ಹಾಗಲವಾಡಿ ನಾಯಕರು,** ಮುರುಘ ರಾಜೇಂದ್ರ ಗ್ರಂಥಮಾಲೆ, ಶ್ರೀ ಮುರುಘಾಮಠ, ಚಿತ್ರದುರ್ಗ, ೨೦೧೬

೧೧೬. ಯೋಗೀಶ್ವರಪ್ಪ ಡಿ ಎನ್.,(ಸಂ), **ಕನ್ನಡ ಕಾವ್ಯಗಳಲ್ಲಿ ಚಾರಿತ್ರಿಕ ಅಂಶಗಳು,** ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೬

೧೧೭. ರಮೇಶ್ ನಾಯಕ., (ಸಂ), **ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರು ಚಿಂತನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೧೧೮. ರಾಜಪ್ಪ ಟಿ ಎಸ್.,(ಸಂ), **ಕೆರೆ ಹೊನ್ನಮ್ಮ ಮತ್ತು ಇತರ ಲಾವಣಿಗಳು,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೪

೧೧೯. ರಾಜಶೇಖರಪ್ಪ ಬಿ., **ನಿರಂತರ,** ಶ್ರೀ ಲೋಕಪಾವನಿ ಪ್ರಕಾಶನ, ಪಾಂಡವಪುರ, ೨೦೦೧

೧೨೦. ರಾಜಶೇಖರಪ್ಪ ಬಿ., **ಇತಿಹಾಸ ಕಥನ,** ಸಿ.ವಿ.ಜಿ ಪಬ್ಲಿಕೇಷನ್, ಬೆಂಗಳೂರು, ೨೦೦೧

೧೨೧. ರಾಜಶೇಖರಪ್ಪ ಬಿ.(ಸಂ)., **ಚಿತ್ರದುರ್ಗ ಪಾಳೆಗಾರರ ದಾಖಲೆಗಳು,** ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೦೭

೧೨೨. ರಾಜಶೇಖರಪ್ಪ ಬಿ., **ದುರ್ಗಶೋಧನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧
ರಾಜಶೇಖರಪ್ಪ ಬಿ., **ಅನ್ವೇಷಣೆ,** ಸಿ.ವಿ.ಜಿ ಇಂಡಿಯಾ, ಬೆಂಗಳರು, ೨೦೧೫

೧೨೩. ರಾಜಾರಾಮ ಹೆಗಡೆ., **ಲೌಖಿಕ ಅಲೌಖಿಕ,** ಆನಂದ ಕಂದ ಗ್ರಂಥಮಾಲೆ, ಮಲ್ಲಾಡಿ ಹಳ್ಳಿ, ಚಿತ್ರದುರ್ಗ, ೨೦೦೧

೧೨೪. ರಾಜಾರಾಮ ಹೆಗಡೆ., (ಸಂ), **ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೨೫. ರಾಜಾರಾಮ ಹೆಗಡೆ., (ಸಂ), **ಭಾರತೀಯ ಇತಿಹಾಸ ಸಮಾಜ ಮತ್ತು ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪

೧೨೬. ರಾಜಾರಾಮ ಹೆಗಡೆ ಅಶೋಕಶೆಟ್ಟರ್., (ಸಂ), **ಮಲೆಕರ್ನಾಟಕದ ಅರಸು ಮನೆತನಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

೧೨೭. ರಾಜೇಗೌಡ ಹ ಕ., **ಕರ್ನಾಟಕ ವ್ಯವಸಾಯ ಪದ್ಧತಿ,** ಐ.ಬಿ.ಹೆಚ್ ಪ್ರಕಾಶನ, ಬೆಂಗಳೂರು, ೧೯೮೧

೧೨೮. ರಾಮದಾಸ ರೆಡ್ಡಿ ಎಸ್‌ಜಿ., **ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೯

೧೨೯. ರಾಮೇಗೌಡ., **ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರ,** ಚಿತ್ರಕೂಟ, ಮೈಸೂರ, ೧೯೯೨

೧೩೦. ರಾವಸಾಹೇಬ ಫಕೀರಪ್ಪ ಗುರುಬಸಪ್ಪ ಹಳಕಟ್ಟಿ (ಸಂ)., **'ಕೃಷಿಜ್ಞಾನ ಪ್ರದೀಪಿಕೆ',** ಫ.ಗು.ಹಳಕಟ್ಟಿ ಸಂಸ್ಥೆ, ಬಿಜಾಪುರ, ೧೯೩೩

೧೩೧. ರೋಮಿಲ ಥಾಪರ್., (ಮೂಲ), ಉಮೇಶ ಎಚ್‌ಎಸ್ ಶಶಿಕುಮಾರ್ ಜೆ ದೀಪ., **ಪ್ರಾಚೀನ ಭಾರತ: ಉಗಮದಿಂದ ಕ್ರಿ.ಶ.೧೩೦೦ರವರೆಗೆ,** ವಿಸ್ಮಯ ಪ್ರಕಾಶನ, ಮೈಸೂರು, ೨೦೧೬

೧೩೨. ಲಕ್ಷ್ಮಣ್ ತೆಲಗಾವಿ., (ಸಂ), **ಚಿತ್ರಕಲ್ಲು,** ಜಿಲ್ಲಾ ಇತಿಹಾಸ ಪ್ರದರ್ಶನ, ಚಿತ್ರದುರ್ಗ, ೧೯೭೪

೧೩೩. ಲಕ್ಷ್ಮಣ್ ತೆಲಗಾವಿ ಶ್ರೀನಿವಾಸ್ ಎಂ ವಿ.,(ಸಂ), **ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು,** ಹುಲ್ಲೂರು ಶ್ರೀನಿವಾಸ ಜೋಯಿಸರ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ, ೧೯೭೬

೧೩೪. ಲಕ್ಷ್ಮಣ್ ತೆಲಗಾವಿ., **ಇದು ಚಿತ್ರದುರ್ಗ,** ಸ್ವಾತಿ ಪ್ರಕಾಶನ, ಬೆಂಗಳೂರು, ೧೯೭೭

